ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೫

ಪ್ರಧಾನ ಸಂಪಾದಕ

ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಪುರಾಣನಾಮಚೂಡಾಮಣಿ

ಲೇಖಕರು

ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ.,
ಪಾನ್ಯಂ ಸುಂದರಶಾಸ್ತ್ರಿ, ವಿದ್ವಾನ್.




ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೧

# ಅ ರಿ ಕೆ

ಸಂಸ್ಕೃತ ಭಾಷೆಯಲ್ಲಿ ಪ್ರಚುರವಾಗಿರುವ ಪುರಾಣಗಳಲ್ಲಿಯೂ ಇತಿಹಾಸ ಗಳಲ್ಲಿಯೂ ಕಾಣಬರುವ ದೇವತೆಗಳು, ಋಷಿಗಳು, ಪುಣ್ಯಕ್ಷೇತ್ರಗಳು, ಪರ್ವತಗಳು, ನದಿಗಳು, ದೇಶಗಳು, ರಾಜರುಗಳು, ಅವರವರ ಕಾಲದ ವೈಚಿತ್ರ್ಯಗಳು, ಮಹತ್ವ ಗಳು ಮುಂತಾದುವುಗಳ ವಿಷಯವಾದ ಕಥೆಗಳನ್ನು ವಾಙ್ಮಯಾಭ್ಯಾಸದ ಸೌಕರ್ಯ ಕ್ಕಾಗಿ ಸ್ವಲ್ಪಮಟ್ಟಿಗಾದರೂ ತಿಳಿಯಪಡಿಸಲು ಅನುಕೂಲಿಸುವ ಪುಸ್ತಕವೊಂದು ಕನ್ನಡ ವಿದ್ಯಾರ್ಥಿಗಳಿಗೆ ಆವಶ್ಯಕವೆಂಬ ಭಾವನೆಯಿಂದ **"ಪುರಾಣನಾಮ ಚೂಡಾಮಣಿ"** ಎಂಬ ಸುಲಭಶೈಲಿಯ ಈ ಪುಸ್ತಕವನ್ನು ರಚಿಸಲು ಸುಮಾರು ಹನ್ನೆರಡು ವರ್ಷಗಳಿಗೆ ಹಿಂದೆ ಕೈಕೊಂಡುದಾಯಿತು ಈ ಗ್ರಂಥವನ್ನು ರಚಿಸುವಲ್ಲಿ ಜನಸಾಮಾನ್ಯದಲ್ಲೆಲ್ಲ ಪ್ರಸಿದ್ಧವಾಗಿರುವ ರಾಮಾಯಣ, ಭಾರತ, ಭಾಗವತಗಳೊಳ ಗಣ ಮುಖ್ಯ ಕಥಾಭಾಗಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಮಾತ್ರವೇ ಅಲ್ಲದೆ, ದೇವೀಭಾಗವತ, ಮಾರ್ಕಂಡೇಯಪುರಾಣ, ಹರಿವಂಶ, ಲಿಂಗಪುರಾಣ, ಸ್ಕಾಂದ ಪುರಾಣ, ಅಧ್ಯಾತ್ಮರಾಮಾಯಣ, ತತ್ವಸಂಗ್ರಹ ರಾಮಾಯಣ ಮುಂತಾದ ಇನ್ನೂ ಕೆಲವು ಗ್ರಂಥಗಳಲ್ಲಿನ ವಿಷಯಗಳನ್ನೂ ತಕ್ಕಮಟ್ಟಿಗೆ ಅಲ್ಲಲ್ಲಿ ಅಡಕನಾಗಿ ಸಂಗ್ರಹಿಸ ಲಾಗಿದೆ ಈ ಕಾರ್ಯವನ್ನು ಪೂರೈಸುವಲ್ಲಿ ಆ ಆ ಮೂಲಗ್ರಂಥಗಳನ್ನು ಧಾರಾಳವಾಗಿ ಪರಿಶೀಲಿಸಿರುವುದಷ್ಟೇ ಅಲ್ಲದೆ, ಆ ವಿಷಯಕವಾದ ಸಂಸ್ಕೃತ, ಇಂಗ್ಲಿಷ್, ಮರಾಠಿ, ಹಿಂದೀ, ತೆಲುಗು ಕೋಶಗಳನ್ನು ಕೂಡ ಯಥೋಚಿತವಾಗಿ ಉಪಯೋಗಿಸಿಕೊಂಡಿ ದ್ದೇವೆ ಯಾವ ವಿಷಯವು, ಯಾವ ಗ್ರಂಥದ, ಯಾವ ಭಾಗದ, ಎಷ್ಟನೆಯ ಅಧ್ಯಾಯ ಅಥವಾ ಸರ್ಗದಲ್ಲಿದೆಯೆಂಬುದನ್ನು ಆ ಆ ವಿಷಯಗಳ ಪಕ್ಕದಲ್ಲಿಯೇ ಚೌಕಕಂಸಗಳಲ್ಲಿ ಸೂಚಿಸಿದೆ ತುಂಬ ಪರಿಶ್ರಮದಿಂದ ನಿರ್ಮಿತವಾದ ಈ ಕೋಶಗ್ರಂಥವು ಕನ್ನಡ ವಾಙ್ಮಯದಲ್ಲಿ ಹೆಚ್ಚು ಆದರವುಳ್ಳ ಸಮಸ್ತರಿಗೂ ಪ್ರಯೋಜನಕಾರಿಯಾಗುವುದೆಂಬುದಾಗಿ ನಂಬುತ್ತೇವೆ

ಈ ಕೋಶವು ಪರಿಪೂರ್ಣವಲ್ಲವೆಂದು ಕೆಲವರೂ, ಅಪ್ರಸಿದ್ಧವಾದ ಹೆಸರು ಗಳನ್ನು ಬಿಟ್ಟುಬಿಟ್ಟಿದ್ದರೆ ಚೆನ್ನಾಗಿರುತ್ತಿದ್ದಿತೆಂದು ಬೇರೆ ಕೆಲವರೂ ಆಕ್ಷೇಪಿಸುವ ಸಂಭವವಿದೆ. ಈ ಎರಡು ವಿಧವಾದ ಆಕ್ಷೇಪಣೆಗಳಿಗೂ ಅಷ್ಟೊಂದು ಅವಕಾಶ ಕೊಡಲಾಗದೆಂಬ ಭಾವನೆಯಿಂದ ನಾವು ಚೆನ್ನಾಗಿ ಆಲೋಚಿಸಿ, ಮಧ್ಯಸ್ಥವಾದ ಒಂದು ಮಾರ್ಗವನ್ನು ಅನುಸರಿಸಲು ಪ್ರಯತ್ನಿಸಿರುವೆವು ಬೌದ್ಧ, ಜೈನ, ಲಿಂಗಾ ಯತ, ವಿಶಿಷ್ಟಾದ್ವೈತ ಮತಗಳಿಗೆ, ಹಾಗೂ ಇತ್ತೀಚೆಗೆ ಕನ್ನಡವಾಙ್ಮಯದಲ್ಲಿ ಕಾಣಬರಲಾರಂಭವಾಗಿರುವ ಕ್ರೈಸ್ತ ಮತ್ತು ಮಹಮ್ಮದೀಯ ಮತಗಳಿಗೆ ವಿಶೇಷವಾಗಿ ಸಂಬಂಧಪಟ್ಟ ಮಹಾವ್ಯಕ್ತಿಗಳ ಮತ್ತು ಪುಣ್ಯಸ್ಥಳಗಳ ವಿವರ ಗಳನ್ನೂ ಈ ಪುಸ್ತಕದಲ್ಲಿ ಸೇರಿಸಬೇಕೆಂಬ ಒಂದು ಅಪೇಕ್ಷೆ ನಮಗೆ ಇಲ್ಲದಿರಲಿಲ್ಲ.

ಕನ್ನಡವಾಙ್ಮಯದ ವಿಸ್ತಾರವಾದ ಅಭ್ಯಾಸಕ್ಕೆ ಈ ವಿಷಯಗಳನ್ನು ಕೂಡ ತಿಳಿದಿರ ಬೇಕಾದುದು ಅಗತ್ಯವೇ ಸರಿ. ಆದರೆ ವಿಸ್ತಾರಭಯದಿಂದ ಈ ವಿಷಯದಲ್ಲಿ ಮುಂದುವರಿಯಲು ಧೈರ್ಯಪಡಲಿಲ್ಲ. ಇದಲ್ಲದೆ ಒಂದೇ ಹೆಸರಿನ ವ್ಯಕ್ತಿಯ ಸ್ಥಾನ ಮಾನಗಳು ಬೇರೆ ಬೇರೆ ಮತದವರ ದೃಷ್ಟಿಕೋನದಲ್ಲಿ ಏಕರೂಪವಾಗಿ ಅಥವಾ ಸಮಾನವಾಗಿರುವುದಿಲ್ಲವೆಂಬುದರಿಂದ, ಹೀಗೆ ಇದೇ ಪುಸ್ತಕದಲ್ಲಿ ಇವನ್ನೆಲ್ಲ ಕಲ ಬೆರಿಕೆ ಮಾಡುವುದು ವಿದ್ಯಾರ್ಥಿಗಳಿಗೆ ಉಪಕಾರಕವಾಗುವುದರ ಬದಲಾಗಿ ಅಪ ಕಾರಕವೇ ಆಗಬಹುದೆಂಬ ಶಂಕೆಯೂ ಬಂದಿತು. ಇನ್ನು, ಇಂತಹ ಪುಸ್ತಕವನ್ನು ಪ್ರತ್ಯೇಕವಾಗಿ ಸಿದ್ಧಗೊಳಿಸುವುದು ಕೂಡ, ಆ ಆ ಪಂಗಡಗಳಿಗೆ ಸೇರಿದ ಅಥವಾ ಆ ಆ ಮತದವರ ಧರ್ಮಗ್ರಂಥಗಳನ್ನು ಗಾಢವಾಗಿ ಅಭ್ಯಸಿಸಿದವರಾದ ಪಂಡಿತೋತ್ತಮರು ಗಳ ಒಂದು ಮಂಡಲಿಗೆ ಒಪ್ಪಿಸುವುದೇ ಕ್ಷೇಮಕರವೆಂದೂ ನಮಗೆ ತೋರಿತು.

ಈ ಕೋಶವು ಮುಗಿದು ಕೆಲವು ವರ್ಷಗಳಾದರೂ ಎಷ್ಟೋ ಬಗೆಯ ಅಡಚಣೆ ಗಳಿಂದ ಬೇಗನೆ ಹೊರಬೀಳದೆ ನಿಂತಿದ್ದಿತು ಇಂತಹ ಸ್ಥಿತಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಗಣ್ಯಸದಸ್ಯರೂ, ಕನ್ನಡಶಾಖೆಯ ಪ್ರಧಾನಪ್ರತಿನಿಧಿಗಳೂ, ಉದ್ದಾಮಪಂಡಿತರೂ, ಭಾಷಾಭಿಮಾನಿಗಳೂ ಆದ ರಾಜಸೇವಾಸಕ್ತ ಪ್ರೊ॥ ಶ್ರೀಮಾನ್ ಬಿ ಎಂ ಶ್ರೀಕಂಠಯ್ಯ, ಎಂ ಎ., ಬಿ ಎಲ್., ಅವರು ಈ ಗ್ರಂಥದ ಪ್ರಾಮುಖ್ಯತೆಯನ್ನು ಗಮನಿಸಿ, ನಮಗೆ ಪ್ರೋತ್ಸಾಹವಿತ್ತರು. ಮತ್ತು ಅವರ ಬೆಂಬಲದಿಂದಲೇ ಈ ಕೋಶವು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥ ಮಾಲೆಯ ಒಂದು ಪುಷ್ಪವಾಗಿ ಅರಳಲು ಅವಕಾಶವಾಯಿತೆಂದು ಹೇಳಲು ತುಂಬ ಸಂತೋಷವಾಗುತ್ತದೆ.

ಸಾಧ್ಯವಾದಮಟ್ಟಿಗೂ ಪ್ರಮಾದ ಸ್ಖಾಲಿತ್ಯಾದಿ ದೋಷಗಳು ತಲೆದೋರದಿರು ವಂತೆ ಬಹಳ ಜಾಗರೂಕತೆಯಿಂದ ವಿಷಯಗಳನ್ನು ವರ್ಣಿಸಿರುವೆವು ಒಂದು ವೇಳೆ ಲೋಪದೋಷಗಳೇನಾದರೂ ಕಂಡುಬಂದಲ್ಲಿ, ವಾಚಕರು ದಯವಿಟ್ಟು ತಿಳಿಸುವು ದಾದರೆ ಮುಂದಣ ಮುದ್ರಣದಲ್ಲಿ ಅವನ್ನು ಸರಿಪಡಿಸಲು ಅನುಕೂಲವಾಗಬಹುದು.

ಕನ್ನಡದಲ್ಲಿ ಇದುವರೆಗೆ ಹುಟ್ಟಿರದಂಥ ಈ ಗ್ರಂಥವು ವಿದ್ಯಾರ್ಥಿ ಬಾಲ ಬಾಲಿಕೆಯರ ಮಟ್ಟಿಗಾದರೂ ಉಪಯುಕ್ತವಾಗುವುದಾಗಿ ತಿಳಿದರಾದರೆ, ಕನ್ನಡ ತಾಯಿಯ ಸೇವೆಗಾಗಿ ಪಟ್ಟ ಗ್ರಂಥಕರ್ತೃಗಳ ಶ್ರಮವು ಪರಿಪೂರ್ಣ ಫಲವಿತ್ತಂತೆಯೇ ಎಂದು ಭಾವಿಸುವೆವು.

ಬೆಂಗಳೂರು,
22—9—1941.

ಬೆನಗಲ್ ರಾಮರಾವ್,
ಸಾಣ್ಯಂ ಸುಂದರಶಾಸ್ತ್ರಿ

# ಪುರಾಣ ಚೂಡಾಮಣಿ

## ಅ

**ಅಕಂಪನ.**—(I) ಸುಮಾಲಿಯೆಂಬ ರಾಕ್ಷಸನ ಮಗನು ಜನಸ್ಥಾನದಲ್ಲಿ ಶ್ರೀರಾಮನು ಖರ, ದೂಷಣ, ತ್ರಿಶಿರಸರನ್ನು ಕೊಂದ ಸಮಾಚಾರವನ್ನು ಇವನು ರಾವಣನಿಗೆ ಮೊದಲು ತಿಳುಹಿದನು ಇವನ ತರುವಾಯ ಶೂರ್ಪಣಖೆ ತಿಳುಹಿದಳು ರಾಮಾಯಣ ಯುದ್ಧದಲ್ಲಿ ಹನೂಮಂತನಿಂದ ಹತನಾದನು [ರಾಮಾ.-ಅರ ೩೧. ಯುದ್ಧ. ೫೬]

(II) ಒಬ್ಬ ಅರಸು ಹಗೆಗಳೊಂದಿಗೆ ಯುದ್ಧಮಾಡುತ್ತಿದ್ದಾಗ ಈತನ ಮಗನು ಹರಿಯೆಂಬವನು ಹತನಾಗಲು ಅಕಂಪನನು ಪುತ್ರಶೋಕದಿಂದ ಮರುಗುತ್ತಿದ್ದನು ಆಗ ನಾರದನು ಈತನಿಗೆ ಮೃತ್ಯು ಸೃಷ್ಟಿ ಮುಂತಾದುವನ್ನು ವಿವರಿಸಿ ಈತನ ಶೋಕವನ್ನು ತೊಲಗಿಸಿದನು [ಭಾರ.-ದ್ರೋಣ ೫೨ ಶಾಂತಿ. ೨, ೬೨].

**ಅಕೂಪಾರ.**—ಒಂದು ಆನೆ. ನೋಡು—ಇಂದ್ರದ್ಯುಮ್ನ.

**ಅಕೃತವ್ರಣ.**—ಶಾಂತನೆಂಬ ಮುನಿಯ ಮಗನು. ಈತನು ಬಾಲ್ಯದಲ್ಲಿಯೇ ತೀರ್ಥಯಾತ್ರೆಗೆ ಹೊರಟು ದಾರಿತಪ್ಪಿ, ಒಂದು ಕಾಡಿನಲ್ಲಿ ಅಲೆಯುತ್ತಿದ್ದಾಗ ಒಂದು ಹೆಬ್ಬುಲಿ ಈತನ ಮೇಲೆ ಬೀಳುವಷ್ಟರಲ್ಲಿ ಈತನ ಸ್ನೇಹಿತನಾದ ಪರಶುರಾಮನು ದೈವಯೋಗದಿಂದ ಅಲ್ಲಿಗೆ ಬಂದು ಆ ಹುಲಿಯನ್ನು ಕೊಂದನು ಈತನು ಪಾಂಡವರ ರಾಜಸೂಯ ಯಾಗದಲ್ಲಿ ಋತ್ವಿಜನಾಗಿದ್ದನು ಪಾಂಡವರು ಅರಣ್ಯವಾಸ ಮಾಡುತ್ತಿದ್ದಾಗ ಪಾಂಡವರಿಗೆ ಪರಶುರಾಮನ ಮಹಿಮೆಯನ್ನು ವಿವರಿಸಿದನು. ಅಂಬೆ ಭೀಷ್ಮನನ್ನೇ ಮದುವೆಯಾಗಲು ಹಠ ಹಿಡಿದು ತಿರಸ್ಕೃತೆಯಾಗಿ ಈತನನ್ನು ಮರೆಹೊಕ್ಕಳು [ಭಾರ -ವನ. ೧೧೬. ಉದ್ಯೋ ೧೭೬].

**ಅಕೋಪ.**—ದಶರಥನ ಅಷ್ಟಮಂತ್ರಿಗಳಲ್ಲಿ ಒಬ್ಬನು. ಈತನಿಗೆ ಅಶೋಕನೆಂಬುದು ನಾಮಾಂತರ [ರಾಮಾ -ಬಾಲ ೭].

**ಅಕ್ರೂರ.**—ಯದುವಂಶದ ಶ್ವಫಲ್ಕನ ಮಗನು ತಾಯಿ ಗಾಂದಿನಿ. ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬನು ಆಹುಕನ ಮಗಳಾದ ಭುತನುವನ್ನು ಮದುವೆಯಾಗಿದ್ದನು ಕಂಸನ ಅಪ್ಪಣೆಯಂತೆ ಬಲರಾಮ ಕೃಷ್ಣರನ್ನು ಮಧುರೆಗೆ ಕರೆತರು

ವಾಗ ಯಮುನೆಯಲ್ಲಿ ಸ್ನಾನಮಾಡುತ್ತಿದ್ದ ಅಕ್ರೂರನಿಗೆ ಕೃಷ್ಣನು ತನ್ನ ದಿವ್ಯರೂಪ ವನ್ನು ತೋರಿದನು [ಭಾಗ.-೧೦, ೩೬. ಹರಿ.-೨, ೨೨] ದ್ರೌಪದೀ ಸ್ವಯಂವರ ಕಾಲ ದಲ್ಲಿ ಇವನೂ ಹೋಗಿದ್ದನು ಪಾಂಡವರು ಅಜ್ಞಾತವಾಸಾನಂತರ ಉಪಪ್ಲಾವ್ಯ ನಗರದಲ್ಲಿ ವಾಸವಾಗಿದ್ದಾಗ ಪಾಂಡವರಲ್ಲಿಗೆ ಹೋಗಿದ್ದನು [ಭಾಗ -೯, ೨೪ ಭಾರ.-ಆದಿ. ೨೦೧ ವಿರಾ ೭೮]. ಈತನಿಗೆ ಬಭ್ರುವೆಂಬುದು ನಾಮಾಂತರ [ಭಾಗ -ಮೌ ೫].

**ಅಕ್ಷಕುಮಾರ.**—ಮಂಡೋದರಿ ರಾವಣರ ಕಿರಿಯಮಗನು ಹನೂಮಂತನು ಸೀತೆಯನ್ನು ಹುಡುಕಲು ಲಂಕೆಗೆ ಹೋಗಿದ್ದಾಗ ಇವನನ್ನು ಕೊಂದನು [ರಾಮಾ -ಸುಂದ. ೪೭].

**ಅಕ್ಷಯವಟ.**—ಗಯಾ ಕ್ಷೇತ್ರದಲ್ಲಿರುವ ಪುರಾತನವಾದ ಒಂದು ಆಲದ ಮರ ಇದರ ಅಡಿಯಲ್ಲಿ ಪಿತೃಪ್ರೀತ್ಯರ್ಥವಾಗಿ ಕೊಡುವ ಪಿಂಡವು ಅಕ್ಷಯವಾಗುವುದು [ಕಾಶೀ.]

**ಅಗಸ್ತ್ಯ.**—(1) ಅಗ + ಸ್ತ್ಯ=ಬೆಟ್ಟದ ಬೆಳೆವಣಿಗೆಯನ್ನು ಅಡ್ಡಗಿಸಿದವನು. ಮಿತ್ರಾವರುಣರೆಂಬ ಋಷಿಗಳು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತರಾಗಲು, ಊರ್ವಶಿ ಅವರ ವೀರ್ಯವನ್ನು ಒಂದು ಕುಂಭದಲ್ಲಿ ಇರಿಸಿದಳು ಆಗ ಅದರಿಂದ ಅಗಸ್ತ್ಯನೂ ವಸಿಷ್ಠನೂ ಜನಿಸಿದರು ಈ ಕಾರಣದಿಂದಲೇ ಇವರಿಗೆ ಮೈತ್ರಾವರುಣಿಯೆಂತಲೂ, ಕುಂಭಸಂಭವನೆಂತಲೂ ಹೆಸರು ವಿದರ್ಭರಾಜಕುವರಿಯಾದ ಲೋಪಾಮುದ್ರೆ ಈತನ ಹೆಂಡತಿ ದೃಢಸ್ಯು ಇವರ ಮಗನು ಈತನು ವೈವಸ್ವತ ಮನ್ವಂತರದವನು [ಪದ್ಮ-೫, ೨೨ ಭಾರ.-ಸಭಾ ೧೧ ಶಾಂತಿ ೨೦೭ ಭಾಗ -೬, ೧೮ ಮತ್ಸ್ಯ -೬೧]

(II) ಒಬ್ಬ ಬ್ರಹ್ಮರ್ಷಿ. ಪುಲಸ್ತ್ಯಮಹರ್ಷಿಯಿಂದ ಕರ್ದಮ ಬ್ರಹ್ಮನ ಮಗಳಾದ ಹವಿರ್ಭುಕ್ ಎಂಬವಳಲ್ಲಿ ಜನಿಸಿದವನು. ಈತನು ಸ್ವಾಯಂಭುವ ಮನ್ವಂತರದವನು [ಭಾಗ -೪, ೧] ಅಗ್ನಿವೇಶ್ಯನೆಂಬ ಶಿಷ್ಯನಿಗೆ ಧನುರ್ವೇದರಹಸ್ಯವನ್ನು ಉಪದೇಶಿಸಿ ಬ್ರಹ್ಮಾಸ್ತ್ರಗಳನ್ನು ವಿವರಿಸಿದನು [ಭಾರ -ಆದಿ ೧೫೧] ಸಮುದ್ರಜಲವನ್ನು ಪಾನಮಾಡಿದನು [ಭಾರ.-ವನ ೯೯. ಶಾಂತಿ ೨೦೮].

ನೋಡು—ಅಗ್ನಿವೇಶ್ಯ, ಇಲ್ವಲ, ಕಾಲಕೇಯ, ಕಾವೇರಿ, ನಹುಷ, ರಾಮ, ವಿಂಧ್ಯ

**ಅಗಸ್ತ್ಯತೀರ್ಥ.**—ದಕ್ಷಿಣ ಸಮುದ್ರತೀರದಲ್ಲಿ ನಾರೀತೀರ್ಥಗಳಲ್ಲಿ ಒಂದು. ಅರ್ಜುನನು ತೀರ್ಥಯಾತ್ರಾ ಸಮಯದಲ್ಲಿ ಇಲ್ಲಿಗೆ ಹೋಗಿದ್ದನು [ಭಾರ -ಆ. ೨೩೬].

**ಅಗಸ್ತ್ಯಭ್ರಾತ.**—ಒಬ್ಬ ಮಹರ್ಷಿ ಈತನು ಜನನಿಯ ಗರ್ಭದಲ್ಲಿರುವಾಗ ಜ್ಞಾನಸಂಪನ್ನನಾದುದರಿಂದ ಈತನ ಹೆಸರನ್ನು ಯಾರೂ ಹೇಳುವುದಿಲ್ಲ. ಈತನ ಹೆಸರು ಸುದರ್ಶನ [ಅಧ್ಯಾ.-ಅ. ೩].

**ಅಗಸ್ತ್ಯಾಶ್ರಮ.**—ಪಂಚವಟಿಗೆ ಸಮೀಪದಲ್ಲಿ ಒಂದು ಕ್ಷೇತ್ರ. ಶ್ರೀರಾಮನು ವನವಾಸ ಸಮಯದಲ್ಲಿ ಇಲ್ಲಿಗೆ ಹೋಗಿದ್ದನು [ರಾಮಾ.-ಅರ. ೧೨]. ಯುಧಿಷ್ಠಿರನು ಲೋಮಶ ಮಹರ್ಷಿಯ ಸಂಗಡ ತೀರ್ಥಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಹೋಗಿದ್ದನು [ಭಾರ.-ವನ. ೯೪]. ನಾಸಿಕವೆಂಬ ಪಟ್ಟಣಕ್ಕೆ ಆಗ್ನೇಯದಲ್ಲಿ ೨೪ ಮೈಲುಗಳ ದೂರದಲ್ಲಿ ಅಗಸ್ತಿಪುರಿಯೆಂದು ಪ್ರಸಿದ್ಧವಾಗಿದೆ

**ಅಗ್ನಿ.**—ಪಂಚಭೂತಗಳಲ್ಲಿ ಮೂರನೆಯವನು ತೇಜಸ್ಸಿಗೂ ಅದಕ್ಕೆ ಅಭಿಮಾನದೇವತೆಗೂ ಇದೇ ಹೆಸರು ಋಗ್ವೇದದಲ್ಲಿನ ಮೊದಲನೆಯ ದೇವತೆ. ಅಗ್ನಿ ವಿರಾಟ್‌ಪುರುಷನ ಮುಖದಿಂದ ಜನಿಸಿದವನು [ಭಾರ -ಅಶ್ವ. ೧೧೧]. ನೀರಿನಿಂದ ಜನಿಸಿದವನು [ಉದ್ಯೋ. ೧೫ ಮತ್ತು ೩೮]. ಚತುರ್ಮುಖನ ಕೋಪದಿಂದ ಹುಟ್ಟಿದವನು [ಶಾಂತಿ ೨೬೨] ಈತನು ದಕ್ಷಬ್ರಹ್ಮನ ಕುವರಿಯಾದ ಸ್ವಾಹೆಯನ್ನು ಮದುವೆಯಾದನು. ಸ್ಕಂದನು ಈತನ ಮಗನು [ವನ. ೨೩೧] ಇಕ್ಷ್ವಾಕು ವಂಶದ ದುರ್ಯೋಧನನೆಂಬ ಅರಸನ ಮಗಳಾದ ಸುದರ್ಶನೆಯನ್ನು ಮದುವೆಯಾಗಿ ಸುದರ್ಶನನೆಂಬ ಮಗನನ್ನು ಪಡೆದನು [ಅನು ೨] ಶ್ರೀ ಕೃಷ್ಣನ ಸೂಚನೆಯಂತೆ ಅರ್ಜುನನ ಸಹಾಯದಿಂದ ಇಂದ್ರನ ಖಾಂಡವವನವನ್ನು ಸುಟ್ಟು ಸಂತುಷ್ಟನಾಗಿ ತನಗೆ ಒತ್ತಾಸೆಮಾಡಿದ ಅರ್ಜುನನಿಗೆ ಕಪಿಧ್ವಜ ರಥವನ್ನೂ, ಗಾಂಡೀವ ಧನುಸ್ಸನ್ನೂ, ಅಕ್ಷಯ್ಯತೂಣೀರಗಳನ್ನೂ ಕೊಟ್ಟನು [ಆದಿ.-೨೫೦, ೨೬೦]. ಶ್ರೀ ಕೃಷ್ಣನಿಗೆ ಚಕ್ರಾಯುಧವನ್ನು ಕೊಟ್ಟನು [ಆದಿ ೨೫೧] ಅಗ್ನಿಯ ವಂಶವರ್ಣನೆ [ವನ ೨೨೦, ೨೨೪ ವಾಯು -೨೯ ಮತ್ಸ್ಯ -೫೧] ಭೃಗುಮಹರ್ಷಿಯಿಂದ ಸರ್ವಭಕ್ಷಕನಾಗುವಂತೆ ಶಾಪವನ್ನು ಪಡೆದನು [ಆದಿ ೬ ಶಲ್ಯ ೪೮] ಇಂದ್ರನು ವೃತ್ರನನ್ನು ಕೊಂದು ಬ್ರಹ್ಮಹತ್ಯೆಗೆ ತುತ್ತಾಗಿದ್ದಾಗ ಅದರ ನಾಲ್ಕನೆಯ ಒಂದು ಭಾಗವನ್ನು ಅಗ್ನಿ ಪರಿಗ್ರಹಿಸಿದನು [ಶಾಂತಿ. ೨೮೮] ಈತನು ಸಪ್ತರ್ಷಿಗಳ ಪತ್ನಿಯರಲ್ಲಿ ಕಾಮುಕನಾಗಿದ್ದು ಬಹಳಕಾಲ ಅವರೊಂದಿಗೆ ಕ್ರೀಡಿಸಿದನು [ವನ ೨೨೬] ರಾವಣವಧಾನಂತರ ಶ್ರೀರಾಮನ ಚುಚ್ಚುಮಾತುಗಳನ್ನು ಕೇಳಲಾರದೆ ಸೀತೆ ಅಗ್ನಿಪ್ರವೇಶಮಾಡಿದಾಗ ಅಗ್ನಿ ಸೀತೆಯನ್ನು ರಾಮನಿಗೆ ಒಪ್ಪಿಸಿ ಆಕೆ ದೋಷರಹಿತೆಯೆಂದು ತಿಳುಹಿದನು [ವನ ೨೯೨ ರಾಮಾ.-ಯುದ್ಧ. ೧೨೦] ವೈಶ್ವಾನರನೆಂಬ ಬ್ರಾಹ್ಮಣನು ಶಿವನ ಅನುಗ್ರಹದಿಂದ ತನ್ನ ಹೆಂಡತಿಯಾದ ಶುಚಿಷ್ಮತಿಯಲ್ಲಿ ಒಬ್ಬ ಮಗನನ್ನು ಪಡೆದನು ಈ ಹುಡುಗನು ತನಗೆ ಬಾಲಾರಿಷ್ಟದೋಷವಿರುವುದೆಂಬುದಾಗಿ ನಾರದರ ಮೂಲಕ ತಿಳಿದು, ಆ ಗಂಡವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಶಿವನನ್ನು ಕುರಿತು ತಪಸ್ಸುಮಾಡುತ್ತಿದ್ದನು. ಆಗ ಇಂದ್ರನು ಅಲ್ಲಿಗೆ ಬಂದು ಇವನಿಗೆ ಬೇಕಾದ ವರವನ್ನು ಕೊಡುವೆನೆನಲು, ಈ ಹುಡುಗನು ಇಂದ್ರನನ್ನು

ಅಸಡ್ಡೆಮಾಡಲಾಗಿ ಇಂದ್ರನು ಸಿಟ್ಟುಗೊಂಡು ಇವನನ್ನು ವಜ್ರಾಯುಧದಿಂದ ಹೊಡೆದನು ಆಗ ಶಿವನು ಪ್ರತ್ಯಕ್ಷನಾಗಿ ಇವನಿಗೆ ಮರಣಭಯವನ್ನು ತೊಲಗಿಸಿ, ದೇವತ್ವವನ್ನೂ, ಅಗ್ನಿಲೋಕಾಧಿಪತ್ಯವನ್ನೂ, ದಿಕ್ಪಾಲಕತ್ವವನ್ನೂ ಅನುಗ್ರಹಿಸಿದನು ಸ್ವಾಹಾ, ಸ್ವಧಾ ಎಂಬ ಇಬ್ಬರು ಈತನಿಗೆ ಪತ್ನಿಯರು. ಟಗರು ಈತನ ವಾಹನ [ಸ್ಕಾಂದ] ನೋಡು—ನಿಷಧ, ನೀಲಧ್ವಜ, ಮರುತ್ತ, ಶ್ವೇತಕ. ಯುಧಿಷ್ಠಿರನ ರಾಜಸೂಯಯಾಗ ಸಮಯದಲ್ಲಿ ದಕ್ಷಿಣದ ದಿಗ್ವಿಜಯಕ್ಕಾಗಿ ಹೊರಟಿದ್ದ ಸಹದೇವನು ಮಾಹಿಷ್ಮತೀ ನಗರದಲ್ಲಿ ನೀಲನೆಂಬ ರಾಜನೊಡನೆ ಯುದ್ಧ ಮಾಡುವಾಗ ಅಗ್ನಿ ನೀಲರಾಜನಿಗೆ ಒತ್ತಾಸೆಮಾಡುತ್ತಿರಲು ಸಹದೇವನಿಂದ ಸ್ತುತನಾಗಿ ಆತನಿಗೆ ಪ್ರಸನ್ನನಾದನು [ಸಭಾ ೩೨] ಆತ್ಮಹತ್ಯೆಯ ಭಯದಿಂದ ಇಂದ್ರನು ಓಡಿಹೋಗಿದ್ದಾಗ ಅಗ್ನಿ ಅವನನ್ನು ಇಲ್ಲಿಗೆ ಕರೆತಂದನು [ಉದ್ಯೋ ೧೫].

**ಅಗ್ನಿತೀರ್ಥ** —ಯಮುನಾನದಿಗೆ ದಕ್ಷಿಣದಲ್ಲಿರುವ ಗಂಗೆಯ ಒಂದು ಮಡು. ಅಗ್ನಿಯ ಅಣ್ಣನಾದ ಜಾತವೇದನೆಂಬವನು ಗೌತಮೀ ತೀರದಲ್ಲಿ ಮುನಿಗಳು ನಡಸಿದ ಯಜ್ಞದಲ್ಲಿ ದೇವತೆಗಳಿಗೆ ಕೊಟ್ಟ ಹವಿಸ್ಸುಗಳನ್ನು ಒಯ್ಯುತ್ತಿದ್ದಾಗ ಮಧುವೆಂಬ ರಾಕ್ಷಸನು ಜಾತವೇದನನ್ನು ಕೊಂದು ಆ ಹವಿಸ್ಸುಗಳನ್ನು ಅಪಹರಿಸಿದನು ದೇವತೆಗಳಿಗಾಗಿ ಅಣ್ಣನು ಮೃತನಾಗಲು ಶೋಕಭರಿತನಾದ ಅಗ್ನಿ ನೀರಿನಲ್ಲಿ ಮುಳುಗಿ ಅವಿತುಕೊಂಡನು ಅಗ್ನಿ ಕಣ್ಮರೆಯಾಗಲು ದೇವತೆಗಳು ತಲ್ಲಣಿಸುತ್ತ ಗಂಗೆಯ ಒಡ್ಡಿನಲ್ಲಿ ನಿಂತು ಅಗ್ನಿಯನ್ನು ಹೊಗಳಿ ಒಲಿಸಿದರು ಇಂತು ಅಗ್ನಿ ಅವಿತುಕೊಂಡಿದ್ದ ತೀರ್ಥಕ್ಕೆ ಅಗ್ನಿತೀರ್ಥವೆಂದು ಹೆಸರು [ವನ ೨೨೪ ಶಲ್ಯ ೪೮]

**ಅಗ್ನಿದ್ಯೋತನ** —ಒಬ್ಬ ಬ್ರಾಹ್ಮಣನು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆಯಾಗುವುದೆಂಬ ಸುದ್ದಿಯನ್ನು ಕೇಳಿ ದುಃಖಿತೆಯಾದ ರುಕ್ಮಿಣಿ ತಾನು ಕೃಷ್ಣನನ್ನು ಹೊರತು ಮತ್ತಾರನ್ನೂ ಮದುವೆಯಾಗಲೊಲ್ಲದೆ, ತನ್ನ ಅಂತರಂಗವನ್ನು ಒಂದು ಲೇಖನದಲ್ಲಿ ಬರೆದು ಈತನ ಮೂಲಕ ಶ್ರೀ ಕೃಷ್ಣನಿಗೆ ಕಳುಹಿಸಿದಳು [ಭಾಗ -೧೦, ೫೨]

**ಅಗ್ನಿವೇಶ್ಯ** —ಒಬ್ಬ ಬ್ರಹ್ಮರ್ಷಿ ದ್ರೋಣಾಚಾರ್ಯನ ತಂದೆಯಾದ ಭರದ್ವಾಜನೆಂಬ ಮುನಿಯ ತಮ್ಮನು ಈತನು ಅಗಸ್ತ್ಯಮಹರ್ಷಿಯಿಂದ ಧನುರ್ವೇದವನ್ನು ಕಲಿತು ದ್ರುಪದನಿಗೂ ದ್ರೋಣನಿಗೂ ಉಪದೇಶಿಸಿದನು [ಭಾರ -ಆದಿ. ೧೪೦, ೧೫೧.]

**ಅಘಮರ್ಷಣ** —ಒಂದು ತೀರ್ಥ. ಇದರ ಬಳಿಯಲ್ಲಿ ತಪಸ್ಸು ಮಾಡುತ್ತಿದ್ದ (ಚಾಕ್ಷುಷ ಮನ್ವಂತರದಲ್ಲಿ ಹತ್ತುಮಂದಿ ಪ್ರಚೇತಸರಿಂದ ಮಾರಿಷೆಯಲ್ಲಿ ಜನಿಸಿದ) ದಕ್ಷನಿಗೆ ವಿಷ್ಣು ಪ್ರತ್ಯಕ್ಷನಾಗಿ, ಪಂಚಜನನೆಂಬ ಬ್ರಹ್ಮನ ಮಗಳಾದ ಅಸಿಕ್ನಿಯೆಂಬವಳನ್ನು ಕೊಡಿಸಿ ಮದುವೆ ಮಾಡಿಸಿದನು [ಭಾಗ.-೬, ೫].

**ಅಘಾಸುರ**—ಒಬ್ಬ ರಾಕ್ಷಸನು. ಇವನು ಕಂಸನ ಪ್ರೇರಣೆಯಿಂದ, ಗೋಕುಲ ದಲ್ಲಿದ್ದ ಬಲರಾಮ ಕೃಷ್ಣರನ್ನು ಕೊಲ್ಲಲು ಹೊಂಚು ಹಾಕುತ್ತಿದ್ದು ಸರ್ವದೇಹವನ್ನು ತಳೆದು ಬಾಲಕೃಷ್ಣನನ್ನು ನುಂಗಿದನು. ಕೃಷ್ಣನು ಇವನ ಹೊಟ್ಟೆಯಲ್ಲಿ ದೊಡ್ಡದಾಗಿ ಬೆಳೆದು ಇವನ ದೇಹವನ್ನು ಸೀಳಿ ಹೊರಬಂದನು. ಬಕಾಸುರನೂ ಪೂತನೆಯೂ ಇವನ ಒಡಹುಟ್ಟಿದವರು [ಭಾಗ -೧೦, ೧೨]

**ಅಙ್ಗ**—(i) ಸ್ವಾಯಂಭುವ ಮನುವಿನ ವಂಶಕ್ಕೆ ಸೇರಿದ ಊರು ರಾಜನ ಮಗನು ಈತನು ಸುನೀಥೆಯೆಂಬವಳನ್ನು ಮದುವೆಯಾಗಿ ದೇವ, ಬ್ರಾಹ್ಮಣ ಭಕ್ತಿಸಂಪನ್ನನೆನಿಸಿ ರಾಜ್ಯಭಾರಮಾಡುತ್ತಿದ್ದನು ಇವನ ಹೊಟ್ಟೆಯಲ್ಲಿ ಕೇವಲ ನಾಸ್ತಿಕನಾದ ವೇನರಾಜನು ಜನಿಸಿದನು [ಭಾರ -ದ್ರೋಣ ೬೯ ಶಾಂತಿ ೨೮, ೫೮ ಭಾಗ -೪, ೧೩. ಹರಿ -೧, ೨]

(ii) ಒಬ್ಬ ಅರಸು ಅನುವಂಶದ ಬಲಿರಾಜನ ಹೆಂಡತಿಯಾದ ಸುದೇಷ್ಣೆ ಯಲ್ಲಿ ದೀರ್ಘತಮನೆಂಬ ಮುನಿಯಿಂದ ಜನಿಸಿದವನು ವಂಗ, ಕಲಿಂಗ, ಪುಂಡ್ರ, ಸುಹ್ಮರೆಂಬವರು ಇವನ ಒಡಹುಟ್ಟಿದವರು [ಆದಿ ೧೧೩] ಅಂಗನು ಪಾಲಿಸಿದ ದೇಶ ಅಂಗದೇಶ

(iii) ಮ್ಲೇಚ್ಛರಾಜನು ಮಹಾಭಾರತ ಯುದ್ಧದಲ್ಲಿ ದುರ್ಯೋಧನನ ಪರ ವಾಗಿ ಹೋರಾಡಿ ಭೀಮನಿಂದ ಹತನಾದನು [ದ್ರೋಣ ೨೬]

(iv) ಗಂಗಾ ಸರಯೂ ನದಿಗಳ ನಡುವೆ ಇರುವ ಒಂದು ದೇಶ ಇದಕ್ಕೆ ಈಗ ಭಾಗಲಪುರವೆಂದು ಹೆಸರು [ಆದಿ ೧೧೩ ಭೀಷ್ಮ ೯] ಇದರ ರಾಜಧಾನಿ ಚಂಪಾಪುರಿ [ವನ ೮೩ ಮತ್ತು ೧೧೪] ತಪೋನಿರತನಾಗಿದ್ದ ಪರಮೇಶ್ವರನ ನಿಯ ಮಕ್ಕೆ ಭಂಗವನ್ನುಂಟುಮಾಡಿ, ಫಾಲನೇತ್ರದಿಂದ ಸುಟ್ಟುಹೋದ ಮನ್ಮಥನು ದೇಹ ತ್ಯಾಗಮಾಡಿ ಮರಳಿ ಅಂಗಗಳನ್ನು ಪಡೆದ ಕಾರಣ ಈ ಹೆಸರು ತ್ರೇತಾಯುಗದಲ್ಲಿ ರೋಮಪಾದನೆಂಬ ಅರಸು ಇಲ್ಲಿ ರಾಜ್ಯಭಾರಮಾಡುತ್ತಿದ್ದನು ಆಗ್ಗ ಕ್ಷಾಮ ತಲೆದೋರಲಾಗಿ ಋಷ್ಯಶೃಂಗನ ಮೂಲಕ ಸುಭಿಕ್ಷನಾಯಿತು [ಭಾರ -ವನ ೧೧೧, ೧೧೪ ರಾಮಾ -ಆದಿ. ೯, ೧೦, ೨೩] ದುರ್ಯೋಧನನು ಅಂಗರಾಜ್ಯದಲ್ಲಿ ಕರ್ಣನಿಗೆ ಪಟ್ಟಗಟ್ಟಿದನು [ಭಾರ -ಆದಿ ೧೪೬]

**ಅಙ್ಗದ**—(i) ಕಪಿರಾಜನಾದ ವಾಲಿಯಿಂದ ತಾರೆಯಲ್ಲಿ ಜನಿಸಿದವನು ಮಹಾ ಪರಾಕ್ರಮಶಾಲಿ. ವಾಲಿಯ ಬಳಿಕ ಸುಗ್ರೀವನು ಅರಸನಾದಾಗ ಇವನು ಯುವರಾಜ ನಾದನು [ಭಾರ.-ವನ ೨೮೫]. ಸೀತೆಯನ್ನು ಹುಡುಕಲು ತೆಂಕಣ ದಿಕ್ಕಿಗೆ ಹೊರಟ ಕಪಿಗಳಿಗೆ ನಾಯಕನಾಗಿದ್ದನು ಮತ್ತೊಮ್ಮೆ ರಾವಣನಲ್ಲಿಗೆ ರಾಯಭಾರಿಯಾಗಿ ಹೋಗಿದ್ದನು. ರಾವಣನು ನಿಕುಂಭಿಳಾ ಯಾಗ ಮಾಡುತ್ತಿದ್ದಾಗ, ಮಂಡೋದರಿ

ಯನ್ನು ಅಲ್ಲಿಗೆ ಸೆಳೆತಂದು ರಾವಣನ ನಿಯಮವನ್ನು ಭಂಗಗೊಳಿಸಿದನು. ರಾಮಾಯಣ ಯುದ್ಧದಲ್ಲಿ ಅನೇಕಮಂದಿ ರಾಕ್ಷಸರನ್ನು ಕೊಂದನು [ರಾಮಾ.-ಕಿಷ್ಕಿಂ., ಸುಂ., ಯುದ್ಧ.].

(II) ಊರ್ಮಿಳೆ ಮತ್ತು ಲಕ್ಷ್ಮಣರ ಹಿರಿಯ ಮಗನು ಇವನ ರಾಜಧಾನಿಗೂ ಈ ಹೆಸರು ಸಲ್ಲುತ್ತದೆ ಇದು ಕಾರಪಥವೆಂಬ ದೇಶಕ್ಕೆ ರಾಜಧಾನಿ. [ರಾಮಾ.-ಉತ್ತರ. ೧೦೨].

**ಅಙ್ಗನಾ** —ಉತ್ತರದಿಕ್ಕಿನಲ್ಲಿರುವ ಸಾರ್ವಭೌಮವೆಂಬ ದಿಗ್ಗಜದ ಹೆಣ್ಣಾನೆ.

**ಅಙ್ಗಾರಕ** —(I) ನವಗ್ರಹಗಳಲ್ಲಿ ಮೂರನೆಯವನು. ಭೂದೇವಿ ವಿಷ್ಣುವಿನ ಸಾನ್ನಿಧ್ಯದಿಂದ ಅಚ್ಚ ಹವಳದ ಕಾಂತಿಯುಳ್ಳ ಒಬ್ಬ ಮಗನನ್ನು ಹೆತ್ತಳು ಇವನು ತಪೋಮಹಿಮೆಯಿಂದ ಗ್ರಹಗಳಲ್ಲಿ ಒಬ್ಬನಾದನು [ಬ್ರ ವೈ ]. ರಾಕ್ಷಸ ಸಂಹಾರ ಕಾಲದಲ್ಲಿ ವಿಷ್ಣುವಿನ ದೇಹದಿಂದ ಬಿದ್ದ ಬೆವರುಹನಿಯಿಂದ ಕೆಂಪಾದ ಒಬ್ಬ ಪುರುಷನು ಜನಿಸಿ ತಪೋಮಹಿಮೆಯಿಂದ ಗ್ರಹಮಂಡಲವನ್ನು ಸೇರಿ ಅಂಗಾರಕನೆಂದು ಪ್ರಸಿದ್ಧಿಪಡೆದನು [ಪಾದ್ಮ ]. ದಾಕ್ಷಾಯಣೀ ವಿರಹಪೀಡಿತನಾದ ಶಿವನ ಮೈ ಬೆವರಿನಿಂದ ಲೋಹಿತಾಂಗನಾದ ಒಬ್ಬ ಕುಮಾರನು ಹುಟ್ಟಿದನು ಭೂದೇವಿ ಇವನನ್ನು ಪುತ್ರಭಾವದಿಂದ ಸಾಕಿದಳು [ಶಿವ , ಮತ್ಸ್ಯ -೭೧ ಭಾರ -ಸಭಾ ೧೧].

(II) ಜಯದ್ರಥನ ಒಡಹುಟ್ಟಿದವನು [ಭಾರ -ಸಭಾ. ೨೬೬]

**ಅಙ್ಗಾರಪರ್ಣ** —ಕಶ್ಯಪನಿಂದ ಮುನಿಯೆಂಬ ಹೆಂಡತಿಯಲ್ಲಿ ಜನಿಸಿದ ದೇವ ಗಂಧರ್ವರಲ್ಲಿ ಒಬ್ಬನು ಕುಬೇರನ ಆಪ್ತಮಿತ್ರನು ಒಮ್ಮೆ ಈತನು ತನ್ನ ಮಡದಿಯಾದ ಕುಂಭೀನಸಿಯೊಂದಿಗೆ ಪರಿವಾರ ಸಮೇತನಾಗಿ ಗಂಗೆಯಲ್ಲಿ ರಾತ್ರಿಯ ವೇಳೆ ಜಲಕ್ರೀಡೆಯನ್ನು ನಡಸುತ್ತಿದ್ದನು ಪಾಂಡವರು ಏಕಚಕ್ರದಿಂದ ದ್ರೌಪದೀ ಸ್ವಯಂವರಕ್ಕಾಗಿ ಪ್ರಯಾಣಮಾಡುತ್ತಿದ್ದುದನ್ನು ಕಂಡು ಅವರನ್ನು ಅಡ್ಡಗಿಸಿ, ಯುದ್ಧದಲ್ಲಿ ಅರ್ಜುನನಿಂದ ಸೋತು, ಶರಣಾಗತನಾಗಿ ಅರ್ಜುನನಿಗೆ ಚಾಕ್ಷುಷೀ ವಿದ್ಯೆಯನ್ನು (ಸಂಮೋಹನಾಸ್ತ್ರ) ಉಪದೇಶಿಸಿ, ಧೌಮ್ಯಾಚಾರ್ಯರನ್ನು ಪುರೋಹಿತನನ್ನಾಗಿ ವರಿಸುವಂತೆ ಪಾಂಡವರಿಗೆ ಹೇಳಿ, ಅರ್ಜುನನ ಬಾಣಾಗ್ನಿಯಿಂದ ದಗ್ಧವಾದ ತನ್ನ ರಥವನ್ನು ಗಂಧರ್ವ ಮಹಿಮೆಯಿಂದ ಚಿತ್ರರತ್ನಮಯವನ್ನಾಗಿಸಿ, ಅದಕ್ಕೆ ಚಿತ್ರರಥವೆಂಬ ಹೆಸರಿಟ್ಟು ತನ್ನ ಹೆಸರನ್ನೂ ಚಿತ್ರರಥನೆಂಬುದಾಗಿ ಮಾರ್ಪಡಿಸಿಕೊಂಡು ಗಂಧರ್ವಲೋಕಕ್ಕೆ ತೆರಳಿದನು [ಭಾರ.-ಆದಿ ೬೬, ೧೮೬, ೧೯೯ ಸಭಾ. ೧೦] ಪಾಂಡವರ ರಾಜಸೂಯಯಾಗ ಸಮಯದಲ್ಲಿ ಅರ್ಜುನನಿಗೆ ಅನೇಕ ದಿವ್ಯಾಶ್ವಗಳನ್ನು ಕೊಟ್ಟನು [ಸಭಾ. ೭೮]

**ಅಙ್ಗಿರಸ್.**—ಅಂಗಿರಸನು ಒಮ್ಮೆ ಬ್ರಹ್ಮಮಾನಸಪುತ್ರನಾಗಿಯೂ, ಮತ್ತೊಮ್ಮೆ ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ವರುಣನು ಯಜ್ಞಮಾಡುತ್ತಿದ್ದಾಗ ಅಗ್ನಿಕುಂಡದಿಂದ ಜನಿಸಿದನು [ಭಾರ -ಆದಿ ೬೬ ಸಭಾ. ೧೧. ಅನು. ೧೩೨ ಮತ್ಸ್ಯ. ೧೯೫]. ಈತನು ವಸುದೆಯೆಂಬ ತರುಣಿಯನ್ನು ಮದುವೆಯಾಗಿ ಬೃಹತ್ಕೀರ್ತಿ, ಬೃಹಜ್ಜ್ಯೋತಿ, ಬೃಹದ್ಬ್ರಹ್ಮ, ಬೃಹನ್ಮನ, ಬೃಹನ್ಮಂತ್ರ, ಬೃಹದ್ಭಾಸ, ಬೃಹಸ್ಪತಿಗಳೆಂಬ ಏಳುಮಂದಿ ಪುತ್ರರನ್ನೂ, ಭಾನುಮತಿ, ರಾಕಾ, ಸಿನೀವಾಲೀ, ಕುಹೂ, ಅರ್ಚಿಷ್ಮತೀ, ಮಹಿಷ್ಮತೀ, ಮಹಾಮತಿಗಳೆಂಬ ಏಳು ಮಂದಿ ಪುತ್ರಿಯರನ್ನೂ ಪಡೆದನು [ಭಾರ -ವನ ೨೨೧, ೨೨೨] ಈತನಿಗೆ ಬೃಹಸ್ಪತಿ, ಉಚಥ್ಯ, ಸಂವರ್ತರೆಂಬ ಮೂವರು ಪುತ್ರರು [ಭಾರ -ಆದಿ ೬೨] ಬೃಹಸ್ಪತಿ, ಉಚಥ್ಯ, ವಯಸ್ಯರೆಂಬ ಮೂವರು ಮಕ್ಕಳು [ಅನು ೧೩೨] ಈತನು ಕರ್ದಮ ಬ್ರಹ್ಮನ ಮಗಳಾದ ಶ್ರದ್ಧೆಯೆಂಬವಳನ್ನು ಮದುವೆಯಾಗಿ ಉಚಥ್ಯ, ಬೃಹಸ್ಪತಿಗಳೆಂಬ ಪುತ್ರರನ್ನೂ, ಸಿನೀವಾಲೀ, ಕುಹೂ, ರಾಕಾ, ಅನುಮತಿಗಳೆಂಬ ನಾಲ್ವರು ಪುತ್ರಿಯರನ್ನೂ ಪಡೆದನು [ಭಾಗ -೪, ೧] ಈತನು ಸ್ವಧೆಯೆಂಬ ಹೆಂಡತಿಯಲ್ಲಿ ಪಿತೃದೇವತೆಗಳನ್ನೂ ಸತಿಯೆಂಬ ಹೆಂಡತಿಯಲ್ಲಿ ಅಥರ್ವಾಂಗಿರಸರನ್ನೂ ಪಡೆದನು. [ಭಾಗ -೬, ೬] ಒಮ್ಮೆ ಅಗ್ನಿದೇವನು ದೇವತೆಗಳ ಮೇಲೆ ಸಿಟ್ಟಿನಿಂದ ಎಲ್ಲಿಯೋ ಅವಿತುಕೊಂಡನು. ಆಗ ಚತುರ್ಮುಖನು ಅಂಗಿರಸನನ್ನು ಅಗ್ನಿಯ ಅಧಿಕಾರದಲ್ಲಿ ನಿಯಮಿಸಿದನು ಕೆಲಕಾಲದ ಮೇಲೆ ಅಗ್ನಿ ಹಿಂದಿರುಗಿ ಬಂದು ತನ್ನ ಅಧಿಕಾರ ತಪ್ಪಿತೆಂದು ಚಿಂತಾಕ್ರಾಂತನಾಗಿರಲು ಅಂಗಿರಸನು ಅಗ್ನಿಯ ಅಧಿಕಾರವನ್ನು ಆತನಿಗೆ ಒಪ್ಪಿಸಿಕೊಟ್ಟನು [ಭಾರ -ವನ ೨೨೦].

**ಅಚಲ.**—ಗಾಂಧಾರ ರಾಜನಾದ ಶಕುನಿಯ ಸಹೋದರನು ಏಕರಥನು ಭಾರತ ಯುದ್ಧದಲ್ಲಿ ಅರ್ಜುನನಿಂದ ಹತನಾದನು [ಭಾರ -ಉದ್ಯೋ ೧೬೮ ದ್ರೋಣ ೩೦].

**ಅಚ್ಛೋದ**—ಕಾಶ್ಮೀರ ದೇಶದಲ್ಲಿ ಸಿದ್ಧಾಶ್ರಮದ ಸಮೀಪದಲ್ಲಿರುವ ಒಂದು ಸರೋವರ. ಇದರಿಂದ ಅಚ್ಛೋದೆಯೆಂಬ ನದಿ ಹರಿಯುತ್ತದೆ [ಆದಿ -೬೪]

**ಅಚ್ಛೋದಾ**—ಬರ್ಹಿಷದರೆಂಬ ಪಿತೃದೇವತೆಗಳ ಮಗಳು. ಈಕೆ ಸತ್ಯವತಿಯಾಗಿ ಜನಿಸಿ ಪರಾಶರನಿಂದ ವ್ಯಾಸಮುನಿಯನ್ನು ಪಡೆದು ಬಳಿಕ ಶಂತನುವನ್ನು ಮದುವೆಯಾದಳು [ಭಾರ -ಆದಿ. ೬೪ ಮತ್ಸ್ಯ.-೧೪]. ಈಕೆ ಅಗ್ನಿಷ್ವಾತ್ತರೆಂಬ ಪಿತೃದೇವತೆಗಳ ಮಗಳು [ಹರಿ.-೧, ೧೮].

**ಅಚ್ಯುತಾಯು.**—ಭಾರತಯುದ್ಧದಲ್ಲಿ ಅರ್ಜುನನಿಂದ ಹತನಾದನು. ಇವನ ಮಗನು ದೀರ್ಘಾಯುರಾಜನು [ಭಾರ.-ದ್ರೋಣ ೯೫]

**ಅಜ**—ಇಕ್ಷ್ವಾಕುವಂಶದ ಅರಸು. ದಶರಥನ ತಂದೆ [ಭಾರ.-ವನ. ೨೭೫].

**ಅಜಮೀಢ.**—(i) ಒಬ್ಬ ಅರಸು. ಚಂದ್ರವಂಶದ ವಿಕುಂಜನ ರಾಜನಿಂದ ಸುಂದರೆಯೆಂಬವಳಲ್ಲಿ ಜನಿಸಿದವನು ಈತನಿಗೆ ಕೇಕಯಿ, ಗಾಂಧಾರಿ, ಋಕ್ಷಾ, ನಾಗಾ, ವಿಮಲಾ ಎಂಬುದಾಗಿ ಐವರು ಮಡದಿಯರು. ಇವರಲ್ಲಿ ಋಕ್ಷೆಯ ಮಗನಾದ ಸಂವರಣನು ಸೂರ್ಯನ ಮಗಳಾದ ತಪತಿಯನ್ನು ಮದುವೆಯಾಗಿ ಕುರುವೆಂಬ ಮಗ ನನ್ನು ಪಡೆದನು [ಭಾರ -ಆದಿ ೬೩, ೧೦೧, ೧೮೭]

(ii) ಒಬ್ಬ ಅರಸು ಚಂದ್ರವಂಶದ ಭುಮನ್ಯುರಾಜನ ಮಗನಾದ ಸುಹೋತ್ರನಿಂದ ಐಕ್ಷ್ವಾಕಿಯೆಂಬವಳಲ್ಲಿ ಜನಿಸಿದವನು ಇವನಿಗೆ ಸುಮೀಢ, ಪುರುಮೀಢರೆಂಬವರು ಒಡಹುಟ್ಟಿದವರು ಈತನು ಧೂಮನಿಯೆಂಬ ಮಡದಿಯಲ್ಲಿ ಋಕ್ಷನೆಂಬ ಮಗನನ್ನೂ, ಎರಡನೆಯವಳಾದ ನೀಲಿಯೆಂಬವಳಲ್ಲಿ ದುಷ್ಯಂತ, ಪರ ಮೇಷ್ಠಿ--ಎಂಬ ಇಬ್ಬರು ಪುತ್ರರನ್ನೂ ಮೂರನೆಯವಳಾದ ಕೇಶಿನಿಯಲ್ಲಿ ಜಹ್ನುವೆಂಬ ಪುತ್ರನನ್ನೂ ಪಡೆದನು [ಭಾರ -ಆದಿ ೧೦೧]

(iii) ಒಂದು ಪಟ್ಟಣ ಈಗ ಅಜ್ಮೀರ್ ಎಂದು ಪ್ರಸಿದ್ಧವಾಗಿದೆ

**ಅಜಾಮಿಳ**—ಕನ್ಯಾಕುಬ್ಜದಲ್ಲಿದ್ದ ಒಬ್ಬ ಬ್ರಾಹ್ಮಣನು ಈತನು ಮಾತಾ ಪಿತೃಗಳನ್ನೂ ಧರ್ಮಪತ್ನಿಯನ್ನೂ ಪರಿತ್ಯಾಗಮಾಡಿ, ಶೂದ್ರಸ್ತ್ರೀ ಸಂಪರ್ಕ ಮೊದ ಲಾದ ಅನೇಕ ದುರಾಚಾರಗಳಿಂದ ಪತಿತನಾಗಿದ್ದರೂ ಪ್ರಾಣೋತ್ಕ್ರಮಣ ಸಮಯ ದಲ್ಲಿ ತನ್ನ ಮಗನಾದ ನಾರಾಯಣನೆಂಬವನನ್ನು ಕರೆದು, ನಾರಾಯಣಸ್ಮರಣ ಮಹಿಮೆಯಿಂದ ದಿವ್ಯಗತಿಯನ್ನು ಪಡೆದನು [ಭಾಗ -೬, ೧]

**ಅಜಾಮುಖಿ.**—(i) ಒಬ್ಬ ನಾಗಕನ್ಯೆ ಕಶ್ಯಪಮುನಿಯಿಂದ ಸುರಸೆಯೆಂಬವ ಳಲ್ಲಿ ಜನಿಸಿದವಳು ಶೂರಾಸುರ, ಪದ್ಮಾಸುರರು ಇವಳ ಒಡಹುಟ್ಟಿದವರು. ಇವಳು ಒಮ್ಮೆ ದುರ್ವಾಸರ ಸಂಸರ್ಗದಿಂದ ವಾತಾಪಿ ಮತ್ತು ಇಲ್ವಲರೆಂಬ ಮಕ್ಕಳನ್ನು ಪಡೆದಳು [ಸ್ಕಾಂ ]

**ಅಜೀಗರ್ತ**—ಭೃಗುವಂಶದಲ್ಲಿ ಜನಿಸಿದ ಒಬ್ಬ ಮಹರ್ಷಿ ಒಮ್ಮೆ ಕ್ಷಾಮವು ಲೋಕವನ್ನೆಲ್ಲ ಆವರಿಸಿಕೊಳ್ಳಲಾಗಿ ಈತನು ಕುಟುಂಬವನ್ನು ಕಾಪಾಡಲಾರದೆ ತುಂಬ ಕಷ್ಟಪಡುತ್ತಿದ್ದನು ಅಷ್ಟರಲ್ಲಿ ಹರಿಶ್ಚಂದ್ರನು ವರುಣಪ್ರೀತ್ಯರ್ಥವಾಗಿ ಮಾಡತಕ್ಕ ಯಜ್ಞದಲ್ಲಿ ತನ್ನ ಮಗನಿಗೆ ಪ್ರತಿಯಾಗಿ ನರಪಶುವನ್ನು ಹುಡುಕು ತ್ತಿರುವಲ್ಲಿ ಈತನು ತನ್ನ ಮಧ್ಯಮಪುತ್ರನಾದ ಶುನಶ್ಶೇಪನನ್ನು ಹರಿಶ್ಚಂದ್ರನಿಗೆ ಬೆಲೆಗೆ ಕೊಟ್ಟು, ಆ ಪಾಪದಿಂದ ಪಿಶಾಚತ್ವವನ್ನು ಪಡೆದನು. ಶುನಶ್ಶೇಪನು ತನ್ನ ತಪೋಮಹಿಮೆಯಿಂದ ಅವನ ಪಿಶಾಚತ್ವವನ್ನು ಹೋಗಲಾಡಿಸಿದನು [ದೇವೀ. ಭಾಗ -೭, ೧೪. ಭಾರ -ಅನು. ೩. ಬ್ರ.ವೈ.].

**ಅಞ್ಜನ.**—(i) ಪಶ್ಚಿಮದಿಕ್ಕಿನಲ್ಲಿರುವ ಗಂಡಾನೆ. ಅಷ್ಟದಿಗ್ಗಜಗಳಲ್ಲಿ ಒಂದು.

(11) ಒಂದು ಪರ್ವತ ಮುನಿಪುಂಗವರಲ್ಲಿ ಪುರಾತನನೆನಿಸಿದ ಅಸಿತಮಹರ್ಷಿ ಇಲ್ಲಿ ತಪಸ್ಸುಮಾಡಿ ಸಿದ್ಧಿಯನ್ನು ಪಡೆದನು.

**ಅಞ್ಜನಪರ್ವ.**—ಘಟೋತ್ಕಚನ ಮಗನು ಮಹಾಭಾರತ ಯುದ್ಧದಲ್ಲಿ ಜಯದ್ರಥನ ಸಂಹಾರವಾದ ಬಳಿಕ ರಾತ್ರಿ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದನು [ಭಾರ-ಸಭಾ ೧೯೪ ದ್ರೋಣ ೧೫೭].

**ಅಞ್ಜನಾ.**—ಪುಂಜಿಕಸ್ಥಲಿಯೆಂಬ ಅಪ್ಸರಸಿ ಶಾಪದಿಂದ ವಾನರಜನ್ಮವನ್ನು ಪಡೆದು, ಕೇಸರಿಯೆಂಬ ಕಪಿನಾಯಕನನ್ನು ಮದುವೆಯಾಗಿ, ಒಮ್ಮೆ ವನದಲ್ಲಿ ವಿಹರಿಸುತ್ತಿದ್ದಾಗ ವಾಯುದೇವನು ಈಕೆಯ ಸೌಂದರ್ಯಕ್ಕೆ ಮರುಳಾದನು ಅಂಜನೆ ವಾಯುವಿನ ಅನುಗ್ರಹದಿಂದ ಆಂಜನೇಯನನ್ನು ಪಡೆದಳು [ರಾಮಾ-ಕಿಷ್ಕಿಂ ೬೬]. ವಿಷ್ಣುವಿನ ಮೋಹಿನೀರೂಪವನ್ನು ಕಂಡು ಬೆರಗಾದ ಶಿವನ ವೀರ್ಯವು ಕೆಳಬೀಳಲಾಗಿ ಅದು ಗಾಳಿಗೆ ಹೊಡೆದುಕೊಂಡು ಬಂದು ಅಂಜನೆಯ ಕಿವಿಯಲ್ಲಿ ಬಿದ್ದಿತು. ಅದರಿಂದ ಆಂಜನೇಯನು ಜನಿಸಿದನು [ಶಿವ] ಅಂಜನೆ ಅಹಲ್ಯಾಗೌತಮರ ಮಗಳು ಅಹಲ್ಯೆ ರಹಸ್ಯವಾಗಿ ಇಂದ್ರನಿಂದಲೂ ಸೂರ್ಯನಿಂದಲೂ ಒಬ್ಬೊಬ್ಬ ಪುತ್ರನನ್ನು ಪಡೆದಳು ಒಮ್ಮೆ ಅತ್ರಿಮಹರ್ಷಿ ಈ ಮಕ್ಕಳಿಬ್ಬರನ್ನೂ ಎತ್ತಿಕೊಂಡು ಆಂಜನೆಯನ್ನು ನಡಸುತ್ತ ಸಮುದ್ರತೀರದಲ್ಲಿ ಸಂಚರಿಸುತ್ತಿದ್ದಾಗ ಅಂಜನೆ ಆ ಇಬ್ಬರು ಗಂಡುಮಕ್ಕಳ ಹುಟ್ಟಿನ ಗುಟ್ಟನ್ನು ಅತ್ರಿಗೆ ವಿವರಿಸಿದಳು. ಕೂಡಲೇ ಅತ್ರಿ ಅವರಿಬ್ಬರನ್ನೂ "ಇವರು ನನ್ನ ಮಕ್ಕಳಲ್ಲವಾದರೆ ಕಪಿಮುಖರಾಗಲಿ" ಎಂದು ಶಪಿಸಿದನು ಅವರಿಬ್ಬರೂ ಕಪಿಮುಖರಾದರು ಇವರೇ ವಾಲಿ, ಸುಗ್ರೀವರು ಬಳಿಕ ತನ್ನ ಗುಟ್ಟನ್ನು ರಟ್ಟುಮಾಡಿದ ಕೋಪದಿಂದ ಅಹಲ್ಯೆ ತನ್ನ ಮಗಳು ಕುರುಡಿಯಾಗುವಂತೆಯೂ ಅವಳ ಹೊಟ್ಟೆಯಲ್ಲಿ ಕಪಿ ಜನಿಸುವಂತೆಯೂ ಶಾಪವಿತ್ತಳು ಅದರಂತೆಯೇ ಹನೂಮಂತನು ಈಕೆಯ ಮಗನಾಗಿ ಜನಿಸಿದನು. (ಈ ಕಥೆ ಆಂಧ್ರಭಾಷೆಯ "ವಚನವಿಚಿತ್ರ ರಾಮಾಯಣ"ವೆಂಬ ಗ್ರಂಥದ ಹೊರತು ಮತ್ತೆಲ್ಲಿಯೂ ಕಾಣಬರುವುದಿಲ್ಲ.)

**ಅಞ್ಜನಾವತೀ**—ಈಶಾನ್ಯದಿಕ್ಕಿನಲ್ಲಿರುವ ಸುಪ್ರತೀಕವೆಂಬ ಗಂಡು ದಿಗ್ಗಜದ ಹೆಣ್ಣಾನೆ.

**ಅಣಿಮಾಣ್ಡವ್ಯ.**—ಒಬ್ಬ ಮಹರ್ಷಿ ಈತನು ಬಾಲ್ಯದಲ್ಲಿ ನೊಣಗಳನ್ನು ಕೊಲ್ಲುತ್ತಿದ್ದನು ಬಳಿಕ ಪ್ರಾಪ್ತವಯಸ್ಕನಾದ ಮೇಲೆ ತಪೋನಿರತನಾಗಿ ಸಮಾಧಿಯುಲ್ಲಿದ್ದಾಗ ಕೆಲವು ಮಂದಿ ಕಳ್ಳರು ಈತನ ಆಶ್ರಮದಲ್ಲಿ ಅವಿತುಕೊಂಡರು. ರಾಜಭಟರು ಹಿಂದಟ್ಟಿ ಬಂದು ಕಳ್ಳರ ಜಾಡನ್ನು ಕೇಳಲಾಗಿ, ಈತನು ಮೌನದಿಂದಿದ್ದನು. ರಾಜಭಟರು ಕಳ್ಳರೊಂದಿಗೆ ಈತನನ್ನೂ ಎಳೆದುಯ್ದು, ಅರಸನ

ಅಪ್ಪಣೆಯಂತೆ ಶೂಲಕ್ಕೆ ಏರಿಸಿದರು. ಕಳ್ಳರು ಸತ್ತರು ಈತನು ಸಾಯದಿರುವು ದನ್ನು ಕಂಡು ಹೆದರಿದ ಅರಸನು ಓಡಿ ಬಂದು, ಶೂಲದಿಂದ ಇಳಿಸಿ, ಅಡ್ಡಬಿದ್ದು ಮನ್ನಿಸುವಂತೆ ಬೇಡಿದನು ಅಣಿಮಾಂಡವ್ಯನು ಆ ಶೂಲವನ್ನು ಮುರಿದು ಕೈಯಲ್ಲಿ ಹಿಡಿದು ಹೊರಟು ಕಡೆಗೆ ದೇಹತ್ಯಾಗಮಾಡಿದನು ಯಮದೂತರು ಈತನನ್ನು ಯಮನಲ್ಲಿಗೆ ಕರೆದುಯ್ದರು ಅಣಿಮಾಂಡವ್ಯನು "ನಾನು ಯಾವ ಪಾಪವನ್ನೂ ಮಾಡಿದವನಲ್ಲ, ನನಗೆ ನರಕ ಪ್ರಾಪ್ತವಾಗಲು ಕಾರಣವೇನು?" ಎಂದು ಯಮನನ್ನು ಕೇಳಲಾಗಿ, ಯಮನು "ನೀನು ಬಾಲ್ಯದಲ್ಲಿ ನೊಣಗಳನ್ನು ಕೊಲ್ಲುತ್ತಿದ್ದೆ ಅದರ ಫಲವಾಗಿ ನರಕ ಪ್ರಾಪ್ತನಾಯಿತು" ಎನಲು ಕುಪಿತನಾದ ಅಣಿಮಾಂಡವ್ಯನು "ಬಾಲ್ಯದಲ್ಲಿ ಮಕ್ಕಳು ಪಾಪಕ್ಕೆ ಗುರಿಯಾಗತಕ್ಕವರಲ್ಲ ಅದು ಹೆತ್ತವರ ಪಾಲಿಗೆ ಸೇರಿದುದು ಇಷ್ಟುಮಟ್ಟಿನ ಧರ್ಮಸೂಕ್ಷ್ಮವನ್ನರಿಯದೆ ನನಗೆ ನರಕವನ್ನು ದೊರಕುವಂತೆ ಮಾಡಿದೆಯಾಗಿ ನೀನು ಭೂಲೋಕದಲ್ಲಿ ಶೂದ್ರನಾಗಿ ಜನಿಸು" ಎಂದು ಶಾಪವಿತ್ತನು ಅಂತೆಯೇ ಯಮನು ಭೂಮಿಯಲ್ಲಿ ವಿದುರನಾಗಿ ಜನಿಸಿದನು [ಭಾರ -ಆದಿ ೬೪, ೧೧೬ ಸಭಾ ೧೪ ಮಾರ್ಕಂ -೧೬ ಸ್ಕಾಂದ ರೇವಾ -೧೭೦ ನಾಗ -೧೩೬] ಈತನು ಶೂಲದಲ್ಲಿದ್ದಾಗ ರಾತ್ರಿಯವೇಳೆ ಒಬ್ಬ ಸುದತಿ ತನ್ನ ಪತಿಯನ್ನು ಗೂಡೆಯಲ್ಲಿ ತಲೆಯಮೇಲೆ ಹೊತ್ತುಕೊಂಡು ವೇಶ್ಯೆಯ ಮನೆಗೆ ಬಿಡುವುದಕ್ಕೆ ಹೋಗುತ್ತಿದ್ದಾಗ ಆತನ ಕಾಲು ಅಣಿಮಾಂಡವ್ಯನಿಗೆ ಸೋಕಲಾಗಿ ಶೂಲದ ಇರಿತವನ್ನು ತಾಳಲಾರದೆ ದುಃಖಭರಿತನಾದ ಅಣಿಮಾಂಡವ್ಯನು "ಸೂರ್ಯೋದಯವಾಗುವುದರೊಳಗಾಗಿ ನೀನು ಸಾಯುವೆ" ಎಂದು ಶಾಪವಿತ್ತನು [ಗರು -೧೪೨ ಮಾರ್ಕಂ -೧೬]

**ಅಣುಹ** —ಯಯಾತಿವಂಶದ ವಿಭ್ರಾಜರಾಜನ ಮಗನು ಈತನಿಗೆ ನೀಪ ನೆಂಬುದು ನಾಮಾಂತರ ಈತನು ವ್ಯಾಸಪುತ್ರನಾದ ಶುಕಮುನಿಯ ಮಗಳಾದ ಕೃತ್ವಿಯೆಂಬವಳನ್ನು ಮದುವೆಯಾಗಿ ಬ್ರಹ್ಮದತ್ತನನ್ನು ಪಡೆದನು [ಭಾಗ -೯, ೧೨ ಹರಿ -೧, ೧೯, ಮತ್ಸ್ಯ -೧೫, ೨೦].

**ಅತಿಕಾಯ** —ರಾವಣನಿಂದ ಧಾನ್ಯಮಾಲಿಯೆಂಬ ರಕ್ಕಸಿಯಲ್ಲಿ ಜನಿಸಿದವನು ಮಹಾಪರಾಕ್ರಮಿ ರಾವಣನ ಸೇನಾಪತಿಯಾಗಿದ್ದು ಕುಂಭಕರ್ಣನು ಮಡಿದ ತರುವಾಯ ಲಕ್ಷ್ಮಣನು ಪ್ರಯೋಗಿಸಿದ ಬ್ರಹಾಸ್ತ್ರದಿಂದ ಮಡಿದನು [ರಾಮಾ -ಯುದ್ಧ ೭೨].

**ಅತಿಬಲಾ** —ಒಂದು ಮಂತ್ರವಿದ್ಯೆ. ಇದನ್ನು ವಿಶ್ವಾಮಿತ್ರನು ತನ್ನ ಯಾಗ ಸಂರಕ್ಷಣೆಗಾಗಿ ರಾಮ ಲಕ್ಷ್ಮಣರನ್ನು ಸಿದ್ಧಾಶ್ರಮಕ್ಕೆ ಕರೆದುಯ್ಯುವಾಗ ದಾರಿಯಲ್ಲಿ ಅವರಿಗೆ ಆಯಾಸವಾಗದಂತೆ ಉಪದೇಶಿಸಿದನು [ರಾಮಾ -ಬಾಲ ]

**ಅತ್ರಿ** —ಈ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬನು ಬ್ರಹ್ಮಮಾನಸಪುತ್ರನು. ಈತನು ಕರ್ದಮನೆಂಬ ಬ್ರಹ್ಮನ ಮಗಳಾದ ಅನುಸೂಯೆಯನ್ನು ಮದುವೆಯಾಗಿ ದತ್ತಾತ್ರೇಯ, ದುರ್ವಾಸಮುನಿ, ಚಂದ್ರ ಈ ಮೂವರು ಪುತ್ರರನ್ನು ಪಡೆದನು [ಭಾರ -ಆದಿ ೬೬ ಸಭಾ ೧೧ ಭಾಗ -೪, ೧ ಮತ್ಸ್ಯ -೧೪೪] ಈತನಿಗೆ ಚಂದ್ರ, ಅರ್ಯಮರೆಂಬ ಇಬ್ಬರು ಮಕ್ಕಳು [ಶಾಂತಿ ೨೦೭] ಈತನ ಕಣ್ಣಿನಿಂದ ಚಂದ್ರನು ಜನಿಸಿದನು [ಭಾಗ -೯, ೧೪] ಈತನೇ ಚಂದ್ರನಾಗಿ ಕತ್ತಲೆಯನ್ನು ದೂಡಿದನು [ಅನು ೨೬೧] ಶ್ರೀರಾಮನು ವನವಾಸಕಾಲದಲ್ಲಿ ಈತನ ಆಶ್ರಮಕ್ಕೆ ಹೋಗಿದ್ದಾಗ ಅತ್ರಿ ಅನೇಕ ಧರ್ಮರಹಸ್ಯಗಳನ್ನು ರಾಮನಿಗೆ ತಿಳುಹಿದನು [ರಾಮಾ.-ಅಯೋ ೧೧೭] ಈತನು ಕೆಲವು ಕಾಲ ಬ್ರಹ್ಮನ ಅಧಿಕಾರದಲ್ಲಿದ್ದನು [ಬ್ರಹ್ಮ]. ಈತನು ಮಂತ್ರ ದ್ರಷ್ಟನಾದ ಒಬ್ಬ ಮಹರ್ಷಿ [ಮತ್ಸ್ಯ -೧೪೪].

**ಅಥರ್ವ** —(I) ಒಬ್ಬ ಮಹರ್ಷಿ ಅಂಗಿರಸನಿಂದ ಸತಿಯೆಂಬ ಹೆಂಡತಿಯಲ್ಲಿ ಜನಿಸಿದವನು [ಭಾಗ -೬, ೬ ಭಾರ -ಸಭಾ ೧೧ ಉದ್ಯೋ ೧೮] ಈತನು ಕರ್ದಮ ಬ್ರಹ್ಮನ ಮಗಳಾದ ಶಾಂತಿ ಅಥವಾ ಚಿತ್ತಿಯೆಂಬ ತರುಣಿಯನ್ನು ಮದುವೆಯಾಗಿ ಅಶ್ವಶಿರ ಅಥವಾ ದಧೀಚಿಯೆಂಬ ತನಯನನ್ನು ಪಡೆದನು [ಭಾಗ -೪ ೧]

(II) ವೇದಗಳಲ್ಲಿ ನಾಲ್ಕನೆಯದು ಇದು ಮುಖ್ಯವಾಗಿ, ಶಾಂತಿಕ, ಪೌಷ್ಟಿಕ, ಅಭಿಚಾರಿಕ ಮಂತ್ರಗಳನ್ನೊಳಗೊಂಡಿರುತ್ತದೆ ಅರ್ಥಶಾಸ್ತ್ರ ಇದರ ಉಪವೇದ.

**ಅದಿತಿ** —ಪ್ರಚೇತಸ ಪುತ್ರನಾದ ದಕ್ಷನ ಮಗಳು ಕಶ್ಯಪಮುನಿಯ ಹೆಂಡತಿ ಈಕೆ ದ್ವಾದಶಾದಿತ್ಯರನ್ನೂ, ಇಂದ್ರನನ್ನೂ, ವಾಮನನನ್ನೂ ಹೆತ್ತವಳು ಮುಖ್ಯ ವಾಗಿ ದೇವತೆಗಳು ಈಕೆಯ ಮಕ್ಕಳಾದುದರಿಂದಲೇ ಅವರಿಗೆಲ್ಲ ಆದಿತ್ಯರೆಂಬ ಹೆಸರು [ಭಾರ -ಆದಿ ೬೩, ೬೬]

**ಅದೃಶ್ಯಂತೀ** —ವಸಿಷ್ಠಪುತ್ರನಾದ ಶಕ್ತಿಮಹರ್ಷಿಯ ಹೆಂಡತಿ ಶಕ್ತಿಪುತ್ರನಾದ ಪರಾಶರಮುನಿ ಈಕೆಯ ಗರ್ಭದಲ್ಲಿರುವಾಗಲೇ ಶಕ್ತಿಮಹರ್ಷಿಯನ್ನು ಒಬ್ಬ ರಾಕ್ಷಸನು ನುಂಗಿದನು [ಭಾರ -ಆದಿ ೧೯೩, ೧೯೪] ಈಕೆಯ ಜನಕನಾದ ಚಿತ್ರಮುಖನೆಂಬವನು ಮೊದಲು ವೈಶ್ಯನಾಗಿದ್ದು ತಪೋಮಹಿಮೆಯಿಂದ ಬ್ರಾಹ್ಮಣ್ಯವನ್ನು ಪಡೆದನು ಬಳಿಕ ಈಕೆ ಜನಿಸಿದಳು [ಭಾರ -ಅನು ೫೩]

**ಅದ್ರಿಕಾ** —ಒಬ್ಬ ಅಪ್ಸರಸಿ ಬ್ರಹ್ಮನ ಶಾಪದಿಂದ ಮತ್ಸ್ಯಜನ್ಮವನ್ನು ಪಡೆದು ಯಮುನೆಯಲ್ಲಿದ್ದು ಒಮ್ಮೆ ಶ್ಯೇನಪಕ್ಷಿಯ ಕೊಕ್ಕಿನಿಂದ ನೀರಿನಲ್ಲಿ ಬಿದ್ದ, ಉಪರಿಚರನೆಂಬ ವಸುವಿನ ವೀರ್ಯವನ್ನು ಭಕ್ಷಿಸಿ, ಮತ್ಸ್ಯರಾಜನೆಂಬ ಪುತ್ರನನ್ನೂ, ಮತ್ಸ್ಯಗಂಧೆಯೆಂಬ ಮಗಳನ್ನೂ ಪಡೆದು ಶಾಪವಿಮುಕ್ತೆಯಾದಳು ನೋಡು—ಸತ್ಯವತಿ [ಭಾರ.-ಆದಿ. ೬೪]

**ಅಧಿರಥ**—ಕೌರವರ ಸಾರಥಿ ಈತನ ಹೆಂಡತಿ ರಾಧೆ ಕುಂತಿ ಕರ್ಣನನ್ನು ನದಿಯಲ್ಲಿ ತೇಲಬಿಟ್ಟುಹೋದ ಬಳಿಕ ಆ ಮಗು ಇವನಿಗೆ ಸಿಕ್ಕಿತು ಇವನು ಆ ಮಗುವನ್ನು ತಂದು ತನ್ನ ಮಡದಿಗೆ ಕೊಟ್ಟನು ರಾಧೆ ಅವನನ್ನು ಅಕ್ಕರೆಯಿಂದ ಕಾಪಾಡಿದಳು ಈ ಕಾರಣದಿಂದಲೇ ಕರ್ಣನಿಗೆ ಸೂತಪುತ್ರ, ರಾಧೇಯ—ಎಂಬ ಹೆಸರುಗಳು ರೂಢವಾದುವು ಇವನಿಗೆ ರಾಧೆಯಲ್ಲಿ ಶತ್ರುಂತಪ, ದ್ರುಮ, ವೃಕರಥ, ಶತ್ರುಂಜಯ, ವಿಪಾರ ಮುಂತಾದ ಅನೇಕಮಂದಿ ಮಕ್ಕಳು ಜನಿಸಿದರು [ಭಾರ -೬೫, ೧೪೭] ಚಂದ್ರವಂಶದಲ್ಲಿ ಜನಿಸಿದ ಸತ್ಯಕರ್ಮನೆಂಬ ಅಂಗರಾಜನಿಂದ ಜನಿಸಿದವನು [ಭಾಗ -೯, ೨೩ ಹರಿ -೧, ೩೧, ೩೨]

**ಅಧಿರಾಜ**—ಒಂದು ದೇಶ ಈಗಣ ಗ್ವಾಲಿಯರ್ ಸಂಸ್ಥಾನದಲ್ಲಿದೆ ಇದಕ್ಕೆ ದತಿಹವೆಂಬುದು ಈಗಣ ಹೆಸರು ಪಾಂಡವರ ಕಾಲದಲ್ಲಿ ದಂತವಕ್ರನು ಇಲ್ಲಿ ರಾಜ್ಯಭಾರಮಾಡುತ್ತಿದ್ದನು ರಾಜಸೂಯಯಾಗ ಸಮಯದಲ್ಲಿ ಸಹದೇವನು ಈ ದೇಶವನ್ನು ಸೋಲಿಸಿದನು [ಭಾರ -ಸಭಾ ೩೨]

**ಅಧಿಷ್ಠಾನಪುರ**—ಒಂದು ಪಟ್ಟಣ ಚೇದಿದೇಶದ ರಾಜಧಾನಿ ನೋಡು—ಚೇದಿ ಪಾಂಡವರ ಕಾಲದಲ್ಲಿ ಇಲ್ಲಿ ಶಿಶುಪಾಲನು ರಾಜ್ಯಭಾರ ಮಾಡುತ್ತಿದ್ದನು

**ಅನನ್ತ.**—(i) ಕಶ್ಯಪಮುನಿಯಿಂದ ಕದ್ರುವೆಂಬ ಹೆಂಡತಿಯಲ್ಲಿ ಜನಿಸಿದವನು ಸರ್ಪರಾಜ [ಭಾರ -ಆದಿ ೬೬ ಸಭಾ ೯]

(ii) ಈತನು ವಿದ್ರುಮನೆಂಬ ಬ್ರಾಹ್ಮಣನಿಗೆ ಮುದಿತನದಲ್ಲಿ ಹುಟ್ಟಿದವನು ಜನ್ಮತಃ ನಪುಂಸಕನಾಗಿದ್ದ ಈತನನ್ನು ಶಿವನ ಅನುಗ್ರಹದಿಂದ ಗಂಡಸನ್ನಾಗಿ ಮಾಡಿ, ವೃದ್ಧಶರ್ಮನೆಂಬ ಬ್ರಾಹ್ಮಣನ ಮಗಳಾದ ಚಾರುಮತಿಯೆಂಬ ಕನ್ಯೆಯನ್ನು ತಂದು ಈತನಿಗೆ ಮದುವೆಮಾಡಿದನು [ಕಲ್ಕಿ]

**ಅನನ್ತವಿಜಯ**—ಯುಧಿಷ್ಠಿರನ ಶಂಖದ ಹೆಸರು [ಭೀಷ್ಮ ೨೫, ೫೧]

**ಅನನ್ತಸೇನ**—ಈಶ್ವರನ ಮಗನಾದ ಸ್ಕಂದನ ನಾಮಾಂತರ. ಭೀಷ್ಮನಿಂದ ತಿರಸ್ಕೃತೆಯಾದ ಅಂಬೆ ಅನನ್ತಸೇನನನ್ನು ತಪಸ್ಸಿನಿಂದ ಮೆಚ್ಚಿಸಿ, ಭೀಷ್ಮನನ್ನು ಕೊಲ್ಲುವುದಕ್ಕಾಗಿ ಒಂದು ಮಾಲೆಯನ್ನು ಪಡೆದಳು [ಭಾರ -ಆದಿ ೧೮೯]

**ಅನರಣ್ಯ**—ಇಕ್ಷ್ವಾಕುವಂಶದ ಪುರುಕುತ್ಸರಾಜನ ಕಿರಿಯ ಮಗನಾದ ತ್ರಸದಸ್ಯುರಾಜನ ಎರಡನೆಯ ಮಗನು ಇವನಿಗೆ ಹರ್ಯಶ್ವ, ಬೃಹದಶ್ವರೆಂಬ ಇಬ್ಬರು ಮಕ್ಕಳು ರಾವಣನು ದಿಗ್ವಿಜಯಕ್ಕೆ ಹೊರಟಾಗ ಭೂಮಂಡಲದ ಅನೇಕ ಮಂದಿ ಅರಸರು ಮರೆಹೊಕ್ಕರು ಈತನು ಇದಿರಿಸಿ ಯುದ್ಧಮಾಡಲಾಗಿ ರಾವಣನು ಇವನ ರುಂಡವನ್ನು ಉರುಳಿಸಿದನು ಆ ರುಂಡವು '' ಇದು ನಿನ್ನ ಮಹಿಮೆಯಲ್ಲ. ಎಲ್ಲಕ್ಕೂ ಕಾರಣಭೂತನು ಬೇರೊಬ್ಬನಿದ್ದಾನೆ ಕಡೆಗೂ ನನ್ನ ವಂಶದ ಹುಡುಗನಿಂದಲೇ

ನಿನ್ನ ಸಾವು ದಿಟ'' ಎಂದಿತು ಅಂತೆಯೇ ರಾಮನು ಇಕ್ಷ್ವಾಕುವಂಶದಲ್ಲಿ ಜನಿಸಿ ರಾವಣನನ್ನು ಕೊಂದನು [ರಾಮಾ -ಉತ್ತ ೧೯ ಭಾರ -ಅನು ೧೭೭, ೨೭೧].

**ಅನಲ** —(i) ಅಷ್ಟವಸುಗಳಲ್ಲಿ ಒಬ್ಬನು [ಭಾರ -ಆದಿ ೬೭].

(ii) ಗರುಡನ ಮಕ್ಕಳಲ್ಲಿ ಒಬ್ಬನು [ಭಾರ -ಉದ್ಯೋ ೧೦೧]

**ಅನಲಾ** —(i) ಕಾಮಧೇನುವಿನ ಮಗಳಾದ ರೋಹಿಣಿಯ ಮಗಳು. ಈಕೆಯ ಮಗಳು ಶುಕಿಯೆಂಬವಳು [ಆದಿ ೬೭]

(ii) ಮಾಲ್ಯವಂತನೆಂಬ ರಾಕ್ಷಸನ ಸುಂದರಿಯೆಂಬ ಹೆಂಡತಿಯಲ್ಲಿ ಜನಿಸಿದವಳು ಈಕೆ ವಿಶ್ವಾವಸುವೆಂಬ ರಾಕ್ಷಸನನ್ನು ಮದುವೆಯಾಗಿ ಕುಂಭೀನಸಿಯೆಂಬವಳನ್ನು ಹೆತ್ತಳು [ರಾಮಾ -ಉತ್ತರ ೬೧]

**ಅನಸೂಯಾ** —ಕರ್ದಮಮುನಿಯಿಂದ ದೇವಹೂತಿಯೆಂಬಾಕೆಯಲ್ಲಿ ಜನಿಸಿದ ಒಂಬತ್ತುಮಂದಿ ಹುಡುಗಿಯರಲ್ಲಿ ಒಬ್ಬಳು (ನೋಡು—ಅತ್ರಿ) ಮಹಾಪತಿವ್ರತೆ. ಒಮ್ಮೆ ಈಕೆಯು ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದ ತ್ರಿಮೂರ್ತಿಗಳನ್ನು ಮೆಚ್ಚಿಸಿ, ಅವರ ವರದಿಂದ ದತ್ತಾತ್ರೇಯ, ಚಂದ್ರ, ದುರ್ವಾಸರೆಂಬ ಮೂವರು ಮಕ್ಕಳನ್ನು ಹೆತ್ತಳು ಶ್ರೀರಾಮನು ಅರಣ್ಯವಾಸ ಸಮಯದಲ್ಲಿ ಅತ್ರಿಮುನಿಯ ಆಶ್ರಮಕ್ಕೆ ಹೋಗಿದ್ದಾಗ, ಅನಸೂಯೆ ಸೀತೆಯನ್ನು ಬಹಳವಾಗಿ ಆದರಿಸಿ, ಆಕೆಗೆ ಅನೇಕ ಸ್ತ್ರೀ ಧರ್ಮರಹಸ್ಯಗಳನ್ನು ತಿಳುಹಿ, ಸೌಮಂಗಲ್ಯವನ್ನು ವೃದ್ಧಿಗೊಳಿಸುವಂತಹ ವಸ್ತ್ರ, ಭೂಷಣ, ಗಂಧ, ಮಾಲ್ಯಾದಿಗಳನ್ನು ಕೊಟ್ಟು, ಬಹಳವಾಗಿ ಕೊಂಡಾಡಿ ಹರಸಿದಳು ನೋಡು—ಕೌಶಿಕ [ರಾಮಾ -ಅಯೋ ೧೧೭]

**ಅನಿರುದ್ಧ** —ರುಕ್ಮಿಣಿ ಕೃಷ್ಣರ ಮಗನಾದ ಪ್ರದ್ಯುಮ್ನನ ಮಗನು ಇವನ ತಾಯಿ ರುಕ್ಮವತಿ [ಭಾರ -ಆದಿ ೨೦೧ ಸಭಾ ೪ ದ್ರೋಣ ೧೧] ಈತನು ರುಕ್ಮಿಯ ಮೊಮ್ಮಗಳಾದ ರೋಚನೆಯೆಂಬವಳನ್ನು ಮದುವೆಯಾಗಿ ವಜ್ರನೆಂಬ ಮಗನನ್ನು ಪಡೆದನು [ಭಾಗ -೧, ೧೫, ೧೦, ೬೧] ಬಾಣಾಸುರನ ಮಗಳಾದ ಉಷೆ ಇವನ ಹೆಂಡತಿ [ಭಾರ -ಸಭಾ ೬೦ ಭಾಗ -೧೦, ೬೨ ವಿಷ್ಣು -೫, ೩೨ ಹರಿ -೨, ೧೧೮]

**ಅನಿಲ** —(i) ಅಷ್ಟವಸುಗಳಲ್ಲಿ ಒಬ್ಬನು ವಾಯುದೇವನ ನಾಮಾಂತರ. ಈತನು ಶಿವೆಯೆಂಬವಳನ್ನು ಮದುವೆಯಾಗಿ ಮನೋಜವ, ಅವಿಜ್ಞಾತಗತಿಯೆಂಬ ಇಬ್ಬರು ಮಕ್ಕಳನ್ನು ಪಡೆದನು [ಭಾರ -ಆದಿ ೬೭]

(ii) ಒಬ್ಬ ಕ್ಷತ್ರಿಯ ಕುಮಾರನು ಇವನ ತಂದೆಯಾದ ವೃಷಾದರ್ಭಿ ತಾನು ಮಾಡಿದ ಯಜ್ಞದಲ್ಲಿ ಋತ್ವಿಜರಿಗೆ ಸಲ್ಲತಕ್ಕ ದಕ್ಷಿಣೆಗೆ ಪ್ರತಿಯಾಗಿ ತನ್ನ ಮಗನಾದ ಅನಿಲನ ಹೆಣವನ್ನು ಸಪ್ತರ್ಷಿಗಳಿಗೆ ಕೊಟ್ಟನು ಋತ್ವಿಜರಾಗಿದ್ದ ಸಪ್ತರ್ಷಿಗಳು ಆ ಶವವನ್ನೇ ಪಚನಮಾಡಿ ತಿನ್ನತೊಡಗಿದರು [ಭಾರ -ಅನು. ೧೪೧].

**ಅನು** —ಚಂದ್ರವಂಶದ ನಹುಷಪುತ್ರನಾದ ಯಯಾತಿರಾಜನಿಂದ ಶರ್ಮಿಷ್ಠೆಯಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಹಿರಿಯವನು ಯಯಾತಿಯು ಕೋರಿಕೆಯಂತೆ ಇವನು ತನ್ನ ತಂದೆಯ ಮುಪ್ಪನ್ನು ಸ್ವೀಕರಿಸಿ, ತನ್ನ ಯೌವನವನ್ನು ತಂದೆಗೆ ಕೊಡಲು ಸಮ್ಮತಿಸಲಿಲ್ಲವಾಗಿ, ಯಯಾತಿ ಇವನನ್ನು ರಾಜ್ಯಕ್ಕೆ ಅನರ್ಹನಾಗುವಂತೆ ಶಪಿಸಿದನು. ಬಳಿಕ ಈತನು ಉತ್ತರದಿಕ್ಕಿನಲ್ಲಿ ಮ್ಲೇಚ್ಛಾಧಿಪತ್ಯವನ್ನು ಪಡೆದನು [ಮತ್ಸ್ಯ -೩೪ ಭಾರ -ಆದಿ ೬೩ ಭಾಗ -೯, ೨೩]

**ಅನುಪಮಾ** —ನೈಋತ್ಯದಿಕ್ಕಿನಲ್ಲಿರುವ ಕುಮುದವೆಂಬ ಗಂಡಾನೆಯ ಹೆಣ್ಣಾನೆ

**ಅನುಮತಿ** —ಅಂಗಿರಸಮುನಿಯಿಂದ ಶ್ರದ್ಧೆಯೆಂಬ ಹೆಂಡತಿಯಲ್ಲಿ ಜನಿಸಿದ ನಾಲ್ವರು ಪುತ್ರಿಯರಲ್ಲಿ ಒಬ್ಬಳು [ಭಾಗ -೪, ೧]

**ಅನುರಾಧಾ** —ದಕ್ಷನ ಮಗಳು ಚಂದ್ರನ ೨೭ ಮಂದಿ ಹೆಂಡಿರಲ್ಲಿ ಒಬ್ಬಳು ಒಂದು ನಕ್ಷತ್ರ [ಭಾರ.-ಆದಿ ೬೭]

**ಅನುವಿಂದ (ಅನುವಿಂಧ್ಯ)** —(I) ಅವಂತಿ ದೇಶದ ಅರಸನಾದ ಜಯಸೇನನು ವಸುದೇವನ ತಂಗಿಯಾದ ರಾಜಾಧಿದೇವಿಯಲ್ಲಿ ಪಡೆದ ಕಿರಿಯ ಮಗನು ಇವನ ಅಣ್ಣನು ವಿಂದನೆಂಬವನು ಅನುವಿಂದನು ಮಹಾಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಅರ್ಜುನನಿಂದ ಹತನಾದನು [ಭಾರ -ದ್ರೋಣ ೯೯]

(II) ಕೇಕಯ ದೇಶದ ಅರಸು ಮಹಾಭಾರತಯುದ್ಧದಲ್ಲಿ ಸಾತ್ಯಕಿಯಿಂದ ಮಡಿದನು [ಕರ್ಣ ೧೦]

**ಅನುಸಾಲ್ವ** —ಸೌಭದೇಶದ ಅರಸನಾದ ಸಾಲ್ವರಾಜನ ತಮ್ಮನು ಸಾಲ್ವನನ್ನು ಶ್ರೀಕೃಷ್ಣನು ಕೊಂದನೆಂಬ ಕೋಪದಿಂದ ಪಾಂಡವರ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ಕರ್ಣನ ಮಗನಾದ ವೃಷಕೇತುವಿನಿಂದ ಪರಾಜಿತನಾಗಿ, ಕೃಷ್ಣನನ್ನು ಮರೆಹೊಕ್ಕು ಅಶ್ವಮೇಧಕ್ಕೆ ನೆರವಾದನು [ಜೈಮಿ -ಅಶ್ವ ೧೨, ೧೪]

**ಅನುಹ್ಲಾದ** —ಹಿರಣ್ಯಕಶಿಪುವಿನಿಂದ ಕಯಾಧುವಿನಲ್ಲಿ ಜನಿಸಿದವನು ಪ್ರಹ್ಲಾದನ ತಮ್ಮನು [ಆದಿ -೬೬, ಭಾಗ -೬, ೧೮]

**ಅನೂಪ** —ಒಂದು ದೇಶ ಇದನ್ನು ಈಗ ಮಾಳವದೇಶವೆನ್ನುವರು ಇದರ ರಾಜಧಾನಿ ಮಾಹಿಸ್ಮತಿ ಹಿಂದೆ ಕಾರ್ತವೀರ್ಯಾರ್ಜುನನು ಇದರಲ್ಲಿ ರಾಜ್ಯಭಾರ ಮಾಡುತ್ತಿದ್ದನು ಪಾಂಡವರ ಕಾಲದಲ್ಲಿ ಅವರಿಗೆ ಆಪ್ತನಾದ ನೀಲನೆಂಬ ಅರಸು ಇಲ್ಲಿ ಆಳುತ್ತಿದ್ದನು [ಭಾರ.-ವನ. ೧೧೭]

**ಅನೂರು** —ಕಶ್ಯಪಮುನಿಯಿಂದ ವಿನತೆಯಲ್ಲಿ ಜನಿಸಿದವನು ಗರುಡನ ಅಣ್ಣನು. ಸೂರ್ಯನ ಸಾರಥಿ ಇವನು ಗರ್ಭದಲ್ಲಿದ್ದಾಗ ಇವನ ಬಲತಾಯಿ ಕದ್ರುವಿಗೆ ಮೊದಲು ಮಕ್ಕಳಾದುದರಿಂದ ವಿನತೆ ತನ್ನ ಹೊಟ್ಟೆಯನ್ನು ಹಿಸುಕಿದ ಕಾರಣ,

ಗರ್ಭದಲ್ಲಿದ್ದ ಶಿಶುವಿನ ತೊಡೆ ಮೊದಲಾದ ಕೆಳಗಣ ಅಂಗಗಳು ಬೆಳೆಯದೆ ಹೋದುವು ಈ ಕಾರಣದಿಂದಲೇ ಇವನಿಗೆ ಅನೂರುವೆಂಬ ಹೆಸರು ಇವನಿಗೆ ಅರುಣನೆಂಬುದು ನಾಮಾಂತರ ಈತನು ತಾಮ್ರೆಯ ಮಗಳಾದ ಶ್ಯೇನಿಯನ್ನು ಮದುವೆಯಾಗಿ ಸಂಪಾತಿ, ಜಟಾಯು ಎಂಬ ಇಬ್ಬರು ಮಕ್ಕಳನ್ನು ಪಡೆದನು [ಭಾರ -ಆದಿ. ೧೬, ೨೪, ೬೬, ೬೭. ಅನು. ೨೦].

**ಅನೇನಸ** —(I) ಇಕ್ಷ್ವಾಕುವಂಶದ ಕಕುತ್ಸ್ಥರಾಜನ ಮಗನು ನೋಡು— ಧುಂಧುಮಾರ [ವನ ೨೦೫]

(II) ಚಂದ್ರವಂಶದ ಪುರೂರವನ ಮಗನಾದ ಆಯುವೆಂಬವನಿಂದ ಸ್ವರ್ಭಾನವಿಯಲ್ಲಿ ಜನಿಸಿದ ನಾಲ್ವರು ತನಯರಲ್ಲಿ ಕನಿಷ್ಠನು [ಆದಿ ೬೯ ಹರಿ -೧, ೨೯]

**ಅನೌಪಮಾ**.—ಬಾಣಾಸುರನ ಹೆಂಡತಿ

**ಅನ್ತರ್ದ್ವೀಪ** —ದ್ವಾರಕೆಯ ಸಮೀಪದಲ್ಲಿರುವ ಒಂದು ಉಪದ್ವೀಪ. ಯಾದವರು ಒಮ್ಮೆ ಈ ದ್ವೀಪದಲ್ಲಿ ಪರಮೇಶ್ವರನ ಪ್ರೀತಿಗಾಗಿ ಒಂದು ಮಹೋತ್ಸವವನ್ನು ನೆರವೇರಿಸಿದರು [ಭಾರ -ಆದಿ ೨೪೧]

**ಅನ್ತರ್ಧಾನ** —ಉತ್ತಾನಪಾದವಂಶದ ಪೃಥುಚಕ್ರವರ್ತಿಯ ಮಗನು. ಇವನ ಹೆಸರು ವಿಜಯಾಶ್ವ ಇತರರಿಗೆ ಕಾಣದಂತೆ (ಅಂತರ್ಧಾನವನ್ನು ಹೊಂದಿ) ಸಂಚರಿಸುವ ಶಕ್ತಿಯನ್ನು ಪಡೆದಿದ್ದ ಕಾರಣ ಇವನಿಗೆ ಈ ಹೆಸರೇ ರೂಢಿಯಲ್ಲಿ ಬಂದಿತು ಇವನು ಶಿಖಂಡಿ, ನಭಸ್ವತಿಯರೆಂಬ ಇಬ್ಬರು ತರುಣಿಯರನ್ನು ಮದುವೆಯಾಗಿ ಹಿರಿಯವಳಲ್ಲಿ ಪಾವಕ, ಪವಮಾನ, ಶುಚಿಯೆಂಬ ತನಯರನ್ನೂ ಕಿರಿಯವಳಲ್ಲಿ ಹವಿರ್ಧಾನನೆಂಬ ಮಗನನ್ನೂ ಪಡೆದನು [ಭಾಗ -೪, ೧೯]

**ಅನ್ಧಕ** —(I) ಒಬ್ಬ ರಾಕ್ಷಸನು ಕಶ್ಯಪನಿಂದ ದಿತಿಯಲ್ಲಿ ಜನಿಸಿದವನು ಶಿವನಿಂದ ಹತನಾದನು [ಭಾರ -ದ್ರೋಣ ೪೯ ಹರಿ -೨, ೮೬]

(II) ಕಶ್ಯಪಮುನಿಯಿಂದ ದನುವೆಂಬ ಹೆಂಡತಿಯಲ್ಲಿ ಜನಿಸಿದವನು ಮಹಿಷಾಸುರನ ಸೇನೆಯಲ್ಲಿದ್ದನು ಒಮ್ಮೆ ಉಜ್ಜಯಿನಿಯ ಮಹಾಕಾಲವನದಲ್ಲಿ ಇವನಿಗೂ ಪರಮೇಶ್ವರನಿಗೂ ಘೋರಯುದ್ಧವಾಗುತ್ತಿರಲಾಗಿ ಇವನ ಮೈಯಿಂದ ಬಿದ್ದ ಒಂದೊಂದು ಹನಿ ರಕ್ತವೂ ಒಬ್ಬೊಬ್ಬ ರಾಕ್ಷಸನಾಗುತ್ತಿರಲು ಇದನ್ನು ಕಂಡು ವಿಷ್ಣು ಶುಷ್ಕರೇವತಿಯೆಂಬ ರಕ್ಕಸಿಯನ್ನು ಸೃಷ್ಟಿಮಾಡಿದನು. ಆಕೆ ಇವನ ರಕ್ತವನ್ನು ಶೋಷಿಸತೊಡಗಿದಳು ನಿರ್ವೀರ್ಯನಾದ ಅಂಧಕನು ಶಿವನನ್ನು ಮರೆಹೊಕ್ಕು, ಆತನ ಪ್ರಮಥಗಣಗಳಲ್ಲಿ ಒಬ್ಬನಾದನು [ಮತ್ಸ್ಯ ೧೭೮]

(III) ಯದುವಂಶದ ಕ್ರೋಷ್ಟರಾಜನ ಮೊಮ್ಮಗನು [ಹರಿ.-೧, ೩೪] ಯದುವಂಶದ ಅನುರಾಜನ ಮಗನು [ಭಾಗ -೯, ೨೪]

(iv) ವಿಪ್ರಚಿತ್ತಿಯೆಂಬ ರಾಕ್ಷಸನಿಂದ ಸಿಂಹಿಕೆಯಲ್ಲಿ ಜನಿಸಿದವನು ದೇವ ಸ್ತ್ರೀಯರ ಪಾತಿವ್ರತ್ಯವನ್ನು ಭಂಗಪಡಿಸಿ, ಒಮ್ಮೆ ಪಾರ್ವತಿಯ ಸೌಂದರ್ಯಕ್ಕೆ ಮರುಳಾಗಿ ಶಿವನಿಂದ ಹತನಾದನು [ವಿಷ್ಣು].

**ಅನ್ನಪೂರ್ಣಾ** —ಕಾಶೀಕ್ಷೇತ್ರದಲ್ಲಿ ಅನಾದಿಯಾಗಿ ನೆಲೆಗೊಂಡಿರುವ ಒಂದು ಶಕ್ತಿ.

**ಅಪರನನ್ದಾ** —ಒಂದು ನದಿ ಋಷಭಕೂಟ ಪರ್ವತದಿಂದ ಹುಟ್ಟಿ ಶುಕ್ರೀ ನದಿಯೆಂಬ ಹೆಸರಿನಿಂದ ಈಗಣ ಗಯಾ ಮತ್ತು ಪಾಟ್ನಾ ಜಿಲ್ಲೆಗಳಲ್ಲಿ ಹರಿದು ಗಂಗೆಯಲ್ಲಿ ಸೇರುತ್ತದೆ [ಭಾರ -ಆದಿ. ೨೩೫ ವನ ೧೧೦]

**ಅಪರಸೇಕ.**—ಸೇಕದೇಶದ ಸಮೀಪದಲ್ಲಿರುವ ಒಂದು ದೇಶ ರಾಜಸೂಯ ಯಾಗ ಸಮಯದಲ್ಲಿ ಸಹದೇವನು ಈ ದೇಶದ ಅರಸರನ್ನು ಗೆದ್ದು ಕಪ್ಪಕಾಣಿಕೆಗಳನ್ನು ತಂದನು [ಸಭಾ ೩೨]

**ಅಪರಾನ್ತ** —ಒಂದು ದೇಶ ಪಶ್ಚಿಮ ಘಟ್ಟಗಳಿಗಿಂತಲೂ ಪಶ್ಚಿಮಕ್ಕೆ ಸಮುದ್ರ ತೀರದಲ್ಲಿ, ಕನ್ನಡನಾಡಿನ ಉತ್ತರಕ್ಕೆ, ಕೊಂಕಣವೆಂಬ ಹೆಸರಿನಿಂದ ಪ್ರಖ್ಯಾತವಾಗಿದೆ [ಭಾರ -ಭೀಷ್ಮ ೯]

**ಅಪರ್ಣಾ** —ಪಾರ್ವತಿಯ ನಾಮಾಂತರ ದಕ್ಷಪುತ್ರಿಯಾದ ಸತಿ ತಂದೆಯ ಮೇಲಣ ಕೋಪದಿಂದ ದೇಹತ್ಯಾಗಮಾಡಿ, ಪಾರ್ವತಿಯಾಗಿ ಜನಿಸಿ, ಮರಳಿ ಶಿವನನ್ನೇ ಮದುವೆಯಾಗಬೇಕೆಂದು ತಪಸ್ಸುಮಾಡತೊಡಗಿ ಕ್ರಮವಾಗಿ ಫಲಾಹಾರ, ಶಾಕಾಹಾರಾದಿಗಳನ್ನು ತ್ಯಜಿಸಿ, ಮರಗಳಿಂದ ತಾನಾಗಿ ಉದುರಿದ ಎಲೆಗಳನ್ನು ತಿನ್ನತೊಡಗಿ ಕಡೆಗೆ ಪರ್ಣಾಹಾರವನ್ನೂ ತ್ಯಜಿಸಿದ ಕಾರಣ ಪಾರ್ವತಿಗೆ ಈ ಹೆಸರು ರೂಢಿಯಲ್ಲಿ ಬಂದಿತು [ಕುಮಾರ]

**ಅಪಾನ.**—ದೇಹದಲ್ಲಿರುವ ಪಂಚಪ್ರಾಣಗಳಲ್ಲಿ ಒಂದು ಗುದಸ್ಥಾನದಲ್ಲಿರುವುದು.

**ಅಪಾನ್ತರತಮ** —ಒಬ್ಬ ಬ್ರಹ್ಮರ್ಷಿ. ನಾರಾಯಣನ ವಾಕ್ಕಿನ ಅಂಶದಿಂದ ಜನಿಸಿದವನು ಈತನಿಗೆ ಸಾರಸ್ವತ ಮುನಿಯೆಂತಲೂ, ಪ್ರಾಚೀನ ಗರ್ಭನೆಂತಲೂ, ವೇದಾಚಾರ್ಯನೆಂತಲೂ ಹೆಸರುಗಳಿವೆ [ಭಾರ -ಶಾಂತಿ ೩೪೯].

**ಅಪ್ಸರಸ್** —ಸ್ವರ್ಗಲೋಕದ ವಾರವಿಲಾಸಿನಿಯರು ಕ್ಷೀರಸಮುದ್ರ ಮಥನ ಕಾಲದಲ್ಲಿ ಜನಿಸಿದವರು (ಬ್ರಹ್ಮನ ಅಂಗೈಯಿಂದ ಜನಿಸಿದವರೆಂದು ಭಾಗವತದಲ್ಲಿ ಹೇಳಿದೆ) [ಭಾರ.-ಆದಿ. ೬೬, ೧೨೨ ಸಭಾ ೧೦. ವನ ೪೩. ಅನು. ೫೦, ೨೭೧]. ಇಂದ್ರನ ಸಭೆಯಲ್ಲಿ ನೃತ್ತ, ಗೀತಾದಿಗಳಿಂದ ಸಂತೋಷಪಡಿಸುವುದೇ ಇವರ ಕರ್ತವ್ಯ. ಈ ಪಂಗಡದವರಿಗೆ ಸಾಮಾನ್ಯವಾಗಿ ಮದುವೆಯೇ ಇಲ್ಲ. ಇವರು ಆಗಾಗ್ಗೆ ಇಂದ್ರನ

ಅಪ್ಪಣೆಯಂತೆ ತಪಸ್ಸಿಗೆ ಕುಳಿತವರ ನಿಯಮವನ್ನು ಭಂಗಗೊಳಿಸುವರು. ಊರ್ವಶಿ, ಮೇನಕೆ, ರಂಭೆ, ತಿಲೋತ್ತಮೆ ಮುಂತಾದವರು ಇವರಲ್ಲಿ ಮುಖ್ಯರು.

**ಅಭಿಜಿತ್ತು** —ದಕ್ಷನ ಮಗಳು ಚಂದ್ರನ ಹೆಂಡತಿ. ಯಾವಾಗಲೂ ರೋಹಿಣಿಯ ಪಕ್ಕದಲ್ಲಿಯೇ ಇರುವಳು

**ಅಭಿಭೂ** —ಕಾಶಿರಾಜನ ಮಗನು. ಭಾರತಯುದ್ಧದಲ್ಲಿ ಪಾಂಡವಪರವಾಗಿ ಹೋರಾಡಿ, ವಸುದಾನನೆಂಬ ಪಾಂಚಾಲರಾಜನ ಮಗನಿಂದ ಮಡಿದನು [ಭಾರ.-ಉದ್ಯೋ ೧೫೧. ದ್ರೋಣ ೯೫ ಕರ್ಣ ೩]

**ಅಭಿಮನ್ಯು** —ಅರ್ಜುನನಿಂದ ಸುಭದ್ರೆಯಲ್ಲಿ ಜನಿಸಿದವನು. ರಥಯೂಥ ಯೂಥಪನು ಶ್ರೀಕೃಷ್ಣನ ಸೋದರಳಿಯನು [ಭಾರ -ಆದಿ ೬೪, ೨೪೭ ಉದ್ಯೋ. ೧೭೦ ಭಾಗ -೯, ೨೨] ವಿರಾಟರಾಜನ ಮಗಳಾದ ಉತ್ತರೆಯನ್ನು ಮದುವೆಯಾಗಿದ್ದನು [ವಿರಾ. ೭೮] ಮಹಾಭಾರತಯುದ್ಧದಲ್ಲಿ ದುರ್ಯೋಧನನ ಮಗನಾದ ಲಕ್ಷ್ಮಣನನ್ನೂ, ಕೌರವಪಕ್ಷದ ಅಂಬಷ್ಟ, ಅಲಂಬುಸರೆಂಬ ರಾಜರನ್ನೂ ಸೋಲಿಸಿದನು [ಭೀಷ್ಮ ೫೫, ೧೦೧] ಭಾರತಯುದ್ಧದಲ್ಲಿ ಕೃಷ್ಣಾರ್ಜುನರು ಸಂಶಪ್ತಕರೊಡನೆ ಯುದ್ಧಮಾಡುತ್ತಿದ್ದಾಗ ಕೌರವಸೇನೆಯ ಪದ್ಮವ್ಯೂಹವನ್ನು ಹೊಕ್ಕು ಭಯಂಕರ ಯುದ್ಧಮಾಡಿ, ಕೌರವರನ್ನು ತತ್ತರಗೊಳಿಸಲು ಇವನ ಹಾವಳಿಯನ್ನು ತಡೆಯಲಾರದೆ ದ್ರೋಣ, ಕರ್ಣ, ಜಯದ್ರಥ ಮುಂತಾದವರು ದೊಂಬಿಯಾಗಿ ಕಾದಾಡುತ್ತಿರುವಲ್ಲಿ, ದುರ್ಯೋಧನನ ಮಗನು ಇವನನ್ನು ಕೊಂದನು [ದ್ರೋಣ.೧೪,೩೫, ೩೬,೪೧,೪೪,೪೭,೪೯,೭೩] ಇವನ ಸಾರಥಿಯ ಹೆಸರು ಸುಮಿತ್ರ [ದ್ರೋಣ. ೩೫] ದುರ್ಯೋಧನ ಪುತ್ರನಾದ ಲಕ್ಷ್ಮಣನು ಇವನಿಂದ ಮಡಿದನು [ದ್ರೋಣ ೪೬]

**ಅಭಿಸಾರ** —ಒಂದು ದೇಶ ತಕ್ಷಶಿಲಾನಗರಿಗೆ ಉತ್ತರದಲ್ಲಿದೆ ಇದನ್ನು ಈಗ ಹಯಾರವೆಂದು ಕರೆಯುತ್ತಾರೆ ಪಾಂಡವರ ಕಾಲದಲ್ಲಿ ಇಲ್ಲಿ ರಾಜ್ಯಭಾರ ಮಾಡುತ್ತಿದ್ದ ಚಿತ್ರಸೇನನೆಂಬ ಅರಸನನ್ನು ರಾಜಸೂಯಯಾಗಕ್ಕೆ ಮೊದಲು ದಿಗ್ವಿಜಯಕ್ಕೆ ಹೊರಟಿದ್ದ ಅರ್ಜುನನು ಸೋಲಿಸಿ, ಇವನಿಂದ ಕಪ್ಪಕಾಣಿಕೆಗಳನ್ನು ತಂದನು [ಭಾರ -ಸಭಾ ೨೮ ಭೀಷ್ಮ ೯]

**ಅಭ್ರಮು** —ಪೂರ್ವದಿಕ್ಕಿನಲ್ಲಿರುವ ಐರಾವತದ ಹೆಣ್ಣಾನೆ.

**ಅಮರಬಾಹು** —ಇಕ್ಷ್ವಾಕುವಂಶದ ಅನರಣ್ಯರಾಜನ ಮಗನು ರಾವಣನು ಅನರಣ್ಯನನ್ನು ಕೊಂದ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಇವನು ವಿಷ್ಣುವನ್ನು ಕುರಿತು ತಪಸ್ಸುಮಾಡಲಾಗಿ, ವಿಷ್ಣು ಪ್ರತ್ಯಕ್ಷನಾಗಿ, "ರಾವಣನು ನಿನ್ನಂತಹವರಿಂದ ಮಡಿಯಲಾರನು, ನಾನೇ ನಿನ್ನ ವಂಶದಲ್ಲಿ ಜನ್ಮವೆತ್ತಿ ಅವನನ್ನು ಕೊಲ್ಲುವೆನು" ಎಂಬುದಾಗಿ ವರವಿತ್ತನು [ರಾಮಾ,-ಉತ್ತ. ೧೯, ೨೦. ಭಾರ.-ಅನು.೨೭೧],

**ಅಮರಾವತಿ.**—ಇಂದ್ರನ ರಾಜಧಾನಿ.

**ಅಮರ್ಕ.**—ರಾಕ್ಷಸ ಗುರುವಾದ ಶುಕ್ರಾಚಾರ್ಯರ ಮಗನು ಶಂಡನೆಂಬವನು ಇವನ ಅಣ್ಣ. ಇವರಿಬ್ಬರೂ ಪ್ರಹ್ಲಾದನ ವಿದ್ಯಾಗುರುಗಳು [ಭಾಗ ೭ ೫ ಮತ್ಸ್ಯ. ೩೩].

**ಅಮಾವಸು.**—ಚಂದ್ರವಂಶದ ಪುರೂರವನಿಂದ ಊರ್ವಶಿಯಲ್ಲಿ ಜನಿಸಿದವನು ವಿಜಯನೆಂಬುದು ಇವನ ನಾಮಾಂತರ [ಭಾರ -ಆದಿ ೬೯]

**ಅಮೃತ.**—ದೇವದಾನವರು ಕ್ಷೀರಸಮುದ್ರವನ್ನು ಮಥನಮಾಡಿದಾಗ ಅಲ್ಲಿಂದ ಹೊರಬಂದುದು [ಭಾರ -ಆದಿ ೧೮ ಭಾಗ -೮ ,೬. ರಾಮಾ -ಬಾಲ. ೪೫. ವಿಷ್ಣು - ೧, ೯. ಪದ್ಮ -೩, ೯, ೬, ೨೬೦]. ತನ್ನ ತಾಯ ದಾಸೀತ್ವವನ್ನು ಹೋಗಲಾಡಿಸಲು ಗರುಡನು ಕದ್ರುವಿಗೆ ಅಮೃತವನ್ನು ದೇವಲೋಕದಿಂದ ಅಪಹರಿಸಿ ತಂದನು [ಭಾರ.- ಆದಿ. ೩೩. ಅನು ೨೮] ಉದಂಕ ಮಹರ್ಷಿಗಾಗಿ ಶ್ರೀ ಕೃಷ್ಣನು ಅಮೃತವನ್ನು ತರಿಸಿಕೊಟ್ಟನು [ಭಾರ - ಅಶ್ವ ೫೫]

**ಅಮ್ಬರೀಷ.**—(1) ಸೂರ್ಯವಂಶದ ವೈವಸ್ವತ ಮನುವಿನ ಮಗನಾದ ನಾಭಾಗನ ಮಗನು. ದಾನಶೂರನೂ ಭಗವದ್ಭಕ್ತನೂ ಎನಿಸಿದ್ದನು [ಭಾರ -ಸಭಾ. ೮ ದ್ರೋಣ. ೬೪. ಶಾಂತಿ ೨೮ ಅನು ೧೨೪] ಇವನಿಗೆ ವಿರೂಪ, ಶಂಭು, ಕೇತು ಮಂತರೆಂಬ ಮೂವರು ಮಕ್ಕಳು [ಭಾರ -ದ್ರೋಣ ೬೪ ಭಾಗ -೯, ೬]

(ii) ಇಕ್ಷ್ವಾಕುವಂಶದ ಮಾಂಧಾತೃ ಚಕ್ರವರ್ತಿಯಿಂದ ಬಿಂದುಮತಿ ಯೆಂಬ ರಾಣಿಯಲ್ಲಿ ಜನಿಸಿದವನು ಅಯೋಧ್ಯೆಯ ಅರಸು ಇವನ ಮಗನು ಯುವನಾಶ್ವನು ಈ ಅಂಬರೀಷನು ಒಮ್ಮೆ ಯಾಗದೀಕ್ಷೆಯನ್ನು ಕೈಕೊಂಡಿರಲು, ಯಾಗಪಶು ನಷ್ಟವಾದಕಾರಣ, ಇವನು ಶುನಶ್ಶೇಪನೆಂಬ ಋಷಿಪುತ್ರನನ್ನು ಲಕ್ಷ ಗೋವುಗಳನ್ನು ಕೊಟ್ಟು ಬೆಲೆಗೆ ತೆಗೆದುಕೊಂಡು, ಯಾಗವನ್ನು ಪೂರ್ತಿಗೊಳಿ ಸಿದನು [ರಾಮಾ.-ಬಾಲ. ೬೧]. ನಭಗನ ಮಗನೂ ನಾಭಾಗನ ಮೊಮ್ಮಗನೂ ಆದ ಒಬ್ಬ ವಿಷ್ಣುಭಕ್ತಾಗ್ರೇಸರನು. ಏಕಾದಶೀವ್ರತ ಪರಾಯಣನಾಗಿದ್ದ ಇವನ ನಿಯಮಕ್ಕೆ ಭಂಗವನ್ನುಂಟುಮಾಡಬೇಕೆಂಬ ಸಂಕಲ್ಪದಿಂದ ಒಮ್ಮೆ ದುರ್ವಾಸ ಮುನಿ ದ್ವಾದಶಿಯ ಬೆಳಗ್ಗೆ ಇವನ ಮನೆಗೆ ಬಂದು ಭೋಜನಕ್ಕೆ ಆಹೂತನಾಗಿ, ಸ್ನಾನಾದಿಗಳನ್ನು ನೆರವೇರಿಸಿ ಬರುವುದಕ್ಕಾಗಿ ನದಿಗೆ ಹೋಗಿ ಬಹಳ ಹೊತ್ತಿನ ವರೆಗೂ ಹಿಂದಿರುಗಲಿಲ್ಲ ಪಾರಣಾಕಾಲ ಮೀರುವದೆಂಬ ಭಯದಿಂದ ಅಂಬರೀಷನು ಮಿಕ್ಕ ಋಷಿಗಳ ಸೂಚನೆಯಂತೆ ಪಾರಣೆಗೆ ಪ್ರತಿನಿಧಿಯಾಗಿ ಜಲ ಪ್ರಾಶನಮಾಡಿ ದನು ಕೂಡಲೇ ದುರ್ವಾಸನು ಅಲ್ಲಿಗೆ ಬಂದು ಅಂಬರೀಷನನ್ನು ಶಪಿಸಿ, ವಿಷ್ಣುವಿನ ಚಕ್ರಾಯುಧಕ್ಕೆ ಸಿಲುಕಿ, ತಪ್ಪಿಸಿಕೊಳ್ಳಲಾರದೆ ಅಂಬರೀಷನನ್ನೇ ಮರೆಹೊಕ್ಕು

ಪಾರಾದನು [ಭಾಗ.-೯, ४]. ಇಕ್ಷ್ವಾಕುವಂಶದ ಅರಸು ವಿಷ್ಣುವಿನ ವರದಿಂದ ಚಕ್ರಾಯುಧವನ್ನು ಸ್ವಾಧೀನಪಡಿಸಿಕೊಂಡಿದ್ದನು ಈತನಿಗೆ ತ್ರಿಲೋಕಸುಂದರಿ ಯಾದ ಶ್ರೀಮತಿಯೆಂಬ ಮಗಳಿದ್ದಳು ಒಮ್ಮೆ ಪರ್ವತ, ನಾರದರು ಈತನಲ್ಲಿಗೆ ಬಂದು ಶ್ರೀಮತಿಯನ್ನು ಕಂಡು ಮೋಹಪರವಶರಾಗಿ, ವಿಷ್ಣುವಿನ ಮಾಯೆಯಿಂದ ಶ್ರೀಮತಿಯನ್ನು ಪಡೆಯಲಾಗದೆ ಅಂಬರೀಷನನ್ನು ಶಪಿಸಹೋಗಿ, ಚಕ್ರಾಯುಧದಿಂದ ತೇಜೋಭಂಗವನ್ನು ಪಡೆದರು ಕಡೆಗೆ ಅಂಬರೀಷನು ಶ್ರೀಮತಿಯನ್ನು ವಿಷ್ಣು ವಿಗೆ ಕೊಟ್ಟು ಮದುವೆಮಾಡಿದನು [ಲಿಂಗ ಅದ್ಭುತ ರಾ -೩]

**ಅಮ್ಬುಷ್ಠ** —(I) ಕಂಸನ ಮಾವುತನು ಬಲರಾಮ, ಕೃಷ್ಣರು ಮಧುರೆ ಯನ್ನು ಹುಗುವಾಗ ಕಂಸನ ಅಪ್ಪಣೆಯಂತೆ ಕುವಲಯಾಪೀಡವೆಂಬ ಆನೆಯನ್ನು ರಾಮ, ಕೃಷ್ಣರ ಮೇಲೆ ಓಡಿಸಿ, ಆನೆಯೊಂದಿಗೆ ತಾನೂ ಹತನಾದನು. [ಭಾಗ.-೧೦-४].

(II) ದುರ್ಯೋಧನ ಪಕ್ಷದ ಅರಸು ಭಾರತಯುದ್ಧದಲ್ಲಿ ಅಭಿಮನ್ಯುವಿ ನಿಂದ ಸೋತು, ಅರ್ಜುನನಿಂದ ಹತನಾದನು [ಭಾರ -ಭೀ ೯೬ ದ್ರೋಣ ೯೩]

**ಅಮ್ಬಾ** —(I) ಪಾರ್ವತಿಯ ನಾಮಾಂತರ

(II) ಕಾಶಿರಾಜನ ಮಗಳು ಅಂಬಿಕೆ, ಅಂಬಾಲಿಕೆಯರು ಇವಳ ಒಡ ಹುಟ್ಟಿದವರು ಕಾಶಿರಾಜನು ಈ ಮೂವರಿಗೂ ಸ್ವಯಂವರವನ್ನು ಏರ್ಪಡಿಸಿದನು. ಭೀಷ್ಮನು ಇವಳನ್ನೂ ಇವಳ ತಂಗಿಯರನ್ನೂ ಅಪಹರಿಸಿ ತಂದನು ಆಗ ಅಂಬೆ ತಾನು ಸೌಭರಾಜನನ್ನು ವರಿಸಿರುವುದಾಗಿ ತಿಳಿಸಲು ಭೀಷ್ಮನು ಅವಳನ್ನು ಸೌಭನಲ್ಲಿಗೆ ಕಳುಹಿಸಿದನು [ಭಾರ -ಆದಿ ೧೦೯, ೧೧೦] ಇವಳನ್ನು ಭೀಷ್ಮನು ಅಪಹರಿಸಿದ ನಾದುದರಿಂದ ಸೌಭರಾಜನು ಇವಳನ್ನು ತಿರಸ್ಕರಿಸಿದನು ಬಳಿಕ ಇವಳು ಭೀಷ್ಮ ನಲ್ಲಿಗೆ ಬಂದು ತನ್ನನ್ನು ಮದುವೆಯಾಗುವಂತೆ ಆತನನ್ನು ನಿರ್ಬಂಧಗೊಳಿಸಿ, ತನ್ನ ಪ್ರಯತ್ನವು ಸಫಲವಾಗದಿರಲು, ಪರಶುರಾಮನನ್ನು ಮರೆಹೊಕ್ಕು, ಅವನಿಂದ ಭೀಷ್ಮನಿಗೆ ಹೇಳಿಸಿದಳು ಅದೂ ವ್ಯರ್ಥವಾಗಲು, ಭೀಷ್ಮನನ್ನು ಕೊಲ್ಲುವ ಸಲು ವಾಗಿ ಶಿವನನ್ನು ಕುರಿತು ತಪಸ್ಸುಮಾಡಿ ಶಿಖಂಡಿಯೆಂಬ ಹೆಸರಿನಿಂದ ದ್ರುಪದ ರಾಜನ ಮಗನಾಗಿ ಜನಿಸಿದಳು [ಭಾರ -ಆದಿ ೧೦೯ ಉದ್ಯೋ ೧೭೩, ೧೭೭, ೧೮೬].

**ಅಮ್ಬಾಲಿಕಾ.**—ಕಾಶಿರಾಜನ ಮಗಳು ಅಂಬಾ, ಅಂಬಿಕೆಯರ ತಂಗಿ. ಭೀಷ್ಮನು ಇವಳನ್ನು ಅಪಹರಿಸಿ ತಂದು, ತನ್ನ ಬಲತಮ್ಮನಾದ ವಿಚಿತ್ರವೀರ್ಯನಿಗೆ ಮದುವೆ ಮಾಡಿದನು ವಿಚಿತ್ರವೀರ್ಯನ ಮರಣಾನಂತರ ಇವಳು ತನ್ನ ಅತ್ತೆಯಾದ ಸತ್ಯವತಿಯ ಸೂಚನೆಯಂತೆ ವ್ಯಾಸಮುನಿಯ ಸಾನ್ನಿಧ್ಯದಿಂದ ಪಾಂಡುರಾಜನನ್ನು ಪಡೆದಳು. ಇವಳ ದಾಸಿ ವ್ಯಾಸರ ಅನುಗ್ರಹದಿಂದ ವಿದುರನೆಂಬ ಕುಮಾರನನ್ನು

ಪಡೆದಳು. ಕಾಲಾಂತರದಲ್ಲಿ ಅಂಬಾಲಿಕೆ ತನ್ನ ಅತ್ತೆಯೊಂದಿಗೆ ತಪೋವನಕ್ಕೆ ಹೋದಳು [ಭಾರ.-ಆದಿ. ೬೩, ೧೧೦, ೧೧೫, ೧೩೭].

**ಅಮ್ಬಿಕಾ.**—ಇವಳೂ ಕಾಶಿರಾಜನ ಮಗಳು ಅಂಬೆಯ ತಂಗಿ. ಭೀಷ್ಮನು ಇವಳನ್ನೂ ವಿಚಿತ್ರವೀರ್ಯನಿಗೆ ಮದುವೆಮಾಡಿದ್ದನು ಪತಿ ಸಂತತಿಯಿಲ್ಲದೆ ಮಡಿದ ಕಾರಣ ಇವಳು ತನ್ನ ಅತ್ತೆಯಾದ ಸತ್ಯವತಿಯ ಸೂಚನೆಯಂತೆ ವ್ಯಾಸಮಹರ್ಷಿಯ ಸಾನ್ನಿಧ್ಯದಿಂದ ಧೃತರಾಷ್ಟ್ರನನ್ನು ಪಡೆದು, ಕಾಲಾಂತರದಲ್ಲಿ ತನ್ನ ಅತ್ತೆಯೊಂದಿಗೆ ತಪೋವನವನ್ನು ಸೇರಿದಳು [ಭಾರ -ಆದಿ ೬೩, ೧೧೫, ೧೩೭].

**ಅಂಶುಮನ್ತ್** —ಸೂರ್ಯವಂಶದ ಸಗರಚಕ್ರವರ್ತಿಯ ಮಗನಾದ ಅಸಮಂಜನ ಮಗನು. ಸಗರಪುತ್ರರು ಸಗರನ ಯಜ್ಞಾಶ್ವವನ್ನು ಹುಡುಕಹೋಗಿ ಪಾತಾಳದಲ್ಲಿ ಕಪಿಲ ಮುನಿಯ ಕೋಪಾಗ್ನಿಯಿಂದ ಭಸ್ಮವಾಗಲಾಗಿ, ಈತನು ಕಪಿಲಮುನಿಯನ್ನು ಬೇಡಿ, ಯಜ್ಞಾಶ್ವವನ್ನು ಪಡೆದು, ತನ್ನ ಚಿಕ್ಕಪ್ಪಂದಿರಿಗೆ ಸದ್ಗತಿಯನ್ನುಂಟು ಮಾಡುವುದಕ್ಕಾಗಿ ಆಕಾಶದಿಂದ ಗಂಗೆಯನ್ನು ತಂದು ಆ ಬೂದಿಯ ಮೇಲೆ ಹರಿಯಿಸಬೇಕೆಂಬುದನ್ನು ಗರುಡನ ಮೂಲಕ ತಿಳಿದು ಬಂದು, ಕುದುರೆಯನ್ನು ತಂದು ಸಗರನಿಗೆ ಒಪ್ಪಿಸಿ, ಯಜ್ಞ ಮುಗಿದ ಬಳಿಕ, ಸಗರನಿಂದ ರಾಜ್ಯಾಧಿಕಾರವನ್ನು ಪಡೆದು, ಕೆಲಕಾಲ ರಾಜ್ಯಭಾರಮಾಡುತ್ತಿದ್ದು, ತನ್ನ ಮಗನಾದ ದಿಲೀಪನಿಗೆ ಪಟ್ಟಗಟ್ಟಿ, ಗಂಗೆಯನ್ನು ತರುವುದಕ್ಕಾಗಿ ತಪೋವನಕ್ಕೆ ಹೋದನು [ರಾಮಾ -ಬಾಲ ೪೧ ಭಾರ.-ವನ ೧೦೭]

**ಅಯುತಾಯು.**—ಸೂರ್ಯವಂಶದ ಅರಸು ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದನು ಇವನ ಮಗನು ಋತುಪರ್ಣರಾಜನು [ಭಾರ -ವನ ೬೩]

**ಅಯೋಧ್ಯಾ.**—ಒಂದು ಪಟ್ಟಣ ಮೋಕ್ಷದಾಯಕಗಳೆಂದು ಪ್ರಸಿದ್ಧವಾದುದು. ಸರಯೂ ನದೀ ತೀರದಲ್ಲಿದೆ ಕೋಸಲದೇಶದ ರಾಜಧಾನಿ [ವನ ೨೯೨].

**ಅಯೋಮುಖೀ.**—ಒಬ್ಬ ರಕ್ಕಸಿ ಸೀತಾಪಹರಣಾನಂತರ ರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತಿದ್ದಾಗ, ಇವಳು ಮಾತಂಗಮುನಿಯ ಆಶ್ರಮದ ಬಳಿಯಲ್ಲಿ ಅವರನ್ನು ಸಂಧಿಸಿ, ಲಕ್ಷ್ಮಣನನ್ನು ಮೋಹಿಸಿ, ಶೂರ್ಪಣಖೆಯಂತೆಯೇ ಕಿವಿ, ಮೂಗುಗಳನ್ನು ಕುಯ್ಸಿಕೊಂಡಳು [ರಾಮಾ.-ಅರ. ೬೯]

**ಅರಜಸ್** —ಶುಕ್ರಾಚಾರ್ಯನ ಮಗಳು. ಒಮ್ಮೆ ಈಕೆ ಏಕಾಕಿನಿಯಾಗಿ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ, ದಂಡನೆಂಬ ಅಸುರನು ಅವಿವಾಹಿತೆಯಾಗಿದ್ದ ಈಕೆಯ ಮೇಲೆ ಬಿದ್ದು, ಮಾನಭಂಗಗೊಳಿಸಿದನು. ಬಳಿಕ ಈಕೆ ಈ ವಿಷಯವನ್ನು ತನ್ನ ತಂದೆಗೆ ತಿಳುಹಿ, ಆತನ ಸೂಚನೆಯಂತೆ ಅರಣ್ಯದಲ್ಲಿಯೇ ತಪಸ್ಸು ಮಾಡಿಕೊಂಡಿದ್ದಳು [ರಾಮಾ.-ಉತ್ತರಕಾಂಡ ೮೦].

**ಅರಿಷ್ಟ.**—(i) ಒಬ್ಬ ಋಷಿ. ಒಮ್ಮೆ ಈತನ ಮಗನನ್ನು ಹೈಹಯ ರಾಜ ಕುಮಾರನು ಅಜ್ಞಾನದಿಂದ ಕೊಲ್ಲಲಾಗಿ, ಈತನು ತನ್ನ ತಪೋಮಹಿಮೆಯಿಂದ ಮಗನನ್ನು ಬದುಕಿಸಿಕೊಂಡನು [ಭಾರ.-ವನ. ೧೮೭]

(ii) ಒಬ್ಬ ಅಸುರನು ಇವನು ಕಂಸನ ಅಪ್ಪಣೆಯಂತೆ, ನಂದಗೋಕುಲ ದಲ್ಲಿ ಗೋವುಗಳನ್ನು ಕಾಯುತ್ತಿದ್ದ ಕೃಷ್ಣನನ್ನು ಕೊಲ್ಲುವುದಕ್ಕಾಗಿ ವೃಷಭರೂಪ ದಿಂದ ಬಂದು ಪೀಡಿಸತೊಡಗಿ ಕೃಷ್ಣನಿಂದ ಹತನಾದನು [ಭಾರ -ಸ ೫೩. ಭಾಗ - ೧೦, ೩೬. ಹರಿ.- ೨, ೨೧. ವಿಷ್ಣು -೫, ೧೪]

**ಅರಿಷ್ಟನೇಮಿ.**—(i) ಅಜ್ಞಾತವಾಸದಲ್ಲಿ ಪಾಂಡುಪುತ್ರನಾದ ಸಹದೇವನ ಹೆಸರು ಆ ಕಾಲದಲ್ಲಿ ಇವನ ಮತ್ತೊಂದು ಹೆಸರು ತಂತಿಪಾಲ [ಭಾರ -ವಿ ೧೩]

(ii) ಕಶ್ಯಪಮುನಿಯ ನಾಮಾಂತರ ಈತನು ಸಗರಚಕ್ರವರ್ತಿಗೆ ಅನೇಕ ಮೋಕ್ಷಸಾಧನಗಳನ್ನು ವಿವರಿಸಿದನು [ಭಾರ -ಶಾಂ ೨೦೭]

**ಅರಿಷ್ಟಾ** —ಕಶ್ಯಪಮುನಿಯ ಹೆಂಡತಿಯಲ್ಲಿ ಒಬ್ಬಳು ಈಕೆ ಹಾಹಾ ಹೂಹೂ ಮೊದಲಾದ ಗಂಧರ್ವರನ್ನೂ ಅಲಂಬುಸಾ ಮೊದಲಾದ ಅಪ್ಸರಸಿಯರನ್ನೂ ಹೆತ್ತಳು [ಭಾರ.-ಆದಿ ೬೬].

**ಅರಿಹ** —ಕ್ಷತ್ರಿಯನು ಚಂದ್ರವಂಶದ ಅಪರಾಚೀನರಾಜನಿಂದ ವಿದರ್ಭರಾಜ ಪುತ್ರಿಯಾದ ಮರ್ಯಾದೆಯೆಂಬವಳಲ್ಲಿ ಜನಿಸಿದವನು ಈತನು ಆಂಗಿಯೆಂಬವಳನ್ನು ಮದುವೆಯಾಗಿ ಮಹಾಭೌಮನೆಂಬ ತನಯನನ್ನು ಪಡೆದಳು [ಭಾರ -ಆದಿ ೬೩].

**ಅರುಜ.**—ರಾವಣನ ಅನುಚರನಾದ ಒಬ್ಬ ರಾಕ್ಷಸನು. ವಿಭೀಷಣನಿಂದ ಹತನಾದನು [ಭಾರ.-ವನ. ೨೮೬].

**ಅರುಣ.**—(i) ಸೂರ್ಯನ ಸಾರಥಿ. ನೋಡು—ಅನೂರು ಈತನು ತನ್ನ ಜನನಿಗೆ ದಾಸೀತ್ವವು ಬರುವ ಹಾಗೆ ಶಾಪವಿತ್ತನು [ಭಾರ -ಆದಿ ೧೬ ಶಾಂತಿ. ೨೦]

(ii) ವಿಪ್ರಚಿತ್ತಿವಂಶದ ಒಬ್ಬ ದಾನವನು ಈತನು ಗಾಯತ್ರೀ ಮಂತ್ರಾನುಷ್ಠಾನ ಮಹಿಮೆಯಿಂದ ಬ್ರಹ್ಮನನ್ನು ಮೆಚ್ಚಿಸಿ, ಆತನ ಮೂಲಕ, ತನಗೆ ಯಾರಿಂದಲೂ ಸಾವು ಬಾರದಂತೆ ವರವನ್ನು ಪಡೆದು ಲೋಕಕಂಟಕನಾ ಗಿರುವಲ್ಲಿ, ದೇವತೆಗಳ ಕೋರಿಕೆಯಂತೆ ಬೃಹಸ್ಪತಿ ಈತನ ಬಳಿ ಸಾರ್ದು ಮಾತ ನಾಡುವ ಸಂದರ್ಭದಲ್ಲಿ "ನಾವಿಬ್ಬರೂ ಮಿತ್ರರು. ಗಾಯತ್ರೀದೇವಿ ನಮಗೂ ನಿನಗೂ ಉಪಾಸ್ಯದೇವತೆ ಒಬ್ಬಳೇ ಅಲ್ಲವೇ ?" ಎಂದು ಮುಂತಾಗಿ ಮಾತನಾ ಡಿದನು. ಅರುಣನು ದೇವತೆಗಳ ಪಂಗಡಕ್ಕೆ ಸೇರಿದ ಗಾಯತ್ರಿಯನ್ನು ತಾನು ಉಪಾಸನೆ ಮಾಡುವುದು ನ್ಯಾಯವಲ್ಲವೆಂದು ಭಾವಿಸಿ, ಗಾಯತ್ರೀ ಪುನಶ್ಚರಣೆಯನ್ನು ಬಿಟ್ಟು ತೇಜೋಹೀನನಾದನು [ದೇ. ಭಾಗ.-೧೦, ೧೩].

**ಅರುಣಾ**—ಒಂದು ನದಿ. ಕುರುಕ್ಷೇತ್ರಕ್ಕೂ ಹಿಮವತ್ಪರ್ವತಕ್ಕೂ ನಡುವೆ ಇದೆ. ಸರಸ್ವತೀ ನದಿ ಇದರ ಬಳಿಯಲ್ಲಿ ಏಳು ಶಾಖೆಗಳಾಗಿ ಒಡೆದು ಓಘವತೀ ಯೆಂಬ ಹೆಸರನ್ನು ಪಡೆಯುವುದು [ಭಾರ -ಶಲ್ಯ ೫, ೪೪]

**ಅರುಣಿ.**—ಒಬ್ಬ ಋಷಿ. ಈತನು ಅರಣ್ಯದಲ್ಲಿ ತಪಸ್ಸಿಗೆ ಕುಳಿತಿದ್ದಾಗ ಒಬ್ಬ ಬೇಡನು ಈತನನ್ನು ಕೊಲ್ಲುವೆನೆಂದು ಹೆದರಿಸಿದನು. ಮುನಿ ಎದೆಗುಂದದೆ ತನ್ನ ಮೌನದಿಂದಿದ್ದನು ಬೇಡನು ಈತನ ಸ್ಥಿರಚಿತ್ತತೆಗೆ ಮೆಚ್ಚಿ ಶರಣಾಗತ ನಾಗಿ ತನ್ನನ್ನೇ ಉದ್ಧರಿಸಬೇಕೆಂದು ಬೇಡಿಕೊಂಡನು ಮುನಿ ಮಾತನಾಡದೆ ಅಲ್ಲಿಂದ ಎದ್ದು ಹೋಗಲು, ಬೇಡನು ಆತನ ಹಿಂದೆಯೇ ಹೋಗುತ್ತಿದ್ದನು ಇಷ್ಟರಲ್ಲಿ ಒಂದು ಹೆಬ್ಬುಲಿ ಆ ತಾಪಸನನ್ನು ಅಡ್ಡಗಟ್ಟಿತು ಬೇಡನು ಆ ಹುಲಿ ಯನ್ನು ಕೊಂದನು. ಕನಿಕರಗೊಂಡ ಮುನಿ "ಎಂದಿಗೂ ಸತ್ಯಕ್ಕೆ ತಪ್ಪದಿರು" ಎಂದು ಆ ಬೇಡನಿಗೆ ಉಪದೇಶಿಸಿದನು [ವರಾ ]

**ಅರುನ್ಧತೀ.**—ವಸಿಷ್ಠಮಹರ್ಷಿಯ ಹೆಂಡತಿ. ಈಕೆಗೆ ಅಕ್ಷಮಾಲೆಯೆಂಬ ನಾಮಾಂತರವಿರುತ್ತದೆ. ಶಕ್ತಿಮಹರ್ಷಿಯ ಜನನಿ [ಭಾರ -ಸಭಾ ೧೧ ವನ. ೧೩೭ ಉ. ೧೧೭] ಈಕೆ ಕರ್ದಮಮುನಿಯಿಂದ ಸ್ವಾಯಂಭುವ ಮನು ಪುತ್ರಿಯಾದ ದೇವಹೂತಿಯೆಂಬಾಕೆಯಲ್ಲಿ ಜನಿಸಿದವಳು. ಈಕೆಗೆ ಊರ್ಜೆಯೆಂ ಬುದು ನಾಮಾಂತರ ಮರೀಚಿಮುನಿಪತ್ನಿಯಾದ ಕಲೆಯೂ, ಅಂಗಿರಸನ ಪತ್ನಿ ಯಾದ ಶ್ರದ್ಧೆಯೂ, ಪುಲಸ್ತ್ಯನ ಮಡದಿಯಾದ ಹವಿರ್ಭುಕ್ ಎಂಬವಳೂ ಪುಲಹನ ಒಡತಿಯಾದ ಗತಿಯೆಂಬವಳೂ, ಕ್ರತುಮುನಿಯ ಹೆಂಡತಿ ಕ್ರಿಯೆಯೆಂ ಬವಳೂ, ಭೃಗುಪತ್ನಿಯಾದ ಖ್ಯಾತಿಯೆಂಬವಳೂ, ಅಥರ್ವಾಂಗಿರಸ ಮುನಿಪತ್ನಿ ಯಾದ ಶಾಂತಿಯೂ, ಅತ್ರಿಪತ್ನಿಯಾಡ ಅನಸೂಯೆಯೂ, ಕಪಿಲಮಹರ್ಷಿಯೂ ಈಕೆಯ ಒಡಹುಟ್ಟಿದವರು [ಭಾಗ.-೪, ೧ ಮತ್ಸ್ಯ ೨೦೧]. ಒಮ್ಮೆ ಈಕೆ ಪತಿ ದ್ರೋಹವನ್ನೆಸಗಿದ ಕಾರಣ ಸೂಕ್ಷ್ಮರೂಪವನ್ನು ತಾಳಿದಳು [ಭಾರ -ಆದಿ. ೨೫೯]. ಅಗ್ನಿ ಸಪ್ತರ್ಷಿಗಳ ಪತ್ನಿಯರನ್ನು ಕಾಮಿಸಿದಾಗ, ಸ್ವಾಹಾದೇವಿ ಮಿಕ್ಕ ಆರು ಮಂದಿ ಋಷಿಪತ್ನಿಯರ ರೂಪವನ್ನು ಧರಿಸಿ ಅಗ್ನಿಯನ್ನು ಸಂತೋಷಪಡಿಸಿದ ಳಾದರೂ ಅರುಂಧತಿಯ ರೂಪವನ್ನು ಮಾತ್ರ ಧರಿಸಲಾಗಲಿಲ್ಲ [ವನ.-೨೨೭]. ಈಕೆ ವಸಿಷ್ಠನ ಇದಿರಿಗೆ ಬಂದರೆ ಅದರಿಂದ ಲೋಕಕ್ಕೆ ಒಂದು ಬಗೆಯ ಉತ್ಪಾತ ಸೂಚಕ [ಭೀಷ್ಮ. ೨]. ಒಮ್ಮೆ ಈಕೆ ಉಕ್ಕಿನ ಬೋರೆ ಹಣ್ಣುಗಳನ್ನು ಪಾಕ ಮಾಡಿ ಈಶ್ವರನಿಂದ ವರವನ್ನು ಪಡೆದಳು [ಶಲ್ಯ. ೪೯]. ಅರುಂಧತಿ (ಆ ಹೆಸರಿನ ನಕ್ಷತ್ರ) ಯಾರಿಗೆ ಕಾಣುವುದಿಲ್ಲವೋ ಅವರಿಗೆ ಮರಣ ಸನ್ನಿಹಿತವಾಗಿರುವುದೆಂದು ಊಹಿಸಬೇಕು [ಶಾಂತಿ ೩೨೨]. ಈಕೆ ಒಮ್ಮೆ ಋಷಿಸಮುದಾಯಕ್ಕೆ ಅನೇಕ

ಧರ್ಮರಹಸ್ಯಗಳನ್ನು ಬೋಧಿಸಿದಳು [ಅನು. ೧೯೬]. ವಿವಾಹವಾದ ರಾತ್ರಿ ನೂತನ ದಂಪತಿಗಳಿಗೆ ಈ ನಕ್ಷತ್ರವನ್ನು ತೋರಿಸುವ ವಾಡಿಕೆ ತ್ರಿವರ್ಣದವರಲ್ಲಿಯೂ ವೈದಿಕ ಸಂಪ್ರದಾಯವಾಗಿದೆ [ಶಿವ.]

**ಅರ್ಚಿಷ್ಮತೀ.**—ಅಂಗಿರಸ ಮುನಿಯ ಮಗಳು. ಪೂರ್ಣಿಮಾತಿಥಿಯ ಅಭಿಮಾನದೇವತೆ [ವನ. ೨೨೧].

**ಅರ್ಜುನ.**—(i) ಧರ್ಮವ್ಯಾಧನ ಮಗನು [ನೋಡು—ಗೌತಮಿ].

(ii) ಕಾರ್ತವೀರ್ಯಾರ್ಜುನನಿಗೂ ಈ ಹೆಸರು ಸಲ್ಲುತ್ತದೆ.

(iii) ಪಾಂಡುರಾಜನ ಹಿರಿಯ ಹೆಂಡತಿಯಾದ ಕುಂತಿಯಲ್ಲಿ ಇಂದ್ರನ ಮೂಲಕ ಜನಿಸಿದವನು. ಇವನ ಜನನಕಾಲದ ಗ್ರಹಸ್ಥಿತಿಗೆ ಅನುಸಾರವಾಗಿ ಇವನ ಮಹಿಮೆಯನ್ನು ಆಕಾಶವಾಣಿ ನುಡಿಯಿತು [ಭಾರ.-ಆದಿ. ೬೩, ೧೩೨]. ಒಮ್ಮೆ ದ್ರೋಣಾಚಾರ್ಯರು ಗಂಗಾನದಿಯಲ್ಲಿ ಸ್ನಾನಕ್ಕಾಗಿ ಇಳಿದಾಗ ಅವರ ಕಾಲನ್ನು ಒಂದು ಮೊಸಳೆ ಹಿಡಿದುಕೊಳ್ಳಲಾಗಿ ಅರ್ಜುನನು ಅದನ್ನು ಕೊಂದನು [ಆದಿ. ೧೪೩]. ದ್ರೋಣಾಚಾರ್ಯರು ತಮ್ಮ ಶಿಷ್ಯವರ್ಗದ ಯೋಗ್ಯತೆಯನ್ನು ಪರೀಕ್ಷಿಸುವುದಕ್ಕಾಗಿ ನಡೆಯಿಸಿದ ಅಸ್ತ್ರಪರೀಕ್ಷೆಯಲ್ಲಿ ಅರ್ಜುನನು ಗುರಿಯನ್ನು ಭೇದಿಸಿ ಮೆಚ್ಚುಗೆಯನ್ನು ಪಡೆದನು [ಆದಿ. ೧೪೩]. ದ್ರೋಣಾಚಾರ್ಯರ ಇಷ್ಟಾನುಸಾರ ಗುರುದಕ್ಷಿಣೆಗೆ ಪ್ರತಿನಿಧಿಯಾಗಿ ದ್ರುಪದನನ್ನು ಹಿಂಗಟ್ಟು ಬಿಗಿದು ತಂದು ದ್ರೋಣನಿಗೆ ಒಪ್ಪಿಸಿದನು [ಆದಿ. ೧೪೮]. ದ್ರೌಪದೀ ಸ್ವಯಂವರಕ್ಕಾಗಿ ಪಾಂಡವರು ದ್ರುಪದನ ಪಟ್ಟಣಕ್ಕೆ ಹೋಗುತ್ತಿದ್ದಾಗ ಗಂಗಾತೀರದಲ್ಲಿ ರಾತ್ರಿಯ ವೇಳೆಯಲ್ಲಿ ತಮ್ಮನ್ನು ಅಡ್ಡಗಿಸಿದ ಅಂಗಾರಪರ್ಣನೆಂಬ ಗಂಧರ್ವನನ್ನು ಯುದ್ಧದಲ್ಲಿ ಸೋಲಿಸಿ ಅವನಿಂದ ಚಾಕ್ಷುಷೀ ವಿದ್ಯೆಯನ್ನು ಪಡೆದು ಅವನ ಸೂಚನೆಯಂತೆ ಧೌಮ್ಯಾಚಾರ್ಯರನ್ನು ತಮ್ಮ ಪುರೋಹಿತನನ್ನಾಗಿ ವರಿಸಿದನು [ಆದಿ. ೧೮೬]. ದ್ರೌಪದೀ ಸ್ವಯಂವರ ಸಮಯದಲ್ಲಿ ಬ್ರಾಹ್ಮಣರೂಪದಿಂದ ಮತ್ಸ್ಯಯಂತ್ರವನ್ನು ಭೇದಿಸಿದನು. ದ್ರೌಪದಿ ಅರ್ಜುನನ ಕೊರಳಲ್ಲಿ ವರಣ ಮಾಲಿಕೆಯನ್ನು ಹಾಕಿದಳು [ಆದಿ. ೨೦೩]. ದ್ರೌಪದೀ ಸ್ವಯಂವರ ಸಮಯದಲ್ಲಿ ಕರ್ಣನನ್ನು ಯುದ್ಧದಲ್ಲಿ ಸೋಲಿಸಿದನು [ಆದಿ. ೨೦೫]. ದ್ರೌಪದಿಯೊಂದಿಗೆ ವಿವಾಹ [ಆದಿ. ೨೧೫]. ಹಸ್ತಿನಾವತಿಯಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ಯುಧಿಷ್ಠಿರನು ದ್ರೌಪದಿಯೊಂದಿಗೆ ಏಕಾಂತದಲ್ಲಿದ್ದಾಗ, ಆಯುಧಶಾಲೆಗೆ ಹೋಗದೆ ವಿಧಿಯಿಲ್ಲದ ಕಾರಣ ಅಲ್ಲಿಗೆ ಹೋಗಿ, ಅವರನ್ನು ಕಂಡ ಪಾಪವನ್ನು ನೀಗಿಕೊಳ್ಳುವುದಕ್ಕಾಗಿ ತಮ್ಮ ಪ್ರತಿಜ್ಞಾನುಸಾರವಾಗಿ, ಅರ್ಜುನನು ತೀರ್ಥಯಾತ್ರೆಗೆ ಹೊರಟನು [ಆದಿ. ೨೩೩]. ನಾಗಕನ್ಯೆಯಾದ ಉಲೂಪಿಯನ್ನು ಮದುವೆಯಾಗಿ ಆಕೆಯಲ್ಲಿ ಇರಾವಂತನೆಂಬ ಮಗನನ್ನು ಪಡೆದನು [ಆದಿ. ೨೩೪]. ಮಣಲೂ

ರಿನ ರಾಜನಾದ ಮಲಯಧ್ವಜನ ಮಗಳಾದ ಚಿತ್ರಾಂಗದೆಯನ್ನು ಮದುವೆಯಾಗಿ ಆಕೆಯಲ್ಲಿ ಬಭ್ರುವಾಹನನೆಂಬ ಮಗನನ್ನು ಪಡೆದನು [ಆದಿ ೨೩೫, ೨೩೭] ನಾರೀ ತೀರ್ಥದಲ್ಲಿ ಸ್ನಾನಮಾಡುವಾಗ ಅರ್ಜುನನನ್ನು ಒಂದು ಮೊಸಳೆ ಹಿಡಿಯಲಾಗಿ ಅದನ್ನು ಹೊರಗೆ ತೆಗೆದುಹಾಕಲು, ಶಾಪದಿಂದ ಮೊಸಳೆಯಾಗಿ ವರ್ಗೆಯೆಂಬ ಅಪ್ಸರಸಿ ತನ್ನ ನಿಜರೂಪವನ್ನು ಧರಿಸಿ, ಶಾಪಕಾರಣವನ್ನು ತಿಳುಹಲಾಗಿ ಅಂತೆಯೇ ಆ ಸುತ್ತುಮುತ್ತಣ ತೀರ್ಥಗಳಲ್ಲಿ ಮೊಸಳೆಯ ರೂಪದಿಂದಿದ್ದ ಅಪ್ಸರಸಿಯರನ್ನೆಲ್ಲ ವಿಶಾಪೆಯರನ್ನಾಗಿಸಿದನು [ಆದಿ ೨೩೬, ೨೩೭] ಇಷ್ಟರಲ್ಲಿ ಪ್ರಭಾಸ ತೀರ್ಥಕ್ಕೆ ಹೋಗಿ ಅಲ್ಲಿ ಸುಭದ್ರಾಪರಿಣಯ ವೃತ್ತಾಂತವನ್ನು ಕೇಳಿ, ಮರುಗಿ, ಕೃಷ್ಣನ ಸೂಚನೆಯಂತೆ ಸನ್ಯಾಸಿ ವೇಷವನ್ನು ತಳೆದು, ಬಲರಾಮನಿಂದ ಪುರಸ್ಕೃತನಾಗಿ ಸುಭದ್ರೆಯ ಅಂತಃಪುರದಲ್ಲಿ ಯತಿ ವೇಷದಿಂದ ವಾಸಮಾಡಿದುದು ಸುಭದ್ರಾ ವಿವಾಹ [ಆದಿ ೨೩೮, ೨೪೨] ಕೃಷ್ಣಾರ್ಜುನರು ಯಮುನೆಯಲ್ಲಿ ಜಲಕ್ರೀಡೆಯಾಡು ತ್ತಿರುವಲ್ಲಿ ಅಗ್ನಿ ಬ್ರಾಹ್ಮಣ ರೂಪದಿಂದ ಬಂದು, ಶ್ವೇತಕಿ ರಾಜನ ಯಜ್ಞದಲ್ಲಿ ತನಗೆ ಅಜೀರ್ಣವುಂಟಾಗಿರುವುದೆಂದು ಹೇಳಿ, ಅದಕ್ಕೆ ಪ್ರತೀಕಾರವಾಗಿ ತಾನು ಖಾಂಡವ ವನವನ್ನು ಸುಡತೊಡಗಿದಾಗ ಅಲ್ಲಿದ್ದ ಇಂದ್ರನ ಸೇವಕರು ತನ್ನನ್ನು ಅಡ್ಡಗಿಸಿದ ರೆಂತಲೂ ಅದಕ್ಕೆ ತನಗೆ ಸಾಹಾಯ್ಯಮಾಡಬೇಕೆಂತಲೂ ಕೇಳಲಾಗಿ, ಅರ್ಜುನನು ಸಮ್ಮತಿಸಿ, ಅಗ್ನಿಯಿಂದ ಗಾಂಡೀವವೆಂಬ ದಿವ್ಯ ಧನುಸ್ಸನ್ನೂ, ಅಕ್ಷಯ ತೂಣೀರ ಗಳನ್ನೂ ಬಿಳಿಯ ಕುದುರೆಗಳನ್ನು ಹೂಡಿದ ದಿವ್ಯರಥವನ್ನೂ ಪಡೆದು, ಅಗ್ನಿಯಿಂದ ಖಾಂಡವ ವನವನ್ನು ಸುಡಿಸಿದುದು, ಇಂದ್ರನೊಂದಿಗೆ ಯುದ್ಧ, ಇಂದ್ರನ ಪರಾ ಜಯ, ಮಂದಪಾಲನಕಥೆ, ಮಾಯಾಸುರನಿಗೆ ಅಭಯಪ್ರದಾನ [ಆದಿ ೨೪೮, ೨೬೦]. ಅರ್ಜುನನ ರಥದ ಧ್ವಜದಮೇಲೆ ಹನೂಮಂತನು ನೆಲೆಸಿದ್ದು [ಆದಿ ೨೫, ೧ ವನ. ೧೫೩. ಉ ೫೬] ಮಯಾಸುರನಿಂದ ದೇವದತ್ತವೆಂಬ ಶಂಖವನ್ನು ಪಡೆದನು [ಸಭಾ ೩] ರಾಜಸೂಯಯಾಗಕ್ಕೆ ಮೊದಲು ಜೈತ್ರಯಾತ್ರೆಗೆ ಹೊರಟಾಗ ಕುಳಿಂಗ, ಪ್ರಾಗ್ಜ್ಯೋತಿಷ ದೇಶಗಳನ್ನು ಗೆದ್ದದ್ದು [ಸ. ೨೭] ಉತ್ತರ ದಿಕ್ಕಿನಲ್ಲಿ ಅನ್ತಗಿರಿ, ಉಲೂಕಪುರ, ಮೋದಾಪುರ, ಉರಗಾಪುರ, ಕಾಮ್ಬೋಜ, ಋಷಿಕ ಮುಂತಾದ ದೇಶಗಳನ್ನು ಗೆದ್ದನು. ಕಿಂಪುರುಷಖಂಡ, ಇಲಾವೃತ, ಕೇತುಮಾಲ ಮೊದಲಾದ ಖಂಡಗಳಲ್ಲಿ ದಿಗ್ವಿಜಯ [ಸ. ೨೮, ೨೯] ಅರ್ಜುನನ ಸಾರಥಿ ಪೂರು ಎಂಬವನು [ಸ. ೩೬]. ಇಂದ್ರಕೀಲಪರ್ವತದಲ್ಲಿ ತಪಸ್ಸು [ವನ. ೩೭]. ಕಿರಾತರೂಪಿಯಾದ ಶಿವನೊಂದಿಗೆ ಯುದ್ಧ [ವನ. ೩೯] ಪಾಶುಪತಾಸ್ತ್ರ ಲಾಭ [ವನ. ೪೦]. ದಿಕ್ಪಾಲಕ ರಿಂದ ಅಸ್ತ್ರಗಳನ್ನು ಪಡೆದದ್ದು [ವನ. ೪೧] ದೇವಲೋಕದಲ್ಲಿ ವಾಸಮಾಡುವಿಕೆ, ಚಿತ್ರಸೇನನೆಂಬ ಗಂಧರ್ವನಿಂದ ಗಾಂಧರ್ವವೇದವನ್ನು ಅಭ್ಯಾಸಮಾಡಿದನು [ವನ. ೪೩].

ನಿವಾತಕವಚರ ವಧೆ [ವನ ೧೭೦, ೧೭೪]. ಹಿರಣ್ಯಪುರವಾಸಿಗಳಾದ ಪೌಲೋಮ, ಕಾಲಕೇಯರೆಂಬ ರಾಕ್ಷಸರನ್ನು ಕೊಂದನು [ವನ ೧೭೫] ಇಂದ್ರನು ಸಂತುಷ್ಟನಾಗಿ ತನ್ನ ಸಿಂಹಾಸನದಲ್ಲಿ ಅರ್ಜುನನನ್ನು ಕುಳ್ಳಿರಿಸಿ, ಕವಚ ಕಿರೀಟಾದಿಗಳನ್ನು ಕೊಟ್ಟು ಗೌರವಿಸಿದನು [ವನ ೧೭೬] ಊರ್ವಶಿಯಿಂದ ನಪುಂಸಕನಾಗುವಂತೆ ಶಾಪ [ವನ ೪೪]. ಅಜ್ಞಾತವೇಷದಿಂದ ವಿರಾಟ ರಾಜಧಾನಿಯಲ್ಲಿ ವಾಸಮಾಡುವಾಗ ಅರ್ಜುನನ ಹೆಸರು ಬೃಹನ್ನಳೆ [ವಿ ೩] ವಿರಾಟನಗರಿಗೆ ಹೋಗುವಾಗ ದಾರಿ ನಡೆಯಲಾಗದೆ ಬಳಲಿದ ದ್ರೌಪದಿಯನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಕರೆ ತಂದನು [ವಿರಾ ೬] ನಪುಂಸಕವೇಷದಿಂದ ವಿರಾಟನಗರ ಪ್ರವೇಶ [ವಿ. ೧೧]. ಅರ್ಜುನನ ಹನ್ನೊಂದು ಹೆಸರುಗಳು, ಅವುಗಳ ನಿರ್ವಚನ, ಮತ್ತು ಅವುಗಳನ್ನು ಕೀರ್ತಿಸಿದ ಫಲ [ವಿರಾ ೪೩] ಕರ್ಣನ ಪರಾಜಯ, ದ್ರೋಣಪರಾಜಯ, ಅಶ್ವತ್ಥಾಮ ಪರಾಜಯ (ಉತ್ತರಗೋಗ್ರಹಣದಲ್ಲಿ) [ವಿರಾ ೫೮, ೫೯, ೬೦] ದುಶ್ಶಾಸನ ಪರಾಜಯ, ದುರ್ಯೋಧನ ಪರಾಜಯ, ಸಮ್ಮೋಹನಾಸ್ತ್ರ ಪ್ರಯೋಗ [ವಿರಾ. ೬೫, ೬೬, ೬೭] ಭಾರತ ಯುದ್ಧದಲ್ಲಿ ತಮಗೆ ಸಹಾಯ ಮಾಡುವುದಕ್ಕಾಗಿ ಶ್ರೀ ಕೃಷ್ಣನ ಬಳಿಗೆ ಹೋದನು ಮತ್ತು ಕೃಷ್ಣನನ್ನು ಸಾರಥಿಯಾಗಿ ವರಿಸಿದನು [ಉದ್ಯೋ ೭] ಶ್ರೀಕೃಷ್ಣನಿಂದ ಸಂಧಿ, ವಿಗ್ರಹಗಳನ್ನು ತಿಳಿದನು [ಉ ೭೭]. ಅರ್ಜುನನಿಗೆ ಕ್ರಮವಾಗಿ ದ್ರೌಪದಿ, ಸುಭದ್ರೆ, ಉಲೂಪಿ, ಚಿತ್ರಾಂಗದೆಯರಲ್ಲಿ ಶ್ರುತಕೀರ್ತಿ, ಅಭಿಮನ್ಯು, ಇರಾವಂತ, ಬಭ್ರುವಾಹನರೆಂಬ ತನಯರು ಜನಿಸಿದರು [ಉ. ೧೬೯]. ಅರ್ಜುನ ದುಶ್ಶಾಸನರ ಯುದ್ಧ [ಭೀ. ೧೧೦] ಶರತಲ್ಪದಲ್ಲಿ ಪವಡಿಸಿದ್ದ ಭೀಷ್ಮನಿಗೆ ಅಂಬಿನ ತಲೆದಿಂಬನ್ನೊದವಿಸಿ, ಪರ್ಜನ್ಯಾಸ್ತ್ರಪ್ರಯೋಗದಿಂದ ಭೀಷ್ಮನ ದಾಹವನ್ನು ಶಾಂತಿಗೊಳಿಸಿದನು [ಭೀ ೧೨೦, ೧೨೧]. ಸಂಶಪ್ತಕರೊಂದಿಗೆ ಯುದ್ಧ [ದ್ರೋ. ೨೭. ಕ ೧೮, ೪೮, ೫೫] ಭಗದತ್ತನ ವಧೆ [ದ್ರೋ ೨೮, ೨೯] ಕೃಷ್ಣನ ಸೂಚನೆಯಂತೆ ಅರ್ಜುನನು ಜಯಪ್ರಾಪ್ತಿಗಾಗಿ ರಾತ್ರಿಯಲ್ಲಿ ಪರಮೇಶ್ವರನನ್ನು ಪೂಜಿಸಿದನು [ದ್ರೋ ೭೯]. ಕನಸಿನಲ್ಲಿ ಕೃಷ್ಣನ ಸಂಗಡ ಕೈಲಾಸಕ್ಕೆಹೋಗಿ ಮರಳಿ ಪಾಶುಪತಾಸ್ತ್ರವನ್ನು ಶಿವನಿಂದ ಪಡೆದನು [ದ್ರೋ ೮೦, ೮೧]. ಕರ್ಣನು ಇನ್ನೂ ಸಾಯಲಿಲ್ಲವೆಂಬ ಕೋಪದಿಂದ ಯುಧಿಷ್ಠಿರನು ಅರ್ಜುನನನ್ನು ನಿಂದಿಸಿ, ಗಾಂಡೀವವನ್ನು ಕೃಷ್ಣನಿಗೆ ಕೊಡುವಂತೆ ಹೇಳಲಾಗಿ, ಸಿಟ್ಟುಗೊಂಡ ಅರ್ಜುನನು ಯುಧಿಷ್ಠಿರನನ್ನು ಕೊಲ್ಲುವ ಪ್ರಯತ್ನ [ಕ. ೭೧, ೭೩]. ಅರ್ಜುನನಿಂದ ಕರ್ಣಪುತ್ರ ವೃಷಸೇನನ ವಧೆ [ಕ. ೯೦]. ಕರ್ಣನ ನಾಗಾಸ್ತ್ರದಿಂದ ಅರ್ಜುನನ ಕಿರೀಟ ಉರುಳಿಬೀಳಲು, ನಾಗಾಸ್ತ್ರವನ್ನು ಹೊಕ್ಕಿದ್ದ ತಕ್ಷಕ ಪುತ್ರನಾದ ಅಶ್ವಸೇನನ ವಧೆ [ಕ. ೯೭] ಕೃಷ್ಣನ ತುಳಿತದಿಂದ ಅರ್ಜುನನ ರಥ ಕುಸಿದುದು [ಕ. ೯೭]. ಕರ್ಣವಧೆ [ಕ. ೯೮]. ಕೃಷ್ಣನು ಅರ್ಜು

ನನ ರಥದಿಂದ ಇಳಿದೊಡನೆಯೇ ಹನೂಮಂತನು ತೆರಳಲು ಆ ರಥ ಸುಟ್ಟು ಹೋದದ್ದು [ಶ ೬೩] ಅಶ್ವತ್ಥಾಮನ ಬ್ರಹ್ಮಾಸ್ತ್ರಕ್ಕೆ ಪ್ರತ್ಯಸ್ತ್ರಪ್ರಯೋಗ [ಸೌ ೧೪] ಅಶ್ವಮೇಧತುರಗಸಂರಕ್ಷಣೆ—ದಿಗ್ವಿಜಯ [ಅಶ್ವ. ೭೨, ೭೫] ಭಗದತ್ತನ ಮಗ ನಾದ ಯಜ್ಞದತ್ತನೊಂದಿಗೆ ಯುದ್ಧ [ಅಶ್ವ ೭೫, ೭೬] ಅರ್ಜುನನು ಸೈಂಧವ ರೊಂದಿಗೆ ಯುದ್ಧಮಾಡುವಾಗ ಗಾಂಡೀವವು ನೆಲಕ್ಕೆ ಬಿದ್ದುದು [ಅಶ್ವ ೭೭] ಬಭ್ರುವಾಹನನಿಂದ ಅರ್ಜುನನ ವಧೆ [ಅಶ್ವ ೭೯] ಉಲೂಪಿ ಸಂಜೀವಕ ರತ್ನ ದಿಂದ ಅರ್ಜುನನನ್ನು ಬದುಕಿಸಿದಳು [ಅಶ್ವ ೮೧] ಜರಾಸಂಧನ ಮೊಮ್ಮಗನಾದ ಮೇಘಸಂಧಿಯನ್ನು ಸೋಲಿಸಿದನು [ಅಶ್ವ ೮೩] ಅರ್ಜುನನ ದುರ್ಲಕ್ಷಣಗಳನ್ನು ಕೃಷ್ಣನು ಹೇಳಿದ್ದು [ಅಶ್ವ ೮೯] ಕೃಷ್ಣನಿರ್ಯಾಣಾನಂತರ ಅರ್ಜುನನು ವಸು ದೇವಾದಿಗಳನ್ನು ಸಂತನಿಸಲು ದ್ವಾರಕೆಗೆ ಬಂದದ್ದು [ಮೌ ೬] ಕೃಷ್ಣನ ೧೬ ಸಾವಿರ ಮಂದಿ ಸ್ತ್ರೀಯರನ್ನು ಅರ್ಜುನನು ಹಸ್ತಿನಾವತಿಗೆ ಕರೆತರುವಾಗ ನಡುದಾರಿ ಯಲ್ಲಿ ಮ್ಲೇಚ್ಛರೊಂದಿಗೆ ಯುದ್ಧ—ಅರ್ಜುನನ ಪರಾಜಯ [ಮೌ ೮] ಮಹಾ ಪ್ರಸ್ಥಾನ ಮತ್ತು ದೇಹಪಾತ [ಮಹಾ ೨]

**ಅರ್ಧನಾರೀಶ್ವರ**—ಲೋಕದಲ್ಲಿ ಸಾಕಾದಷ್ಟು ಪ್ರಜಾವೃದ್ಧಿ ಇಲ್ಲದ ಕಾರಣ ಬ್ರಹ್ಮನು ಶಿವನನ್ನು ಕುರಿತು ತಪಸ್ಸುಮಾಡಲಾಗಿ ಶಿವನು ತನ್ನ ಶಕ್ತಿರೂಪ ವನ್ನು ಪ್ರತ್ಯೇಕಮಾಡಿ, ದಕ್ಷಪುತ್ರಿಯಾಗಿ ಜನಿಸುವಂತೆ ಅಪ್ಪಣೆಮಾಡಿದನು. ಇಂತು ಶಕ್ತಿಯುಕ್ತನಾಗಿದ್ದ ಶಿವನಿಗೆ ಅರ್ಧನಾರೀಶ್ವರನೆಂಬ ಹೆಸರು [ಶಿವ]

**ಅರ್ಧನಾರೀಶ್ವರ.**—ಭೃಂಗಿಯೆಂಬ ಗಣನಾಯಕನು ಮೋಕ್ಷಾರ್ಥಿಯಾಗಿ ಪಾರ್ವತಿಯ ರೂಪವನ್ನು ಅಸಡ್ಡೆಮಾಡಿ ಶಿವನ (ನಿರ್ಗುಣ ರೂಪವ) ನ್ನೇ ಧ್ಯಾನಿಸ ತೊಡಗಲಾಗಿ, ಸಿಟ್ಟುಗೊಂಡ ಪಾರ್ವತಿ ಭೃಂಗಿಯ ತೇಜಸ್ಸನ್ನು ಕುಗ್ಗಿಸಿದಳು. ಶಿವನು ಭಕ್ತನ ಮೇಲಣ ಅಭಿಮಾನದಿಂದ ತನ್ನ ದಂಡಾಯುಧವನ್ನು ಭೃಂಗಿಗೆ ಆಸರೆ ಕೊಟ್ಟನು ಪಾರ್ವತಿಯು ಸಿಟ್ಟು ಇಮ್ಮಡಿಯಾಗಿ ಕೇದಾರ ಕ್ಷೇತ್ರದಲ್ಲಿ ತಪಸ್ಸುಮಾಡಿ, ಶಿವನ ಅರ್ಧಾಂಗವನ್ನು ಸೂರೆಗೊಂಡಳು [ಶಿವ , ಕೇದಾರ]

**ಅರ್ವಾವಸು.**—ವಿಶ್ವಾಮಿತ್ರ ಪುತ್ರನಾದ ರೈಭ್ಯಮಹರ್ಷಿಯ ಎರಡನೆಯ ಮಗನು. ಇವನ ತಮ್ಮನ ಹೆಸರು ಪರಾವಸು ಒಮ್ಮೆ ಅರ್ವಾವಸು ಮೃಗವೆಂಬ ಭ್ರಾಂತಿಯಿಂದ ತನ್ನ ತಂದೆಯನ್ನು ಕೊಂದು ಮರಳಿ ಬದುಕಿಸಿದನು [ಭಾರ.-ವನ. ೧೩೭, ೧೪೦].

**ಅಲಕನನ್ದಾ** —ದೇವಲೋಕದಲ್ಲಿ ಹರಿಯುವ ಗಂಗೆ [ಭಾರ -ಆ. ೧೮೬]

**ಅಲಕಾ** —ಕುಬೇರನ ರಾಜಧಾನಿ [ಭಾರ.-ಆ. ೩೯, ಸ. ೧೦. ವನ. ೧೬೩].

**ಅಲಮ್ಬಲ** —ಜಟಾಸುರನ ಮಗನು. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಇರಾವಂತನನ್ನು ಕೊಂದು ಘಟೋತ್ಕಚನಿಂದ ಮಡಿದನು [ಭಾರ -ದ್ರೋ. ೧೭೫]

**ಅಲಮ್ಬುಸ** —(I) ಒಬ್ಬ ಅರಸು ದುರ್ಯೋಧನನ ಪಕ್ಷದವನು ಸಾತ್ಯಕಿಯಿಂದ ಹತನಾದನು [ದ್ರೋ ೧೪೦]

(II) ಒಬ್ಬ ರಾಕ್ಷಸನು ಮಹಾರಥನು. [ಭಾರ -ಉ. ೧೬೭] ಅಣ್ಣನಾದ ಬಕನನ್ನೂ, ತಂದೆಯಾದ ಕಿಮ್ಮೀರನನ್ನೂ ಭೀಮನು ಕೊಂದ ಸೇಡನ್ನು ತೀರಿಸಿಕೊಳ್ಳಲು ದುರ್ಯೋಧನನಪರವಾಗಿ ಭಾರತಯುದ್ಧದಲ್ಲಿ ಹೋರಾಡಿ ಘಟೋತ್ಕಚನಿಂದ ಸತ್ತನು [ಭೀ ೪೫, ೮೧, ೮೨, ೧೦೦, ೧೦೧ ದ್ರೋ ೨೫, ೧೦೮, ೧೦೯. ಸ್ತ್ರೀ ೨೬]

**ಅಲಮ್ಬುಸಾ** —ಕಶ್ಯಪಮುನಿಯಿಂದ ಅರಿಷ್ಟೆಯೆಂಬ ಹೆಂಡತಿಯಲ್ಲಿ ಜನಿಸಿದ ಅಪ್ಸರಸಿಯರಲ್ಲಿ ಒಬ್ಬಳು ದಧೀಚಿಮುನಿ ಸರಸ್ವತೀ ನದೀತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಆತನ ನಿಯಮವನ್ನು ಭಂಗಗೊಳಿಸಲಾಗಿ ದಧೀಚಿಮುನಿಯ ವೀರ್ಯದಿಂದ ಸಾರಸ್ವತಮಹರ್ಷಿ ಜನಿಸಿದನು [ಭಾರ.-ಆ ೬೬, ೧೩೨. ವಿ. ೧೪. ಅನು. ೫೦, ೨೭೧ ಶಲ್ಯ ೫೨].

**ಅಲರ್ಕ** —(I) ಉದಾರ ಗುಣಭರಿತನಾದ ಒಬ್ಬ ಅರಸು. ಈತನು ಒಬ್ಬ ಕುರುಡ ಬ್ರಾಹ್ಮಣನಿಗೆ ತನ್ನ ಕಣ್ಣುಗಳನ್ನು ಕೊಟ್ಟನು [ರಾಮಾ.-ಅಯೋ ೧೨].

(II) ಚಂದ್ರವಂಶದ ಅರಸು ಈತನು ಇಂದ್ರಿಯಗಳೊಂದಿಗೆ ದೊಡ್ಡ ವಿವಾದವನ್ನು ನಡೆಯಿಸಿದವನು [ಅಶ್ವ.-೩೧] ಈತನು ವತ್ಸನೆಂಬ ಅರಸಿನ ಮಗನು. ಕಾಶೀ ದೇಶದಲ್ಲಿ ರಾಜ್ಯಭಾರಮಾಡುತ್ತಿದ್ದನು [ವಾಯು ೯೨, ಹರಿ ೧, ೩೨]

(III) ಒಂದು ಕ್ರಿಮಿ. ಕರ್ಣನು ಪರಶುರಾಮನಲ್ಲಿ ಶಸ್ತ್ರವಿದ್ಯಾಭ್ಯಾಸ ಮಾಡುತ್ತಿದ್ದಾಗ ಒಮ್ಮೆ ಪರಶುರಾಮನು ಕರ್ಣನ ತೊಡೆಯಮೇಲೆ ತಲೆಯಿಟ್ಟು ನಿದ್ರಿಸುತ್ತಿರುವಲ್ಲಿ ಕರ್ಣನ ತೊಡೆಯನ್ನು ಕಚ್ಚಿತು [ಭಾರ.-ಶಾಂ ೩].

**ಅಲಾಯುಧ** —ಬಕಾಸುರನ ತಮ್ಮನು ದುರ್ಯೋಧನನ ಪಕ್ಷದವನು ಭೀಮಾರ್ಜುನರಿಂದ ಸೋತು, ಘಟೋತ್ಕಚನಿಂದ ಮಡಿದನು [ಭಾರ.-ದ್ರೋ. ೯೬, ೧೬೮, ೧೭೮, ೧೭೯ ಶಲ್ಯ ೨]

**ಅವನ್ತೀ**.—ನರ್ಮದಾ ನದಿಯ ದಕ್ಷಿಣಕ್ಕೆ ಮಾಳವ ದೇಶದ ಒಳಗಣ ಒಂದು ಚಿಕ್ಕದೇಶ ಪಾಂಡವರ ಕಾಲದಲ್ಲಿ ಇಲ್ಲಿ ವಿಂದಾನುವಿಂದರೆಂಬ ಸೋದರರು ರಾಜ್ಯಭಾರಮಾಡುತ್ತಿದ್ದರು. ರಾಜಸೂಯ ಸಮಯದಲ್ಲಿ ಸಹದೇವನು ಇವರಿಬ್ಬರನ್ನೂ ಜಯಿಸಿದನು. ಮೋಕ್ಷದಾಯಕಗಳೆಂದು ಪುರಾಣ ಪ್ರಸಿದ್ಧಗಳಾದ ಏಳು ಪಟ್ಟಣ

ಗಳಲ್ಲಿ ಒಂದು ಉಜ್ಜಯಿನಿ ಇದರ ರಾಜಧಾನಿಯಾಗಿದ್ದಿತು [ಭಾರ -ವನ ೮೭. ಸಭಾ ೩೨] ಬಲರಾಮ, ಕೃಷ್ಣರ ವಿದ್ಯಾಗುರುವಾದ ಸಾಂದೀಪಿನಿ ಇಲ್ಲಿಯೇ ವಾಸಮಾಡುತ್ತಿದ್ದಾಗ ಆತನಲ್ಲಿ ರಾಮಕೃಷ್ಣರು ವಿದ್ಯಾಭ್ಯಾಸಮಾಡಿದರು [ಭಾಗ - ೧೦, ೪೫, ಹರಿ. ೨, ೩೩ ವಿಷ್ಣು ೫, ೨೧].

**ಅವಿಕ್ಷಿತ** —(1) ಚಂದ್ರವಂಶದ ಕುರುರಾಜನ ಮಗನು ಇವನಿಗೆ ಪರೀಕ್ಷಿತ, ಶಬಲಾಶ್ವ, ಆದಿರಾಜ, ವಿರಾಜ, ಶಾಲ್ಮಲಿ, ಉಚ್ಚೈಶ್ರವ, ಭಂಗಕಾರಕ, ಜಿತಾರಿ— ಎಂಬ ಎಂಟು ಮಂದಿ ಪುತ್ರರು. ಅಶ್ವವಂತನೆಂಬುದು ಈತನ ಹೆಸರು [ಭಾರ.- ಆ ೧೦೧] ನೋಡು—ಕರಂಧಮ

(11) ಚಂದ್ರವಂಶದ ಕರಂಧಮ ರಾಜನ ಮಗನು ಈತನ ಮಗನು ಪ್ರಸಿದ್ಧನಾದ ಮರುತ್ತನೆಂಬ ಅರಸು [ಅಶ್ವ -೪] ಕರಂಧಮನಿಂದ ವೀರೆಯೆಂಬ ವಳಲ್ಲಿ ಜನಿಸಿದವನು ಈತನ ಜನನ ಕಾಲದಲ್ಲಿ ದುಷ್ಟಗ್ರಹಗಳು ಜನನ ಲಗ್ನ ವನ್ನು ನೋಡದಿದ್ದ ಕಾರಣ ಜೋಯಿಸರ ಸೂಚನೆಯಂತೆ ಈತನಿಗೆ ಅವಿಕ್ಷಿತನೆಂದು ಹೆಸರಿಟ್ಟರು ಈತನ ಮಗನು ಮರುತ್ತರಾಜನು [ಮಾರ್ಕಂ -೧೧೯-೧೨೫]

**ಅವಿನ** —ಒಬ್ಬ ರಾಕ್ಷಸ ವಿಭೀಷಣನ ಮಂತ್ರಿ ಬಹಳ ನೀತಿವಂತ. ಸೀತೆಯನ್ನು ರಾಮನಿಗೆ ಒಪ್ಪಿಸಿ, ಮರೆಹೋಗುವಂತೆ ಅನೇಕವೇಳೆ ರಾವಣನಿಗೆ ಬೋಧಿಸಿ, ಅದು ಸಫಲವಾಗದಿರಲು, ಆಗಾಗ್ಗೆ ರಾಮನ ಕುಶಲವಾರ್ತೆಯನ್ನು ತನ್ನ ಚಾರರ ಮೂಲಕ ತಿಳಿದು, ತ್ರಿಜಟೆಯ ಮೂಲಕ ಸೀತೆಗೆ ತಿಳುಹುತ್ತಿದ್ದನು [ರಾಮಾ.-ಸು ೩೭ ಭಾರ ವ. ೨೮೦]

**ಅಶೋಕ**—(1) ಕಾಮ್ಯಕವನದ ದಕ್ಷಿಣದಲ್ಲಿರುವ ಒಂದು ತೀರ್ಥ

(11) ದಶರಥನ ಮಂತ್ರಿಗಳಲ್ಲಿ ಒಬ್ಬನು [ರಾಮಾ -ಬಾಲ ೪]

(111) ರಾವಣನ ಮಂತ್ರಿಗಳಲ್ಲಿ ಒಬ್ಬನು [ಯುದ್ಧ -೧೨೯]

**ಅಶೋಕವನ** —(1) ಯಯಾತಿರಾಜನು ದೇವಯಾನಿಯೊಂದಿಗೆ ವಾಸವಾಗಿದ್ದ ರಮಣೀಯವಾದ ಉದ್ಯಾನ [ಮತ್ಸ್ಯ. ೩೧].

(11) ರಾವಣನ ಉದ್ಯಾನ [ರಾಮಾ.-ಸು೦].

(111) ಅಯೋಧ್ಯೆಯಲ್ಲಿ ಸೀತಾರಾಮರು ವಿಹರಿಸುತ್ತಿದ್ದ ಒಂದು ಉದ್ಯಾನ [ರಾಮಾ. ಉ. ೪೩].

**ಅಶ್ಮಕ**.— (1) ಇಕ್ಷ್ವಾಕುವಂಶದ ಕಲ್ಮಾಷಪಾದರಾಜನ ರಾಣಿಯಾದ ಮದ ಯಂತಿ ಏಳುವರ್ಷಗಳಕಾಲ ಗರ್ಭಧಾರಣಮಾಡಿ, ಕಷ್ಟಪಡುತ್ತಿರಲಾಗಿ ವಸಿಷ್ಠನು ಆಕೆಯ ಗರ್ಭವನ್ನು ಅಶ್ಮದಿಂದ(ಕಲ್ಲಿನಿಂದ) ಸೀಳಿ ಮಗುವನ್ನು ಹೊರತೆಗೆದ ಕಾರಣ ಆ ಮಗುವಿಗೆ ಈ ಹೆಸರು ರೂಢವಾಯಿತು. [ಭಾರ.-ಆ. ೧೭೮,೧೯೩. ವಿಷ್ಣು. ೪.೪].

(ii) ಒಬ್ಬ ಬ್ರಾಹ್ಮಣ ಈತನು ವಿದೇಹ ಜನಕನಿಗೆ ಸಂಸಾರವನ್ನು ತೊರೆಯುವ ಉಪಾಯಗಳನ್ನೂ ಸುಖದುಃಖಗಳ ನಿವೃತ್ತಿಪ್ರಕಾರವನ್ನೂ ಬೋಧಿಸಿದನು [ಶಾಂತಿ. ೨೮].

(iii) ಕಲ್ಮಾಷಪಾದನ ಮಗನಾದ ಅಶ್ಮಕನು ಪರಿಪಾಲಿಸುತ್ತಿದ್ದ ದೇಶ. ಇವನು ಭಾರತಯುದ್ಧದಲ್ಲಿ ಅಭಿಮನ್ಯುವಿನಿಂದ ಮಡಿದನು [ಸಭಾ. ೭೮. ದ್ರೋ. ೩೭]

**ಅಶ್ವತರ**—ಸರ್ಪರಾಜ ಇವನ ಮಕ್ಕಳೂ ಕುವಲಾಶ್ವನೂ ಆಪ್ತಮಿತ್ರರು ಕುವಲಾಶ್ವನ ರಾಣಿಯಾದ ಮದಾಲಸೆ ಮಡಿದುದರಿಂದ ಸಂಕಟಪಡುತ್ತಿದ್ದ ಕುವಲಾಶ್ವನನ್ನು ಸಂತವಿಸಿ, ಅಶ್ವತರನು ತಾನು ಸರಸ್ವತಿಯ ಅನುಗ್ರಹದಿಂದ ಪಡೆದಿದ್ದ ಗಾನವಿದ್ಯೆಯಿಂದ ಶಿವನನ್ನು ಮೆಚ್ಚಿಸಿ, ಮದಾಲಸೆಯನ್ನು ಬದುಕಿಸಿದನು [ಮಾರ್ಕ.-೧೯-೨೬ ಭಾರ -ಆ ೩೫ ಉ ೧೦೩]

**ಅಶ್ವತೀರ್ಥ.**—ಕನ್ಯಾಕುಬ್ಜದ ಬಳಿ ಗಂಗಾಯಮುನೆಗಳ ಸಂಗಮದಲ್ಲಿರುವ ಒಂದು ತೀರ್ಥ. ಋಚೀಕಮುನಿ ಗಾಧಿಪುತ್ರಿಯಾದ ಸತ್ಯವತಿಯನ್ನು ತನಗೆ ಕೊಡುವಂತೆ ಬೇಡಲಾಗಿ, ಗಾಧಿ ಒಂದು ಕಿವಿ ಕಪ್ಪಗೂ ಮೈಯೆಲ್ಲಾ ಬೆಳ್ಳಗೂ ಇರುವ ಒಂದು ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ಬೇಡಿದನು ಆಗ ಋಚೀಕನ ಮಹಿಮೆಯಿಂದ ಇಂತಹ ಸಾವಿರ ಕುದುರೆಗಳು ನದಿಯಿಂದ ಹೊರಬಂದುವು. ಇದರಿಂದ ಆ ಪ್ರದೇಶವು ಅಶ್ವತೀರ್ಥವೆಂದು ಪ್ರಖ್ಯಾತಿಪಡೆಯಿತು ಇದು ಈಗಣ ಕನೂಜ್ ಜಿಲ್ಲೆಯಲ್ಲಿದೆ [ಭಾರ -ವನ ೯೩, ೧೧೬]

**ಅಶ್ವತ್ಥ** —(i) ಪಾರ್ವತೀಪರಮೇಶ್ವರರು ಕ್ರೀಡಾಸಕ್ತರಾಗಿದ್ದಾಗ, ದೇವತೆಗಳ ಸೂಚನೆಯಂತೆ ಅಗ್ನಿ ಅವರ ಕ್ರೀಡೆಗೆ ಭಂಗವನ್ನುಂಟುಮಾಡಿದನು ಪಾರ್ವತಿ ಸಿಟ್ಟಿನಿಂದ ದೇವತೆಗಳನ್ನೆಲ್ಲ ಮರವಾಗುವಂತೆ ಶಾಪವಿತ್ತಳು ಆಗ ವಿಷ್ಣು ಅಶ್ವತ್ಥವೃಕ್ಷವಾದನು [ಪದ್ಮ].

(ii) ಒಬ್ಬ ರಾಕ್ಷಸ ಇವನೂ ಇವನ ತಮ್ಮನಾದ ಪಿಪ್ಪಲನೂ ವೃಕ್ಷರೂಪವನ್ನು ಧರಿಸಿ, ತಮ್ಮ ನೆರಳಿನಲ್ಲಿ ಬಂದವರನ್ನೆಲ್ಲ ನುಂಗುತ್ತಿದ್ದರು ಬ್ರಾಹ್ಮಣರೆಲ್ಲರೂ ಸೂರ್ಯಪುತ್ರನಾದ ಶನೈಶ್ಚರನನ್ನು ಮರೆಹುಗಲು, ಶನೈಶ್ಚರನು ಆ ಬ್ರಾಹ್ಮಣರ ತಪಶ್ಶಕ್ತಿಯನ್ನು ತಾನು ಸ್ವೀಕರಿಸಿ, ಅವರಿಬ್ಬರನ್ನೂ ಕೊಂದರು [ಬ್ರಹ್ಮ]

**ಅಶ್ವತ್ಥಾಮಾ**—(i) ಮಾಲವ ದೇಶದ ಅರಸನಾದ ಇಂದ್ರವರ್ಮನ ಆನೆ. ಇದನ್ನು ಭೀಮನು ಕೊಂದನು [ಭಾರ ದ್ರೋ. ೧೯೧, ೧೯೪].

(ii) ದ್ರೋಣಾಚಾರ್ಯರಿಂದ ಕೃಪಿಯೆಂಬಾಕೆಯಲ್ಲಿ ಜನಿಸಿದವನು. ಹಾಲಿಗೆ ಪ್ರತಿಯಾಗಿ ಪಿಷ್ಟೋದಕವನ್ನು ಪಾನಮಾಡಿದನು [ಭಾರ.-ಆ. ೬೪, ೬೮, ೧೪೦].

ಈತನು ಹುಟ್ಟಿದ ಕೂಡಲೇ ಕುದುರೆಯಹಾಗೆ ಅರಚಿದನು ಆಗ ಇವನಿಗೆ ಅಶ್ವತ್ಥಾಮನೆಂದು ಹೆಸರಿಡುವಂತೆ ಆಕಾಶವಾಣಿ ನುಡಿದುದು [ಆದಿ.೧೪೦ ದ್ರೋ೧೯೭] ಅಸಂಖ್ಯೇಯ ಗುಣರಥನು [ಉದ್ಯೋ ೧೬೭] ದ್ರೋಣನು ಅರ್ಜುನನನ್ನು ಸಂಧಿಸಿ ಯುದ್ಧಮಾಡಲಾರದೆ ತಲ್ಲಣಿಸುತ್ತಿದ್ದಾಗ, ಇವನು ಅರ್ಜುನನನ್ನು ಇದಿರಿಸಿ ದ್ರೋಣನನ್ನು ಪಾರುಮಾಡಿದನು [ವಿರಾ ೫೯] ಅರ್ಜುನನ ಸಂಗಡ ಯುದ್ಧಮಾಡಿ ಸೋತನು [ವಿರಾ ೬೦ ಕರ್ಣ ೫೩] ಅರ್ಜುನನನ್ನು ಹೊಗಳಿ ಕರ್ಣನನ್ನು ನಿಂದಿಸಿದನು [ವಿರಾ ೬೪] ಮಾಹಿಷ್ಮತಿಯ ಅರಸನಾದ ನೀಲರಾಜನ ಸಂಗಡ ಯುದ್ಧ [ದ್ರೋ ೩೧]. ಘಟೋತ್ಕಚನೊಂದಿಗೆ ಯುದ್ಧ [ದ್ರೋ ೧೫೭] ದ್ರೋಣವಧಾನಂತರ ದುರ್ಯೋಧನನು ಸೇನಾಧಿಕಾರವನ್ನು ಅಶ್ವತ್ಥಾಮನಿಗೆ ಕೊಡದೆ ಕರ್ಣನಿಗೆ ಕೊಟ್ಟನು ಆ ಸಂದರ್ಭದಲ್ಲಿ ಕರ್ಣನಿಗೂ ಕೃಪನಿಗೂ ನಡೆದ ವಾಗ್ವಾದದಲ್ಲಿ ಕರ್ಣನು ಕೃಪನನ್ನು ತಿರಸ್ಕರಿಸಲಾಗಿ, ಇವನು ಕರ್ಣನನ್ನು ಕೊಲ್ಲಲು ಪ್ರಯತ್ನಮಾಡಿ ಕೃಪ ದುರ್ಯೋಧನರಿಂದ ಅಡ್ಡಗಿಸಲ್ಪಟ್ಟನು [ದ್ರೋ ೧೬೦] ನಾರಾಯಣಾಸ್ತ್ರ ಪ್ರಯೋಗ [ದ್ರೋ ೨೦೦] ಯುದ್ಧಮಾಡಲಾರದೆ ಶಸ್ತ್ರತ್ಯಾಗಮಾಡಿ ಓಡಿಹೋದನು [ದ್ರೋ ೨೦೨] ಭೀಮನೊಂದಿಗೆ ಯುದ್ಧ [ಕ ೧೨] ಯುಧಿಷ್ಠಿರನು ಅಶ್ವತ್ಥಾಮನನ್ನು ನಿಂದಿಸಿದ್ದು [ಕ. ೫೦] ಪಾಂಡ್ಯರಾಜನನ್ನು ಕೊಂದನು [ಕ. ೫೬]. ಧೃಷ್ಟದ್ಯುಮ್ನನೊಂದಿಗೆ ಯುದ್ಧ [ಕ ೫೮] ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವ ಹಾಗೆ ದುರ್ಯೋಧನನಿಗೆ ಪ್ರೇರಣೆ [ಕ ೯೪] ದುರ್ಯೋಧನನು ಮಡುವಿನಲ್ಲಿ ಅವಿತುಕೊಂಡಿದ್ದಾಗ ಕೃಪ, ಕೃತವರ್ಮರೊಂದಿಗೆ ದುರ್ಯೋಧನನ ಬಳಿಗೆ ಹೋದನು [ಶಲ್ಯ ೩೦] ದುರ್ಯೋಧನನು ಅಶ್ವತ್ಥಾಮನಿಗೆ ಸೇನಾಧಿಪತಿತ್ವವನ್ನು ಒಪ್ಪಿಸಿದನು. ಅಶ್ವತ್ಥಾಮನು ಪಾಂಡವರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದನು [ಶಲ್ಯ ೬೬. ಸೌಪ್ತಿ ೩]. ಗೂಬೆ ಅನೇಕ ಕಾಗೆಗಳನ್ನು ಕೊಂದುದನ್ನು ಕಂಡು, ಪಾಂಡವರನ್ನೂ ತಾನು ಅಂತೆಯೇ ಕೊಲ್ಲಬಹುದೆಂದು ನಿಶ್ಚಯಿಸಿದ್ದು [ಸೌ ೧] ಪಾಂಡವರ ಶಿಬಿರದ ಬಾಗಿಲಿನಲ್ಲಿ ಅಶ್ವತ್ಥಾಮನಿಗೆ ಮಹಾಭೂತ ದರ್ಶನ [ಸೌ ೬]. ತನ್ನ ದೇಹವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟು ಶಿವನನ್ನು ಮೆಚ್ಚಿಸಿ, ಶೈವ ತೇಜಸ್ಸನ್ನು ಪಡೆದುದು [ಸೌ ೭]. ಪಾಂಡವರ ಶಿಬಿರದಲ್ಲಿ ಧೃಷ್ಟದ್ಯುಮ್ನ, ಶಿಖಂಡಿ ಮತ್ತು ಉಪ ಪಾಂಡವರನ್ನು ಕೊಂದುದು [ಸೌ. ೮] ದ್ರೌಪದಿಯ ಪ್ರೇರಣೆಯಿಂದ ಭೀಮನು ಅಶ್ವತ್ಥಾಮನನ್ನು ಕೊಲ್ಲಲು ಪ್ರಯತ್ನ [ಸೌ. ೧೧. ಭಾಗ. ೧, ೭] ಪಾಂಡವರ ವಧೆಗಾಗಿ ಅಶ್ವತ್ಥಾಮನು ಬ್ರಹ್ಮಾಸ್ತ್ರ (ಅಪಾಂಡವೇಯಾಸ್ತ್ರ ಅಥವಾ ಐಷೀಕಾಸ್ತ್ರ) ವನ್ನು ಪ್ರಯೋಗಿಸಿದ್ದು [ಸೌ. ೧೩]. ಕೃಷ್ಣನಿಂದ ಶಾಪ ಮತ್ತು ಪಾಂಡವರು ಅವನ ಶಿರೋರತ್ನವನ್ನು ಕಸುಗೊಂಡುದು [ಸೌ. ೧೬. ಭಾಗ. ೧, ೭].

**ಅಶ್ವನದಿ** —ಚರ್ಮಣ್ವತೀ ನದಿಯ ಒಂದು ಉಪನದಿ ಕುಂತಿ ಕರ್ಣನನ್ನು ಹೆತ್ತಕೂಡಲೇ ಒಂದು ಪೆಟ್ಟಿಗೆಯಲ್ಲಿಟ್ಟು ಈ ನದಿಯಲ್ಲಿ ತೇಲಿಬಿಟ್ಟಳು [ವನ ೩೦೯].

**ಅಶ್ವಪತಿ** —(i) ಕೇಕಯ ದೇಶದ ಅರಸು ದಶರಥನ ಕಿರಿಯ ರಾಣಿಯಾದ ಕೇಕಯಿ ಈತನ ಮಗಳು ಈತನ ಮಗನು ಯುಧಾಜಿತ್ತು ಅಶ್ವಪತಿ ಒಬ್ಬ ಮುನಿಯ ಅನುಗ್ರಹದಿಂದ ತಿರ್ಯಗ್ಜಂತುಗಳ ಭಾಷೆಯನ್ನು ತಿಳಿದಿದ್ದನು. ಒಮ್ಮೆ ಒಂದು ಇರುವೆಯ ಮಾತನ್ನು ಕೇಳಿ ನಕ್ಕನು ಸಮೀಪದಲ್ಲಿದ್ದ ರಾಣಿ ಅಂತು ನಗುವುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಿದಳು ಅಶ್ವಪತಿ "ಅದನ್ನು ನಾನು ನಿನಗೆ ಹೇಳಲಾಗದು ಹೇಳಿದೆನಾದರೆ ಒಡನೆಯೇ ಸಾಯುವೆನು" ಎಂದನು. ರಾಣಿ ಅದಕ್ಕೆ ಸುಮ್ಮನಿರದೆ ಬಲಾತ್ಕರಿಸಲಾಗಿ, ಅಶ್ವಪತಿ ಸಿಟ್ಟುಗೊಂಡು ತನ್ನ ಮಡದಿಯನ್ನು ಮನೆಯಿಂದ ಹೊರಡಿಸಿದನು [ರಾಮಾ -ಅಯೋ ೧, ೩೫].

(ii) ಮದ್ರದೇಶದ ಅರಸು ಈತನ ರಾಣಿ ಮಾಲತಿ. ಈತನು ಸಂತಾನಾಪೇಕ್ಷೆಯಿಂದ ೧೮ ವರ್ಷಗಳ ಕಾಲ ಸಾವಿತ್ರಿಯನ್ನು ಉಪಾಸನೆಮಾಡಿ, ಬ್ರಹ್ಮನ ಅನುಗ್ರಹದಿಂದ ಒಬ್ಬ ಮಗಳನ್ನು ಪಡೆದು ಆ ಮಗಳಿಗೆ ಸಾವಿತ್ರಿಯೆಂಬ ಹೆಸರಿಟ್ಟು, ದ್ಯುಮತ್ಸೇನನ ಮಗನಾದ ಸತ್ಯವಂತನಿಗೆ ಕೊಟ್ಟನು [ಭಾರ -ವನ. ೨೯೪. ಬ್ರಹವೈ ಪ್ರಕೃತಿಖಂ. ೨೩]

**ಅಶ್ವಮೇಧ** —ಅತ್ಯುತ್ತಮವಾದ ಯಜ್ಞ [ಭಾರ -ಆ ೧೨೯ ವನ. ೧೦೬ ಶಾಂತಿ ೧೫೧ ಅಶ್ವ ೯೦ ರಾಮಾ ಬಾಲ ೧೪]

**ಅಶ್ವಶಿರಸ್** —(i) ಒಬ್ಬ ಮಹರ್ಷಿ ಬದರಿಕಾಶ್ರಮದಲ್ಲಿ ವಾಸವಾಗಿದ್ದನು ಈತನು ಅನುದಿನವೂ ಒಮ್ಮೆ ಸಮಗ್ರವಾಗಿ ವೇದವನ್ನು ಪಾರಾಯಣ ಮಾಡುತ್ತಿದ್ದನು [ಶಾಂತಿ ೧೨೭] ಈತನು ಅಥರ್ವಾಂಗಿರಸರೆಂಬ ಋಷಿಗಳ ಮಗನು [ಭಾಗ -೪ ೧]

(ii) ಒಬ್ಬ ಅರಸು ಒಮ್ಮೆ ಈತನ ಯಜ್ಞಶಾಲೆಗೆ ಕಪಿಲ ಮತ್ತು ಜೈಗೀಷವ್ಯರೆಂಬ ಇಬ್ಬರು ಮುನಿಗಳು ಬಂದು ನಾನಾ ರೂಪಗಳಿಂದ ಈತನನ್ನು ಮೋಹಗೊಳಿಸಿದರು. ಬಳಿಕ ಅಶ್ವಶಿರನು ಆ ಮುನಿಪುಂಗವರಿಂದ ಪರಮಾತ್ಮನ ಪಾರಮಾರ್ಥಿಕ ಸ್ವರೂಪವನ್ನು ತಿಳಿದು ತನ್ನ ಮಗನಾದ ಸ್ಥೂಲಶಿರನಿಗೆ ಪಟ್ಟಗಟ್ಟಿ, ತಾನು ತಪಸ್ಸಿಗೆ ಹೋದನು [ವರಾ]

**ಅಶ್ವಸೇನ** —ಸರ್ಪರಾಜನಾದ ತಕ್ಷಕನ ಮಗನು ಖಾಂಡವವನ ದಹನ ಸಮಯದಲ್ಲಿ ಬದುಕಿಕೊಂಡ ಸರ್ಪಗಳಲ್ಲಿ ಇವನೂ ಒಬ್ಬನು [ಭಾರ -ಆದಿ. ೨೫೩, ೨೫೪. ಶಲ್ಯ. ೬೨] ಕರ್ಣನು ಅರ್ಜುನನನ್ನು ಕೊಲ್ಲಲು ಪ್ರಯೋಗಿಸಿದ ನಾಗಾಸ್ತ್ರದಲ್ಲಿ ಹೊಕ್ಕು ಅರ್ಜುನನಿಂದ ಹತನಾದನು [ಕರ್ಣ ೯೭].

**ಅಶ್ವಿನೀ.**—ದಕ್ಷನ ಮಗಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು [ಭಾರ.-ಆದಿ. ೬೬, ೬೭ ಭಾಗ ೬, ೫].

**ಅಶ್ವಿನೀಕುಮಾರರು**—ದೇವತೆಗಳ ವೈದ್ಯರು ಸೂರ್ಯಪತ್ನಿಯಾದ ಸಂಜ್ಞಾ ದೇವಿ ಕುದುರೆಯ ರೂಪದಿಂದಿದ್ದಾಗ ಸೂರ್ಯನಿಂದ ಹುಟ್ಟಿದ ಅವಳಿಮಕ್ಕಳು ಮಹಾರೂಪವಂತರು [ಭಾರ -ಆ ೬೭ ಭಾಗ -೬, ೬ ವರಾಹ ೨೦ ವಾಯು ೮೪ ಹರಿ -೧, ೯ ಬ್ರಹ್ಮವೈ ೬ ಪಾದ್ಮ -೫, ೮. ವಿಷ್ಣು -೩, ೨ ಶಿವಪು. ಉಮಾ ೩೫] ಒಮ್ಮೆ ಇವರು ಚ್ಯವನಪತ್ನಿಯಾದ ಸುಕನ್ಯೆಯ ಪಾತಿವ್ರತ್ಯಕ್ಕೆ ಮೆಚ್ಚಿ ವೃದ್ಧನಾದ ಚ್ಯವನನಿಗೆ ಸೌಂದರ್ಯ, ತಾರುಣ್ಯಗಳನ್ನು ಅನುಗ್ರಹಿಸಿ, ಆತನ ಮೂಲಕ ಶರ್ಯಾತಿ ರಾಜನು ಮಾಡಿದ ಯಜ್ಞದಲ್ಲಿ ಮಿಕ್ಕ ದೇವತೆಗಳಂತೆಯೇ ಹವಿರ್ಭಾಗವನ್ನು ಪಡೆದರು [ವನ -೧೨೪] ಆಪೋದನೆಂಬ ಧೌಮ್ಯ ಮುನಿಯ ಶಿಷ್ಯನಾದ ಉಪ ಮನ್ಯು ಎಕ್ಕದೆಲೆಗಳನ್ನು ತಿಂದು ಕುರುಡನಾಗಿ ಇವರನ್ನು ಹೊಗಳಿ, ಮರಳಿ ಕಣ್ಣುಗಳನ್ನು ಪಡೆದನು [ಆದಿ -೩] ಪಾಂಡುವಿನ ಎರಡನೆಯ ಹೆಂಡತಿಯಾದ ಮಾದ್ರಿ ಇವರ ಮೂಲಕ ನಕುಲ, ಸಹದೇವರನ್ನು ಪಡೆದಳು [ಆದಿ -೬೩, ೧೩೩] ಇವರು ದೇವತೆಗಳಲ್ಲಿ ಶೂದ್ರ ಜಾತಿಗೆ ಸೇರಿದವರು [ಶಾಂತಿ ೨೦೭]

**ಅಷ್ಟಕ**—ಒಬ್ಬ ಋಷಿ ಯಯಾತಿ ಪುತ್ರಿಯಾದ ಮಾಧವಿಯಲ್ಲಿ ವಿಶ್ವಾಮಿತ್ರನಿಂದ ಜನಿಸಿದವನು [ಉದ್ಯೊ ೧೧೯] ಈತನು ತನ್ನ ಮಾತಾಮಹನಾದ ಯಯಾತಿಯೊಂದಿಗೆ ಅನೇಕ ವಿಷಯಗಳನ್ನು ಚರ್ಚಿಸಿದನು [ಆದಿ -೮೨ ಮತ್ಸ್ಯ ೩೮, ಹರಿ.-೧, ೨೭].

**ಅಷ್ಟಮೂರ್ತಿ**—ಈಶ್ವರನ ನಾಮಾಂತರ

| | ಹೆಸರು | ಸ್ಥಾನ | ಹೆಂಡತಿ | ಸಂತಾನ |
|---|---|---|---|---|
| ೧ | ಭವ | ಜಲ | ಉಷೆ | ಶುಕ್ರ |
| ೨ | ಶರ್ವ | ಭೂಮಿ | ಸುಕೇಶಿ | ಅಂಗಾರಕ |
| ೩. | ಈಶಾನ | ವಾಯು | ಶಿವೆ | ಹನೂಮಂತ |
| ೪. | ಪಶುಪತಿ | ಅಗ್ನಿ | ಸ್ವಾಹಾ | ಸ್ಕಂದ |
| ೫ | ಭೀಮ | ಆಕಾಶ | ದಿಕ್ಕು | ಸ್ವರ್ಗ |
| ೬. | ಉಗ್ರ | ಧಾರ್ಮಿಕ ಬ್ರಾಹ್ಮಣ | ದೀಕ್ಷೆ | ಸಂತಾನ |
| ೭. | ಮಹಾದೇವ | ಚಂದ್ರ | ರೋಹಿಣಿ | ಬುಧ |
| ೮. | ರುದ್ರ | ಸೂರ್ಯ | ಸುವರ್ಚಲೆ | ಶನೈಶ್ಚರ |

**ಅಷ್ಟವಸು** —ಧರ್ಮಪ್ರಜಾಪತಿಯಿಂದ ದಕ್ಷಪುತ್ರಿಯಾದ ವಸುಯೆಂಬವಳಲ್ಲಿ ಜನಿಸಿದವರು ಧರ, ಧ್ರುವ, ಸೋಮ, ಅಹ, ಅನಿಲ, ಪ್ರತ್ಯೂಷ, ಪ್ರಭಾಸ ರೆಂಬುದಾಗಿ ಎಂಟು ಮಂದಿ [ಭಾರ -ಆ. ೬೭] ಅಹನೆಂಬವನಿಗೆ ಸಾವಿತ್ರನೆಂಬುದು ನಾಮಾಂತರ [ಅನು.-೨೫೫] ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು, ವಿಭಾವಸುಗಳೆಂಬ ಎಂಟು ಮಂದಿ [ಭಾಗ -೬, ೬] ಆಪ, ಧ್ರುವ, ಸೋಮ, ಧರ್ಮ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸರೆಂಬುದಾಗಿ ಎಂಟು ಮಂದಿ [ವಿಷ್ಣು -೧, ೨೫] ಆಪ, ಧರ, ಧ್ರುವ, ಸೋಮ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸರೆಂಬುದಾಗಿ ಎಂಟು ಮಂದಿ [ಹರಿ -೧ ೩] ಒಮ್ಮೆ ಇವರೆಂಟು ಮಂದಿಯೂ ತಮ್ಮ ಮಡದಿಯರೊಂದಿಗೆ ಸಂಚರಿಸುತ್ತ, ವಸಿಷ್ಠನ ಆಶ್ರಮದ ಬಳಿ ನಂದಿನೀಧೇನು ವನ್ನು ಕಂಡು ಅಪಹರಿಸ ತೊಡಗಿ, ಭೂಲೋಕದಲ್ಲಿ ಜನಿಸುವಂತೆ ಶಾಪವನ್ನು ಪಡೆದು, ಆಗ್ಗೆ ಶಂತನು ಚಕ್ರವರ್ತಿಯ ಹೆಂಡತಿಯಾಗಿದ್ದ ಗಂಗೆಯಲ್ಲಿ ಮಾನುಷರಾಗಿ ಜನಿ ಸಿದರು ಹಿರಿಯವನಾದ ಆಪನೆಂಬವನು ವಸಿಷ್ಠನ ಶಾಪಕ್ಕೆ ಮೂಲಕಾರಣವಾದು ದರಿಂದ ಅವನು ಭೀಷ್ಮಾಚಾರ್ಯನಾಗಿ ಜನಿಸಿ, ಬಹುಕಾಲ ಬದುಕಿದ್ದನು ಮಿಕ್ಕ ಏಳು ಮಂದಿಯೂ ಹುಟ್ಟಿದೊಡನೆಯೇ ಸತ್ತು ಶಾಪವನ್ನು ನೀಗಿಕೊಂಡು ತಮ್ಮ ಹಿಂದಣ ದೇಹವನ್ನು ಪಡೆದರು [ಆದಿ.-೧೦೨] ಇವರ ಸಂತಾನ ಮತ್ತು ವಂಶಾನು ಕ್ರಮಣಿಕೆ [ಆದಿ -೬೭]

**ಅಷ್ಟಾವಕ್ರ** —ಒಬ್ಬ ಋಷಿ ಉದ್ದಾಲಕಮುನಿಯ ಮಗಳಾದ ಸುಜಾತೆ ಯಲ್ಲಿ ಕಹೋಳಮುನಿಯಿಂದ ಜನಿಸಿದವನು ಶ್ವೇತಕೇತು ಮಹರ್ಷಿ ಈತನ ಸೋದರ ಮಾವನು ಕಹೋಳಮುನಿ ಒಮ್ಮೆ ವೇದಾಧ್ಯಯನಮಾಡುತ್ತ ಅಪಸ್ವರವನ್ನು ನುಡಿದನು ಆಗ್ಗೆ ಗರ್ಭದಲ್ಲಿದ್ದ ಶಿಶು (ಅಷ್ಟಾವಕ್ರನು) ನಗಲಾಗಿ, ಸಿಟ್ಟುಗೊಂಡ ಕಹೋಳಮುನಿ ಇವನನ್ನು ಅಷ್ಟಾವಕ್ರನಾಗುವಂತೆ ಶಾಪವಿತ್ತನು. ಕಹೋಳನು ಜನಕರಾಜನ ಯಜ್ಞದಲ್ಲಿ ವಾದಮಾಡಿ ಸೋತು ಜಲಾಧಿವಾಸವನ್ನು ಅನುಭವಿಸು ತ್ತಿರಲಾಗಿ, ಅಷ್ಟಾವಕ್ರನು ತನ್ನ ಜನನಿಯಿಂದ ಆ ಸುದ್ದಿಯನ್ನು ತಿಳಿದು ಜನಕ ನಲ್ಲಿಗೆ ಹೋಗಿ ಆತನನ್ನೂ, ವರುಣಪುತ್ರನಾದ ಬಂದಿಯನ್ನೂ ಸೋಲಿಸಿ, ತನ್ನ ತಂದೆ ಯನ್ನೂ ಮಾತಾಮಹನಾದ ಉದ್ದಾಲಕನನ್ನೂ ಕರೆತಂದನು ಬಳಿಕ ತಂದೆಯ ಸೂಚನೆಯಂತೆ ಸಮಂಗಾ ನದಿಯಲ್ಲಿ ಸ್ನಾನಮಾಡಿ ತನ್ನ ದೇಹದ ವಕ್ರತೆಯನ್ನು ನೀಗಿಕೊಂಡನು [ಭಾರ -ವನ ೧೩೪,೧೩೫,೧೩೬] ಈತನು ವದಾನ್ಯನೆಂಬ ಮುನಿಯ ಮಗಳಾದ ಸುಪ್ರಭೆಯನ್ನು ಮದುವೆಯಾದನು [ಭಾರ -ಅನು ೫೦, ೫೨]

**ಅಸಮಂಜ** —(1) ಇಕ್ಷ್ವಾಕುವಂಶದ ಸಗರಚಕ್ರವರ್ತಿಯಿಂದ ಅರಿಷ್ಟನೇಮಿ ಪುತ್ರಿಯಾದ ಸುಮತಿಯೆಂಬವಳಲ್ಲಿ ಜನಿಸಿದವನು. ಇವನು ಬೀದಿಯಲ್ಲಿ ಆಡುವ

ಮಕ್ಕಳನ್ನೆಲ್ಲ ಸರಯೂ ನದಿಯಲ್ಲಿ ತಳ್ಳಿ ಹಿಗ್ಗುತ್ತಿದ್ದ ಕಾರಣ, ಪ್ರಜೆಗಳು ಸಗರನಲ್ಲಿ ಮೊರೆಯಿಡಲಾಗಿ ಸಗರನು ಇವನನ್ನು ರಾಜ್ಯದಿಂದ ಹೊರಡಿಸಿದನು. ಇವನ ಮಗನು ಅಂಶುಮಂತನು [ಭಾರ -ವನ ೧೦೭ ಭಾಗ -೯ ಅ. ಹರಿ.-೧. ೧೫ ವಿಷ್ಣು.-೪. ೪]. ಸುಮತಿಗೆ ಕೇಶಿನಿಯೆಂಬುದು ನಾಮಾಂತರ [ರಾಮಾ -ಬಾಲ. ೪೧]

(ii) ಭೋಜನೆಂಬ ರಾಜನ ಮಗನು ಪಟ್ಟಣವಾಸಿಗಳ ಹಿತಕ್ಕಾಗಿ ಭೋಜನು ಇವನನ್ನು ದೇಶದಿಂದ ಹೊರದೂಡಿದನು [ಸಭಾ.೮೬] ಇವನು ಮೇಲೆ ಹೇಳಿದ ಅಸಮಂಜನೇ ಇರಬಹುದೆಂದು ತೋರುತ್ತದೆ. ಭೋಜನೆಂಬುದು ಸಗರನ ನಾಮಾಂತರವಾಗಿರಬಹುದು

**ಅಸಿಕ್ನೀ**—(i) ದಕ್ಷಬ್ರಹ್ಮನ ಹೆಂಡತಿ ದಕ್ಷನು ಅಘಮರ್ಷಣ ತೀರ್ಥದ ಬಳಿ ತಪಸ್ಸುಮಾಡುತ್ತಿದ್ದಾಗ ವಿಷ್ಣು ದಕ್ಷನ ಬಳಿಗೆ ಬಂದು ಪಂಚಜನನೆಂಬ ಬ್ರಹ್ಮನ ಮಗಳಾದ ಅಸಿಕ್ನಿಯನ್ನು ದಕ್ಷನಿಗೆ ಕೊಡಿಸಿ ಮದುವೆಮಾಡಿದನು ಈಕೆಗೆ ವೀರಿಣಿಯೆಂಬುದು ನಾಮಾಂತರ ಈಕೆ ದಕ್ಷನಿಂದ ಹರ್ಯಶ್ವ, ಶಬಲಾಶ್ವರೆಂಬ ಪುತ್ರರನ್ನೂ ಅರವತ್ತು ಮಂದಿ ಪುತ್ರಿಯರನ್ನೂ ಪಡೆದಳು [ಭಾಗ -೬, ೫]

(ii) ಒಂದು ನದಿ ಚಂದ್ರಭಾಗಾ (ಚನಾಬ್) ಎಂಬುದಾಗಿ ರೂಢವಾಗಿದೆ [ಭೀಷ್ಮ ೯]

**ಅಸಿತ.**—ಒಬ್ಬ ಪುರಾತನ ಮಹರ್ಷಿ ಮರೀಚಿ ಮುನಿಯ ವಂಶದಲ್ಲಿ ಜನಿಸಿದವನು ಈತನು ಹಿಮವಂತನ ಮಗಳಾದ ಏಕಪರ್ಣೆಯನ್ನು ಮದುವೆಯಾಗಿದ್ದನು ಈತನ ಸ್ಮರಣೆಯಿಂದ ಸರ್ಪಭೀತಿ ತೊಲಗುವುದು [ಭಾರ.-ಆ ೫೩, ೫೮ ಸ ೪. ಶ ೫೧ ಶಾಂತಿ ೨೩೬, ೨೮೧ ಹರಿ.-೧ ೧೮]

**ಅಸಿಪತ್ರ**—ಒಂದು ನರಕ [ಭಾರ -ಅನು ೨೩೦ ಭಾಗ -೫. ೨೬ ವಿಷ್ಣು.-೨ ೬ ಮಾರ್ಕ ೧೧ ದೇ ಭಾ -೮ ೨೧ ಶಿವ - ಉಮಾ. ೮ ಸ್ಕಾ. ಮಾಹೇ. ೩೯.- ಬ್ರಹ್ಮವೈ.-೨೯].

**ಅಸಿಲೋಮ**—ದನುವಂಶದ ಒಬ್ಬ ರಾಕ್ಷಸನು. ವಿಷ್ಣು ವಾಮನಾವತಾರದಲ್ಲಿ ಇವನನ್ನು ಕೊಂದನು [ಭಾರ -ಆ ೬೬].

**ಅಸೀ.**—ಕಾಶೀ ಕ್ಷೇತ್ರದ ಬಳಿ ಗಂಗೆಯಲ್ಲಿ ಬೀಳುವ ಒಂದು ನದಿ

**ಅಸುರ**—ರಾಕ್ಷಸರು. ಇವರು ಚತುರ್ಮುಖನ ಜಘನ ಪ್ರದೇಶದಿಂದ ಜನಿಸಿ, ಆತನೊಡನೆ ಕ್ರೀಡಿಸತೊಡಗಿದರು ಬ್ರಹ್ಮನು ವಿಷ್ಣುವನ್ನು ಮರೆಹೊಕ್ಕು ಆತನ ಸೂಚನೆಯಂತೆ ತನ್ನ ದೇಹವನ್ನು ತ್ಯಾಗಮಾಡಲಾಗಿ ಆ ದೇಹದಿಂದ ದಿವ್ಯಸೌಂದರ್ಯ ಭರಿತೆಯಾದ ಲಲನಾರತ್ನ ಹೊರಬಂದಿತು. ಅಸುರರು ಆಕೆಯನ್ನು ಸ್ವೀಕರಿಸಿ ಹಿಂದೆರಳಿದರು [ಭಾಗ.-೬. ೧೮, ೮, ೧೦]. ಅಸುರರ ವಂಶಾವಳಿ [ಭಾರ.-ಆದಿ.೬೬.

ಶಾಂತಿ ೨೩೪. ಭಾಗ -೬, ೧೮ ವಿಷ್ಣು -೧ ೨೧]. ಅಸುರರು ಭೂಮಿಯಲ್ಲಿ ಅರಸರಾಗಿ ಜನಿಸುವಿಕೆ [ಭಾರ -ಆ ೬೫]

**ಅಸ್ತಿ.**—ಜರಾಸಂಧನ ಮಗಳು. ಇವಳೂ ಇವಳ ತಂಗಿಯಾದ ಪ್ರಾಸ್ತಿ (ಪ್ರಾಪ್ತಿ) ಯೂ ಕಂಸನನ್ನು ಮದುವೆಯಾದರು [ಸಭಾ ೧೪].

**ಅಹ** —ಅಷ್ಟವಸುಗಳಲ್ಲಿ ಒಬ್ಬನು ನೋಡು—ಅಷ್ಟವಸು ಇವನಿಗೆ ಜ್ಯೋತಿ, ಶವು, ಶಾನ್ತ, ಮುನಿ ಯೆಂಬುದಾಗಿ ನಾಲ್ವರು ಪುತ್ರರು [ಭಾರ.-ಆದಿ ೬೭]

**ಅಹಂಯಾತಿ** —ಒಬ್ಬ ಅರಸು ಚಂದ್ರವಂಶದ ಶರ್ಯಾತಿ ರಾಜನಿಂದ ತ್ರಿಶಂಕು ಪುತ್ರಿಯಾದ ವರಾಂಗಿಯೆಂಬವಳಲ್ಲಿ ಜನಿಸಿದವನು ಇವನು ಕೃತವೀರ್ಯನ ಮಗಳಾದ ಭಾನುಮತಿಯನ್ನು ಮದುವೆಯಾಗಿ ಸಾರ್ವಭೌಮನನ್ನು ಪಡೆದನು [ಭಾರ -ಆ ೬೩]

**ಅಹಲ್ಯಾ** —ಗೌತಮ ಮುನಿಯ ಹೆಂಡತಿ. ಪಂಚಕನ್ಯೆಯರಲ್ಲಿ ಒಬ್ಬಳು. ಉದಂಕನೆಂಬ ಮುನಿಕುಮಾರನು ಗೌತಮನಲ್ಲಿ ವಿದ್ಯಾಭ್ಯಾಸಮಾಡಿದ ಬಳಿಕ, ಯಾವ ಗುರುದಕ್ಷಿಣೆಯನ್ನು ಸಮರ್ಪಿಸಬೇಕೆಂದು ಕೇಳಲಾಗಿ, ಅಹಲ್ಯೆ ಸೌದಾಸ ರಾಜನ ಹೆಂಡತಿ ಧರಿಸಿರುವ ಓಲೆಗಳನ್ನು ತಂದುಕೊಡಬೇಕೆಂದು ಹೇಳಿ ಅವುಗಳನ್ನು ಪಡೆದಳು [ಭಾರ -ಅಶ್ವ ೫೬] ಈಕೆ ಮುದ್ಗಲ ಮಹರ್ಷಿಯ ಮಗಳು ಈಕೆಯ ಮಗನು ಶತಾನಂದ ಶತಾನಂದನ ಮಗನು ಸತ್ಯಧೃತಿ ಸತ್ಯಧೃತಿಯ ಮಗನು ಶರದ್ವಂತ. ದಿವ್ಯಸುಂದರಿ [ಭಾಗ -೯ ೨೧] ಬ್ರಹ್ಮನ ಮಾನಸಸೃಷ್ಟಿಯಿಂದ ಜನಿಸಿದವಳು [ರಾಮಾ -ಉ ೩೦] ವಧ್ರ್ಯಶ್ವರಾಜನಿಂದ ಮೇನಕೆಯಲ್ಲಿ ಜನಿಸಿದವಳು [ಹರಿ -೧, ೩೨] ದಿವೋದಾಸನು ಈಕೆಯ ಒಡಹುಟ್ಟಿದವನು [ಭಾಗ -೯, ೨೨ ಹರಿ -೧, ೩೨] ಇಂದ್ರನು ಅಹಲ್ಯೆಯನ್ನು ಮೋಹಿಸಿದುದು [ಭಾರ -ಉ ೧೨. ಶಾಂತಿ ೩೫೧ ರಾಮಾ -ಬಾ ೪೮ ಉತ್ತ ೩೦ ಬ್ರಹ್ಮ ೮೭]

**ಅಹಿಕ್ಷೇ(ಚ್ಛ)ತ್ರ** —ಒಂದು ಪಟ್ಟಣ ರೋಹಿಲಖಂಡದಲ್ಲಿ ಉತ್ತರ ಪಾಂಚಾಲದೇಶದ ರಾಜಧಾನಿಯಾಗಿದ್ದಿತು ದ್ರೋಣಾಚಾರ್ಯರು ದ್ರುಪದನನ್ನು ಜಯಿಸಿ ಇದನ್ನು ತೆಗೆದುಕೊಂಡರು ಈಗ ಇದಕ್ಕೆ ರಾಮನಗರವೆಂದು ಹೆಸರು. ರೇಲಿ ಎಂಬ ಪಟ್ಟಣಕ್ಕೆ ೨೦ ಮೈಲಿಗಳ ದೂರದಲ್ಲಿದೆ [ಭಾರ -ಆ ೧೪೮]

## ಆ

**ಆಕಾಶ** —ಪಂಚಮಹಾಭೂತಗಳಲ್ಲಿ ಒಂದು. ಇದರ ವರ್ಣನೆ [ಭಾರ.-ವ ೨೧೫, ಭೀ. ೫. ಶಾಂ. ೨೫೮. ಅನು. ೨೪೫]

**ಆಕಾಶರಾಜ.**—ಸುಧರ್ಮರಾಜನ ಮಗನು ತನ್ನ ಮಗಳಾದ ಪದ್ಮಾವತಿಯನ್ನು ವೇಂಕಟರಮಣಸ್ವಾಮಿ ಮೋಹಿಸಲಾಗಿ, ಆತನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಹೆಚ್ಚು ಬಳುವಳಿಯನ್ನು ಕೊಟ್ಟುದಲ್ಲದೆ ತಿರುಪತಿಯಲ್ಲಿ ದೇವಳವನ್ನು ಕಟ್ಟಿಸಿಕೊಟ್ಟನು [ಸ್ಕಾ - ವೈ ಖಂ ೩-೭]

**ಆಕೂತಿ** —(I) ಸ್ವಾಯಂಭುವಮನುವಿನ ಮೂವರು ಪುತ್ರಿಯರಲ್ಲಿ ಹಿರಿಯುವಳು. ಈಕೆ ರುಚಿಯೆಂಬ ಬ್ರಹ್ಮನನ್ನು ಮದುವೆಯಾದಳು [ಭಾಗ -೪, ೧]

(II) ಉತ್ತಾನವಾದ ವಂಶದ ವ್ಯುಷ್ಟರಾಜನ ಮಗನಾದ ಸರ್ವತೇಜಸ್ಸೆಂಬ ಅರಸನ ಹೆಂಡತಿ ಈಕೆಯಲ್ಲಿ ಜನಿಸಿದ ಚಕ್ಷುಸ್ ಎಂಬಾತನು ಹದಿನಾಲ್ಕು ಮಂದಿ ಮನುಗಳಲ್ಲಿ ಆರನೆಯುವನು [ಭಾಗ -೪, ೧೩]

**ಆಗ್ನೀಧ್ರ** —ಪ್ರಿಯವ್ರತರಾಜನಿಂದ ಬರ್ಹಿಸ್ಮತಿಯಲ್ಲಿ ಜನಿಸಿದವನು ಈತನು ಪೂರ್ವಚಿತ್ತಿಯೆಂಬ ಅಪ್ಸರಸಿಯನ್ನು ಮದುವೆಯಾಗಿ ನಾಭಿ, ಕಿಂಪುರುಷ, ಹರಿ, ಇಲಾವೃತ, ರಮ್ಯಕ, ಹಿರಣ್ಮಯು, ಕುರು, ಭದ್ರಾಶ್ವ, ಕೇತುಮಂತರೆಂಬ ಒಂಭತ್ತು ಮಂದಿ ಪುತ್ರರನ್ನು ಪಡೆದು, ತನ್ನ ರಾಜ್ಯವನ್ನು ಆ ಒಂಭತ್ತು ಮಂದಿಗೂ ಹಂಚಿಕೊಟ್ಟ ಇವರು ಪಾಲಿಸಿದ ಖಂಡಗಳು ಇವರ ಹೆಸರಿನಿಂದಲೇ ರೂಢವಾದುವು [ಭಾಗ -೫, ೧ ವಿಷ್ಣು -೨, ೧]

**ಆಗ್ನೇಯಕೋಸಲ** —ಇಂದ್ರಪ್ರಸ್ಥದ ಆಗ್ನೇಯದಲ್ಲಿದೆ ಅಯೋಧ್ಯೆ ಇದರ ರಾಜಧಾನಿ ಪಾಂಡವರ ಕಾಲದಲ್ಲಿ ಸೂರ್ಯವಂಶದ ಬೃಹದ್ಬಲನೆಂಬ ರಾಜನು ಇಲ್ಲಿ ರಾಜ್ಯಭಾರ ಮಾಡುತ್ತಿದ್ದ [ಭಾರ -ಸ ೩೧] ಇವನು ದುರ್ಯೋಧನನ ಪರವಾಗಿ ಹೋರಾಡಿ ಅಭಿಮನ್ಯುವಿನಿಂದ ಹತನಾದ [ಉದ್ಯೋ -೪, ೧೬೬ ಭೀ ೫೬ ದ್ರೋ ೪೭]

**ಆಙ್ಗೀರಸ.**—ಅಂಗಿರಸನ ಮಗ ದೇವಗುರುನಾದ ಬೃಹಸ್ಪತಿಯ ನಾಮಾಂತರ

**ಆಞ್ಜನೇಯ** —ಅಂಜನೆಯ ಮಗ ಹನೂಮಂತ ನೋಡು—ಅಞ್ಜನಾ

**ಅಡೀ** —(I) ಅಂಧಕಾಸುರನ ಮಗ ತನ್ನ ತಂದೆಯನ್ನು ಕೊಂದ ಶಿವನ ಮೇಲಣ ಹಗೆಯನ್ನು ತೀರಿಸಿಕೊಳ್ಳಲು, ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ತನ್ನ ನಿಜ ದೇಹದಲ್ಲಿಯೇ ತನಗೆ ಮರಣನಾಗದಂತೆ ವರವನ್ನು ಪಡೆದನು ಬಳಿಕ ವರಪ್ರಭಾವದಿಂದ ದೇವತೆಗಳನ್ನು ಕಿರುಗುಟ್ಟಿಸಿ, ಒಮ್ಮೆ ಸರ್ಪರೂಪದಿಂದ ಕೈಲಾಸವನ್ನು ಸೇರಿ, ರಹಸ್ಯವಾಗಿ ಒಳಹೊಕ್ಕು, ಪಾರ್ವತೀರೂಪದಿಂದ ಶಿವನ ಬಳಿ ಸಾರ್ದನು. ಇವನನ್ನು ಕಂಡ ಕೂಡಲೇ ಶಿವನು ಇವನ ಮೋಸವನ್ನು ತಿಳಿದು ಕೊಂದನು [ಮತ್ಸ್ಯ -೧೫೫]

(II) ಹಂಸಪಕ್ಷಿ—ವಸಿಷ್ಠನು ವಿಶ್ವಾಮಿತ್ರ ಶಾಪದಿಂದ ಹಂಸರೂಪವನ್ನು ತಳೆದು ವಿಶ್ವಾಮಿತ್ರನನ್ನು ಬಕಪಕ್ಷಿಯಾಗುವಂತೆ ಶಪಿಸಿ, ಹೋರಾಡಿದ್ದು [ಮಾರ್ಕಂ.-೯].

**ಆತ್ರೇಯ.**—ವಾಮದೇವಋಷಿಯ ಶಿಷ್ಯ [ಭಾರ -ವನ ೧೯೫] ಜನಮೇಜಯನ ಸರ್ಪಯಾಗದಲ್ಲಿ ಸದಸ್ಯನಾಗಿದ್ದ [ಆದಿ -೫೩, ೫೦೦, ೪೬] ಈತನು ವಿದುರನಿಗೆ ಜ್ಞಾನೋಪದೇಶ ಮಾಡಿದನು [ಭಾಗ -೧, ೩]

**ಆದಿತ್ಯ** —ಕಶ್ಯಪನಿಂದ ಅದಿತಿಯಲ್ಲಿ ಜನಿಸಿದವರು. ಧಾತೃ, ಮಿತ್ರ, ಅರ್ಯಮ, ಶಕ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷ, ಸವಿತೃ, ತ್ವಷ್ಟೃ, ವಿಷ್ಣು ಎಂಬುದಾಗಿ ಹನ್ನೆರಡು ಮಂದಿ [ಭಾರ -ಆ ೬೬, ೧೨೨ ಶಾಂ ೨೦೭] ಅಂಶ, ಭಗ, ಮಿತ್ರ, ವರುಣ, ಧಾತೃ, ಅರ್ಯಮ, ಜಯಂತ, ಭಾಸ್ಕರ, ತ್ವಷ್ಟೃ, ಪೂಷ, ಇಂದ್ರ, ವಿಷ್ಣುಗಳೆಂಬುದಾಗಿ ಹನ್ನೆರಡು ಮಂದಿ [ಭಾರ -ಅನು ೨೫೫ ವಿಷ್ಣು ೧, ೧೫ ಭಾಗ -೬, ೬] ಇವರ ಸಂತತಿ ವರ್ಣನೆ [ಭಾಗ -೬, ೧೮].

**ಆದಿಶೇಷ** —ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವನು ಈತನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ವರವನ್ನು ಪಡೆದು ಭೂಮಿಯನ್ನು ಹೊತ್ತಿರುವನು [ಭಾರ -ಆ ೩೫, ೬೬]

**ಆಧೂರ್ತ್ತರಜಸ** —ಚಂದ್ರವಂಶದ ಕುಶಿಕರಾಜನ ಎರಡನೆಯ ಮಗ ಇವನ ಮಗನಾದ ಗಯರಾಜನು ಅನೇಕ ಯಜ್ಞಗಳನ್ನು ಮಾಡಿ ಕೀರ್ತಿಪಡೆದನು ಇವನಿಗೆ ಅಮೂರ್ತ್ತರಜನೆಂಬುದು ನಾಮಾಂತರ [ಭಾರ.-ವನ ೯೩].

**ಆನಕ** —ಯದುವಂಶದ ಶೂರರಾಜನಿಂದ ಮಾರಿಷೆಯೆಂಬವಳಲ್ಲಿ ಜನಿಸಿದ ಹತ್ತುಮಂದಿ ಪುತ್ರರಲ್ಲಿ ನಾಲ್ಕನೆಯವ ವಸುದೇವನ ತಮ್ಮ [ಭಾಗ -೧೦, ೧]

**ಆನಕದುಂದುಭಿ** —ವಸುದೇವನ ನಾಮಾಂತರ ಈತನ ಜನನ ಕಾಲದಲ್ಲಿ ದೇವತೆಗಳು ಆನಕ (ತಮಟೆ) ದುಂದುಭಿ (ನಗಾರಿ)ಗಳನ್ನು ಬಾರಿಸಿದರು ಇಂತಹ ದಿವ್ಯವಾದ್ಯರವದೊಂದಿಗೆ ಜನಿಸಿದ ಕಾರಣ ಈ ಹೆಸರು [ಭಾಗ -೧೦, ೧]

**ಆನರ್ತ.**—ಇಕ್ಷ್ವಾಕು ಪುತ್ರನಾದ ಶರ್ಯಾತಿ ರಾಜನ ಮಗ ದ್ವಾರಕೆಗೆ ಸಮೀಪದಲ್ಲಿ ಸಮುದ್ರತೀರದ ಒಂದು ದೇಶಕ್ಕೆ ಅರಸನಾಗಿದ್ದು ಕುಶಸ್ಥಲೀನಗರವನ್ನು ನಿರ್ಮಿಸಿದನು ದ್ವಾರಕೆಗೆ ಕುಶಸ್ಥಲಿಯೆಂಬುದು ನಾಮಾಂತರ ಇಂತು ಆನರ್ತನು ಪಾಲಿಸುತ್ತಿದ್ದ ದೇಶಕ್ಕೆ ಆನರ್ತದೇಶವೆಂದು ಹೆಸರು ಇದು ಇಂದ್ರಪ್ರಸ್ಥಕ್ಕೆ ಪಶ್ಚಿಮದಲ್ಲಿಯೂ ಉತ್ತರದಲ್ಲಿಯೂ ಇದೆ [ಭಾರ -ಸ ೧೪ ಭೀ. ೯] (ಈ ದೇಶವು ಈಗಣ ಗುಜರಾತ್ ಮತ್ತು ಮಾಳವ ದೇಶಗಳಿಗೆ ಸೇರಿದೆ)

**ಆನ್ಧ್ರ** —ಈಗಣ ತೆಲುಗು ದೇಶ ಕೃಷ್ಣಾ ಗೋದಾವರೀ ನದಿಗಳ ನಡುವೆ ಇದೆ [ಭಾ -ಭೀ ೯].

**ಆಪ.**—ಅಷ್ಟವಸುಗಳಲ್ಲಿ ಒಬ್ಬನು. ನೋಡು—ಅಷ್ಟವಸು.

**ಆಪಸ್ತಮ್ಬ.**—ಒಬ್ಬ ಮಹರ್ಷಿ. ಭೃಗುವಂಶದವನು [ಭಾರ -ವನ ೨೯೯. ಮತ್ಸ್ಯ -೭] ಈತನ ಹೆಂಡತಿ ಅಕ್ಷಸೂತ್ರೆ ಈಕೆಯು ಮಗನು ಕರ್ಕಿ [ಬ್ರಹ್ಮ- ೧೩೦]. ತೈತ್ತಿರೀಯ (ಕೃಷ್ಣಯಜುರ್ವೇದ) ಶಾಖಾವಲಂಬಿಗಳಿಗೆ ಉಪಯುಕ್ತ ಗಳಾದ ಧರ್ಮ, ಗೃಹ್ಯ, ಶ್ರೌತಸೂತ್ರಗಳನ್ನು ಬರೆದವನು. ಹದಿನೆಂಟು ಮಂದಿ ಸ್ಮೃತಿಕಾರರಲ್ಲಿ ಒಬ್ಬ ಕಶ್ಯಪಮಹರ್ಷಿ ದಿತಿಯಿಂದ ಪುತ್ರಕಾಮೇಷ್ಟಿಯಾಗ ಮಾಡಿಸಿದಾಗ ಈತನು ಆಚಾರ್ಯನಾಗಿದ್ದ [ಮತ್ಸ್ಯ - ೭].

**ಆಪೋದ**—ಒಬ್ಬ ಮಹರ್ಷಿ ಧೌಮ್ಯನೆಂಬುದು ಈತನ ನಾಮಾಂತರ. ಉಪಮನ್ಯು, ಆರುಣಿ, ಬೈದರೆಂಬವರು ಈತನ ಶಿಷ್ಯರು [ಭಾರ.-ಆ ೩]

**ಆಯತಿ**—ಚಂದ್ರವಂಶದ ನಹುಷರಾಜನಿಂದ ವಿರಜೆಯೆಂಬವಳಲ್ಲಿ ಜನಿಸಿದವನು. ಯಯಾತಿ ರಾಜನ ಒಡಹುಟ್ಟಿದವನು [ಭಾರ.-ಆ ೭೯]

**ಆಯು.**—(I) ಚಂದ್ರವಂಶದ ಪುರೂರವನಿಂದ ಊರ್ವಶಿಯಲ್ಲಿ ಜನಿಸಿದವನು. ಇವನಿಗೆ ಧೀಮಂತ, ಅಮಾವಸು, ದೃಢಾಯು, ವನಾಯು, ಶತಾಯುಗಳೆಂಬುದಾಗಿ ಐವರು ಒಡಹುಟ್ಟಿದವರು ಈತ ಸ್ವರ್ಭಾನವಿಯೆಂಬವಳನ್ನು ಮದುವೆಯಾಗಿ ನಹುಷ, ವೃದ್ಧಶರ್ಮ, ರಜಿ, ಗಯ, ಅನೇನಸರೆಂಬ ಐವರು ಪುತ್ರರನ್ನು ಪಡೆದ [ಭಾರ.-ಆ. ೬೩. ಹರಿ.- ೧, ೨೮ ವಾಯು.- ೯೨ ಭಾಗ - ೯, ೧೭. ಬ್ರಹ್ಮ- ೧೧].

(II) ಒಬ್ಬ ಮಂಡೂಕರಾಜ ಇವನು ತನ್ನ ಮಗಳಾದ ಸುಶೋಭನೆಯನ್ನು ಇಕ್ಷ್ವಾಕುವಂಶದ ಪರೀಕ್ಷಿತನೆಂಬ ಅರಸನಿಗೆ ಕೊಟ್ಟು ಮದುವೆ ಮಾಡಿದ [ಭಾರ.-ವ ೧೯೫]

(III) ಮನುಷ್ಯನ ಜೀವಿತಕಾಲ. ಅದನ್ನು ವೃದ್ಧಿಗೊಳಿಸುವಿಕೆಗೆ ಸಾಧನಗಳು [ಭಾರ -ಉ ૩೯ ಅನು ೧೬೯] ಆಯುಷ್ಯವು ಕಡಿಮೆಯಾಗಲು ಕಾರಣಗಳು [ಭಾರ -ಉ ૩೭ ಶಾಂತಿ ೧೯೨ ಅನು ೧೬೧ ಅಶ್ವ ೧೮]

**ಆಯುರ್ವೇದ**—ವೈದ್ಯಶಾಸ್ತ್ರ ಇದು ಋಗ್ವೇದದ ಉಪವೇದ ಬ್ರಹ್ಮನ ಪೂರ್ವದಿಕ್ಕಿನ ಮುಖದಿಂದ ಹೊರಬಂದುದು [ಭಾಗ.-೩, ೧೨]

**ಆರಟ್ಟ**—ಒಂದು ದೇಶ ವಿಪಾಶಾ (Beas) ಮತ್ತು ಶತದ್ರೂ (Sutlej) ನದಿಗಳ ನಡುವೆ ಕೇಕಯ ದೇಶಕ್ಕೆ ಈಶಾನ್ಯ ಭಾಗದಲ್ಲಿದೆ ಇದನ್ನು ಈಗ ಪಂಜಾಬ್ ದೇಶವೆನ್ನುತ್ತಾರೆ [ಭೀಷ್ಮ ೯೦. ದ್ರೋ ೧೯೪].

**ಆರುಣಿ**—ಅರುಣಋಷಿಯ ಮಗ ಉದ್ದಾಲಕನೆಂಬುದು ಇವನ ನಾಮಾಂತರ. ಆಪೋದನೆಂಬ ಧೌಮ್ಯಮಹರ್ಷಿಯ ಶಿಷ್ಯ ನೋಡು—ಉದ್ದಾಲಕ [ಭಾರ ಆ ೩].

**ಆರುಷೀ.**—ಮನುಚಕ್ರವರ್ತಿಯ ಮಗಳು ಭೃಗುಮಹರ್ಷಿ ಪುತ್ರನಾದ ಚ್ಯವನ ಮುನಿಯನ್ನು ಮದುವೆಯಾಗಿ ಔರ್ವನೆಂಬ ತನಯನನ್ನು ಪಡೆದಳು [ಭಾರ -ಆ. ೬೭].

**ಆರ್ಜಯ.**—ಗಾಂಧಾರರಾಜನಾದ ಸುಬಲನ ಮಗ ಶಕುನಿಯ ಒಡಹುಟ್ಟಿದವ ಮಹಾಭಾರತ ಯುದ್ಧದಲ್ಲಿ ಇರಾವಂತನಿಂದ ಹತನಾದನು [ಭೀಷ್ಮ-೯೦].

**ಆರ್ದ್ರಕ**—ಒಬ್ಬ ಅರಸು ಇಕ್ಷ್ವಾಕುವಂಶದ ವಿಷ್ವಗಶ್ವರಾಜನ ಮಗ ಈತನ ಮಗ ಯುವನಾಶ್ವರಾಜ [ವನ -೨೦೫]

**ಆರ್ದ್ರಾ.**—ದಕ್ಷನ ಮಗಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು [ಭಾರ -ಆ ೬೭].

**ಆರ್ಯಕ.**—(i) ಸರ್ಪರಾಜ ಸರ್ಪಜನನಿಯಾದ ಕದ್ರುವಿನ ಮಗ ಇವನು ತನ್ನ ಮಗಳಾದ ಭೋಜೆ (ಮಾರಿಷೆ) ಯನ್ನು ಯದುಕುಲೋತ್ಪನ್ನನಾದ ಶೂರ ರಾಜನಿಗೆ ಕೊಟ್ಟು ಮದುವೆ ಮಾಡಿದ ಪಾಂಡುರಾಜನ ಹಿರಿಯ ರಾಣಿಯಾದ ಕುಂತಿಯೂ ವಸುದೇವನೂ ಈ ಮಾರಿಷೆಯ ಮಕ್ಕಳು ಹೀಗಾಗಿ, ಕಾಲಾಂತರದಲ್ಲಿ ದುರ್ಯೋಧನನು ಭೀಮನನ್ನು ಕೊಲ್ಲಿಸುವುದಕ್ಕಾಗಿ ಹಾವುಗಳಿಂದ ಕಚ್ಚಿಸಿ, ವಿಷ ಮಿಶ್ರವಾದ ಆಹಾರವನ್ನು ತಿನ್ನಿಸಿ, ನದಿಯಲ್ಲಿ ತಳ್ಳಿಸಿದಾಗ, ಆರ್ಯಕನು ಭೀಮನನ್ನು ತನ್ನ ಮರಿಮಗನೆಂಬ ಅಭಿಮಾನದಿಂದ, ನಾಗಲೋಕಕ್ಕೆ ಕರೆದುಯ್ದು ಅಮೃತ ಪಾನಮಾಡಿಸಿ, ಭೀಮನಿಗೆ ಹತ್ತುಸಾವಿರ ಆನೆಗಳ ಬಲವು ಬರುವಂತೆ ಹರಸಿ ಕಳುಹಿಸಿದ [ಭಾರ -ಆ ೩೫, ೧೩೮ ಉ. ೧೦೩, ೧೦೪]

(ii) ಸುಗ್ರೀವನ ಮಧುವನವನ್ನು ಕಾಪಾಡುತ್ತಿದ್ದ ದಧಿಮುಖನ ನಾಮಾಂತರ ಇವನು ಸುಗ್ರೀವನ ಸೋದರಮಾವ [ರಾಮಾ -ಸು ೬೭]

**ಆರ್ಯಾವರ್ತ.**—ಪೂರ್ವ ಪಶ್ಚಿಮ ಸಮುದ್ರಗಳ ನಡುವೆ ಹಿಮವತ್ಪರ್ವತಕ್ಕೂ ವಿಂಧ್ಯಪರ್ವತಕ್ಕೂ ಮಧ್ಯದಲ್ಲಿರುವ ದೇಶ ಆರ್ಯರು ಮೊತ್ತಮೊದಲು ಇಲ್ಲಿ ವಾಸ ಮಾಡುತ್ತಿದ್ದರು [ಶಾಂತಿ.-೩೩೩]

**ಆರ್ಶ್ಯಶೃಂಗಿ**—ಒಬ್ಬ ರಾಕ್ಷಸ. ಬಕಾಸುರನ ವಂಶದವ ಭಾರತ ಯುದ್ಧದಲ್ಲಿ ಇರಾವಂತನನ್ನು ಕೊಂದ [ಭೀ -೯೦, ೧೦೧] ಇವನೇ ಅಲಂಬುಸನೆಂಬ ರಕ್ಕಸ [ದ್ರೋ.-೧೦೯]. ಇವನು ಬೇರೊಬ್ಬನೆಂತಲೇ ತೋರುತ್ತದೆ [ಶಲ್ಯ ೨]

**ಆಷ್ಟಿರ್ಷೇಣ**—(i) ಚಂದ್ರವಂಶದ ಅರಸು ಹೆಂಡತಿ ಜಯೆ ಈತನು ಗಂಗಾತೀರದಲ್ಲಿ ಯಜ್ಞಮಾಡುತ್ತಿದ್ದಾಗ ಮಿಥುವೆಂಬ ರಕ್ಕಸನು ರಾಣಿಯನ್ನೂ, ಪುರೋಹಿತನನ್ನೂ ಅಪಹರಿಸಲಾಗಿ ದೇವಾಪಿಮುನಿ ತನ್ನ ತಪೋಮಹಿಮೆಯಿಂದ ರಕ್ಕಸನನ್ನು ಭಂಗಗೊಳಿಸಿ ಅವರಿಬ್ಬರನ್ನೂ ಕರೆತಂದ [ಬ್ರಹ್ಮಾ.].

(ii) ಒಬ್ಬ ರಾಜರ್ಷಿ ಹಿಮವತ್ಪ್ರಾಂತದಲ್ಲಿ ಗಂಧಮಾದನಪರ್ವತದ ಬಳಿ ತಪಸ್ಸುಮಾಡುತ್ತಿದ್ದ. ಪಾಂಡವರು ತೀರ್ಥಯಾತ್ರೆ ಮಾಡಿದಾಗ ಈತನ ಆಶ್ರಮದಲ್ಲಿ ಕೆಲ ಕಾಲ ಉಳಿದುಕೊಂಡಿದ್ದರು [ಭಾರ -ವನ ೧೫೯, ೧೬೧].

(iii) ಕೃತಯುಗದ ಒಬ್ಬ ರಾಜರ್ಷಿ. ಈತನು ತಪಸ್ಸಿನಿಂದ ಬ್ರಾಹ್ಮಣನಾದನು [ಭಾರ - ಸ ೮, ಶ ४೦]

**ಅವಿಕ್ಷಿತ** —ಅವಿಕ್ಷಿತರಾಜನ ಮಗನಾದ ಮರುತ್ತನ ನಾಮಾಂತರ [ಭಾರ - ೫೦೦, ೨೮].

**ಆಶಾ** —ಆಸೆ (ತೃಷ್ಣೆ) ಇದರ ಸ್ವರೂಪ ಮತ್ತು ನಿಂದೆ [ಭಾರ -ಆದಿ ೬೯, ೭೯, ೧೨४ ಉ ३೯, ೬४ ಶಾಂತಿ ೧೯೫, ೧೨೮, ೧೭೩, ೧೭೬, ೨೮೨]

**ಆಶ್ಲೇಷಾ.**—ದಕ್ಷನ ಮಗಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು ಒಂದು ನಕ್ಷತ್ರ [ಭಾರ - ಆ ೬೭[

**ಆಶ್ವಲಾಯನ** —ವಿಶ್ವಾಮಿತ್ರಮಹರ್ಷಿಯ ಮಗನು ಶಾಖಾಪ್ರವರ್ತಕನಾದ ಒಬ್ಬ ಮಹರ್ಷಿ ಋಗ್ವೇದಿಗಳಲ್ಲಿ ಆಶ್ವಲಾಯನರೆಂಬ ಶಾಖೆಯವರಿಗೆ ಗೃಹ್ಯ, ಧರ್ಮ, ಶ್ರೌತ ಸೂತ್ರಗಳನ್ನು ಬರೆದವನು ೧೮ ಮಂದಿ ಸ್ಮೃತಿಕಾರರಲ್ಲಿ ಒಬ್ಬ [ಭಾರ.- ಅನು ೭].

**ಆಶ್ವಿನೇಯ** —ನೋಡು—ಅಶ್ವಿನೀದೇವತೆಗಳು.

**ಆಸ್ತೀಕ** —ಭೃಗುವಂಶದ ಜರತ್ಕಾರುವೆಂಬ ಮಹರ್ಷಿಯಿಂದ ವಾಸುಕಿಯ ತಂಗಿಯಾದ ಜರತ್ಕಾರುವೆಂಬವಳಲ್ಲಿ ಜನಿಸಿದವನು ಈತನು ಜನಮೇಜಯನ ಸರ್ಪಯಾಗವನ್ನು ನಿಲ್ಲಿಸಿ, ತನ್ನ ಸೋದರಮಾವಂದಿರಾದ ಸರ್ಪಗಳಿಗೆ ಜನಮೇಜಯನಿಂದ ಅಭಯಪ್ರದಾನಮಾಡಿಸಿದ [ಭಾರ -ಆ ೧೧, ೫೮. ದೇ. ಭಾಗ.-೨, ೧೧, ೧೨]

**ಆಹುಕ.**—(i) ಯದುವಂಶದ ಅರಸು ಉಗ್ರಸೇನನ ತಂದೆ [ಭಾರ -ಸ. ४ ಭಾಗ -೯, ೨४ ವಿಷ್ಣು -४, ೧४] ಇವನಿಗೆ ನೂರು ಮಂದಿ ಮಕ್ಕಳು [ಸಭಾ - ೧४] ಸಾಲ್ವನಿಗೂ ಆಹುಕನಿಗೂ ಯುದ್ಧ [ವನ ೧೫].

(ii) ಒಬ್ಬ ಬೇಡ ಶಿವಭಕ್ತಾಗ್ರೇಸರನಾಗಿದ್ದು ಮುಂದಣ ಜನ್ಮದಲ್ಲಿ ನಳಚಕ್ರವರ್ತಿಯಾಗಿ ಜನಿಸಿದನು [ಲಿಂಗ - ೬೬]. ನೋಡು—ನಳ

## ಇ

**ಇಕ್ಷುಮತೀ** —ಒಂದು ನದಿ. ರೋಹಿಲ್ಲಖಂಡ ಜಿಲ್ಲೆಯೊಳಗೆ ಹರಿಯುತ್ತದೆ. ಇದರ ತೀರದಲ್ಲಿ ವಿದೇಹಜನಕನ ತಮ್ಮನಾದ ಕುಶಧ್ವಜನ ರಾಜಧಾನಿಯಾಗಿದ್ದ

ಸಾಂಕಾಶ್ಯನಗರವು ನೆಲೆಗೊಂಡಿದೆ ಇದನ್ನು ಈಗ ಕಾಳೀನದಿಯೆಂದು ವ್ಯವಹರಿಸುವರು [ಭಾರ -ಆದಿ ೩]

**ಇಕ್ಷ್ವಾಕು.**—ಸೂರ್ಯವಂಶದ ವೈವಸ್ವತಮನುವಿನ ಮಗ. ಅಯೋಧ್ಯೆಯ ಅರಸು. ಇವನಿಗೆ ಶಶಾದ, ವಿಕುಕ್ಷಿ, ನಿಮಿ, ದಂಡಕ, ವಿಶಾಲ ಮುಂತಾದ ಅನೇಕ ಮಂದಿ ಪುತ್ರರೂ, ಸುವರ್ಣೆಯೆಂಬ ಮಗಳೂ ಇದ್ದರು [ಭಾರ -ಆ ೬೯ ಭಾಗ -೯, ೬. ಹರಿ.-೧, ೧೧ ರಾಮಾ -ಉತ್ತ ೭೯] ಇಕ್ಷ್ವಾಕುವಂಶವರ್ಣನ [ವನ ೨೦೬ ಅನು ೨ ಅಶ್ವ ೪ ಹರಿ -೧, ೧೧ ರಾಮಾ -ಬಾಲ ೭೦ ಭಾಗ -೯ ವಿಷ್ಣು.-೪, ೧ ಬ್ರಹ್ಮ-೭. ಶಿವ -ಉಮಾ ೩೭, ೩೯] ಯಮುನೆಯೊಂದಿಗೆ ಸಂವಾದ [ಭಾರ.-ಶಾಂತಿ ೧೯೭]

**ಇಡಾ** —ದೇಹದಲ್ಲಿರುವ ಮುಖ್ಯವಾದ ಒಂದು ನಾಡಿ.

**ಇತಿಹಾಸ** —ಒಂದು ಗ್ರಂಥ ಕಾವ್ಯಗಳಂತೆ ಕ್ಲಿಷ್ಟವಾಗಿರದೆ, ಪುರಾಣಗಳಂತೆ ವಿಧಿಗಳನ್ನು ಮಾತ್ರವೇ ಬೋಧಿಸದೆ, ಚಾರಿತ್ರಕ ವಿಷಯಗಳನ್ನು ತಿಳಿಸತಕ್ಕುದು. ಭಾರತ, ರಾಮಾಯಣ ಇತ್ಯಾದಿ

**ಇನ್ದೀವರಾಕ್ಷ** —ನಲನಾಭನೆಂಬ ಗಂಧರ್ವನ ಮಗ ಬ್ರಹ್ಮಮಿತ್ರನೆಂಬ ಮುನಿ ಶಿಷ್ಯರಿಗ ಆಯುರ್ವೇದವನ್ನು ಕಲಿಸುತ್ತಿದ್ದಾಗ ಈತನು ಮರೆಯಾಗಿದ್ದು, ಗ್ರಹಿಸಿ, ಬ್ರಹ್ಮಮಿತ್ರನನ್ನು ಪರಿಹಾಸಮಾಡಿ, ಆತನ ಶಾಪದಿಂದ ರಾಕ್ಷಸ ಜನ್ಮವನ್ನು ಪಡೆದು ತನ್ನ ಮಗಳನ್ನೇ ತಿನ್ನತೊಡಗಿ, ಸ್ವಾರೋಚಿಯ ಆಗ್ನೇಯಾಸ್ತ್ರದಿಂದ ಶಾಪ ವಿಮುಕ್ತನಾದನು [ಮಾರ್ಕ -೬೦].

**ಇನ್ದುಮತಿ.**—ವಿದರ್ಭದೇಶದ ಅರಸನಾದ ಭೋಜನ ಮಗಳು. ಸೂರ್ಯವಂಶದ ಅಜರಾಜನನ್ನು ಮದುವೆಯಾಗಿ ದಶರಥನನ್ನು ಪಡೆದಳು ಒಮ್ಮೆ ದೇವಲೋಕದಿಂದ ಇಳಿದುಬರುತ್ತಿದ್ದ ನಾರದಮುನಿಯ ಮೇಲಣ ಹೂಮಾಲೆ ಈಕೆಯ ಮೇಲೆ ಬಿದ್ದುದರಿಂದ ಸತ್ತಳು ಪೂರ್ವಜನ್ಮದಲ್ಲಿ ಹರಿಣಿಯೆಂಬ ದಿವ್ಯಾಂಗನೆ. ತೃಣಬಿಂದುರಾಜನ ತಪಸ್ಸಿಗೆ ಭಂಗವನ್ನುಂಟುಮಾಡಿ ಆತನ ಶಾಪದಿಂದ ಭೂಮಿಯಲ್ಲಿ ಹುಟ್ಟಿದಳು ಮಹಾಸುಕುಮಾರಿ [ರಘು -೭]

**ಇನ್ದ್ರ** —ದೇವತೆಗಳ ಅರಸು ಚತುರ್ಮುಖನ ಹಗಲಲ್ಲಿ ೧೪ ಮಂದಿ ಇಂದ್ರರು ರಾಜ್ಯಭಾರಮಾಡುವರು. ಇದು ಅಧಿಕಾರದ ಹೆಸರೇ ಹೊರತು ವ್ಯಕ್ತಿಯ ಹೆಸರಲ್ಲ. ಯಜ್ಞ, ರೋಚನ, ಸತ್ಯಜಿತ್, ತ್ರಿಶಿಖ, ವಿಭು, ಮಂತ್ರದ್ರುಮ, ಪುರಂದರ, ಬಲಿ, ಅದ್ಭುತ, ಶಂಭು, ವೈವೃತಿ, ಋತಧಾಮ, ದಿವಸ್ಪತಿ, ಶುಚಿಗಳೆಂಬುದಾಗಿ ೧೪ ಮಂದಿ. ಇವರಲ್ಲಿ ಏಳನೆಯವನಾದ ಪುರಂದರನೆಂಬವನು ಈಗ ಇಂದ್ರನಾಗಿದ್ದಾನೆ. ಹೆಂಡತಿ ಶಚೀದೇವಿ. ಜಯಂತನು ಈತನ ಮಗ. ಈತನ ಸಭೆಗೆ ಸುಧರ್ಮವೆಂತಲೂ, ಉಪ್ಪರಿಗೆಗೆ ವೈಜಯಂತವೆಂತಲೂ, ಆನೆಗೆ ಐರಾವತವೆಂತಲೂ, ಕುದು

ರೆಗೆ ಉಚ್ಚೈಃಶ್ರವಸ್ಸೆಂಬುದಾಗಿಯೂ ಹೆಸರು ವಜ್ರವು ಈತನ ಆಯುಧ. ಸರ್ಪಗಳು ಕಾಪಾಡುತ್ತಿದ್ದ ಅಮೃತವನ್ನು ತಂದನು [ಆದಿ. ೩೪]. ಕುಂತಿಯು ಈತನಿಂದ ಅರ್ಜುನನನ್ನು ಪಡೆದಳು [ಆ ೬೩] ವಿಷ್ಣುವನ್ನು ಭೂಮಿಯಲ್ಲಿ ಅವತರಿಸುವಂತೆ ಪ್ರಾರ್ಥಿಸಿದನು [ಆದಿ ೬೫] ಬ್ರಾಹ್ಮಣ ವೇಷದಿಂದ ಕರ್ಣನ ಕವಚಕುಂಡಲಗಳನ್ನು ಬೇಡಿ ಪಡೆದನು [ಆದಿ. ೬೮. ವನ. ೩೧೧]. ಇಂದ್ರನ ಸಭಾವರ್ಣನೆ [ಸಭಾ. ೭] ಇಂದ್ರಕೀಲಪರ್ವತದಲ್ಲಿ ಅರ್ಜುನನು ತಪಸ್ಸುಮಾಡುತ್ತಿದ್ದಾಗ ಆತನಲ್ಲಿಗೆ ಬಂದು ವರವನ್ನು ಕೊಟ್ಟ [ವನ ೩೮] ದಮಯಂತೀ ಸ್ವಯಂವರಕ್ಕೆ ಹೋಗಿದ್ದ [ವನ ೫೧] ಪಾಂಡವರು ಗಂಧಮಾದನ ಪರ್ವತದಲ್ಲಿದ್ದಾಗ ಅಲ್ಲಿಗೆ ಹೋಗಿದ್ದ [ವನ ೧೬೭] ರಾವಣನೊಂದಿಗೆ ಯುದ್ಧಮಾಡುತ್ತಿದ್ದ ರಾಮನಿಗೆ ತನ್ನ ರಥವನ್ನು ಕಳುಹಿದ [ಭಾರ-ವನ ೨೯೧ ರಾಮಾ-ಯು. ೧೦೩]. ದಿತಿಪುತ್ರನಾದ ವಜ್ರಾಂಗನಿಂದ ಸೋತು ಚತುರ್ಮುಖ ಕಶ್ಯಪರ ಮೂಲಕ ಬಿಡುಗಡೆ [ಸ್ಕಾ-ಕೌಮಾರಿ ೧೪] ವಿಶ್ವರೂಪಾಚಾರ್ಯನನ್ನು ಕೊಂದು ಬ್ರಹ್ಮಹತ್ಯೆಗೆ ಗುರಿಯಾದ [ಭಾರ-ಉದ್ಯೋ ೯ ಭಾಗ-೬, ೯] ವೃತ್ರನನ್ನು ಕೊಂದು ಬ್ರಹ್ಮಹತ್ಯೆಯನ್ನು ಪಡೆದ [ಉದ್ಯೋ-೧೦ ಶಾಂತಿ ೨೮೨ ಅಶ್ವ ೧೧ ಭಾ-ಗ ೬, ೧೨ ಪದ್ಮ-೨. ರಾಮಾ-ಉತ್ತ. ೮೫] ತಾರಕಾಸುರನೊಂದಿಗೆ ಯುದ್ಧ ಮಂತಾಗಿ [ಸ್ಕಾ-ಕೌಮಾರಿ ೩೦, ೩೨] ದುರ್ವಾಸನ ಶಾಪದಿಂದ ರಾಜ್ಯಭ್ರಷ್ಟನಾದ [ಪದ್ಮ-೩ ಬ್ರ ವೈ.-೨೬ ವಿಷ್ಣು-೧, ೯] ನಮುಚಿಯ ವಧೆ [ಭಾರ.-ಶಲ್ಯ ೪೪]. ಬೃಹಸ್ಪತಿಯೊಂದಿಗೆ ಸಾಂತ್ವಗುಣ ವಿಷಯದಲ್ಲಿ ಸಂವಾದ [ಶಾಂತಿ ೮೪]. ಶತ್ರುಜಯೋಪಾಯ ವಿಷಯ ಸಂವಾದ [ಶಾಂತಿ ೧೦೩] ಮಹಾಲಕ್ಷ್ಮಿಯೊಂದಿಗೆ ಸಂವಾದ [ಶಾಂ. ೨೩೨]. ನಮುಚಿ, ಮಹಾಬಲಿಗಳೊಂದಿಗೆ ಶ್ರೇಯಸ್ಸಾಧನೆಗಾಗಿ ಸಂವಾದ ರಾಜಧರ್ಮ ವಿಷಯವಾಗಿ ಮಾಂಧಾತರಾಜನೊಂದಿಗೆ ಸಂವಾದ [ಶಾಂತಿ ೬೩]. ಯುದ್ಧದಲ್ಲಿ ಹತರಾದವರಿಗೆ ಸ್ವರ್ಗಪ್ರಾಪ್ತಿ ವಿಷಯದಲ್ಲಿ ಅಂಬರೀಷನೊಂದಿಗೆ ಸಂವಾದ [ಶಾಂ ೯೮] ಪ್ರಹ್ಲಾದನಲ್ಲಿ ಶಿಷ್ಯವೃತ್ತಿಮಾಡಿದ್ದು [ಶಾಂತಿ ೧೨೪, ೨೨೯] ಬೃಹಸ್ಪತಿಯನ್ನು ಅಪಮಾನಗೊಳಿಸಿ ರಾಜ್ಯಭ್ರಂಶ [ಭಾಗ-೬, ೭. ಸ್ಕಾಂ-ಕೇದಾರ ೯] ಪತಿವ್ರತಾ ಮಾಹಾತ್ಮ್ಯೆಯ ವಿಷಯದಲ್ಲಿ ಅಗ್ನಿಯೊಂದಿಗೆ ಸಂವಾದ [ಅನು. ೧೪] ಸಂವರ್ತನು ಇಂದ್ರನ ವಜ್ರಾಯುಧವನ್ನು ಸ್ತಂಭಿಸಿದ್ದು [ಅಶ್ವ ೧೦]. ಚ್ಯವನಮುನಿಯನ್ನು ಕೊಲ್ಲತೊಡಗಿದಾಗ ಇಂದ್ರನ ಬಾಹುಸ್ತಂಭನ [ವನ. ೧೨೫] ಅಮೃತವನ್ನು ಬೇಡಿದ ಉದಂಕಮುನಿಯನ್ನು ವಂಚಿಸಿದ್ದು [ಅಶ್ವ. ೫೫] ಶಂಬರನೊಂದಿಗೆ ಬ್ರಾಹ್ಮಣಮಹಾತ್ಮ್ಯ ಸಂವಾದ [ಅನು. ೭೧] ಅಹಲ್ಯೆಯ ಪಾತಿವ್ರತ್ಯವನ್ನು ಭಂಗಗೊಳಿಸಿ, ಸಹಸ್ರಾಕ್ಷನಾಗುವಂತೆ ಗೌತಮನಿಂದ ಶಾಪವನ್ನು ಪಡೆದದ್ದು [ರಾಮಾ.-

೪೮, ೪೯] ವಿಶ್ವಾಮಿತ್ರನ ತಪಸ್ಸನ್ನು ಮೇನಕೆಯ ಮೂಲಕ ಭಂಗಗೊಳಿಸಿದ್ದು [ರಾಮಾ.-ಬಾಲ. ೬೩] ಪೂರ್ವದಿಕ್ಕಿನ ಅಧಿಪತಿ. ಬಲಿ, ನಮುಚಿ, ಪುಲೋಮ, ಬಲ ಮುಂತಾದ ರಾಕ್ಷಸರನ್ನು ಕೊಂದನು ಋಗ್ವೇದದಲ್ಲಿ ಕೆಲವು ಮಂತ್ರಗಳಿಗೆ ಅಧಿದೇವತೆ.

**ಇನ್ದ್ರಕೀಲ.**—ಹಿಮವತ್ಪ್ರಾಂತದ ಒಂದು ಪರ್ವತ ಪಾಂಡವರು ಅರಣ್ಯ ವಾಸಮಾಡುತ್ತಿದ್ದಾಗ, ಅರ್ಜುನನು ವ್ಯಾಸಮಹರ್ಷಿಯ ಸೂಚನೆಯಂತೆ ಈ ಪರ್ವತ ದಲ್ಲಿ ಇಂದ್ರನನ್ನು ಕುರಿತು ತಪಸ್ಸುಮಾಡಿ, ಬಳಿಕ ಇಂದ್ರನ ಸೂಚನೆಯಂತೆ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಪಾಶುಪತಾಸ್ತ್ರವನ್ನು ಪಡೆದನು [ಭಾರ -ವನ ೩೭].

**ಇನ್ದ್ರಜಿತ್**—ಮಂಡೋದರೀ ರಾವಣರ ಮಗ ಲಕ್ಷ್ಮಣನಿಂದ ಹತನಾದನು. [ಭಾರ -ವನ ೨೮೬, ೨೯೦] ಇವನು ಹುಟ್ಟಿದಕೂಡಲೇ ಮೇಘದಂತೆ ನಾದ ಮಾಡಿದ್ದರಿಂದ ಇವನಿಗೆ ಮೇಘನಾದನೆಂದು ಹೆಸರಿಟ್ಟರು [ಅಧ್ಯಾ -ಉ ೨] ರಾವಣ ನಿಗೆ ಹಗೆಯಾಗಿದ್ದ ಇಂದ್ರನನ್ನು ಜಯಿಸಿದುದರಿಂದ ಇವನ ಹೆಸರು ಇಂದ್ರಜಿತ ನೆಂತಲೂ ರೂಢಿಯಲ್ಲಿದೆ [ರಾಮಾ -ಉ ೨೫, ೩೦] ಸೀತೆಯನ್ನು ಹುಡುಕಲು ಹನೂಮಂತನು ಲಂಕೆಗೆ ಹೋಗಿದ್ದಾಗ ಬ್ರಹ್ಮಾಸ್ತ್ರದಿಂದ ಹನೂಮಂತನನ್ನು ಬಿಗಿದು ರಾವಣನಲ್ಲಿಗೆ ಕರೆದುಯ್ದ [ರಾಮಾ.-ಸು ೪೨] ರಾಮಾಯಣ ಯುದ್ಧದಲ್ಲಿ ಅಂಗದನನ್ನು ಸೋಲಿಸಿ ನಾಗಪಾಶದಿಂದ ರಾಮ ಲಕ್ಷ್ಮಣರನ್ನು ಮೂರ್ಛಿತರನ್ನಾಗಿ ಮಾಡಿದ [ರಾಮಾ -ಯು ೪೫] ಕುಂಭಕರ್ಣನು ಹತನಾದ ತರುವಾಯ ವಾನರ ಸೈನ್ಯವನ್ನೆಲ್ಲಾ ತತ್ತರಗೊಳಿಸಿ ಮತ್ತೊಮ್ಮೆ ರಾಮ ಲಕ್ಷ್ಮಣರನ್ನು ಮೂರ್ಛೆ ಗೊಳಿಸಿದ [ರಾಮಾ -ಯು ೭೩] ಮಕರಾಕ್ಷನು ಮಡಿದ ತರುವಾಯ ಇಂದ್ರಜಿತ್ತು ನಿಕುಂಭಿಳಾ ಯಾಗಮಾಡಿ, ಮಾಯಾಸೀತೆಯನ್ನು ಕಲ್ಪಿಸಿ, ತನ್ನ ರಥದಲ್ಲಿ ಕುಳ್ಳಿರಿಸಿ ಕೊಂಡು ಯುದ್ಧಭೂಮಿಗೆ ಕರೆತಂದು ಆ ಮಾಯಾಸೀತೆಯನ್ನು ಕೊಂದು ಸುಗ್ರೀವಾದಿಗಳನ್ನು ಸಂಕಟಪಡಿಸಿದ [ಯುದ್ಧ ೮೧] ಬಳಿಕ ನಿಕುಂಭಿಳಾಯಾಗ ಮಾಡುತ್ತಿದ್ದ ಇಂದ್ರಜಿತ್ತಿನ ಮಾಯಾಜಾಲವನ್ನು ಅರಿತಿದ್ದ ವಿಭೀಷಣನು ರಾಮ ನಿಗೆ ರಹಸ್ಯವಾಗಿ ತಿಳುಹಲಾಗಿ ರಾಮನ ಸೂಚನೆಯ ಮೇರೆಗೆ ಲಕ್ಷ್ಮಣನು ಇಂದ್ರ ಜಿತ್ತನ್ನು ಕೊಂದನು [ಯುದ್ಧ ೮೬, ೯೨] ಹನ್ನೆರಡು ವರ್ಷಗಳ ಕಾಲ ಬ್ರಹ್ಮ ಚರ್ಯವನ್ನು ತಳೆದಿದ್ದವನಿಂದಲೇ ಇವನಿಗೆ ಸಾವು ಬರುವಂತೆ ಬ್ರಹ್ಮನಿಂದ ವರವನ್ನು ಪಡೆದಿದ್ದ [ಅಧ್ಯಾತ್ಮ.-ಯುದ್ಧ ೮]. ಇವನ ಹೆಂಡತಿ ಸುಲೋಚನೆ

**ಇನ್ದ್ರದೇಶ.**—ಇಂದ್ರಪರ್ವತದ ಸಮೀಪದಲ್ಲಿದೆ ಇದರ ರಾಜಧಾನಿ ಸಾಂಕಾಶ್ಯ ನಗರ ಪೂರ್ವದಲ್ಲಿ ಸುಧನ್ವನೆಂಬ ಅರಸು ಇದನ್ನು ಪಾಲಿಸುತ್ತಿದ್ದ ನೋಡು—ಸುಧನ್ವ.

**ಇನ್ದ್ರದ್ಯುಮ್ನ** — (i) ಅವಂತಿದೇಶದ ಅರಸು ದೇವಶಿಲ್ಪಿಯಾದ ವಿಶ್ವಕರ್ಮ ನಿಂದ ಮಹಾವಿಷ್ಣುವಿನ ವಿಗ್ರಹವನ್ನು ಸಂಪಾದಿಸಿ ಅನನ್ಯಭಕ್ತಿಯಿಂದ ಪೂಜಿಸುತ್ತ ವೈಷ್ಣವಾಗ್ರೇಸರನೆನಿಸಿದ್ದ [ಸ್ಕಾ.-ನಾಗರ ೨೭೧]

(ii) ಪಾಂಡ್ಯದೇಶದ ಅರಸು ವಿಷ್ಣುಭಕ್ತ ಒಮ್ಮೆ ಈತನು ನಿಷ್ಠೆಯಲ್ಲಿ ದ್ದಾಗ ತನ್ನಲ್ಲಿಗೆ ಬಂದ ಅಗಸ್ತ್ಯಮಹರ್ಷಿಯನ್ನು ಗೌರವಿಸದಕಾರಣ, ಗಜ ಜನ್ಮ ವನ್ನು ಪಡೆಯುವಂತೆ ಶಾಪಗ್ರಸ್ತನಾಗಿ, ಒಂದು ಕೊಳದಲ್ಲಿ ನೀರು ಕುಡಿಯುತ್ತಿದ್ದಾಗ ಮೊಸಳೆಯು ಬಂದು ಹಿಡಿಕೊಂಡಿತು ಆಗ ಪೂರ್ವಜನ್ಮಸಂಸ್ಕಾರದಿಂದ ವಿಷ್ಣು ವನ್ನು ಮರೆಹುಗಲಾಗಿ, ವಿಷ್ಣು ಪ್ರತ್ಯಕ್ಷವಾಗಿ ಮೊಸಳೆಯನ್ನು ಕೊಲ್ಲಲು ಈತನು ಶಾಪವಿಮುಕ್ತನಾದನು [ಭಾಗ -೮, ೪]

(iii) ಹಿಂದಣಕಾಲದ ಒಬ್ಬ ಅರಸು ಬಹುಕಾಲ ದೇವಲೋಕದಲ್ಲಿ ವಾಸಮಾಡಿ, ಕೀರ್ತಿಯು ಮಾಸಿಹೋಗಲು, ದೇವತೆಗಳು ಇವನನ್ನು ಭೂಮಿಗೆ ಕಳುಹಿಬಿಟ್ಟರು ಬಳಿಕ ಇವನು ಭೂಲೋಕಕ್ಕೆ ಬಂದು ನೋಡುವಲ್ಲಿ ಎಲ್ಲವೂ ಹೊಸದಾಗಿ ಕಂಡುಬಂದಿತು ಆದರೂ ತನ್ನ ಪರಿಚಿತರು ಯಾರಾದರೂ ಇರುವರೋ ಎಂಬುದಾಗಿ ವಿಚಾರಿಸತೊಡಗಿ ಮಾರ್ಕಂಡೇಯ ಮುನಿ, ಪ್ರಾವಾರಕರ್ಣನೆಂಬ ಗೂಬೆ, ಶಾಳೀಜಂಘನೆಂಬ ಬಕಪಕ್ಷಿ, ಅಕೂಪಾರನೆಂಬ ಆಮೆ—ಇವರನ್ನೆಲ್ಲಾ ವಿಚಾರಿಸುತ್ತ ಬರುವಾಗ ಆ ಆಮೆಯು ಈತನನ್ನು ಗುರುತಿಸಿ ಇವನ ಕೀರ್ತಿಯನ್ನು ಕೊಂಡಾಡ ಲಾಗಿ ದೇವತೆಗಳು ಮರಳಿ ಈ ರಾಜನನ್ನು ದೇವಲೋಕಕ್ಕೆ ಬರಮಾಡಿಕೊಂಡರು [ಭಾರ -ವನ ೨೦೨] ಈತನು ರೌಚ್ಯಕಮನ್ವಂತರದ ಅರಸು [ಸ್ಕಾ -ಕೌಮಾ. ೭. ನಾಗರ. ೨೭೧].

(iv) ಒಬ್ಬ ಬ್ರಾಹ್ಮಣನು. ಮೋಹಿನೀದೇವಿಯ ಮೂಲಕ ಮಾಯಾ ಸ್ವರೂಪವನ್ನೂ, ಮಾಯೆಯನ್ನು ದಾಟುವ ಉಪಾಯವನ್ನೂ ತಿಳಿದನು

(v) ಪಾಂಡವರು ವನವಾಸಮಾಡುತ್ತಿದ್ದಾಗ ಅವರೊಂದಿಗೆ ವಾಸಮಾಡು ತ್ತಿದ್ದ ಒಬ್ಬ ಋಷಿ [ಭಾರ.-ವನ ೨೬] ಮೇಲೆ ಹೇಳಿದ (iii) ಒಂದು ಸರೋ ವರ ಇಂದ್ರದ್ಯುಮ್ನನೆಂಬ ಅರಸು ಲಕ್ಷಗಟ್ಟಲೆ ಗೋವುಗಳನ್ನು ದಾನಮಾಡಿದಾಗ ದಾನೋದಕಪ್ರವಾಹವನ್ನು, ಗೋವುಗಳು ತುಳಿದುದರಿಂದ ಏರ್ಪಟ್ಟ ಒಂದು ಸರೋ ವರ ಇದರಲ್ಲಿ ಅಕೂಪಾರವೆಂಬ ಕೂರ್ಮರಾಜನು ವಾಸವಾಗಿದ್ದನು [ಭಾರ.-ಆ ೧೨೪ ವನ. ೨೦೨]. ನೋಡು—ಅಕೂಪಾರ, ಮಂಥರಕ

**ಇನ್ದ್ರಪ್ರಮಿತಿ.** — ವ್ಯಾಸಶಿಷ್ಯನಾದ ಪೈಲಮುನಿಯ ಶಿಷ್ಯ. ಈತನು ಐತ ರೇಯ (ಋಗ್ವೇದ) ಸಂಹಿತೆಯನ್ನು ವಿಭಾಗಮಾಡಿ - ಬಾಷ್ಕಲ, ಯಾಜ್ಞವಲ್ಕ್ಯ,

ಪರಾಶರ, ಮಾಂಡೂಕೇಯ, ಅಗ್ನಿಮತಿಗಳೆಂಬ ಶಿಷ್ಯರಿಗೆ ಉಪದೇಶಮಾಡಿದನು [ವಿಷ್ಣು.-೩, ೩].

**ಇನ್ದ್ರಪ್ರಸ್ಥ.**—ಹಸ್ತಿನಾಪತಿಗೆ ಸಮೀಪದಲ್ಲಿದ್ದ ಒಂದು ಪಟ್ಟಣ. ದ್ರೌಪದೀ ಸ್ವಯಂವರಾನಂತರ ಧೃತರಾಷ್ಟ್ರನು ಪಾಂಡವರನ್ನು ಕರೆಯಿಸಿ ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟನು ಶ್ರೀ ಕೃಷ್ಣನು ವಿಶ್ವಕರ್ಮನ ಮೂಲಕ ಈ ಪಟ್ಟಣವನ್ನು ನಿರ್ಮಾಣಮಾಡಿಸಿ ಇಂದ್ರಪ್ರಸ್ಥವೆಂದು ಹೆಸರಿಟ್ಟನು ಇದು ಯಮುನೆಯ ಒಡ್ಡಿನಲ್ಲಿದ್ದಿತು ಇದನ್ನೇ ಹಳೆಯ ಡಿಲ್ಲಿಯೆನ್ನುತ್ತಾರೆ [ಭಾರ -ಆ ೨೨೭] ಕೃಷ್ಣ ನಿರ್ಯಾಣಾನಂತರ ಪಾಂಡವರು ಮಹಾಪ್ರಸ್ಥಾನಕ್ಕೆ ಹೊರಡುವ ಮುಂಚೆ ಶ್ರೀ ಕೃಷ್ಣನ ಮೊಮ್ಮಗನಾದ ವಜ್ರನೆಂಬವನಿಗೆ ಇಲ್ಲಿ ಪಟ್ಟಗಟ್ಟಿದರು [ಭಾರ -ಮೌ ೮]

**ಇನ್ದ ವರ್ಮ.**—ಮಾಳವ ದೇಶದ ಅರಸು ಭಾರತಯುದ್ಧದಲ್ಲಿ ದುರ್ಯೋಧನನ ಪರನಾಗಿ ಯುದ್ಧಮಾಡಿದನು ಭೀಮನು ಕೊಂದ ಅಶ್ವತ್ಥಾಮನೆಂಬ ಆನೆ ಇವನ ಸೇನೆಗೆ ಸೇರಿದ್ದು [ಭಾರ -ದ್ರೋ ೧೯೧]

**ಇನ್ದ್ರವಾಹ**—ಇಕ್ಷ್ವಾಕುವಿನ ಮೊಮ್ಮಗನೂ ಶಶಾದನ ಮಗನೂ ಆದ ಕಕುತ್ಸ್ಥನ ನಾಮಾಂತರ ಒಮ್ಮೆ ದೇವತೆಗಳು ರಾಕ್ಷಸರೊಡನೆ ಹೋರಾಡುವಾಗ ಈತನ ಒತ್ತಾಸೆಯನ್ನು ಬೇಡಲಾಗಿ ಈತನು, ಇಂದ್ರನು ತನಗೆ ವಾಹನವಾಗುವುದಾದರೆ ತಾನು ಸಹಾಯಮಾಡುವನೆಂದನು ಇಂದ್ರನು ಅದಕ್ಕೆ ಸಮ್ಮತಿಸಿ ವೃಷಭರೂಪವನ್ನು ಧರಿಸಲಾಗಿ ಈತನು ಆ ವೃಷಭದ ಹಿಣಿಲ (ಕಕುತ್) ಮೇಲೆ ಕುಳಿತು ರಾಕ್ಷಸರನ್ನು ಯುದ್ಧದಲ್ಲಿ ಜಯಿಸಿದನು ಅಂದಿನಿಂದ ಈತನಿಗೆ ಕಕುತ್ಸ್ಥ, ಇನ್ದ್ರವಾಹನೆಂಬ ಹೆಸರುಗಳು ಬಂದುವು ಪುರಂಜಯನೆಂಬುದು ಇವನ ಹೆಸರು [ಭಾರ -ವ ೨೦೫ ದೇ ಭಾ -೭, ೯]

**ಇನ್ದ್ರಸೇನ**—(i) ಪಾಂಡವರ ದೂತ [ಸಭಾ ೧೩, ೩೬ ವನ ೭೦ ಸ್ತ್ರೀ ೨೬] ಪಾಂಡವರು ಅಜ್ಞಾತವಾಸಕ್ಕೆ ಮೊದಲು ಈತನನ್ನು ಶ್ರೀಕೃಷ್ಣನಲ್ಲಿಗೆ ದ್ವಾರಕೆಗೆ ಕಳುಹಿದರು [ವಿರಾ ೫]

(ii) ದಮಯಂತೀ ನಳಚಕ್ರವರ್ತಿಗಳ ಮಗ [ಭಾರ -ವನ ೫೪]

**ಇನ್ದ್ರಸೇನೆ**—(i) ಮೌದ್ಗಲ್ಯನೆಂಬ ಋಷಿಯ ಹೆಂಡತಿ ನಾಲಾಯನಿ ಯೆಂಬುದು ಈಕೆಯ ನಾಮಾಂತರ ಈಕೆಯು ಶಿವನನ್ನು ಕುರಿತು ತಪಸ್ಸುಮಾಡಿ ದ್ರೌಪದಿಯಾಗಿ ಜನಿಸಿದಳು [ಭಾರ -ಆ ೨೧೨]

(ii) ದಮಯಂತೀ ನಳರ ಮಗಳು [ಭಾರ -ವನ ೫೪].

**ಇನ್ದ್ರಾಣಿ**—(i) ಸಪ್ತಮಾತೃಕೆಗಳಲ್ಲಿ ಒಬ್ಬಳು [ಮಾರ್ಕ.-೭೬, ೮೮].

(ii) ಇಂದ್ರನ ರಾಣಿಯಾದ ಶಚೀದೇವಿ. ನಹುಷನು ಇಂದ್ರಪದವಿಯಲ್ಲಿ ಕೆಲಕಾಲ ಅಧಿಕಾರಮಾಡುತ್ತಿದ್ದಾಗ ಈಕೆಯನ್ನು ಮೋಹಿಸಿ ಪದಚ್ಯುತನಾದನು [ಭಾರ -ಉ, ೧೫]

**ಇನ್ದ್ರೋತ** —ಶೌನಕನೆಂಬ ಮುನಿಯ ನಾಮಾಂತರ. ಚಂದ್ರವಂಶದ ಪೂರು ರಾಜನ ಮಗನಾದ ಜನಮೇಜಯರಾಜನು ಗಾರ್ಗ್ಯಮುನಿಯ ಮಗನನ್ನು ಕೊಂದು ಬ್ರಹ್ಮಹತ್ಯೆಗೆ ಗುರಿಯಾಗಿರಲಾಗಿ ಈತನು ಜನಮೇಜಯನಿಂದ ಅಶ್ವಮೇಧ ಯಾಗವನ್ನು ಮಾಡಿಸಿದನು [ಭಾರ -ಶಾಂ.೧೪೯, ೧೫೧ ಹರಿ.-೧, ೩೦. ಬ್ರಹ್ಮ-೧೨].

**ಇರಾ** —ಕಶ್ಯಪಮುನಿಯ ಪತ್ನಿಯರಲ್ಲಿ ಒಬ್ಬಳು ವೃಕ್ಷ, ಲತಾದಿಗಳನ್ನು ಸೃಷ್ಟಿಮಾಡಿದಳು [ಭಾರ.-ಆದಿ. ೬೭]

**ಇರಾವಂತ** —ಉಲೂಪಿಯೆಂಬ ನಾಗಕನ್ಯೆಯಲ್ಲಿ ಅರ್ಜುನನಿಂದ ಜನಿಸಿದವನು. ಭಾರತಯುದ್ಧದಲ್ಲಿ ಶಕುನಿಯ ಆರು ಮಂದಿ ಸಹೋದರರನ್ನು ಕೊಂದು, ದುರ್ಯೋಧನ ಪಕ್ಷದವನಾದ ಆರ್ಶ್ಯಶೃಂಗಿಯೆಂಬ ರಾಕ್ಷಸನಿಂದ ಮಡಿದನು [ಭಾರ -ಆದಿ ೬೩, ೨೩೪, ಭೀ ೯೦] ನೋಡು—ಆರ್ಶ್ಯಶೃಂಗಿ

**ಇಲಬಿಲಾ** —ಅಲಂಬುಸೆಯೆಂಬ ಅಪ್ಸರಸಿಯ ನಾಮಾಂತರ ಈಕೆ ಪುಲಸ್ತ್ಯ ಮುನಿಯ ಮಗನಾದ ವಿಶ್ರವಸನನ್ನು ಮದುವೆಯಾಗಿ ಕುಬೇರನನ್ನು ಪಡೆದಳು [ಭಾಗ -೯, ೨ ಭಾರ -ವನ ೨೭೫, ೨೭೬, ರಾಮಾ -ಉ ೨].

**ಇಲಾ** —ವೈವಸ್ವತಮನುವಿನ ಮಗಳಾಗಿ ಹುಟ್ಟಿ, ವಸಿಷ್ಠಮುನಿಯ ಅನುಗ್ರಹ ದಿಂದ ಪುರುಷತ್ವವನ್ನು ಹೊಂದಿ ಸುದ್ಯುಮ್ನನೆಂಬ ಹೆಸರಿನಿಂದ ರಾಜ್ಯಭಾರ ಮಾಡುತ್ತಿದ್ದು, ಒಮ್ಮೆ ಬೇಟೆಗೆ ಹೋಗಿದ್ದಾಗ, ಪಾರ್ವತಿಯ ಶಾಪಕ್ಕೆ ಎಡೆಯಾ ಗಿದ್ದ ಶರವಣವನ್ನು ಹೊಕ್ಕು ಮರಳಿ ಹೆಂಗಸಾಗಿ ಚಂದ್ರಪುತ್ರನಾದ ಬುಧನಿಂದ ಪುರೂರವನೆಂಬ ಮಗನನ್ನು ಪಡೆದಳು ಬಳಿಕ ಸಹೋದರರ ತಪೋಮಹಿಮೆ ಯಿಂದ ಮೆಚ್ಚಿದ ಪರಮೇಶ್ವರನ ಅನುಗ್ರಹದಿಂದ ಒಂದು ತಿಂಗಳು ಗಂಡಸಾ ಗಿಯೂ ಒಂದು ತಿಂಗಳು ಹೆಂಗಸಾಗಿಯೂ ಇರುವ ಹಾಗೆ ವರವನ್ನು ಪಡೆದಳು. ಗಂಡಸಾಗಿದ್ದಾಗ ಉತ್ಕಲ, ಗಯ, ವಿಮಲರೆಂಬ ಮಕ್ಕಳು ಹುಟ್ಟಿದರು [ಭಾರ - ಆ ೬೩, ೬೯ ಭಾಗ -೯, ೧ ಹರಿ -೧, ೧೦ ಮತ್ಸ್ಯ -೧೧ ಬ್ರಹ್ಮ.-೭] ಇವನಿಗೆ ಸುದ್ಯುಮ್ನನೆಂಬುದು ನಾಮಾಂತರ [ದೇ ಭಾ -೧, ೩]

**ಇಲಾವೃತ.**—ಆಗ್ನೀಧ್ರನ ಮಗನು ಇವನು ಪಾಲಿಸುತ್ತಿದ್ದ ಜಂಬೂದ್ವೀಪದ ಒಂದು ಖಂಡಕ್ಕೂ ಇದೇ ಹೆಸರು. ಈ ಖಂಡವು ಮೇರುವಿನ ಸಮೀಪದಲ್ಲಿ ನೀಲ, ನಿಷಧ, ಹೇಮಕೂಟ, ಹಿಮವತ್ಪರ್ವತಗಳ ನಡುವೆ ಚತುರಶ್ರಾಕಾರವಾಗಿದೆ,

ರಾಜಸೂಯಯಾಗ ಸಮಯದಲ್ಲಿ ಅರ್ಜುನನು ಈ ಖಂಡವನ್ನು ಜಯಿಸಿದನು [ಭಾರ.-ಸ. ೨೯ ಭೀ. ೬. ಮಾರ್ಕ -೫೧, ೫೭. ದೇ.ಭಾ.-೮, ೮]

**ಇಲಿಲ** —ಚಂದ್ರವಂಶದ ತಂಸು (ತ್ರಸ್ನು) ರಾಜನಿಂದ ಕಾಲಿನ್ದಿಯಲ್ಲಿ ಜನಿಸಿದವನು ಇವನು ರಥಂತರಿಯೆಂಬವಳನ್ನು ಮದುವೆಯಾಗಿ ದುಷ್ಯಂತ, ಶೂರ, ಭೀಮ, ಪ್ರವಸು, ವಸು ಎಂಬ ಐವರು ಪುತ್ರರನ್ನು ಪಡೆದನು ಈ ದುಷ್ಯಂತನೇ ಪ್ರಸಿದ್ಧನಾದ ಭರತಚಕ್ರವರ್ತಿಯ ತಂದೆ [ಭಾರ -ಆ ೬೩, ೮೮]

**ಇಲ್ವಲ** —ವಾತಾಪಿಯ ಅಣ್ಣ [ಭಾರ -ವನ. ೯೪, ೯೬ ರಾಮಾ -ಅರ. ೧೧]. ಇವರಿಬ್ಬರೂ ಹಿರಣ್ಯಕಶಿಪುವಿನ ಸೋದರಳಿಯಂದರು [ಮತ್ಸ್ಯ -೬]. ಹಿರಣ್ಯಕಶಿಪುವಿನ ಮಗನಾದ ಹ್ಲಾದನ ಮಗನು [ಭಾಗ -೬, ೧೮] ಮಣಿಮತಿಯೆಂಬ ಪಟ್ಟಣವು ಇವನ ರಾಜಧಾನಿ [ವನ ೯೪] ಇಲ್ವಲನೂ ವಾತಾಪಿಯೂ ತಮಗೆ ಇಂದ್ರಸಂತಹ ಮಗನು ಹುಟ್ಟಬೇಕೆಂಬ ಆಸೆಯಿಂದ, ತಮ್ಮನ್ನು ಅನುಗ್ರಹಿಸುವಂತೆ ಬ್ರಾಹ್ಮಣರನ್ನು ಬೇಡಿ, ತಮ್ಮ ಇಷ್ಟಾರ್ಥವು ಕೈಗೂಡದಿದ್ದ ಕಾರಣ ಬ್ರಾಹ್ಮಣರನ್ನು ಪೀಡಿಸತೊಡಗಿದರು ಇಲ್ವಲನು ವಾತಾಪಿಯನ್ನು ಮೇಕೆಯನ್ನಾಗಿಸಿ ಕೊಂದು ಆ ಮಾಂಸವನ್ನು ಬ್ರಾಹ್ಮಣರಿಗೆ ಅಡುಗೆಮಾಡಿ ಬಡಿಸಿ, ಅವರು ತಿಂದ ಬಳಿಕ " ವಾತಾಪಿ ! ಹೊರಗೆ ಬಾ " ಎಂದು ಕರೆದ ಕೂಡಲೇ ವಾತಾಪಿ ಬ್ರಾಹ್ಮಣರ ಹೊಟ್ಟೆಯನ್ನು ಸೀಳಿಕೊಂಡು ಹೊರಬರುತ್ತಿದ್ದ ಹೀಗೆ ಅನೇಕ ಮಂದಿ ಬ್ರಾಹ್ಮಣರು ಸತ್ತರು ಒಮ್ಮೆ ಅಗಸ್ತ್ಯನು ಧನಾಪೇಕ್ಷೆಯಿಂದ ಇಲ್ವಲನಲ್ಲಿಗೆ ಬಂದಿದ್ದಾಗ ಇಲ್ವಲನು ಹಿಂದಿನ ಹಾಗೆಯೇ ಮಾಡಿದ ಅಗಸ್ತ್ಯನು ಇವರ ಗುಟ್ಟನ್ನು ತಿಳಿದು, " ವಾತಾಪಿ ! ಹೊಟ್ಟೆಯಲ್ಲಿಯೇ ಜೀರ್ಣವಾಗಿಬಿಡು " ಎಂದ ವಾತಾಪಿಯು ಅಗಸ್ತ್ಯನ ಹೊಟ್ಟೆಯಲ್ಲಿಯೇ ಜೀರ್ಣನಾದ ಇಲ್ವಲನು ಹೆದರಿ ಅಗಸ್ತ್ಯನನ್ನು ಮರೆಹೊಕ್ಕು, ಅಂದಿನಿಂದ ಬ್ರಹ್ಮದ್ವೇಷವನ್ನು ಬಿಟ್ಟನು [ಭಾರ -ವನ. ೯೬, ೯೭] ಇಲ್ವಲನ ಮಗನಾದ ಬಲ್ವಲನನ್ನು ಬಲರಾಮನು ಕೊಂದನು [ಭಾಗ.-೧೦, ೭೯]

**ಇಷೀಕ.**—ಒಬ್ಬ ಬ್ರಾಹ್ಮಣ ಈತನು ಗಂಗಾತೀರದಲ್ಲಿ ನಿಯಮದಿಂದಿದ್ದಾಗ ಶಿಖಂಡಿಯು ತನಗೆ ಪುರುಷತ್ವ ಪ್ರಾಪ್ತಿಗಾಗಿ ಈತನನ್ನು ಶುಶ್ರೂಷೆಮಾಡಿದ [ಭಾರ.-ಆದಿ ೧೧೦]

## ಈ

**ಈಶಾನ.**—ಅಷ್ಟದಿಕ್ಪಾಲಕರಲ್ಲಿ ಒಬ್ಬ. ಈತ ನೆಲೆಸಿರುವ ದಿಕ್ಕಿಗೆ ಈಶಾನ್ಯವೆಂಥು ಹೆಸರು. ಅಷ್ಟಮೂರ್ತಿಗಳಲ್ಲಿ ಒಂದು ರೂಪ.

**ಈಶಾವಾಸ್ಯ**—ಶುಕ್ಲಯಜುರ್ವೇದದ ಒಂದು ಉಪನಿಷತ್ತು

**ಈಶ್ವರ**—(i) ಸರ್ವವ್ಯಾಪಕನಾದ ಪರಮಾತ್ಮ

(ii) ಚಂದ್ರವಂಶದ ಪೂರುರಾಜನ ಮಗ ಪೌಷ್ಟಿಯೆಂಬವಳು ಇವನ ತಾಯಿ [ಭಾರ -ಆದಿ. ೮೮]

## ಉ

**ಉಗ್ರ**—ಅಷ್ಟಮೂರ್ತಿಯ ಒಂದು ರೂಪದ ಹೆಸರು ನೋಡು—ಅಷ್ಟಮೂರ್ತಿ

**ಉಗ್ರಕ**—ಕಶ್ಯಪಮುನಿಯಿಂದ ಕದ್ರುವಿನಲ್ಲಿ ಜನಿಸಿದ ಸರ್ಪರಾಜರಲ್ಲಿ ಒಬ್ಬ [ಭಾರ -ಆ ೬೬]

**ಉಗ್ರಕರ್ಮ**—ಸಾಲ್ವದೇಶದ ಅರಸು ಮ್ಲೇಚ್ಛರ ಅಧಿಪತಿ ಭಾರತಯುದ್ಧದಲ್ಲಿ ಭೀಮನಿಂದ ಹತನಾದ [ಭಾರ -ಕ ೨]

**ಉಗ್ರಪಾಂಡ್ಯ**—ತಟಾತಕಾ ಸುಂದರೇಶ್ವರರ ಮಗ ದಕ್ಷಿಣ ಮಧುರೆ (Madura)ಯ ಅರಸು ಹೆಂಡತಿ ಕಾಂತಿಮತಿ ಮಗನು ವೀರಪಾಂಡ್ಯ. ಉಗ್ರಪಾಂಡ್ಯನು ೯೯ ಯಜ್ಞಗಳನ್ನು ಮಾಡಿ ೧೦೦ ನೆಯ ಯಜ್ಞಕ್ಕೆ ದೀಕ್ಷೆಯನ್ನು ಕೈಕೊಂಡ ಕೂಡಲೇ ಇಂದ್ರ ಈತನ ಪಟ್ಟಣವನ್ನು ನೀರಿನಲ್ಲಿ ಕೊಚ್ಚಿಕೊಂಡು ಹೋಗುವಂತೆ ಸಮುದ್ರ ರಾಜನಿಗೆ ಹೇಳಿದ ಈ ವಿಷಯವು ಉಗ್ರಪಾಂಡ್ಯನಿಗೆ ಸುಂದರೇಶ್ವರನ ಮೂಲಕ ಸ್ವಪ್ನದಲ್ಲಿ ತಿಳಿದುಬಂತು ಸಮುದ್ರವೂ ಉಕ್ಕಿಬಂತು ಆದರೆ ಸುಂದರೇಶ್ವರನ ಮಹಿಮೆಯಿಂದ ಹಿಂಜರಿಯಿತು ಬಳಿಕ ಪಾಂಡ್ಯದೇಶದಲ್ಲಿ ಮಳೆ ಸುರಿಯದಂತೆ ಇಂದ್ರನು ಮೇಘಗಳನ್ನು ಅಡ್ಡಗಿಸಿದ ಇದನ್ನು ತಿಳಿದು ಉಗ್ರಪಾಂಡ್ಯ ಇಂದ್ರನೊಂದಿಗೆ ಯುದ್ಧಮಾಡಿ ಅವನನ್ನು ಸೋಲಿಸಿ ಮಳೆ ಸುರಿಯುವಂತೆ ಮಾಡಿದ [ಸ್ಕಾ -ಹಾಲಾ ೨೨]

**ಉಗ್ರಶ್ರವ**—ಪೌರಾಣಿಕಶ್ರೇಷ್ಠನಾದ ಸೂತ (ರೋಮಹರ್ಷಣ) ಮುನಿಯ ಮಗ [ಭಾರ -ಆ. ೧]

**ಉಗ್ರಸೇನ**—(i) ಚಂದ್ರವಂಶದ ಅರಸು ಕಂಸನ ತಂದೆ [ಭಾರ -ಸ ೨೩] ಯದುವಂಶದ ಆಹುಕನ ಮಗ ದೇವಕ ಇವನ ಒಡಹುಟ್ಟಿದವನು [ಭಾಗ -೯, ೨೪. ವಿಷ್ಣು -೪, ೧೪] ಕಂಸವಧೆಯ ಬಳಿಕ ಕೃಷ್ಣನು ಈತನಿಗೆ ಮರಳಿ ರಾಜ್ಯದಲ್ಲಿ ಪಟ್ಟಗಟ್ಟಿದ [ಭಾರ -ಸ ೫೩]

(ii) ಚಂದ್ರವಂಶದ ಅರಸು ಅರ್ಜುನನ ಮೊಮ್ಮಗನಾದ ಪರೀಕ್ಷಿತನ ಮಗ ಜನಮೇಜಯರಾಜನ ಸಹೋದರ ಸರ್ಪಯಾಗದಲ್ಲಿ ಸಾರಮೇಯುವನ್ನು ಹೊಡೆದವನು [ಭಾರ -ಆ. ೩].

**ಉಗ್ರಾಯುಧ** —ಪುರುವಂಶದ ಅರಸು ಶಂತನು ಸತ್ತ ಬಳಿಕ ಸತ್ಯವತಿಯನ್ನು ತನಗೆ ಒಪ್ಪಿಸುವಂತೆ ಭೀಷ್ಮನಿಗೆ ಹೇಳಿಕಳುಹಿ ಭೀಷ್ಮನಿಂದ ಹತನಾದ [ಹರಿ.-ಸಂಭ ೨೦]

**ಉಚಥ್ಯ**.—ಒಬ್ಬ ಋಷಿ. ಅಂಗಿರಸನ ಮಗ ಬೃಹಸ್ಪತಿಯೂ ಸಂವರ್ತನೂ ಈತನ ತಮ್ಮಂದಿರು ಉತಥ್ಯನೆಂಬುದು ನಾಮಾಂತರ [ಭಾರ -ಆ ೬೭ ಅನು ೧೩೨. ದೇ ಭಾಗ -೩, ೧೦-೧೧] ಚಂದ್ರನ ಮಗಳಾದ ಭದ್ರೆಯೆಂಬವಳು ಈತನ ಹೆಂಡತಿ ಒಮ್ಮೆ ಈತನು ತನ್ನ ಹೆಂಡತಿಯೊಂದಿಗೆ ಯಮುನೆಯಲ್ಲಿ ಸ್ನಾನಮಾಡುತ್ತಿದ್ದಾಗ ವರುಣನು ಭದ್ರೆಯನ್ನು ಅಪಹರಿಸಲಾಗಿ, ಈತನು ಸಮುದ್ರವನ್ನು ಶೋಷಿಸಿ, ವರುಣನ ಮೂಲಕ ಭದ್ರೆಯನ್ನು ಮರಳಿ ಹೊಂದಿದ [ಭಾರ -ಅನು ೨೫೯]. ಈತನ ಹೆಂಡತಿಯಾದ ಮಮತೆಯೆಂಬವಳು ಗರ್ಭಿಣಿಯಾಗಿದ್ದಾಗ ಬೃಹಸ್ಪತಿ ಆಕೆಯನ್ನು ಅಪಹರಿಸಿದ [ಆದಿ ೧೧೩ ಶಾಂತಿ ೩೫೦] ಉಚಥ್ಯನ ವೀರ್ಯದಿಂದ ಜನಿಸಿದವನು ದೀರ್ಘತಮ [ಆದಿ ೧೧೩] ಬೃಹಸ್ಪತಿ ವೀರ್ಯದಿಂದ ಜನಿಸಿದವನು ಭರದ್ವಾಜನೆಂಬ ಮುನಿ [ಭಾಗ -೯, ೨೦. ವಿಷ್ಣು -೪,೧೯ ಮತ್ಸ್ಯ -೪೯] ಮಾಂಧಾತ ರಾಜನೊಂದಿಗೆ ಕ್ಷತ್ರಧರ್ಮ ವಿಷಯವಾಗಿ ವಿವಾದಮಾಡಿದ [ಶಾಂತಿ -೯೦]

**ಉಚ್ಚೈಶ್ಶ್ರವಸ್ಸು** —(i) ಇಂದ್ರನ ಪಟ್ಟದ ಕುದುರೆ ಕ್ಷೀರಸಮುದ್ರದಲ್ಲಿ ಅಮೃತಮಥನ ಸಮಯದಲ್ಲಿ ಹುಟ್ಟಿದುದು [ಭಾಗ -೮, ೮ ಭಾರ -ಆ. ೧೮ ವಿಷ್ಣು -೯].

(ii) ಸೂರ್ಯ ರಥವನ್ನು ಎಳೆಯುವ ಕುದುರೆ [ಮತ್ಸ್ಯ.-೨೪೯] ಕದ್ರು, ವಿನತೆಯರು ಉಚ್ಚೈಶ್ಶ್ರವಸ್ಸನ್ನು ನೋಡಿ ಅದರ ಬಾಲವನ್ನು ಕಂಡು ಕಪ್ಪಗಿರುವುದೆಂತಲೂ ಬೆಳ್ಳಗಿರುವುದೆಂತಲೂ ಪಂತಮಾಡಿದ್ದು [ಭಾರ -ಆದಿ ೧೭]. ಕದ್ರುವಿನ ಮಗನಾದ ಕರ್ಕೋಟಕನು ಅದರ ಬಾಲವನ್ನು ಕಪ್ಪಗೆ ಕಾಣುವಂತೆ ಮಾಡಿದ್ದು [ಭಾರ -ಆ. ೨೦, ೨೨]

(iii) ಬೆಸ್ತರ ಅರಸು. ಶಂತನುಪತ್ನಿಯಾದ ಸತ್ಯವತಿಯ ಸಾಕುತಂದೆ [ಭಾರ -ಆದಿ. ೧೦೭].

(iv) ಒಬ್ಬ ಅರಸು ಚಂದ್ರವಂಶದ ಅವಿಕ್ಷಿತರಾಜನಿಂದ ವಾಹಿನಿಯೆಂಬವಳಲ್ಲಿ ಜನಿಸಿದವನು ಪರಿಕ್ಷಿತ್ ಮುಂತಾದ ಏಳು ಮಂದಿ ಇವನ ಒಡಹುಟ್ಟಿದವರು [ಭಾರ.-ಆದಿ. ೧೦೧]

**ಉಜ್ಜಯನ್ತ**.—ಸೌರಾಷ್ಟ್ರದೇಶದಲ್ಲಿ ಪ್ರಭಾಸ ತೀರ್ಥದ ಸಮೀಪದಲ್ಲಿರುವ ಒಂದು ಪರ್ವತ. ಈಗಣ ಕಾಥೇವಾಡಿ ಜಿಲ್ಲೆಯಲ್ಲಿ ಜುನಾಗಢ್ (Junagar)ಗೆ

ಸಮೀಪದಲ್ಲಿ ಗಿರ್‌ನಾರ್ (Girnar) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ [ಭಾರ.-ವನ. ೮೬]

**ಉಜ್ಜಾನಕ** —ಒಂದು ತೀರ್ಥ. ಕಾಶ್ಮೀರ ದೇಶದ ಪಶ್ಚಿಮ ಭಾಗದಲ್ಲಿ ಸಿಂಧೂ ನದಿಯ ತೀರದಲ್ಲಿದೆ [ವನ ೧೩೦].

**ಉಜ್ಜಯಿನಿ** —ಮಾಳವ ದೇಶದಲ್ಲಿರುವ ಒಂದು ಪಟ್ಟಣ ೧೮ ಶಕ್ತಿ (ಯೋಗ) ಪೀಠಗಳಲ್ಲಿ ಒಂದು ಇಲ್ಲಿನ ಶಕ್ತಿಗೆ ಮಹಾಕಾಳಿಯೆಂತಲೂ, ಶಿವನಿಗೆ ಮಹಾ ಕಾಳೇಶ್ವರನೆಂತಲೂ ಹೆಸರು ಹಿಂದೆ ವಿಕ್ರಮಾರ್ಕನು ಇಲ್ಲಿ ರಾಜ್ಯಭಾರಮಾಡುತ್ತಿದ್ದ ಇದು ಅವಂತೀದೇಶದ ರಾಜಧಾನಿಯಾಗಿದ್ದಿತು ನೋಡು—ಅವಂತಿ.

**ಉತಥ್ಯ**.—ನೋಡು—ಉಚಥ್ಯ.

**ಉತ್ಕಲ** —(i) ಒಂದು ದೇಶ ಕಳಿಂಗರಾಜ್ಯಕ್ಕೆ ಉತ್ತರದಲ್ಲಿ ಗೌಡರಾಜ್ಯದಲ್ಲಿರುವ ಒಢ್ರವೆಂಬ ದೇಶದ ನಾಮಾಂತರ (Orissa) [ಭೀ ೯]

(ii) ಉತ್ತಾನಪಾದರಾಜನ ಮಗನಾದ ಧ್ರುವನಿಂದ ವಾಯುಪುತ್ರಿಯಾದ ಇಲೆಯಲ್ಲಿ ಹುಟ್ಟಿದ ಹಿರಿಯ ಮಗ. ಈತ ಬಾಲ್ಯದಲ್ಲಿಯೇ ವೈರಾಗ್ಯವನ್ನು ಪಡೆದು ರಾಜ್ಯವನ್ನು ತ್ಯಾಗಮಾಡಿದುದರಿಂದ ಇವನ ತಮ್ಮನಾದ ವತ್ಸರನು ಧ್ರುವನ ತರುವಾಯ ಅರಸನಾದ [ಭಾಗ -೪, ೧೩]

(iii) ವೃತ್ರಾಸುರನ ಪರಿವಾರದಲ್ಲಿನ ಒಬ್ಬ ರಾಕ್ಷಸ ಕ್ಷೀರಸಮುದ್ರ ಮಥನವಾದ ಬಳಿಕ ಈತನು ಸಪ್ತಮಾತೃಕೆಗಳೊಡನೆ ಯುದ್ಧಮಾಡಿದನು [ಭಾಗ-೮, ೧೦]

**ಉತ್ಕೋಚಕ** —ಒಂದು ತೀರ್ಥ ಧೌಮ್ಯಮಹರ್ಷಿ ಇಲ್ಲಿ ತಪಸ್ಸು ಮಾಡುತ್ತಿದ್ದಾಗ, ದ್ರೌಪದೀಸ್ವಯಂವರಕ್ಕೆ ಹೊರಟಿದ್ದ ಪಾಂಡವರು ಇಲ್ಲಿಗೆ ಬಂದು ಧೌಮ್ಯಮುನಿಯನ್ನು ತಮ್ಮ ಪುರೋಹಿತನನ್ನಾಗಿ ವರಿಸಿದರು [ಆದಿ ೧೯೯]

**ಉತ್ತಙ್ಕ** —(ಉದಙ್ಕ) ಒಬ್ಬ ಋಷಿ ಬೈದನೆಂಬ ಮಹರ್ಷಿಯ ಶಿಷ್ಯರಲ್ಲಿ ಒಬ್ಬನು ಗುರುದಕ್ಷಿಣಾರೂಪವಾಗಿ ಪೌಷ್ಯರಾಜನ ರಾಣಿ ಧರಿಸಿದ್ದ ಕುಂಡಲಗಳನ್ನು ತಂದುಕೊಡಬೇಕೆಂದು ಗುರುಪತ್ನಿಯಿಂದ ಪ್ರೇರಿತನಾಗಿ, ಅವುಗಳನ್ನು ಬೇಡಿ, ತರುವಾಗ ದಾರಿಯಲ್ಲಿ ತಕ್ಷಕನು ಅವುಗಳನ್ನು ಅಪಹರಿಸಿದನು ಈತನು ಪಾತಾಳಲೋಕವನ್ನು ಹೊಕ್ಕು, ಸರ್ಪಗಳನ್ನು ಹೊಗಳಿ, ಆ ಕುಂಡಲಗಳನ್ನು ಪಡೆದು ಗುರುಪತ್ನಿಗೆ ತಂದೊಪ್ಪಿಸಿದನು. ಬಳಿಕ ತಕ್ಷಕನ ಮೇಲಣ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಜನಮೇಜಯನಿಂದ ಸರ್ಪಯಾಗವನ್ನು ಮಾಡಿಸಿದನು [ಭಾರ.-ಆ. ೩].

**ಉತ್ತಮ** —(i) ಉತ್ತಾನಪಾದರಾಜನ ಕಿರಿಯ ಹೆಂಡತಿಯಾದ ಸುರುಚಿಯ ಮಗನು ಇವನು ಒಮ್ಮೆ ಹಿಮವತ್ಪರ್ವತದ ಬಳಿ ಬೇಟೆಗೆ ಹೋಗಿದ್ದಾಗ ಬೇಡರು ಇವನನ್ನು ಕೊಂದರು [ಭಾಗ -೪, ೧೦, ೧೩].

(ii) ಪ್ರಿಯವ್ರತರಾಜನ ಕಿರಿಯ ಹೆಂಡತಿಯಲ್ಲಿ ಜನಿಸಿದ ಮೂವರು ಮಕ್ಕಳಲ್ಲಿ ಹಿರಿಯವನು. ಈತನು ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದಲ್ಲಿ ಮೂರನೆಯ ಮನುವಾಗಿದ್ದನು. ಪ್ರಸಿದ್ಧರಾದ ೧೪ ಮಂದಿ ಮನುಗಳಲ್ಲಿ ಒಬ್ಬನು [ಭಾಗ -೮, ೧. ಮತ್ಸ್ಯ - ೯]

**ಉತ್ತಮಸ್.**—೨೧ ನೆಯ ಪರ್ಯಾಯದ ದ್ವಾಪರಯುಗದಲ್ಲಿ ವ್ಯಾಸಪಟ್ಟವನ್ನು ಪಡೆದಿದ್ದವನು. ಈತನಿಗೆ ಹರ್ಯಾತ್ಮನೆಂಬುದು ನಾಮಾಂತರ [ದೇ ಭಾ -೧, ೪]

**ಉತ್ತಮೌಜ** —ಪಾಂಚಾಲರಾಜನಾದ ದ್ರುಪದನ ಮಗ [ಭಾರ -ಉ ೧೯೬ ದ್ರೋ. ೨೧, ೨೫, ೧೫೦]. ಭಾರತಯುದ್ಧವು ಮುಗಿದ ರಾತ್ರಿ ಅಶ್ವತ್ಥಾಮನಿಂದ ಹತನಾದನು [ಭಾರ -ಸೌ ೮]

**ಉತ್ತರ** —ವಿರಾಟನ ಮಗ [ವಿರಾ. ೩೮] ರಥೋದಾರ [ಉದ್ಯೋ ೧೭೭] ಇವನ ಸಹೋದರ ಶ್ವೇತ [ಭೀ. ೪೭] ದ್ರೌಪದೀಸ್ವಯಂವರ ಕಾಲದಲ್ಲಿ ಪಾಂಚಾಲ ನಗರಿಗೆ ಹೋಗಿದ್ದ [ಆದಿ ೨೦೧] ಉತ್ತರಗೋಗ್ರಹಣ ಸಮಯದಲ್ಲಿ ಬೃಹನ್ನಳೆಯನ್ನು ಸಾರಥಿಯನ್ನಾಗಿ ನೇಮಿಸಿಕೊಂಡು ಯುದ್ಧಕ್ಕೆ ಹೊರಟು, ಕೌರವರ ಸೇನೆಯನ್ನು ಕಂಡು ಹೆದರಿ ಓಡಿಹೋದ [ವಿರಾ. ೩೯] ಭಾರತಯುದ್ಧದಲ್ಲಿ ಶಲ್ಯನಿಂದ ಹತನಾದನು [ಭೀ ೪೭]

**ಉತ್ತರ (ಫಲ್ಗುನೀ)** —ದಕ್ಷನ ಹೆಣ್ಣುಮಕ್ಕಳಲ್ಲಿ ಒಬ್ಬಳು ಚಂದ್ರನ ಹೆಂಡತಿ ಒಂದು ನಕ್ಷತ್ರ [ಭಾರ -ಆದಿ ೬೬ ಭಾಗ -೬೫]

**ಉತ್ತರಾ** —ವಿರಾಟರಾಜನ ಮಗಳು ಅಭಿಮನ್ಯುವಿನ ಹೆಂಡತಿ ಪರಿಕ್ಷಿದ್ರಾಜನ ಜನನಿ [ಆದಿ ೬೩. ವಿರಾ ೩೮, ೬೭ ಅಶ್ವ ೬೮] ಉತ್ತರಾಪರಿಣಯ [ವಿರಾ ೭೮] ಅಶ್ವತ್ಥಾಮನು ಉತ್ತರೆಯ ಗರ್ಭದಮೇಲೆ ಐಷೀಕಾಸ್ತ್ರವನ್ನು ಬಿಟ್ಟದ್ದು [ಸೌ ೧೫] ಅಭಿಮನ್ಯುವಿನ ಶವವನ್ನು ಕಂಡು ಉತ್ತರೆಯ ಪ್ರಲಾಪ [ಸ್ತ್ರೀ ೨೦]

**ಉತ್ತರಾಯಣ.**—ಸೂರ್ಯನು ಉತ್ತರಧ್ರುವರೇಖೆಯಲ್ಲಿ ಸಂಚರಿಸುವ ಕಾಲ ಮಕರಸಂಕ್ರಮಣದಿಂದ ಕರ್ಕಾಟಕಸಂಕ್ರಮಣ (ಅಥವಾ ಸಾಮಾನ್ಯವಾಗಿ ಪುಷ್ಯಮಾಸದಿಂದ ಆಷಾಢಮಾಸ) ದ ವರೆಗೆ ಆರು ತಿಂಗಳು [ವಿಷ್ಣು.-೧, ೩].

**ಉತ್ತರಾಭಾದ್ರ.**—ದಕ್ಷನ ಮಕ್ಕಳಲ್ಲಿ ಒಬ್ಬಳು ಚಂದ್ರನ ಹೆಂಡತಿ. ೨೭ ನಕ್ಷತ್ರಗಳಲ್ಲಿ ಒಂದು [ಭಾರ.-ಆ ೬೬, ೬೭. ಭಾಗ.-೬, ೫]

**ಉತ್ತರಾಷಾಢ.**—ದಕ್ಷನ ಮಕ್ಕಳಲ್ಲಿ ಒಬ್ಬಳು ಚಂದ್ರನ ಹೆಂಡತಿ. ೨೭ ನಕ್ಷತ್ರಗಳಲ್ಲಿ ಒಂದು [ಭಾರ.-ಆ. ೬೬, ೬೭. ಭಾಗ -೬, ೫]

**ಉತ್ತಾನಪಾದ.**—ಸ್ವಾಯಂಭುವ ಮನುವಿನ ಕಿರಿಯ ಮಗ ಪ್ರಿಯವ್ರತನ ತಮ್ಮ. ಈತನಿಗೆ ಸುನೀತಿ, ಸುರುಚಿಯೆಂಬುದಾಗಿ ಇಬ್ಬರು ಪತ್ನಿಯರು ಸುನೀತಿಯ ಮಗನು ಧ್ರುವನು. ಸುರುಚಿಯ ಮಗನು ಉತ್ತಮ [ಭಾಗ.-೪, ೯ ಮತ್ಸ್ಯ -೪ ವಿಷ್ಣು -೧, ೧೧].

**ಉತ್ಪಾತ.**—ಅಪಶಕುನಗಳು—ಅವುಗಳ ಫಲ [ಸಭಾ. ೬೯ ವಿರಾ ೪೬ ಉ ೮೪ ಭೀ. ೨, ೪ ಶಾಂತಿ ೩೨೨ ಮೌ ೪]

**ಉತ್ಸವಸಂಕೇತ.**—ಕಾಶ್ಮೀರದೇಶದೊಳಗಣ ಪರ್ವತಭೂಯಿಷ್ಠವಾದ ಒಂದು ದೇಶ [ಸಭಾ ೨೮, ೩೫ ಭೀ ೯]

**ಉದಙ್ಕ (ಉತ್ತಙ್ಕ)**—ಒಬ್ಬ ಋಷಿ ವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಿ ಮಹಿಮೆಯನ್ನು ಪಡೆದನು [ಭಾರ -ವನ ೨೦೪] ಕುವಲಾಶ್ವರಾಜನ ಮೂಲಕ ಧುಂಧುವೆಂಬ ರಾಕ್ಷಸನನ್ನು ಕೊಲ್ಲಿಸಿದನು [ಭಾರ -ವನ ೨೦೫] ಮಹಾಭಾರತ ಯುದ್ಧವು ಮುಗಿದ ಬಳಿಕ ಶ್ರೀ ಕೃಷ್ಣನು ಈತನ ಆಶ್ರಮವನ್ನು ಹೊಕ್ಕು ಉದಂಕನಿಗೆ ನಮಸ್ಕಾರಮಾಡಿದ ಯುದ್ಧದಲ್ಲಿ ಮಡಿದವರ ಪ್ರಾಣನಾಶಕ್ಕೆಲ್ಲಾ ಇವನೇ (ಕೃಷ್ಣನೇ) ಕಾರಣವೆಂದು ಭಾವಿಸಿ ಉದಂಕನು ಕೃಷ್ಣನಿಗೆ ಶಾಪಕೊಡತೊಡಗಲಾಗಿ, ಕೃಷ್ಣನು ವಿರಾಡ್ರೂಪವನ್ನು ತಳೆದ ಉದಂಕನು ಅದನ್ನು ನಂಬಲಾರದೆ ಮತ್ತೊಂದು ನಿದರ್ಶನವನ್ನು ತೋರೆನಲು, ಉದಂಕನು ಅಪೇಕ್ಷಿಸಿದ ಪ್ರದೇಶದಲ್ಲೆಲ್ಲಾ ಅವನಿಗೆ ನೀರು ದೊರೆಯುವಂತೆ ವರವಿತ್ತನು ಉದಂಕನು ಗೌತಮಮುನಿಯ ಶಿಷ್ಯನಾಗಿದ್ದು ಆತನ ಮಗಳನ್ನು ಮದುವೆಯಾದನು ಗೌತಮಪತ್ನಿಯಾದ ಅಹಲ್ಯೆ ಗುರುದಕ್ಷಿಣೆಯ ಪ್ರತಿಯಾಗಿ ಸೂರ್ಯವಂಶದ ಸೌದಾಸ ಅಥವಾ ಮಿತ್ರಸಹರಾಜನ ಪತ್ನಿಯಾದ ಮದವತಿ ಧರಿಸಿದ್ದ ಕುಂಡಲಗಳನ್ನು ತಂದುಕೊಡುವಂತೆ ಹೇಳಲಾಗಿ, ಅವುಗಳನ್ನು ತಂದು ಅಹಲ್ಯೆಗೆ ಒಪ್ಪಿಸಿದನು [ಭಾರ.-ಅಶ್ವ ೫೩, ೫೮].

**ಉದಾನ**—ದೇಹದಲ್ಲಿರುವ ಐದು ಬಗೆಯ, ಪ್ರಾಣವಾಯುಗಳಲ್ಲಿ ಒಂದು. ಕಂಠದಲ್ಲಿರುತ್ತದೆ.

**ಉದ್ದಾಲಕ.**—(1) ನೋಡು—ಆರುಣಿ ಅಪೋದಮುನಿ ಪುತ್ರನಾದ ಧೌಮ್ಯಮುನಿಯ ಶಿಷ್ಯ ಗದ್ದೆಗೆ ಹರಿಯುತ್ತಿದ್ದ ನೀರನ್ನು ಅಡ್ಡಗಟ್ಟುವಂತೆ ಗುರುವಿನಿಂದ ಪ್ರೇರಿತನಾಗಿ, ಎಷ್ಟು ಪಾಡು ಪಟ್ಟರೂ ನೀರು ನಿಲ್ಲದಿರಲು, ಪ್ರವಾಹಕ್ಕೆ ಅಡ್ಡವಾಗಿ ತಾನೇ ಮಲಗಿದ್ದ. ಬಹಳ ಹೊತ್ತಿನವರೆಗೂ ಉದ್ದಾಲಕನು ಬಾರದಿರಲಾಗಿ ಧೌಮ್ಯನು ಗದ್ದೆಯ ಬಳಿಗೆ ಹೋಗಿ ಕರೆದ. ಆಗ ಇವನು ನೀರನ್ನು ಭೇದಿಸಿಕೊಂಡು ಎದ್ದು

ಬಂದುದರಿಂದ ಇವನಿಗೆ ಉದ್ದಾಲಕನೆಂಬ ಹೆಸರು ಬಂತು [ಭಾರ.-ಆದಿ. ೩, ೮]. ಈತನು ಕುಶಿಕ ಪುತ್ರಿಯನ್ನು ಮದುವೆಯಾಗಿ ಶ್ವೇತಕೇತು, ನಚಿಕೇತರೆಂಬ ಪುತ್ರರನ್ನೂ, ಸುಜಾತೆ(ಕಹೋಳಮುನಿ ಪತ್ನಿ)ಯೆಂಬ ಕನ್ಯೆಯನ್ನೂ ಪಡೆದನು [ಭಾರ.-ವನ ೧೩೪] ಒಮ್ಮೆ ಅಪುತ್ರನಾದ ಒಬ್ಬ ಬ್ರಾಹ್ಮಣನು ಸಂತಾನಾರ್ಥವಾಗಿ ಈತನ ಮಡದಿಯನ್ನು ತನಗೆ ಕೊಡುವಂತೆ ಕೇಳಿದನು. ಅದನ್ನು ಕೇಳಿ ಸಿಟ್ಟುಗೊಂಡ ಶ್ವೇತಕೇತು ಸ್ತ್ರೀ ಪುರುಷರ ನಡೆವಳಿಗಳನ್ನು ಗೊತ್ತುಪಡಿಸಿದನು [ಭಾರ.-ಆ. ೧೭೮] ಅಷ್ಟಾವಕ್ರನು ಈತನ ದೌಹಿತ್ರನು [ಭಾರ -ವನ ೧೩೪]

(11) ಒಬ್ಬ ಋಷಿ ಚಂಡಿಯೆಂಬ ಹೆಂಗಸನ್ನು ಮದುವೆಯಾಗಿದ್ದನು. ಆಕೆ ಇವನ ಮಾತಿಗೆ ಪ್ರತಿಯಾಗಿಯೇ ನಡೆಯುತ್ತಿದ್ದಳು ಒಂದು ದಿನ ತನ್ನಲ್ಲಿಗೆ ಬಂದ ಕೌಂಡಿನ್ಯ ಮುನಿಗೆ ಉದ್ದಾಲಕನು ತನ್ನ ದುರವಸ್ಥೆಯನ್ನು ಹೇಳಿದನು ಬಳಿಕ ಕೌಂಡಿನ್ಯನು ಉದ್ದಾಲಕನನ್ನು ಕುರಿತು "ನಿನಗೆ ಏನು ಬೇಕೋ ಅದಕ್ಕೆ ವ್ಯತಿರಿಕ್ತವಾಗಿ ಹೇಳಿದರೆ ಆಕೆ ಅದಕ್ಕೆ ಪ್ರತಿಯಾಗಿ ನಡೆಯುವ ಸ್ವಭಾವವುಳ್ಳವಳಾದುದರಿಂದ ನಿನ್ನ ಕೋರಿಕೆ ನೆರವೇರುವುದು" ಎಂದು ಹೇಳಿದನು. ಇಂತೆಯೇ ಉದ್ದಾಲಕನು ಕೆಲ ಕಾಲ ಸಂತೋಷದಿಂದ ಕಳೆದ ಒಂದು ದಿನ ಉದ್ದಾಲಕನ ತಂದೆಯ ಶ್ರಾದ್ಧವು ಬಂತು ಕೌಂಡಿನ್ಯನ ಉಪದೇಶಾನುಸಾರ ಎಲ್ಲವೂ ಕ್ರಮವಾಗಿ ನಡೆಯಿತು ಕಡೆಗೆ ಪಿಂಡಗಳನ್ನು "ತಿಪ್ಪೆಗೆ ಬಿಸಾಡು" ಎನ್ನುವುದಕ್ಕೆ ಪ್ರತಿಯಾಗಿ "ನೀರಿನಲ್ಲಿ ಬಿಡು" ಎಂದು ಉದ್ದಾಲಕನು ಹೇಳಿದ ಚಂಡಿ ಅದನ್ನು ತಿಪ್ಪೆಗೆ ಎಸೆದಳು ಉದ್ದಾಲಕನು ಕುಪಿತನಾಗಿ ಶಿಲೆಯಾಗುವಂತೆ ಚಂಡಿಗೆ ಶಾಪವಿತ್ತು ತಾನು ತಪಸ್ಸಿಗೆ ಹೋದ [ಜೈ ಭಾರ.-೧೬]

**ಉದ್ಧವ** —ಶ್ರೀ ಕೃಷ್ಣನ ಮಂತ್ರಿ, ಸ್ನೇಹಿತ ವಸುದೇವನ ತಮ್ಮನಾದ ದೇವಭಾಗನ ಮಗ ಕೃಷ್ಣನು ಮಧುರೆಯಲ್ಲಿ ಕಂಸನನ್ನು ಕೊಂದ ಸಮಾಚಾರವನ್ನು ಗೋಕುಲಕ್ಕೆ ತಿಳಿಸಿದ [ಭಾರ -ಆದಿ ೨೦೧, ೨೩೯] ಕೃಷ್ಣನಿರ್ಯಾಣಕ್ಕೆ ಮೊದಲು ಶ್ರೀ ಕೃಷ್ಣನಿಂದ ಜ್ಞಾನೋಪದೇಶವನ್ನು ಪಡೆದು, ಕೃಷ್ಣನಿರ್ಯಾಣಾನಂತರ ಬದರಿಕಾಶ್ರಮಕ್ಕೆ ತೆರಳಿದ [ಭಾಗ -೩, ೩]

**ಉಪಕೀಚಕ.**—ಕೀಚಕ(ಸಿಂಹಬಲ)ನ ಒಡಹುಟ್ಟಿದವರು. ವಿರಾಟನ ಪತ್ನಿಯಾದ ಸುದೇಷ್ಣೆಯ ಬಲತಮ್ಮಂದಿರು ಇವರಲ್ಲಿ ಹಿರಿಯವನಾದ ಕೀಚಕನು (ದ್ರೌಪದಿ) ಸೈರಂಧ್ರಿಯನ್ನು ಕೆಣಕಿ ಭೀಮನಿಂದ ಹತನಾಗಲು, ಉಪಕೀಚಕರು ಸೈರಂಧ್ರಿಯನ್ನು ಕೀಚಕನ ಶವದೊಂದಿಗೆ ಸುಡಲು ಪ್ರಯತ್ನಿಸಿ ಭೀಮನಿಂದ ಹತರಾದರು [ಭಾರ -ವಿ ೨೩].

**ಉಪದಾನವೀ.**—ಮಯಾಸುರನಿಂದ ಹೇಮೆಯೆಂಬ ಅಪ್ಸರಸಿಯಲ್ಲಿ ಜನಿಸಿದವಳು ರಾವಣನ ಹೆಂಡತಿ ಮಂಡೋದರಿ, ದುಂದುಭಿ, ಮಾಯಾವಿ ಎಂಬವರು ಇವಳ ಒಡಹುಟ್ಟಿದವರು ಹಿರಣ್ಯಾಕ್ಷನ ಹೆಂಡತಿ [ರಾಮಾ.-ಉ. ೧೨].

**ಉಪದೇವಾ, ಉಪದೇವೀ**—ಆಹುಕನ ಮಗಳು ದೇವಕಿಯ ಸೋದರಿ. ವಸುದೇವನನ್ನೇ ಮದುವೆಯಾಗಿದ್ದಳು [ಹರಿ -೧, ३೫. ಭಾಗ.-೯, ೨೪].

**ಉಪಪಾಂಡವರು.**—ಪಾಂಡವರು ದ್ರೌಪದಿಯಲ್ಲಿ ಕ್ರಮವಾಗಿ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂಬ ಐವರು ಪುತ್ರರನ್ನು ಪಡೆದರು. ಇವರಿಗೆ ಉಪಪಾಂಡವರೆಂದು ಹೆಸರು [ಭಾರ.-ಆ ೬೩, ೬೪, ೬೮, ೨೪೭]. ಮಹಾಭಾರತಯುದ್ಧವು ಮುಗಿದ ರಾತ್ರಿ ಶಿಬಿರದಲ್ಲಿ ಮಲಗಿದ್ದಾಗ ಅಶ್ವತ್ಥಾಮನಿಂದ ಹತರಾದರು [ಭಾರ -ಸೌ ೮] ಹರಿಶ್ಚಂದ್ರನ ಪತ್ನಿಯಾದ ಚಂದ್ರಮತಿಯನ್ನು ವಿಶ್ವಾಮಿತ್ರನು ಪೀಡಿಸುತ್ತಿದ್ದುದನ್ನು ಕಂಡು ಮರುಕಗೊಂಡ ವಿಶ್ವೇದೇವತೆಗಳು, ವಿಶ್ವಾಮಿತ್ರನನ್ನು ದೂಷಿಸಿದರು ಕುಪಿತನಾದ ವಿಶ್ವಾಮಿತ್ರನು ಅವರನ್ನು ಭೂಲೋಕದಲ್ಲಿ ಜನಿಸುವಂತೆ ಶಾಪವಿತ್ತನು. ವಿಶ್ವೇದೇವತೆಗಳು ವಿಶ್ವಾಮಿತ್ರನನ್ನು ಕೇಳಿಕೊಳ್ಳಲಾಗಿ, ಮದುವೆಯಾಗುವುದಕ್ಕೆ ಮುಂಚಿತವಾಗಿಯೇ ಸತ್ತು ಶಾಪದಿಂದ ಬಿಡುಗಡೆಹೊಂದುವಂತೆ ಅನುಗ್ರಹಿಸಿದನು [ಮಾರ್ಕ.-೭].

**ಉಪಪ್ಲಾವ್ಯ.**—ಒಂದು ಪಟ್ಟಣ ವಿರಾಟನಗರಿಗೆ ಸಮೀಪದಲ್ಲಿತ್ತು. ಅಜ್ಞಾತವಾಸಾನಂತರ ಪಾಂಡವರು ಈ ಪಟ್ಟಣದಲ್ಲಿಯೇ ವಾಸವಾಗಿದ್ದು ದುರ್ಯೋಧನನ ಬಳಿಗೆ ರಾಯಭಾರಿಗಳನ್ನು ಕಳುಹಿದರು [ಭಾರ.-ಉ ೨೩].

**ಉಪಮನ್ಯು**—(i) ಆಪೋದನೆಂಬ ಧೌಮ್ಯಮಹರ್ಷಿಯ ಶಿಷ್ಯರಲ್ಲಿ ಒಬ್ಬ. ಗುರುವಿನ ಆಕಳುಗಳನ್ನು ಕಾಪಾಡುತ್ತಿದ್ದು, ಹಸಿವಿನಿಂದ ಪೀಡಿತನಾಗಿ, ಎಕ್ಕದ ಎಲೆಗಳನ್ನು ತಿಂದು ಕುರುಡನಾಗಿ, ಬಾವಿಯಲ್ಲಿ ಬಿದ್ದು, ಅಶ್ವಿನೀ ದೇವತೆಗಳನ್ನು ಹೊಗಳಿ ಮರಳಿ ಕಣ್ಣುಗಳನ್ನು ಪಡೆದನು [ಭಾರ.-ಆ ३]

(ii) ಒಬ್ಬ ಋಷಿ ವ್ಯಾಘ್ರಪಾದನೆಂಬ ಋಷಿಯ ಮಗನು ಧೌಮ್ಯಮಹರ್ಷಿಯ ಸಹೋದರ [ಭಾರ -ಅನು ೪೫] ಮಹಾ ಶಿವಭಕ್ತನು ಶಿವಸಹಸ್ರನಾಮವನ್ನು ರಚಿಸಿದವನು [ಅನು. ೪೮] ಹಾಲಿಗಾಗಿ ಜನನಿಯನ್ನು ಕಾಡಿದನು. ಆಕೆ ಅಕ್ಕಿಯ ಹಿಟ್ಟನ್ನು ಕದಡಿ ಕೊಡಲು ಸಮ್ಮತಿಸದೆ, ಜನನಿಯ ಸೂಚನೆಯಂತೆ ಶಿವನನ್ನು ಕುರಿತು ತಪಸ್ಸುಮಾಡಿ ಪಾಲ್ಗಡಲ ಆಧಿಪತ್ಯವನ್ನು ಪಡೆದನು [ಲಿಂಗ.-೧೦೭. ಶಿವ.-ಉ. ೧]

**ಉಪಯಾಜ.**—ಒಬ್ಬ ಋಷಿ. ವಾನಪ್ರಸ್ಥಾಶ್ರಮವನ್ನು ಕೈಕೊಂಡು ಗಂಗಾತೀರದಲ್ಲಿ ವಾಸಮಾಡುತ್ತಿದ್ದನು. ದ್ರುಪದನು ಪುತ್ರಕಾಮೇಷ್ಟಿಯನ್ನು ಮಾಡಲು

ಸಂಕಲ್ಪಿಸಿ, ಈತನನ್ನು ಆಚಾರ್ಯನಾಗುವಂತೆ ಕೇಳಲಾಗಿ, ಉಪಯಾಜನು ತಾನು ಸಮ್ಮತಿಸಲಿಲ್ಲ. ದ್ರುಪದನು ಎಡೆಬಿಡದೆ ಬಹಳ ಕಾಲದ ವರೆಗೆ ಅನುಸರಿಸಿದನು. ಆಗ ಉಪಯಾಜನು ಮರುಕಗೊಂಡು, ತನ್ನ ಅಣ್ಣನಾದ ಯಾಜನನ್ನು ಮುಖ್ಯ ಯಾಜಕನನ್ನಾಗಿಟ್ಟು ತಾನು ಉಪಯಾಜಕನಾಗಿದ್ದು ದ್ರುಪದನಿಂದ ಪುತ್ರಕಾಮೇಷ್ಟಿ ಯನ್ನು ಮಾಡಿಸಿದನು. ಬಳಿಕ ದ್ರೌಪದಿಯೂ, ಧೃಷ್ಟದ್ಯುಮ್ನನೂ ಜನಿಸಿದರು. ಅಂದಿನಿಂದಲೂ ಈ ಸಹೋದರರಿಗೆ ಯಾಜ, ಉಪಯಾಜರೆಂಬ ಹೆಸರುಗಳೇ ರೂಢಿ ಯಲ್ಲಿ ಬಂದುವು [ಭಾರ -ಆ ೧೪೯, ೧೭೧]

**ಉಪರಿಚರ**—ಚೇದಿ ದೇಶದ ಅರಸು ಪುರುಕುಲೋತ್ಪನ್ನನಾದ ಕೃತಿರಾಜನ ಮಗ [ಭಾಗ -೯, ೨೨ ಭಾರ -ಆ ೬೪ ಸ ೮] ಇವನು ಇಂದ್ರನೊಂದಿಗೆ ಸ್ನೇಹ ವನ್ನು ಬಳೆಯಿಸಿ, ಇಂದ್ರನ ಮೂಲಕ ವಿಮಾನವನ್ನು ಸಂಪಾದಿಸಿ ಯಾನಾಗಲೂ ಅದರಲ್ಲಿಯೇ ಸಂಚರಿಸುತ್ತಿದ್ದ ಕಾರಣ ಇವನಿಗೆ ಉಪರಿಚರನೆಂಬ ಹೆಸರು ಬಂದಿತು. ಒಮ್ಮೆ ಇವನು ದೇವಲೋಕಕ್ಕೆ ಹೋಗಿ ಬರುತ್ತಿದ್ದಾಗ ಶುಕ್ತಿಮತೀ ನದಿಗೆ ಅಡ್ಡ ವಾಗಿದ್ದ ಕೋಲಾಹಲ ಪರ್ವತವನ್ನು ಒಂದು ಪಕ್ಕಕ್ಕೆ ತಳ್ಳಿದನು. ಶುಕ್ತಿಮತಿ ಸಂತಸಗೊಂಡು ಗಿರಿಕೆಯೆಂಬ ಮಗಳನ್ನೂ, ವಸುಪದನೆಂಬ ತನ್ನ ಮಗನನ್ನೂ ಕೊಟ್ಟಳು. ಉಪರಿಚರನು ಗಿರಿಕೆಯನ್ನು ಮದುವೆಯಾಗಿ ಬೃಹದ್ರಥ, ಕುಶಾಂಬ, ಪ್ರತ್ಯಗ್ರಹ, ಮತ್ಸಿಲ್ಲ, ಯದು ಎಂಬ ಐವರು ಪುತ್ರರನ್ನು ಪಡೆದನು ವಸು ಪದನು ಉಪರಿಚರನ ಸೇನಾಪತಿಯಾದ ಒಮ್ಮೆ ಈತನ ವೀರ್ಯವು ಸ್ಖಲಿತವಾಗಲು ಅದನ್ನು ಒಂದು ಮೀನು ನುಂಗಿ ಆ ಮೀನಿನಿಂದ ಮತ್ಸ್ಯರಾಜನೆಂಬ ಪುತ್ರನೂ ಮತ್ಸ್ಯಗಂಧೆಯೆಂಬ ಮಗಳೂ ಜನಿಸಿದರು [ಭಾರ -ಆ ೬೪] ಅನೇಕ ಯಾಗಾದಿ ಗಳನ್ನು ಮಾಡಿದನು [ಭಾರ.-ಶಾಂ. ೩೪೪, ೩೪೫]

**ಉಪವೇದ.**—ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ ಗಳೆಂಬ ನಾಲ್ಕೂ ಕ್ರಮವಾಗಿ, ಋಕ್, ಯಜುಸ್, ಸಾಮ, ಅಥರ್ವಗಳೆಂಬ ವೇದಗಳ ಉಪವೇದಗಳು [ಭಾಗ -೩, ೧೨ ಬ್ರಹ್ಮಾ -ಉತ್ತ ೬೧]

**ಉಪಸುನ್ದ.**—ಒಬ್ಬ ರಾಕ್ಷಸ. ಹಿರಣ್ಯಕಶಿಪು ವಂಶದ ನಿಕುಂಭನೆಂಬ ರಾಕ್ಷಸನ ಮಗ ಇವನ ಅಣ್ಣನು ಸುಂದ ಇವರಿಬ್ಬರೂ ವಿಂಧ್ಯಪರ್ವತದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ಅನ್ಯೋನ್ಯವಾಗಿ ಒಬ್ಬರನ್ನೊಬ್ಬರು ಕೊಲ್ಲಬೇಕೇ ಹೊರತು ಮತ್ತಾರಿಂದಲೂ ಸಾವು ಬಾರದಂತೆ ವರವನ್ನು ಪಡೆದರು ಇವರ ಹಾವಳಿಯನ್ನು ತಡೆಯಲಾಗದೆ ಇಂದ್ರನು ವಿಶ್ವಕರ್ಮನಿಂದ ತಿಲೋತ್ತಮೆಯನ್ನು ಸೃಷ್ಟಿಮಾಡಿಸಿ ಇವರಲ್ಲಿಗೆ ಕಳುಹಿದ. ಇಬ್ಬರೂ ಆಕೆಯನ್ನು ಕಂಡು ಮೋಹಪರವಶರಾಗಿರಲು

ತಿಲೋತ್ತಮೆ ನಿಮ್ಮಲ್ಲಿ ಶೂರನಾದವನನ್ನು ನಾನು ವರಿಸುವೆನೆನಲು, ಇಬ್ಬರೂ ಕಾದಾಡಿ ಒಬ್ಬರನ್ನೊಬ್ಬರು ಕೊಂದು ಮಡಿದರು [ಭಾರ -ಆ. ೨೨೮, ೨೩೨]

**ಉಮಾ.**—ಪಾರ್ವತಿಯು ನಾಮಾಂತರ ಶಿವನನ್ನು ಒಲಿಸಿಕೊಳ್ಳುವುದಕ್ಕಾಗಿ ತಪಸ್ಸಿಗೆ ಹೊರಟಾಗ ಜನನಿಯಾದ ಮೇನೆ—"ಉ, ಮಾ" (ಎಲೌ ' ಬೇಡ. ಕಷ್ಟಸಾಧ್ಯವಾದ ತಪಸ್ಸಿಗೆ ಹೋಗಬೇಡ) ಎಂಬುದಾಗಿ ಅಡ್ಡಗಿಸಿದಳು. ಅಂದಿನಿಂದ ಪಾರ್ವತಿಗೆ ಉಮೆಯೆಂಬ ಹೆಸರು ರೂಢಿಯಲ್ಲಿ ಬಂದಿತು [ಸ್ಕಾ -ಮಾಹೇ ೨೨. ಸ್ಕಾ.-ಕೌಮಾ. ೨೫]

**ಉರಗಾಪುರಿ.**—ತಂಜಾವೂರು ಜಿಲ್ಲೆಯಲ್ಲಿರುವ ಒಂದು ರೇವು ಪಟ್ಟಣ ಪಾಂಡವರ ಕಾಲದಲ್ಲಿ ಇದು ಪಾಂಡ್ಯದೇಶದ ರಾಜಧಾನಿಯಾಗಿದ್ದಿತು ಈಗ ಇದನ್ನು ನಾಗಪಟ್ಟಣವೆಂದು ಕರೆಯುತ್ತಾರೆ ಅರ್ಜುನನು ರಾಜಸೂಯಯಾಗ ಸಮಯದಲ್ಲಿ ಜೈತ್ರಯಾತ್ರೆಗೆ ಹೊರಟಿದ್ದಾಗ ಅಲ್ಲಿ ರಾಜ್ಯಭಾರಮಾಡುತ್ತಿದ್ದ ರೋಚಮಾನನೆಂಬ ಅರಸನನ್ನು ಸೋಲಿಸಿದ [ಭಾರ -ಸ ೨೮]

**ಉರ್ಮಿಳಾ** —ಜನಕರಾಜನ ಔರಸಪುತ್ರಿ ಲಕ್ಷ್ಮಣನ ಹೆಂಡತಿ [ರಾಮಾ -ಬಾ ೬೬].

**ಉರ್ವಶೀ.**—ಒಬ್ಬ ಅಪ್ಸರಸಿ ನರನಾರಾಯಣರು ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದಾಗ ಕೆಲವರು ದೇವವಿಲಾಸಿನಿಯರು ನರನಾರಾಯಣರ ತಪೋಭಂಗಕ್ಕಾಗಿ ಅಲ್ಲಿಗೆ ಬಂದರು ಆಗ ನಾರಾಯಣನು ತನ್ನ ತೊಡೆಯನ್ನು ಕೆರೆಯಲಾಗಿ, ಅಲ್ಲಿಂದ ಲೋಕೋತ್ತರ ಸೌಂದರ್ಯವತಿಯಾದ ಒಬ್ಬ ತರುಣಿ ಜನಿಸಿದಳು. ಇವಳೇ ಉರ್ವಶಿ ಇವಳ ಲಾವಣ್ಯಾತಿಶಯವನ್ನು ಕಂಡು ದೇವವಿಲಾಸಿನಿಯರು ನಾಚಿಕೆಯಿಂದ ಹಿಂದೆರಳಿದರು [ದೇ.ಭಾ - ೪, ೬] ಮಿತ್ರನಾಮಕ ಸೂರ್ಯನ ಶಾಪದಿಂದ ಭೂಮಿಯಲ್ಲಿ ಪುರೂರವನೊಂದಿಗೆ ಸಂಸಾರಮಾಡಿಕೊಂಡಿದ್ದಳು [ರಾಮಾ - ಉ ೫೬ ಪದ್ಮ - ೫, ೨೨] ಪುರೂರವನಿಂದ ಆಯು ಮೊದಲಾದ ಆರು ಮಂದಿ ಮಕ್ಕಳನ್ನು ಪಡೆದಳು ನೋಡು—ಆಯು [ಭಾರ -ಆ ೬೯ ಭಾಗ -೯, ೧೪. ದೇ ಭಾ -೧, ೧೩]. ಅರ್ಜುನನು ಇಂದ್ರಕೀಲಪರ್ವತದಿಂದ ಸ್ವರ್ಗಕ್ಕೆ ಹೋಗಿದ್ದಾಗ ಆತನನ್ನು ಮೋಹಿಸಿ, ತನ್ನ ಇಷ್ಟಾರ್ಥವು ನೆರವೇರಲಿಲ್ಲವಾಗಿ ನಪುಂಸಕನಾಗುವಂತೆ ಅರ್ಜುನನಿಗೆ ಶಾಪವಿತ್ತಳು [ವನ ೪೪]. ಉರ್ವಶಿಯ ಸೌಂದರ್ಯವರ್ಣನೆ [ವನ. ೪೪]. ನಾರಾಯಣನ ಊರು ಪ್ರದೇಶದಿಂದ ಜನಿಸಿದ ಕಾರಣ ಉರ್ವಶಿಯೆಂದು ಹೆಸರಾಯಿತು [ಭಾಗ.-೧೧, ೪ ದೇ ಭಾ -೧, ೧೩].

**ಉರ್ವೀ.**—ಭೂಮಿ. ಪರಶುರಾಮನು ಭೂಮಂಡಲದ ಅರಸರನ್ನೆಲ್ಲ ಗೆದ್ದು, ಭೂಮಿಯನ್ನು ಕಶ್ಯಪ ಮುನಿಗೆ ದಾನಮಾಡಿದನು. ಕೆಲ ಕಾಲದ ಬಳಿಕ ಪಾಪ ಭಾರದಿಂದ ಭೂಮಿ ಪಾತಾಳಕ್ಕೆ ಕುಸಿದುಬಿತ್ತು. ಆಗ ಕಶ್ಯಪ ಮುನಿ ತನ್ನ

ಊರು (ತೊಡೆ)ಗಳ ಬಲದಿಂದ ಭೂಮಿಯನ್ನು ಉದ್ಧರಿಸಿದನು ಇದರಿಂದ ಭೂಮಿಗೆ ಉರ್ವೀ, ಕಾಶ್ಯಪೀ ಎಂಬ ಹೆಸರುಗಳು ಬಂದುವು [ಶಾಂತಿ ೪೯].

**ಉಲೂಕ** --(I) ಶಕುನಿಯ ಮಗನು [ಭಾರ -ಆ ೨೦೧] ಒಮ್ಮೆ ದುರ್ಯೋಧನನು ಇವನನ್ನು ಯುಧಿಷ್ಠಿರನಲ್ಲಿಗೆ ದೂತನನ್ನಾಗಿ ಕಳುಹಿಸಿದ್ದನು [ಉದ್ಯೋ ೧೬೦, ೧೬೩] ಯುಯುತ್ಸುವಿನೊಂದಿಗೆ ಯುದ್ಧ [ಕರ್ಣ. ೧೬] ಸಹದೇವನ ಮೂಲಕ ಇವನ ಕೊಲೆ [ಶಲ್ಯ. ೨೭]

(II) ಒಂದು ದೇಶ ಪಾಂಡವರ ಕಾಲದಲ್ಲಿ ಇದನ್ನು ಬೃಹಂತನೆಂಬ ಅರಸು ಪಾಲಿಸುತ್ತಿದ್ದ [ಭಾರ -ಸ. ೨೮]

**ಉಲೂಪಿ** —ನಾಗಕನ್ಯಕೆ ಕೌರವ್ಯನೆಂಬ ನಾಗರಾಜನ ಮಗಳು. ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾಗ ಇವಳನ್ನು ಮದುವೆಯಾಗಿ ಇರಾವಂತನೆಂಬ ಮಗನನ್ನು ಪಡೆದ [ಭಾರ.-ಆ ೬೩, ೨೩೪, ೨೩೫] ಬಭ್ರುವಾಹನನಿಂದ ಹತನಾದ ಅರ್ಜುನನನ್ನು ಸಂಜೀವನಮಣಿಯಿಂದ ಬದುಕಿಸಿದಳು [ಭಾರ -ಅಶ್ವ. ೮೧] ಪಾಂಡವರ ಅಶ್ವಮೇಧಯಾಗ ಸಮಯದಲ್ಲಿ ಹಸ್ತಿನಾವತಿಗೆ ಬಂದಿದ್ದಳು [ಭಾರ -ಅಶ್ವ ೮೯] ಪಾಂಡವರು ಮಹಾಪ್ರಸ್ಥಾನ ಮಾಡಿದಾಗ ಈಕೆ ಗಂಗೆಯಲ್ಲಿ ಮುಳುಗಿ ಸ್ವರ್ಗಕ್ಕೆ ಹೋದಳು [ಭಾರ -ಮಹಾ ೧]

**ಉಶಙ್ಗು (ರುಶಙ್ಗು)** —ಒಬ್ಬ ಮಹರ್ಷಿ. ತಾನು ಮುದುಕನಾದೆನೆಂದು ತಿಳಿದು ಪೃಥೂದಕವೆಂಬ ತೀರ್ಥದಲ್ಲಿ ದೇಹತ್ಯಾಗಮಾಡಿ ಸಾಯುಜ್ಯವನ್ನು ಪಡೆದ. ಈತನ ಆಶ್ರಮದಲ್ಲಿ ಆರ್ಷ್ಟಿಷೇಣ, ವಿಶ್ವಾಮಿತ್ರ, ಸಿಂಧುದ್ವೀಪ, ದೇವಾಪಿ ಎಂಬವರು ತಪಸ್ಸುಮಾಡಿ ಬ್ರಾಹ್ಮಣ್ಯವನ್ನು ಪಡೆದರು ಬಲರಾಮನು ತೀರ್ಥಯಾತ್ರಾ ಸಮಯದಲ್ಲಿ ಇಲ್ಲಿಗೆ ಹೋಗಿದ್ದ [ಭಾರ -ಶ ೪೦]

**ಉಶನಸ್** —ಶುಕ್ರಾಚಾರ್ಯನ ನಾಮಾಂತರ ಸ್ವಾಯಂಭುವ ಮನ್ವಂತರದ ಭೃಗುಮಹರ್ಷಿಯ ಮೂಲಕ ಪುಲೋಮೆಯಲ್ಲಿ ಜನಿಸಿದ ಎಂಟು ಮಂದಿ ಮಕ್ಕಳಲ್ಲಿ ನಾಲ್ಕನೆಯವನು. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಮೂರನೆಯ ಪರ್ಯಾಯದಲ್ಲಿ ವ್ಯಾಸನಾಗಿದ್ದ. ಈತನು ಹಿರಣ್ಯಕಶಿಪುವಿನ ಪುರೋಹಿತ [ಭಾಗ.-೫, ೧ ದೇ.ಭಾ -೧, ೪. ವಿಷ್ಣು.-೩, ೩] ಮಿಕ್ಕ ವಿಷಯಗಳನ್ನು ಶುಕ್ರಶಬ್ದದಲ್ಲಿ ನೋಡುವುದು.

**ಉಶೀನರ.**—ಒಬ್ಬ ಅರಸು. ಚಂದ್ರವಂಶದ ಅನುಕುಲದಲ್ಲಿ ಜನಿಸಿದವನು. ಭೋಜದೇಶವನ್ನು ಆಳುತ್ತಿದ್ದ. ಯಯಾತಿರಾಜನ ಮಗಳಾದ ಮಾಧವಿಯಲ್ಲಿ ಶಿಬಿಯೆಂಬ ತನಯನನ್ನು ಪಡೆದನು [ಭಾರ.-ಸ. ೮. ವನ. ೧೩೨. ಉ. ೧೧೮].

ಚಂದ್ರವಂಶದ ಅನುರಾಜನ ಕುಲದಲ್ಲಿ ಜನಿಸಿದ ಸೃಂಜಯನ ಮಗನಾದ ಮಹಾ ಮನಸನ ಮಗ [ಭಾಗ.-೯, ೨೩]

**ಉಶೀರಬೀಜ**—ಹಿಮವತ್ಪರ್ವತದ ಪಕ್ಕದಲ್ಲಿರುವ ಒಂದು ಕ್ಷೇತ್ರ. ಜೀಮೂತ ನೆಂಬ ಬ್ರಹ್ಮರ್ಷಿಯ ಆಶ್ರಮವೂ, ಸ್ವರ್ಣಸರೋವರವೂ ಇದರಲ್ಲಿಯೇ ಇರುತ್ತವೆ. ಸುಪ್ರಸಿದ್ಧನಾದ ಮರುತ್ತರಾಜನು ಈ ಕ್ಷೇತ್ರದಲ್ಲಿಯೇ ಯಜ್ಞಮಾಡಿದನು [ಭಾರ.-ಉ. ೧೧೧]

**ಉಷಾ**.—ಬಾಣಾಸುರನ ಮಗಳು. ಈಕೆ ಶ್ರೀಕೃಷ್ಣ ಪುತ್ರನಾದ ಪ್ರದ್ಯುಮ್ನನ ಮಗನಾದ ಅನಿರುದ್ಧನನ್ನು ಸ್ವಪ್ನದಲ್ಲಿ ಕಂಡು ದಾಸಿಯ ಮೂಲಕ ಅವನನ್ನು ಬರಮಾಡಿಕೊಂಡು ಸುಖವಾಗಿದ್ದಳು ಬಾಣಾಸುರನು ಈ ಗುಟ್ಟನ್ನು ತಿಳಿದು ಅನಿರುದ್ಧನನ್ನು ಸೆರೆಯಲ್ಲಿಟ್ಟನು ಆಗ ಶ್ರೀಕೃಷ್ಣನು ಈ ಸಮಾಚಾರವನ್ನು ಕೇಳಿ ಯುದ್ಧದಲ್ಲಿ ಬಾಣಾಸುರನನ್ನು ಸೋಲಿಸಿ ಉಷೆಯನ್ನೂ ಅನಿರುದ್ಧನನ್ನೂ ಕರೆ ದುಯ್ದನು [ಭಾರ.-ಸ. ೬೦ ಭಾಗ.-೧೦, ೬೨. ಹರಿ -೨, ೧೧೮. ವಿಷ್ಣು -೫, ೩೨]

# ಊ

**ಊರ್ಜಸ್ವತಿ**—ಪ್ರಿಯವ್ರತರಾಜನ ಮಗಳು. ಶುಕ್ರಾಚಾರ್ಯನ ಹೆಂಡತಿ. ದೇವಯಾನಿಯ ಜನನಿ [ಭಾಗ -೫, ೧].

**ಊರ್ಜಾ**—ಸ್ವಾಯಂಭುವ ಮನ್ವಂತರದಲ್ಲಿ ವಸಿಷ್ಠಮಹರ್ಷಿಯ ಎರಡನೆಯ ಹೆಂಡತಿ. ಚಿತ್ರಕೇತು, ಸುರೋಚಿ, ವಿರಜಾಮಿತ್ರ, ಉಲ್ಬಣ, ವಸುಭೃತ್ ದ್ಯುತಿಮಂತರೆಂಬವರು ಈಕೆಯ ಮಕ್ಕಳು [ಭಾಗ.-೪, ೨೧, ೨೪].

**ಊರ್ಣಾ**—(1) ಸ್ವಾಯಂಭುವ ಮನ್ವಂತರದ ಮರೀಚಿ ಮುನಿಯ ಎರಡನೆ ಹೆಂಡತಿ ಈಕೆ ಸ್ಮರ, ಉದ್ಗೀಥ, ಪತಂಗ, ಪರಿಷ್ವಂಗ, ಕ್ಷುದ್ರಭುಕ್, ಘೃಣಿ ಯೆಂಬ ಆರುಮಂದಿ ಪುತ್ರರನ್ನು ಪಡೆದಳು ಇವರು ಒಮ್ಮೆ ಬ್ರಹ್ಮನನ್ನು ಪರಿ ಹಾಸಮಾಡಿ, ಕುಪಿತನಾದ ಬ್ರಹ್ಮನ ಮೂಲಕ ಭೂಲೋಕದಲ್ಲಿ ಹೀನಜನ್ಮವೆತ್ತು ವಂತೆ ಶಾಪವನ್ನು ಪಡೆದು ಮೊದಲನೆಯ ಜನ್ಮದಲ್ಲಿ ಹಿರಣ್ಯಕಶಿಪುವಿನ ಮಕ್ಕಳಾ ಗಿಯೂ, ಎರಡನೆಯ ಜನ್ಮದಲ್ಲಿ ಕಾಲನೇಮಿಯ ಮಕ್ಕಳಾಗಿಯೂ, ಮೂರನೆಯ ಜನ್ಮದಲ್ಲಿ ದೇವಕಿಯ ಮೊದಲಿನ ಆರುಮಂದಿ (ಕಂಸನಿಂದ ಹತರಾದ) ಮಕ್ಕಳಾ ಗಿಯೂ ಜನಿಸಿ ಕೂಡಲೇ ಸತ್ತರು [ಭಾಗ.-೧೦, ೮೫. ದೇ.ಭಾ.-೪. ೨೨].

(ii) ಸ್ವಾಯಂಭುವ ಮನ್ವಂತರದ ಋಷಭದೇವನ ವಂಶದಲ್ಲಿ ಜನಿಸಿದ ಚಿತ್ರರಥನೆಂಬ ಅರಸನ ಹೆಂಡತಿ ಈಕೆ ಸಮ್ರಾಜನೆಂಬ ಪುತ್ರನನ್ನು ಪಡೆದಳು [ಭಾಗ -೫, ೧೫]

**ಊರ್ಣಾಯು.**—ಕಶ್ಯಪ ಮುನಿಯಿಂದ ಪ್ರಾಧೆಯಲ್ಲಿ ಜನಿಸಿದ ದೇವಗಂಧರ್ವರಲ್ಲಿ ಒಬ್ಬ ಮೇನಕೆ ಈತನ ಹೆಂಡತಿ [ಭಾರ -ಉ. ೧೧೭]

**ಊರ್ಮಿಳಾ** —ನೋಡು—ಉರ್ಮಿಳಾ

**ಊರ್ವಶೀ.**—ನೋಡು—ಉರ್ವಶೀ.

**ಊಷಾ** —ಉಷೆಯ ನಾಮಾಂತರ

## ಋ

**ಋಕ್ಷ** —(i) ಒಬ್ಬ ಅರಸು ಚಂದ್ರವಂಶದ ಋಚನ ಮಗನು. ಈತನು ತಕ್ಷಕನ ಮಗಳಾದ ಜ್ವಲಂತಿಯನ್ನು ಮದುವೆಯಾಗಿ ಅಂತ್ಯನಾರನೆಂಬ ಮಗನನ್ನು ಪಡೆದನು [ಭಾರ -ಆದಿ. ೬೩]

(ii) ಒಬ್ಬ ಅರಸು ಚಂದ್ರವಂಶದ ಅಜಮೀಢನ ಮಗ. ತಾಯಿ ಧೂಮಿನಿ. ರಥಂತರಿಯೆಂಬವಳನ್ನು ಮದುವೆಯಾಗಿ ಸಂವರಣನೆಂಬ ಮಗನನ್ನು ಪಡೆದನು [ಭಾರ -ಆ ೧೦೧]

(iii) ಕರಡಿ. ಅದರ ಉತ್ಪತ್ತಿ [ಭಾರ -ಆದಿ ೬೭]

(iv) ಒಬ್ಬ ಅರಸು ಚಂದ್ರವಂಶದ ದೇವಾತಿಥಿರಾಜನ ಮಗ ತಾಯಿ ಅಂಗರಾಜನ ಮಗಳು ವಾಮದೇವಿ [ಭಾರ -ಆ ೬೩].

**ಋಕ್ಷದೇವ.**—ದ್ರುಪದ ಪುತ್ರನಾದ ಶಿಖಂಡಿಯ ಮಗ [ಭಾರ.-ದ್ರೋ. ೨೩].

**ಋಕ್ಷರಜಸ್** —ವಾನರ ಕುಲದ ಮೂಲಪುರುಷ ಬ್ರಹ್ಮನು ಮೇರು ಪರ್ವತದಲ್ಲಿ ತಪಸ್ಸುಮಾಡುತ್ತಿದ್ದಾಗ ಆತನ ಕಣ್ಣೀರಿಂದ ವಾನರರೂಪದ ಪುರುಷನು ಜನಿಸಿ, ಬ್ರಹ್ಮನ ಅಪ್ಪಣೆಯಂತೆ ಆ ಸುತ್ತಮುತ್ತಣ ವನದಲ್ಲಿ ಸಂಚರಿಸುತ್ತಿದ್ದನು. ಒಮ್ಮೆ ಒಂದು ಸರೋವರದಲ್ಲಿ ಇಣಿಕಿನೋಡುತ್ತಿದ್ದಾಗ ಅದರೊಳಗೆ ತನ್ನ ಪ್ರತಿಬಿಂಬವನ್ನು ಕಂಡು ಅದರೊಡನೆ ಹೋರಾಡಬೇಕೆಂದು ಸರೋವರದಲ್ಲಿ ದುಮಿಕಿದನು. ಒಳಗೆಲ್ಲಾ ಹುಡುಕಿದರೂ ಯಾರೂ ಸಿಕ್ಕಲಿಲ್ಲ. ಮೇಲಕ್ಕೆ ಬರುವಷ್ಟರಲ್ಲಿ ಸ್ತ್ರೀತ್ವವನ್ನು ಪಡೆದಿದ್ದನು. ಅದೇ ಸಮಯದಲ್ಲಿ ಅಸ್ತಮಿಸುತ್ತಿದ್ದ ಸೂರ್ಯನೂ ಬ್ರಹ್ಮಸಂದರ್ಶನಕ್ಕಾಗಿ ಹೋಗುತ್ತಿದ್ದ ಇಂದ್ರನೂ ಈ ವಾನರಿಯನ್ನು ನೋಡಿ ಮೋಹಗೊಂಡರು. ಇಂದ್ರನ ತೇಜಸ್ಸು ಬಾಲದಮೇಲೆಯೂ ಸೂರ್ಯನ ತೇಜಸ್ಸು ಕುತ್ತಿಗೆಯಮೇಲೆಯೂ

ಬಿದ್ದಿತು ಬಳಿಕ ವಾಲಿ, ಸುಗ್ರೀವರು ಜನಿಸಿದರು. ಮರುದಿನ ಬೆಳಗಾಗುವಷ್ಟರಲ್ಲಿ ಋಕ್ಷರಜನು ಗಂಡುಸಾಗಲು ಬ್ರಹ್ಮನಲ್ಲಿಗೆ ಹೋಗಿ ಈ ವಿವರವನ್ನು ಅರಿಕೆಮಾಡಿದನು ಬ್ರಹ್ಮನು ಕಿಷ್ಕಿಂಧೆಗೆ ಹೋಗಿ ರಾಜ್ಯಭಾರಮಾಡುವಂತೆ ಅಪ್ಪಣೆಯಿತ್ತನು. ಬಳಿಕ ಋಕ್ಷರಜನು ಕಿಷ್ಕಿಂಧೆಯಲ್ಲಿ ಕೆಲಕಾಲ ಅರಸಾಗಿದ್ದು, ವಾಲಿಗೆ ಪಟ್ಟಕಟ್ಟಿ, ಸುಗ್ರೀವನನ್ನು ಯುವರಾಜನನ್ನಾಗಿ ನಿಯಮಿಸಿ, ತಾನು ತಪಸ್ಸಿಗೆ ಹೋದನು [ರಾ -ಉ ೧]

**ಋಕ್ಷವಂತ.**—ಒಂದು ಪರ್ವತ. ವಿಂಧ್ಯಪರ್ವತದ ಪೂರ್ವ ಘಟ್ಟಗಳ ಹೆಸರು [ಭಾ.-ಭೀ ೯].

**ಋಗ್ವೇದ** —ನಾಲ್ಕು ವೇದಗಳಲ್ಲಿ ಮೊದಲನೆಯದು ಚತುರ್ಮುಖನ ಪೂರ್ವ ಮುಖದಿಂದ ಹೊರಬಿದ್ದುದು. ಈ ವೇದಭಾಗವು ಯಜ್ಞಗಳಲ್ಲಿ ದೇವತೆಗಳನ್ನು ಆಹ್ವಾನಮಾಡುವದರಲ್ಲಿ ಉಪಯುಕ್ತವಾಗಿದೆ ಯಜ್ಞದಲ್ಲಿ ಋಗ್ವೇದ ಮಂತ್ರಗಳನ್ನು ಪಠನಮಾಡತಕ್ಕವರಿಗೆ '' ಹೋತೃ '' ವೆಂದು ಹೆಸರು ಇದರಲ್ಲಿ ಅನೇಕ ಶಾಖೆಗಳಿವೆ ಆಯುರ್ವೇದವು ಇದರ ಉಪವೇದ ವ್ಯಾಸಮುನಿ ಈ ವೇದವನ್ನು ಪೈಲನೆಂಬ ಶಿಷ್ಯನಿಗೆ ಮೊದಲು ಹೇಳಿಕೊಟ್ಟನು [ಭಾಗ -೩, ೧೨. ವಿಷ್ಣು -೩, ೪].

**ಋಚ** —ಒಬ್ಬ ಅರಸು ಪುರುವಂಶದ ದೇವಾತಿಥಿರಾಜನಿಂದ ವಿದರ್ಭರಾಜ ಪುತ್ರಿಯಾದ ಮರ್ಯಾದೆಯೆಂಬುವಳಲ್ಲಿ ಜನಿಸಿದವನು ಅಂಗರಾಜಪುತ್ರಿಯಾದ ವಾಮದೇವಿಯೆಂಬವಳನ್ನು ಮದುವೆಯಾಗಿ ಋಕ್ಷನೆಂಬ ಮಗನನ್ನು ಪಡೆದನು [ಭಾರ.-ಆ. ೬೩].

**ಋಚೀಕ.**—(1) ಒಬ್ಬ ಋಷಿ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಭೃಗುಪುತ್ರನಾದ ಔರ್ವಮಹರ್ಷಿಯ ಮಗನು ಗಾಧಿರಾಜನ ಮಗಳಾದ ಸತ್ಯವತಿಯನ್ನು ಮದುವೆಯಾದನು ನೋಡು—ಅಶ್ವತೀರ್ಥ [ಭಾರ -ಆ ೬೭ ವನ. ೧೧೬ ಶಾಂ ೪೮] ಋಚೀಕನು ಒಮ್ಮೆ ಸತ್ಯವತಿಯ ಪತಿಭಕ್ತಿಗೆ ಮೆಚ್ಚಿ ವರವನ್ನು ಬೇಡು ಎಂದನು. ಆಗ ಸತ್ಯವತಿ ತನಗೂ ತನ್ನ ಜನನಿಗೂ ಪುತ್ರನು ಜನಿಸುವಂತೆ ಬೇಡಿದಳು ಋಚೀಕನು ಇಬ್ಬರಿಗೂ ಪ್ರತ್ಯೇಕವಾಗಿ ಚರುವನ್ನು ಮಂತ್ರಿಸಿ ಕೊಟ್ಟು, ಇಬ್ಬರೂ ಆ ಚರುವನ್ನು ತಿಂದು, ಸತ್ಯವತಿ ಮುತ್ತುಗದ ಮರವನ್ನೂ, ಆಕೆಯ ತಾಯಿ ಅಶ್ವತ್ಥವೃಕ್ಷವನ್ನೂ ಅಪ್ಪಿಕೊಳ್ಳುವಂತೆ ನಿಯಮಿಸಿದನು. ಆದರೆ ದೈವಘಟನೆಯಿಂದ ಅವೆರಡೂ ವ್ಯತ್ಯಸ್ತಗಳಾದುವು ಇಬ್ಬರೂ ಕಾಲಕ್ರಮದಲ್ಲಿ ಗರ್ಭಿಣಿಯರಾದರು. ಒಂದು ದಿನ ಋಚೀಕನು ತನ್ನ ಹೆಂಡತಿಯ ಮುಖದಲ್ಲಿ ಕ್ಷತ್ರಿಯ ತೇಜಸ್ಸನ್ನು ನೋಡಿ, ಕಾರಣವನ್ನು ತಿಳಿದು, ಸತ್ಯವತಿಯನ್ನು ಕುರಿತು '' ನಿನ್ನ ಮಗನು ಬ್ರಾಹ್ಮಣನಾಗಿ ಹುಟ್ಟಿ ಕ್ಷತ್ರಿಯನಾಗುವನು. ನಿಮ್ಮ ತಾಯಿಗೆ

ಕ್ಷತ್ರಿಯನು ಹುಟ್ಟಿ ಬ್ರಾಹ್ಮಣನಾಗುವನು " ಎಂದನು. ಸತ್ಯವತಿ ಚಿಂತಾಕುಲಿತೆಯಾಗಿ, ತನ್ನ ಮಗನು ಮಾತ್ರ ಬ್ರಾಹ್ಮಣನೇ ಆಗಿರುವಂತೆಯೂ, ಮೊಮ್ಮಗನು ಕ್ಷತ್ರಿಯನಾಗುವಂತೆಯೂ ಅನುಗ್ರಹಿಸಬೇಕೆಂದು ಬೇಡಿಕೊಂಡಳು ಋಚೀಕನು ಅಂತೆಯೇ ಅನುಗ್ರಹಿಸಲಾಗಿ ಸತ್ಯವತಿ ಪಡೆದ ಜಮದಗ್ನಿ ಮತ್ತು ಶುನಃಶ್ಶೇಪರು ಬ್ರಾಹ್ಮಣರಾಗಿದ್ದರು ಜಮದಗ್ನಿ ಪುತ್ರನಾದ ಪರಶುರಾಮನು ಕ್ಷತ್ರಿಯನಾದನು. ಗಾಧಿ ಪುತ್ರನಾದ ವಿಶ್ವಾಮಿತ್ರನು ಕ್ಷತ್ರಿಯನಾಗಿ ಜನಿಸಿ ಬ್ರಾಹ್ಮಣನಾದನು [ಭಾರ.-ವ ೧೧೬ ಅನು ೭ ಭಾಗ -೧೫ ವಾಯು -೯೧ ಬ್ರಹ್ಮ-೧೦] ಋಚೀಕನ ಮತ್ತೊಬ್ಬ ಮಗನು ಶುನಶ್ಶೇಪನು [ರಾಮಾ -೧, ೬೧ ಅನು ೬]

(11) ಒಬ್ಬ ಅರಸು ಚಂದ್ರವಂಶದ ದುಷ್ಯಂತನ ಮೊಮ್ಮಗನಾದ ಭುಮನ್ಯುವಿನಿಂದ ಪುಷ್ಕರಿಣಿಯೆಂಬವಳಲ್ಲಿ ಜನಿಸಿದವನು [ಭಾರ -ಆ ೨೦೧]

**ಋಚೇಯು** — ಒಬ್ಬ ಅರಸು ಚಂದ್ರವಂಶದ ರೌದ್ರಾಶ್ವನಿಂದ ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಜನಿಸಿದವನು. ಕಕ್ಷೇಯು ಮೊದಲಾದ ಒಂಬತ್ತುಮಂದಿ ಇವನ ಒಡಹುಟ್ಟಿದವರು ಇವನಿಗೆ ಅನಾಧೃಷ್ಟಿಯೆಂಬುದು ನಾಮಾಂತರ ಇವನ ಮಗನು ಮತಿನಾರ [ಭಾರ -ಆ. ೮೮]

**ಋಣತ್ರಯ** —ಕ್ರಿಯಾಋಣ (ದೇವಋಣ) ಬ್ರಹ್ಮಚರ್ಯಋಣ (ಋಷಿಋಣ) ಪ್ರಜಾಋಣ (ಪಿತೃಋಣ) ಗಳೆಂಬುವು ಬ್ರಾಹ್ಮಣನು ಹುಟ್ಟುತ್ತಲೇ ಈ ಮೂರು ಋಣಗಳೂ ಅವನೊಂದಿಗೇ ಹುಟ್ಟುವುವು ಯಜನಾದಿಗಳಿಂದ ದೇವಋಣವನ್ನೂ, ವೇದಾಧ್ಯಯನದಿಂದ ಋಷಿಋಣವನ್ನೂ, ಸಂತಾನದಿಂದ ಪಿತೃಋಣವನ್ನೂ ಕಳೆಯಬೇಕು [ಭಾರ -ಅ ೨೫೫]

**ಋತವಾಕ್.**—ಒಬ್ಬ ಮಹರ್ಷಿ ಈತನಿಗೆ ರೇವತೀ ನಕ್ಷತ್ರದಲ್ಲಿ ಒಬ್ಬ ದುಷ್ಟ ಕುಮಾರನು ಜನಿಸಲಾಗಿ, ಶಾಪಕೊಟ್ಟು ರೇವತೀ ನಕ್ಷತ್ರವನ್ನು ನೆಲಕ್ಕೆ ಬೀಳಿಸಿದನು [ದೇ.ಭಾ -೧, ೪].

**ಋತುಪರ್ಣ** —ಸೂರ್ಯವಂಶದ ಅರಸು ಅಯೋಧ್ಯೆಯಲ್ಲಿ ರಾಜ್ಯಭಾರಮಾಡುತ್ತಿದ್ದನು ರಾಜ್ಯಭ್ರಷ್ಟನಾದ ನಳಚಕ್ರವರ್ತಿ ಈತನಲ್ಲಿ ಕೆಲಕಾಲ ಬಾಹುಕನೆಂಬ ಹೆಸರಿಂದ ಸಾರಥಿಯಾಗಿದ್ದನು [ಭಾರ -ವನ. ೬೩] ಈತನು ಸಿಂಧುದ್ವೀಪನೆಂಬ ರಾಜನ ಮೊಮ್ಮಗನು [ಹರಿ.-೧, ೧೫ ಭಾಗ -೯, ೯] ದಮಯಂತಿಯ ಪುನಃ ಸ್ವಯಂವರವೆಂಬ ವಾರ್ತೆಯನ್ನು ಕೇಳಿ ಕುಂಡಿನಪುರಿಗೆ ಬರುವಾಗ ದಾರಿಯಲ್ಲಿ ನಳನಿಂದ ಅಶ್ವಹೃದಯವನ್ನು ತಿಳಿದನು [ಭಾರ -ವ ೭೫] ನಳನು ಈತನಿಂದ ಅಕ್ಷಹೃದಯವನ್ನು ತಿಳಿದನು [ಭಾರ.-ವನ ೭೦]. ಇವನ ಸಾರಥಿ ಜೀವಲ [ಭಾರ.-ವನ. ೬೪].

**ಋಭು.**—ಬ್ರಹ್ಮಮಾನಸ ಪುತ್ರನು. ಸನಕ, ಸನಂದ, ಸನತ್ಕುಮಾರ, ಸನತ್ಸು ಜಾತ, ಋಭು ಇವರೈವರೂ ಸಹೋದರರು. ಬ್ರಹ್ಮಚಾರಿಗಳು [ಭಾಗ.-೪, ೮].

**ಋಶ್ಯಮೂಕ.**—ಒಂದು ಬೆಟ್ಟ ಬಳ್ಳಾರಿ ಜಿಲ್ಲೆಯಲ್ಲಿ ಆನೆಗೊಂದಿಯಿಂದ ಸುಮಾರು ಎಂಟು ಮೈಲುಗಳ ದೂರದಲ್ಲಿ ತುಂಗಭದ್ರೆಯ ದಡದಲ್ಲಿದೆ. ಇದರ ಬಳಿಯಲ್ಲಿ ಮತಂಗಮುನಿಯ ಆಶ್ರಮವಿದ್ದಿತು. ಒಮ್ಮೆ ವಾಲಿಯೂ ದುಂದುಭಿಯೂ ಯುದ್ಧಮಾಡಿದರು. ವಾಲಿ ದುಂದುಭಿಯನ್ನು ಕೊಂದು ಅವನ ತಲೆಯನ್ನು ಬಿಸುಟನು ಅದು ಮತಂಗಾಶ್ರಮದಲ್ಲಿ ಬಿದ್ದು, ರಕ್ತಮಾಂಸಗಳಿಂದ ಆಶ್ರಮ ಪ್ರದೇಶವು ದೂಷಿತವಾಯಿತು ಮತಂಗನು ಕ್ರುದ್ಧನಾಗಿ, ಇದು ವಾಲಿಯ ಕೃತ್ಯವೆಂದು ತಿಳಿದು, ವಾಲಿ ಪುನಃ ಇಲ್ಲಿಗೆ ಬಂದರೆ ಅವನ ತಲೆ ಒಡೆಯುವುದೆಂದು ಶಾಪವಿತ್ತನು ಇಷ್ಟರಲ್ಲಿ ವಾಲಿ ಸುಗ್ರೀವರಿಗೆ ಮನಸ್ತಾಪವುಂಟಾಗಿ ಸುಗ್ರೀವನು ಈ ಬೆಟ್ಟದಲ್ಲಿ ಹನೂಮಂತನೇ ಮೊದಲಾದ ನಾಲ್ವರೊಂದಿಗೆ ವಾಸವಾಗಿದ್ದನು ವಾಲಿ ಮತಂಗ ಶಾಪಭಯದಿಂದ ಅಲ್ಲಿಗೆ ಹೋಗಲಿಲ್ಲ ರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಬಂದಾಗ ಹನೂಮಂತನು ಈ ಪರ್ವತಕ್ಕೆ ಕರೆದುಯ್ದು ರಾಮ ಸುಗ್ರೀವರಿಗೆ ಸ್ನೇಹವನ್ನು ಕಲ್ಪಿಸಿದನು [ಭಾರ -ವನ ೨೮೦ ರಾಮಾ -ಕಿ ೧, ೨]

**ಋಶ್ಯಶೃಙ್ಗ** —ಒಬ್ಬ ಬ್ರಹ್ಮರ್ಷಿ ವಿಭಾಂಡಕನೆಂಬ ಮುನಿ ಒಮ್ಮೆ ಕೈಕಾಲು ತೊಳೆದುಕೊಳ್ಳುವುದಕ್ಕಾಗಿ ಮಡುವಿನಲ್ಲಿ ಇಳಿದಾಗ ಊರ್ವಶೀ ಸಂದರ್ಶನದಿಂದ ಎದೆಗುಂದಿದನು ಆಗ ಸ್ಖಲಿತವಾದ ಆತನ ವೀರ್ಯವನ್ನು ಒಂದು ಹೆಣ್ಣು ಜಿಂಕೆ ಕುಡಿದು ಅದರಿಂದ ಜನಿಸಿದವನು [ಭಾರ -ವನ ೧೧೧] ಒಮ್ಮೆ ಅಂಗದೇಶದಲ್ಲಿ ಅನಾವೃಷ್ಟಿ ತಲೆದೋರಿದಾಗ ಅಂಗದೇಶಾಧಿಪನಾದ ರೋಮಪಾದನು ಈತನನ್ನು ಕರೆದುಯ್ದು ತನ್ನ ದೇಶದಲ್ಲಿ ಸುವೃಷ್ಟಿಯನ್ನು ಪಡೆದನು [ಭಾರ.-ವನ. ೧೧೪ ರಾಮಾ.-೧, ೧೦] ದಶರಥನ ಔರಸಪುತ್ರಿಯೂ ರೋಮಪಾದನ ಸಾಕುಮಗಳೂ ಆದ ಶಾನ್ತೆ ಈತನ ಹೆಂಡತಿ [ಭಾಗ -೯, ೨೩ ಭಾರ -ವನ. ೧೧೪]. ದಶರಥನು ಪುತ್ರಕಾಮೇಷ್ಟಿಯಾಗ ಮಾಡಿದಾಗ ಈತನನ್ನು ಬರಮಾಡಿಸಿಕೊಂಡನು [ರಾಮಾ.-ಬಾ ೭, ೧೬.].

**ಋಷಭ.**—(i) ಪಾಂಡ್ಯದೇಶದಲ್ಲಿರುವ ಒಂದು ಪರ್ವತ. ಯುಧಿಷ್ಠಿರನು ತೀರ್ಥಯಾತ್ರಾ ಸಮಯದಲ್ಲಿ ಇಲ್ಲಿಗೆ ಬಂದಿದ್ದನು [ವನ ೮೩].

(ii) ಮಗಧ ದೇಶದಲ್ಲಿರುವ ಒಂದು ಪರ್ವತ ಇದಕ್ಕೆ ಋಷಭಕೂಟ ವೆಂತಲೂ ಹೆಸರು [ಭಾರ.-ಸ. ೨೧].

(iii) ಉತ್ತರಸಮುದ್ರ ತೀರದಲ್ಲಿರುವ ಒಂದು ಬೆಟ್ಟ. ಇಲ್ಲಿ ಶಾಂಡಿಲಿ ಯೆಂಬ ಬ್ರಾಹ್ಮಣಿ ತಪಸ್ಸುಮಾಡಿದಳು [ಭಾರ.-ವನ. ೧೧೩].

**ಋಷಿಗಳು.**—ಯುಧಿಷ್ಠಿರನ ಸಭೆಯಲ್ಲಿದ್ದವರು [ಸ. ೪]. ಇಂದ್ರನ ಸಭೆಯಲ್ಲಿ [ಸ. ೭] ಬ್ರಹ್ಮನ ಸಭೆಯಲ್ಲಿ [ಸ. ೧೧] ಯುಧಿಷ್ಠಿರನೊಂದಿಗೆ ಅರಣ್ಯದಲ್ಲಿ [ವನ. ೮೩]. ಶ್ರೀಕೃಷ್ಣನು ಸಂಧಿಗಾಗಿ ಹಸ್ತಿನಾವತಿಗೆ ಹೋದಾಗ ದಾರಿಯಲ್ಲಿ [ಉ. ೮೩]. ದ್ರೋಣನನ್ನು ಯುದ್ಧಮಾಡಬೇಡವೆಂದು ಆಜ್ಞಾಪಿಸಿದವರು [೧೯೧]. ಭೀಷ್ಮನು ದೇಹತ್ಯಾಗಮಾಡಿದಾಗ ಆತನಲ್ಲಿಗೆ ಬಂದವರು [ಶಾಂತಿ. ೪೭, ೨೦೭] ಪ್ರಾತಃಕಾಲದಲ್ಲಿ ಸ್ಮರಿಸಲು ತಕ್ಕವರು [ಅನು ೨೫೫, ೨೭೧].

**ಋಷಿಧರ್ಮಗಳು.**—[ಭಾರ -ಅನು. ೨೦೯, ೨೧೦].

**ಋಷಿಕ**—ಒಂದು ದೇಶ ಉತ್ತರ ದಿಕ್ಕಿನಲ್ಲಿ ಕಾಂಭೋಜ ದೇಶಕ್ಕೆ ಸಮೀಪದಲ್ಲಿದೆ [ಭಾರ -ಸ. ೨೮ ಭೀ ೯]. ಕೆಲವರು ಇದನ್ನೇ ಈಗಣ ರಷ್ಯಾ (Russia) ದೇಶವೆನ್ನುತ್ತಾರೆ.

**ಋಷಿಕುಲ್ಯಾ.**—ಒಂದು ನದಿ ಮಹೇಂದ್ರ ಪರ್ವತದಲ್ಲಿ ಹುಟ್ಟಿ ಕಳಿಂಗ ದೇಶದಲ್ಲಿ (ಈಗಣ ಗಂಜಾಂ ಜಿಲ್ಲೆಯಲ್ಲಿ) ಹರಿಯುತ್ತದೆ [ಭಾರ. ವನ ೮೭. ಭೀ. ೯].

# ಏ

**ಏಕಚಕ್ರ**—ಒಂದು ಪಟ್ಟಣ. ಬಕಾಸುರನು ಇಲ್ಲಿ ವಾಸಮಾಡುತ್ತಿದ್ದ [ಭಾರ.-ಆ ೬೧, ೬೩] ಅರಗಿನ ಮನೆಯಿಂದ ಹೊರಬಿದ್ದ ಬಳಿಕ ಪಾಂಡವರು ಇದರಲ್ಲಿ ಬ್ರಾಹ್ಮಣರೂಪದಿಂದ ವಾಸವಾಗಿದ್ದರು [ಆದಿ.-೧೭೧, ೧೭೮] ಅಲ್ಲಿಂದ ಪಾಂಚಾಲನಗರಿ ಒಂದು ದಿನದ ಪ್ರಯಾಣ ಸಾಧ್ಯವಾದಷ್ಟು ದೂರದಲ್ಲಿದೆ [ಆದಿ. ೧೮೬]. ನೋಡು—ಬಕ

**ಏಕಜಟಾ**—ಅಶೋಕವನದಲ್ಲಿ ಸೀತೆಯ ಕಾವಲಾಗಿದ್ದ ಒಬ್ಬ ರಾಕ್ಷಸಿ [ರಾಮಾ -ಸುಂ ೨೩]

**ಏಕತ**—ಒಬ್ಬ ಋಷಿ. ಬ್ರಹ್ಮಮಾನಸಪುತ್ರನು ಇವನು ಇವನ ಒಡಹುಟ್ಟಿದವರಾದ ದ್ವಿತ, ತ್ರಿತ ಈ ಮೂವರೂ ಉಪರಿಚರವಸುವಿನ ಯಜ್ಞದಲ್ಲಿ ಸದಸ್ಯರಾಗಿದ್ದರು [ಭಾರ.-ಶಾಂ. ೩೩೬]

**ಏಕಪರ್ಣಾ**—ಹಿಮವಂತನಿಂದ ಮೇನೆಯಲ್ಲಿ ಜನಿಸಿದವಳು ಅಸಿತ ಮಹರ್ಷಿಯ ಹೆಂಡತಿ ದೇವಲ ಮುನಿ ಈಕೆಯ ಮಗನು [ಹರಿ.-೧, ೧೮. ಮ. ೧೩].

**ಏಕಪಾಟಲಾ.**—ಏಕಪರ್ಣೆಯ ಒಡಹುಟ್ಟಿದವಳು. ಈಕೆಯೂ ಬಹುಕಾಲ ತಪಸ್ಸುಮಾಡಿ ಜೈಗೀಷವ್ಯನೆಂಬ ಮುನಿಯನ್ನು ಮದುವೆಯಾದಳು [ಹರಿ.-೧, ೧೮, ಮ ೧೩].

**ಏಕಲವ್ಯ** —ಹಿರಣ್ಯಧನುವೆಂಬ ಬೇಡನ ಸಾಕುಮಗನು. ಬಿಲ್ಲುಗಾರಿಕೆಯನ್ನು ಕಲಿಯುವುದಕ್ಕಾಗಿ ದ್ರೋಣಾಚಾರ್ಯರನ್ನು ಬೇಡಿ, ತಿರಸ್ಕೃತನಾಗಿ, ಮಣ್ಣಿನಿಂದ ದ್ರೋಣನ ಪ್ರತಿಬಿಂಬವನ್ನು ಮಾಡಿ ಅದನ್ನೇ ಗುರುವೆಂದು ಭಾವಿಸಿ, ಅಭ್ಯಾಸಕ್ರಮದಿಂದ ಮಹಾಶೂರನೆನಿಸಿದ್ದನು ಒಮ್ಮೆ ಕುರು ಪಾಂಡವರು ಬೇಟೆಗೆ ಹೋಗಿದ್ದಾಗ ಇವರ ಬೇಟೆಯ ನಾಯಿ ಇವನನ್ನು ಅಟ್ಟಿಕೊಂಡು ಹೋಗಲಾಗಿ ಇವನು ಅದನ್ನು ಕೊಂದನು ಕುರು ಪಾಂಡವರು ಅವನ ಧನುರ್ವಿದ್ಯಾನೈಪುಣ್ಯಕ್ಕೆ ಮೆಚ್ಚಿ ದ್ರೋಣನಿಗೆ ತಿಳುಹಲಾಗಿ, ದ್ರೋಣನು ಅಲ್ಲಿಗೆ ಬಂದು ಆಮೂಲಾಗ್ರವಾಗಿ ನಡೆದ ಸಮಾಚಾರವನ್ನು ಕೇಳಿ, ಗುರುದಕ್ಷಿಣೆಗೆ ಪ್ರತಿಯಾಗಿ ಅವನ ಬಲಗೈ ಹೆಬ್ಬೆಟ್ಟನ್ನು ತೆಗೆದುಕೊಂಡನು [ಭಾರ -ಆ ೧೪೨. ಸ ೪೪]. ಅವನ ಮಗನಾದ ಕೇತುಮಂತನನ್ನು ಭಾರತಯುದ್ಧದಲ್ಲಿ ಭೀಮನು ಕೊಂದನು [ಭೀ ೫೪] ಇವನು ದುರ್ಯೋಧನಪರವಾಗಿ ಭಾರತಯುದ್ಧದಲ್ಲಿ ಹೋರಾಡಿ ಶ್ರೀಕೃಷ್ಣನಿಂದ ಹತನಾದನು [ದ್ರೋ ೧೮೨]

**ಏಕವೀರ** —ಚಂದ್ರವಂಶದ ತುರ್ವಸು ಕುಲೋತ್ಪನ್ನನಾದ ಹರಿವರ್ಮರಾಜನಿಂದ ವಿಷ್ಣುವಿನ ಮೂಲಕ ವರಲಬ್ಧನಾದ ಕುಮಾರನು ಹಯಗ್ರೀವ ರೂಪಧಾರಿಯಾಗಿದ್ದ ವಿಷ್ಣುವಿನಿಂದ ಲಬ್ಧನಾದ ಕಾರಣ ಇವನಿಗೆ ಹೈಹಯನೆಂಬ ಹೆಸರೂ ಇದೆ ಇವನು ಯದುಕುಲದ ಹೈಹಯರಾಜನಿಗಿಂತಲೂ ಬೇರೆ ಇವನಿಗೆ ಏಕಾವಳೀ ಯಶೋವತೀ ಎಂಬುದಾಗಿ ಇಬ್ಬರು ಪತ್ನಿಯರು [ದೇ ಭಾ -೬, ೧೭, ೨೩]

**ಏಕವೀರಾ** —ಮೇಲೆ ಹೇಳಿದ ಏಕವೀರನು ಸೇವಿಸುತ್ತಿದ್ದ ಶಕ್ತಿಯ ರೂಪಾಂತರಕ್ಕೆ ಈ ಹೆಸರು ಸಲ್ಲುತ್ತದೆ [ದೇ ಭಾ -೬, ೧೭, ೨೩].

**ಏಕಾದಶರುದ್ರ** —ಮೃಗವ್ಯಾಧ, ಸರ್ಪ, ನಿರ್ಋತಿ, ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಭಗ [ಭಾರ -ಆ ೬೭] ಅಜೈಕಪಾದ, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ, ಪಿನಾಕಿ [ಭಾರ -ಶಾಂ ೨೦೭] ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕಿ, ಋತ, ಪಿತೃರೂಪ, ತ್ರ್ಯಂಬಕ, ಮಹೇಶ್ವರ, ವೃಷಾಕಪಿ, ಶಂಭು, ಹವನ, ಈಶ್ವರ [ವಿಷ್ಣು -೧, ೧೫. ಭಾರ -ಅನು ೨೫೫. ಭಾಗ.-೬, ೬ ಹರಿ -೧, ೩]

**ಏಕಾವಳಿ** —ರೈಭ್ಯರಾಜನ ಮಗಳು. ರೈಭ್ಯನು ಈಕೆಯನ್ನು ಹರಿವರ್ಮರಾಜನ ಮಗನಾದ ಹೈಹಯ ಅಥವಾ ಏಕವೀರರಾಜನಿಗೆ ಕೊಡಬೇಕೆಂದಿದ್ದಾಗ ಕಾಲಕೇತುವೆಂಬ ರಾಕ್ಷಸನು ಆಕೆಯನ್ನು ಅಪಹರಿಸಿ ಪಾತಾಳದಲ್ಲಿರಿಸಿದನು. ಏಕಾವಳಿ ತನ್ನ ಸಖಿಯಾದ ಯಶೋಮತಿಯ ಮೂಲಕ ಹೈಹಯನನ್ನು ಕರೆಯಿಸಿದಳು,

ಹೈಹಯನು ಕಾಲಕೇತುವನ್ನು ಕೊಂದು ಏಕಾವಳಿಯನ್ನು ಮದುವೆಯಾದನು [ದೇ ಭಾ.-೬, ೧೭, ೨೩].

**ಏಲಾಪತ್ರ** —ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವನು ಸರ್ಪರಾಜ. ನಾಗ ಮಾತೆಯಾದ ಕದ್ರುವಿಗೂ ಆಕೆಯ ಸವತಿಯಾದ ವಿನತೆಗೂ ನಡೆದ ಪಂತದಲ್ಲಿ ವಾಸುಕಿ ಮೊದಲಾದವರು ಜನನಿಯ ಮಾತನ್ನು ನೆರವೇರಿಸಲು ಸಮ್ಮತಿಸಲಿಲ್ಲ ಆಗ ಕದ್ರು "ನೀವೆಲ್ಲರೂ ಜನಮೇಜಯನ ಸರ್ಪಯಾಗದಲ್ಲಿ ಆಹುತಿಯಾಗಿ ಹಾಳಾಗಿರಿ" ಎಂದು ಶಾಪವಿತ್ತಳು ಸರ್ಪಗಳೆಲ್ಲವೂ ಇದನ್ನು ಕೇಳಿ ಹೆದರಿದರು ಆಗ ಏಲಾಪತ್ರನು "ನೀವು ಹೆದರಬೇಡಿರಿ, ಸರ್ಪಯಾಗವು ನೆರವೇರಲಾರದು. ಅದನ್ನು ನಾನು ಬ್ರಹ್ಮಲೋಕದಲ್ಲಿ ಕೇಳಿದ್ದೇನೆ" ಎಂದು ಹೇಳಿದನು [ಭಾರ.-ಆ ೩೭]

## ಐ

**ಐಕ್ಷ್ವಾಕೀ** —ಚಂದ್ರವಂಶದ ಭುಮನ್ಯುರಾಜನ ಮಗನಾದ ಸುಹೋತ್ರನ ಹೆಂಡತಿ ಈಕೆಗೆ ಜಯಂತಿಯೆಂಬ ನಾಮಾಂತರವೂ ಇದೆ ಅಜಮೀಢ ಮೊದಲಾದವರನ್ನು ಹೆತ್ತಳು [ಭಾರ -ಆ ೧೦೧]

**ಐರಾವತ** —(i) ಇಲಾವೃತ ಸಮೀಪದಲ್ಲಿರುವ ಒಂದು ಭೂ ಖಂಡ [ಭಾರ -ಭೀ ೬, ೮]

(ii) ಸರ್ಪರಾಜ ತಕ್ಷಕನ ಮಗನಾದ ಅಶ್ವಸೇನನನ್ನು ಕಾಪಾಡಿದವನು ನೋಡು—ಅಶ್ವಸೇನ [ಭಾರ.-ಆ ೩೫. ಸ. ೯ ಉ ೧೦೩]

(iii) ಇಂದ್ರನ ಪಟ್ಟದ ಆನೆ. ಭದ್ರಮನಸವೆಂಬ ಗಜದಿಂದ ಜನಿಸಿದುದು. ಪೂರ್ವದಿಕ್ಕಿನಲ್ಲಿದೆ [ಭಾರ -ಆ ೧೮]

**ಐಲ** —ಚಂದ್ರಪುತ್ರನಾದ ಬುಧನಿಂದ ಇಲೆಯೆಂಬವಳಲ್ಲಿ ಜನಿಸಿದವನು ಪುರೂರವನು [ಭಾರ.-ಆ ೬೯ ಸ ೮]

**ಐಲಬಿಲ** —ಕುಬೇರನ ನಾಮಾಂತರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ವಿಶ್ರವಸನೆಂಬ ಮುನಿಯ ಅನೇಕ ಮಂದಿ ಪತ್ನಿಯರಲ್ಲಿ ಒಬ್ಬಳಾದ ಇಲಬಿಲೆಯ ಮಗನು. ಕುಬೇರನಿಗೆ ಐಲಬಿಲನೆಂಬುದು ತಾಯ ಹೆಸರಿನ ಮೂಲಕ ಬಂದುದು. ವೈಶ್ರವಣನೆಂಬುದು ತಂದೆಯ ಹೆಸರನ್ನು ಅನುಸರಿಸಿ ಬಂದುದು [ಭಾರ.-ಸ. ೧೦].

## ಓ

**ಓಘವತೀ.**—(i) ಸೂರ್ಯವಂಶದ ಓಘವಂತನ ಮಗಳು ಸುದರ್ಶನನೆಂಬ ಅರಸನನ್ನು ಮದುವೆಯಾಗಿದ್ದಳು ಸುದರ್ಶನನು ಅತಿಥಿಸತ್ಕಾರಕ್ಕಿಂತಲೂ ಹೆಚ್ಚಿನ ವ್ರತ ಬೇರೊಂದೂ ಇಲ್ಲವೆಂಬ ಭಾವನೆಯುಳ್ಳವನಾಗಿದ್ದುದರಿಂದ ಓಘವತಿಯೂ ಪತಿಯ ಮನೋಗತವನ್ನೇ ಅನುಸರಿಸಿದಳು ಒಮ್ಮೆ ಧರ್ಮಪುರುಷನು ಈ ದಂಪತಿಗಳನ್ನು ಪರೀಕ್ಷಿಸಿ, ಅನೇಕ ವರಗಳನ್ನಿತ್ತು ಕಣ್ಮರೆಯಾದನು ಬಳಿಕ ಓಘವತಿ ತನ್ನ ತಪೋಮಹಿಮೆಯಿಂದ ಅರ್ಧಶರೀರವನ್ನು ನದೀರೂಪದಿಂದ ವಿಂಗಡಿಸಿ, ಅರ್ಧದೇಹವನ್ನು ತನ್ನ ಪತಿಯ ಶುಶ್ರೂಷೆಗಾಗಿ ವಿನಿಯೋಗಪಡಿಸಿದಳು [ಭಾರ -ಅನು ೨]

(ii) ಒಂದು ನದಿ ಸರಸ್ವತೀ ನದಿಯಲ್ಲಿ ಸೇರುವ ಏಳು ನದಿಗಳಲ್ಲಿ ಒಂದು ಭಾರತಯುದ್ಧ ಇದರ ಬಳಿಯಲ್ಲಿಯೇ ನಡೆಯಿತು [ಭಾರ -ಶ ೩೯ ಭೀ ೯ ಶಾಂತಿ ೫೦]

**ಓಘವಂತ**—ಒಬ್ಬ ಅರಸು ಸೂರ್ಯವಂಶದ ಪ್ರತೀಕ ರಾಜನ ಮಗ ಇವನ ಮಗನು ಓಘರಥ ಮಗಳು ಓಘವತಿ [ಭಾರ -ಅನು ೨ ಭಾಗ - ೯, ೨]

## ಔ

**ಔದುಮ್ಬರ**—ಒಂದು ದೇಶ ಪಾಂಡವರ ಕಾಲದಲ್ಲಿ ಕಚ್ಛೇಶ್ವರವೆಂಬುದು ಇದಕ್ಕೆ ರಾಜಧಾನಿಯಾಗಿದ್ದಿತು ಈಗ ಇದನ್ನು ಕಚ್ಛ (Cutch) ದೇಶವೆನ್ನುತ್ತಾರೆ [ಭಾರ -ಸ ೭೮]

**ಔರ್ವ**—ಚ್ಯವನ ಮಹರ್ಷಿಯಿಂದ ಮನು ಪುತ್ರಿಯಾದ ಆರುಷಿಯಲ್ಲಿ ಜನಿಸಿದವನು [ಭಾರ -ಆ ೬೭, ೧೯೪] ಕಾರ್ತವೀರ್ಯಾರ್ಜುನನ ವಂಶದವರು ಭೃಗು ವಂಶದವರನ್ನು ಪೀಡಿಸತೊಡಗಿದಾಗ ಗರ್ಭಿಣಿಯಾಗಿದ್ದ ಚ್ಯವನಪತ್ನಿಯ ಗರ್ಭವು ಹೆದರಿಕೆಯಿಂದ ಕದಲಿ ತೊಡೆಯಲ್ಲಿ ಸೇರಿತು ಆಗಲೂ ಕಾರ್ತವೀರ್ಯನ ವಂಶದವರು ಆಕೆಯನ್ನು ಪೀಡಿಸತೊಡಗಿದರು ಒಡನೆಯೇ ಆ ಗರ್ಭ ಹೊರಬಿದ್ದು ಅವರನ್ನು ಕ್ರೂರದೃಷ್ಟಿಯಿಂದ ನೋಡಲಾಗಿ ಅವರೆಲ್ಲರೂ ಕುರುಡರಾಗಿ ಮರಳಿ ಆ ಮಗುವನ್ನೇ ಹೊಗಳಿ ದೃಷ್ಟಿಯನ್ನು ಪಡೆದರು ಇಂತು ಊರುವಿನಿಂದ ಜನಿಸಿದ ಕಾರಣ ಈತನಿಗೆ ಔರ್ವನೆಂದು ಹೆಸರು. ಬಳಿಕ ಔರ್ವನು ತನ್ನ ವಂಶದವರನ್ನು ಕೊಂದವರನ್ನು ನಾಶಮಾಡತೊಡಗಿದಾಗ, ಔರ್ವನ ಪಿತೃದೇವತೆಗಳು ಆತನನ್ನು ಅಡ್ಡಗಿಸಿ, ಆತನ ಕೋಪವನ್ನು ಸಮುದ್ರದಲ್ಲಿ ಬಿಡುವಂತೆ ಸೂಚಿಸಲಾಗಿ, ಔರ್ವನು ತನ್ನ ಕ್ರೋಧಾಗ್ನಿ

ಯನ್ನು ಸಮುದ್ರದಲ್ಲಿ ಬಿಡಲಾಗಿ, ಅದು ಕುದುರೆಯ ರೂಪದಿಂದ ಸಮುದ್ರವನ್ನು ಹೊಕ್ಕು ಬಡಬಾಗ್ನಿಯೆಂಬುದಾಗಿ ಪ್ರಖ್ಯಾತಿಗೊಂಡಿತು. ಬಳಿಕ ಔರ್ವನಿಗೆ ಋಚೀಕನೆಂಬ ಮಗನೂ ಕಂದಳಿಯೆಂಬ ಅಯೋನಿಜೆಯಾದ ಮಗಳೂ ಉಂಟಾದರು ಔರ್ವನು ಕಂದಳಿಯನ್ನು ದುರ್ವಾಸಮುನಿಗೆ ಕೊಟ್ಟು ಮದುವೆಮಾಡಿದನು [ಭಾರ.-ಆ. ೬೭, ೧೯೪-೧೯೬]

**ಔಶೀನರಿ** —ಉಶೀನರರಾಜನಿಂದ ಮಾಧವಿಯೆಂಬಾಕೆಯಲ್ಲಿ ಜನಿಸಿದವನು ಶಿಬಿಚಕ್ರವರ್ತಿ [ಭಾರ -ಸ ೮ ಶಾಂತಿ ೨೮]

# ಕ

**ಕಂಸ** —ಯದುವಂಶದ ಉಗ್ರಸೇನನ ಮಗ ಮಥುರೆಯ ಅರಸು ಜರಾಸಂಧನ ಪುತ್ರಿಯರಾದ ಅಸ್ತಿ, ಪ್ರಾಪ್ತಿಯರು ಇವನ ಹೆಂಡತಿಯರು [ಭಾರ.-ಸ ೧೪, ೨೩] ಕಾಲನೇಮಿಯೆಂಬ ರಾಕ್ಷಸನ ಅಂಶದಿಂದ ಜನಿಸಿದವನು ಉಗ್ರಸೇನನ ರಾಣಿ ಒಮ್ಮೆ ಸಖಿಗಳ ಸಂಗಡ ಸ್ನಾನಾರ್ಥನಾಗಿ ಯಮುನಾ ನದಿಗೆ ಹೋಗಿದ್ದು, ಕಾಮಪರವಶೆಯಾಗಿ ತನ್ನ ಪತಿಯನ್ನು ಸ್ಮರಿಸಿಕೊಂಡಳು ಕೂಡಲೇ ದ್ರುಮಿಲನೆಂಬ ರಾಕ್ಷಸನು ಉಗ್ರಸೇನನ ರೂಪದಿಂದ ಅಲ್ಲಿಗೆ ಬಂದು ಆಕೆಯೊಡನೆ ನೇರಿದನು ರಾಣಿ ಕೆಲವು ಕುರುಹುಗಳಿಂದ ಇವನನ್ನು ಉಗ್ರಸೇನನಲ್ಲವೆಂದು ಶಂಕಿಸಿ, ಅವನಿಂದ ನಿಜಸ್ಥಿತಿಯನ್ನು ತಿಳಿದು, ರೋಷಭರದಿಂದ '' ನಿನ್ನ ದುರ್ಬೀಜದಿಂದ ಜನಿಸಿದವನು ಯದುವಂಶದವನಿಂದಲೇ ನಾಯಲಿ '' ಎಂದು ಶಾಪವಿತ್ತಳು. ಈ ಕಾರಣದಿಂದಲೂ, ಇವನು ಕಾಲನೇಮಿಯ ಅಂಶದಿಂದ ಹುಟ್ಟಿದ್ದರಿಂದಲೂ ಕಂಸನಲ್ಲಿ ರಾಕ್ಷಸಗುಣಗಳು ತಲೆದೋರಿದುವು [ಹರಿ -೨, ೨೮] ಕಂಸನು ತಾರುಣ್ಯವನ್ನು ಹೊಂದಿದಕೂಡಲೇ ಉಗ್ರಸೇನನನ್ನು ಸೆರೆಯಲ್ಲಿಟ್ಟು ತಾನೇ ರಾಜ್ಯಭಾರಮಾಡತೊಡಗಿದನು ತನ್ನ ಚಿಕ್ಕಪ್ಪನ ಮಗಳಾದ ದೇವಕಿಯನ್ನು ವಸುದೇವನಿಗೆ ಕೊಟ್ಟು, ವೈಭವದಿಂದ ಮದುವೆಮಾಡಿದನು ಇಷ್ಟರಲ್ಲಿ '' ಇವರ ಗರ್ಭವು ನಿನ್ನನ್ನು ಕೊಲ್ಲುವುದು '' ಎಂಬ ಅಶರೀರವಾಣಿಯನ್ನು ಕೇಳಿ ಭಯದಿಂದ ಅವರಿಬ್ಬರನ್ನೂ ಸೆರೆಯಲ್ಲಿಟ್ಟು ಅವರ ಮಕ್ಕಳನ್ನು ಹುಟ್ಟಿದಕೂಡಲೇ ಕೊಲ್ಲುತ್ತ ಬಂದ ಹೀಗೆ ಆರು ಗರ್ಭಗಳು ಹಾಳಾಗಿ ಏಳನೆಯ ಗರ್ಭ ವ್ಯತ್ಯಸ್ತನಾಯಿತು ಎಂಟನೆಯ ಗರ್ಭದಲ್ಲಿ ಕೃಷ್ಣನು ಜನಿಸಿದನು ಕೃಷ್ಣನ ಪ್ರೇರಣೆಯಂತೆ ವಸುದೇವನು ಆ ಮಗುವನ್ನು ನಂದನ ಪತ್ನಿಯಾದ ಯಶೋದೆಯ ಬಳಿಯಲ್ಲಿಟ್ಟು, ಅವಳು ಪ್ರಸವಿಸಿದ್ದ ಹೆಣ್ಣುಕೂಸನ್ನು ದೇವಕಿಯ ಬಳಿ ತಂದಿಟ್ಟನು ಆ ಹೊತ್ತಿಗೆ ದೇವಕಿ ಪ್ರಸವಿಸಿದಳೆಂಬ ಸುದ್ದಿಯನ್ನು

ತಿಳಿದು ಕಂಸನು ಖಡ್ಗಪಾಣಿಯಾಗಿ ಅಲ್ಲಿಗೆ ಬಂದು, ಖಡ್ಗವನ್ನು ಅಡ್ಡ ಹಿಡಿದು ಮಗುವನ್ನು ಮೇಲಕ್ಕೆ ಎಸೆಯಲಾಗಿ ಆ ಶಿಶುವು "ನಿನ್ನನ್ನು ಕೊಲ್ಲುವವನು ನಂದ ಗೋಕುಲದಲ್ಲಿ ಬೆಳೆಯುತ್ತಿದ್ದಾನೆ" ಎಂದು ಹೇಳಿ ಮಾಯವಾಯಿತು ಇದರಿಂದ ಕಂಸನ ಭಯ, ಕೋಪ, ತಾಪಗಳು ನೂರ್ಮಡಿಯಾದುವು ಬಳಿಕ ಬಾಲಕೃಷ್ಣನನ್ನು ಕೊಲ್ಲುವ ಸಲುವಾಗಿ ಪೂತನೆ, ಶಕಟ, ಧೇನುಕ, ಯಮಳಾರ್ಜುನ, ಕೇಶಿ ಮುಂತಾದ ಅನೇಕ ಮಂದಿ ರಾಕ್ಷಸರನ್ನು ಕಳುಹಿದನು ಅವರೆಲ್ಲರೂ ಕೃಷ್ಣನಿಂದ ಹತರಾದರು. ಇಲ್ಲಿಗೆ ಕೃಷ್ಣನು ಬಾಲ್ಯವನ್ನು ಮುಗಿಸಿ, ತಾರುಣ್ಯದಲ್ಲಿ ಅಡಿ ಇಡತಕ್ಕವನಾಗಿದ್ದನು. ಆಗ ಕಪಟಪ್ರೇಮವನ್ನು ನಟಿಸಿ, ತನ್ನ ಮಂತ್ರಿಯಾದ ಅಕ್ರೂರನ ಮೂಲಕ ಬಲರಾಮ ಕೃಷ್ಣರನ್ನು ಮಧುರೆಗೆ ಬರಮಾಡಿಸಿ, ಪಟ್ಟಣದ ಬಾಗಿಲಲ್ಲಿ ಕುವಲಯಾಪೀಡವೆಂಬ ತನ್ನ ಆನೆಯನ್ನು ಅವರ ಮೇಲೆ ಓಡಿಸಿದನು ಆದರೆ ಕೃಷ್ಣನು ಆನೆಯನ್ನು ಕೊಂದು ಕಂಸನ ಸಭೆಯನ್ನು ಹೊಕ್ಕನು ಕೃಷ್ಣಸಂಹಾರಾರ್ಥವಾಗಿ ಮೊದಲೇ ಸಿದ್ಧರಾಗಿದ್ದ ಮುಷ್ಟಿಕ ಚಾಣೂರರೆಂಬ ಮಲ್ಲರು ಕೃಷ್ಣನ ಸಂಗಡ ಮಲ್ಲಯುದ್ಧ ಮಾಡಿ ಮಡಿದರು ಬಳಿಕ ಕೃಷ್ಣನು ಕಂಸನನ್ನು ಕೊಂದು ಉಗ್ರಸೇನನಿಗೆ ಪಟ್ಟಗಟ್ಟಿದನು [ಭಾರ -ಆ ೬೮ ಸ ೨೩, ೫೩ ಹರಿ -೨, ೩೦ ಭಾಗ -೧೦, ೩೬-೪೪]

**ಕಂಸಾ** —ಕಂಸನ ತಂಗಿ ವಸುದೇವನ ತಮ್ಮನಾದ ದೇವಭಾಗನನ್ನು ಮದುವೆಯಾಗಿ ಚಿತ್ರಕೇತು, ಬೃಹದ್ಬಲ, ಉದ್ಧವರೆಂಬ ಪುತ್ರರನ್ನು ಪಡೆದಳು [ಭಾಗ -೧೦, ೪೫].

**ಕಂಸಾವತಿ** —ಕಂಸನ ತಂಗಿ ವಸುದೇವನ ತಮ್ಮನಾದ ದೇವಶ್ರವನನ್ನು ಮದುವೆಯಾಗಿ ಸುವೀರ, ಇಷುಮಂತರೆಂಬ ತನಯರನ್ನು ಹೆತ್ತಳು [ಭಾಗ -೧೦, ೪೫]

**ಕಕುತ್ಸ್ಥ** —ನೋಡು—ಇಂದ್ರವಾಹ

**ಕಕುದ್ಮಾನ್** —ಕೈಲಾಸ ಪರ್ವತದ ವಾಯುವ್ಯದಲ್ಲಿ ಹಿಮವತ್ಪರ್ವತದ ಶಿಖರ. ಶಿವನ ವಾಹನವಾದ ನಂದಿಯ ಉತ್ಪತ್ತಿಸ್ಥಾನ [ಮತ್ಸ್ಯ -೧೨೦]

**ಕಕುದ್ಮಿ** —ಸೂರ್ಯವಂಶದ ಅರಸು ರೇವತನೆಂಬುದು ಇವನ ನಾಮಾಂತರ ಈತನು ತನ್ನ ಮಗಳಾದ ರೇವತಿಗೆ ವರನಾರೆಂದು ಕೇಳುವುದಕ್ಕೆ ಮಗಳನ್ನು ಬ್ರಹ್ಮನಲ್ಲಿಗೆ ಕರೆದುಯ್ದನು. ಅಲ್ಲಿ ದೇವರ್ಷಿಗಳು ಶಾಸ್ತ್ರವಿವಾದದಲ್ಲಿದ್ದರು ಅದು ಮುಗಿದ ತರುವಾಯ ಬ್ರಹ್ಮನನ್ನು ಕುರಿತು ತನ್ನ ಮಗಳಿಗೆ ವರನಾರು? ಎಂದು ಕೇಳಿದನು ಆಗ ಬ್ರಹ್ಮನು "ಅಯ್ಯಾ! ನೀನು ಭೂಲೋಕವನ್ನು ಬಿಟ್ಟು ಬಂದ ಬಳಿಕ ಇದುವರೆಗೆ ಎಷ್ಟೋ ಯುಗಗಳು ಕಳೆದುಹೋಗಿವೆ. ಇಲ್ಲಿ ಇದ್ದುದರಿಂದ ಅದು ನಿನಗೆ ತಿಳಿಯಲಿಲ್ಲ. ಈಗ ವಸುದೇವನ ಹಿರಿಯ ಮಗನಾದ ಬಲರಾಮನೇ

ಇವಳಿಗೆ ವರನಾಗತಕ್ಕವನು'' ಎಂದು ಹೇಳಿದನು ಕಕುದ್ಮಿ ಭೂಮಿಗೆ ಬ್ರಹ್ಮ ಲೋಕದಿಂದ ಹಿಂದಿರುಗಿ ಬರುವಾಗ್ಗೆ ಎಲ್ಲವೂ ಹೊಸದಾಗಿತ್ತು. ಇವನ ಪರಿಚಿತ ರಾಗಲಿ, ಬಂಧುಬಳಗದವರಾಗಲಿ ಯಾರೂ ಇರಲಿಲ್ಲ ಬಳಿಕ ಕಕುದ್ಮಿ ತನ್ನ ಮಗಳನ್ನು ಬಲರಾಮನಿಗೆ ಕೊಟ್ಟು ಮದುವೆಮಾಡಿ ತಪಸ್ಸಿಗೆ ಹೋದನು [ಭಾಗ - ೯, ೩. ಹರಿ -೧, ೧೦]

**ಕಕ್ಷೀವಂತ.**—ಒಬ್ಬ ಋಷಿ ಕಳಿಂಗ ದೇಶದ ರಾಜನಾದ ಬಲಿಯೆಂಬ ಅರಸನಿಗೆ ಸಂತಾನವಿಲ್ಲದ ಕಾರಣ ಆತನು ತನ್ನ ಪಟ್ಟದರಸಿಯಾದ ಸುದೇಷ್ಣೆಯನ್ನು ದೀರ್ಘತಮನೆಂಬ ಋಷಿಯಲ್ಲಿಗೆ ಪರಿಚರ್ಯೆಮಾಡಲು ಕಳುಹಿದನು ಬಳಿಕ ಆಕೆ ದೀರ್ಘತಮನನ್ನು ಸೇರಲೊಲ್ಲದೆ ತನ್ನ ದಾಸಿಯನ್ನು ಆತನಲ್ಲಿಗೆ ಕಳುಹಿದಳು ಬಳಿಕ ದಾಸಿ ಆ ಮುನಿಯ ಮೂಲಕ ಕಕ್ಷೀವಂತನೆಂಬ ಮಗನನ್ನು ಪಡೆದಳು [ಭಾರ - ಸ ೭].

**ಕಂಕ.**—ಅಜ್ಞಾತವಾಸ ಕಾಲದಲ್ಲಿ ಯತಿವೇಷದಿಂದ ವಿರಾಟನ ಆಸ್ಥಾನದಲ್ಲಿದ್ದ ಯುಧಿಷ್ಠಿರನ ಹೆಸರು [ವಿರಾ ೨] ವಿರಾಟನು ದಕ್ಷಿಣ ಗೋಗ್ರಹಣದಲ್ಲಿ ಜಯಶೀಲನಾಗಿ, ಪಟ್ಟಣಕ್ಕೆ ಹಿಂದಿರುಗಿ ಬರುವಷ್ಟರಲ್ಲಿ, ಉತ್ತರ ದಿಕ್ಕಿನಲ್ಲಿ ಗೋವುಗಳನ್ನು ಅಡ್ಡಗಿಸಿದ ಕೌರವರನ್ನು ಜಯಿಸುವುದಕ್ಕಾಗಿ ಉತ್ತರನು (ಅರ್ಜುನ) ಬೃಹನ್ನಳೆಯನ್ನು ಸಾರಥಿಯಾಗಿಟ್ಟುಕೊಂಡು ಯುದ್ಧಕ್ಕೆ ಹೋಗಿರುವನೆಂಬ ಸುದ್ದಿಯನ್ನು ಕೇಳಿ ಹೆದರಿದನು ಕಂಕಭಟ್ಟನು, ''ಅಯ್ಯಾ! ಬೃಹನ್ನಳೆ ಸಾಮಾನ್ಯಳೆಂದು ತಿಳಿಯಬೇಡ, ಅರ್ಜುನನ ಸಾರಥಿ ನಿನ್ನ ಮಗನಿಗೆ ಸಾರಥ್ಯವನ್ನು ಮಾಡಲು ಒಪ್ಪಿಕೊಂಡುದೇ ಪರಮಭಾಗ್ಯವೆಂದು ತಿಳಿ ನಿನ್ನ ಮಗನು ಜಯಶೀಲನಾಗಿ ಹಿಂದಿರುಗುವನು'' ಎಂದು ಸಂತವಿಸಿದನು ಅಷ್ಟರಲ್ಲಿ ಉತ್ತರನು ಕೌರವರನ್ನು ಜಯಿಸಿದನೆಂಬ ವಾರ್ತೆಯೂ ಬಂದಿತು ವಿರಾಟನು ಉತ್ಸಾಹಭರದಿಂದ ಕಂಕನೊಡನೆ ಪಗಡೆಯಾಡುತ್ತ, ತನ್ನ ಮಗನನ್ನು ಹೊಗಳತೊಡಗಿದನು. ಕಂಕಭಟ್ಟನು ಪ್ರತಿಮಾತನ್ನಾಡಲಾಗಿ, ಕೋಪಭರಿತನಾದ ವಿರಾಟನು ಕಂಕನನ್ನು ದಾಳದಿಂದ ಹೊಡೆಯಲಾಗಿ ಕಂಕನ ಕಪಾಲದಿಂದ ರಕ್ತ ಸುರಿಯತೊಡಗಿತು ಯುಧಿಷ್ಠಿರನ ದೇಹದಿಂದ ಒಂದು ತೊಟ್ಟು ರಕ್ತವಾದರೂ ನೆಲದಮೇಲೆ ಬೀಳಿಸಿದವನು ಬದುಕಲಾರನೆಂಬ ವಿಷಯವನ್ನು ಅರಿತಿದ್ದ, ಕೃತಜ್ಞೆಯೂ ಕಾರ್ಯಚತುರೆಯೂ ಆದ, ಸೈರಂಧ್ರಿ (ದ್ರೌಪದಿ) ತನ್ನ ಸೆರಗಿನಿಂದ ಆ ರಕ್ತವನ್ನು ಒರಸಿದಳು ಅಷ್ಟರಲ್ಲಿ ಅಲ್ಲಿಗೆ ಬಂದ ಉತ್ತರನು ಯುಧಿಷ್ಠಿರನ ಕಪಾಲದಲ್ಲಿರುವ ಗಾಯವನ್ನು ಕಂಡು, ಕಾರಣವನ್ನು ತಿಳಿದು, ಹೆದರಿದವನಾಗಿ ವಿರಾಟನ ಮೂಲಕ ಯುಧಿಷ್ಠಿರನಿಗೆ ಕ್ಷಮಾಪಣೆಯನ್ನು ಹೇಳಿಸಿದನು [ವಿರಾ. ೭೨].

**ಕಚ್ಚಾ** —ಉಗ್ರಸೇನನ ಮಗಳು ಕಂಸನ ತಂಗಿ ವಸುದೇವನ ತಮ್ಮನಾದ ಆನಕನನ್ನು ಮದುವೆಯಾಗಿ ಸತ್ಯಜಿತ್, ಪುರುಜಿತರೆಂಬ ಇಬ್ಬರು ಮಕ್ಕಳನ್ನು ಪಡೆದಳು [ಭಾಗ.-೧೦, ೪೫]

**ಕಚ** —ದೇವಗುರುವಾದ ಬೃಹಸ್ಪತ್ಯಾಚಾರ್ಯರ ಮಗ ಸತ್ತವರನ್ನು ಬದುಕಿಸುವ ಮೃತಸಂಜೀವಿನೀ ವಿದ್ಯೆಯನ್ನು ಕಲಿಯುವುದಕ್ಕಾಗಿ ದೇವತೆಗಳ ಸೂಚನೆಯಂತೆ ಶುಕ್ರಾಚಾರ್ಯರಲ್ಲಿ ಗುರುಕುಲವಾಸ ಮಾಡುತ್ತಿದ್ದನು ಕಚನಿಗೂ ಶುಕ್ರಾಚಾರ್ಯರ ಮಗಳಾದ ದೇವಯಾನಿಗೂ ಪರಸ್ಪರ ಪ್ರೀತಿ ವಿಶ್ವಾಸಗಳು ಹೆಚ್ಚಿದುವು ಆದರೆ ಶುಕ್ರಾಚಾರ್ಯನು ದೇವಗುರುವಿನ ಮಗನನ್ನು ಶಿಷ್ಯನನ್ನಾಗಿ ಮಾಡಿಕೊಂಡುದು ರಾಕ್ಷಸರಿಗೆ ಹಿತವಾಗಲಿಲ್ಲ ಒಮ್ಮೆ ಕಚನು ಶುಕ್ರಾಚಾರ್ಯರ ಆಕಳನ್ನು ಮೇಯಿಸುತ್ತಾ ಬಯಲಿನಲ್ಲಿದ್ದಾಗ ರಾಕ್ಷಸರು ಹೊಂಚುಹಾಕಿ ಅವನನ್ನು ಕೊಂದರು ಸಂಜೆಗೆ ಆಕಳು ಮಾತ್ರವೇ ಮನೆಗೆ ಬಂದಿತು ಕಚನು ಬರಲಿಲ್ಲ ಮಗಳು ತಂದೆಯಲ್ಲಿ ಮೊರೆಯಿಟ್ಟಳು ಶುಕ್ರಾಚಾರ್ಯರು ಯೋಗದೃಷ್ಟಿಯಿಂದ ತಿಳಿದು ತಮ್ಮ ಮಂತ್ರಬಲದಿಂದ ಕಚನನ್ನು ಬದುಕಿಸಿದರು ಇದರಿಂದ ರಾಕ್ಷಸರಿಗೆ ಕೋಪ ಮತ್ತಷ್ಟು ಹೆಚ್ಚಿತು ಇನ್ನೊಂದು ಸಲ ಕಚನನ್ನು ಕೊಂದು, ಸುಟ್ಟು, ಬೂದಿಮಾಡಿ, ಆ ಬೂದಿಯನ್ನು ಹೆಂಡದಲ್ಲಿ ಕದಡಿ, ಶುಕ್ರಾಚಾರ್ಯರಿಗೆ ಕುಡಿಸಿದರು ಸಂಜೆಯಾಯಿತು, ಆಕಳೂ ಬಂತು, ಕಚನು ಬರಲಿಲ್ಲ ಮಗಳ ಗೋಣಗಾಟಕ್ಕೆ ಮೊದಲಿಟ್ಟಿತು ಶುಕ್ರಾಚಾರ್ಯರು ದಿವ್ಯದೃಷ್ಟಿಯಿಂದ ನೋಡಿದರು ಕಚನು ತಮ್ಮ ಹೊಟ್ಟೆಯಲ್ಲಿಯೇ ಇದ್ದಾನೆ ಅವನು ಬದುಕುವುದು ಸಾಧ್ಯವಿಲ್ಲವೆಂದು ಮಗಳಿಗೆ ಹೇಳಿದರು ಮಗಳು ಹೇಗಾದರೂ ಬದುಕಿಸಿಯೇ ಕೊಡಬೇಕೆಂದು ಹಟಹಿಡಿದಳು ಆಗ ಶುಕ್ರಾಚಾರ್ಯರು ಸುರಾಪಾನವನ್ನು ನಿಂದಿಸಿ, ಹೊಟ್ಟೆಯೊಳಗಿದ್ದ ಕಚನನ್ನು ಮಂತ್ರಬಲದಿಂದ ಬದುಕಿಸಿ, ಅಲ್ಲಿರುವಾಗಲೇ ಅವನಿಗೆ ಮೃತಸಂಜೀವಿನೀ ವಿದ್ಯೆಯನ್ನು ಉಪದೇಶಿಸಿದರು ಕಚನು ಶುಕ್ರಾಚಾರ್ಯರ ದೇಹವನ್ನು ಭೇದಿಸಿಕೊಂಡು ಹೊರಬಂದು, ತನ್ನ ಗುರೂಪದೇಶಮಹಿಮೆಯಿಂದ ಶುಕ್ರಾಚಾರ್ಯರನ್ನು ಬದುಕಿಸಿದನು ಶುಕ್ರಾಚಾರ್ಯರು ಸಂತೋಷದಿಂದ ಅಪ್ಪಿಕೊಂಡು, ಆಶೀರ್ವದಿಸಿ ಬೀಳ್ಕೊಟ್ಟರು ಆದರೆ ದೇವಯಾನಿ ಕಚನನ್ನು ಅಡ್ಡಗಿಸಿ, ತನ್ನನ್ನು ಮದವೆಮಾಡಿಕೊಳ್ಳುವಂತೆ ಬೇಡಿದಳು ಗುರುಪುತ್ರಿಯನ್ನು ಮದುವೆಯಾಗುವುದು ಧರ್ಮವಲ್ಲವೆಂದು ಕಚನು ಎಷ್ಟು ಬಗೆಯಿಂದ ಹೇಳಿದರೂ ಕೇಳದೆ, ದೇವಯಾನಿ ಆಶಾಭಂಗದಿಂದ ದಿಕ್ಕುತೋರದೆ '' ನನ್ನ ತಂದೆಯ ಮೂಲಕ ಕಲಿತುಕೊಂಡ ವಿದ್ಯೆ ನಿನಗೆ ಫಲಸಬೇಡ '' ಎಂಬುದಾಗಿ ಕಚನಿಗೆ ಶಾಪ ಕೊಟ್ಟಳು ಕಚನು '' ಚಿಂತೆಯಿಲ್ಲ ನನಗೆ ಫಲಿಸದಿದ್ದರೂ ನನ್ನಿಂದ ಉಪದೇಶವನ್ನು ಪಡೆದವರಿಗೆ ಫಲಿಸಿದರೆ ಸಾಕು ನೀನು ಮಾತ್ರ ಸಕಲ ವೇದಶಾಸ್ತ್ರ ಸಂಪನ್ನ

ನಾಗಿರುವ ಭೂಸುರೋತ್ತಮನ ಮಗಳಾಗಿದ್ದರೂ, ಧರ್ಮವಿರುದ್ಧವಾದ ಕಾರ್ಯದಲ್ಲಿ ನನ್ನನ್ನು ಬಲಾತ್ಕರಿಸಿರುವೆಯಾದುದರಿಂದ, "ಯಾವ ಬ್ರಾಹ್ಮಣನೂ ನಿನ್ನನ್ನು ಮದುವೆಯಾಗಬೇಡ" ಎಂದು ಪ್ರತಿಶಾಪವಿತ್ತನು ಹೀಗಾಗಿ ದೇವಯಾನಿ ಕ್ಷತ್ರಿಯನಾದ ಯಯಾತಿ ರಾಜನನ್ನು ಮದುವೆಯಾದಳು [ಭಾರ -ಆ ೭೦ ಅನು ೬೫ ಮತ್ಸ್ಯ -೨೫]

**ಕಚ್ಛ** —ಒಂದು ದೇಶ ಗುಜರಾತಿನಲ್ಲಿ ಅಹಮದಾಬಾದಿಗೂ ಖಾಬಾಯತ ನಗರಿಗೂ ನಡುವೆ ಇದೆ ಇದನ್ನು ಈಗ ಖೇಡದೇಶವೆನ್ನುತ್ತಾರೆ [ಭಾರ -ಭೀ ೯]

**ಕಚ್ಛಪ** —ಕುಬೇರನ ನವನಿಧಿಗಳಲ್ಲಿ ಐದನೆಯದು ಇದು ತಾಮಸನಿಧಿ. ಈ ನಿಧಿಯನ್ನು ಪಡೆದವನು ಆಮೆ ತನ್ನ ಅಂಗಗಳನ್ನು ಬಚ್ಚಿಟ್ಟುಕೊಳ್ಳುವಂತೆ ಇವನೂ ತನ್ನ ಧನವನ್ನು ಗೋಪ್ಯವಾಗಿರಿಸುವನು [ಮಾರ್ಕ -೬೫]

**ಕಚ್ಛಪೀ** —ಸರಸ್ವತಿಯ ವೀಣೆಯ ಹೆಸರು [ಭಾರ -ಶ ೫೪]

**ಕಟ** —ಒಂದು ದೇಶ ವರ್ಧಮಾನ (Burdwan) ಜಿಲ್ಲೆಯ ಕಾತ್ವಾ ಎಂಬ ಪ್ರದೇಶ ಯುಧಿಷ್ಠಿರನ ರಾಜಸೂಯಯಾಗ ಸಮಯದಲ್ಲಿ ಅರ್ಜುನನು ಇದರ ಅರಸನಾದ ಸುನಾಭನನ್ನು ಜಯಿಸಿದನು [ಭಾರ -ಸ ೨೭]

**ಕಠ** —ಒಬ್ಬ ಋಷಿ ವಸಿಷ್ಠಗಣಕ್ಕೆ ಸೇರಿದವನು [ಭಾರ -ಆ. ಲ. ಸ. ೪]

**ಕಠವಲ್ಲೀ** —ಕೃಷ್ಣಯಜುರ್ವೇದಕ್ಕೆ ಸೇರಿದ ಒಂದು ಉಪನಿಷತ್ತು ಇದರ ಅರ್ಥವಿವರಣ [ಭಾರ -ಶಾಂ ೨೫೨ ಅನು. ೧೦೬]

**ಕಣಿಕ** —ಒಬ್ಬ ಬ್ರಾಹ್ಮಣ ಧೃತರಾಷ್ಟ್ರನ ಮಂತ್ರಿ. ಇವನಿಗೆ ಕಳಿಂಗ, ಕುಳಿಂಗ ಎಂಬುದು ನಾಮಾಂತರಗಳು ಭೀಷ್ಮಾಚಾರ್ಯನು ಧೃತರಾಷ್ಟ್ರನ ಅನುಮತಿಯಿಂದ ಯುಧಿಷ್ಠಿರನಿಗೆ ಯೌವರಾಜ್ಯದಲ್ಲಿ ಪಟ್ಟಗಟ್ಟಿದ ಇದು ದುರ್ಯೋಧನನಿಗೆ ಎಷ್ಟು ಮಾತ್ರವೂ ಹಿತನಾಗಲಿಲ್ಲ ಕಣಿಕನಲ್ಲಿ ಮೊರೆಯಿಟ್ಟ ಕಣಿಕನು ದುರ್ಯೋಧನನಿಗೆ ಅನೇಕ ನೀತಿತತ್ವಗಳನ್ನು ವಿವರಿಸಿ, ಪಾಂಡವರನ್ನು ಧ್ವಂಸಗೊಳಿಸಿದಲ್ಲದೆ ಕೌರವರಿಗೆ ಉಳಿಗಾಲವಿಲ್ಲವೆಂದು ಹೇಳಿದ ಬಳಿಕ ದುರ್ಯೋಧನನು ಅರಗಿನ ಮನೆಯನ್ನು ನಿರ್ಮಿಸಿದನು [ಭಾರ -ಆ ೬೧, ೧೫೩]

**ಕಣ್ಡು**.—ನೋಡು—ಕನ್ದು.

**ಕಣ್ಡೂ**.—ಕಳಿಂಗ ದೇಶದ ರಾಜನ ಮಗಳು ಅಕ್ರೋಧನನ ಹೆಂಡತಿ ಈಕೆಯ ಮಗನು ದೇವಾತಿಥಿ [ಭಾ -ಆ ೬೩]

**ಕಣ್ವ** —ಕಶ್ಯಪಗೋತ್ರದ ಒಬ್ಬ ಮಹರ್ಷಿ ದುಷ್ಯಂತನ ಪತ್ನಿಯಾದ ಶಕುಂತಲೆ ಈತನ ಆಶ್ರಮದಲ್ಲಿ ಬೆಳೆದವಳು [ಭಾರ -ಆ ೯೧, ೯೬] ಈತನು ಮೇಧಾತಿಥಿಯ ಮಗ [ಭಾರ -ಅನು ೨೫೫]. ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವುದೇ

ಯುಕ್ತವೆಂದು ದುರ್ಯೋಧನನಿಗೆ ಹೇಳಿದನು. ದುರ್ಯೋಧನನು ಹೆಮ್ಮೆಯಿಂದ ತೊಡೆಗಳನ್ನು ತಟ್ಟಿಕೊಳ್ಳಲಾಗಿ "ನಿನಗೆ ತೊಡೆಗಳಲ್ಲಿಯೇ ಸಾವು ಬರುವುದು" ಎಂದು ಶಾಪವಿತ್ತನು [ಭಾರ.-ಉ. ೯೭, ೧೦೫] ಈತನ ಆಶ್ರಮ ಅಯೋಧ್ಯೆಗೆ ಪಶ್ಚಿಮದಲ್ಲಿ ಲಕ್ನೋ (ಲಕ್ಷ್ಮಣಾವತಿ) ಪಟ್ಟಣದ ಬಳಿ ಇದ್ದಿತು [ಭಾರ -ವ ೮೦].

**ಕತ(ಥ)**—ವಿಶ್ವಾಮಿತ್ರವಂಶದ ಒಬ್ಬ ಬ್ರಾಹ್ಮಣ. ಅರ್ಜುನನು ತೀರ್ಥ ಯಾತ್ರೆಮಾಡುತ್ತಿದ್ದಾಗ ಈ ಬ್ರಾಹ್ಮಣನು ಅರ್ಜುನನನ್ನು ಸಂಧಿಸಿ, ಸುಭದ್ರೆ ಯನ್ನು ದುರ್ಯೋಧನನಿಗೆ ಕೊಟ್ಟು ಮದುವೆಮಾಡುವುದಾಗಿ ಬಲರಾಮನು ನಿಷ್ಕರ್ಷೆ ಮಾಡಿರುವುದಾಗಿ ಅರ್ಜುನನಿಗೆ ತಿಳುಹಿದನು [ಭಾ -ಆ ೨೨೮]

**ಕದಳೀವನ.**—ರಾಮಾಯಣ ಯುದ್ಧ ಮುಗಿದ ಬಳಿಕ ಹನೂಮಂತನು ತಪಸ್ಸುಮಾಡುತ್ತಿದ್ದ ಒಂದು ವನ [ಭಾರ -ವ ೧೪೮]

**ಕದ್ರೂ**—ದಕ್ಷಬ್ರಹ್ಮನ ಮಗಳು ಕಶ್ಯಪಮುನಿಯ ಹದಿಮೂರು ಮಂದಿ ಪತ್ನಿಯರಲ್ಲಿ ಒಬ್ಬಳು ಸರ್ಪಗಳನ್ನು ಹೆತ್ತವಳು [ಭಾರ -ಆ ೧೬, ೨೦, ೨೧, ೨೫, ೨೭, ೬೬ ಸ ೧೧ ಅನು ೨೦-೨೫] ಗರುಡನ ಜನನಿಯಾದ ವಿನತೆಯೂ ಕದ್ರುವೂ ಸವತಿಯರು ಇಬ್ಬರೂ ಚೆಲುವೆಯರು ಒಮ್ಮೆ ಇವರಿಬ್ಬರೂ ತಮ್ಮ ಸೌಂದರ್ಯದ ವಿಷಯವಾಗಿ ಸ್ಪರ್ಧೆಮಾಡಿದರು ಕದ್ರು ಜಯಹೊಂದಿದಳು [ಕೃಷ್ಣಯ ಕಾಂ -೧]. ಒಂದು ದಿನ ಇವರಿಬ್ಬರೂ ಕ್ಷೀರಸಮುದ್ರತೀರದಲ್ಲಿ ಸಂಚರಿಸುತ್ತಿದ್ದಾಗ ವಿನತೆ ಕದ್ರುವನ್ನು ಕುರಿತು ದೂರದಲ್ಲಿ ಮೇಯುತ್ತಿದ್ದ, ಇಂದ್ರನ ಪಟ್ಟದ ಕುದುರೆಯಾದ ಉಚ್ಚೈಶ್ರವಸ್ಸನ್ನು ತೋರಿ, "ಅಕ್ಕಾ! ಈ ಕುದುರೆ ಎಷ್ಟು ಬೆಳ್ಳಗಿದೆ ನೋಡು" ಎಂದಳು ಆಗ ಕದ್ರು "ಛೀ! ಛೀ! ಅತ್ತ ನೋಡು ಅದರ ಬೆನ್ನಿನಮೇಲೆ ಉದ್ದಕ್ಕೂ ಕರಿಯ ಗೆರೆ ಇದೆ" ಎಂದಳು. ಇಷ್ಟರಲ್ಲಿ ಸಂಜೆಯಾಯಿತು ಇವರ ವಾಗ್ವಾದ ಬೆಳೆಯಿತು ಕರಿಯಗೆರೆ ಇದ್ದಲ್ಲಿ ತಾನು ಕದ್ರುವಿಗೆ ದಾಸಿಯಾಗುವೆನೆಂದು ವಿನತೆ ಹೇಳಿದಳು ಹಾಗೆ ಕರಿಯಗೆರೆ ಇಲ್ಲದಿದ್ದಲ್ಲಿ ತಾನು ವಿನತೆಗೆ ದಾಸಿಯಾಗುವೆನೆಂದು ಕದ್ರು ಹೇಳಿದಳು. ಮರುದಿನ ಬೆಳಗಾಗುತ್ತಲೇ ಬಂದು ನೋಡುವುದಾಗಿ ಇಬ್ಬರೂ ಮಾತನಾಡಿಕೊಂಡು ಮನೆಗೆ ಬಂದರು ಕದ್ರು ರಾತ್ರಿಯಲ್ಲಿ ತನ್ನ ಮಕ್ಕಳನ್ನು ಕರೆದು, ತನ್ನ ಸವತಿಗೂ ತನಗೂ ನಡೆದ ಪಂತವನ್ನು ಹೇಳಿ "ನಿಮ್ಮಲ್ಲಿ ಯಾರಾದರೂ ಆ ಕುದುರೆಯ ಕುತ್ತಿಗೆಯಿಂದ ಬಾಲದವರೆಗೆ ಜೋಲುಬಿದ್ದು, ನಾವಿಬ್ಬರೂ ಬಂದು ನೋಡುವ ಹೊತ್ತಿಗೆ ಉಚ್ಚೈಶ್ರವಸ್ಸಿನ ಬೆನ್ನಿನಮೇಲೆ ಕಪ್ಪಗೆ ಗೆರೆ ಇರುವಹಾಗೆ ಕಾಣಿಸ ಬೇಕು" ಎಂದಳು ಈ ಬಗೆಯ ಅಧರ್ಮಪ್ರವೃತ್ತಿಗೆ ಕೆಲವರು ಸಮ್ಮತಿಸಲಿಲ್ಲ. ಕದ್ರು ಅವರೆಲ್ಲರನ್ನೂ ಹಾಳಾಗುವಂತೆ ಶಾಪವಿತ್ತಳು. ಇದನ್ನು ಕೇಳಿ ಉಳಿದ

ಮಕ್ಕಳು ಹೆದರಿದರು ಆಗ ಕರ್ಕೋಟಕನು ಜನನಿಯ ಮಾತನ್ನು ನೆರವೇರಿಸು ವುದಾಗಿ ಹೇಳಿದನು ಬೆಳಗಾಗುತ್ತಲೇ ಸವತಿಯರಿಬ್ಬರೂ ಅಲ್ಲಿಗೆ ಹೋಗಿ ನೋಡಿ ದರು ವಿನತೆ ಸೋತು ಕದ್ರುವಿಗೆ ದಾಸಿಯಾದಳು ಕೆಲಕಾಲದ ತರುವಾಯ ವಿನತೆಯ ಮಗನಾದ ಗರುಡನು ಕದ್ರುವಿನ ಮಾತಿನಂತೆ ದೇವಲೋಕದಿಂದ ಅಮೃತ ವನ್ನು ತಂದು ಸರ್ಪಗಳಿಗೆ ಕೊಟ್ಟು ತನ್ನ ಜನನಿಯನ್ನು ದಾಸೀತ್ವದಿಂದ ಬಿಡುಗಡೆ ಮಾಡಿದನು ಕದ್ರುವಿಗೆ ಶೇಷ, ವಾಸುಕಿ, ಧನಂಜಯ, ಮುಂತಾದ ಅನೇಕಮಂದಿ ಪುತ್ರರೂ ಜರತ್ಕಾರುವೆಂಬ ಮಗಳೂ ಇದ್ದರು [ಭಾರ.-ಆ. ೧೭]

**ಕನಖಲ** —ಒಂದು ತೀರ್ಥ ಹರಿದ್ವಾರಕ್ಕೆ ಎರಡು ಮೈಲಿಗಳ ದೂರದಲ್ಲಿ ಸಪ್ತಗಂಗೆಯ ಸಮೀಪದಲ್ಲಿದೆ [ಭಾರ -ವ ೮೬]

**ಕನ್ಯಕಾಪರಮೇಶ್ವರಿ** —ವೈಶ್ಯರ ಕುಲದೇವತೆ ವಾಸವಾಂಬೆಯೆಂಬುದು ಈಕೆಯ ನಾಮಾಂತರ ಒಮ್ಮೆ ಬ್ರಹ್ಮನು ಕುಬೇರನ ಮಗನಾದ ನಳಕೂಬರನಲ್ಲಿಗೆ ಬಂದು ಶತಜಿಹ್ವನೆಂಬ ರಾಕ್ಷಸನನ್ನು ಕೊಲ್ಲುವಂತೆ ಹೇಳಿದನು ನಳಕೂಬರನು ಹಿಂಜರಿದನು ಬ್ರಹ್ಮನು ಕ್ರುದ್ಧನಾಗಿ '' ನೀನು ಲೋಕಪಾಲಕನ ಹೊಟ್ಟೆಯಲ್ಲಿ ಹುಟ್ಟತಕ್ಕವನಲ್ಲ ರಾಕ್ಷಸರೆಂದರೆ ಹೀಗೆ ಹೆದರುತ್ತೀಯೆ ಭೂಲೋಕದಲ್ಲಿ ವೈಶ್ಯ ನಾಗಿ ಜನಿಸು '' ಎಂದು ಶಾಪವಿತ್ತನು ಬಳಿಕ ನಳಕೂಬರನು ಕುಸುಮಶ್ರೇಷ್ಠಿ ಯೆಂಬ ಹೆಸರಿನಿಂದ ಜನಿಸಿದನು ಇವನ ಹೆಂಡತಿ ಕುಸುಮೆ ಬಹಳ ಕಾಲದ ವರೆಗೆ ಇವನಿಗೆ ಮಕ್ಕಳಾಗಲಿಲ್ಲ ಪುತ್ರಕಾಮೇಷ್ಟಿಯನ್ನು ಮಾಡಿ ವಿರೂಪಾಕ್ಷನೆಂಬ ಮಗನನ್ನೂ ವಾಸವಾಂಬೆಯೆಂಬ ಮಗಳನ್ನೂ ಪಡೆದನು. ವಾಸವಾಂಬೆ ಕ್ರಮವಾಗಿ ತಾರುಣ್ಯವನ್ನು ಪಡೆದಳು ಆಗ ವಿಷ್ಣುವರ್ಧನನೆಂಬ ಅರಸು ಅಲ್ಲಿಗೆ ಬಂದು ಆ ಹುಡುಗಿಯನ್ನು ಕಂಡು ಮೋಹಭರಿತನಾಗಿ, ಆ ಕನ್ಯೆಯನ್ನು ತನಗೆ ಕೊಡ ಬೇಕೆಂದು ಕೇಳಿದ ಹೆತ್ತವರು ಸಮ್ಮತಿಸಲಿಲ್ಲ. ರಾಜನು ಯುದ್ಧಕ್ಕೆ ಸಿದ್ಧನಾ ದನು ಸೆಟ್ಟಿ ಮಗಳನ್ನು ಕೊಡುವುದಾಗಿ ಒಪ್ಪಿದ. ಮುಹೂರ್ತವೂ ನಿಷ್ಕರ್ಷೆ ಯಾಯಿತು ಮದುವೆಗೆ ವಿಳಂಬವಿದ್ದುದರಿಂದ ಅರಸನು ಆ ಸಮಯಕ್ಕೆ ಬರುವು ದಾಗಿ ಹೇಳಿ ತನ್ನ ಪಟ್ಟಣಕ್ಕೆ ತೆರಳಿದ ಬಳಿಕ ಹುಡುಗಿಯನ್ನು ಕೊಡಕೂಡದೆಂದು ಬಂಧುಗಳೆಲ್ಲರೂ ಹಠಹಿಡಿದರು ಕೆಲವರು ಕೊಡಬೇಕೆಂದರು ಒಂದು ಪಕ್ಷದವರು ಈ ಸುದ್ದಿಯನ್ನು ರಾಜನಿಗೆ ತಿಳಿಸಿದರು ಅರಸನು ಯುದ್ಧಕ್ಕೆ ಬಂದ. ಆಗ ವಿರೂ ಪಾಕ್ಷನು ನಾವೆಲ್ಲರೂ ವಾಸವಾಂಬೆಯ ಸಂಗಡ ಅಗ್ನಿಪ್ರವೇಶಮಾಡುವುದೇ ಯುಕ್ತ ವೆಂದು ಸೂಚಿಸಿದ ಈಗಲೂ ಎರಡು ಪಂಗಡಗಳಾದುವು. ಸಮ್ಮತಿಸಿದವರೆಲ್ಲರೂ ಚಿತಿಯನ್ನು ಅಣಿಮಾಡಿದರು ವಾಸವಾಂಬೆ ಎಲ್ಲರಿಗಿಂತಲೂ ಮೊದಲು ಹೊರ ಟಳು. ನಂತರ ಕಣ್ಣುಗಳು ಕಂಬನಿ ಕರೆಯತೊಡಗಿದುವು. ಆಗ ವಾಸವಾಂಬೆ

ತನ್ನ ನಿಜರೂಪವನ್ನು ಧರಿಸಿ "ನನಗಾಗಿ ನೀವು ಮರುಗದಿರಿ. ನಾನು ಮಾನುಷಿಯಲ್ಲಿ ಇಂದ್ರನ ರಾಣಿಯಾದ ಶಚೀದೇವಿ ಶತಜಿಹ್ವನನ್ನು ಕೊಲ್ಲುವಂತೆ ಬ್ರಹ್ಮನು ನನ್ನ ಮಗನಾದ ಜಯಂತನಿಗೆ ಹೇಳಿದಾಗ ನಾನು ಪುತ್ರಪ್ರೇಮಭರದಿಂದ ಮಗನನ್ನು ಅಡ್ಡಗಿಸಿದೆನು ಬ್ರಹ್ಮಶಾಪದಿಂದ ಇಂತು ವೈಶ್ಯಜಾತಿಯಲ್ಲಿ ಜನಿಸಿರುವೆನು ಈಗ ನನ್ನ ಮಾನುಷದೇಹವನ್ನು ತೊರೆದು ದಿವ್ಯದೇಹವನ್ನು ಕೈಕೊಳ್ಳಲು ಹೊರಟಿರುವೆನು" ಎನ್ನುತ್ತ ಅಗ್ನಿಪ್ರವೇಶಮಾಡಿದಳು ಒಡನೆಯೇ ಬಂಧುಗಳೂ ಅದೇ ಚಿತಿಯನ್ನು ಹೊಕ್ಕರು. ಅಂದಿನಿಂದಲೂ ವೈಶ್ಯರು ವಾಸವಾಂಬೆಯನ್ನು ತಮ್ಮ ಕುಲದೈವವೆಂದು ಭಾವಿಸಿ ಕನ್ಯಕಾಪರಮೇಶ್ವರಿಯೆಂದು ಕರೆದರು [ಕನ್ಯ -ಪು]

**ಕನ್ಯಾ** —ಮದುವೆಯಾಗದ ಹೆಂಗಸು [ಭಾರ -ಅನು ೨೪೯] ಕನ್ಯಾದಾನ ಕಾಲ [ಅನು ೫೫, ೭೯, ೮೦, ೨೪೯] ಕನ್ಯಾದಾನ ಫಲ [ಭಾರ -ಅನು ೨೩೫]

**ಕನ್ಯಾಕುಬ್ಜ** —ಚಂದ್ರವಂಶದ ಕುಶನಾಭ ರಾಜನಿಗೆ ನೂರು ಮಂದಿ ಪುತ್ರಿಯರು. ಒಮ್ಮೆ ಇವರೆಲ್ಲರೂ ವನದಲ್ಲಿ ವಿಹರಿಸುತ್ತಿದ್ದಾಗ ವಾಯುದೇವನು ಇವರನ್ನು ಮೋಹಿಸಿದ ಇವರು ಸಮ್ಮತಿಸಲಿಲ್ಲ ವಾಯು ಕುಪಿತನಾಗಿ ಅವರನ್ನು ಕುಬ್ಜೆಯರನ್ನಾಗಿ ಮಾಡಿದ ಕೆಲಕಾಲದ ಮೇಲೆ ಬ್ರಹ್ಮದತ್ತನೆಂಬ ಮುನಿ ಅವರನ್ನು ಮದುವೆಯಾಗಿ ತನ್ನ ತಪೋಮಹಿಮೆಯಿಂದ ಅವರ ಕುಬ್ಜತ್ವವನ್ನು ಹೋಗಲಾಡಿಸಿದ ಇಂತು ಆ ಕನ್ಯೆಯರು ಕುಬ್ಜರಾದ ಪ್ರದೇಶಕ್ಕೆ ಕನ್ಯಾಕುಬ್ಜವೆಂದು ಹೆಸರು [ರಾಮಾ -ಬಾ ೩೨, ೩೩]

**ಕನ್ಯಾತೀರ್ಥ** —ದಕ್ಷಿಣಸಮುದ್ರತೀರದಲ್ಲಿ ಕನ್ಯಾಕುಮಾರಿ(Cape Camorin)ಯೆಂದು ಪ್ರಸಿದ್ಧವಾಗಿದೆ [ಭಾರ -ಸ ೩೨ ವನ ೮೧, ೮೩].

**ಕನ್ಥ(ಕಣ್ಡು)** —ಗೋಮತೀ ತೀರದಲ್ಲಿ ತಪಸ್ಸುಮಾಡುತ್ತಿದ್ದ ಒಬ್ಬ ಋಷಿ. ಕಂಡುವೆಂಬುದು ಈತನ ನಾಮಾಂತರ ಇಂದ್ರನು ಈತನ ತಪಸ್ಸನ್ನು ಭಂಗಗೊಳಿಸಲು ಪ್ರಮ್ಲೋಚನೆಯೆಂಬ ಅಪ್ಸರಿಯನ್ನು ಕಳುಹಲಾಗಿ, ಈತನು ಅವಳೊಂದಿಗೆ ಅನೇಕ ವರ್ಷಗಳವರೆಗೆ ಸಂಸಾರಮಾಡಿಕೊಂಡಿದ್ದ ಬಳಿಕ ಪ್ರಮ್ಲೋಚನೆ ಗರ್ಭವತಿಯಾದಳು. ಒಂದು ದಿನ ಆತನು ಸಂಜೆಯಹೊತ್ತಿನಲ್ಲಿ ಸಂಧ್ಯಾವಂದನೆಗೆ ಹೊರಟಾಗ ಪ್ರಮ್ಲೋಚನೆ ಕಂಡುವನ್ನು ಕುರಿತು, ತಾನು ಬಂದು ಎಷ್ಟೋ ಕಾಲವಾಯಿತು. ಅಂದಿನಿಂದ ಇಲ್ಲದ ಸಂಧ್ಯೆ ಇಂದು ಬಂದದ್ದು ಚೋದ್ಯವೆಂದಳು. ಮುನಿ ಎಚ್ಚತ್ತು ಪ್ರಮ್ಲೋಚನೆಯನ್ನು ಗದರಿಸಿದ. ಆಕೆ ಹೋಗುವಾಗ ಹೆದರಿಕೆಯಿಂದ ಸ್ರವಿಸಿದ ಗರ್ಭ ಬೆವರಿನ ರೂಪದಿಂದ ಸುರಿಯತೊಡಗಿತು ಆಕೆ ಆ ಬೆವರನ್ನು ಮರಗಳಿಗೆ ಒರಸುತ್ತಾ ಹೋದಳು. ಗಾಳಿ ಆ ಬೆವರನ್ನು ಒಟ್ಟುಗೂಡಿಸಿತು. ಅದರಿಂದ ಮಾರಿಷೆಯೆಂಬ ಕುವರಿ ಜನಿಸಿದಳು. ಈ ಕುವರಿಯನ್ನು

ವೃಕ್ಷಗಳು ಅಭಿಮಾನದಿಂದ ಕಾಪಾಡಿದರು. ಅದರಿಂದ ಈ ಹುಡುಗಿಗೆ ವಾರ್ಕ್ಷಿ ಯೆಂಬುದು ನಾಮಾಂತರ ಇವಳನ್ನು ಪಿತೃದೇವತೆಗಳು ಮದುವೆಯಾದರು [ವಿಷ್ಣು.- ೧, ೧೫]

**ಕನ್ದಳಿ** —ಔರ್ವನೆಂಬ ಮುನಿಯ ಮಗಳು ದುರ್ವಾಸ ಮುನಿಯ ಹೆಂಡತಿ ಕೋಪದಲ್ಲಿ ದುರ್ವಾಸನಿಗಿಂತಲೂ ಹೆಚ್ಚಿದವಳು [ಭಾರ -ಆದಿ ೬೭, ೧೯೪, ೧೯೬]

**ಕಪಾಲಮೋಚನ** —ಒಂದು ತೀರ್ಥ ಶುಕ್ರಾಚಾರ್ಯರು ಈ ತೀರ್ಥದ ಬಳಿಯಲ್ಲಿ ತಪಸ್ಸುಮಾಡಿಕೊಂಡಿದ್ದರು ರಾಮ ರಾವಣರ ಯುದ್ಧದಲ್ಲಿ ರಾಮನು ಮಹೋದರನೆಂಬ ರಾಕ್ಷಸನನ್ನು ಕೊಂದನು ಅವನ ತಲೆ ಮಹೋದರನೆಂಬ ಮುನಿಯ ಕೈಗೆ ಅಂಟಿಕೊಂಡಿತು ಆಗ ಮಹೋದರನು ಋಷಿಗಳ ಸೂಚನೆಯಂತೆ ಈ ತೀರ್ಥದಲ್ಲಿ ಸ್ನಾನಮಾಡಲಾಗಿ ಆ ಕಪಾಲವು ಕಳಚಿಬಿದ್ದಿತು ಇದಕ್ಕೆ ಔಶನತೀರ್ಥವೆಂಬುದು ನಾಮಾಂತರ [ಭಾರ -ವನ ೮೧ ಶಲ್ಯ ೪೦]

**ಕಪಿಲ** —ಒಬ್ಬ ಮಹರ್ಷಿ ವಿಷ್ಣುವಿನ ಅವತಾರ [ಭಾರ -ವ ೧೦೬, ೧೦೭, ೨೨೩ ಋ ೧೯] ನೋಡು—ಅರುಂಧತಿ ಕರ್ದಮ ಮುನಿಯಿಂದ ಸ್ವಾಯಂಭುವಮನು ಪುತ್ರಿಯಾದ ದೇವಹೂತಿಯಲ್ಲಿ ಜನಿಸಿದವನು ಅರುಂಧತಿ ಮೊದಲಾದ ಒಂಬತ್ತು ಮಂದಿ ಈತನ ಅಕ್ಕತಂಗಿಯರು [ಭಾಗ.-೩, ೨೪] ಈತನಿಗೆ ಅಗ್ನಿಯ ಅಧಿಕಾರವುಂಟು [ಭಾರ -ವನ ೨೨೩] ನೋಡು—ಸಗರ, ಅಂಶುಮಂತ, ಅಶ್ವಶಿರ ಈತನು ಸಾಂಖ್ಯಸೂತ್ರಗಳನ್ನು ಬರೆದನು

**ಕಪಿಲಾ** —(I) ದಕ್ಷಬ್ರಹ್ಮನ ಮಗಳು ಕಶ್ಯಪ ಮುನಿಯ ೧೩ ಮಂದಿ ಪತ್ನಿಯರಲ್ಲಿ ಒಬ್ಬಳು ಗೋವುಗಳನ್ನು ಸೃಷ್ಟಿಸಿದವಳು ಅಮೃತವೂ, ಬ್ರಾಹ್ಮಣರೂ, ಗಂಧರ್ವರೂ ಈಕೆಯಿಂದಲೇ ಜನಿಸಿದರು [ಭಾರ -ಆ ೬೬]

(II) ಗೋವುಗಳಲ್ಲಿ ಒಂದು ಬಗೆ ಅದರ ಸೃಷ್ಟಿಕಥೆ, ದಾನಮಹಿಮೆ ಮುಂತಾಗಿ [ಭಾರ -ಅಶ್ವ ೧೦೬] ಕಪಿಲೆಯ ಮಹಿಮೆ [ಭಾರ -ಅನು ೧೨೫ -೧೨೭]

(III) ಸಿಂಧು ನದಿಯ ಉಪನದಿ [ಭಾರ -ಭೀ ೯]

**ಕಬನ್ಧ** —ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದ ಒಬ್ಬ ರಾಕ್ಷಸ ಹಿಂದಣ ಜನ್ಮದಲ್ಲಿ ಇವನು ವಿಶ್ವಾವಸುವೆಂಬ ಗಂಧರ್ವ. ಸ್ಥೂಲಶಿರನೆಂಬ ಮುನಿಯನ್ನು ಅಪಮಾನಮಾಡಿ, ರಾಕ್ಷಸನಾಗಿ ಜನಿಸಿದ ಒಮ್ಮೆ ಇಂದ್ರನ ವಜ್ರಾಯುಧ ಪ್ರಹಾರದಿಂದ ಇವನ ಮುಖ ಕುಸಿದು ಹೊಟ್ಟೆಯೊಳಗೆ ಸೇರಿಕೊಂಡಿತು. ಆಗ ದೇವತೆಗಳ ಕೋರಿಕೆಯಂತೆ ಇಂದ್ರನು, ಇವನ ತೋಳುಗಳು ಯೋಜನದಷ್ಟು ಉದ್ದವಾಗುವಂತೆಯೂ, ಆ ತೋಳುಗಳ ನಡುವೆ ದೊರೆತುದನ್ನು ಬಾಚಿ, ತಿಂದು ಬದುಕಿರುವಂತೆಯೂ, ಇವನಿಗೆ ವರವನ್ನು ಕೊಟ್ಟನು. ಇಂತಿರಲು ರಾಮಲಕ್ಷ್ಮಣರು ಸೀತೆ

ಯನ್ನು ಹುಡುಕುತ್ತ ಬರುವಾಗ ಇವನ ತೋಳುಗಳ ನಡುವೆ ಸಿಕ್ಕಿಬಿದ್ದು, ಇವನ ತೋಳುಗಳನ್ನು ಕತ್ತರಿಸಿದರು ಕಬಂಧನು ರಾಮಲಕ್ಷ್ಮಣರ ವೃತ್ತಾಂತವನ್ನು ಕೇಳಿ, ತನ್ನ ಸಮಾಚಾರವನ್ನು ತಿಳಿಸಿ, ತನಗೆ ರಾಮನೇ ಸಂಸ್ಕಾರಮಾಡುವಂತೆ ಮಾತು ತೆಗೆದುಕೊಂಡು ಪ್ರಾಣಬಿಟ್ಟ ರಾಮನು ಅವನ ದೇಹವನ್ನು ತಕ್ಕ ರೀತಿಯಿಂದ ಸಂಸ್ಕರಿಸಿದ. ಆಗ ಕಬಂಧನು ತನ್ನ ನಿಜರೂಪವನ್ನು ಧರಿಸಿ, ಸೀತೆಯನ್ನು ರಾವಣನು ಅಪಹರಿಸಿರುವುದಾಗಿಯೂ, ಸುಗ್ರೀವನೊಂದಿಗೆ ಸ್ನೇಹಮಾಡಿದಲ್ಲಿ ಆತನು ತನ್ನ ದೂತರ ಮೂಲಕ ಸೀತೆಯನ್ನು ಹುಡುಕಿಸಿಕೊಡಬಲ್ಲನೆಂತಲೂ ಹೇಳಿ, ವಿಮಾನವನ್ನೇರಿ ತೆರಳಿದನು [ರಾಮಾ -ಅರ ೬೯, ೭೩ ಭಾರ -ವನ.೨೮೦ ಸ ೫೦]

**ಕಮಲಪಾಲಿಕಾ.**—ಹಿಡಿಂಬೆಯ ನಾಮಾಂತರ ಹಿಡಿಂಬನ ಸಹೋದರಿ. ಪಾಂಡವರು ಅರಗಿನಮನೆಯಿಂದ ತಪ್ಪಿಸಿಕೊಂಡು ಹೋದ ರಾತ್ರಿ ಅರಣ್ಯದಲ್ಲಿ ಭೀಮಸೇನನನ್ನು ಮದುವೆಯಾಗಿ ಘಟೋತ್ಕಚನನ್ನು ಪಡೆದಳು [ಭಾರ -ಆ ೬೩. ೧೬೮, ೧೬೯] ದಿವ್ಯಜ್ಞಾನವನ್ನು ಪಡೆದಿದ್ದಳು [ಭಾರ -ಆ ೧೬೭]

**ಕಮಲಾಕ್ಷ.**—ಒಬ್ಬ ಅಸುರ ತಾರಕಾಸುರನ ಮಗ ತ್ರಿಪುರಾಸುರರಲ್ಲಿ ಒಬ್ಬ. ಸುವರ್ಣಪುರದ ಅರಸು ಶಿವನಿಂದ ಹತನಾದನು [ಭಾರ.-ದ್ರೋ ೨೦೨. ಕ ೨೪].

**ಕಮ್ಬಲ.**—(i) ಕದ್ರುವಿನ ಮಗ ಸರ್ಪರಾಜರಲ್ಲಿ ಒಬ್ಬನು ಅಶ್ವತರನು ಇವನ ತಮ್ಮ, ನೋಡು—ಅಶ್ವತರ [ಭಾರ -ಆ ૩૫ ಉ ೧೦೩]

(ii) ಕುಶದ್ವೀಪದ ಒಂದು ಭೂಭಾಗಕ್ಕೆ ಈ ಹೆಸರು ಸಲ್ಲುತ್ತದೆ ಇದನ್ನೇ ಕಂಬಲವರ್ಷ ವೆನ್ನುತ್ತಾರೆ [ಭಾರ -ಭೀ ೧೨]

**ಕಯಾಧು.**—ಜಂಭಾಸುರನ ಮಗಳು ಹಿರಣ್ಯಕಶಿಪುವಿನ ಹೆಂಡತಿ ಪ್ರಹ್ಲಾದನ ಜನನಿ ಪ್ರಹ್ಲಾದನು ಗರ್ಭದಲ್ಲಿದ್ದಾಗ, ಹಿರಣ್ಯಕಶಿಪು ತಪಸ್ಸಿಗೆ ಹೋಗಿದ್ದ ಸಂಧಿಯನ್ನು ನೋಡಿ, ಇಂದ್ರನು ಈಕೆಯನ್ನು ಸೆರೆಹಿಡಿದು, ನಾರದನ ಉಪದೇಶದಂತೆ ಆಕೆಯನ್ನು ಪೀಡಿಸದೆ, ನಾರದನಿಗೆ ಒಪ್ಪಿಸಿದನು ಬಳಿಕ ಕಯಾಧು ಗಂಗಾತೀರದಲ್ಲಿ ನಾರದನಿಂದ ನಿರ್ಮಿತವಾದ ಆಶ್ರಮದಲ್ಲಿ ವಾಸವಾಗಿದ್ದು, ನಾರದನ ಮೂಲಕ ಮಂತ್ರೋಪದೇಶವನ್ನು ಪಡೆದು, ವಿಷ್ಣುವನ್ನು ಧ್ಯಾನಿಸುತ್ತಿದ್ದಳು. ಅಷ್ಟರಲ್ಲಿ ಹಿರಣ್ಯಕಶಿಪು ತಪಸ್ಸಿನಿಂದ ಹಿಂದಿರುಗಿದ. ಆಗ ನಾರದನು ಕಯಾಧುವನ್ನು ಹಿರಣ್ಯಕಶಿಪುವಿಗೆ ಒಪ್ಪಿಸಿದನು [ಭಾಗ.-೬, ೧೮]

**ಕರತೋಯಾ.**—ಭಾರತವರ್ಷದ ಒಂದು ಜೀವನದಿ. ಸದಾನೀರಾ ಎಂಬುದು ಇದರ ನಾಮಾಂತರ. ಇದು ವಂಗ (Bengal) ದೇಶಕ್ಕೂ ಕಾಮರೂಪ ದೇಶಕ್ಕೂ ನಡುವೆ ಹರಿಯುತ್ತದೆ [ಭಾರ.-ಸ. ೯. ವ. ೮೫. ಭೀ ೯].

**ಕರಂಧಮ.**—ಸೂರ್ಯವಂಶದ ಅರಸು. ಖನೀನೇತ್ರನ ಮಗ. ಖನೀನೇತ್ರನು ಇವನಿಗೆ ಸುವರ್ಚಸನೆಂದು ನಾಮಕರಣಮಾಡಿದನು ಒಮ್ಮೆ ಇವನು ಶತ್ರು ಸಂಹಾರಾರ್ಥವಾಗಿ ತನ್ನ ಕೈಯನ್ನು ಕೊಡವಿ ಅಪಾರವಾದ ಸೈನ್ಯವನ್ನು ಸೃಷ್ಟಿಮಾಡಿ, ಜಯಶೀಲನಾದುದರಿಂದ ಕರಂಧಮನೆಂಬ ಹೆಸರು ಬಂದು, ಈ ಹೆಸರೇ ರೂಢ ವಾಯಿತು ಇವನು ವೀರ್ಯಚಂದ್ರನ ಮಗಳಾದ ವೀರೆಯೆಂಬ ತರುಣಿಯನ್ನು ಮದುವೆಯಾಗಿ ಅವಿಕ್ಷಿತನೆಂಬ ಮಗನನ್ನು ಪಡೆದನು ಅವಿಕ್ಷಿತನು ವಿಶಾಲ ತನಯೆಯ ಸ್ವಯಂವರಕ್ಕೆ ಹೋಗಿದ್ದಾಗ ಅಲ್ಲಿನ ಅರಸರೆಲ್ಲರೂ ಇವನನ್ನು ಬಂಧಿಸಿದರು ಆಗ ಕರಂಧಮನು ಅವರನ್ನು ಸೋಲಿಸಿ ಅವಿಕ್ಷಿತನನ್ನು ಕರೆತಂದನು. ಬಳಿಕ ಅವಿಕ್ಷಿತನು ಬ್ರಹ್ಮಚರ್ಯವನ್ನು ಕೈಕೊಂಡು, ಕರಂಧಮನು ಎಷ್ಟು ಬಗೆಯಿಂದ ಹೇಳಿದರೂ ಮದುವೆಯಾಗಲೊಲ್ಲದೆ ದೃಢಮನಸ್ಕನಾಗಿದ್ದನು ಇಷ್ಟರಲ್ಲಿ ಅವಿಕ್ಷಿತನ ಜನನಿಯಾದ ವೀರೆ(ಕಿಮಿಚ್ಛಕ)ಯಾರು ಏನನ್ನೂ ಬೇಡಿದರೂ ಕೊಡುವೆನೆಂದು ವ್ರತವನ್ನು ಕೈಕೊಂಡಳು ಅವಿಕ್ಷಿತನು ಜನನಿಯ ಅಭಿಪ್ರಾಯವನ್ನು ಡಂಗುರ ಹೊಯಿಸಿದನು ಆಗ ಕರಂಧಮನು ಅವಿಕ್ಷಿತನಲ್ಲಿಗೆ ಹೋಗಿ "ನಾನು ಪೌತ್ರ(ಮೊಮ್ಮಗ)ನನ್ನು ಬೇಡುವೆನು, ಕೊಡು" ಎನಲಾಗಿ ಅವಿಕ್ಷಿತನು ತಂದೆಯ ಮಾತಿನ ಮೇರೆಗೆ ವಿಶಾಲತನಯೆಯನ್ನು ಮದುವೆಯಾದನು ಬಳಿಕ ಕರಂಧಮನು ಅನೇಕ ಯಜ್ಞಗಳನ್ನುಮಾಡಿ ಸದ್ಗತಿಯನ್ನು ಪಡೆದನು [ಭಾರ-ಸ ೮ ಅಶ್ವ ೪. ಭಾಗ-೯, ೨, ೨೩. ಅನು-೧೩೭ ಮಾರ್ಕ-೧೧೮, ೧೨೫].

**ಕರವೀರ**—(I) ಒಂದು ಪರ್ವತ ಮೇರುವಿನ ಸುತ್ತಣ ಬೆಟ್ಟಗಳಲ್ಲಿ ದಕ್ಷಿಣದಲ್ಲಿದೆ

(II) ೧೮ ಶಕ್ತಿಪೀಠಗಳಲ್ಲಿ ಒಂದಾದ, ಮಹಾಲಕ್ಷ್ಮಿಯ ನಿವಾಸಸ್ಥಾನವೆನಿಸಿದ ಒಂದು ಕ್ಷೇತ್ರ ಇದನ್ನು ಈಗ ಕೊಲ್ಲಾಪುರವೆಂದು ಕರೆಯುತ್ತಾರೆ

**ಕರಾಲ**—ಜನಕವಂಶದ ಒಬ್ಬ ಅರಸು ಈತನು ವಸಿಷ್ಠಮುನಿಯೊಂದಿಗೆ ಕ್ಷರಾಕ್ಷರ(ಅನಿತ್ಯ-ನಿತ್ಯ)ಸ್ವರೂಪ ವಿಷಯವಾಗಿ ಚರ್ಚೆಮಾಡಿದನು. ಮಹಾಜ್ಞಾನಿ [ಭಾರ-ಶಾಂ. ೩೮, ೩೧೩].

**ಕರೀಷಕ(ಕರೂಶ).**—ಒಂದು ದೇಶ. ಇಂದ್ರನು ವೃತ್ರನನ್ನು ಕೊಂದು ಬ್ರಹ್ಮಹತ್ಯೆಗೆ ಗುರಿಯಾದನು ಆಗ ದೇವತೆಗಳೂ ಮುನಿಗಳೂ ಒಟ್ಟುಗೂಡಿ, ಇಂದ್ರನ ದೇಹದಲ್ಲಿದ್ದ ಬ್ರಹ್ಮಹತ್ಯಾಪಾತಕವನ್ನು ಹೊರಗೆಡಹಿದರು ೮ ಪಾತಕವನ್ನು ಧರಿಸಿದ ಭೂಭಾಗಕ್ಕೆ ಕರೀಷಕ ಅಥವಾ ಕರೂಶ ದೇಶವೆಂದು ಹೆಸರುಬಂತು. ಇದು ಈಗಣ ಬಿಹಾರ್ ಆಧಿಪತ್ಯಕ್ಕೆ ಸೇರಿದ ಷಹಾಬಾದು ಜಿಲ್ಲೆಯ ಪೂರ್ವಭಾಗವಾಗಿದೆ

[ರಾಮಾ -೧, ೨೪]. ಪಾಂಡವರ ಕಾಲದಲ್ಲಿ ದಂತವಕ್ರನು ಇದರಲ್ಲಿ ರಾಜ್ಯಭಾರ ಮಾಡುತ್ತಿದ್ದನು [ಭಾರ.-ಸ. ೧೪. ಭೀ. ೯].

**ಕ್ರೋಣುಮತೀ**—ಶಿಶುಪಾಲನ ಮಗಳು ಪಾಂಡುಪುತ್ರನಾದ ನಕುಲನನ್ನು ಮದುವೆಯಾಗಿ ನಿರಮಿತ್ರನೆಂಬ ಮಗನನ್ನು ಪಡೆದಳು [ಭಾರ.-ಆ, ೬೩]

**ಕರ್ಕೋಟಕ**—ಸರ್ಪರಾಜ **ನೋಡು**—ಕದ್ರೂ ನಿಷಧದೇಶಾಧಿಪತಿಯಾಗಿದ್ದ ನಳರಾಜನು ಪುಷ್ಕರನೊಡನೆ ಜೂಜಾಡಿ, ರಾಜ್ಯಭ್ರಷ್ಟನಾಗಿ ಕಾಡನ್ನು ಸೇರಿ, ತನ್ನ ಧರ್ಮಪತ್ನಿಯಾದ ದಮಯಂತಿಯನ್ನೂ ಅಗಲಿ ಹೋಗುತ್ತಿದ್ದಾಗ, ನಾರದರ ಶಾಪದಿಂದ ಕಾಳ್ಗಿಚ್ಚಿಗೆ ಸಿಲುಕಿ ಸುಟ್ಟುಹೋಗುತ್ತಿದ್ದ ಕರ್ಕೋಟಕನು ನಳನನ್ನು ಕರೆದು "ಅಯ್ಯಾ! ನನ್ನನ್ನು ಈ ದಾವಾಗ್ನಿಯಿಂದ ತಪ್ಪಿಸಿದರೆ ನಿನಗೆ ಮಹೋಪಕಾರಮಾಡುವೆನು" ಎನಲು, ನಳನು ಮರುಕಗೊಂಡು ಕರ್ಕೋಟಕನನ್ನು ಉರಿಯಿಂದ ಹೊರಗೆಳೆದ. ಕರ್ಕೋಟಕನು ಕೂಡಲೇ ನಳನನ್ನು ಕಚ್ಚಿದ ಆಗ ನಳನು "ಇದಲ್ಲವೇ ನೀನು ನನಗೆ ಮಾಡಿದ ಮಹೋಪಕಾರ" ಎಂದು ಕೇಳಲಾಗಿ, ಕರ್ಕೋಟಕನು "ಎಲೆ ಅರಸನೆ! ಇದು ನಿನಗೆ ಮಹೋಪಕಾರವೇ ಸರಿ ನೀನು ನಿನ್ನ ನಿಜರೂಪದಲ್ಲಿಯೇ ಇದ್ದರೆ ಎಲ್ಲರೂ ನಿನ್ನನ್ನು ಗುರುತಿಸುವರು ಈಗ ನಿನ್ನ ರೂಪವೇ ಮಾರ್ಪಟ್ಟಿರುವುದು ಈಗ ಯಾರೂ ನಿನ್ನನ್ನು ಗುರುತಿಸಲಾರರು ಈಗ ನೀನು ಋತುಪರ್ಣರಾಜನಲ್ಲಿಗೆ ಹೋಗಿ ಬಾಹುಕನೆಂಬ ಹೆಸರಿನಿಂದ ಕೆಲಕಾಲ ಆತನ ಸಾರಥಿಯಾಗಿದ್ದು, ಬಳಿಕ ನಿನ್ನ ರಾಜ್ಯವನ್ನೂ ಮಡದಿಮಕ್ಕಳನ್ನೂ ಮರಳಿ ಹೊಂದುವೆ" ಎಂದ [ಭಾರ -ಸ ೯ ವ ೬೩ ಉ ೧೦೩]

**ಕರ್ಣ**—ಕುಂತಿ ಮದುವೆಯಾಗುವುದಕ್ಕಿಂತಲೂ ಮೊದಲೇ (ಕನ್ಯಾವಸ್ಥೆಯಲ್ಲಿದ್ದಾಗ) ಸೂರ್ಯನಿಂದ ಇವನನ್ನು ಪಡೆದಳು ಇದರಿಂದ ಇವನಿಗೆ ಕಾನೀನನೆಂದು ಹೆಸರು ಬಂತು **ನೋಡು**—**ಕುಂತಿ** [ಭಾರ -ಆದಿ ೬೪, ೬೮, ೧೨೦] ಇವನಿಗೆ ಕುಂಡಲಗಳೂ ಕವಚವೂ ಜನ್ಮಸಿದ್ಧವಾದುವು [ಆದಿ ೬೮] ಧೃತರಾಷ್ಟ್ರನ ಸಾರಥಿಯಾದ ಅಧಿರಥನು ಆ ಮಗುವನ್ನು ತೆಗೆದುಕೊಂಡು ಹೋಗಿ, ತನ್ನ ಹೆಂಡತಿಯಾದ ರಾಧೆಗೆ ಕೊಟ್ಟು, ವಸುಷೇಣನೆಂದು ನಾಮಕರಣಮಾಡಿದನು ಈ ಕಾರಣದಿಂದ ಕರ್ಣನಿಗೆ ಸೂತಪುತ್ರ, ರಾಧೇಯ, ಆಧಿರಥಿ—ಮುಂತಾದ ಹೆಸರುಗಳು ಬಂದುವು [ಭಾರ -ಆದಿ ೬೮, ೧೪೭] ಕರ್ಣನ **ಚರಿತ್ರೆ** [ಆದಿ ೧೨೦, ಶಾಂತಿ ೨, ೫] ದ್ರೋಣನು ಶಿಷ್ಯರ ಅಸ್ತ್ರವಿದ್ಯಾನೈಪುಣ್ಯವನ್ನು ಪರೀಕ್ಷಿಸುವುದಕ್ಕಾಗಿ ರಂಗವನ್ನು ನಿರ್ಮಿಸಿ, ಪರೀಕ್ಷಿಸುತ್ತಿದ್ದಾಗ ಕರ್ಣನು ಅಲ್ಲಿಗೆ ಹೋಗಿ, ಅರ್ಜುನನೊಂದಿಗೆ ಹೋರಾಡಲು ಸಿದ್ಧನಾದ. ಕೃಪನು ಕರ್ಣನನ್ನು ಸೂತಪುತ್ರ

ನೆಂತಲೂ, ರಾಜಪುತ್ರನಾದ ಅರ್ಜುನನೊಂದಿಗೆ ಯುದ್ಧಮಾಡಲು ಯೋಗ್ಯತೆಯಿಲ್ಲದವನೆಂತಲೂ ಹೀಯಾಳಿಸಿದ ಆಗ ದುರ್ಯೋಧನನು ಕರ್ಣನಿಗೆ ಅಂಗರಾಜ್ಯಾಧಿಪತ್ಯವನ್ನು ಕೊಟ್ಟು ಪಟ್ಟಗಟ್ಟಿ, ಅರ್ಜುನನೊಂದಿಗೆ ಯುದ್ಧಕ್ಕೆ ನಿಲ್ಲಿಸಿದ [ಆದಿ. ೧೪೬] ಭೀಮನು ಕರ್ಣನನ್ನು ಅದೇ ಸಂದರ್ಭದಲ್ಲಿ ಹೀಯಾಳಿಸಿದ್ದು [ಆದಿ. ೧೪೭]. ಬ್ರಾಹ್ಮಣವೇಷದಿಂದ ಬೇಡಿದ ಇಂದ್ರನಿಗೆ ಕರ್ಣನು ಕವಚಕುಂಡಲಗಳನ್ನು ದಾನಮಾಡಿದ್ದು [ಭಾರ -ಆದಿ ೬೮ ವನ ೩೧೧] ದ್ರೌಪದೀಸ್ವಯಂವರ ಸಮಯದಲ್ಲಿ ಅರ್ಜುನನಿಂದಲೂ ಭೀಮನಿಂದಲೂ ಕರ್ಣನು ಸೋತದ್ದು [ಭಾರ -ಆದಿ ೨೦೫] ಆದೇ ಸಮಯದಲ್ಲಿ ದ್ರುಪದಪುತ್ರನಾದ ಪ್ರಿಯದರ್ಶನನನ್ನು ಕರ್ಣನು ಕೊಲ್ಲಲಾಗಿ, ಅರ್ಜುನನು ಕರ್ಣನ ಮಗನಾದ ಸುದಾಮನನ್ನು ಕೊಂದದ್ದು [ಭಾರ -ಆದಿ ೨೧೮] ಘೋಷಯಾತ್ರೆಯ ಸಮಯದಲ್ಲಿ ಚಿತ್ರಸೇನನೆಂಬ ಗಂಧರ್ವನಿಂದ ಸೋತದ್ದು [ವನ ೨೪೨] ಕರ್ಣನ ದಿಗ್ವಿಜಯ [ವನ ೨೫೪, ೨೫೫] ಸೂರ್ಯನು ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ "ಎಲೆ ಕರ್ಣ ! ಇಂದ್ರನು ಬ್ರಾಹ್ಮಣ ರೂಪದಿಂದ ಬಂದು ನಿನ್ನ ಕವಚಕುಂಡಲಗಳನ್ನು ಬೇಡುವನು ನೀನು ಕೊಡಬೇಡ" ವೆಂದು ಹೇಳಿದ್ದು ಕರ್ಣನ ಪ್ರತ್ಯುತ್ತರ [ವನ ೩೦೧] ಕುಂತಿ ಕರ್ಣನನ್ನು ಅಶ್ವನದಿಯಲ್ಲಿ ತೇಲಿಬಿಟ್ಟದ್ದು [ವನ ೩೦೯] ಕರ್ಣನು ಇಂದ್ರನಿಗೆ ಕವಚಕುಂಡಲಗಳನ್ನು ಕೊಟ್ಟು, ಆತನಿಂದ ಶಕ್ತ್ಯಾಯುಧವನ್ನು ಪಡೆದದ್ದು ಕರ್ಣನ ತ್ಯಾಗಪ್ರಶಂಸೆ [ವನ ೩೧೧] ಪಾಂಡವರ ಅಜ್ಞಾತವಾಸವು ಮುಗಿಯುವಷ್ಟರಲ್ಲಿಯೇ ಹೇಗಾದರೂ ಅವರನ್ನು ಕಂಡು ಹಿಡಿದು ಕೊಲ್ಲಲೇಬೇಕೆಂದು ಕರ್ಣನು ದುರ್ಯೋಧನನಿಗೆ ಬೋಧಿಸಿದ್ದು [ವಿರಾ ೩೦] ಕರ್ಣನು ಆತ್ಮಪ್ರಶಂಸಾಪೂರ್ವಕವಾಗಿ, ಅರ್ಜುನನನ್ನು ಕೊಂದು ಬಿಡುವೆನೆಂದು ಪ್ರತಿಜ್ಞೆಮಾಡಿದ್ದು [ವಿರಾ ೪೮] ಕರ್ಣನ ತಮ್ಮನಾದ ಶತ್ರುಂತಪನು ಉತ್ತರಗೋಗ್ರಹಣದಲ್ಲಿ ಅರ್ಜುನನಿಂದ ಹತನಾದದ್ದು [ವಿರಾ ೫೮] ಕರ್ಣನ ಸಕಲಶಾಸ್ತ್ರಪಾರಂಗತತ್ವವರ್ಣನೆ [ಉದ್ಯೋ ೧೪೦] ಕೃಷ್ಣನು ಕೌರವನಲ್ಲಿಗೆ ಪಾಂಡವರ ರಾಯಭಾರಿಯಾಗಿ ಹೋಗಿದ್ದಾಗ, ಕರ್ಣನನ್ನು ಏಕಾಂತವಾಗಿ ಕರೆದುಯ್ದು, ಅವನು ಕುಂತಿಯ ಮಗನೆಂಬುದನ್ನು ತಿಳಿಸಿ, ಪಾಂಡವರ ಪಕ್ಷವನ್ನು ಸೇರುವಂತೆ ಪ್ರೇರಿಸಿದ್ದು ಮುಂತಾಗಿ [ಉದ್ಯೋ ೧೪೦] ಕರ್ಣನು ಸೂತಕನ್ಯೆಯರನ್ನು ಮದುವೆಯಾದದ್ದು [ಉದ್ಯೋ ೧೪೧] ಕುಂತಿ ಕರ್ಣನಲ್ಲಿಗೆ ಹೋಗಿ, ಅವನ ಜನ್ಮವೃತ್ತಾಂತವನ್ನು ತಿಳಿಸಿ, ಪಾಂಡವರೊಡನೆ ಸೇರಬೇಕೆಂದು ಬೋಧಿಸಿದ್ದು ಆದಕ್ಕೆ ಕರ್ಣನು ಕುಂತಿಯನ್ನು ಹೀಯಾಳಿಸಿದ್ದು ಮುಂತಾಗಿ [ಉದ್ಯೋ. ೧೪೬]. ಭಾರತಯುದ್ಧಾರಂಭದಲ್ಲಿ ಭೀಷ್ಮನು ಕರ್ಣನನ್ನು ಅರ್ಧರಥನೆಂದು ಲೆಕ್ಕಿಸಿದ್ದರಿಂದ ಕರ್ಣನು ಕೋಪಗೊಂಡು, ಭೀಷ್ಮನನ್ನು ನಿಂದಿಸಿ, ಭೀಷ್ಮನು

ಬದುಕಿರುವವರೆಗೂ ತಾನು ಯುದ್ಧಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದು [ಉದ್ಯೋ. ೧೬೮] ಭೀಷ್ಮನು ಶರತಲ್ಪದಲ್ಲಿ ಮಲಗಿದ್ದಾಗ ಒಂದು ರಾತ್ರಿ ಕರ್ಣನು ಏಕಾಂತವಾಗಿ ಆತನಲ್ಲಿಗೆ ಹೋಗಿ, ಕ್ಷಮೆ ಬೇಡಿದ್ದು ಭೀಷ್ಮನು ಕರ್ಣನನ್ನು ಪಾಂಡವರೊಂದಿಗೆ ಸೇರುವಂತೆ ಪ್ರೋತ್ಸಾಹಿಸಿದ್ದು ಕರ್ಣನು ಯುಕ್ತಿಯಿಂದ ಉತ್ತರಕೊಟ್ಟದ್ದು [ಭೀ. ೧೨೨] ಇವನ ಮಕ್ಕಳಲ್ಲಿ ಶತ್ರುಂಜಯ, ವಿಪಾಟರೆಂಬವರು ಅರ್ಜುನನಿಂದ ಹತರಾದರು [ದ್ರೋ ೪೧] ಮತ್ತೊಬ್ಬನು ಅಭಿಮನ್ಯುವಿನಿಂದ ಮಡಿದನು [ದ್ರೋ ೪೧]. ದ್ರುಮ, ವೃಕರಥರೆಂಬ ಮಕ್ಕಳು ಭೀಮನಿಂದ ಸತ್ತರು [ದ್ರೋ. ೧೫೬, ೧೫೮] ಕರ್ಣನು ಭೀಮನೊಂದಿಗೆ ಯುದ್ಧಮಾಡಿ ಸೋತದ್ದು [ದ್ರೋ. ೧೨೯, ೧೩೧] ಪಾಂಡವರನ್ನು ಕೊಲ್ಲುವೆನೆಂಬ ಕರ್ಣನ ಪ್ರತಿಜ್ಞೆಯನ್ನು ಕೇಳಿ ಕೃಪನು ಕರ್ಣನನ್ನು ಹೀಯಾಳಿಸಿದ್ದು ಆ ಮಾತಿಗೆ ಕರ್ಣನು ಕ್ರುದ್ಧನಾಗಿ ಕೃಪನ ನಾಲಗೆಯನ್ನು ಕತ್ತರಿಸುವೆನೆಂದು ಹೇಳಿದ್ದು. ಆ ಮಾತನ್ನು ಕೇಳಿ ಅಶ್ವತ್ಥಾಮನು ಕರ್ಣನನ್ನು ಕೊಲ್ಲುವೆನೆಂದು ಹೊರಟದ್ದು ಕರ್ಣನು ಅರ್ಜುನನೊಂದಿಗೆ ಯುದ್ಧಮಾಡಿ ಸೋತದ್ದು [ದ್ರೋ ೧೫೯, ೧೬೦] ಸಹದೇವನನ್ನು ಯುದ್ಧದಲ್ಲಿ ಸೋಲಿಸಿದ್ದು [ದ್ರೋ ೧೬೮] ಕರ್ಣ ಘಟೋತ್ಕಚರ ಯುದ್ಧ [ದ್ರೋ ೧೭೪, ೧೭೬]. ಕರ್ಣನು ಇಂದ್ರನಿಂದ ಪಡೆದು, ಅರ್ಜುನನನ್ನು ಕೊಲ್ಲುವುದಕ್ಕಾಗಿಯೇ ಮೀಸಲಾಗಿಟ್ಟದ್ದ ಶಕ್ತ್ಯಾಯುಧವನ್ನು ದುರ್ಯೋಧನನ ಪ್ರಾರ್ಥನೆಯ ಮೇರೆಗೆ ಘಟೋತ್ಕಚನ ಮೇಲೆ ಉಪಯೋಗಿಸಿ, ಅವನನ್ನು ಸಂಹರಿಸಿದ್ದು [ದ್ರೋ ೧೮೦] ದ್ರೋಣನು ಹತನಾದ ಬಳಿಕ, ದುರ್ಯೋಧನನು ಕರ್ಣನಿಗೆ ಸೇನಾಪತಿತ್ವದಲ್ಲಿ ಪಟ್ಟಗಟ್ಟಿದ್ದು ಕರ್ಣನು ಯುದ್ಧಕ್ಕೆ ಅನುವಾದದ್ದು [ಕರ್ಣ ೭] ನಕುಲ ಕರ್ಣರ ಯುದ್ಧ ನಕುಲನ ಸೋಲು [ಕ ೧೫]. . ಕೃಷ್ಣನಂತಹ ಸಾರಥಿ ತನಗೆ ಇಲ್ಲವಾದುದರಿಂದ ಹೇಗಾದರೂ ಶಲ್ಯನನ್ನು ತನಗೆ ಸಾರಥಿಯಾಗುವಂತೆ ಮಾಡಬೇಕೆಂದು ಕರ್ಣನು ದುರ್ಯೋಧನನಿಗೆ ಹೇಳಿದ್ದು ಶಲ್ಯನು ತನಗೆ ಇಷ್ಟವಿಲ್ಲದಿದ್ದರೂ ದುರ್ಯೋಧನನ ಪ್ರಾರ್ಥನಾನುಸಾರ ಕರ್ಣನಿಗೆ ಸಾರಥಿಯಾಗಲು ಸಮ್ಮತಿಸಿದ್ದು ಮುಂತಾಗಿ [ಕರ್ಣ ೨೨, ೨೩, ೨೯]. ಕರ್ಣನು ಯುದ್ಧಕ್ಕೆ ಹೊರಟಾಗ ಸಂಭವಿಸಿದ ಉತ್ಪಾತಗಳು ಕರ್ಣನು ಅರ್ಜುನನನ್ನು ಕೊಲ್ಲುವೆನೆಂದು ಶಪಥಮಾಡಿದ್ದನ್ನು ಕೇಳಿ, ಶಲ್ಯನು ಕರ್ಣನನ್ನು ನಿಂದಿಸಿದ್ದು. ಕರ್ಣ ಶಲ್ಯರ ವಾಗ್ವಾದ [ಕರ್ಣ ೩೧, ೩೯] ಕರ್ಣನು ತಾನು ಬ್ರಾಹ್ಮಣನೆಂದು ಹೇಳಿ ಪರಶುರಾಮನಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿದ್ದು ಇವನ ಗುಟ್ಟು ಹೊರಬಿದ್ದು ಕುಪಿತನಾದ ಪರಶುರಾಮನು '' ಯುದ್ಧಮಾಡುವಾಗ ನಿನ್ನ ಅಸ್ತ್ರಗಳೆಲ್ಲವೂ ವಿಫಲವಾಗಲಿ '' ಎಂದು ಶಾಪಕೊಟ್ಟದ್ದು [ಕರ್ಣ.೩೬. ಶಾಂತಿ ೨, ೩. ಸ್ತ್ರೀ ೨]. ಕರ್ಣನು ಅಜಾಗರೂಕತೆಯಿಂದ ಬ್ರಾಹ್ಮಣನ ಆಕಳನ್ನು ಕೊಲ್ಲಲಾಗಿ, ಸಿಟ್ಟುಗೊಂಡ ಬ್ರಾಹ್ಮಣನು ಕರ್ಣನ ರಥದ

ಚಕ್ರ ಯುದ್ಧಭೂಮಿಯಲ್ಲಿ ಹೂತುಹೋಗಲೆಂದು ಶಾಪಕೊಟ್ಟದ್ದು [ಕರ್ಣ. ೩೬. ಶಾಂತಿ. ೨]. ಕರ್ಣನ ಮಗನಾದ ಸುಷೇಣನನ್ನು ಭೀಮನು ಕೊಂದದ್ದು [ಕ ೭೯] ವೃಷಕೇತುವೆಂಬ ಮತ್ತೊಬ್ಬ ಮಗನನ್ನು ಅರ್ಜುನನು ಯುದ್ಧದಲ್ಲಿ ಕೊಂದದ್ದು [ಕರ್ಣ. ೯೦] ಕರ್ಣಾರ್ಜುನರ ಯುದ್ಧ [ಕರ್ಣ. ೯೪, ೯೮]. ರಥ ಚಕ್ರ ಹೂತುಹೋಗಲಾಗಿ, ಕರ್ಣನು ನಾಗಾಸ್ತ್ರದಿಂದ ಅರ್ಜುನನ ಕಿರೀಟವನ್ನು ಕೆಡವಿ, ಮತ್ತೊಂದು ಬಾಣದಿಂದ ಅರ್ಜುನನನ್ನು ನೋಯಿಸಿ, ಅರ್ಜುನನು ಚೇತರಿಸಿಕೊಳ್ಳುವಷ್ಟರಲ್ಲಿ ತನ್ನ ರಥದ ಗಾಲಿಯನ್ನು ಮೇಲಕ್ಕೆ ಎತ್ತುವುದಕ್ಕಾಗಿ, ಕರ್ಣನು ರಥದಿಂದ ಇಳಿದು, ಗಾಲಿಯನ್ನು ಎತ್ತುವುದಕ್ಕೆ ಪ್ರಯತ್ನಮಾಡಿದ್ದು. ಆಗ ಕೃಷ್ಣನು, ಕರ್ಣನನ್ನು ಕೊಲ್ಲುವುದಕ್ಕೆ ಅದೇ ತಕ್ಕ ಸಮಯವೆಂದು ಹೇಳಿ, ಕರ್ಣನ ಮರ್ಮವನ್ನು ಹೊರಗೆಡಹಿದ್ದು ಕರ್ಣನನ್ನು ಕೊಲ್ಲುವುದಕ್ಕೆ ಕೃಷ್ಣನು ಅರ್ಜುನನನ್ನು ಪ್ರೋತ್ಸಾಹಿಸಿದ್ದು. ಕರ್ಣನ ವಧೆ [ಕರ್ಣ ೯೭, ೯೮] ಕರ್ಣವಧೆ (ಸಂಗ್ರಹವಾಗಿ) [ಕರ್ಣ ೧] ಕರ್ಣವಧೆ ವಿಸ್ತಾರವಾಗಿ [ಕರ್ಣ ೯೮] ಇವನ ಮಕ್ಕಳಲ್ಲಿ ಸತ್ಯಸೇನ, ಚಿತ್ರಸೇನ, ಸುಶರ್ಮ ಎಂಬ ಮೂವರು ನಕುಲನಿಂದ ಮಡಿದರು [ಶಲ್ಯ ೯] ಕರ್ಣನ ಶವ ವರ್ಣನೆ [ಕರ್ಣ ೧೦೦ ಸ್ತ್ರೀ ೨೧] ಕರ್ಣನ ವಧೆಯನ್ನು ಕೇಳಿ ಧೃತರಾಷ್ಟ್ರನು ಮೂರ್ಛೆಹೋಗಿ ಎಚ್ಚತ್ತು, ಕರ್ಣನನ್ನು ಹೊಗಳಿದ್ದು [ಕರ್ಣ ೧, ೬] ಜರಾಸಂಧ ಕರ್ಣರ ಯುದ್ಧ [ಶಾಂತಿ ೫] ಪರಶುರಾಮನು ಕರ್ಣನನ್ನು ಬ್ರಾಹ್ಮಣನಲ್ಲವೆಂದು ಶಂಕಿಸಿ, ಶಾಪಕೊಟ್ಟದ್ದು [ಶಾಂತಿ. ೩]. ಅಲರ್ಕವೆಂಬ ಕ್ರಿಮಿ ಇವನ ತೊಡೆಯನ್ನು ಕಚ್ಚಿದ್ದು [ಶಾಂತಿ ೩] ಕರ್ಣನು ಹತನಾದನೆಂಬ ಭ್ರಾಂತಿಯಿಂದ ಯುಧಿಷ್ಠಿರನು ಅರ್ಜುನನನ್ನು ಹೊಗಳಿದ್ದು, ಮುಂತಾಗಿ [ಕರ್ಣ ೬೯] ಕುಂತಿ ಕರ್ಣನು ತನ್ನ ಹಿರಿಯ ಮಗನೆಂತಲೂ ಮೊತ್ತ ಮೊದಲು ಅವನಿಗೇ ಉತ್ತರಕ್ರಿಯಾದಿಗಳನ್ನು ಮಾಡಬೇಕೆಂತಲೂ ಯುಧಿಷ್ಠಿರನಿಗೆ ಹೇಳಿದ್ದು ಯುಧಿಷ್ಠಿರನು ಕುಂತಿಯನ್ನು ನಿಂದಿಸಿದ್ದು, ಮುಂತಾಗಿ [ಸ್ತ್ರೀ ೨೭]. ಯುಧಿಷ್ಠಿರನು ಕರ್ಣನಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು [ಸ್ತ್ರೀ ४೧] ಕರ್ಣನು ತನ್ನ ಮಗನೆಂಬುದನ್ನು ಕುಂತಿ ವ್ಯಾಸಮುನಿಗೆ ಹೇಳಿದ್ದು [ಆಶ್ರ. ೩೨]

**ಕರ್ಣಾಟಕ** —ಒಂದು ದೇಶ ಮೈಸೂರು ಸಂಸ್ಥಾನವೂ, ಮದ್ರಾಸು ಆಧಿಪತ್ಯದ ದಕ್ಷಿಣ ಕನ್ನಡಜಿಲ್ಲೆಯೂ, ಅನಂತಪುರ, ಸೇಲಂ, ಕೊಯಮುತ್ತೂರು, ಬಳ್ಳಾರಿ ಜಿಲ್ಲೆಗಳ ಸ್ವಲ್ಪ ಭಾಗಗಳೂ, ಬೊಂಬಾಯಿ ಆಧಿಪತ್ಯದಲ್ಲಿರುವ ಧಾರವಾಡ, ವಿಜಾಪುರ, ಬೆಳಗಾಂ, ಉತ್ತರ ಕನ್ನಡಜಿಲ್ಲೆಗಳೂ, ಸೋಲಾಪುರ, ಹೈದರಾಬಾದು ಪ್ರಾಂತಗಳ ಕೆಲ ಭಾಗಗಳೂ, ಕೊಡಗು ಸಂಸ್ಥಾನವೂ ಸಹ ಕರ್ಣಾಟಕದೇಶವೆನಿಸಿಕೊಳ್ಳುತ್ತದೆ [ಸಭಾ. ೭೯. ಭೀ. ೯].

**ಕರ್ಣಿಕಾ.**—ಯದುವಂಶದ ವಸುದೇವನ ತಮ್ಮನಾದ ಕಂಕನ ಹೆಂಡತಿ. ಈಕೆ ಋತಧಾವಾ, ಜಯ ಎಂಬ ಇಬ್ಬರು ಪುತ್ರರನ್ನು ಪಡೆದಳು [ಭಾರ.-ಆದಿ. ೬೮, ೧೭೦].

**ಕರ್ದಮ.**—(i) ಬ್ರಹ್ಮಮಾನಸಪುತ್ರರಾದ ಒಂಬತ್ತು ಮಂದಿ ಬ್ರಹ್ಮರ್ಷಿಗಳಲ್ಲಿ ಒಬ್ಬನು [ಸಭಾ ೧೧ ಶಾಂ ೫೮] ಈತನು ವಿಷ್ಣುಭಕ್ತಾಗ್ರೇಸರನು. ಸರಸ್ವತೀ ನದೀ ತೀರದಲ್ಲಿ ವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಲಾಗಿ, ವಿಷ್ಣು ಪ್ರತ್ಯಕ್ಷನಾಗಿ "ವರವನ್ನು ಬೇಡು" ಎಂದನು ಆಗ ಕರ್ದಮನು ಸಂತಾನಾರ್ಥವಾಗಿ ಪತ್ನಿಯನ್ನು ಬೇಡಿದನು. ವಿಷ್ಣು ಕರ್ದಮನನ್ನು ಕುರಿತು, ಸ್ವಾಯಂಭುವಮನು ತಾನಾಗಿಯೇ ಇಲ್ಲಿಗೆ ಬಂದು ತನ್ನ ಮಗಳಾದ ದೇವಹೂತಿಯನ್ನು ನಿನಗೆ ಕೊಟ್ಟು ಮದುವೆಮಾಡುವನೆಂದು ಹೇಳಿ ಕಣ್ಮರೆಯಾದನು ಕರ್ದಮನು ಅಲ್ಲಿಯೇ ತಪಸ್ಸುಮಾಡುತ್ತಿರಲಾಗಿ ಸ್ವಾಯಂಭುವಮನು ಅಲ್ಲಿಗೆ ಬಂದು ತನ್ನ ಮಗಳಾದ ದೇವಹೂತಿಯನ್ನು ಕೊಟ್ಟು ಮದುವೆಮಾಡಿದನು ಕರ್ದಮನು ಆಕೆಯೊಡನೆ ಕೆಲಕಾಲ ಸುಖದಿಂದಿದ್ದನು ಒಂದು ದಿನ ದೇವಹೂತಿ ಕರ್ದಮನನ್ನು ಕುರಿತು ತನಗೆ ಸಂತಾನವನ್ನು ಅನುಗ್ರಹಿಸುವಂತೆ ಬೇಡಿದಳು. ಆಗ ಕರ್ದಮನು ತನ್ನ ತಪೋಮಹಿಮೆಯಿಂದ ಒಂದು ವಿಮಾನವನ್ನು ಕಲ್ಪಿಸಿ, ತನ್ನ ಮಡದಿಯೊಂದಿಗೆ ಅದರಲ್ಲಿ ಕುಳಿತು ದಂಪತಿಗಳಿಬ್ಬರೂ ಕೆಲಕಾಲ ಭೂ ಪ್ರದಕ್ಷಿಣೆ ಮಾಡಿ ಬಂದು ಸರಸ್ವತೀ ನದೀ ತೀರವನ್ನು ಸೇರಿ ಆ ನದಿಯಲ್ಲಿ ಇಬ್ಬರೂ ಸ್ನಾನಮಾಡಿದರು. ತರುವಾಯ ದೇವಹೂತಿ ಕಳಾ, ಅನಸೂಯಾ, ಶ್ರದ್ಧಾ, ಹವಿರ್ಭುಕ್, ಅರುಂಧತಿ, ಶಾಂತಿ, ಗತಿ, ಕ್ರಿಯಾ, ಖ್ಯಾತಿ ಎಂಬ ಒಂಬತ್ತು ಮಂದಿ ಕುವರಿಯರನ್ನು ಹೆತ್ತಳು ತರುವಾಯ ಈ ಹುಡುಗಿಯರು ಕ್ರಮವಾಗಿ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ವಸಿಷ್ಠ, ಅಥರ್ವಮುನಿ, ಪುಲಹ, ಕ್ರತು, ಭೃಗು ಎಂಬ ಒಂಬತ್ತು ಮಂದಿ ಮಹರ್ಷಿಗಳನ್ನು ಮದುವೆಯಾದರು ಬಳಿಕ ಕರ್ದಮಮುನಿ ತಾನು ಸನ್ಯಾಸವನ್ನು ಸ್ವೀಕರಿಸುವೆನೆಂದು ಹೇಳಲಾಗಿ, ದೇವಹೂತಿ ವಂಶೋದ್ಧಾರಾರ್ಥವಾಗಿ ಪುತ್ರನನ್ನು ಪಡೆದು, ತರುವಾಯ ಸನ್ಯಾಸವನ್ನು ಸ್ವೀಕರಿಸಬಹುದು ಎಂದಳು ಆಗ ಕರ್ದಮಮುನಿ ಕಪಿಲನೆಂಬ ಮಗನನ್ನು ಪಡೆದು, ತಾನು ಸನ್ಯಾಸವನ್ನು ಸ್ವೀಕರಿಸಿದನು. ನೋಡು—ಕಪಿಲ [ಭಾಗ.- ೩, ೨೧].

(ii) ಪುಲಹಮುನಿಯ ಮಗ ಈತನ ಹೆಂಡತಿ ಸಿನೀವಾಲಿಯೆಂಬವಳು [ಮತ್ಸ್ಯ.-೨೩].

**ಕರ್ದಮಾಲ (ಕರ್ದಮಿಲ).**—ಒಂದು ತೀರ್ಥ. ಇದರ ಉದಕದಿಂದ ಚಂದ್ರ ವಂಶದ ಭರತಚಕ್ರವರ್ತಿಗೆ ರಾಜ್ಯಾಭಿಷೇಕವಾಯಿತು [ಭಾರ.-ವನ. ೧೩೬].

**ಕರ್ವಟ**—ಭಾರತವರ್ಷದ ಒಂದು ದೇಶ ಪಾಂಡವರ ಕಾಲದಲ್ಲಿ ಇದು ವಂಗ ರಾಜ್ಯಕ್ಕೆ ಸೇರಿದ್ದಿತು. ಆಗ ಇದನ್ನು ತಾಮ್ರಲಿಪ್ತನೆಂಬ ಅರಸು ಆಳುತ್ತಿದ್ದನು [ಸಭಾ. ೩೧]

**ಕಲಾ**—(i) ಕರ್ದಮ ಮಹರ್ಷಿಯಿಂದ ದೇವಹೂತಿಯಲ್ಲಿ ಜನಿಸಿದ ಒಂಬತ್ತು ಮಂದಿ ಕುಮರಿಯರಲ್ಲಿ ಹಿರಿಯವಳು. ಮರೀಚಿಮುನಿಯನ್ನು ಮದುವೆಯಾಗಿ ಕಶ್ಯಪಮುನಿಯನ್ನು ಹೆತ್ತಳು [ಭಾಗ.-೩, ೨೪]

(ii) ವಿಭೀಷಣನ ಹಿರಿಯ ಮಗಳು. ಶ್ರೀರಾಮನ ಕುಶಲವಾರ್ತೆಯನ್ನು ಗುಟ್ಟಾಗಿ ಆಗಿಂದಾಗ್ಗೆ ಸೀತೆಗೆ ಅರುಹುತ್ತಿದ್ದಳು [ರಾಮಾ.-ಸುಂ. ೩೭].

**ಕಲಾವತಿ**—(i) ಕಾಶೀರಾಜನ ಮಗಳು ಚಂದ್ರವಂಶದ ದಾಶಾರ್ಹರಾಜನನ್ನು ಮದುವೆಯಾಗಿದ್ದಳು ಈಕೆ ತನ್ನ ತಂದೆಯ ಮನೆಯಲ್ಲಿರುವಾಗ ದುರ್ವಾಸಮುನಿಯನ್ನು ಶುಶ್ರೂಷೆಮಾಡಿ, ಆತನಿಂದ ಮಂತ್ರೋಪದೇಶವನ್ನು ಪಡೆದು ಭಕ್ತಿಪರಾಯಣೆಯಾಗಿದ್ದಳು ಮದುವೆಯ ದಿನ ದಾಶಾರ್ಹನು ಈಕೆಯ ಶರೀರವನ್ನು ಸೋಕಿದ ಕೂಡಲೇ, ಅವನ ಮೈ ಮೇಲೆ ಬೊಬ್ಬೆಗಳು ಎದ್ದುವು. ದಾಶಾರ್ಹನು ಇದಕ್ಕೆ ಕಾರಣವೇನೆಂದು ಕೇಳಲಾಗಿ, ಕಲಾವತಿ "ನೀನು ಅಭಕ್ಷ್ಯಭಕ್ಷಣ ಮಾಡಿರುವೆಯಾಗಿ ಪರಿಶುದ್ಧನಲ್ಲ"ವೆಂದಳು ಕೂಡಲೇ ದಾಶಾರ್ಹನು ಕಲಾವತಿಯ ಸೂಚನೆಯಂತೆ ತಮ್ಮ ಕುಲಗುರುವಾದ ಗರ್ಗಮುನಿಯನ್ನು ಮರೆಹೊಕ್ಕು ಆತನಿಂದ ಪಂಚಾಕ್ಷರೀ ಮಂತ್ರವನ್ನು ಉಪದೇಶಹೊಂದಿ ಕಲಾವತಿಯನ್ನು ಸೇರಿದನು ಆ ಬಳಿಕ ಇವನ ದೇಹ ಚಂದನದಂತೆ ಶೀತಲವಾಯಿತು [ಸ್ಕಾಂದ-ಬ್ರಹ್ಮೋತ್ತರ ಖಂಡ ೧]

(ii) ದೇವಗಾಯಕನಾದ ತುಂಬುರುಮುನಿಯ ವೀಣೆಯ ಹೆಸರು

**ಕಲಿ**—ಕಶ್ಯಪಮುನಿಯಿಂದ ಮುನಿಯೆಂಬಾಕೆಯಲ್ಲಿ ಜನಿಸಿದ ದೇವಗಂಧರ್ವರಲ್ಲಿ ಒಬ್ಬನು [ಆದಿ. ೬೬ ಮಾರ್ಕ-೫೯]. ನೋಡು:—ವರೂಧಿನೀ

(ii) ಕೃತ, ತ್ರೇತಾ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳಲ್ಲಿ ಕೊನೆಯದು. ಇದರ ಪ್ರಮಾಣ ದೇವಮಾನದ ಪ್ರಕಾರ ೧,೨೦೦ ವರ್ಷಗಳು, ಅಥವಾ ಮನುಷ್ಯಮಾನದ ಪ್ರಕಾರ ೪,೩೨,೦೦೦ ವರ್ಷಗಳು. ಸಪ್ತರ್ಷಿಮಂಡಲ ಮಖಾ ನಕ್ಷತ್ರದಲ್ಲಿರುವಾಗ ಕಲಿಯುಗ ಆರಂಭವಾಯಿತು [ಭಾಗ.-೧, ೨, ೩]. ಈ ಸಂವತ್ಸರಗಳಲ್ಲಿ ಇಂದಿಗೆ ಮನುಷ್ಯಮಾನದ ಪ್ರಕಾರ ೫,೦೪೧ ವರ್ಷಗಳು ಕಳೆದುವು.

ಈಗ ನಡೆಯುತ್ತಿರುವುದು ೨೮ ನೆಯ ಕಲಿಯುಗ. ಈ ಯುಗಕ್ಕೆ ತಿಷ್ಯವೆಂಬ ಹೆಸರೂ ಇದೆ [ವಿಷ್ಣು.-೬, ೧. ಭಾಗ - ೧೨-೩, ೩. ಮತ್ಸ್ಯ.- ೧೪೪].

(iii) ಮೇಲೆ ಹೇಳಿದ ಕಲಿಯುಗದ ಅಭಿಮಾನದೇವತೆಯಾದ ಒಬ್ಬ ರಾಕ್ಷಸ. ಲೋಕದಲ್ಲಿ ನಡೆಯುವ ಅನ್ಯಾಯಗಳಿಗೂ ಪಾಪಕಾರ್ಯಗಳಿಗೂ ಇವನೇ ಮೂಲವೆಂಬುದಾಗಿ ಪುರಾಣಾದಿಗಳಲ್ಲಿ ವರ್ಣಿತವಾಗಿದೆ. ಇವನ ಜನನಿಯಾದ ಹಿಂಸೆಯೂ, ಜನಕನಾದ ಕ್ರೋಧನೂ ಒಬ್ಬ ತಾಯಿ ಮಕ್ಕಳು. ಇಂತಹ ದಂಪತಿಗಳಿಂದ ಜನಿಸಿದವನಾದುದರಿಂದಲೇ ಇವನ ಕಾಲದಲ್ಲಿ ಅನೇಕವಾಗಿ ಅಕಾರ್ಯಗಳೇ ನಡೆಯುತ್ತವೆ ಇವನ ಹಾವಳಿಯನ್ನು ಸಹಿಸಲಾರದೆ ಭೂದೇವಿ ನಾರಾಯಣನಲ್ಲಿ ಮೊರೆಯಿಡಲಾಗಿ ವಿಷ್ಣು ಕಲ್ಕಿರೂಪದಿಂದ ಕಲಿಯನ್ನು ನಿಗ್ರಹಿಸಿದನು. ಕಲಿಯುಗದಲ್ಲಿ ನಡೆಯುವ ವಿಚಿತ್ರಗಳು [ಭಾರ -ವನ. ೧೫೧, ೧೯೧, ೧೯೩. ಭೀಷ್ಮ. ೧೦ ಶಾಂತಿ. ೬೯] ದಮಯಂತೀ ಸ್ವಯಂವರ ವಾರ್ತೆಯನ್ನು ಕೇಳಿ ಕಲಿ ಮೋಹಭರಿತನಾಗಿ, ತಾನೂ ಆ ಸ್ವಯಂವರಕ್ಕೆ ಹೊರಡಲು ಅನುವಾದನು. ಆದರೆ ಅಷ್ಟರಲ್ಲಿಯೇ ಇಂದ್ರಾದಿಗಳು, ದಮಯಂತಿ ನಳನನ್ನು ವರಿಸಿದಳೆಂಬುದಾಗಿಯೂ, ಅವರಿಬ್ಬರಿಗೂ ಪಾಣಿಗ್ರಹಣ ಮಹೋತ್ಸವ ನಡೆಯಿತೆಂತಲೂ ಹೇಳಿದರು. ಆ ಮಾತನ್ನು ಕೇಳಿ ಕಲಿ ಕ್ರೋಧಾಂಧನಾಗಿ, ನಳನನ್ನು ಭಂಗಪಡಿಸುವುದಕ್ಕಾಗಿ, ಪುಷ್ಕರನನ್ನು ಆಶ್ರಯಿಸಿ, ಆತನ ಮೂಲಕ ಜೂಜಿನಲ್ಲಿ ನಳನನ್ನು ಸೋಲಿಸಿ, ನಳನ ದೇಹವನ್ನು ಹೊಕ್ಕು, ಆತನನ್ನು ಅನೇಕ ಕಷ್ಟಗಳಿಗೆ ಗುರಿಮಾಡಿ ತನ್ನ ಸೇಡನ್ನು ತೀರಿಸಿಕೊಂಡನು ಕಾಲಾಂತರದಲ್ಲಿ ನಳನ ದೇಹವನ್ನು ಬಿಟ್ಟು (ವಿಭೀತಕ) ತಾರೆಯ ಮರವನ್ನು ಸೇರಿದನು [ವನ. ೫೫, ೫೬, ೭೦] ಶ್ರೀ ಕೃಷ್ಣ ನಿರ್ಯಾಣಾನಂತರ ಭೂದೇವಿ ಶೋಕಭರಿತೆಯಾದಳು. ಧರ್ಮವೂ ಕ್ರಮವಾಗಿ ಕ್ಷಯವಾಗುತ್ತ ಬಂತು. ಇಂತಹ ಸಂಧಿಯನ್ನೇ ಹೊಂಚುಹಾಕಿಕೊಂಡಿದ್ದ ಕಲಿ ಕೃಶನಾಗಿದ್ದ ಧರ್ಮಪುರುಷನನ್ನು ತನ್ನ ಎಡಗಾಲಿನಿಂದ ಒದ್ದನು ಇದನ್ನು ಕಂಡು ಕ್ರುದ್ಧನಾದ ಪರೀಕ್ಷಿದ್ರಾಜನು ಕಲಿಯನ್ನು ಶಿಕ್ಷಿಸುವ ಸಲುವಾಗಿ ಆಯುಧವನ್ನೆತ್ತಿದನು ಹೇಡಿಯಾದ ಕಲಿ ಹೆದರಿ, ಪರೀಕ್ಷಿತನನ್ನು ಮರೆಹೊಕ್ಕು ಅವನ ರಾಜ್ಯದಿಂದ ಓಡಿಹೋದನು [ಭಾಗ.-೧-೧೭].

**ಕಲಿಭವಿಷ್ಯಗಳು.**—[ಶಾಂ ೬೯. ವಿಷ್ಣು.-೬,೧. ಹರಿ.-ಭವಿ. ೩,೪. ಮತ್ಸ್ಯ.-೧೪೪ ವನ. ೧೯೩]

**ಕಲಿಙ್ಗ.**—(i) ಚಂದ್ರವಂಶದ ಯಯಾತಿರಾಜನ ಮಗನಾದ ಅನುವೆಂಬ ರಾಜನ ವಂಶದಲ್ಲಿ ಜನಿಸಿದ ಬಲಿರಾಜನ ಹೆಂಡತಿಯಾದ ಸುದೇಷ್ಣೆಯಲ್ಲಿ ದೀರ್ಘತಮನೆಂಬ ಮಹರ್ಷಿಯಿಂದ ಜನಿಸಿದವನು. ಅಂಗ, ವಂಗ, ಸುಹ್ಮ, ಪುಂಡ್ರರೆಂಬ

ವರು ಇವನ ಒಡಹುಟ್ಟಿದವರು. ಇವರು ಸ್ಥಾಪಿಸಿದ ದೇಶಗಳಿಗೂ ಇವರ ಹೆಸರುಗಳೇ ಇಂದಿಗೂ ರೂಢಿಯಲ್ಲಿರುತ್ತವೆ [ಭಾರ.-ಆದಿ. ೧೧೩]

(ii) ಮೇಲೆ ಹೇಳಿದ ಕಳಿಂಗರಾಜನು ಸ್ಥಾಪಿಸಿದ ಒಂದು ದೇಶ ಇದು ಉತ್ಕಲದಲ್ಲಿ ವೈತರಣೀ ನದಿಯ ದಕ್ಷಿಣಕ್ಕೂ ಕೃಷ್ಣಾ ನದಿಯ ಉತ್ತರಕ್ಕೂ ಇದೆ. ಈಗ ಈ ದೇಶ ತೆಲುಗು ದೇಶದಲ್ಲಿ ರಾಜಮಹೇಂದ್ರವರ, ವಿಶಾಖಪಟ್ಟಣ, ಗಂಜಾಂ ಜಿಲ್ಲೆಗಳು ಮತ್ತು ಉತ್ಕಲದ ಒಂದು ಭಾಗವೆನಿಸಿಕೊಂಡಿದೆ ಪಾಂಡವರ ಕಾಲದಲ್ಲಿ ದುರ್ಯೋಧನನ ಸೋದರಮಾವನಾದ ಚಿತ್ರಾಂಗದನು ಇಲ್ಲಿ ರಾಜ್ಯಭಾರಮಾಡುತ್ತಿದ್ದನು ಆಗ್ಗೆ ರಾಜಪುರವೆಂಬುದು (ಈಗಣ ರಾಜಮಹೇಂದ್ರವಾಗಿರಬಹುದು ?) ಇದರ ರಾಜಧಾನಿಯಾಗಿದ್ದಿತು [ಭೀಷ್ಮ ೯]. ಭಾರತಯುದ್ಧದಲ್ಲಿ ಈ ದೇಶದ ಅರಸರಾಗಿದ್ದ ದುರ್ಯೋಧನನಿಗೆ ಒತ್ತಾಸೆಮಾಡಲು ಬಂದಿದ್ದ ಶ್ರುತಾಯು, ಶಕ್ರದೇವ, ಸತ್ಯ, ಸತ್ಯದೇವ, ಕೇತುಮಂತ ಮುಂತಾದವರನ್ನು ಭೀಮ ಕೊಂದನು [ಭೀ. ೫೪ ಶಾಂತಿ. ೪].

**ಕಲ್ಕಿ.**—ವಿಷ್ಣುವಿನ ಅವತಾರಗಳಲ್ಲಿ ಹತ್ತನೆಯದು ಕಲಿಯುಗದ ಅಂತ್ಯದಲ್ಲಿ ಶಂಬಳಾವತಿಯೆಂಬ ಪಟ್ಟಣದಲ್ಲಿ ವಾಸಮಾಡುವ ವಿಷ್ಣುಯಶನೆಂಬ ಬ್ರಾಹ್ಮಣನಿಗೆ ಸುಮತಿಯೆಂಬವಳಲ್ಲಿ ಜನಿಸಿ, ಪರಶುರಾಮನಲ್ಲಿ ವಿದ್ಯಾಭ್ಯಾಸಮಾಡಿ, ಸಕಲ ವಿದ್ಯೆಗಳಲ್ಲಿಯೂ ಪ್ರಾವೀಣ್ಯವನ್ನು ಪಡೆದ ತರುವಾಯ, ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ಅಪ್ರತಿಹತಮಹಿಮೆಯನ್ನೂ, ಅದ್ಭುತವಾದ ಒಂದು ಖಡ್ಗವನ್ನೂ, ಉತ್ತಮವಾದ ಒಂದು ಕುದುರೆಯನ್ನೂ, ಆಶ್ಚರ್ಯಕರವಾದ ಒಂದು ಗಿಳಿಯನ್ನೂ ಪಡೆದನು. ಆ ಕಾಲದಲ್ಲಿ ಸಿಂಹಳದ್ವೀಪದ ಅರಸನಾದ ಬೃಹದ್ರಥನಿಗೆ ಪದ್ಮಾವತಿಯೆಂಬ ಲಾವಣ್ಯವತಿಯಾದ ಒಬ್ಬ ಮಗಳಿದ್ದಳು ಈಕೆಯೂ ಶಿವದೀಕ್ಷೆಯನ್ನು ಕೈಕೊಂಡು, ಅನನ್ಯಭಾವದಿಂದ ಶಿವನನ್ನೇ ಪೂಜಿಸುತ್ತಿರಲಾಗಿ, ಸಂತುಷ್ಟನಾದ ಶಿವನು " ನಿನಗೆ ವಿಷ್ಣುವೇ ಪತಿಯಾಗುವನು. ಮಿಕ್ಕ ಅರಸುಮಕ್ಕಳನ್ನು ವರಿಸಲಾಗದು. ಒಂದು ವೇಳೆ ಕಾಮಾವೇಶದಿಂದ ಯಾವನಾದರೂ ವರಿಸಿದಲ್ಲಿ ಅಂತಹವನು ಒಡನೆಯೇ ಹೆಂಗುಸಾಗುವನು " ಎಂದು ವರವನ್ನಿತ್ತನು. ಪದ್ಮಾವತಿ ಈ ವಿಷಯವನ್ನು ಯಾರಿಗೂ ಹೇಳಲಿಲ್ಲ. ಯುಕ್ತವಯಸ್ಸು ಬಂದ ಕೂಡಲೇ ತಂದೆ ಸ್ವಯಂವರವನ್ನು ಏರ್ಪಡಿಸಿ, ಅನೇಕ ಮಂದಿ ರಾಜಪುತ್ರರನ್ನು ಬರಮಾಡಿಸಿದನು. ಪದ್ಮಾವತಿಯನ್ನು ಕಾಮಭರಿತವಾದ ದೃಷ್ಟಿಯಿಂದ ನೋಡಿದ ಕೂಡಲೇ ಅವರೆಲ್ಲರೂ ಹೆಂಗುಸರಾದರು. ಕೆಲಕಾಲದ ಮೇಲೆ ಕಲ್ಕಿಯಲ್ಲಿದ್ದ ಗಿಳಿ ಒಮ್ಮೆ ಸಿಂಹಳದ್ವೀಪಕ್ಕೆ ಹೋಗಿದ್ದಾಗ ಪದ್ಮಾವತಿಯನ್ನು ಕಂಡು, ಕಲ್ಕಿಯ ಗುಣಸಂಪತ್ತಿಯನ್ನು ಪದ್ಮಾವತಿಗೆ ತಿಳಿಸಿ, ಅವಳನ್ನು ಮೋಹಪರವಶಳನ್ನಾಗಿ ಮಾಡಿ,

ಅಲ್ಲಿಂದ ಬಂದು ಕಲ್ಕಿಗೆ ಆಕೆಯ ರೂಪಲಾವಣ್ಯಗಳನ್ನು ಬಣ್ಣಿಸಿ, ಕಲ್ಕಿಯನ್ನು ಸಿಂಹಳಕ್ಕೆ ಕರೆದುಯ್ದಿತು. ಆ ಸಮಯಕ್ಕೆ ಸರಿಯಾಗಿ ಪದ್ಮಾವತಿ ಸಖಿಯರೊಂದಿಗೆ ಜಲಕೇಳಿಗಾಗಿ ಉದ್ಯಾನಕ್ಕೆ ಹೋಗುತ್ತಿದ್ದಳು. ಇದನ್ನು ಕಂಡು ಗಿಳಿ ಆ ಉದ್ಯಾನದಲ್ಲಿಯೇ ಇವರಿಬ್ಬರಿಗೂ ಪರಿಚಯವನ್ನು ಮಾಡಿಕೊಟ್ಟಿತು. ಬಳಿಕ ಪದ್ಮಾವತಿ ತನ್ನ ಮನೋಗತವನ್ನು ತಂದೆಗೆ ತಿಳುಹಿದಳು. ಆಗ ಬೃಹದ್ರಥನು ತನ್ನ ಮಗಳನ್ನು ಕಲ್ಕಿಗೆ ಕೊಟ್ಟು ಮದುವೆಮಾಡಿದನು. ಬಳಿಕ ಪದ್ಮಾವತಿಯ ದರ್ಶನದಿಂದ ಸ್ತ್ರೀ ರೂಪವನ್ನು ಪಡೆದಿದ್ದ ಅರಸುಮಕ್ಕಳೆಲ್ಲರೂ ಕಲ್ಕಿಯನ್ನು ಮರೆಹೊಕ್ಕು, ಆತನ ಸೂಚನೆಯಂತೆ ನರ್ಮದಾ ನದಿಯಲ್ಲಿ ಸ್ನಾನಮಾಡಿ, ಪೂರ್ವ ರೂಪವನ್ನು ಪಡೆದು ತಂತಮ್ಮ ದೇಶಗಳಿಗೆ ಹಿಂದಿರುಗಿದರು. ಕೆಲಕಾಲದ ಬಳಿಕ ಕಲ್ಕಿ ಕಲಿಯ ದುರುದುಂಬಿತನವನ್ನು ಕೇಳಿ ಕ್ರುದ್ಧನಾಗಿ, ಯುದ್ಧದಲ್ಲಿ ಕಲಿಯನ್ನೂ ಅವನ ಸೇನೆಯನ್ನೂ ಕೊಂದು, ತನ್ನ ಮಹಿಮೆಯನ್ನು ಬಹಳವಾಗಿ ಲೋಕಕ್ಕೆ ವ್ಯಕ್ತಗೊಳಿಸಿದನು [ಭಾರ.-ಸಭಾ. ೫೦. ವನ ೧೯೨. ಭಾಗ. ೧೨. ೨]

**ಕಲ್ಪ.**—ಚತುರ್ಮುಖನ ಒಂದು ಹಗಲಿನಷ್ಟು ಕಾಲಕ್ಕೆ ಹೆಸರು. ಚಾಂದ್ರಮಾನದ ಪ್ರಕಾರ ಮನುಷ್ಯರಿಗೆ ಒಂದು ತಿಂಗಳಾದರೆ ಪಿತೃದೇವತೆಗಳಿಗೆ ಒಂದು ಅಹೋರಾತ್ರವಾಗುತ್ತದೆ ಅಮಾವಾಸ್ಯೆ ಪಿತೃದೇವತೆಗಳ ಹಗಲು, ಹುಣ್ಣಿಮೆ ರಾತ್ರಿ. ಸೌರಮಾನದ ಪ್ರಕಾರ ಮನುಷ್ಯರಿಗೆ ಒಂದು ವರ್ಷವಾದರೆ ದೇವತೆಗಳಿಗೆ ಒಂದು ಅಹೋರಾತ್ರವಾಗುತ್ತದೆ ಉತ್ತರಾಯಣವೇ ದೇವತೆಗಳ ಹಗಲು. ದಕ್ಷಿಣಾಯನವೇ ರಾತ್ರಿ. ಇಂತಹ ದೇವಮಾನ ಪ್ರಕಾರ ೧೨,೦೦೦ ವರ್ಷಗಳು ಮುಗಿಯುವ ಕಾಲಕ್ಕೆ ಒಂದು ದೇವಯುಗ ಅಥವಾ ಮನುಷ್ಯರ ಒಂದು ಚತುರ್ಯುಗವಾಗುವುದು. ಒಂದು ಚತುರ್ಯುಗಕ್ಕೆ ೪೩,೨೦,೦೦೦ ಸೌರ ವರ್ಷಗಳು ಇವು ಒಂದು ಸಾವಿರ ಸಾರಿ ಆದರೆ ಬ್ರಹ್ಮನಿಗೆ ಒಂದು ಹಗಲು ರಾತ್ರಿಯೂ ಇಷ್ಟೇ ಪ್ರಮಾಣವುಳ್ಳದ್ದು. ಹಗಲೂ ರಾತ್ರಿಯೂ ಸೇರಿ ೮೬೪,೦೦,೦೦,೦೦೦ ಸೌರ ವರ್ಷಗಳಾಗುವುವು ಹೀಗೆ ಬ್ರಹ್ಮನ ಒಂದೊಂದು ರಾತ್ರಿಯಲ್ಲಿಯೂ ಒಂದು ಪ್ರಳಯ ನಡೆಯುವುದು ಬ್ರಹ್ಮನ ಒಂದು ಹಗಲಿನಲ್ಲಿ ಸ್ವರ್ಗಲೋಕದಲ್ಲಿ ೧೪ ಮಂದಿ ಇಂದ್ರರೂ, ಭೂಲೋಕದಲ್ಲಿ ೧೪ ಮಂದಿ ಮನುಗಳೂ ರಾಜ್ಯಭಾರಮಾಡುತ್ತಾರೆ. ಮೇಲೆ ಹೇಳಿದ ಪ್ರಮಾಣದಂತೆ ಬ್ರಹ್ಮನ ನೂರು ವರ್ಷದ ಆಯುಷ್ಯಕ್ಕೆ ಪರವೆಂದು ಹೆಸರು. ಇದರಲ್ಲಿ ಮೊದಲನೆಯ ಪರಾರ್ಧ (೫೦ ವರ್ಷಗಳು) ಮುಗಿದು ಈಗ ಎರಡನೆಯ ಪರಾರ್ಧ ನಡೆಯುತ್ತಿದೆ. ಈಗ ನಡೆಯುತ್ತಿರುವ ಬ್ರಹ್ಮನ ೫೧ ನೆಯ ವರ್ಷದ ಮೊದಲನೆಯ ತಿಂಗಳಲ್ಲಿ ೨೫ ದಿನಗಳು (ಕಲ್ಪಗಳು) ಕಳೆದು ೨೬ ನೆಯ ಹಗಲಿನ ಮೊದಲನೆಯ ಜಾವದ ಎರಡನೆಯ ಮುಹೂರ್ತ ನಡೆಯುತ್ತಿದೆ.

ಬ್ರಾಹ್ಮ, ಪಾದ್ಮ, ಶ್ವೇತ, ನೀಲಲೋಹಿತ, ವಾಮದೇವ, ರಥಂತರ, ಗೌರವ, ದೇವ, ಬೃಹತ್, ಕಂದರ್ಪ, ಸದ್ಯಃ, ಈಶಾನ, ತಮಸ್, ಸಾರಸ್ವತ, ಉದಾನ, ಗರುಡ, ಕೌರ್ಮ, ನಾರಸಿಂಹ, ಸಮಾನ, ಆಗ್ನೇಯ, ತತ್ಪುರುಷ, ವೈಕುಂಠ, ಲಕ್ಷ್ಮೀ, ಸಾವಿತ್ರೀ, ಅಘೋರ, ವಾರಾಹ (ಈಗ ನಡೆಯುತ್ತಿರುವ ಕಲ್ಪ ಅಥವಾ ಬ್ರಹ್ಮನ ಒಂದು ತಿಂಗಳಿನ ೨೬ ನೆಯ ದಿನದ ಹೆಸರು). ವೈರಾಜ, ಗೌರೀ, ಮಾಹೇಶ್ವರೀ, ಪಿತೃಕಲ್ಪಗಳೆಂಬುದಾಗಿ ಬ್ರಹ್ಮನ ಒಂದು ತಿಂಗಳಿನ ೩೦ ದಿನಗಳ ಹೆಸರುಗಳು ಕೌರ್ಮಕಲ್ಪವು ಬ್ರಹ್ಮನ ಹುಣ್ಣಿಮೆ. ಪಿತೃಕಲ್ಪವು ಬ್ರಹ್ಮನ ಅಮಾವಾಸ್ಯೆ ಕಲ್ಪಾರಂಭದಲ್ಲಿ ನಡೆದ ಅಥವಾ ಮುಂದೆ ನಡೆಯುವ ಅವತಾರಗಳ ಹೆಸರೇ ಆ ಆ ಕಲ್ಪಕ್ಕೂ ರೂಢಿಯಲ್ಲಿ ಬಂದಿವೆ [ಭಾಗ -೩, ೧೧. ಮತ್ಸ್ಯ -೨೮೯]

**ಕಲ್ಮಾಷಪಾದ**—ಸೂರ್ಯವಂಶದ ಋತುಪರ್ಣರಾಜನ ಮಗನಾದ ಸುದಾಸನ ಪುತ್ರನು. ಇವನಿಗೆ ಮಿತ್ರಸಹ, ಸೌದಾಸ ಎಂಬ ನಾಮಾಂತರಗಳೂ ಇವೆ. ಇವನ ಹೆಂಡತಿ ಮದಯಂತಿಯೆಂಬವಳು ಇವನು ಒಮ್ಮೆ ಬೇಟೆಗೆ ಹೋಗಿದ್ದಾಗ ಇಬ್ಬರು ರಾಕ್ಷಸರನ್ನು ಕಂಡು ಅವರಲ್ಲಿ ಒಬ್ಬನನ್ನು ಕೊಂದನು. ಮತ್ತೊಬ್ಬನು ಓಡಿಹೋಗಿ, ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ಹೊಂಚುಹಾಕುತ್ತಿದ್ದನು. ಮತ್ತೊಂದು ಸಲ ಸೌದಾಸನು ತನ್ನ ಕುಲಗುರುವಾದ ವಸಿಷ್ಠನ ಮೂಲಕ ಯಜ್ಞ ಸಂಭಾರಗಳನ್ನು ಸಿದ್ಧಗೊಳಿಸಿ, ದೀಕ್ಷೆಯನ್ನು ಕೈಕೊಂಡು ಯಜ್ಞಕಾರ್ಯಗಳನ್ನು ನಡೆಯಿಸುತ್ತಿದ್ದನು ಈ ಸಮಯದಲ್ಲಿ ವಸಿಷ್ಠನು ಸ್ನಾನಕ್ಕೆ ಹೋಗಿರುವ ಸಂಧಿಯನ್ನು ಕಂಡು ಹಿಡಿದು ಈ ರಾಕ್ಷಸನು ವಸಿಷ್ಠನ ರೂಪದಿಂದ ಸೌದಾಸನಲ್ಲಿಗೆ ಬಂದು ತನಗೆ ಮಾಂಸಾಹಾರವನ್ನು ಕಲ್ಪಿಸಬೇಕೆನಲು, ರಾಜನು ಅಂತೆಯೇ ಸಿದ್ಧಪಡಿಸಿದನು. ಮಾಯಾವಿಯಾದ ರಾಕ್ಷಸನು ಸಿದ್ಧವಾಗಿದ್ದ ಮಾಂಸಾಹಾರವನ್ನು ತಾನು ತಿಂದು ಅದಕ್ಕೆ ಪ್ರತಿಯಾಗಿ ನರಮಾಂಸವನ್ನು ಇರಿಸಿಹೋದನು ವಸಿಷ್ಠನು ಭೋಜನಕ್ಕೆ ಕುಳಿತಾಗ ಆ ನರಮಾಂಸವನ್ನೇ ಬಡಿಸಲಾಗಿ, ಕುಪಿತನಾದ ವಸಿಷ್ಠನು ಸೌದಾಸನನ್ನು ಕುರಿತು "ನೀನು ೧೨ ವರ್ಷಗಳ ಕಾಲ ನರಮಾಂಸ ಭಕ್ಷಕನಾದ ರಾಕ್ಷಸನಾಗಿರು" ಎಂದು ಶಾಪವಿತ್ತನು. ರಾಜನು ವಸಿಷ್ಠನಿಗೆ ಪ್ರತಿಶಾಪವನ್ನು ಕೊಡುವುದಕ್ಕಾಗಿ ಕಯ್ಯಲ್ಲಿ ನೀರನ್ನು ತೆಗೆದುಕೊಳ್ಳುವಷ್ಟರಲ್ಲಿ ಮದಯಂತಿ ಅಡ್ಡಬಂದು ಬೇಡಿಕೊಳ್ಳಲಾಗಿ ಸೌದಾಸನು ಆ ನೀರನ್ನು ತನ್ನ ಕಾಲಮೇಲೆಯೇ ಸುರಿದುಕೊಂಡನು. ಇದರಿಂದ ಅವನ ಕಾಲು ಕಪ್ಪಾಗಿ, ಕಲ್ಮಾಷಪಾದನೆಂಬ ಹೆಸರಿಗೆ ಕಾರಣವಾಯಿತು. ವಸಿಷ್ಠಶಾಪದಂತೆ ಇವನು ರಾಕ್ಷಸನಾಗಿದ್ದಾಗ ವಿಶ್ವಾಮಿತ್ರನು ಇವನ ದೇಹದಲ್ಲಿ ಕಿಂಕರನೆಂಬ ಮತ್ತೊಬ್ಬ ರಾಕ್ಷಸನನ್ನು ಆವೇಶಗೊಳಿಸಿ, ವಸಿಷ್ಠನ ನೂರು ಮಂದಿ ಮಕ್ಕಳನ್ನೂ ಕೊಲ್ಲಿಸಿದನು. ಮತ್ತೊಮ್ಮೆ ಅರಣ್ಯದಲ್ಲಿ ಬ್ರಾಹ್ಮಣ

ದಂಪತಿಗಳು ಕ್ರೀಡಾಸಕ್ತರಾಗಿದ್ದುದನ್ನು ಕಂಡು, ಆ ದಂಪತಿಗಳಲ್ಲಿ ಬ್ರಾಹ್ಮಣನನ್ನು ತಿಂದ ಕಾರಣ, ಆತನ ಪತ್ನಿಯಾದ ಆಂಗೀರಸಿ ದುಃಖಭರಿತೆಯಾಗಿ "ಸ್ತ್ರೀ ಸಂಪರ್ಕಮಾಡಿದೆಯಾದರೆ ಅದೇ ನಿನಗೆ ಕೊನೆಗಾಲ" ಎಂಬುದಾಗಿ ಶಾಪವಿತ್ತಳು. ಅಲ್ಲಿಗೆ ಇವನ ಶಾಪದ ೧೨ ವರ್ಷಗಳ ಅವಧಿ ಮುಗಿಯಲಾಗಿ, ಸೌದಾಸನು ತನ್ನ ಪೂರ್ವರೂಪವನ್ನು ಹೊಂದಿ, ಸಂತಾನಾರ್ಥವಾಗಿ ವಸಿಷ್ಠನ ಅನುಗ್ರಹದಿಂದ ಅಶ್ಮಕನೆಂಬ ಪುತ್ರನನ್ನು ಪಡೆದನು ಗೌತಮ ಮುನಿಯ ಶಿಷ್ಯನಾದ ಉದಂಕನು ಗುರುದಕ್ಷಿಣಾರ್ಥವಾಗಿ ಕಲ್ಮಾಷಪಾದನಲ್ಲಿಗೆ ಹೋಗಿ ಆತನ ರಾಣಿಯಾದ ಮದಯಂತಿಯ ಕುಂಡಲಗಳನ್ನು ಬೇಡಿ ತಂದನು [ರಾಮಾ.-೭, ೬೫. ವಿಷ್ಣು -೪, ೪. ಭಾಗ -೯, ೯ ಹರಿ -೧, ೧೫ ಭಾರ.-ಆದಿ ೧೭೮, ೧೯೨, ೧೯೮. ಅಶ್ವ. ೫೬].

**ಕವಿ**—(i) ಸ್ವಾಯಂಭುವಮನು ವಂಶದಲ್ಲಿ ಜನಿಸಿದ ಭೃಗುಮುನಿಯಿಂದ ಖ್ಯಾತಿಯೆಂಬಾಕೆಯಲ್ಲಿ ಜನಿಸಿದ ಮಕ್ಕಳಲ್ಲಿ ಮೂರನೆಯವನು. ಈತನ ಮಗನು ಶುಕ್ರಾಚಾರ್ಯನು [ಭಾರ -ಆದಿ ೬೭ ಭಾಗ -೪, ೧]

(ii) ಪ್ರಿಯವ್ರತರಾಜನಿಂದ ಬರ್ಹಿಷ್ಮತಿಯೆಂಬಾಕೆಯಲ್ಲಿ ಜನಿಸಿದ ಹತ್ತು ಮಂದಿ ಮಕ್ಕಳಲ್ಲಿ ಕಡೆಯವನು ಈತನು ಬಾಲ್ಯದಿಂದಲೂ ವಿರಕ್ತನಾಗಿದ್ದನು [ಭಾಗ.-೫, ೧]

(iii) ವೈವಸ್ವತಮನುವಿನ ಮಕ್ಕಳಲ್ಲಿ ಒಬ್ಬನು ಮಹಾಜ್ಞಾನಸಂಪನ್ನನು [ಭಾಗ -೯, ೨ ]

(iv) ವೈವಸ್ವತಮನ್ವಂತರದಲ್ಲಿ ಬ್ರಹ್ಮಪುತ್ರನಾದ ವಾರುಣಿಯ ನಾಮಾಂತರ [ಭಾರ -ಅನು. ೮೫].

(v) ಕೌಶಿಕಮುನಿಯ ಏಳು ಮಂದಿ ಮಕ್ಕಳಲ್ಲಿ ಒಬ್ಬನು **ನೋಡು**—ಪಿತೃವರ್ತಿ [ಮತ್ಸ್ಯ -೨೦, ೨೧]

**ಕವೇರ.**—ಒಬ್ಬ ಅರಸು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಕಾವೇರಿಯನ್ನು ಮಗಳಾಗಿ ಪಡೆದು, ಆಕೆಯನ್ನು ಅಗಸ್ತ್ಯಮುನಿಗೆ ಕೊಟ್ಟು ಮದುವೆಮಾಡಿ, ಆಕೆ ನದೀ ರೂಪವನ್ನು ತಳೆದ ಬಳಿಕ ಆಕೆಯ ಮೂಲಕ ಮುಕ್ತಿಯನ್ನು ಪಡೆದನು. **ನೋಡು**—ಅಗಸ್ತ್ಯ-ಕಾವೇರಿ

**ಕಶ್ಯಪ.**—(i) ಒಬ್ಬ ಮಹರ್ಷಿ. ಬ್ರಹ್ಮನ ಮಗನಾದ ಮರೀಚಿಮಹರ್ಷಿಯಿಂದ ಕರ್ದಮಪುತ್ರಿಯಾದ ಕಲೆಯಲ್ಲಿ ಜನಿಸಿದವನು [ಭಾರ.-ಆದಿ. ೬೩. ಭಾಗ-.೪, ೧]. ಈತನು ಅದಿತಿ, ದಿತಿ, ದನು, ಕಲಾ, ದನಾಯು, ಸಿಂಹಿಕಾ, ಕ್ರೋಧಾ, ಪ್ರಾಧಾ, ವಿಶ್ವಾ (ಈ ವಿಶ್ವೆ ಎಂಬವಳಿಗೆ ಇಲೆಯೆಂಬ ನಾಮಾಂತರವುಂಟು) ವಿನತಾ, ಕಪಿಲಾ, ಮುನಿ, ಕದ್ರು ಎಂಬ ದಕ್ಷಪುತ್ರಿಯರಾದ ಹದಿಮೂರು ಮಂದಿಯನ್ನು ಮದುವೆ

ಯಾಗಿ, ಪುತ್ರಕಾಮೇಷ್ಟಿಯನ್ನು ಮಾಡಿ, ಅನೇಕ ಮಂದಿ ಮಕ್ಕಳನ್ನು ಪಡೆದನು. ಆದಿತ್ಯ, ದೈತ್ಯ, ದಾನವ, ಗರುಡ, ಗಂಧರ್ವ, ನಾಗ, ಪಶು, ಪಕ್ಷಿ, ವೃಕ್ಷ, ಗುಲ್ಮ ಲತಾದಿಗಳು ಈತನ ಸಂತಾನಗಳು [ಭಾರ.-ಆದಿ. ೩೧, ೬೬]. ಈತನ ಹೆಂಡತಿಯರು ೧೭ ಮಂದಿ [ಭಾಗ -೬, ೬]. ವಿಷ್ಣು ಈ ಅದಿತಿ ಕಶ್ಯಪರಲ್ಲಿ ವಾಮನರೂಪದಿಂದ ಅವತರಿಸಿದನು [ಭಾರ.-ಸಭಾ ೪೭ ವನ ೨೭೩. ಭಾಗ -೮, ೧೩, ಪದ್ಮ.-೪, ೧,೬-೨೬೭]. (ರಾಮಾವತಾರದಲ್ಲಿ ಅದಿತಿ-ಕಶ್ಯಪರು ಕೌಸಲ್ಯಾ-ದಶರಥರಾಗಿಯೂ, ಕೃಷ್ಣಾವತಾರದಲ್ಲಿ ನಂದ-ಯಶೋದೆ, ದೇವಕೀ-ವಸುದೇವರಾಗಿಯೂ ಜನಿಸಿದರು). ಈತನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಆತನ ಮೂಲಕ ವಿಷಹರ ವಿದ್ಯೆಯನ್ನು ಕಲಿತನು [ಭಾರ -ಆದಿ. ೨೦] ಯಜ್ಞಾರ್ಥವಾಗಿ ವರುಣನ ಗೋವುಗಳನ್ನು ಎರವು ತಂದು, ಹಿಂದಕ್ಕೆ ಕೊಡಲೊಲ್ಲದೆ ಭೂಮಿಯಲ್ಲಿ ಜನಿಸುವಂತೆ ಶಾಪ ಪಡೆದನು. ಶಮೀಕಮುನಿ ಪುತ್ರನಾದ ಶೃಂಗಿಯ ಶಾಪದಿಂದ ಹೆದರಿದ ಪರೀಕ್ಷಿತನು ಸಮುದ್ರಮಧ್ಯದಲ್ಲಿ ವಾಸಮಾಡುತ್ತಿದ್ದಾಗ, ತಕ್ಷಕನು ಪರೀಕ್ಷಿತನನ್ನು ಕಚ್ಚಿ ಕೊಲ್ಲುವುದಕ್ಕಾಗಿ ಬ್ರಾಹ್ಮಣರೂಪದಿಂದ ಹೋಗುತ್ತಿದ್ದನು. ಪರೀಕ್ಷಿತನನ್ನು ಬದುಕಿಸುವುದಕ್ಕಾಗಿ ಕಶ್ಯಪನೂ ಹೊರಟನು. ನಡುದಾರಿಯಲ್ಲಿ ಇಬ್ಬರೂ ಸಂಧಿಸಿ, ಪರಸ್ಪರ ಪರಿಚಯವನ್ನು ಮಾಡಿಕೊಂಡರು ಆಗ ಕಶ್ಯಪನು '' ಈ ದಿನ ತಕ್ಷಕನು ಪರೀಕ್ಷಿತನನ್ನು ಕಚ್ಚಿ ಕೊಲ್ಲುವನಂತೆ ನಾನು ನನ್ನ ಮಂತ್ರಬಲದಿಂದ ಪರೀಕ್ಷಿತನನ್ನು ಬದುಕಿಸುವುದಕ್ಕಾಗಿ ಹೊರಟಿರುವೆನು '' ಎಂದನು. ಆಗ ಬ್ರಾಹ್ಮಣರೂಪದಿಂದ ತಕ್ಷಕನು '' ನಾನೇ ತಕ್ಷಕನು ನನ್ನ ವಿಷವೇಗವನ್ನು ಶಮನಗೊಳಿಸುವುದು ನಿನಗೆ ಸಾಧ್ಯವಿಲ್ಲ ಸುಮ್ಮನೆ ಹಿಂದಿರುಗು '' ಎಂದನು ಬಹಳ ಕಾಲದವರೆಗೂ ಇಬ್ಬರಿಗೂ ವಾಗ್ವಾದ ನಡೆದು, ತಕ್ಷಕನು ತನ್ನ ವಿಷಜ್ವಾಲೆಯಿಂದ ಒಂದು ಮರವನ್ನೂ ಅದರ ಮೇಲಿದ್ದ ಬ್ರಾಹ್ಮಣನನ್ನೂ ಸುಟ್ಟು ಬೂದಿಮಾಡಿ, ಕಶ್ಯಪನನ್ನು ಕುರಿತು '' ನಿನ್ನ ಮಂತ್ರಬಲದಿಂದ ಇವನನ್ನು ಬದುಕಿಸು, ನೋಡುವ '' ಎನಲಾಗಿ ಕಶ್ಯಪನು ಆ ಮರವನ್ನೂ ಬ್ರಾಹ್ಮಣನನ್ನೂ ಬದುಕಿಸಿದನು ಆಗ ತಕ್ಷಕನು ಕಶ್ಯಪನನ್ನು ಬಗೆಬಗೆಯಿಂದ ಕೊಂಡಾಡಿ, ಹೇಗೋ ಆತನನ್ನು ಹಿಂದಕ್ಕೆ ಕಳುಹಿಸಿದನು [ಭಾರ.-ಆದಿ ೪೨] ಒಮ್ಮೆ ಪರಶುರಾಮನಿಂದ ಅಶ್ವಮೇಧಯಾಗವನ್ನು ಮಾಡಿಸಿ, ದಕ್ಷಿಣೆಯ ಬದಲಾಗಿ ಭೂಮಂಡಲವನ್ನು ಪ್ರತಿಗ್ರಹಮಾಡಿದನು. ಈ ಕಾರಣದಿಂದಲೇ ಭೂಮಿಗೆ '' ಕಾಶ್ಯಪಿ '' ಎಂಬ ಹೆಸರು [ಭಾರ -ಶಾಂತಿ ೪೮]. ಐಲನಿಗೂ ಕಶ್ಯಪನಿಗೂ ಸಂವಾದ [ಶಾಂತಿ. ೭೩]. ನಾರಾಯಣನ ಮಹಿಮೆಯ ವಿಚಾರವಾಗಿ ಗರುಡನಿಗೂ ಕಶ್ಯಪನಿಗೂ ಸಂವಾದ [ಅನು. ೪೦]. ಕಶ್ಯಪ ಸಿದ್ಧರ ಸಂವಾದ [ಅಶ್ವ. ೧೭]. ಒಮ್ಮೆ ಈತನೇ ಭೂ ರೂಪವನ್ನು ಧರಿಸಿ, ಸಕಲ ಪ್ರಾಣಿಗಳನ್ನೂ ಧರಿಸಿದ್ದನು [ಅನು,

೧೫೯]. ಕಶ್ಯಪಶಬ್ದ ನಿರ್ವಚನ [ಅನು. ೧೪೨]. ಈತನು ಗೋತ್ರಪ್ರವರ್ತಕರಾದ ಮಹರ್ಷಿಗಳಲ್ಲಿ ಮೊದಲನೆಯವನು. ಈತನು ಮಂತ್ರದ್ರಷ್ಟನು. ಸಾಮಾನ್ಯವಾಗಿ ಅಜ್ಞಾತಗೋತ್ರರು ಕಶ್ಯಪನನ್ನೇ ತಮ್ಮ ಮೂಲಪುರುಷನನ್ನಾಗಿಟ್ಟುಕೊಂಡು ತಮ್ಮ ಗೋತ್ರವನ್ನು ಕಾಶ್ಯಪಗೋತ್ರವೆಂದು ಹೇಳಬಹುದೆಂದು ಧರ್ಮಶಾಸ್ತ್ರಗಳು ಸಾರುತ್ತವೆ [ಲಿಂಗ.-೬೩]. ಈತನ ವಂಶಮಾಲಿಕೆ* [ಮತ್ಸ್ಯ-೧೪೪, ೧೯೮ ಮಾರ್ಕ.-೧೦೧]. ಇಷ್ಟು ಮಾತ್ರವೇ ಅಲ್ಲದೆ ವೈಶ್ವಾನರನ ಕುವರಿಯಾದ ಕಾಲಾ, ಪುಲೋಮಾ, ಎಂಬವರೂ ಕಶ್ಯಪನ ಮಡದಿಯರು ಇವರಲ್ಲಿ ಕಾಲಾ ಎಂಬವಳು ಕಾಲಕೇಯರೆಂಬ ರಾಕ್ಷಸರನ್ನೂ, ಪುಲೋಮಾ ಎಂಬವಳು ಪೌಲೋಮರೆಂಬ ರಾಕ್ಷಸನನ್ನೂ ಹೆತ್ತರು. ಪರ್ವತನೆಂಬ ದೇವರ್ಷಿಯೂ, ವಿಭಂಡಕನೆಂಬ ಬ್ರಹ್ಮರ್ಷಿಯೂ ಈತನ ಮಕ್ಕಳು. ಇನ್ನೂ ಅನೇಕ ಮಂದಿ ಮಕ್ಕಳೂ ಇದ್ದಂತೆ ತಿಳಿಯುಬರುತ್ತದೆ. ಈ ಪಟ್ಟಿ ಭಾರತ, ಭಾಗವತ, ವಿಷ್ಣುಪುರಾಣಗಳನ್ನು ಸಮನ್ವಯಮಾಡಿ ಬರೆದಿದೆ.

**ಕಹೋಳ.**—ಒಬ್ಬ ಮಹರ್ಷಿ ಉದ್ದಾಲಕಮಹರ್ಷಿಯಲ್ಲಿ ವಿದ್ಯಾಭ್ಯಾಸ ಮಾಡಿ, ಆತನ ಮಗಳಾದ ಸುಜಾತೆಯನ್ನು ಮದುವೆಯಾಗಿ, ಅಷ್ಟಾವಕ್ರಮಹರ್ಷಿಯನ್ನು ಪಡೆದನು ನೋಡು—ಉದ್ದಾಲಕ, ಅಷ್ಟಾವಕ್ರ. ಈತನು ಜನಕರಾಜನ ಆಸ್ಥಾನಕ್ಕೆ ಹೋಗಿ ವರುಣಪುತ್ರನಾದ ವಂದಿ(ಬಂದಿ)ಯೊಡನೆ ವಾದಮಾಡಿ ಸೋತು, ಮರಳಿ ಅಷ್ಟಾವಕ್ರನಿಂದ ಬಿಡುಗಡೆಯನ್ನು ಹೊಂದಿದನು [ಭಾರ.-ವನ. ೧೩೪, ೧೩೬].

---

* ಕಶ್ಯಪನ ಸಂತತಿಯ ಪಟ್ಟಿ —

| | | | |
|---|---|---|---|
| ೧ | ದಿತಿ | ... | ದೈತ್ಯರು |
| ೨. | ಅದಿತಿ | .. | ಆದಿತ್ಯರು (ದೇವತೆಗಳು) |
| ೩. | ದನು | ... | ದಾನವರು |
| ೪ | ದನಾಯು | ... | ಸಿದ್ಧರು |
| ೫ | ಪ್ರಾಧಾ | ... | ಗಂಧರ್ವರು |
| ೬ | ಮುನಿ | ... | ಅಪ್ಸರಸಿಯರು |
| ೭ | ಸುರಸಾ | ... | ಯಕ್ಷರು |
| ೮ | ಇಲಾ | .. | ವೃಕ್ಷ, ಲತಾ, ತೃಣಜಾತಿಗಳು |
| ೯ | ಕ್ರೋಧವಶಾ | | ಮಾಂಸಾಹಾರಿಗಳಾದ ದುಷ್ಟ ಮೃಗಜಾತಿಗಳು |
| ೧೦ | ತಾಮ್ರಾ | ... | ಅಶ್ವ, ಅಶ್ವತರ, ಗರ್ದಭ, ಶ್ಯೇನ, ಗೃಧ್ರಾದಿಗಳು |
| ೧೧ | ಕಪಿಲಾ (ಸುರಭಿ) | . | ಗೋವುಗಳು |
| ೧೨. | ವಿನತಾ | ... | ಅರುಣ, ಗರುಡ, ಇತ್ಯಾದಿ |
| ೧೩ | ಕದ್ರೂ | ... | ಸರ್ಪಜಾತಿಗಳು |

**ಕಾಕಾಸುರ.**—ಶ್ರೀರಾಮನು ಸೀತಾ ಲಕ್ಷ್ಮಣನೊಂದಿಗೆ ಅರಣ್ಯದಲ್ಲಿ ವಾಸ ಮಾಡುತ್ತಿದ್ದಾಗ ಒಮ್ಮೆ ರಾಮನು ಸೀತೆಯ ತೊಡೆಯಮೇಲೆ ಮಲಗಿ ನಿದ್ರಿಸುತ್ತಿದ್ದನು. ಆಗ ಕಾಕಾಸುರನು ಸೀತೆಯ ಸೌಂದರ್ಯದಿಂದ ಮೋಹಗೊಂಡು ಕಾಗೆಯ ರೂಪದಿಂದ ಬಂದು ಸೀತೆಯ ಸೆರಗನ್ನು ಎಳೆದು ಪೀಡಿಸಿದನು ಕೂಡಲೇ ಎಚ್ಚತ್ತ ರಾಮ ಸಮಾಚಾರವನ್ನೆಲ್ಲ ಸೀತೆಯ ಮೂಲಕ ತಿಳಿದು ಕುಪಿತನಾಗಿ, ಆ ಕಾಗೆಯ ಮೇಲೆ ಅಸ್ತ್ರವನ್ನೆಸೆಯಲಾಗಿ ಕಾಗೆ ಭಯದಿಂದ ಓಡತೊಡಗಿತು ಅಸ್ತ್ರವೂ ಹಿಂಬಾಲಿಸಿತು ಕಡೆಗೆ ಎಲ್ಲೆಲ್ಲಿಯೂ ಗತಿಗಾಣದೆ ಕಾಗೆ ರಾಮನನ್ನೇ ಮರೆಹೊಕ್ಕಿತು. ಆಗ ಕರುಣಾಳುನಾದ ರಾಮನು '' ನನ್ನ ಅಸ್ತ್ರ ವ್ಯರ್ಥವಾಗಲಾರದು ಇದಕ್ಕೆಲ್ಲಾ ನಿನ್ನ ಯಾವುದಾದರೊಂದು ಅಂಗವನ್ನು ಬಲಿಕೊಟ್ಟು ಹೋಗು '' ಎನಲು, ಕಾಗೆ ತನ್ನ ಒಂದು ಕಣ್ಣನ್ನು ಕೊಟ್ಟು ಪ್ರಾಣವನ್ನುಳಿಸಿಕೊಂಡು, ರಾಮನನ್ನು ಬೀಳ್ಕೊಂಡು ಹೊರಟಿತು [ರಾಮಾ.-ಸುಂ, ೩೮]

**ಕಾಕೀ** —ದಕ್ಷಪುತ್ರಿಯಾದ ತಾಮ್ರೆಯೆಂಬವಳಲ್ಲಿ ಕಶ್ಯಪನಿಂದ ಜನಿಸಿದವಳು. ಗೂಬೆಯ ಜಾತಿಯನ್ನು ಸೃಷ್ಟಿಸಿದವಳು [ಭಾರ -ಆ ೬೭].

**ಕಾಕ್ಷೀವನ್ತ** —ಶಿಬಿಚಕ್ರವರ್ತಿಯ ಮಗ ಶಿಬಿಚಕ್ರವರ್ತಿಯ ಹೆಂಡತಿಯ ದಾಸಿಯಲ್ಲಿ ದೀರ್ಘತಮನೆಂಬ ಋಷಿಯಿಂದ ಜನಿಸಿದವನು. ನೋಡು—ದೀರ್ಘತಮ, ಕಕ್ಷೀವನ್ತ [ಭಾರ -ಆ ೧೧೩. ಸ ೪].

**ಕಾಞ್ಚೀ.**—ಒಂದು ಪಟ್ಟಣ. ಚತುರ್ಮುಖನು ವಿಷ್ಣು ಪ್ರೀತಿಗಾಗಿ ಒಂದು ಯಜ್ಞವನ್ನು ಆರಂಭಿಸಿದನು ಆಗ ದೇವಶಿಲ್ಪಿಯಾದ ವಿಶ್ವಕರ್ಮನು ಯಜ್ಞಾರ್ಥವಾಗಿ ನೆರೆಯತಕ್ಕವರ ವಸತಿಗಾಗಿ ಒಂದು ಪಟ್ಟಣವನ್ನು ನಿರ್ಮಿಸಿದನು. ಇದೇ ಕಾಂಚೀಪುರ [ವಾಮನ -೧೨ ಗರುಡ -೮೧ ಪದ್ಮ-ಸ್ವರ್ಗ. ೩೦, ೫೭. ದೇ.-ಭಾ.-೭, ೩೮] ಈಗ ಈ ಪಟ್ಟಣ ಶಿವಕಂಚಿ (Big Conjeevaram) ವಿಷ್ಣುಕಂಚಿ (Little Conjeevaram) ಎಂಬುದಾಗಿ ಎರಡು ಭಾಗವಾಗಿದೆ. ಶಿವಕಂಚಿಯಲ್ಲಿ ಏಕಾಮ್ರೇಶರ ದೇವಸ್ಥಾನವೂ, ೧೮ ಶಕ್ತಿಪೀಠಗಳಲ್ಲಿ ಒಂದು—ಎಂಬುದಾಗಿ ಪ್ರಖ್ಯಾತಿವೆತ್ತ ಕಾಮಾಕ್ಷೀದೇವಿಯ ಮಂದಿರವೂ ಇವೆ ವಿಷ್ಣುಕಂಚಿಯಲ್ಲಿ ಶ್ರೀ ವರದರಾಜಸ್ವಾಮಿ ದೇವಾಲಯವಿದೆ ಮೋಕ್ಷದಾಯಕಗಳೆಂದು ಸ್ಮೃತಿಪುರಾಣಾದಿಗಳಲ್ಲಿ ಪ್ರಸಿದ್ಧಿ ಹೊಂದಿದ ಏಳು ಪಟ್ಟಣಗಳಲ್ಲಿ ಇದೂ ಒಂದು. ವಿಶಿಷ್ಟಾದ್ವೈತಮತ ಪ್ರಚಾರಕರಾದ ಶ್ರೀರಾಮಾನುಜಾಚಾರ್ಯರು ಇಲ್ಲಿಯೇ ಅವತಾರಮಾಡಿದರು. ಇದು ಬಹಳ ಕಾಲದವರೆಗೆ ಚೋಳರಾಜರ ರಾಜಧಾನಿಯಾಗಿದ್ದಿತು. ಕಾಮಕೋಟಿ ಪೀಠವೂ ಬಹಳ ಕಾಲದವರೆಗೂ ಇಲ್ಲಿಯೇ ಇದ್ದು ಕಾಲಾಂತರದಲ್ಲಿ ತಂಜಾ

ವೂರು ಜಿಲ್ಲೆಯೊಳಗಣ ಕುಂಭಕೋಣಕ್ಕೆ ಹೋಯಿತು. ಕಾಂಚೀನಗರ ಮದ್ರಾಸು ಪಟ್ಟಣಕ್ಕೆ ೪೦ ಮೈಲುಗಳ ದೂರದಲ್ಲಿದ್ದು, ಚೆಂಗಲ್ಪಟ್ಟು ಜಿಲ್ಲೆಗೆ ಸೇರಿದೆ

**ಕನ್ಯಾಕುಬ್ಜ.**—ಒಂದು ದೇಶ ಈಗ ಕನೂಜ್ (Kanuj) ಎಂಬುದಾಗಿ ಕರೆಯುತ್ತಾರೆ. ನೋಡು—ಕನ್ಯಾಕುಬ್ಜ, ಕುಶನಾಭ. ಈ ಪಟ್ಟಣ ರೋಹಿಲ್ಲಖಂಡದಲ್ಲಿ ಗಂಗಾನದಿ ಮತ್ತು ಇಕ್ಷುಮತೀ ನದಿಗಳ ಸಂಗಮದಲ್ಲಿದೆ. ಇದು ವಿಶ್ವಾಮಿತ್ರನ ತಂದೆಯಾದ ಗಾಧಿರಾಜನ ಮುಖ್ಯಪಟ್ಟಣವಾಗಿದ್ದಿತು [ಭಾರ.-ಆ ೧೯೧]

**ಕಾಮ.**—ಮನ್ಮಥ ಹೆಂಡತಿ ರತಿ [ಭಾರ -ಆ ೬೭] ಕಾಮಪ್ರಶಂಸೆ [ಶಾಂತಿ ೧೬೫]. ಕಾಮನನ್ನು ವೃಕ್ಷದಹಾಗೆ ನಿರೂಪಣ [ಶಾಂತಿ ೨೬೦] ಪರಮೇಶ್ವರನ ಹಣೆಗಣ್ಣಿನಿಂದ ಬೂದಿಯಾದನು

**ಕಾಮಧೇನು.**—ಅಮೃತಮಥನ ಕಾಲದಲ್ಲಿ ಕ್ಷೀರಸಮುದ್ರದಿಂದ ಹುಟ್ಟಿದುದು ಇಂದ್ರನ ಆಕಳು ಬೇಡಿದುದನ್ನೆಲ್ಲ ಕೊಡುವ ಸಾಮರ್ಥ್ಯವುಳ್ಳದ್ದು ವಸಿಷ್ಠನ ಹೋಮಧೇನುವೆನಿಸಿದ ನಂದಿನೀ ಧೇನುವಿಗೂ ಈ ಹೆಸರು ಸಲ್ಲುತ್ತದೆ. ವಿಶ್ವಾಮಿತ್ರನು ಇದನ್ನು ಒಮ್ಮೆ ಅಪಹರಿಸಿದ್ದನು [ಭಾರ -ಆ ೧೯೧].

**ಕಾಮನ್ದ.**—ಒಬ್ಬ ಮಹರ್ಷಿ ನೀತಿಶಾಸ್ತ್ರವಿಶಾರದನು ಈತನು ಅಂಗರಿಷ್ಠನೆಂಬ ರಾಜನಿಗೆ ಅನೇಕ ನೀತಿರಹಸ್ಯಗಳನ್ನು ಬೋಧಿಸಿದನು. ಈತನ ನೀತಿಶಾಸ್ತ್ರ ಲೋಕದಲ್ಲಿ ಈಗಲೂ ಪ್ರಖ್ಯಾತಿಗೊಂಡಿದೆ [ಶಾಂತಿ ೧೨೩]

**ಕಾಮ್ಪಿಲ್ಯ**—ಒಂದು ಪಟ್ಟಣ ದಕ್ಷಿಣ ಪಾಂಚಾಲದೇಶದ ಅರಸನಾಗಿದ್ದ ದ್ರುಪದನ ರಾಜಧಾನಿ ವಾಯುವ್ಯಪ್ರಾಂತಗಳಿಗೆ ಸೇರಿದ ಫರೂಕಾಬಾದ್ (Farrukabad) ಜಿಲ್ಲೆಯಲ್ಲಿ ಫಟೇಗರ (Fategarh) ವೆಂಬ ಸ್ಥಳಕ್ಕೆ ಈಶಾನ್ಯದಿಕ್ಕಿನಲ್ಲಿ ೨೮ ಮೈಲುಗಳ ದೂರದಲ್ಲಿದೆ [ಆದಿ ೧೪೮]

**ಕಾಮ್ಭೋಜ**—ಒಂದು ದೇಶ ನಿಷಧಪರ್ವತಕ್ಕೆ ದಕ್ಷಿಣದಲ್ಲಿದೆ [ಭೀಷ್ಮ ೯]. ಅಶ್ವಗಳಿಗೆ ಉತ್ಪತ್ತಿಸ್ಥಾನವಾದುದರಿಂದ ಅಶ್ವಸ್ಥಾನವೆಂದು (Afghanisthan) ಕರೆಯಲ್ಪಡುವ ದೇಶ ರಾಜಸೂಯ ಯಾಗ ಸಮಯದಲ್ಲಿ ಅರ್ಜುನನು ದಿಗ್ವಿಜಯಕ್ಕೆ ಹೊರಟಾಗ ಇಲ್ಲಿಗೆ ಹೋಗಿದ್ದನು [ಸಭಾ. ೨೮] ಇದರ ಅರಸನಾಗಿದ್ದ ಸುದಕ್ಷಿಣನನ್ನು ಭಾರತಯುದ್ಧದಲ್ಲಿ ಅರ್ಜುನನು ಕೊಂದನು [ದ್ರೋಣ. ೯೨].

**ಕಾಮ್ಯಕ.**—ಒಂದು ವನ. ಖಾಂಡವಪ್ರಸ್ಥಕ್ಕೆ ಪಶ್ಚಿಮ ದಿಕ್ಕಿನಲ್ಲಿ ಮರುಭೂಮಿಯಲ್ಲಿರುತ್ತದೆ. ಪಾಂಡವರು ವನವಾಸಕ್ಕೆ ಹೊರಟಾಗ ಇಲ್ಲಿ ಕೆಲಕಾಲ ವಾಸವಾಗಿದ್ದರು [ಭಾರ.-ವನ. ೫, ೨೩, ೩೬, ೯೦, ೧೮೪]

**ಕಾಯವ್ಯ.**—ಕಳ್ಳರ ಗುಂಪಿಗೆ ಅಧಿಪತಿಯಾದ ಒಬ್ಬ ಬೇಡ ಕಾಪಚ್ಯನೆಂಬುದು ಇವನ ನಾಮಾಂತರ. ಇವನು ಮಹಾಶೂರನೂ, ಧಾರ್ಮಿಕನೂ ಆಗಿದ್ದನು. ಒಮ್ಮೆ

ಇವನ ಸಂಗಡದವರೆಲ್ಲರೂ ಒಟ್ಟುಗೂಡಿ "ನೀನು ಧರ್ಮರಹಸ್ಯಗಳನ್ನು ಚೆನ್ನಾಗಿ ಬಲ್ಲವನು. ನಾವು ಹೇಗೆ ನಡೆದುಕೊಂಡರೆ ಸದ್ಗತಿ ಬಂದೀತು ? ಅದನ್ನು ವಿವರಿಸು" ಎಂದು ಬೇಡಿಕೊಳ್ಳಲಾಗಿ, ಕಾಯವ್ಯನು "ನೀವು ಎಂದಿಗೂ ಬ್ರಹ್ಮದ್ವೇಷವನ್ನು ಕಟ್ಟಿಕೊಳ್ಳಬಾರದು ಹುಡುಗರನ್ನೂ, ಹೆಂಗುಸರನ್ನೂ, ಹೆದರಿದವರನ್ನೂ, ಓಡಿಹೋಗತಕ್ಕವರನ್ನೂ, ನಿರಾಯುಧರನ್ನೂ ಎಂದಿಗೂ ಹಿಂಸಿಸಬೇಡಿರಿ. ಬ್ರಹ್ಮದ್ವೇಷಿಗಳನ್ನು ಯುದ್ಧದಲ್ಲಿ ಕೊಂದು, ಶಾಂತಿಸ್ಥಾಪಕರಾಗಿರಿ. ಇಂತು ನಡೆದರೆ ನಿಮಗೆ ಸದ್ಗತಿ ದೊರೆಯುವುದು" ಎಂಬುದಾಗಿ ವಿವರಿಸಿದನು [ಭಾರ.-ಶಾಂತಿ. ೧೩೫].

**ಕಾರೂಷ.**—ಒಂದು ದೇಶ ಮನುಪುತ್ರನಾದ ಕಾರೂಷನೆಂಬ ಹೆಸರಿನ ಒಬ್ಬ ಅರಸು. ಬಿಹಾರ್ ಅಧಿಪತ್ಯದಲ್ಲಿ ಷಹಾಬಾದ್ ಜಿಲ್ಲೆಯ ಪೂರ್ವಭಾಗಕ್ಕೆ ಈ ಹೆಸರು ಸಲ್ಲುತ್ತದೆ [ಆದಿ ೬೯] ಈ ದೇಶದ ಅರಸನಾದ ವೃದ್ಧಶರ್ಮರಾಜನು ವಸುದೇವನ ತಂಗಿಯಾದ ಶ್ರುತದೇವಿಯನ್ನು ಮದುವೆಯಾಗಿದ್ದನು ದಂತವಕ್ತ್ರನು ಇವರ ಮಗ [ಭಾರ.-ಆ. ೬೯. ಭಾಗ.-೯, ೨೪]

**ಕಾರ್ತವೀರ್ಯ** —ಒಬ್ಬ ಅರಸು ಚಂದ್ರವಂಶದ ಕೃತವೀರ್ಯರಾಜನ ಮಗನು. ಇವನಿಗೂ ಅರ್ಜುನನೆಂಬ ಹೆಸರು ಸಲ್ಲುತ್ತದೆ [ಭಾರ -ಸಭಾ. ೮]. ಕೃತವೀರ್ಯನ ಮಗನಾದ ಅರ್ಜುನನಾದುದರಿಂದ ಕಾರ್ತವೀರ್ಯಾರ್ಜುನನೆಂಬ ಹೆಸರು ರೂಢಿಯಲ್ಲಿದೆ ಈತನು ವಿಂಧ್ಯಪರ್ವತ ಪ್ರಾಂತದಲ್ಲಿರುವ ಮಾಹಿಷ್ಮತೀ ನಗರಿಗೆ ಅರಸನಾಗಿದ್ದು ಮಹಾ ಪರಾಕ್ರಮಶಾಲಿಯೆನಿಸಿಕೊಂಡಿದ್ದನು ತನ್ನ ಕುಲಗುರುವಾದ ಗರ್ಗಮುನಿಯ ಉಪದೇಶದಿಂದ ಬಹಳ ಕಾಲದವರೆಗೆ ದತ್ತಾತ್ರೇಯನನ್ನು ಉಪಾಸನೆ ಮಾಡಿ, ಆತನ ಮೂಲಕ ಅಜೇಯತ್ವವನ್ನೂ ಯುದ್ಧಸಮಯದಲ್ಲಿ ಮಾತ್ರ ಸಾವಿರ ತೋಳುಗಳನ್ನೂ ಪಡೆದನು [ಭಾರ -ಸಭಾ ೪೮ ಅನು ೨೫೭] ಒಮ್ಮೆ ಅಗ್ನಿ ಈತನಲ್ಲಿಗೆ ಬಂದು ತನಗೆ ಆಹಾರವನ್ನು ಒದಗಿಸಬೇಕೆಂದು ಕೇಳಲಾಗಿ, ಕಾರ್ತವೀರ್ಯನು ಸುತ್ತಮುತ್ತಣ ಅರಣ್ಯವನ್ನು ಸುಟ್ಟು ಹೊಟ್ಟೆ ತುಂಬಿಸಿಕೊಳ್ಳುವಂತೆ ಹೇಳಿದನು ಅಗ್ನಿ ಅಂತೆಯೇ ಸುಡತೊಡಗಿದನು ಆ ಸಮಯದಲ್ಲಿ ವಸಿಷ್ಠನ ಪರ್ಣಶಾಲೆಯೂ ಸುಟ್ಟುಹೋಯಿತು ಇದನ್ನು ಕಂಡು ಕ್ರೋಧಭರಿತನಾದ ವಸಿಷ್ಠನು ಇಷ್ಟೊಂದು ಅನರ್ಥಕ್ಕೆಲ್ಲಾ ಕಾರ್ತವೀರ್ಯಾರ್ಜುನನೇ ಮೂಲವೆಂದರಿತು "ಪರಶುರಾಮನು ನಿನ್ನ ಸಾವಿರ ತೋಳುಗಳನ್ನೂ ಕತ್ತರಿಸುವನು" ಎಂಬುದಾಗಿ ಶಾಪವಿತ್ತನು [ಭಾರ.-ಶಾಂತಿ ೪೮] ಒಮ್ಮೆ ರಾವಣನು ಕೆಚ್ಚಿನಿಂದ ಇವನಲ್ಲಿಗೆ ಬಂದು, ಯುದ್ಧಮಾಡಿ ಸೋತನು. ಕಾರ್ತವೀರ್ಯನು ರಾವಣನನ್ನು ಬಂದಿಯಾಗಿರಿಸಿದನು. ಆಗ ರಾವಣನ ತಂದೆಯಾದ ಪುಲಸ್ತ್ಯನು ಕಾರ್ತವೀರ್ಯನನ್ನು ಬೇಡಿ, ಮಗನನ್ನು ಬಿಡಿಸಿಕೊಂಡು

ಹೋದನು [ಸಭಾ. ೯೬. ರಾಮಾ -ಉತ್ತರ. ೩೩] ಮತ್ತೊಮ್ಮೆ, ಕಾರ್ತವೀರ್ಯನು ಬೇಟೆಗೆ ಹೋಗಿದ್ದಾಗ ಜಮದಗ್ನಿಯ ಆಶ್ರಮವನ್ನು ಹೊಕ್ಕನು ಮುನಿ ರಾಜನನ್ನು ಪ್ರೀತಿ ಗೌರವಗಳಿಂದ ಬರಮಾಡಿಕೊಂಡು ಕಾರ್ತವೀರ್ಯನನ್ನೂ ಅವನ ಪರಿವಾರವನ್ನೂ ಔತಣದಿಂದ ತೃಪ್ತಿಗೊಳಿಸಿದನು ಜಮದಗ್ನಿಯಲ್ಲಿದ್ದ ಕಪಿಲೆಯ ಮಹಿಮೆ ಯಿಂದಲೇ ಇಷ್ಟೆಲ್ಲಾ ನಡೆಯಿತೆಂದು ತಿಳಿದ ಅರಸನು ಆ ಕಪಿಲೆಯನ್ನು ತನಗೆ ಕೊಡಬೇಕೆಂದು ಕೇಳಿದನು. ಮುನಿ ಸಮ್ಮತಿಸಲಿಲ್ಲ ಬಳಿಕ ರಾಜನು ಸೇನೆಯನ್ನು ಕಳುಹಿ ಮುನಿಯನ್ನು ಕೊಲ್ಲಿಸಿದನು ಆದರೆ ಕಪಿಲೆ ಮಾತ್ರ ದೊರೆಯ ಲಿಲ್ಲ. ಈ ಸಮಾಚಾರ ಜಮದಗ್ನಿ ಪುತ್ರನಾದ ಪರಶುರಾಮನಿಗೆ ತಿಳಿದುಬಂದಿತು ಕ್ರೋಧಭರಿತನಾದ ಪರಶುರಾಮನು ಕೂಡಲೇ ಮಾಹಿಷ್ಮತಿಗೆ ಹೋಗಿ ಕಾರ್ತ ವೀರ್ಯನ ಸಾವಿರ ತೋಳುಗಳನ್ನೂ ತರಿದು, ಅವನ ಸೇನೆಯನ್ನು ಧ್ವಂಸಗೊಳಿಸಿ, ಮಾಹಿಷ್ಮತಿಯನ್ನು ಸುಟ್ಟು ಹಾಳುಮಾಡಿದನು [ಭಾರ -ಸಭಾ ೪೯. ವನ ೧೧೭] ಇವನ ಕಥೆ [ಭಾಗ -೯, ೧೫. ಹರಿ.-೧, ೩೩ ದೇ ಭಾ.-೬, ೧೬, ೧೭. ವಾಯು -೯೪ ಮತ್ಸ್ಯ.-೪೩ ರಾಮಾ.-೭, ೩೧ ಮಾರ್ಕ -೧೬]. ದತ್ತಾತ್ರೇಯನೊಂದಿಗೆ ಸಂವಾದ [ಮಾರ್ಕ.-೧೭]

**ಕಾರ್ತಿಕೇಯ.**—ಪಾರ್ವತೀ ಪುತ್ರನಾದ ಕುಮಾರಸ್ವಾಮಿ. ಈತನು ಹುಟ್ಟಿದ ಕೂಡಲೇ ಕೃತ್ತಿಕಾ ನಕ್ಷತ್ರಾಭಿಮಾನಿದೇವತೆಗಳು ಆರು ಮಂದಿಯೂ ಈತನಿಗೆ ಸ್ತನ್ಯವನ್ನು ಕೊಡುವುದಕ್ಕೆ ಬಂದರು. ಆಗಳಾ ಕುಮಾರನು ಆರು ಮುಖಗಳಿಂದ ಕೂಡಿ ಆ ಆರು ಮಂದಿಯ ಸ್ತನ್ಯವನ್ನೂ ಪಾನಮಾಡಿದ ಕಾರಣ, ಕೃತ್ತಿಕಾ ನಕ್ಷ ತ್ರಾಭಿಮಾನಿದೇವತೆಗಳಿಗೆ ಅಭಿಮಾನಪುತ್ರನೆನಿಸಿಕೊಂಡ ಕಾರಣ ಈ ಹೆಸರು ಬಂದಿತು. ಈತನು ಷಣ್ಮುಖನಾಗುವುದಕ್ಕೂ ಇದೇ ಕಾರಣ [ಭಾರ -ವನ ೨೩೩. ವಿಷ್ಣು.-೧, ೧೫. ಸ್ಕಾ.-ಮಾಹೇ ೨೭, ೨೮]

**ಕಾರ್ಷ್ಣಿ.**—(i) ಅಭಿಮನ್ಯುವಿನ ಹೆಸರು. ಕೃಷ್ಣನೆಂಬ ಹೆಸರು ಅರ್ಜುನನಿಗೂ ಸಲ್ಲುತ್ತದೆಯಾಗಿ, ಕೃಷ್ಣನ ಮಗನು ಕಾರ್ಷ್ಣಿ ಎಂಬ ವ್ಯುತ್ಪತ್ತಿಯಿಂದ ಅಭಿ ಮನ್ಯುವಿಗೂ ಈ ಹೆಸರು [ಭೀ ೪೭].

(ii) ಕೃಷ್ಣನ ಮಗನಾದ ಪ್ರದ್ಯುಮ್ನನಿಗೂ ಸಲ್ಲುತ್ತದೆ [ಭಾಗ -೧೦, ೫೫].

**ಕಾಲ.**—(i) ಕ್ಷಣ, ಲವ, ನಿಮೇಷ ಮುಂತಾದ ಪರಿಮಾಣವುಳ್ಳದ್ದು. ಕಾಲ ಮಹಿಮೆ [ಆದಿ. ೧]. ಕಾಲನಿರ್ಣಯ [ಹರಿ -ಸಂಭವ ೪೩]. ಕಾಲವಿಭಾಗ [ವಿರಾ. ೫೨. ಭಾಗ.-೩, ೧೧. ಹರಿ.-೧, ೮ ಸ್ಕಾ -ನಾಗರ ೨೭೨, ೨೭೩] ಕಾಲ ಅರಸನ ರಾಜ್ಯಭಾರವನ್ನು ಅನುಸರಿಸಿರುತ್ತದೆ [ಶಾಂತಿ. ೬೯] ಕಾಲ ಶೀಘ್ರ ಗತಿಯುಳ್ಳುದು [ಶಾಂತಿ. ೧೭೪, ೨೮೩].

(ii) ಕಾಲಾಭಿಮಾನಿನಿಯಾದ ಮೃತ್ಯುದೇವತೆ. ಮೃತ್ಯುವಿಗೂ ಸರ್ಪಕ್ಕೂ ಸಂವಾದ [ಅನು. ೧].

**ಕಾಲಕಲಿ.**—ಒಬ್ಬ ರಾಕ್ಷಸ. ವಿರೋಚನನ ಮಗ ಬಲಿಚಕ್ರವರ್ತಿಯ ಅಣ್ಣ. ಇವನು ದೇವತೆಗಳಿಗೆ ಹೆದರಿ, ಗೋಕುಲದಲ್ಲಿ ಬೇಲದಮರದ ತೊಪದಿಂದ ಇದ್ದನು. ಆ ಮರದ ಹಣ್ಣುಗಳು ನಾರುತ್ತಿದ್ದುವು ಇದರ ನಾತದಿಂದ ಗೋಕುಲದ ಜನಗಳೂ ದನ ಕರುಗಳೂ ಪದೇ ಪದೇ ರೋಗದಿಂದ ನರಳುತ್ತಿರಲು, ನಂದಾದಿಗಳು ರೋಗನಿವಾರಣಾರ್ಥವಾಗಿ ಶಿವನನ್ನು ಮರೆ ಹೊಕ್ಕರು ಶಿವನು ಈ ಮರದ ಸಮಾಚಾರವನ್ನು ಶಂಕುಕರ್ಣನೆಂಬ ಪ್ರಮಥ ಪರಿವಾರದವನೊಬ್ಬನ ಮೂಲಕ ನಂದನಿಗೆ ತಿಳುಹಿದನು. ಬಳಿಕ ನಂದಗೋಪನು ಈ ಸಮಾಚಾರವನ್ನು ಬಲರಾಮ ಕೃಷ್ಣರಿಗೆ ತಿಳುಹಲಾಗಿ ಅವರು ಈ ಮರವನ್ನು ಕಡಿದುಹಾಕಿದರು [ಹರಿ.-೨, ೧೪].

**ಕಾಲಕವೃಕ್ಷೀಯ.**—ಒಬ್ಬ ಋಷಿ [ಸಭಾ. ೭] ಈತನು ಒಮ್ಮೆ ಒಂದು ಪಕ್ಷಿಯನ್ನು ಪಂಜರದಲ್ಲಿಟ್ಟುಕೊಂಡು, ಕೋಸಲದೇಶದ ಅರಸನಾದ ಕ್ಷೇಮದರ್ಶಿಯೆಂಬ ಅರಸನಲ್ಲಿಗೆ ಬಂದು "ಅಯ್ಯಾ! ಇದರ ಮಹಿಮೆ ಅತ್ಯದ್ಭುತವಾದುದು. ಎಲ್ಲೆಲ್ಲಿಯ ಸಮಾಚಾರವನ್ನಾದರೂ ವಿವರವಾಗಿ ಹೇಳಬಲ್ಲದು. ಕಳ್ಳಕಾಕರನ್ನೂ, ತುಂಟತುಡುಕರನ್ನೂ ಕಂಡುಹಿಡಿಯುವುದರಲ್ಲಿ ತುಂಬ ಸಹಾಯಕವಾಗುವುದು ನಿಮ್ಮಂತಹ ಅರಸರಿಗೆ ಇದರಿಂದ ಬಹಳ ಪ್ರಯೋಜನವಾಗುತ್ತದೆ" ಎಂಬುದಾಗಿ ಹೇಳಿ ಆ ಪಂಜರವನ್ನು ಅರಸರಿಗೆ ಒಪ್ಪಿಸಿ ತೆರಳಿದನು [ಭಾರ.-ಶಾಂತಿ. ೮೨] ಇದರ ಮಹಿಮೆಯನ್ನು ಕಣ್ಣಾರೆ ನೋಡಿ ತಿಳಿದ ಕ್ಷೇಮಧೂರ್ತಿಯ ಪರಿವಾರದವರು, ಇದರಿಂದ ತಮಗೆ ಉಳಿಗಾಲವಿಲ್ಲವೆಂದು ನಿಶ್ಚಯಿಸಿ, ಅರಸನಿಗೆ ತಿಳಿಯದಂತೆ ಆ ಹಕ್ಕಿಯನ್ನು ಕೊಂದುಬಿಟ್ಟರು ಮರುದಿನ ಬೆಳಗಾಗುತಲೇ ಮುನಿ ಅರಸನಲ್ಲಿಗೆ ಬಂದು, ರಾತ್ರಿಯಲ್ಲಿ ನಡೆದ ಸಮಾಚಾರವನ್ನು ಅರಸನಿಗೆ ತಿಳುಹಿ "ನಿನ್ನ ಪರಿವಾರದಲ್ಲಿಯೇ ಇಂತಹ ದ್ರೋಹಿಗಳಿರುವುದಾದರೆ ಇನ್ನು ನಿನ್ನ ರಾಷ್ಟ್ರದಲ್ಲಿ ಕಳ್ಳ ಕಾಕರು ಹೇರಳವಾಗಿರುವರೆಂಬುದಕ್ಕೆ ಬೇರೆ ನಿದರ್ಶನ ಬೇಕಾಗಿಲ್ಲ. ಇಂತಹವರನ್ನೆಲ್ಲ ಹಿಡಿತರಿಸಿ ಶಿಕ್ಷಿಸು" ಎಂದು ಹೇಳಿ ಹೋದನು [ಭಾರ.-ಶಾಂತಿ ೮೨, ೧೦೪, ೧೦೬] ಈತನು ಒಂದು ಪಕ್ಷಿಯಲ್ಲಿ ಹಿರಣ್ಯಹಸ್ತನೆಂಬ ಮಗನನ್ನು ಪಡೆದನು [ಅನು. ೫೩]

**ಕಾಲಕಾ**—ಒಬ್ಬ ರಕ್ಕಸಿ. ಕಾಲಕೇಯರೆಂಬ ರಕ್ಕಸರನ್ನು ಹೆತ್ತವಳು. ಮಾರೀಚನ ಹೆಂಡತಿ [ವನ ೧೭೫]

**ಕಾಲಕೂಟ.**—(i) ಒಂದು ದೇಶ. ಆನರ್ತ ದೇಶಕ್ಕೆ ಉತ್ತರದಲ್ಲಿ ಕಾಲಕೂಟನೆಂಬ ಪರ್ವತದ ಬಳಿ ಇದೆ [ಸಭಾ. ೨೦].

(ii) ಒಂದು ಬಗೆಯ ವಿಷ.

**ಕಾಲಕೇಯ.**—(i) ನೋಡು—ಕಾಲಕಾ. ಇವರು ಹಿರಣ್ಯಪುರದಲ್ಲಿ ವಾಸವಾಗಿದ್ದು, ಇಂದ್ರನಿಗೆ ವಿಶೇಷವಾಗಿ ಪೀಡೆಯನ್ನುಂಟುಮಾಡುತ್ತಿದ್ದರು. ಇಂದ್ರನು ಇವರನ್ನು ಕೊಲ್ಲಲಾರದೆ ಕಾಲಹರಣಮಾಡುತ್ತಿದ್ದನು. ದ್ವಾಪರಯುಗಾಂತ್ಯದಲ್ಲಿ ಪಾಂಡು ಪುತ್ರನಾದ ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಸಂಪಾದಿಸಿದ ಬಳಿಕ ಕೆಲಕಾಲ ಸ್ವರ್ಗಲೋಕದಲ್ಲಿ ವಾಸಮಾಡುತ್ತಿದ್ದಾಗ, ಇಂದ್ರನ ಮೂಲಕ ಇವರ ಸಮಾಚಾರವನ್ನು ತಿಳಿದ ಅರ್ಜುನನು ಇವರನ್ನು ಯುದ್ಧದಲ್ಲಿ ಕೊಂದನು [ಭಾರ.-ವನ. ೧೭೫].

(ii) ಇವರೂ ಒಂದು ಬಗೆಯ ರಕ್ಕಸರು ಇವರು ಕಶ್ಯಪಮುನಿಯಿಂದ ಕಾಲಾ ಎಂಬವಳಲ್ಲಿ ಜನಿಸಿದವರು ಇವರು ವೃತ್ರಾಸುರನ ಒತ್ತಾಸೆಯಿಂದ ದೇವತೆಗಳನ್ನು ಬಹಳವಾಗಿ ಪೀಡಿಸುತ್ತಿದ್ದರು. ಇವರು ಹಗಲೆಲ್ಲ ಸಮುದ್ರ ಮಧ್ಯದಲ್ಲಿ ಅಡಗಿಕೊಂಡಿದ್ದು, ರಾತ್ರಿಯಾದ ಕೂಡಲೇ ಹೊರಬಂದು ಆಶ್ರಮದಲ್ಲಿದ್ದ ಋಷಿಗಳನ್ನೆಲ್ಲ ತಿನ್ನುತ್ತಿದ್ದರು. ಇವರ ಹಾವಳಿಯಿಂದ ಲೋಕದಲ್ಲಿ ಯಜ್ಞಾದಿಗಳು ನಡೆಯುತ್ತಿರಲಿಲ್ಲ. ಆಗ ದೇವತೆಗಳು ಇಂದ್ರನ ಮೂಲಕ ಬ್ರಹ್ಮನನ್ನು ಮರೆಹೊಕ್ಕರು. ಬ್ರಹ್ಮನು ಅಗಸ್ತ್ಯಮುನಿಯ ಬಳಿಗೆ ಕಳುಹಿದನು ಅಗಸ್ತ್ಯನು ಸಮುದ್ರವನ್ನು ಶೋಷಣಮಾಡಲಾಗಿ ಕಾಲಕೇಯರು ಹೊರಬಿದ್ದರು ಆಗ ದೇವತೆಗಳು ಇವರನ್ನು ಕೊಂದರು [ಭಾರ.-ವನ. ೯೯]

**ಕಾಲಕೌಶಿಕ.**—ಹರಿಶ್ಚಂದ್ರನ ಪಟ್ಟದರಸಿಯಾದ ಚಂದ್ರಮತಿಯನ್ನು ಬೆಲೆಗೆ ಕೊಂಡು ಊಳಿಗಕ್ಕೆ ಇಟ್ಟುಕೊಂಡ ಬ್ರಾಹ್ಮಣನು ನೋಡು—ಹರಿಶ್ಚಂದ್ರ

**ಕಾಲಞ್ಜರ**—ಒಂದು ಪರ್ವತ ನೋಡು—ಪಿತೃವರ್ತಿ.

**ಕಾಲನೇಮಿ.**—(i) ರಾವಣನ ಸೋದರಮಾವನಾದ ಮಾರೀಚನ ಮಗನು. ರಾಮ ರಾವಣರ ಯುದ್ಧದಲ್ಲಿ ಲಕ್ಷ್ಮಣನು ಅಷ್ಟಘಂಟಾಶಕ್ತಿಯಿಂದ ಮೂರ್ಛಿತನಾಗಲು, ವಾನರ ಸೇನೆಯಲ್ಲಿದ್ದ ಸುಷೇಣನೆಂಬ ವೈದ್ಯನು ಸಂಜೀವಿನೀ ಲತೆಯನ್ನು ತರುವುದಕ್ಕಾಗಿ ಹನೂಮಂತನನ್ನು ಚಂದ್ರದ್ರೋಣಪರ್ವತಕ್ಕೆ ಕಳುಹಿದನು. ಈ ಸಮಾಚಾರವನ್ನು ಚಾರರ ಮೂಲಕ ತಿಳಿದ ರಾವಣನು, ಕಾಲನೇಮಿಯನ್ನು ಕರೆದು, "ನೀನು ಈಗಲೇ ಚಂದ್ರದ್ರೋಣಪರ್ವತಕ್ಕೆ ಹೋಗಿ ಬರತಕ್ಕ ಹನೂಮಂತನಿಗೆ ವಿಘ್ನವನ್ನು ಒಡ್ಡಿ ಹೇಗಾದರೂ ಬೆಳಗಾಗುವವರೆಗೂ ಅಲ್ಲಿಯೇ ಕಾಲಹರಣ ಮಾಡಿಸು" ಎಂದನು. ಕಾಲನೇಮಿ ಹನೂಮಂತನಿಗಿಂತಲೂ ಮುಂಚಿತವಾಗಿಯೇ ಅಲ್ಲಿಗೆ ಹೋಗಿ, ಪರ್ಣಶಾಲೆಯನ್ನು ಕಲ್ಪಿಸಿ, ತಾಪಸನಾಗಿದ್ದನು. ಹನೂಮಂತನು

ಅಲ್ಲಿಗೆ ಬಂದಕೂಡಲೇ ಅವನನ್ನು ಬಹಳವಾಗಿ ಆದರದಿಂದ ಬರಮಾಡಿಕೊಂಡು, ಅವನ ಸಮಾಚಾರವನ್ನೆಲ್ಲ ಕೇಳಿ ತಿಳಿದು, "ಅಯ್ಯಾ! ಬಹಳವಾಗಿ ದಣಿದು ಬಂದಿರುವೆ. ಅಂಜಬೇಡ. ಲಕ್ಷ್ಮಣನು ಈಗಾಗಲೇ ಬದುಕಿಕೊಂಡನು. ಈ ಕೊಳದಲ್ಲಿ ಕೈ ಕಾಲು ತೊಳೆದುಕೊಂಡು ವಿಶ್ರಮಿಸಿಕೊಂಡ ಬಳಿಕ, ನಿನಗೆ ಬೇಕಾದ ಮೂಲಿಕೆಗಳನ್ನು ಕೊಂಡು ಹೋಗಬಹುದು" ಎಂದನು. ದಿಟವಾಗಿಯೂ ದಣಿದಿದ್ದ ಹನೂಮಂತನು ಕೊಳವನ್ನು ಇಳಿದ ಕೂಡಲೇ ಒಂದು ಮೊಸಳೆ ಇವನನ್ನು ಹಿಡಿದು ಕೊಳ್ಳಲಾಗಿ, ಹನೂಮಂತನು ಅದನ್ನು ಕೊಂದನು ಶಾಪದಿಂದ ಮೊಸಳೆಯಾಗಿದ್ದ ಗಂಧರ್ವನೊಬ್ಬನು ಹೊರಬಂದು, ಕಾಲನೇಮಿಯ ವೃತ್ತಾಂತವನ್ನು ತಿಳಿಸಿ ಹೊರಟು ಹೋದನು. ಬಳಿಕ ಹನೂಮಂತನು ಕಾಲನೇಮಿಯನ್ನು ಕೊಂದು, ಸಂಜೀವಿನೀ ಲತೆ ಕಾಣದಿರಲು ಪರ್ವತವನ್ನೇ ಕಿತ್ತುಕೊಂಡು, ಸುಷೇಣನಲ್ಲಿಗೆ ಬಂದನು [ಅಧ್ಯಾ.-ಯು. ೭].

(11) ನೂರು ಮುಖದ ಮತ್ತೊಬ್ಬ ರಾಕ್ಷಸನು. ವಿಷ್ಣುವಿನಿಂದ ಹತನಾದನು ನೋಡು—ಕಂಸ [ಭಾರ-ಸಭಾ ೫೧ ಸ್ಕಾ-ಕೌ ೧೮, ೧೯. ಮತ್ಸ್ಯ.-೧೭೭ ಹರಿ.-೧, ೪೬, ೪೮]

**ಕಾಲಯುವನ**—ಯಾದವರ ಪುರೋಹಿತನಾದ ಗರ್ಗಮಹರ್ಷಿಯ ಮಗನು ಒಮ್ಮೆ ಯಾದವರು ಗರ್ಗಮುನಿಯನ್ನು ಪರಿಹಾಸಮಾಡಲಾಗಿ ಸಿಟ್ಟುಗೊಂಡ ಮುನಿ ತನಗೆ ಯಾದವರನ್ನು ಧ್ವಂಸಮಾಡತಕ್ಕ ಮಗನು ಹುಟ್ಟಬೇಕೆಂದು ಶಿವನನ್ನು ಬೇಡಿದನು ಯವನ ರಾಜನಿಗೂ ಯಾದವರಿಗೂ ಬಹಳ ಕಾಲದಿಂದಲೂ ಮನಸ್ತಾಪವಿತ್ತು. ಇದನ್ನು ತಿಳಿದ ಯವನ ರಾಜನು ಗರ್ಗನನ್ನು ತನ್ನ ಬಳಿಗೆ ಬರ ಮಾಡಿಕೊಂಡು, ಅಲ್ಲಿಯೇ ನಿಲ್ಲಿಸಿಕೊಂಡನು ಬಳಿಕ ಗರ್ಗನು ಒಬ್ಬ ಅಪ್ಸರಸಿಯಿಂದ ಒಬ್ಬ ಪುತ್ರನನ್ನು ಪಡೆದನು. ಇವನೇ ಕಾಲಯುವನನು ಯವನ ರಾಜನು ಗರ್ಗನನ್ನೂ ಅವನ ಮಗನನ್ನೂ ಪ್ರೀತಿಯಿಂದ ಕಾಣುತ್ತಿದ್ದನು. ಕಾಲಯುವನನು ಶಿವನ ವರದಿಂದ ಜನಿಸಿದವನಾದುದರಿಂದ ಮಹಾಬಲ ಸಂಪನ್ನನೆನಿಸಿ, ಯಾದವರನ್ನು ಪೀಡಿಸತೊಡಗಿ, ಅನೇಕ ವೇಳೆ ದ್ವಾರಕೆಯ ಮೇಲೆ ಬಿದ್ದು ತಲ್ಲಣಗೊಳಿಸಿದನು. ಇವನನ್ನು ಸೋಲಿಸುವುದು ಕೃಷ್ಣನಿಗೆ ಸಾಧ್ಯವಾಗಲಿಲ್ಲ ಒಮ್ಮೆ ಕೃಷ್ಣನು ಇವನನ್ನು ಇದಿರಿಸಿ, ಹೋರಾಡಲಾರದೆ ಓಡಿಹೋಗಿ ಅವಿತುಕೊಂಡನು. ಕಾಲಯುವನನೂ ಅವನನ್ನು ಹಿಂಬಾಲಿಸಿದನು. ಕೃಷ್ಣನು ಓಡಿಹೋಗಿ ಮುಚುಕುಂದನು ಮಲಗಿದ್ದ ಗವಿಯೊಳಗೆ ಅಡಗಿಕೊಂಡನು ಕಾಲಯುವನನೂ ಅದೇ ಗವಿಯನ್ನು ಹೊಕ್ಕು ಅಲ್ಲಿ ಮಲಗಿದ್ದ ಮುಚುಕುಂದನನ್ನೇ ಕೃಷ್ಣನೆಂದು ಭಾವಿಸಿ ಎಡಗಾಲಿನಿಂದ ಒದೆಯಲಾಗಿ, ನಿದ್ರಾಭಂಗದಿಂದ ಎಚ್ಚತ್ತು ಕೋಪಗೊಂಡ ಮುಚು

ಕುಂದನ ದೃಷ್ಟಿಪಾತದಿಂದ ಬೂದಿಯಾದನು [ಶಾಂತಿ. ೩೪೮. ಭಾಗ.-೧೦, ೫೧. ಹರಿ.-೧-೨೨, ೨-೫೨, ೫೭]

**ಕಾಲಾ.**—ದಕ್ಷಬ್ರಹ್ಮನ ಮಗಳು. ಕಶ್ಯಪನ ಹೆಂಡತಿ ನೋಡು—ಕಾಲಕೇಯ.

**ಕಾಲಿಂದಿ**—(I) ಯಮುನಾ ನದಿ ಸೂರ್ಯನ ಮಗಳು [ಸಭಾ ೯ ವಿರಾ. ೫].

(II) ಯಮುನೆಯ ಸೋದರಿ. ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು ವಿಷ್ಣುವನ್ನೇ ಮದುವೆಯಾಗಬೇಕೆಂಬ ಉದ್ದೇಶದಿಂದ ತಪಸ್ಸು ಮಾಡಿದಳು ಒಮ್ಮೆ ಕೃಷ್ಣಾರ್ಜುನರು ಬೇಟೆಗೆ ಹೋಗಿದ್ದಾಗ, ಕೃಷ್ಣನು ಇವಳನ್ನು ಕಂಡು, ಮಾತನಾಡಿಸಿ, ಇವಳ ಅಭಿಪ್ರಾಯವನ್ನು ಅರಿತು, ಮದುವೆಯಾದನು [ಭಾಗ -೧೦, ೫೮]

(III) ಯಮುನಾ ನದಿಯ ಒಂದು ಮಡು ಸೌಭರಿಯೆಂಬ ಮಹರ್ಷಿ ಇದರ ಬಳಿ ತಪಸ್ಸು ಮಾಡುತ್ತಿದ್ದನು ಒಮ್ಮೆ ಗರುಡನು ಈ ಮಡುವಿನ ಬಳಿಗೆ ಬಂದು ಅಲ್ಲಿದ್ದ ಮೀನುಗಳನ್ನೆಲ್ಲ ಹಿಡಿದು ತಿನ್ನುತ್ತಿರಲಾಗಿ ಆ ಮಡುವಿನಲ್ಲಿದ್ದ ಮೀನುಗಳೆಲ್ಲವೂ ಮುನಿಯನ್ನು ಮರೆಹೊಕ್ಕುವು ಆಗ ಮುನಿ "ಇನ್ನು ಮುಂದೆ ಗರುಡನು ಇಲ್ಲಿಗೆ ಬಂದರೆ ಅವನ ತಲೆ ಒಡೆಯುವುದು" ಎಂದು ಶಾಪವಿತ್ತನು ಮೀನುಗಳೆಲ್ಲವೂ ಸಂತೋಷದಿಂದ ಹಿಂದಿರುಗಿದುವು ಕಾಲಿಯನೂ ಗರುಡನೂ ಬಲತಾಯ ಮಕ್ಕಳು ಇವರಿಬ್ಬರಿಗೂ ಪರಸ್ಪರ ವೈರವಿದ್ದಿತು. ಸೌಭರಿ ಮುನಿ ಗರುಡನಿಗೆ ಶಾಪ ಕೊಟ್ಟ ಸುದ್ದಿಯನ್ನು ಕೇಳಿ ಕಾಲಿಯನು ಈ ಮಡುವನ್ನು ಸೇರಿ ನಿರ್ಭಯನಾಗಿದ್ದನು [ಭಾಗ.-೧೦, ೧೬]

**ಕಾಲಿಯ.**—ಒಂದು ಸರ್ಪ ಕದ್ರೂ-ಕಶ್ಯಪರ ಮಗನು ರಮಣಕ ದ್ವೀಪದಲ್ಲಿ ವಾಸವಾಗಿದ್ದನು ಗರುಡನು ಸರ್ಪಗಳನ್ನು ತಿನ್ನುತ್ತಿದ್ದಾಗ ಸರ್ಪಗಳೆಲ್ಲವೂ ಒಟ್ಟುಗೂಡಿ, ಸರದಿ ಮೇರೆಗೆ ಗರುಡನಿಗೆ ಆಹಾರವನ್ನು ಒದಗಿಸಿಕೊಡುವಂತೆಯೂ ಗರುಡನು ಸರ್ಪಗಳನ್ನು ಪೀಡಿಸದಂತೆಯೂ ಕಟ್ಟುಮಾಡಿಕೊಂಡುವು. ಇಂತೆಯೇ ಕೆಲ ಕಾಲ ನಡೆದ ಬಳಿಕ ಕಾಲಿಯನ ಸರದಿ ಬಂದಾಗ ಅದಕ್ಕೆ ಸಮ್ಮತಿಸಲಿಲ್ಲ ಗರುಡನಿಗೂ ಕಾಲಿಯನಿಗೂ ವೈರ ಹೆಚ್ಚಿತು ಒಂದು ದಿನ ಗರುಡನು ಕಾಲಿಯನನ್ನು ಹಿಂದಟ್ಟಿಕೊಂಡು ಹೋಗಲು ಸೌಭರಿಯ ಶಾಪವನ್ನು (ನೋಡು—ಕಾಲಿಂದಿ) ತಿಳಿದಿದ್ದ ಕಾಲಿಯನು ಕಾಲಿಂದಿಯ ಮಡುವನ್ನು ಹೊಕ್ಕನು ಕಾಲಿಯನ ವಿಷಜ್ವಾಲೆಯಿಂದ ಆ ಮಡುವಿನ ನೀರೆಲ್ಲ ವಿಷಮಯವಾದುದಲ್ಲದೆ ಅದರ ನೀರನ್ನು ಕುಡಿದ ಪ್ರಾಣಿಗಳೂ ಸಾಯತೊಡಗಿದುವು ಬಲರಾಮ ಕೃಷ್ಣರು ಈ ಸಮಾಚಾರವನ್ನು ಕೇಳಿ, ಆ ಮಡುವಿನ ಬಳಿಗೆ ಬಂದು, ನೀರಿನಲ್ಲಿ ಆಡುತ್ತಿದ್ದ ಆ ಸರ್ಪವನ್ನು ಕಂಡರು. ಕೃಷ್ಣನು ಒಡನೆಯೇ ನೀರಿನಲ್ಲಿ ತೇಲಾಡುತ್ತಿದ್ದ ಆ ಹಾವಿನ ಹೆಡೆಯ ಮೇಲೆ ಕಾಲಿಟ್ಟು, ತನ್ನ ಕೈಯಿಂದ ಅದರ ಬಾಲವನ್ನು ಹಿಡಿದುಕೊಂಡು ತುಳಿಯತೊಡಗಿದನು. ಕಾಲಿ

ಯವೂ ಕೃಷ್ಣನನ್ನು ಕೊಲ್ಲಲು ಬಹಳವಾಗಿ ಪ್ರಯತ್ನಪಟ್ಟು, ಸಾಗದೆ ಸಂಕಟಪಡು ತ್ತಿತ್ತು. ಇಷ್ಟರಲ್ಲಿ ಕಾಲಿಯನ ಪತ್ನಿಯರಾದ ನಾಗಕನ್ಯೆಯರು ಕೃಷ್ಣನನ್ನು ಮರೆಹೊಕ್ಕು ಪತಿಭಿಕ್ಷವನ್ನು ಬೇಡಿದರು. ಕೃಷ್ಣನು ಅವರಿಗೆ ಅಭಯವಿತ್ತು, ಕೂಡಲೇ ಕಾಲಿಯನು ಆ ಮಡುವನ್ನು ಬಿಟ್ಟುಹೋಗುವಂತೆ ಹೇಳಿ, ಗರುಡನ ಭಯ ವನ್ನೂ ತೊಲಗಿಸಿ, ಕಾಲಿಯನನ್ನು ಪಾತಾಳಕ್ಕೆ ಕಳುಹಿದನು [ಭಾಗ.-೧೦, ೧೬. ಹರಿ.-೨, ೧೨. ಭಾರ.-ಸ ೫೩. ಉದ್ಯೋ ೧೦೩ ವಿಷ್ಣು.-೫೭]

**ಕಾಲೀ.**—(i) ವೇದವ್ಯಾಸ ಮುನಿಯ ಜನನಿಯಾದ ಸತ್ಯವತಿಯ ನಾಮಾಂತರ. ಶಂತನುವಿನ ಹೆಂಡತಿ [ಭಾರ -ಆ. ೬೦].

(ii) ಶಕ್ತಿತ್ರಯ ರೂಪಿಣಿಯಾದ ಪಾರ್ವತಿಯ ರೂಪಾಂತರ [ದೇ.ಭಾ.- ೫, ೨೨].

(iii) ಭಾರತವರ್ಷದ ಒಂದು ನದಿ [ಭಾರ -ಭೀ ೯ ಮತ್ಸ್ಯ -೧೧೩].

**ಕಾವೇರಿ**—ಒಂದು ನದಿ (ಕಾವೇರಿ ದಕ್ಷಿಣಗಂಗೆಯೆಂಬುದಾಗಿ ಪ್ರಸಿದ್ಧಿ ಪಡೆದ ಒಂದು ಮಹಾ ನದಿ ತುಲಾಮಾಸದಲ್ಲಿ ಕಾವೇರೀ ಸ್ನಾನ ಸಕಲ ಪಾಪ ನಾಶಕರವಾದುದು. ಕೊಡಗರು ಕಾವೇರಿಯನ್ನು ತಮ್ಮ ಕುಲದೈವದಂತೆ ಪೂಜಿಸು ತ್ತಾರೆ). ಇದು ಕೊಡಗಿನ ಬಳಿ ಸಹ್ಯಾದ್ರಿಯಲ್ಲಿ ತಲಕಾವೇರಿಯೆಂಬ ಸ್ಥಳದಲ್ಲಿ ಹುಟ್ಟುತ್ತದೆ [ಭಾರ -ಸಭಾ. ೯ ವನ. ೮೩. ಭೀ ೯ ಸ್ಕಾ.-ವೈಷ್ಣವಖಂ ಕಾರ್ತಿಕ ಮಾ. ೩೧, ೪]. ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾಗ ಈ ನದಿಯಲ್ಲಿಯೂ ಸ್ನಾನಮಾಡಿದನು [ಆದಿ. ೨೩೫]. ರಾಜಸೂಯಯಾಗ ಸಮಯದಲ್ಲಿ ನಕುಲನು ಇಲ್ಲಿಗೆ ಬಂದಿದ್ದನು [ಸಭಾ ೩೩]

**ಕಾಶೀ**—ಮೋಕ್ಷದಾಯಕಗಳೆಂದು ಪುರಾಣಪ್ರಸಿದ್ಧಗಳಾದ ಏಳು ಪಟ್ಟಣ ಗಳಲ್ಲಿ ಒಂದು ಗಂಗಾ ನದಿಯ ತೀರದಲ್ಲಿ ಬಹಳ ವಿಶಾಲವಾದ ಪಟ್ಟಣ ಇದರಲ್ಲಿ ವಿಶ್ವೇಶ್ವರ, ಅನ್ನಪೂರ್ಣಾ, ಸರ್ವಮಂಗಳಾ, ಬಿಂದುಮಾಧವ, ಕಾಲಭೈರವ ಮುಂತಾದ ಅನೇಕ ದೇವಸ್ಥಾನಗಳಿವೆ ವ್ಯಾಸ, ಮಣಿಕರ್ಣಿಕಾ, ಹನೂಮಂತ, ಹರಿಶ್ಚಂದ್ರ, ಮುಂತಾದ ಅನೇಕ ಘಟ್ಟಗಳಿವೆ ಕಾಶೀ ಕ್ಷೇತ್ರದಲ್ಲಿ ಸತ್ತವರೆಲ್ಲರೂ ಮುಕ್ತಿಯನ್ನು ಹೊಂದುವರೆಂಬುದು ಪುರಾಣ ಪ್ರತೀತಿ [ಆದಿ. ೧೯೦] ನೋಡು—ಕುಮ್ಭ

**ಕಾಶೀರಾಜ.**—ನೋಡು—ಅಮ್ಬಾ, ಅಮ್ಬಾಲಿಕಾ, ಅಮ್ಬಿಕಾ.

**ಕಾಶ್ಮೀರ.**—ಒಂದು ದೇಶ. ಶ್ರೀ ನಗರ [ಸಭಾ. ೨೭] ಇದರ ರಾಜಧಾನಿ.

**ಕಾಶ್ಯ.**—ಪಾಂಡವ ಪಕ್ಷಪಾತಿಯಾದ ಒಬ್ಬ ಅರಸು ಈತನು ಸಾಮಾನ್ಯ ವಾಗಿ ಏಕರಥನು. ಯುದ್ಧಸಮಯದಲ್ಲಿ ಅಷ್ಟರಥನಾಗಿ, ಮಹಾ ಪರಾಕ್ರಮಸಂಪನ್ನ ನೆನಿಸಿ ಯುದ್ಧಮಾಡುತ್ತಿದ್ದನು [ಭಾರ.-ಉ. ೪]

**ಕಾಶ್ಯಪ.**—(i) ಸಪ್ತರ್ಷಿಗಳಲ್ಲಿ ಒಬ್ಬನು ಬ್ರಹ್ಮನ ಮಗನಾದ ಮರೀಚಿಯ ಮಗನು. ಈತನೂ ಬ್ರಹ್ಮನಂತೆಯೇ ಪ್ರಜಾಸೃಷ್ಟಿಯನ್ನು ಹೆಚ್ಚಿಸಿದವನು. ನೋಡು—ಕಶ್ಯಪ

(ii) ಒಬ್ಬ ಮಹರ್ಷಿ. ವಸುದೇವನ ಪುರೋಹಿತನು. ಪಾಂಡವರು ಅರಣ್ಯ ದಲ್ಲಿ ಜನಿಸಿದಾಗ ಈತನು ಅವರಿಗೆ ಜಾತಕರ್ಮ, ನಾಮಕರಣಗಳನ್ನು ಮಾಡಿಸಿದನು [ಆದಿ. ೧೩೩].

(iii) ಒಬ್ಬ ಮುನಿ. ಈತನು ಒಮ್ಮೆ ಒಂದು ರಥಕ್ಕೆ ಸಿಲುಕಿ, ಮೂರ್ಛೆ ಬಿದ್ದು ಚೇತರಿಸಿಕೊಂಡ ಬಳಿಕ, ಶರೀರ ಅನಿತ್ಯವೆಂತಲೂ, ಅಡಿಗಡಿಗೂ ದುಃಖ ಭಾಜನವೆಂತಲೂ ಯೋಚಿಸಿ, ಒಡನೆಯೇ ದೇಹತ್ಯಾಗಮಾಡಬೇಕೆಂದು ಯತ್ನ ಮಾಡುತ್ತಿದ್ದನು. ಆಗ ಇಂದ್ರನು ನರಿಯ ರೂಪದಿಂದ ಇವನಲ್ಲಿಗೆ ಬಂದು, ಮನುಷ್ಯದೇಹದ ಮಹತ್ತ್ವವನ್ನು ತಿಳಿಸಿ, ಆ ಮುನಿಯನ್ನು ಆತ್ಮಹತ್ಯೆಮಾಡಿ ಕೊಳ್ಳದಂತೆ ಅಡ್ಡಗಿಸಿದನು [ಭಾರ -ಶಾಂತಿ ೧೮೦].

(iv) ಭೃಗುವಂಶದ ಮತ್ತೊಬ್ಬ ಮಹರ್ಷಿ. ಜಮದಗ್ನಿ, ಬೈದ, ಸಾರ ಸ್ವತ, ಗೃತ್ಸಮದ, ಆರ್ಷ್ಟಿಷೇಣ, ಶೌನಕ ಮುಂತಾದ ಮಹರ್ಷಿಗಳ ಮೂಲ ಪುರುಷನು. ಮಂತ್ರದ್ರಷ್ಟನೂ ಮಹಾಮಹಿಮನೂ ಆಗಿದ್ದನು [ಮತ್ಸ್ಯ.-೧೪೪].

**ಕಾಶ್ಯಪೀ.**—ಭೂಮಿ. ಪರಶುರಾಮನು ಅಶ್ವಮೇಧಯಾಗ ಮಾಡಿ, ದಕ್ಷಿಣೆಗೆ ಪ್ರತಿಯಾಗಿ ಸಮಸ್ತ ಭೂಮಂಡಲವನ್ನೂ ಕಶ್ಯಪ ಮುನಿಗೆ ಕೊಟ್ಟನು. ಒಮ್ಮೆ ಕಶ್ಯಪ ಮುನಿಯೇ ಭೂ ರೂಪವನ್ನು ತಾಳಿ ಸಕಲ ಪ್ರಾಣಿಗಳನ್ನೂ ಧರಿಸಿದ್ದನು. ಈ ಎರಡು ಕಾರಣಗಳಿಂದಲೂ ಭೂಮಿಗೆ ಕಾಶ್ಯಪಿಯೆಂಬ ಹೆಸರು ಸಲ್ಲುತ್ತದೆ [ಭಾರ.- ಶಾಂ. ೪೮. ಅನು. ೨೫೯].

**ಕಾಶ್ಯಪೇಯ.**—(i) ಅರುಣನ ನಾಮಾಂತರ.

(ii) ಶ್ರೀ ಕೃಷ್ಣನ ಸಾರಥಿಯಾದ ದಾರುಕ [ದ್ರೋ ೧೪೭]

**ಕಿಙ್ಕರ.**—(i) ಒಬ್ಬ ರಾಕ್ಷಸ. ವಿಶ್ವಾಮಿತ್ರನ ಅಪ್ಪಣೆಯ ಮೇರೆಗೆ, ಕಲ್ಮಾಷ ಪಾದನು ರಾಕ್ಷಸನಾಗಿದ್ದಾಗ ಅವನ ದೇಹವನ್ನು ಹೊಕ್ಕು, ವಸಿಷ್ಠನ ಮಗನಾದ ಶಕ್ತಿಮಹರ್ಷಿಯನ್ನು ನುಂಗಿದನು. ನೋಡು—ಕಲ್ಮಾಷಪಾದ

(ii) ರಾವಣನ ಪರಿವಾರದಲ್ಲಿ ಒಂದು ಪಂಗಡ. ಹನೂಮಂತನು ಸೀತೆ ಯನ್ನು ಹುಡುಕುವುದಕ್ಕಾಗಿ ಲಂಕೆಗೆ ಹೋಗಿದ್ದಾಗ, ಅಶೋಕವನವನ್ನು ಹಾಳು ಮಾಡಿದ ಸಂದರ್ಭದಲ್ಲಿ, ಹನೂಮಂತನನ್ನು ಇದಿರಿಸಿ, ಅವನಿಂದ ಹತರಾಯಿತು [ರಾಮಾ.-ಸುಂ. ೪೨].

**ಕಿನ್ದಮ.**—ಒಬ್ಬ ಋಷಿ. ಈತನು ಒಂದು ದಿನ ಹಗಲುಹೊತ್ತಿನಲ್ಲಿ ಪ್ರಾಪಂಚಿಕ ಸುಖವನ್ನು ಅನುಭವಿಸಬೇಕೆಂಬ ಅಭಿಲಾಷೆಯಿಂದ ಜಿಂಕೆಯ ರೂಪವನ್ನು ತಳೆದು ತನ್ನ ಪ್ರಿಯೆಯೊಂದಿಗೆ ಕ್ರೀಡಿಸುತ್ತಿದ್ದನು. ಅದೇ ಸಮಯದಲ್ಲಿ ಕುಂತೀ ಮಾದ್ರಿಯರ ಸಂಗಡ ಕಾಡಿಗೆ ಬೇಟೆಗೆ ಬಂದಿದ್ದ ಪಾಂಡು ರಾಜನು, ಹರಿಣರೂಪದಿಂದಿದ್ದ ಕಿಂದಮನನ್ನು ಬಾಣಪ್ರಯೋಗಮಾಡಿ ಕೊಂದನು. ಒಡನೆಯೇ ತನ್ನ ನಿಜ ರೂಪವನ್ನು ಧರಿಸಿದ ಕಿಂದಮನು ರೋಷಭರಿತನಾಗಿ "ನೀನು ನಿನ್ನ ಮಡದಿಯರೊಂದಿಗೆ ಕ್ರೀಡಿಸಿದಾಗ ಸಾಯುವೆ" ಎಂಬುದಾಗಿ ಶಾಪವಿತ್ತು ದೇಹತ್ಯಾಗ ಮಾಡಿದ [ಭಾರ -ಆದಿ ೧೨೩].

**ಕಿನ್ಧುರ.**—ದ್ರೌಪದೀ ಸ್ವಯಂವರ ಕಾಲದಲ್ಲಿ ಪಣವಾಗಿರಿಸಿದ್ದ ಗುರಿಯನ್ನು ಭೇದಿಸುವುದಕ್ಕಾಗಿ ಸ್ವಯಂವರ ಮಂಟಪದಲ್ಲಿ ಇರಿಸಿದ್ದ ಬಿಲ್ಲು [ಭಾರ -ಆದಿ ೨೦೦].

**ಕಿನ್ನರ.**—ದೇಹ ಮನುಷ್ಯರಂತೆಯೂ ಮುಖ ಕುದುರೆಯ ಮುಖದಂತೆಯೂ ಇರುವ ಒಂದು ಬಗೆಯ ದೇವಯೋನಿ ವಿಶೇಷದವರು ಇವರೆಲ್ಲರೂ ಕುಬೇರನ ಪ್ರಜೆಗಳು. ಇವರು ಕಶ್ಯಪಮುನಿಯಿಂದ ಸುರಸೆಯಲ್ಲಿ ಜನಿಸಿದವರು [ಭಾರ.- ಆದಿ. ೬೬].

**ಕಿಮ್ಪುರುಷ.**—(i) ದೇವತೆಗಳಲ್ಲಿ ಒಂದು ಪಂಗಡದವರು ಇವರ ದೇಹ ಕುದುರೆಯ ದೇಹದಂತೆಯೂ ಮುಖ ಮನುಷ್ಯನ ಮುಖದಂತೆಯೂ ಇರುತ್ತದೆ [ಭಾರ.-ಆದಿ. ೬೬]

(ii) ಒಂದು ಭೂ ಭಾಗ. ಹಿಮವತ್ಪರ್ವತಕ್ಕೆ ಉತ್ತರ ಭಾಗದಲ್ಲಿದೆ. ಇದಕ್ಕೆ ಕಿಂಪುರುಷ ವರ್ಷವೆಂತಲೂ ಹೆಸರು. ಜಂಬೂದ್ವೀಪಕ್ಕೆ ಚಕ್ರವರ್ತಿಯಾಗಿದ್ದ ಆಗ್ನೀಧ್ರನ ಒಂಭತ್ತು ಮಂದಿ ಮಕ್ಕಳಲ್ಲಿ ಒಬ್ಬನಾದ ಕಿಂಪುರುಷನು ಮೇರು ಪುತ್ರಿಯಾದ ಪೃಥುರೂಪೆಯೆಂಬವಳನ್ನು ಮದುವೆಯಾಗಿ, ಈ ದೇಶವನ್ನು ಪಾಲಿಸುತ್ತಿದ್ದನು. ಈ ಖಂಡ ಹಿಮವತ್ಪರ್ವತದ ಬಳಿ ಉತ್ತರಕ್ಕೆ ಹೇಮಕೂಟ, ದಕ್ಷಿಣಕ್ಕೆ ಹಿಮಾಲಯ, ಪೂರ್ವ ಪಶ್ಚಿಮಗಳಲ್ಲಿ ಲವಣಸಮುದ್ರದ ನಡುವೆ ಇದೆ ರಾಜಸೂಯಯಾಗ ಸಮಯದಲ್ಲಿ ಅರ್ಜುನನು ಈ ದೇಶದ ಅರಸನಿಂದ ಕಪ್ಪ ಕಾಣಿಕೆಗಳನ್ನು ತಂದನು [ಭಾರ.-ಸಭಾ. ೨೯. ಭೀ. ೬].

**ಕಿರಾತ.**—(i) ಒಂದು ದೇಶ ˙ ಬಂಗಾಳ ದೇಶದಲ್ಲಿರುವ ಪರ್ವತಭೂಯಿಷ್ಠವಾದ ಭೂ ಭಾಗ [ಭಾರ.-ಭೀ. ೯].

(ii) ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಲು ಶಿವನು ಬೇಡರ ರೂಪದಿಂದ ಬಂದಿದ್ದನಾದ ಕಾರಣ, ಈ ಹೆಸರು ಬೇಡಜಾತಿಯವರಿಗೂ ಸಲ್ಲುತ್ತದೆ.

**ಕಿರೀಟಿ** —ಅರ್ಜುನ ಇಂದ್ರಕೀಲಪರ್ವತದಲ್ಲಿ ಪಾಶುಪತಾಸ್ತ್ರಾದಿಗಳನ್ನು ಪಡೆದ ಬಳಿಕ ಅರ್ಜುನನು ಕೆಲ ಕಾಲ ಸ್ವರ್ಗದಲ್ಲಿದ್ದನು. ಆಗ ಅರ್ಜುನನು ಇಂದ್ರನಿಂದ ಜಯಿಸಲಾಗದ ಶತ್ರುಗಳನ್ನು ಗೆದ್ದು ಮಹೋಪಕಾರ ಮಾಡಿದುದಕ್ಕಾಗಿ, ಇಂದ್ರನು ಅರ್ಜುನನನ್ನು ದೇವಲೋಕದಲ್ಲಿ ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ, ತನ್ನ ಕಿರೀಟವನ್ನು ಅವನ ತಲೆಯಮೇಲಿಟ್ಟು ಗೌರವಿಸಿದನು. ಈ ಕಾರಣದಿಂದ ಅರ್ಜುನನಿಗೆ ಈ ಹೆಸರು ಬಂದಿತು [ವಿರಾ. ೪೩]

**ಕಿರ್ಮೀರ** —ಒಬ್ಬ ರಾಕ್ಷಸ. ಬಕಾಸುರನ ತಮ್ಮ. ಅರಗಿನ ಮನೆಯಿಂದ ಹೊರಬಿದ್ದು, ಕಾಡು ಸೇರಿ ಅಲ್ಲಿ ಹಿಡಿಂಬನನ್ನು ಭೀಮನು ಕೊಂದ ಬಳಿಕ, ಪಾಂಡವರು ಏಕಚಕ್ರ ನಗರದಲ್ಲಿ ವಾಸಮಾಡುತ್ತಿದ್ದಾಗ ಬಕನು ಭೀಮನಿಂದ ಹತನಾದನೆಂಬ ಸುದ್ದಿಯನ್ನು ಕೇಳಿ, ಇವನು ತನ್ನ ಅಣ್ಣನನ್ನು ಕೊಂದ ಸೇಡನ್ನು ತೀರಿಸಿಕೊಳ್ಳಬೇಕೆಂದು ಹೊಂಚುಹಾಕುತ್ತಿದ್ದನು ಪಾಂಡವರು ಪಗಡೆಯಾಟದಲ್ಲಿ ಸೋತು ಅರಣ್ಯವಾಸ ಮಾಡುತ್ತಿದ್ದಾಗ, ಕಾಮ್ಯಕವನದಲ್ಲಿ ಪಾಂಡವರ ಆಶ್ರಮದಲ್ಲಿ ವಾಸವಾಗಿದ್ದ ಅನೇಕ ಮಂದಿ ಋಷಿಗಳನ್ನು ಬಹಳವಾಗಿ ಪೀಡಿಸುತ್ತಿದ್ದನು ಒಮ್ಮೆ ಪಾಂಡವರು ಬೇಟೆಗೆ ಹೋಗಿದ್ದಾಗ ಅವರನ್ನು ಅಡ್ಡಗಿಸಿ, ಅವರ ಸಮಾಚಾರವನ್ನೆಲ್ಲ ಕೇಳಿ ತಿಳಿದು, ನಮ್ಮ ಅಣ್ಣನನ್ನು ಕೊಂದವರು ನೀವೇ ಅಲ್ಲವೇ ? ಇದೇ ನಿಮ್ಮ ಕೊನೆಗಾಲವೆಂದು ಹೇಳಿ ಯುದ್ಧಮಾಡಿ, ಭೀಮನಿಂದ ಹತನಾದನು [ಭಾರ -ವನ. ೧೧].

**ಕಿಷ್ಕಿಂಧಾ** —ಒಂದು ಪಟ್ಟಣ ನೋಡು—ಋಕ್ಷರಜ ವಾಲಿ ಸುಗ್ರೀವರ ರಾಜಧಾನಿ ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದಿಯ ಉತ್ತರ ತೀರದಲ್ಲಿದೆ ಇದರ ಬಳಿಯಲ್ಲಿಯೇ ಹಂಪೆಯೆಂದು ಕರೆಯಲ್ಪಡುವ ಪಂಪಾಕ್ಷೇತ್ರವೂ ಇದೆ. ಇದು ಈಗ ಶಿಥಿಲವಾಗಿದ್ದರೂ ಇದರ ಸೌಂದರ್ಯವನ್ನು ನೋಡುವುದಕ್ಕಾಗಿ ಅನೇಕ ಮಂದಿ ಈಗಲೂ ಹೋಗಿಬರುತ್ತಾರೆ [ಭಾರ -ಸ. ೩೨, ೫೦. ವನ. ೨೮೧, ೨೯೨. ರಾಮಾ.- ಕಿ.ಕಾಂ ]

**ಕೀಚಕ.**—ಕೇಕಯ ರಾಜನಿಂದ ಮಾಲವಿಯಲ್ಲಿ ಜನಿಸಿದವನು. ಇವನಿಗೆ ೧೦೫ ಮಂದಿ ಒಡಹುಟ್ಟಿದವರೂ ಸುದೇಷ್ಣೆಯೆಂಬ ಸೋದರಿಯೂ ಇದ್ದರು ಸುದೇಷ್ಣೆ ವಿರಾಟ ರಾಜನ ರಾಣಿ ಇವನು ಬಾಣಾಸುರನ ಅಂಶದಿಂದ ಜನಿಸಿದವನು. ಇವನೂ ಇವನ ತಮ್ಮಂದಿರಾದ ೧೦೫ ಮಂದಿ ಉಪಕೀಚಕರೂ ವಿರಾಟ ರಾಜನಲ್ಲಿಯೇ ಇರುತ್ತಿದ್ದರು. ಕೀಚಕನು ವಿರಾಟನ ಸೇನಾಪತಿಯಾಗಿದ್ದನು. ಮಹಾಬಲಶಾಲಿ. [ವಿರಾ ೨೧]. ಇವನಿಗೆ ಸಿಂಹಬಲನೆಂಬುದು ನಾಮಾಂತರ. ಪಾಂಡವರು ವಿರಾಟ ರಾಜಧಾನಿಯಲ್ಲಿ ಅಜ್ಞಾತವಾಸಮಾಡುತ್ತಿದ್ದಾಗ, ದ್ರೌಪದಿಯೂ ಸೈರಂಧ್ರಿಯ

ವೇಷದಿಂದ ರಾಣಿಯಾದ ಸುದೇಷ್ಣೆಯಲ್ಲಿ ಇದ್ದಳು. ಒಮ್ಮೆ ಕೀಚಕನು ತನ್ನ ಅಕ್ಕನ ಮನೆಗೆ ಬಂದಿದ್ದಾಗ ಅಲ್ಲಿ ಸೈರಂಧ್ರಿಯನ್ನು ಕಂಡು ಮೋಹಭರಿತನಾಗಿ ಆಕೆಯನ್ನು ಹೊಂದಲು ಎಷ್ಟೋ ಬಗೆಯಿಂದ ಪ್ರಯತ್ನಿಸಿದರೂ ಕೃತಕೃತ್ಯನಾಗದೆ ತನ್ನ ಅಕ್ಕನಲ್ಲಿ ತನ್ನ ಮನೋಗತವನ್ನು ಹೇಳಿಕೊಂಡನು. ಅದೂ ಸಫಲವಾಗಲಿಲ್ಲ. ಬಳಿಕ ಆಕೆಯ ಮೂಲಕ ತನ್ನ ಮನೆಗೆ ಸುರೆಯನ್ನು ಕಳುಹಿಸುವಂತೆ ಸುದೇಷ್ಣೆಯನ್ನು ಬೇಡಿಕೊಂಡನು. ಸುದೇಷ್ಣೆ ಸಮ್ಮತಿಸಿದಳು. ಆದರೆ ಇವರ ಒಳಸಂಚನ್ನು ತಿಳಿದಿದ್ದ ಮಾಲಿನಿ(ದ್ರೌಪದಿ) ಇದಕ್ಕೆ ಸಮ್ಮತಿಸಲಿಲ್ಲ. ರಾಣಿಯು ನಿರ್ಬಂಧ ಹೆಚ್ಚಿದ ಕಾರಣ ಮಾಲಿನಿ ವಿಧಿಯಿಲ್ಲದೆ ಹೊರಟು ತನ್ನ ದೇಹಸಂರಕ್ಷಣೆಗಾಗಿ ಸೂರ್ಯನನ್ನು ಬೇಡಿ, ಅದೃಶ್ಯನಾದ ಒಬ್ಬ ಅಂಗರಕ್ಷಕನನ್ನು ಪಡೆದು, ಕೀಚಕನ ಮನೆಗೆ ಹೋದಳು. ಕೀಚಕನು ಮಾಲಿನಿಯನ್ನು ಕಂಡಕೂಡಲೇ ಆನಂದ ಪರವಶನಾಗಿ, ಅನೇಕ ರೀತಿಯಿಂದ ಬೇಡಿಕೊಂಡನು. ಕಡೆಗೆ ಆಕೆಯನ್ನು ಭಂಗಪಡಿಸತೊಡಗಿ, ಅದೃಶ್ಯನಾಗಿದ್ದ ಅಂಗರಕ್ಷಕನಿಂದ ತಾನೇ ಭಂಗಪಟ್ಟನು. ಮಾಲಿನಿ ರಾಜಾಸ್ಥಾನವನ್ನು ಹೊಕ್ಕು ಕೀಚಕನ ದುರುದುಂಬಿತನವನ್ನು ಅರಸನಲ್ಲಿ ಮೊರೆಯಿಟ್ಟಳು. ಅರಸನ ಬಳಿಯಲ್ಲಿಯೇ ಇದ್ದ ಕಂಕನು(ಯುಧಿಷ್ಠಿರ) "ನಿನ್ನಂತಹ ಪತಿವ್ರತೆಯರು ರಾಜಸಭೆಯನ್ನು ಹುಗುವುದು ತರವಲ್ಲ. ನಿನ್ನ ಗಂಡನಲ್ಲಿ ಹೇಳು ಹೋಗು" ಎಂದನು. ಮಾಲಿನಿ ದುಃಖಭರಿತೆಯಾಗಿ, ರಾತ್ರಿಯ ಸಮಯದಲ್ಲಿ ಪಾಕಶಾಲೆಯನ್ನು ಹೊಕ್ಕು, ಅಲ್ಲಿ ನಿದ್ರಿಸುತ್ತಿದ್ದ ವಲಲ(ಭೀಮ)ನಿಗೆ ಹೇಳಿದಳು. ತರುವಾಯ ಭೀಮನ ಸೂಚನೆಯಂತೆ ಕೀಚಕನಲ್ಲಿ ಕಪಟಪ್ರೀತಿಯನ್ನು ನಟಿಸತೊಡಗಿದಳು. ಇಬ್ಬರೂ ರಾಗಸಮುದ್ರದಲ್ಲಿ ಓಲಾಡತಕ್ಕವರಂತೆ ಪ್ರಣಯಸಲ್ಲಾಪಗಳನ್ನು ನಡೆಯಿಸಿದರು. ಬಳಿಕ ಮಾಲಿನಿಯ ಸೂಚನೆಯಂತೆಯೇ ಕೀಚಕನು ನಡುರಾತ್ರಿಯಲ್ಲಿ ನಾಟ್ಯಶಾಲೆಯನ್ನು ಹೊಕ್ಕನು. ಅಲ್ಲಿ ಸ್ತ್ರೀ ವೇಷದಿಂದ ಅವಿತುಕೊಂಡಿದ್ದ ಭೀಮನು ಕೀಚಕನನ್ನು ಮುಷ್ಟಿಯುದ್ಧದಲ್ಲಿ ಕೊಂದನು. ಕೀಚಕನು ಮಡಿದ ಸುದ್ದಿಯನ್ನು ಕೇಳಿ ಉಪಕೀಚಕರು ಒಟ್ಟುಗೂಡಿ, ಕೀಚಕನ ಕೊಲೆಗೆ ಕಾರಣಳಾದ ಮಾಲಿನಿಯನ್ನೂ ಕೀಚಕನ ಶವದೊಂದಿಗೆ ಬಿಗಿದು ಸ್ಮಶಾನಕ್ಕೆ ಕೊಂಡುಯ್ದರು. ಈ ವರ್ತಮಾನವನ್ನು ತಿಳಿದ ಭೀಮನು ಬೇಗನೆ ಸ್ಮಶಾನಕ್ಕೆ ಹೋಗಿ ಆ ೧೦೫ ಮಂದಿ ಉಪಕೀಚಕರನ್ನೂ ಕೊಂದು ದ್ರೌಪದಿಯನ್ನು ಬಿಡಿಸಿದನು [ವಿರಾ ೧೪, ೨೬].

**ಕೀರ್ತಿಮತೀ.**—ಶುಕ್ರಾಚಾರ್ಯನ ಮಗಳು. ಈಕೆಗೆ ಕೃತ್ವಿಯೆಂಬುದು ನಾಮಾಂತರ. ಈಕೆ ವಿಭ್ರಾಜನೆಂಬ ಅರಸನ ಮಗನಾದ ಅಣುಹ ರಾಜನನ್ನು ಮದುವೆಯಾಗಿ ಬ್ರಹ್ಮದತ್ತನೆಂಬ ಮಗನನ್ನು ಪಡೆದಳು [ಹರಿ -೧, ೨೦. ಮತ್ಸ್ಯ -೨೦, ೨೧]. ನೋಡು—ಅಣುಹ, ಪೂಜನೀ.

**ಕೀರ್ತಿಮನ್ತ.**—(i) ಉತ್ತಾನಪಾದ ರಾಯನ ಹಿರಿಯ ಹೆಂಡತಿಯಾದ ಸುನೀತಿಯ ಮಗನು. ಧ್ರುವನ ತಮ್ಮ [ಭಾಗ.-೪, ೯].

(ii) ವಸುದೇವನಿಂದ ದೇವಕಿಯಲ್ಲಿ ಜನಿಸಿ ಕಂಸನಿಂದ ಹತರಾದ ಮಕ್ಕಳಲ್ಲಿ ಮೊದಲನೆಯವ. ಶ್ರೀ ಕೃಷ್ಣನ ಹಿರಿಯ ಅಣ್ಣನು [ಭಾಗ -೯, ೨೪ ಹರಿ -೧, ೩೫]

**ಕುಚೇಲ**—ಒಬ್ಬ ಬ್ರಾಹ್ಮಣ ಬಲರಾಮ ಕೃಷ್ಣರು ಸಾಂದೀಪಿನಿಯೆಂಬ ಬ್ರಾಹ್ಮಣನ ಬಳಿ ಗುರುಕುಲವಾಸಮಾಡುತ್ತಿದ್ದಾಗ ಈತನು ಇವರ ಸಹಪಾಠಿಯಾಗಿದ್ದನು ಬಲರಾಮ ಕೃಷ್ಣರಿಗೆ ಈತನಲ್ಲಿ ಗುರುಭಕ್ತಿಯಿದ್ದಿತು ಕುಚೇಲನೂ ಇವರಲ್ಲಿ ಸೋದರಪ್ರೇಮದಿಂದ ವರ್ತಿಸುತ್ತಿದ್ದನು ವಿದ್ಯಾಭ್ಯಾಸ ಮುಗಿದ ಕೂಡಲೇ ಈ ಮೂವರೂ ತಂತಮ್ಮ ಮನೆಗಳಿಗೆ ತೆರಳಿದರು ಕುಚೇಲನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅಯಾಚಿತವಾಗಿ ದೊರೆತ ಅತ್ಯಲ್ಪ ವಸ್ತುವಿನಿಂದಲೇ ಸಂತುಷ್ಟನಾಗಿ ಕಾಲಹರಣಮಾಡುತ್ತಿದ್ದನು ಆತನಿಗೆ ತಕ್ಕಂತೆಯೇ ಪತಿವ್ರತೆಯರಿಗೆ ಆದರ್ಶಪ್ರಾಯಳಾದ ಗೃಹಿಣಿಯೂ ದೊರೆತಿದ್ದಳು ಸಂತಾನ ಮಾತ್ರ ಸಮೃದ್ಧಿಯಾಗಿದ್ದಿತು ಒಮ್ಮೆ ಕುಚೇಲನು ತನ್ನ ಗೃಹಿಣಿಯ ಒತ್ತಾಯದಿಂದ ಬಾಲ್ಯಸ್ನೇಹಿತನಾದ ಕೃಷ್ಣನನ್ನು ಸಂದರ್ಶಿಸಲು ಹುರುಪುಗೊಂಡವನಾಗಿ, ಸ್ವಲ್ಪ ಅವಲಕ್ಕಿಯನ್ನು ತೆಗೆದುಕೊಂಡು ಹೊರಟು ಶ್ರೀ ಕೃಷ್ಣನ ಅರಮನೆಯ ಬಾಗಿಲನ್ನು ಸೇರಿ, ತನ್ನ ಆಗಮನ ವಾರ್ತೆಯನ್ನು ಹೇಳಿಕಳುಹಿದನು. ಕೃಷ್ಣನು ತನ್ನ ಬಾಲ್ಯಸ್ನೇಹಿತನ ಆಗಮನ ವಾರ್ತೆಯನ್ನು ಕೇಳಿದೊಡನೆಯೇ ಇದಿರ್ಗೊಂಡು ಅಕ್ಕರೆಯಿಂದ ಒಳಕ್ಕೆ ಕರೆದುಯ್ದು ಸತ್ಕರಿಸಿದನು ಕುಶಲಪ್ರಶ್ನಾದಿಗಳು ನಡೆದೊಡನೆಯೇ ಶ್ರೀ ಕೃಷ್ಣನು ತನಗಾಗಿ ಕುಚೇಲನು ತಂದಿದ್ದ ಅವಲಕ್ಕಿಯನ್ನು ತಿಂದನು. ಕುಚೇಲನು ಕೆಲವು ದಿನಗಳ ವರೆಗೆ ಅಲ್ಲಿಯೇ ಸಂತೋಷವಾಗಿ ಇದ್ದು, ಕೃಷ್ಣನನ್ನು ಬೀಳ್ಕೊಂಡು ಹೊರಟನು ಸರ್ವಜ್ಞನಾದ ಕೃಷ್ಣನೂ ಕುಚೇಲನ ಗೃಹಕೃತ್ಯಗಳನ್ನು ವಿಚಾರಿಸಲಿಲ್ಲ. ಪರಯಾಚನಾ ವಿಮುಖನಾಗಿದ್ದ ಕುಚೇಲನೂ ತನ್ನ ದುಃಸ್ಥಿತಿಯನ್ನು ಹೇಳಿಕೊಳ್ಳಲಿಲ್ಲ. ಕುಚೇಲನು ನಿಶ್ಚಿಂತನಾಗಿ ಮನೆಯ ದಾರಿಯನ್ನು ಹಿಡಿದನು. ಗ್ರಾಮದ ಸಮೀಪಕ್ಕೆ ಬರುತ್ತಲೇ ಕುಚೇಲನು ಭ್ರಾಂತಿಗೊಂಡನು ಕೃಷ್ಣನ ಅಪ್ಪಣೆಯಂತೆ ವಿಶ್ವಕರ್ಮನು ಆ ಗ್ರಾಮವನ್ನೆಲ್ಲ ದಿವ್ಯನಗರಿಯನ್ನಾಗಿ ಮಾರ್ಪಡಿಸಿದ್ದನು. ಕುಚೇಲನ ಮನೆ ಗುರುತೇ ಸಿಕ್ಕಲಿಲ್ಲ. ಆಗ ಕುಚೇಲನ ಮಡದಿ ದಿವ್ಯ ವಸ್ತ್ರಾಭರಣಭೂಷಿತೆಯಾಗಿ ಬಂದು ಇದಿರ್ಗೊಂಡು ಒಳಕ್ಕೆ ಕರೆದುಯ್ದಳು. ಕುಚೇಲನು ಶ್ರೀ ಕೃಷ್ಣನ ಮಹಿಮೆಯನ್ನು ಕೊಂಡಾಡುತ್ತ ದೈವನ್ಯಸ್ತಭರನಾಗಿ, ಎಂದಿನಂತೆಯೇ ಪರಮಾತ್ಮಧ್ಯಾನಮಗ್ನನಾಗಿ ಸಂತೋಷದಿಂದ ಕಾಲಹರಣ ಮಾಡುತ್ತಿದ್ದನು. ಈತನಿಗೆ ಸುದಾಮಾ, ಶ್ರೀ ದಾಮಾ ಎಂಬ ನಾಮಾಂತರಗಳೂ ಇವೆ [ಭಾಗ.-೧೦, ೮೦].

**ಕುಜ.**—(i) ಭೂ ದೇವಿಯ ಮಗನಾದ ಅಂಗಾರಕ

(ii) ಭೂ ದೇವಿಯ ಮಗನಾದ ನರಕಾಸುರನು [ಭಾಗ.-೩, ೭].

**ಕುಜ್ಞ್ಭ**—ಒಬ್ಬ ರಾಕ್ಷಸನು. ಮಹಿಷಾಸುರ, ತಾರಕಾಸುರ ಮುಂತಾದ ರಾಕ್ಷಸ ಚಕ್ರವರ್ತಿಗಳಿಗೆಲ್ಲ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದವನು [ಮತ್ಸ್ಯ -೧೪೬]

**ಕುಞ್ಜರ.**—(i) ಹನೂಮಂತನ ಜನನಿಯಾದ ಅಂಜನೆಯ ತಂದೆ [ರಾಮಾ.-ಕಿ ೬೬]

(ii) ಸಿಂಧು ದೇಶದ ಅರಸನಾದ ವೃದ್ಧಕ್ಷತ್ರನ ಕಿರಿಯ ಮಗ. ಜಯದ್ರಥನ ತಮ್ಮ [ವನ ೩೬೬]

**ಕುಣಿಗಾರ್ಗ್ಯ.**—ಒಬ್ಬ ಬ್ರಹ್ಮರ್ಷಿ ಈತನ ಮಗಳಾದ ಸುಲಭಾಮೈತ್ರೇಯಿ ಯೆಂಬವಳು ಅನುಗಾಲವೂ ವಿವಾಹವಾಗಲೊಲ್ಲದೆ ಬ್ರಹ್ಮಚಾರಿಣಿಯಾಗಿದ್ದಳು ಅಷ್ಟರಲ್ಲಿ ತಂದೆಯೂ ಮೃತನಾದನು ಈಕೆಯೂ ತಪಸ್ಸಿನಲ್ಲಿಯೇ ಮುದುಕಿ ಯಾದಳು. ಒಂದು ದಿನ ನಾರದನು ಈಕೆಯ ಬಳಿಗೆ ಬಂದು, ಮಾತನಾಡುವ ಸಂದರ್ಭದಲ್ಲಿ '' ನೀನು ತಪಸ್ಸಿನಿಂದಲೇ ವಾರ್ಧಕ್ಯವನ್ನು ಹೊಂದಿರುವೆಯಾದರೂ, ಸಂಸ್ಕಾರ(ಸ್ತ್ರೀಯರಿಗೆ ಮುಖ್ಯವಾದ ವಿವಾಹ) ಹೀನೆಯಾಗಿರುವೆಯಾಗಿ ನಿನಗೆ ಉತ್ತಮಗತಿ ದೊರೆಯಲಾರದು ಆದುದರಿಂದ ಮದುವೆಯಾಗಲೇಬೇಕು '' ಎಂಬುದಾಗಿ ಬಲಾತ್ಕರಿಸಿದನು ಮೈತ್ರೇಯಿ ಒಂದೊಂದು ಆಶ್ರಮವನ್ನೂ ಹೊಕ್ಕು ತನ್ನನ್ನು ಯಾರಾದರೂ ಮದುವೆಯಾಗುವುದಾದರೆ, ಅಂತಹವನಿಗೆ ತನ್ನ ತಪಸ್ಸಿ ನಲ್ಲಿ ಅರ್ಧ ಭಾಗವನ್ನೂ ಮತ್ತು ಐಶ್ವರ್ಯವನ್ನೂ ಕೊಡುವುದಾಗಿ ಬೇಡಿಕೊಂಡಳು. ಎಲ್ಲರೂ ಹಿಂಜರಿದರು. ಕಡೆಗೆ ಗಾಲವಮುನಿ ಪುತ್ರನಾದ ಶೃಂಗವಂತನೆಂಬ ಮುನಿ ಮದುವೆಯಾದನು. ಈಕೆ ಮದುವೆಯ ರಾತ್ರಿ ತನ್ನ ತಪೋಮಹಿಮೆ ಯಿಂದ ಸೌಂದರ್ಯಭರಿತೆಯಾದ ತರುಣಿಯ ರೂಪವನ್ನು ಧರಿಸಿ, ತನ್ನ ಪತಿಯೊಂದಿಗೆ ಸುಖವಾಗಿದ್ದು, ಆ ಬಳಿಕ ದೇಹತ್ಯಾಗಮಾಡಿದಳು [ಭಾರ.-ಶಲ್ಯ. ೫೩].

**ಕುಣ್ಡಧಾರ**—(i) ಮೇಘರಾಜರಲ್ಲಿ ಒಬ್ಬ. ಒಂದು ದಿನ ಒಬ್ಬ ಬ್ರಾಹ್ಮಣನು ಈತನನ್ನು ಹೊಗಳಿದನು ಈತನು ಬ್ರಾಹ್ಮಣನ ಇಷ್ಟಾರ್ಥವೇನೆಂದು ಕೇಳ ಲಾಗಿ, ಬ್ರಾಹ್ಮಣನು ತನಗೆ ವಿಪುಳವಾದ ಧನರಾಶಿಯನ್ನು ಕೊಡುವಂತೆ ಕೇಳಿದನು. ಅದಕ್ಕೆ ಕುಣ್ಡಧಾರನು '' ಪುರುಷಾರ್ಥಗಳಲ್ಲಿ ಧರ್ಮವೇ ಮುಖ್ಯವೂ, ಉತ್ತಮವೂ ಆದುದು. ಧನದಿಂದ ಅನೇಕವಾಗಿ ಅನರ್ಥಗಳು ಬರುವುವು '' ಎಂಬುದಾಗಿ ಧರ್ಮದ ಪ್ರಾಶಸ್ತ್ಯವನ್ನು ವಿವರಿಸಿ, ತನ್ನಲ್ಲಿ ದ್ರವ್ಯವಿಲ್ಲದ ಕಾರಣ ತನ್ನ ಸ್ನೇಹಿತನಾದ

ಮಾಣಿಭದ್ರನೆಂಬ ಯಕ್ಷನಲ್ಲಿಗೆ ಬ್ರಾಹ್ಮಣನನ್ನು ಕರೆದುಕೊಂಡು ಹೋಗಿ ಆತನಿಗೆ ವಿಪುಲವಾದ ಧನರಾಶಿಯನ್ನು ಕೊಡಿಸಿದನು [ಭಾರ -ಶಾಂತಿ. ೨೭೭].

(ii) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬನು ಭೀಮನಿಂದ ಮಡಿದನು [ಆದಿ. ೧೩೧. ಭೀ. ೮೮].

**ಕುಣ್ಡಿನ**—(i) ವಸಿಷ್ಠವಂಶದ ಒಬ್ಬ ಮಹರ್ಷಿ ಗೋತ್ರಪ್ರವರ್ತಕನಾದ ಕೌಂಡಿನ್ಯಮಹರ್ಷಿ ಈತನ ಮಗನು [ಮತ್ಸ್ಯ -೨೦೦]

(ii) ಒಂದು ಪಟ್ಟಣ ದಮಯಂತಿಯ ತಂದೆಯಾದ ಭೀಮ(ಭೀಷ್ಮಕ) ರಾಜನ ಕಾಲದಲ್ಲಿ ಇದು ವಿದರ್ಭದೇಶದ ರಾಜಧಾನಿಯಾಗಿದ್ದಿತು [ವನ ೫೭] ಇದು ಮಧ್ಯಪ್ರಾಂತಗಳಲ್ಲಿ ಅಮರಾವತಿಯಿಂದ (Amroti) ೪೦ ಮೈಲುಗಳ ದೂರದಲ್ಲಿದೆ ಪಾಂಡವರ ಕಾಲದಲ್ಲಿ ರುಕ್ಮಿಣಿಯ ತಂದೆಯಾದ ಭೀಷ್ಮಕರಾಜನು ಇಲ್ಲಿ ರಾಜ್ಯಭಾರ ಮಾಡುತ್ತಿದ್ದನು [ಭಾಗ.-೧೦, ೫೨].

**ಕುನ್ತಲ**.—ಒಂದು ದೇಶ ಮದ್ರಾಸು ಆಧಿಪತ್ಯಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯ ಒಂದು ಭಾಗ ಪಾಂಡವರ ಕಾಲದಲ್ಲಿ ಇದು ಪ್ರಸಿದ್ಧವಾದ ಒಂದು ದೇಶವಾಗಿದ್ದಿತು ಇದನ್ನು ಈಗ ಕುರುಗೋಡು ಎಂಬುದಾಗಿ ಕರೆಯುತ್ತಾರೆ ನೋಡು—ಚಂದ್ರಹಾಸ [ಭೀ ೯].

**ಕುನ್ತಿ**—ಯದುವಂಶದ ಶೂರರಾಜನ ಮಗಳು. ವಸುದೇವನ ಒಡಹುಟ್ಟಿದವಳು. ಶೂರರಾಜನ ಸೋದರತ್ತೆಯ ಮಗನಾದ ಕುಂತಿಭೋಜನು ಕುಂತಿ ದೇಶದಲ್ಲಿ ರಾಜ್ಯಭಾರಮಾಡುತ್ತಿದ್ದನು ಇವನಿಗೆ ಮಕ್ಕಳಿಲ್ಲವಾಗಿ ಶೂರರಾಜನ ಮಗಳಾದ ಪೃಥೆಯನ್ನು ಸಾಕು ತೆಗೆದುಕೊಂಡನು ಈ ಕಾರಣದಿಂದಲೇ ಪೃಥೆಗೆ ಕುಂತಿಯೆಂಬ ಅಡ್ಡಹೆಸರು ಬಂದಿತು. ಈಕೆಗೆ ೧. ಶ್ರುತದೇವಾ, ೨ ಶ್ರುತಕೀರ್ತಿ, ೩. ರಾಜಾಧಿದೇವಿ, ೪. ಶ್ರುತಶ್ರವೆಯೆಂಬುದಾಗಿ ನಾಲ್ವರು ತಂಗಿಯರು ಈಕೆ ಸಿದ್ಧಿಯ ಅಂಶದಿಂದ ಜನಿಸಿದವಳು [ಭಾರ -ಆದಿ. ೬೮ ಭಾಗ.-೯, ೨೪. ವಿಷ್ಣು.-೪, ೧೪. ಹರಿ.-೧, ೩೪]. ಕುಂತಿ ಬಾಲ್ಯದಲ್ಲಿ ತನ್ನ ತಂದೆಯ ಮನೆಯಲ್ಲಿದ್ದಾಗ ದುರ್ವಾಸಮುನಿ ಅಲ್ಲಿಗೆ ಬಂದು ಕೆಲ ಕಾಲ ಅರಮನೆಯಲ್ಲಿಯೇ ವಾಸವಾಗಿದ್ದನು. ಆಗ ಕುಂತಿಭೋಜನು ಇವಳನ್ನು ಮುನಿಯ ಶುಶ್ರೂಷೆಗಾಗಿ ನಿಯಮಿಸಿದನು. ಈಕೆಯ ಶುಶ್ರೂಷೆಯಿಂದ ಸಂತುಷ್ಟನಾದ ಮುನಿ ಒಂದು ಮಂತ್ರವನ್ನು ಕುಂತಿಗೆ ಉಪದೇಶಿಸಿ, ಆ ಮಂತ್ರಬಲದಿಂದ ತನಗೆ ಬೇಕಾದ ದೇವತೆಯನ್ನು ತನ್ನಲ್ಲಿಗೆ ಬರಮಾಡಿಕೊಳ್ಳಬಹುದೆಂದು ಹೇಳಿ ಹೊರಟುಹೋದನು [ಭಾರ.-ಆದಿ. ೬೮, ೧೨೦, ೧೨೮. ವನ. ೩೦೬. ದೇ. ಭಾ.-೨, ೬]. ಬಳಿಕ ಕುಂತಿ ಒಂದು ದಿನ ಉದಯಿಸುತ್ತಿದ್ದ ಸೂರ್ಯನನ್ನು ಕಂಡು ದುರ್ವಾಸಮುನಿ ತನಗೆ ಉಪದೇಶಮಾಡಿದ ಮಂತ್ರವನ್ನು

ಪರೀಕ್ಷಿಸುವ ಉದ್ದೇಶದಿಂದ ಆ ಮಂತ್ರವನ್ನು ಉಚ್ಚರಿಸಿ ಸೂರ್ಯನನ್ನು ಕರೆದು ಆತನ ಸಾನ್ನಿಧ್ಯದಿಂದ ಕರ್ಣನನ್ನು ಪಡೆದಳು ನೋಡು—ಕರ್ಣ [ಆದಿ. ೧೨೦, ೩೦೭. ವನ. ೩೦೮, ೩೦೯] ಬಳಿಕ ಭೀಷ್ಮನು ಈಕೆಯನ್ನು ತಂದು ಪಾಂಡುರಾಜನಿಗೆ ಮದುವೆ ಮಾಡಿದನು. ಮದ್ರದೇಶಾಧಿಪನಾದ ಋತಾಯನ ರಾಜನ ಮಗಳಾದ ಮಾದ್ರಿ ಪಾಂಡುರಾಜನ ಕಿರಿಯ ಹೆಂಡತಿ. ಪಾಂಡುರಾಜನು ಮುನಿಶಾಪಗ್ರಸ್ತನಾದ ಬಳಿಕ (ನೋಡು—ಕಿಂದಮ) ರಾಜ್ಯವನ್ನು ಧೃತರಾಷ್ಟ್ರನಿಗೆ ಒಪ್ಪಿಸಿ, ಅರಣ್ಯದಲ್ಲಿಯೇ ಮುನಿವೃತ್ತಿಯಿಂದ ಕಾಲಹರಣಮಾಡುತ್ತಿದ್ದನು ಇಂತಿರಲು ಒಂದು ದಿನ ಪಾಂಡು ತನಗೆ ಸಂತಾನವಿಲ್ಲದುದಕ್ಕಾಗಿ ಬಹಳವಾಗಿ ಪರಿತಪಿಸಿದನು. ಆಗ ಕುಂತಿ ತಾನು ಬಾಲ್ಯದಲ್ಲಿ ದುರ್ವಾಸಮುನಿಯಿಂದ ಪಡೆದ ಮಂತ್ರದ ಮಹಿಮೆಯನ್ನು (ಕರ್ಣನ ವಿಚಾರದ ಹೊರತು) ತಿಳುಹಿದಳು ಆಗ ಪಾಂಡು ಹೇಗಾದರೂ ಸಂತಾನವನ್ನು ಪಡೆಯುವಂತೆ ಕುಂತಿಯನ್ನು ಪ್ರೋತ್ಸಾಹಿಸಲಾಗಿ, ಕುಂತಿ ಯಮ, ವಾಯು, ದೇವೇಂದ್ರರ ಸಾನ್ನಿಧ್ಯದಿಂದ ಯುಧಿಷ್ಠಿರ ಭೀಮಾರ್ಜುನರೆಂಬ ಮೂವರು ಮಕ್ಕಳನ್ನು ಪಡೆದಳು ಬಳಿಕ ಮಾದ್ರಿ ತನಗೆ ಸಂತಾನವಿಲ್ಲವೆಂದು ಪರಿತಪಿಸುತ್ತಿರಲಾಗಿ ಪಾಂಡುವಿನ ಮೂಲಕ ಅವಳ ಮನೋಭಿಪ್ರಾಯವನ್ನು ಅರಿತ ಕುಂತಿ ಆ ಮಂತ್ರವನ್ನು ಮಾದ್ರಿಗೂ ಉಪದೇಶಿಸಿದಳು. ಬಳಿಕ ಮಾದ್ರಿ ಆ ಮಂತ್ರಮಹಿಮೆಯಿಂದ ಅಶ್ವಿನೀ ದೇವತೆಗಳನ್ನು ಬರಮಾಡಿಕೊಂಡು ಅವರ ಮೂಲಕ ನಕುಲ ಸಹದೇವರೆಂಬ ಅವಳಿ ಮಕ್ಕಳನ್ನು ಹೆತ್ತಳು ಕೆಲ ಕಾಲದ ಬಳಿಕ ಒಮ್ಮೆ ವಸಂತ ಮಾಸದಲ್ಲಿ ಪಾಂಡು ರಾಜನು ಮೋಹಭರಿತನಾಗಿ ಮಾದ್ರಿಯೊಂದಿಗೆ ವಿಹರಿಸಿ, ಮುನಿ ಶಾಪದಂತೆ ಮೃತನಾಗಲು, ಪತಿಯ ಮರಣಕ್ಕೆ ಕಾರಣಭೂತಳಾದ ಮಾದ್ರಿ ಪಾಂಡು ರಾಜನ ದೇಹದೊಂದಿಗೆ ಸಹಗಮನಮಾಡಿದಳು. ಆ ಬಳಿಕ ಅರಣ್ಯದಲ್ಲಿದ್ದ ಮುನಿಗಳು ಕುಂತಿಯನ್ನೂ ಐವರು ಪಾಂಡುತನಯರನ್ನೂ ಧೃತರಾಷ್ಟ್ರನಲ್ಲಿಗೆ ಕರೆತಂದು ಬಿಟ್ಟರು [ಆದಿ ೬೪, ೧೨೦, ೩೦೭. ವನ ೩೦೮, ೩೦೯] ಪಾಂಡವರು ಅರಗಿನ ಮನೆಯಿಂದ ತಪ್ಪಿಸಿಕೊಂಡು ಬಂದು ಏಕಚಕ್ರನಗರದಲ್ಲಿ ವಾಸಮಾಡುತ್ತಿದ್ದಾಗ, ಕುಂತಿ ಬಕಾಸುರನ ವೃತ್ತಾಂತವನ್ನು ಭೀಮನಿಗೆ ತಿಳಿಸಿ, ಅವನನ್ನು ಬಕಾಸುರವಧೆಯಲ್ಲಿ ಹುರಿದುಂಬಿಸಿದಳು [ಆದಿ. ೧೭೪]. ಪಾಂಡವರು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದಾಗ ಕುಂತಿಯೂ ಅವರ ಸಂಗಡಲೇ ಇದ್ದಳು. ಪಾಂಡವರು ಕಪಟ ದ್ಯೂತದಲ್ಲಿ ಸೋತು, ರಾಜ್ಯಭ್ರಷ್ಟರಾಗಿ ಕಾಡಿಗೆ ಹೋದಾಗ ಕುಂತಿ ವಿದುರನ ಮನೆಯಲ್ಲಿದ್ದಳು ಶ್ರೀ ಕೃಷ್ಣನು ಪಾಂಡವರ ರಾಯಭಾರಿಯಾಗಿ ದುರ್ಯೋಧನನಲ್ಲಿಗೆ ಬಂದಿದ್ದಾಗ ವಿದುರನ ಮನೆಯಲ್ಲಿಯೇ ಊಟ ಉಪಚಾರಗಳನ್ನು ನಡೆಯಿಸಿದನು. ಆಗ ಕುಂತಿ ಕೃಷ್ಣನನ್ನು ಸಂದರ್ಶಿಸಿದಳು. ಬಳಿಕ ಒಮ್ಮೆ ಕರ್ಣನು ಸೂರ್ಯೋಪಾಸನೆ

ಯನ್ನು ಮಾಡುತ್ತಿದ್ದಾಗ ಈಕೆ ಕರ್ಣನ ಬಳಿ ಹೋಗಿ, ಕರ್ಣನನ್ನು ತನ್ನ ಮಗನೆಂದು ಹೇಳಿ ಆತನನ್ನು ಪಾಂಡವರ ಪಕ್ಷಕ್ಕೆ ಸೇರುವ ಹಾಗೆ ಪ್ರೋತ್ಸಾಹಗೊಳಿಸಿದಳು [ಉದ್ಯೋ ೧೪೪, ೧೪೫]. ಕುಂತಿ ವಿದುರನಿಗೆ ಕರ್ಣನನ್ನು ತನ್ನ ಮಗನೆಂದು ಹೇಳಿದ್ದು [ಉದ್ಯೋ ೧೪೪] ಮಹಾಭಾರತ ಯುದ್ಧಾವಸಾನದಲ್ಲಿ ಯುಧಿಷ್ಠಿರನು ಯುದ್ಧದಲ್ಲಿ ಮಡಿದ ಜ್ಞಾತಿ, ಬಂಧುಗಳಿಗೆಲ್ಲ ತಿಲೋದಕವನ್ನು ಕೊಡಲು ಉಪಕ್ರಮಿಸಿದಾಗ ಕುಂತಿ ಯುಧಿಷ್ಠಿರನಿಗೆ, ಕರ್ಣನು ತನ್ನ ಹಿರಿಯ ಮಗನೆಂತಲೂ ಅವನಿಗೇ ಮೊತ್ತ ಮೊದಲು ತಿಲೋದಕವನ್ನು ಕೊಡಬೇಕೆಂತಲೂ ಹೇಳಿದಳು [ಸ್ತ್ರೀ ೨೭]. ಶ್ರೀ ಕೃಷ್ಣನಲ್ಲಿ ತನ್ನ ದುಃಸ್ಥಿತಿಯನ್ನು ಮೊರೆಯಿಟ್ಟ ಕುಂತಿಯನ್ನು ಕೃಷ್ಣನು ಸಮಾಧಾನಪಡಿಸಿದ್ದು [ಉದ್ಯೋ ೯೦] ಯುಧಿಷ್ಠಿರನು ರಾಜ್ಯಾಭಿಷಿಕ್ತನಾದ ಬಳಿಕ ಕುಂತಿ ಕರ್ಣನ ವಧೆಯಿಂದ ಅನುಗಾಲವೂ ಮನಸ್ಸಿನಲ್ಲಿಯೇ ಕೊರಗುತ್ತ, ಗಾಂಧಾರೀ ಧೃತರಾಷ್ಟ್ರರನ್ನು ಸಂಗಡ ಕರೆದುಕೊಂಡು ವ್ಯಾಸಮುನಿಯ ಆಶ್ರಮಕ್ಕೆ ಹೋದಳು. ಅಲ್ಲಿ ವ್ಯಾಸಮಹರ್ಷಿಗೆ ಕರ್ಣನು ತನ್ನ ಹಿರಿಯಮಗನೆಂಬುದನ್ನು ವಿವರಿಸಿ, ಕರ್ಣನನ್ನು ನೋಡಬೇಕೆಂದು ಬಯಸಿದಳು ವ್ಯಾಸಮುನಿ ತನ್ನ ತಪೋಮಹಿಮೆಯಿಂದ ಕರ್ಣಾದಿಗಳನ್ನು ತೋರಿಸಲಾಗಿ ಕುಂತಿ ವ್ಯಾಸರ ಅನುಮತಿಯಂತೆ ದಾವಾಗ್ನಿಯನ್ನು ಹೊಕ್ಕು ದೇಹತ್ಯಾಗಮಾಡಿದಳು [ಆಶ್ರಮ ೩೯]

**ಕುಂತಿಭೋಜ** —ಕುಂತಿ ದೇಶದ ಅರಸು ಈತನು ವಸುದೇವನ ತಂದೆಯಾದ ಶೂರ ರಾಜನ ಸೋದರತ್ತೆಯ ಮಗನು ತನಗೆ ಮಕ್ಕಳಿಲ್ಲದುದರಿಂದ ಶೂರ ರಾಜನ ಮಗಳಾದ ಪೃಥೆಯನ್ನು ಸಾಕು ತೆಗೆದುಕೊಂಡನು. ಈ ಕಾರಣದಿಂದಲೇ ಪೃಥೆಗೆ ಕುಂತಿಯೆಂಬ ಹೆಸರು ಬಂದಿತು [ಭಾರ.-ಆ ೬೮] ಕುಂತಿಭೋಜನ ಚರಿತ್ರೆ [ವನ ೩೦೪] ಕುಂತಿಭೋಜನು ಅತಿರಥನು [ಉದ್ಯೋ ೧೭೨]. ಇವನ ಹತ್ತು ಮಂದಿ ಮಕ್ಕಳೂ ಭಾರತಯುದ್ಧದಲ್ಲಿ ಅಶ್ವತ್ಥಾಮನಿಂದ ಹತರಾದರು [ದ್ರೋ ೧೫೭, ೧೮೩].

**ಕುನ್ದ**.—(i) ಕುಬೇರನ ನವನಿಧಿಗಳಲ್ಲಿ ಒಂದು ನನ್ದಕವೆಂಬುದು ಇದರ ನಾಮಾಂತರ. ಇದು ರಜಸ್ತಮಃಪ್ರಧಾನವಾದದ್ದು. ಈ ನಿಧಿಯನ್ನು ಪಡೆದವನು ಬಂಧುಬಳಗವನ್ನು ಪೋಷಿಸುತ್ತ ಸಕಲ ವಸ್ತುಗಳನ್ನೂ ಸಂಗ್ರಹಿಸುವನು. [ಮಾರ್ಕ.-೬೫].

(ii) ಭಾರತವರ್ಷದ ಒಂದು ದೇಶ [ಭೀ ೯].

(iii) ಶ್ರೀರಾಮನ ಆಸ್ಥಾನದಲ್ಲಿದ್ದ ಧರ್ಮತತ್ವವಿವೇಚಕನಾದ ಒಬ್ಬ ಮಹರ್ಷಿ [ರಾಮಾ.-ಉ ಪ್ರಕ್ಷಿಪ್ತಸ. ೨].

**ಕುಬೇರ**.—ವಿಶ್ರವಸನೆಂಬ ಬ್ರಹ್ಮನಿಂದ ಇಲಬಿಲೆಯಲ್ಲಿ ಜನಿಸಿದವನು. ಉತ್ತರ ದಿಕ್ಕಿನ ಅಧಿಪತಿ. ಸೋಮನೆಂಬುದು ಇವನ ಹೆಸರು ಈ ಕಾರಣದಿಂದಲೇ ಉತ್ತರ ದಿಕ್ಕಿಗೆ ಸೌಮ್ಯೆಯೆಂದೂ ಹೆಸರು. ಇವನ ಪ್ರಜೆಗಳು ಯಕ್ಷರು. ಇವನು ನರ

ವಾಹನನು. ನವನಿಧಿಗಳೂ ಇವನಿಗೆ ವಶವರ್ತಿಗಳು ಇವನ ಹೆಂಡತಿ ಋದ್ಧಿ. ಮಗನು ಮಹಾ ರೂಪವಂತನೆನಿಸಿದ ನಳಕೂಬರನು ಪಟ್ಟಣ ಅಲಕೆ [ಸಭಾ. ೧೦]. ಕುಬೇರನ ಹೆಂಡತಿ ಭದ್ರೆ [ಆದಿ ೨೧೬] ಈತನು ಪುಲಸ್ತ್ಯಮಹರ್ಷಿಯಿಂದ ಗೋ ಎಂಬಾಕೆಯಲ್ಲಿ ಜನಿಸಿದವನು [ವನ ೨೭೫] ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಈತನು ಅರ್ಜುನನಲ್ಲಿಗೆ ಬಂದು ಅನೇಕ ದಿವ್ಯಾಸ್ತ್ರಗಳನ್ನು ಕೊಟ್ಟನು [ವನ. ४१]. ಭೀಮಸೇನನು ಸೌಗಂಧಿಕಾಪಹರಣಾರ್ಥ ವಾಗಿ ಹೋಗಿದ್ದಾಗ ಭೀಮನಿಗೂ ಕುಬೇರನ ಅನುಚರರಿಗೂ ಯುದ್ಧವಾಗಿ ಭೀಮನು ಕುಬೇರನ ಅನುಚರರನ್ನು ಕೊಂದ ಸಮಾಚಾರವನ್ನು ಕೇಳಿ ಕುಬೇರನು, ಅಲ್ಲಿಗೆ ಬಂದು ಭೀಮನನ್ನು ಸಮಾಧಾನಪಡಿಸಿ, ಸೌಗಂಧಿಕಪುಷ್ಪವನ್ನು ಕೊಂಡುಯ್ಯಲು, ಭೀಮನಿಗೆ ಅನುಮತಿಯನ್ನಿತ್ತನು [ವನ. ೧೫೫]. ಅಗಸ್ತ್ಯ ಋಷಿಯ ಮೂಲಕ ಕುಬೇರನಿಗೆ ಮನುಷ್ಯನಿಂದ ಕಷ್ಟವೂ ಮಾನಭಂಗವೂ ಲಭಿಸುವಂತೆ ಶಾಪ ಪ್ರಾಪ್ತಿ. ಬಳಿಕ ಕುಬೇರನು ಪಾಂಡವರಲ್ಲಿಗೆ ಬಂದು ಪಾಂಡವರನ್ನು ಒಲಿಸಿಕೊಳ್ಳುವಿಕೆ [ಭಾರ - ವನ. ೧೬೨] ಕುಬೇರನ ವಾಸಸ್ಥಾನ ಕೈಲಾಸ [ಭೀಷ್ಮ ೬] ಇವನ ರಾಜ ಧಾನಿ ಅಲಕಾ ಪಟ್ಟಣ [ಆದಿ ೭೯. ವನ ೧೬೬]. ಕುಬೇರನ ಸಭಾವರ್ಣನೆ [ಸಭಾ. ೧೦]. ಮುಚುಕುಂದನಿಗೂ ಕುಬೇರನಿಗೂ ಕ್ಷತ್ರಿಯಧರ್ಮ ವಿಷಯದಲ್ಲಿ ಸಂವಾದ [ಶಾಂತಿ ೭४] ಪುಲಸ್ತ್ಯ ಪುತ್ರನಾದ ವಿಶ್ರವಸನಿಂದ ಭರದ್ವಾಜ ಪುತ್ರಿಯಾದ ದೇವವರ್ಣಿಯೆಂಬಾಕೆಯಲ್ಲಿ ಜನಿಸಿದವನು ಈತನು ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ಆತನ ಸ್ನೇಹಿತನಾಗಿ ಲಂಕಾ ರಾಜ್ಯಾಧಿಪತ್ಯವನ್ನು ಸಂಪಾದಿಸಿ, ಪುಷ್ಪಕವಿಮಾನವನ್ನು ಪಡೆದು ಲಂಕೆಯಲ್ಲಿಯೇ ರಾಜ್ಯಭಾರಮಾಡುತ್ತಿದ್ದನು ಇವನ ಮಲತಾಯ ಮಕ್ಕಳಾದ ರಾವಣ, ಕುಂಭಕರ್ಣರು ಇವನನ್ನು ಸೋಲಿಸಿ ಲಂಕಾಧಿಪತ್ಯವನ್ನೂ, ಪುಷ್ಪಕವಿಮಾನವನ್ನೂ ಕಸುಗೊಂಡ ಬಳಿಕ, ಕುಬೇರನು ಶಿವನ ಅನುಮತಿಯಂತೆ ಕೈಲಾಸ ಪರ್ವತದಲ್ಲಿ ಅಲಕಾ ನಗರಿಯನ್ನು ನಿರ್ಮಿಸಿಕೊಂಡು, ಯಕ್ಷರಿಗೆ ಅಧಿಪತಿಯಾದನು ಇವನ ಮಂತ್ರಿ ಪ್ರಹಾಸನೆಂಬುವನು. ಮಣಿ ಭದ್ರ, ಮಣಿಮಂತ, ಪೂರ್ಣಭದ್ರ, ಮಣಿಕಂಧರ, ಮಣಿಭೂಷ ಮುಂತಾದವರು ಇವನ ಅನುಚರರಲ್ಲಿ ಮುಖಂಡರು ಇವನು ಅತುಲೈಶ್ವರ್ಯಸಂಪನ್ನನು [ರಾಮಾ.- ಉ. ೧೫, ೨೩. ದೇ ಭಾ.-೧೨, ೨೦]

**ಕುಬ್ಜಾ** —(1) ದಶರಥನ ಪತ್ನಿಯಾದ ಕೈಕಯಿಯ ದಾಸಿ ಶ್ರೀರಾಮನಿಗೆ ಯೌವರಾಜ್ಯದಲ್ಲಿ ಪಟ್ಟಗಟ್ಟಬೇಕೆಂಬುದಾಗಿ ದಶರಥನು ಏರ್ಪಡಿಸಿದ್ದುದನ್ನು ಕಂಡು, ದೇವಶಕ್ತಿಯಿಂದ ಪ್ರೇರಿತಳಾದ ಕುಬ್ಜೆ, ತನ್ನ ಒಡತಿಯಾದ ಕೈಕಯಿಯ ಬಳಿ ಹೋಗಿ, ರಾಮನು ೧४ ವರ್ಷ ಕಾಲ ವನವಾಸಕ್ಕೆ ಹೋಗುವಂತೆಯೂ,

ಭರತನಿಗೆ ಯುವರಾಜ ಪದವಿಯನ್ನು ಕೊಡಬೇಕೆಂತಲೂ ಬೇಡುವ ಹಾಗೆ ಕೈಕಯಿಗೆ ಹೇಳಿಕೊಟ್ಟು, ರಾಮನ ಯೌವರಾಜ್ಯಾಭಿಷೇಕಕ್ಕೆ ವಿಘ್ನವನ್ನು ತಂದೊಡ್ಡಿದಳು ಇವಳಿಗೆ ತ್ರಿವಕ್ರಾ, ಮಂಥರಾ ಎಂಬ ಬೇರೆ ಹೆಸರುಗಳೂ ಇವೆ [ರಾಮಾ.-ಅಯೋ. ೭, ೯]

(ii) ಯಾದವರ ಅರಸನಾದ ಕಂಸನ ದಾಸಿ ಅನುದಿನವೂ ಪರಿಮಳಭರಿತವಾದ ಚಂದನವನ್ನು ಕಂಸನಿಗೆ ತಂದುಕೊಡುತ್ತಿದ್ದಳು. ಬಲರಾಮ ಕೃಷ್ಣರು ಕಂಸನ ಅಪ್ಪಣೆಯ ಮೇರೆಗೆ ಮಧುರೆಗೆ ಬಂದು, ಮುಷ್ಟಿಕ ಚಾಣೂರರೆಂಬ ಜಟ್ಟಿಗಳೊಂದಿಗೆ ಕಾಳಗಕ್ಕೆ ಹೊರಟಾಗ ನಡುದಾರಿಯಲ್ಲಿ ಕುಬ್ಜೆ ಚಂದನವನ್ನು ಕೊಂಡು ಹೋಗುತ್ತಿದ್ದಳು. ಆಗ ಕೃಷ್ಣನು ಅವಳನ್ನು ಅಡ್ಡಗಿಸಿ ಬಲಾತ್ಕಾರದಿಂದ ಆ ಚಂದನವನ್ನು ತೆಗೆದುಕೊಂಡು ತನ್ನ ಮೆಯ್ಗೆ ಪೂಸಿಕೊಂಡು, ಅವಳ ಗೂನುಬೆನ್ನನ್ನು ತೊಲಗಿಸಿದನು. ಇಂತಾದ ಬಳಿಕ ಕುಬ್ಜೆ ದಿವ್ಯಸೌಂದರ್ಯಭರಿತೆಯಾದ ತರುಣಿಯಾದಳು ಬಳಿಕ ಬಲರಾಮ ಕೃಷ್ಣರು ಆಸ್ಥಾನಕ್ಕೆ ಹೋದರು [ಭಾಗ -೧೦, ೪೨]

**ಕುಮಾರ** —(i) ಅಂಗಾರಕ ಗ್ರಹದ ನಾಮಾಂತರ.

(ii) ಕುಮಾರಸ್ವಾಮಿ, ಷಣ್ಮುಖ

(iii) ಭರತಖಂಡದ ಒಂದು ದೇಶ ಇದು ಚೇದಿ ದೇಶಕ್ಕೆ ಪೂರ್ವದಿಕ್ಕಿನಲ್ಲಿದೆ ಪಾಂಡವರ ಕಾಲದಲ್ಲಿ ಈ ದೇಶವನ್ನು ಶ್ರೇಣಿಮಂತನೆಂಬ ಅರಸು ಪರಿಪಾಲಿಸುತ್ತಿದ್ದನು [ಸಭಾ. ೩೦, ೭೮]

(iv) ಗರುಡನ ಮಕ್ಕಳಲ್ಲಿ ಒಬ್ಬನು [ಉದ್ಯೋ ೧೦೧]

**ಕುಮಾರಧಾರಾ** —ಒಂದು ನದಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಕುಮಾರಪರ್ವತವೆಂದು ಪ್ರಸಿದ್ಧಿಪಡೆದಿರುವ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಹುಟ್ಟಿ, ಉಪ್ಪಿನಂಗಡಿಯೆಂಬ ಸ್ಥಳದಲ್ಲಿ ನೇತ್ರಾವತೀ ನದಿಯೊಂದಿಗೆ ಬೆರೆತು, ಮಂಗಳೂರಿನ ಬಳಿ ಸಮುದ್ರವನ್ನು ಸೇರುತ್ತದೆ [ಭಾರ -ವನ ೮೨]

**ಕುಮಾರವನ.**—(i) ಪಾರ್ವತೀ ಪರಮೇಶ್ವರರು ರಹಸ್ಯವಾದ ಒಂದು ಪ್ರದೇಶದಲ್ಲಿ ಕ್ರೀಡಿಸುತ್ತಿದ್ದಾಗ ಅಲ್ಲಿಗೆ ಕೆಲವು ಮಂದಿ ಮಹರ್ಷಿಗಳು ಬಂದರು ಆಗ ಪಾರ್ವತಿ ಆ ವನವನ್ನು ಹೊಕ್ಕವರೆಲ್ಲರೂ ಹೆಂಗಸರಾಗುವಂತೆ ಶಾಪವಿತ್ತಳು. ಕುಮಾರಸ್ವಾಮಿ ಅದೇ ವನದಲ್ಲಿಯೇ ಜನಿಸಿದನು ಇದು ಗಂಗೆಯ ತೀರದಲ್ಲಿದೆ [ಹರಿ.-೧, ೨೬. ವಾಯು.-೯೧ ಮತ್ಸ್ಯ -೨೪. ಭಾಗ -೯, ೧೪]

(ii) ಭಾರತವರ್ಷದ ಒಂದು ಪುಣ್ಯಕ್ಷೇತ್ರ ಊರ್ವಶೀ ವಿರಹತಪ್ತನಾದ ಪುರೂರವನು ಈ ವನದಲ್ಲಿ ಬಹಳ ಕಾಲಧವರೆಗೆ ಅಲೆದಾಡುತ್ತಿದ್ದನು [ವಾಯು, ೯೧].

**ಕುಮಾರೀ.**—(i) ಚಂದ್ರವಂಶದ ಅನಶುಷರಾಜನಿಂದ ಅಮೃತೆಯೆಂಬವಳಲ್ಲಿ ಜನಿಸಿದ ಪರೀಕ್ಷಿದ್ರಾಜನ ಮಗನಾದ ಭೀಮಸೇನನ ಹೆಂಡತಿ. ಈಕೆಗೆ ಸುಕುಮಾರಿ ಯೆಂಬ ನಾಮಾಂತರವೂ ಇದೆ, ಇವಳು ಪ್ರತಿಶ್ರವನೆಂಬ ಮಗನನ್ನು ಪಡೆದಳು. ಇವನು ಶಿಬಿ ಪುತ್ರಿಯಾದ ಸುನಂದೆಯನ್ನು ಮದುವೆಯಾಗಿ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಮಕ್ಕಳನ್ನು ಪಡೆದನು [ಭಾರ -ಆದಿ. ೬೩]

(ii) ದಕ್ಷಿಣ ಸಮುದ್ರ ತೀರದಲ್ಲಿರುವ ಕನ್ಯಾಕುಮಾರಿಯೆಂಬ ಭೂಶಿರದ ನಾಮಾಂತರ [ಮತ್ಸ್ಯ -೧೧೩],

**ಕುಮುದ.**—(i) ನೈರ್ಋತ್ಯ ದಿಕ್ಕಿನಲ್ಲಿರುವ ಗಂಡಾನೆ

(ii) ಸುಗ್ರೀವನ ಕಪಿಸೇನಾನಾಯಕರಲ್ಲಿ ಒಬ್ಬ ಈತನು ಗೋಮತೀನದೀ ತೀರದಲ್ಲಿರುವ ರಮ್ಯಕ ಪರ್ವತದಲ್ಲಿ ವಾಸವಾಗಿದ್ದನು [ರಾಮಾ.-ಯುದ್ಧ. ೨೬].

(iii) ಒಂದು ಬೆಟ್ಟ ಮೇರುಪರ್ವತದಲ್ಲಿದೆ [ಭಾಗ -೫, ೧೬].

**ಕುಮುದ್ವತೀ**—(i) ಶ್ರೀರಾಮನ ಮಗನಾದ ಕುಶನ ಎರಡನೆಯ ಹೆಂಡತಿ. ಈಕೆ ಅತಿಥಿಯೆಂಬ ಕುಮಾರನನ್ನು ಹೆತ್ತಳು [ಜೈ.ಭಾ - ೩೧]

(ii) ಮಯೂರಧ್ವಜನ ಹೆಂಡತಿ ತಾಮ್ರಧ್ವಜನನ್ನು ಹೆತ್ತಳು [ಜೈ.ಭಾ.- ೪೧, ೪೬]

**ಕುಮ್ಭ**—(i) ಪ್ರಹ್ಲಾದನ ಮಗ [ಭಾರ -ಆ. ೬೬].

(ii) ಕುಂಭಕರ್ಣನಿಂದ ವೃತ್ರಜ್ವಾಲೆಯೆಂಬವಳಲ್ಲಿ ಜನಿಸಿದ ಹಿರಿಯ ಮಗ. ಮಹಾ ಪರಾಕ್ರಮಶಾಲಿ ರಾಮಾಯಣ ಯುದ್ಧದಲ್ಲಿ ಮಹಾ ಭಯಂಕರ ರೀತಿ ಯಿಂದ ಯುದ್ಧಮಾಡಿ, ವಾನರ ಸೇನೆಯನ್ನು ತಲ್ಲಣಗೊಳಿಸಿ, ಸುಗ್ರೀವನಿಂದ ಹತ ನಾದನು [ರಾಮಾ -ಯುದ್ಧ ೭೫, ೭೭]

(iii) ಶಿವನ ಪ್ರಮಥಗಣ ಪರಿವಾರದಲ್ಲಿ ಒಬ್ಬ ಪಾರ್ವತಿಯ ಮದುವೆ ಯಾದ ತರುವಾಯ ಶಿವನು ಕೆಲ ಕಾಲ ಅತ್ತೆಯ ಮನೆಯಲ್ಲಿಯೇ ವಾಸವಾಗಿದ್ದನು ಒಂದು ದಿನ ಅತ್ತೆಯಾದ ಮೇನಾದೇವಿ ತನ್ನ ಅಳಿಯನನ್ನು ಹುಟ್ಟುದರಿದ್ರ ನೆಂತಲೂ, ನಿಲ್ಲುವುದಕ್ಕೆ ಒಂದು ಮನೆಗೂ ಗತಿಯಿಲ್ಲವೆಂತಲೂ ಬಗೆಬಗೆಯಾಗಿ ನಿಂದಿಸತೊಡಗಿದಳು. ಇದು ಪಾರ್ವತಿಯ ಕಿವಿಗೆ ಶೂಲಪ್ರಾಯವಾಯಿತು. ಆಕೆ ಗಂಡನ ಹತ್ತಿರ ಹೇಳಿಕೊಳ್ಳಲಾಗಿ, ಶಿವನು ತನ್ನ ಪರಿವಾರದಲ್ಲಿ ಒಬ್ಬನಾದ ಕುಂಭ ನನ್ನು ಕರೆದು ಏನಾದರೊಂದು ಉಪಾಯವನ್ನು ಹೂಡಿ ಕಾಶೀರಾಜನಾದ ದಿವೋದಾಸ ನನ್ನು ಅಲ್ಲಿಂದ ಹೊರಡಿಸಿದೆಯಾದರೆ ನಾವು ಪರಿವಾರದೊಂದಿಗೆ ಅಲ್ಲಿ ಸುಖವಾಗಿ ವಾಸಮಾಡಬಹುದೆಂದು ಹೇಳಿದನು ಅದರಂತೆ ಕುಂಭನು ಕಾಶೀ ನಗರಕ್ಕೆ ಬಂದು ನಿಕುಂಭನೆಂಬ ಬ್ರಾಹ್ಮಣನ ಕನಸಿನಲ್ಲಿ ಮೈದೋರಿ ಶಿವನಿಗೆ ಕಾಶೀ ಪಟ್ಟಣದಲ್ಲಿ

ಒಂದು ಗುಡಿಯನ್ನು ಕಟ್ಟಿಸಿ ಭಕ್ತಿಯಿಂದ ಪೂಜಿಸುವಂತೆ ಹೇಳಿದನು. ನಿಕುಂಭನು ಅದೇ ಮೇರೆ ಸಮ್ಮತಿಸಿ ಕಾಶೀರಾಜನಾದ ದಿವೋದಾಸನಲ್ಲಿ ಹೇಳಲಾಗಿ, ದಿವೋದಾಸನು ಒಂದು ಗುಡಿಯನ್ನು ಕಟ್ಟಿಸಿ ಭಕ್ತಿಯಿಂದ ಪೂಜಾದಿಗಳನ್ನು ನಡೆಯಿಸುತ್ತಿದ್ದನು. ದಿನದಿನಕ್ಕೂ ಮಹಿಮೆ ಹೆಚ್ಚುತ್ತ ಬಂದಿತು ಅನೇಕ ಮಂದಿ ಭಕ್ತಾದಿಗಳು ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳುತ್ತಿದ್ದರು ದಿವೋದಾಸನ ಒಂದು ಕೋರಿಕೆಯಾದರೂ ಈಡೇರಲಿಲ್ಲ ಇದರಿಂದ ಸಿಟ್ಟೇರಿದ ದಿವೋದಾಸನು ಆ ಗುಡಿಯನ್ನು ಒಡೆಯಿಸಿದನು. ಇದರಿಂದ ಸಿಟ್ಟುಗೊಂಡ ಶಿವನು ಕಾಶೀ ಪಟ್ಟಣ ಹಾಳಾಗುವಂತೆ ಶಾಪವಿತ್ತನು ದಿವೋದಾಸನೂ ಕಾಶೀ ಪಟ್ಟಣವನ್ನು ಬಿಟ್ಟು ಹೊರಟು ಹೋದನು. ಬಳಿಕ ಶಿವನು ತನ್ನ ಪರಿವಾರದೊಂದಿಗೆ ಕಾಶೀ ಪಟ್ಟಣದಲ್ಲಿ ಸುಖವಾಗಿ ವಾಸಮಾಡತೊಡಗಿದನು ಇಂತು ಶಿವನು ಅನುಗಾಲವೂ ಕಾಶೀ ಪಟ್ಟಣದಲ್ಲಿ ಎಡೆಬಿಡದೆ ವಾಸಮಾಡತೊಡಗಿದ ಕಾರಣ ಕಾಶೀ ಪಟ್ಟಣಕ್ಕೆ ಅವಿಮುಕ್ತ ಕ್ಷೇತ್ರವೆಂದು ಹೆಸರಾಯಿತು [ಹರಿ.-೧, ೨೯]

**ಕುಮ್ಭಕರ್ಣ** —ಒಬ್ಬ ರಾಕ್ಷಸ ಪುಲಸ್ತ್ಯನ ಮಗನಾದ ವಿಶ್ರವಸನಿಂದ ಕೈಕಸಿಯೆಂಬವಳಲ್ಲಿ ಜನಿಸಿದ ಎರಡನೆಯ ಮಗ ರಾವಣನ ತಮ್ಮ ವಿಭೀಷಣನು ಇವನ ತಮ್ಮ. ಇವನು ಹುಟ್ಟುವಾಗಲೇ ಪರ್ವತಾಕಾರನಾಗಿ ಭಯಂಕರ ರೂಪದಿಂದ ಜನಿಸಿ ಸಾವಿರಾರು ಮಂದಿಯನ್ನು ನುಂಗಿದನು ಇದನ್ನು ಕೇಳಿ ಇಂದ್ರನು ಐರಾವತವನ್ನೇರಿ ಇವನ ಬಳಿಗೆ ಬಂದು, ತನ್ನ ವಜ್ರಾಯುಧದಿಂದ ಇವನನ್ನು ಹೊಡೆದನು ಇವನು ಆ ಪೆಟ್ಟನ್ನು ಸಹಿಸಿಕೊಂಡು, ಐರಾವತದ ಒಂದು ದಂತವನ್ನು ಮುರಿದುಕೊಂಡು, ಯುದ್ಧಮಾಡತೊಡಗಲಾಗಿ, ಇಂದ್ರನು ಅಲ್ಲಿಂದ ಓಡಿಹೋಗಿ, ಈ ಅದ್ಭುತವಾರ್ತೆಯನ್ನು ಬ್ರಹ್ಮನಿಗೆ ತಿಳಿಸಲಾಗಿ, ಬ್ರಹ್ಮನು ಕುಂಭಕರ್ಣನು ಯಾವಾಗಲೂ ಗಾಢನಿದ್ರೆಯಲ್ಲಿರುವ ಹಾಗೆ ಶಾಪವಿತ್ತನು ಆ ಮಾತನ್ನು ಕೇಳಿ ವಿಶ್ರವಸನು ಬ್ರಹ್ಮನ ಬಳಿ ಹೋಗಿ ಬೇಡಿಕೊಳ್ಳಲಾಗಿ, ಬ್ರಹ್ಮನು ವಿಶ್ರವಸನನ್ನು ಕುರಿತು ನಿನ್ನ ಮಗನು ವರ್ಷಕ್ಕೆ ಒಂದು ದಿನದ ಮಟ್ಟಿಗೆ ಎಚ್ಚರದಿಂದಿರಲಿ ಎಂಬುದಾಗಿ ಅನುಗ್ರಹಿಸಿದನು [ರಾ -ಯು. ೬೧] ಬ್ರಹ್ಮನ ಕೋಪ ಶಾಂತವಾದ ಬಳಿಕ ಕೆಲ ಕಾಲದ ಮೇಲೆ ಕುಂಭಕರ್ಣನು ಗೋಕರ್ಣ ಕ್ಷೇತ್ರದಲ್ಲಿ ಬ್ರಹ್ಮನನ್ನು ಕುರಿತು ಘೋರ ತಪವನ್ನಾಚರಿಸಿದನು. ಆಗ ದೇವತೆಗಳು ಹೆದರಿ ಬ್ರಹ್ಮನಲ್ಲಿ ಮೊರೆಯಿಟ್ಟರು. ಬ್ರಹ್ಮನು ದೇವತೆಗಳಿಗೆ ಅಭಯವಿತ್ತು, ಕುಂಭಕರ್ಣನ ಬುದ್ಧಿಯನ್ನು ಮರುಳುಗೊಳಿಸುವಂತೆ ಸರಸ್ವತಿಗೆ ಹೇಳಿ, ತಾನು ಕುಂಭಕರ್ಣನಲ್ಲಿಗೆ ಬಂದು ವರವನ್ನು ಬೇಡು, ಎನಲಾಗಿ ಮರುಳನಾಗಿದ್ದ ಕುಂಭಕರ್ಣನು ನಿರ್ದೇವತ್ವವನ್ನು ಬೇಡುವುದಕ್ಕೆ ಪ್ರತಿಯಾಗಿ ನಿದ್ರೆಯನ್ನು ಬೇಡಿದನು. ಬ್ರಹ್ಮನೂ '' ತಥಾಸ್ತು''

ಎಂದು ತೆರಳಿದನು. ಕುಂಭಕರ್ಣನು ಚೇತರಿಸಿಕೊಂಡು ತನ್ನ ತಪಸ್ಸು ವ್ಯರ್ಥವಾದ್ದರಿಂದ ಚಿಂತಾಕ್ರಾಂತನಾದನು [ರಾಮಾ.-ಉತ್ತರ. ೧೦] ಇವನು ಬಲಿಚಕ್ರವರ್ತಿಯ ಮಗಳ ಮಗಳಾದ ವೃತ್ರಜ್ವಾಲೆಯನ್ನು ಮದುವೆಯಾಗಿ ಕುಂಭ, ನಿಕುಂಭರೆಂಬ ಇಬ್ಬರು ಮಕ್ಕಳನ್ನು ಪಡೆದನು. ರಾವಣನು ಕುಬೇರನನ್ನು ಗೆದ್ದು ಲಂಕಾನಗರವನ್ನು ಸ್ವಾಧೀನಪಡಿಸಿಕೊಳ್ಳುವವರೆಗೂ ಕುಂಭಕರ್ಣನು ಶ್ಲೇಷ್ಮಾತಕವೆಂಬ (ಚಳ್ಳೆಯ ಗಿಡಗಳ) ವನದಲ್ಲಿ ವಾಸವಾಗಿದ್ದನು ರಾವಣನು ಸೀತೆಯನ್ನು ಅಪಹರಿಸಿ ತಂದ ಬಳಿಕ, ಹನೂಮಂತನು ಲಂಕೆಯನ್ನು ಹೊಕ್ಕು ಸೀತೆಯನ್ನು ಕಂಡು ಮಾತನಾಡಿ, ರಾಕ್ಷಸರನ್ನು ತತ್ತರಗೊಳಿಸಿ ಲಂಕೆಯನ್ನು ಸುಟ್ಟು ಹೋದ ತರುವಾಯ, ಕುಂಭಕರ್ಣನು ಎಚ್ಚತ್ತನು ಇವನಿಗೆ ನಡೆದ ಸಮಾಚಾರವನ್ನೆಲ್ಲ ಮಂತ್ರಿಗಳು ಬಿನ್ನವಿಸಿದರು ಆಗ ಕುಂಭಕರ್ಣನು ರಾವಣನ ನೀಚಕೃತ್ಯಕ್ಕೆ ಮರುಗಿ, ಸೀತೆಯನ್ನು ರಾಮನಿಗೆ ಅರ್ಪಿಸಿ ಶರಣುಹುಗುವ ಹಾಗೆ ರಾವಣನಿಗೆ ತಿಳಿಯಹೇಳಿದನು ಇದು ರಾವಣನಿಗೆ ರುಚಿಸಲಿಲ್ಲ ಕುಂಭಕರ್ಣನು ರಾವಣನ ಅವಿವೇಕವನ್ನು ಹಳಿಯುತ್ತ ಮರಳಿ ತನ್ನ ಶಯನಗೃಹವನ್ನು ಹೊಕ್ಕನು [ರಾಮಾ-ಯು ೧೩] ಇದಾದ ಕೆಲವು ದಿನಗಳಲ್ಲಿಯೇ ರಾಮ ರಾವಣರಿಗೆ ಯುದ್ಧ ಪ್ರಾರಂಭವಾಯಿತು ರಾವಣನ ಬಂಧು ಬಳಗ ಸೇನಾ ಪರಿವಾರವೆಲ್ಲವೂ ಹತವಾಯಿತು ಕುಂಭಕರ್ಣನ ಇಬ್ಬರು ಮಕ್ಕಳೂ ಮಡಿದರು ಆಗ ರಾವಣನು ವಿಧಿಯಿಲ್ಲದೆ ಕುಂಭಕರ್ಣನನ್ನು ಎಚ್ಚರಗೊಳಿಸಬೇಕಾಯಿತು ರಾವಣನ ಅಪ್ಪಣೆಯಂತೆ ಸೇವಕರು ಬಹು ಪ್ರಯಾಸದಿಂದ ಕುಂಭಕರ್ಣನನ್ನು ಎಚ್ಚರಗೊಳಿಸಿದರು ಎಚ್ಚತ್ತ ಕುಂಭಕರ್ಣನು, ವೃತ್ತಾಂತವನ್ನೆಲ್ಲ ತಿಳಿದು, ಅಣ್ಣನ ತಿಳಿಗೇಡಿತನಕ್ಕೆ ಬಹಳವಾಗಿ ವ್ಯಥೆಪಟ್ಟು, ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಮತ್ತೊಮ್ಮೆ ಅಣ್ಣನಿಗೆ ಸೂಚಿಸಿ, ಆಗಲೂ ತನ್ನ ಸೂಚನೆ ವಿಫಲವಾಗಲು, ಅಣ್ಣನನ್ನು ಜರೆದು, ಯುದ್ಧರಂಗವನ್ನು ಹೊಕ್ಕು ಭಯಂಕರ ರೀತಿಯಿಂದ ಯುದ್ಧಮಾಡಿ, ಶ್ರೀರಾಮನಿಂದ ಹತನಾಗಿ ಸದ್ಗತಿಯನ್ನೈದಿದನು [ರಾಮಾ-ಯು ೬೦, ೬೭] ಕುಂಭಕರ್ಣನು ವಿಶ್ರವಸನಿಂದ ಪುಷ್ಪೋತ್ಕಟೆಯೆಂಬವಳಲ್ಲಿ ಜನಿಸಿದವನು [ಭಾರ.-ವನ. ೨೮೬] ಇವನನ್ನು ಲಕ್ಷ್ಮಣನು ಕೊಂದನು [ಭಾರ.-ವನ ೨೮೮]

**ಕುಂಭಕರ್ಣಾಶ್ರಮ.**—[ಭಾರ-ವನ ೮೩]

**ಕುಂಭ ನಿಕುಂಭರು** —ನೋಡು—ಕುಂಭ

**ಕುಂಭಯೋನಿ.**—ಕುಂಭದಿಂದ ಜನಿಸಿದವರು ಅಗಸ್ತ್ಯ, ದ್ರೋಣ [ಮತ್ಸ್ಯ.-೨೦೧. ಆದಿ. ೬೪].

**ಕುಂಭಾಣ್ಡ (ಕುಭಾಣ್ಡ).**—ಬಾಣಾಸುರನ ಮಂತ್ರಿ. ಈತನ ಮಗಳಾದ ಚಿತ್ರಲೇಖೆ ಉಷೆಯ ಆಪ್ತ ಸಖಿಯಾಗಿದ್ದಳು ನೋಡು—ಉಷಾ, ಅನಿರುದ್ಧ [ಭಾಗ.-೧೦, ೬೨]

**ಕುಮ್ಭಿನಸೀ** —(I) ಬಲಿಚಕ್ರವರ್ತಿಯ ಮಗಳು ಬಾಣಾಸುರನ ಸಹೋದರಿ [ಮತ್ಸ್ಯ -೧೮೭].

(II) ವಿಶ್ರವಸನಿಂದ ಪುಷ್ಪೋತ್ಕಟಿಯೆಂಬವಳಲ್ಲಿ ಹುಟ್ಟಿದವಳು ಕುಂಭಕರ್ಣನ ತಂಗಿ [ಲಿಂಗ -೬೩]

(III) ಅಂಗಾರಪರ್ಣ ಅಥವಾ ಚಿತ್ರರಥನೆಂಬ ಗಂಧರ್ವನ ಹೆಂಡತಿ ನೋಡು—ಅಂಗಾರಪರ್ಣ [ಭಾರ -ಆದಿ ೧೮೬]

(IV) ಮಾಲ್ಯವಂತನೆಂಬ ರಾಕ್ಷಸನ ಮಗಳಾದ ಅನಲೆಯಲ್ಲಿ ವಿಶ್ವಾವಸುವೆಂಬ ರಾಕ್ಷಸನಿಂದ ಜನಿಸಿದವಳು ಇವಳನ್ನು ಮಧುವೆಂಬ ರಾಕ್ಷಸನು ಕದ್ದುಯ್ದು ಮದುವೆಯಾದನು ಲವಣಾಸುರನು ಈಕೆಯ ಮಗನು [ರಾಮಾ.-ಉತ್ತ ೬೮]

(V) ಸುಮಾಲಿಯೆಂಬ ರಾಕ್ಷಸನಿಂದ ಕೇತುಮತಿಯಲ್ಲಿ ಜನಿಸಿದವಳು ರಾವಣನ ಜನನಿಯಾದ ಕೇಕಸಿಯೂ ಇವಳೂ ಅಕ್ಕ ತಂಗಿಯರು [ರಾಮಾ.-ಉ ೫]

**ಕುಮ್ಭಿಪಾಕ** —ಒಂದು ನರಕ ಜೀವಹಿಂಸೆ ಮಾಡಿದವರು ಈ ನರಕಕ್ಕೆ ಹೋಗುತ್ತಾರೆ [ಭಾಗ -೫, ೨೬ ಮಾರ್ಕ.-೧೨]

**ಕುರು** —(I) ಒಬ್ಬ ಅರಸು ಕುರು ಪಾಂಡವರ ಮೂಲ ಪುರುಷ ಚಂದ್ರ ವಂಶದ ಪುರು ಕುಲೋತ್ಪನ್ನನಾದ ಅಜಮೀಢರಾಯನ ಸಂತತಿಯಲ್ಲಿ ಸಂವರಣನೆಂಬ ರಾಜನಿಂದ ತಪತಿಯೆಂಬವಳಲ್ಲಿ ಜನಿಸಿದವನು. ಇವನು ಶುಭಾಂಗಿಯೆಂಬ ತರುಣಿಯನ್ನು ಮದುವೆಯಾಗಿ ವಿದೂರಥನೆಂಬ ಮಗನನ್ನು ಪಡೆದನು [ಭಾರ -ಆದಿ ೬೩]. ಈತನಿಗೆ ವಾಹಿನಿಯೆಂಬ ಮತ್ತೊಬ್ಬ ಹೆಂಡತಿಯಿದ್ದಳು ಅಶ್ವವಂತ, ಅಭಿಷ್ಯಂತ, ಚೈತ್ರರಥ, ಮುನಿ, ಜನಮೇಜಯರೆಂಬವರು ಈತನ ಮಕ್ಕಳು ಅಶ್ವವಂತನಿಗೆ ಅವಿಕ್ಷಿತನೆಂಬ ನಾಮಾಂತರವೂ ಇದೆ [ಭಾರ.-ಆದಿ ೧೦೧ ವಿರಾ. ೫೩ ಮತ್ಸ್ಯ.-೫೦. ಭಾಗ -೯, ೨೨].

(II) ಪ್ರಿಯವ್ರತರಾಜನ ಮಗನಾದ ಆಗ್ನೀಧ್ರರಾಜನಿಂದ ಪೂರ್ವಚಿತ್ತಿಯೆಂಬ ಅಪ್ಸರಸಿಯಲ್ಲಿ ಹುಟ್ಟಿದ ಒಂಬತ್ತು ಮಂದಿ ಮಕ್ಕಳಲ್ಲಿ ಏಳನೆಯವನು ನೋಡು—ಆಗ್ನೀಧ್ರ. ಈತನು ಮೇರು ಪುತ್ರಿಯಾದ ನಾರಿಯೆಂಬವಳನ್ನು ಮದುವೆಯಾಗಿದ್ದನು ಆಗ್ನೀಧ್ರನು ತಾನು ಪಾಲಿಸುತ್ತಿದ್ದ ಭೂ ಮಂಡಲವನ್ನು ಒಂಬತ್ತು ಖಂಡ (ಭಾಗ) ಗಳಾಗಿ ಮಾಡಿ, ತನ್ನ ಒಂಬತ್ತು ಮಂದಿ ಮಕ್ಕಳಿಗೂ ಹಂಚಿಕೊಟ್ಟನು. ಹೀಗೆ

ಕುರುರಾಜನು ಪಾಲಿಸಿದ ಭೂ ಭಾಗಕ್ಕೆ ಕುರುವರ್ಷವೆಂದು ಹೆಸರು [ಭಾಗ.-೫, ೨. ವಿಷ್ಣು.-೨, ೭].

(iii) ಮೇಲೆ ಹೇಳಿದ ಆಗ್ನೀಧ್ರರಾಜನ ಮಗನಾದ ಕುರುರಾಜನು ಪಾಲಿಸುತ್ತಿದ್ದ ಭೂ ಭಾಗ. ಈ ಪ್ರದೇಶ ಲವಣ ಸಮುದ್ರದಿಂದ ಶೃಂಗವತ್ಪರ್ವತದವರೆಗೆ ಧನುರಾಕಾರವಾಗಿದೆ. ಈ ಭೂ ಭಾಗವನ್ನು ಉತ್ತರ ಕುರುವೆಂತಲೂ, ಐರಾವತ ವರ್ಷವೆಂತಲೂ ಕರೆಯುತ್ತಾರೆ [ಭಾರ -ಭೀ ೭ ಭಾಗ -೫, ೨. ಮತ್ಸ್ಯ -೧೧೨]

(iv) ಭಾರತ ವರ್ಷದ ಭರತಖಂಡದಲ್ಲಿರುವ ಒಂದು ದೇಶ ಹಸ್ತಿನಾವತಿ ಇದರ ರಾಜಧಾನಿ. ಚಂದ್ರವಂಶದ ಅರಸರು ಇಲ್ಲಿ ರಾಜ್ಯಭಾರಮಾಡುತ್ತಿದ್ದರು ಇದು ಪುರಾತನ ದೇಶ ಇಂದ್ರಪ್ರಸ್ಥ, ವಾರಣಾವತಗಳು ಇದರ ತರುವಾಯ ಏರ್ಪಟ್ಟವು

**ಕುರುಕ್ಷೇತ್ರ** —(i) ಭಾರತವರ್ಷದೊಳಗಣ ಭರತಖಂಡದ ಒಂದು ದೇಶ. ಇದು ಬ್ರಹ್ಮಾವರ್ತಕ್ಕೆ ಪಶ್ಚಿಮದಲ್ಲಿದ್ದಿತು. ಪರಶುರಾಮನು ಆನರ್ತ ದೇಶಕ್ಕೆ ಹೋದಾಗ ಈ ಕುರುಕ್ಷೇತ್ರವನ್ನು ದಾಟಿಕೊಂಡು ಹೋದನು

ಕುರು ಜಾಂಗಲ ಪಾಂಚಾಲಾನ್ ಶೂರಸೇನಾನ್ ಸಯಾಮುನಾನ್ ।
ಬ್ರಹ್ಮಾವರ್ತಂ ಕುರುಕ್ಷೇತ್ರಂ ಮತ್ಸ್ಯಾನ್ ಸಾರಸ್ವತಾನಥ ॥
ಮರುಧನ್ವಮತಿಕ್ರಮ್ಯ ಸೌವೀರಾಭೀರಯೋಃ ಪರಾನ್ ।
ಆನರ್ತಾನ್ ಭಾರ್ಗವೋಽಪಾಗಾಚ್ಛಾಂತವಾಹೋ ಮನಾಗ್ವಿಭುಃ ॥

ಈ ಕಾರಣದಿಂದ ಕುರು ಪಾಂಡವರು ಯುದ್ಧಮಾಡಿದ ಕುರುಕ್ಷೇತ್ರವೇ ಬೇರೆ ಈ ಕುರುಕ್ಷೇತ್ರವೇ ಬೇರೆಯೆಂದು ಹೇಳಬೇಕಾಗಿದೆ ಪರಶುರಾಮನು ೨೧ ಬಾರಿ ಕ್ಷತ್ರಿಯರನ್ನು ಸದೆಬಡಿದು ಅವರ ರಕ್ತದಿಂದ ೨೧ ಮಡುಗಳನ್ನು ನಿರ್ಮಿಸಿದ್ದನೆಂದು ಹೇಳುವುದು ಇದೇ ಕುರುಕ್ಷೇತ್ರವೆಂದು ಊಹಿಸಬಹುದು [ಭಾಗ -೧, ೧೧].

(ii) ಒಂದು ಪುಣ್ಯತಮವಾದ ಪ್ರದೇಶ ಚಂದ್ರವಂಶದ ಸಂವರಣ ರಾಜನ ಮಗನಾದ ಕುರು ಚಕ್ರವರ್ತಿ ಯಾಗಶಾಲೆಗಾಗಿ ನಿರ್ಮಿಸಿದ ಪ್ರದೇಶ ಇದು ಸರಸ್ವತೀ ಮತ್ತು ದೃಷದ್ವತೀ ನದಿಗಳ ನಡುವೆ ಇದೆ

ತರಂತು ಕಾರಂತುಕಯೋರ್ಯದಂತರಂ ।
ರಾಮಹ್ರದಾನಾಂ ಚ ಮಚಕ್ರುಕಸ್ಯ ॥
ಏತತ್ ಕುರುಕ್ಷೇತ್ರ ಸ್ಯಮಂತ ಪಂಚಕಂ ।
ಪ್ರಜಾಪತೇರುತ್ತರವೇದಿರುಚ್ಯತೇ ॥ [ಭಾರ.-ಶಲ್ಯ ೫೩]

ಮೇಲೆ ಹೇಳಿದ ಶ್ಲೋಕಾನುಸಾರವಾಗಿ ಪರ್ಯಾಲೋಚಿಸಿದಲ್ಲಿ ಈಗಣ (ಕುರು ಪಾಂಡ

ವರ ಯುದ್ಧರಂಗವೆಂಬುದಾಗಿ ಪ್ರಖ್ಯಾತಿವೆತ್ತಿರುವ) ಕುರುಕ್ಷೇತ್ರವು ತರಂತುಕ, ಅರಂತುಕ, ರಾಮಹ್ರದ, (ಪರಶುರಾಮನು ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಏರ್ಪಡಿಸಿದ ಮಡುಗಳು) ಮಚಕ್ರುಕಗಳೆಂಬ ನಾಲ್ಕು ಗಡಿಗಳ ನಡುವಣ ಭಾಗವೇ ಭಾರತ ಯುದ್ಧದ ರಂಗಭೂಮಿಯಾಗಿದ್ದಿತೆಂದು ತೋರುತ್ತದೆ ಇದು ಡಿಲ್ಲೀ ನಗರಕ್ಕೆ ೧೦೦ ಮೈಲಿ ದೂರದಲ್ಲಿ ಕರ್ನ್ನಾಳ್ (Karnal) ಎಂಬ ಜಿಲ್ಲೆಯಲ್ಲಿದೆ ಇದರ ವಿಸ್ತೀರ್ಣ ೭೦ ಮೈಲುಗಳ ಉದ್ದ, ೩೦ ಮೈಲುಗಳ ಅಗಲ, ೨,೧೦೦ ಚದರ ಮೈಲುಗಳು. ಇದಕ್ಕೆ ಬ್ರಹ್ಮನ ಉತ್ತರವೇದಿ, ಅಂತರ್ವೇದಿ, ವಿಶಸನ ಕ್ಷೇತ್ರ, ಸ್ಯಮಂತ ಪಂಚಕಗಳೆಂಬ ನಾಮಾಂತರಗಳಿವೆ. ಹಿಂದೆ ಚತುರ್ಮುಖನು ಈ ಪ್ರದೇಶದಲ್ಲಿ ಅನೇಕ ಯಜ್ಞಗಳನ್ನು ಮಾಡಿದನು ಈಗಲೂ ಈ ಪ್ರದೇಶದ ಸುತ್ತಲೂ ಪೌಳಿಯನ್ನು ಏರ್ಪಡಿಸಿರುತ್ತಾರೆ [ಭಾರ -ಆದಿ. ೧೦೧ ವನ ೮೩] ಕುರುಕ್ಷೇತ್ರ ಮಹಿಮೆ [ವನ ೮೧. ಶಲ್ಯ ೫೪] ದ್ವಾಪರ ಯುಗದಲ್ಲಿ ಪುಣ್ಯತಮವಾದ ಕ್ಷೇತ್ರವೆಂದು ಕೊಂಡಾಡುತ್ತಿದ್ದರು [ವನ ೮೩].

**ಕುರುಜಾಙ್ಗಲ** —ಕುರು ದೇಶಕ್ಕೆ ಪಶ್ಚಿಮದಲ್ಲಿ ಅರಣ್ಯಭೂಯಿಷ್ಠವಾದ ಪ್ರದೇಶ [ಆದಿ ೧೦೧] ಕೌರವರ. ರಾಜಧಾನಿಯಾಗಿದ್ದ ಹಸ್ತಿನಾವತಿಯ ವಾಯುವ್ಯಕ್ಕೆ, ಡಿಲ್ಲೀ ನಗರದಿಂದ ಈಶಾನ್ಯಕ್ಕೆ ಇದ್ದಿತು. ಈಗ ಈ ಪ್ರದೇಶವನ್ನೆಲ್ಲಾ ಗಂಗಾ ನದಿ ಆವರಿಸಿಕೊಂಡಿದೆ

**ಕುರುಪಾಞ್ಚಾಲ** —ಒಂದು ದೇಶ ಕುರು ದೇಶಕ್ಕೆ ಪೂರ್ವದಲ್ಲಿದೆ ದ್ರುಪದ ರಾಜನ ಆಳ್ವಿಕೆಗೆ ಒಳಪಟ್ಟಿದ್ದ ಪಾಂಚಾಲ ದೇಶ ಮತ್ತೊಂದು. ಅದು ಕುರು ದೇಶಕ್ಕೆ ಪಶ್ಚಿಮದಲ್ಲಿದೆ [ಭಾರ -ಭೀ ೯]

**ಕುರುವರ್ಷ** —ಭೂ ಮಂಡಲವನ್ನೆಲ್ಲ ಏಕಚ್ಛತ್ರಾಧಿಪತಿಯಾಗಿ ಆಳಿದ ಆಗ್ನೀಧ್ರ ಮಹಾರಾಜನು ತನ್ನ ಆಳ್ವಿಕೆಗೆ ಒಳಪಟ್ಟಿದ್ದ ಭೂ ಮಂಡಲವನ್ನು ಒಂಬತ್ತು ಭಾಗವಾಗಿ ಮಾಡಿ, ತನ್ನ ಒಂಬತ್ತು ಮಂದಿ ಮಕ್ಕಳಿಗೂ ಹಂಚಿಕೊಟ್ಟನು. ಅವರು ಪಾಲಿಸಿದ ಭೂ ಖಂಡಗಳಿಗೆಲ್ಲ ಅವರವರ ಹೆಸರುಗಳೇ ರೂಢಿಯಲ್ಲಿ ಬಂದುವು. ನೋಡು—ಆಗ್ನೀಧ್ರ, ಕುರು [ಭಾಗ.-೫, ೨. ಮತ್ಸ್ಯ.-೧೧೩. ಭೀಷ್ಮ. ೬].

**ಕುಲಪತಿ** —(1) ಹತ್ತು ಸಾವಿರ ಮಂದಿ ವಿದ್ಯಾರ್ಥಿಗಳನ್ನು ಅನ್ನ ವಸ್ತ್ರಾದಿಗಳಿಂದ ಪೋಷಿಸಿ, ವಿದ್ಯಾಪೀಠವನ್ನು ಏರ್ಪಡಿಸಿರತಕ್ಕ ಮಹರ್ಷಿಗೆ ಈ ಬಿರುದು ಸಲ್ಲುತ್ತದೆ. ಶೌನಕ ಮಹರ್ಷಿ ಇಂತಹ ಪೀಠವನ್ನು ಸ್ಥಾಪಿಸಿದ್ದನು.

ಏಕೋ ದಶ ಸಹಸ್ರಾಣಿ ಯೋಽನ್ನವಸ್ತ್ರಾದಿನಾ ಭರೇತ್ ।
ಸವೈ ಕುಲಪತಿಃ ಪ್ರೋಕ್ತಃ.... ॥ [ಭಾರ.-ಆದಿ. ೫].

(ii) ಹಿಮವತ್ಪರ್ವತದ ಪಕ್ಕದಲ್ಲಿ ಬ್ರಹ್ಮಾಶ್ರಮವಿದ್ದೆಡೆಯಲ್ಲಿ ತಪಸ್ಸು ಮಾಡಿಕೊಂಡಿದ್ದ ಒಬ್ಬ ಮಹರ್ಷಿ ಈತನಿಗೂ ಮತ್ತೊಬ್ಬ ಶೂದ್ರನಿಗೂ ಸಂಬಂಧಪಟ್ಟ ಉಪಾಖ್ಯಾನ [ಭಾರ.-ಅನು ೩೧]

**ಕುಲಪರ್ವತ.**—ಏಳು ಕುಲಪರ್ವತಗಳೆಂದು ಪ್ರಸಿದ್ಧವಾದ ಪರ್ವತಗಳು. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಋಕ್ಷವಂತ, ಪಾರಿಯಾತ್ರ [ಭೀ. ೯].

**ಕುಳಿಙ್ಗ** —(i) ಒಬ್ಬ ಬ್ರಾಹ್ಮಣ ದುರ್ಯೋಧನನ ಮಂತ್ರಿ ಇವನಿಗೆ ಕಣಿಕನೆಂಬುದು ನಾಮಾಂತರ ನೋಡು—ಕಣಿಕ [ಭಾರ -ಆ ೬೧, ೧೫೩]

(ii) ಒಂದು ದೇಶ ರಾಜಸೂಯ ಯಾಗ ಸಮಯದಲ್ಲಿ ಅರ್ಜುನನು ಈ ದೇಶದ ಅರಸನನ್ನು ಗೆದ್ದು, ಕಪ್ಪ ಕಾಣಿಕೆಗಳನ್ನು ತಂದನು [ಸಭಾ ೬೭]

**ಕುಲಿಙ್ಗಶಕುನಿ** —ಒಂದು ಪಕ್ಷಿ ಇದು ಯಾವಾಗಲೂ "ಸಾಹಸ ಕಾರ್ಯವನ್ನು ಮಾಡಬೇಡ" ಎಂಬುದಾಗಿ ಹೇಳುತ್ತಿದ್ದರೂ ತಾನು ಮಾತ್ರ ಸಿಂಹದ ಕೋರೆಹಲ್ಲುಗಳಲ್ಲಿ ಸಿಲುಕಿರುವ ಮಾಂಸವನ್ನು ತನ್ನ ಕೊಕ್ಕಿನಿಂದ ಹೊರದೆಗೆದು ತಿನ್ನುತ್ತದೆ [ಸಭಾ. ೬೭].

**ಕುಲಿನ್ದ** —(i) ಒಂದು ದೇಶ. ಇದು ಕೇಕಯ ದೇಶಕ್ಕೆ ದಕ್ಷಿಣದಲ್ಲಿ, ಕುರುಕ್ಷೇತ್ರಕ್ಕೆ ಉತ್ತರ ಭಾಗದಲ್ಲಿ ಸರಸ್ವತೀ ನದಿಯ ತೀರದಲ್ಲಿದ್ದಿತು. ಈಗ ಈ ದೇಶ ಡಿಲ್ಲೀ ನಗರಕ್ಕೆ ಉತ್ತರಕ್ಕೆ ಶರಹಾನಪುರ (Shaharanpur) ಜಿಲ್ಲೆಗೆ ಸೇರಿದೆ [ಸಭಾ. ೭೮ ಭೀ. ೯]

(ii) ಒಬ್ಬ ಬೇಡರ ಅರಸು ಈತನು ಒಮ್ಮೆ ಕಾಡಿಗೆ ಬೇಟೆಗೆ ಹೋಗಿದ್ದಾಗ, ಅಲ್ಲಿ ದಿಕ್ಕಿಲ್ಲದೆ ಅಳುತ್ತಿದ್ದ ಒಂದು ಮುದ್ದು ಕುವರನನ್ನು ಕಂಡು, ತನಗೆ ಸಂತಾನವಿಲ್ಲದಿದ್ದುದರಿಂದ, ಕನಿಕರದಿಂದ ಆ ತರಳನನ್ನು ಕರೆತಂದು, ಪ್ರೀತಿಯಿಂದ ನಾಮಕರಣಾದಿಗಳನ್ನು ಮಾಡಿ ಚಂದ್ರಹಾಸನೆಂಬುದಾಗಿ ಹೆಸರಿಟ್ಟನು. ಇವನು ಆಳುತ್ತಿದ್ದ ನಗರಿಗೆ ಚಂದನಾವತಿಯೆಂದು ಹೆಸರು [ಜೈ ಭಾ -೫೦]

**ಕುವಲಯಾಪೀಡ** —ಕಂಸನಲ್ಲಿದ್ದ ಒಂದು ಆನೆ ಇದು ಸಾವಿರ ಆನೆಗಳ ಬಲವುಳ್ಳದ್ದು ಕಂಸನು ಬಲರಾಮ ಕೃಷ್ಣರನ್ನು ಹೇಗಾದರೂ ಕೊಲ್ಲಿಸಬೇಕೆಂಬ ದುರಭಿಸಂಧಿಯಿಂದ ಅವರಿಬ್ಬರನ್ನೂ ಮಥುರೆಗೆ ಬರಮಾಡಿಕೊಂಡಾಗ ಈ ಆನೆಯನ್ನು ಹೆಬ್ಬಾಗಿಲಲ್ಲಿ ಅಡ್ಡಲಾಗಿ ನಿಲ್ಲಿಸಿದ್ದನು. ಬಲರಾಮ ಕೃಷ್ಣರು ಸಮೀಪಕ್ಕೆ ಬರುತ್ತಲೇ ಈ ಆನೆಯನ್ನು ಅವರ ಮೇಲೆ ಓಡಿಸುವಂತೆ ಮಾವುತನಿಗೆ ಹೇಳಿದ್ದನು ಆದರೆ ಕೃಷ್ಣನ ಮುಂದೆ ಈ ಆನೆಯ ಸಾಹಸ ನಡೆಯಲಿಲ್ಲವಾಗಿ ಕೃಷ್ಣನೇ ಇದನ್ನು ಕೊಂದು ಕೆಡಹಿದನು [ಭಾಗ.-೧೦, ೪೩].

**ಕುವಲಾಶ್ವ.**—ಒಬ್ಬ ಅರಸು. ಸೂರ್ಯವಂಶದ ಶತ್ರುಜಿತನೆಂಬ ಅರಸನ ಮಗ. ಇವನಿಗೆ ಋತಧ್ವಜನೆಂಬುದು ಮೊದಲಿನ ಹೆಸರು. ಇವನಿಗೆ ಧುಂಧುಮಾರ ನೆಂಬುದು ನಾಮಾಂತರ [ಹರಿ-೧, ೧೧]. ಗಾಲವನೆಂಬ ಮುನಿ, ತಪೋನಿರತ ನಾಗಿದ್ದಾಗ ಪಾತಾಳಕೇತುವೆಂಬ ರಾಕ್ಷಸನು ಮಾಯೆಯಿಂದ ರೂಪಾಂತರಗಳನ್ನು ಧರಿಸಿ ಬಂದು, ಗಾಲವನ ತಪಸ್ಸಿಗೆ ಭಂಗವನ್ನುಂಟುಮಾಡುತ್ತಿದ್ದ. ಶಾಪ ಕೊಟ್ಟರೆ ತನ್ನ ತಪಸ್ಸೆಲ್ಲವೂ ಹಾಳಾಗುವುದೆಂಬ ಭಯದಿಂದ ಮುನಿ ಯೋಚಿಸುತ್ತಿದ್ದನು. ಅಷ್ಟರಲ್ಲಿ ಕುವಲಯ ಬಣ್ಣದ ಕುದುರೆ ಇವನ ಮುಂದೆ ಬಂದು ನಿಂತಿತು. ಕೂಡಲೇ "ಈ ಕುದುರೆಯನ್ನು ಬೃಹದಶ್ವ(ಶತ್ರುಜಿತ)ನ ಮಗನಾದ ಋತಧ್ವಜನಿಗೆ ಕೊಡು" ಎಂಬುದಾಗಿ ಅಶರೀರವಾಣಿ ಕೇಳಬಂದಿತು ಗಾಲವನು ಆ ಕುದುರೆಯನ್ನು ಋತಧ್ವಜನಿಗೆ ಕೊಡಲಾಗಿ, ಆತನು ಆ ಕುದುರೆಯನ್ನೇರಿ ಪಾತಾಳಕೇತುವನ್ನು ಹಿಂದಟ್ಟಿ ಹೊರಟನು ಪಾತಾಳಕೇತು ಹಂದಿಯ ರೂಪವನ್ನು ತಾಳಿ ಪಾತಾಳ ವನ್ನು ಹೊಕ್ಕನು ಋತಧ್ವಜನು ಅವನ ಹಿಂದೆಯೇ ಅದೇ ಬಿಲವನ್ನು ಹೊಕ್ಕು ನೋಡುವಲ್ಲಿ, ಅಲ್ಲಿ ಇಬ್ಬರು ತರುಣಿಯರು ಶೋಕಭರದಿಂದ ಅಳುತ್ತಿದ್ದರು. ಅವರನ್ನು ಕಂಡು ವಿಚಾರಿಸುವಲ್ಲಿ, ಒಬ್ಬಳು ತಾನು ಪುಷ್ಕರಶಾಲಿಯೆಂಬಾತನ ಗೃಹಿಣಿಯೆಂತಲೂ, ತನ್ನ ಹೆಸರು ಕುಂಡಲೆಯೆಂತಲೂ, ಮತ್ತೊಬ್ಬಳು ತನ್ನ ತಂಗಿಯಾದ ಮದಾಲಸೆ ಯೆಂಬ ಅವಿವಾಹಿತ ಕನ್ಯೆಯೆಂತಲೂ, ತಮ್ಮಿಬ್ಬರನ್ನೂ ಪಾತಾಳಕೇತು ಬಲಾ ತ್ಕಾರದಿಂದ ತಂದು ಇಲ್ಲಿ ಸೆರೆಯಿಟ್ಟಿರುವನೆಂತಲೂ ತಿಳಿದುಬಂದಿತು ಪಾತಾಳಕೇತು ವನ್ನು ಹಿಡಿದು ಕೊಂದ ಬಳಿಕ ಋತಧ್ವಜನು ಮದಾಲಸೆಯನ್ನು ಮದುವೆಯಾಗಿ, ಕುಂಡಲೆಯನ್ನು ಸಂಗಡ ಕರೆದುಕೊಂಡು ತನ್ನ ನಗರವನ್ನು ಸೇರಿದನು ಪಾತಾಳ ಕೇತುವಿನ ತಮ್ಮನಾದ ತಾಳಕೇತು ಋತಧ್ವಜನನ್ನು ಕೊಲ್ಲಬೇಕೆಂದು ಹೊಂಚು ತ್ತಿದ್ದು ಒಮ್ಮೆ ಋತಧ್ವಜನು ಅಶ್ವಾರೂಢನಾಗಿ ತಿರುಗುತ್ತಿದ್ದಾಗ ಇವನು ಮುನಿ ರೂಪದಿಂದ ಸಂಧಿಸಿ, ತಾನು ಯಜ್ಞದೀಕ್ಷೆಯನ್ನು ಕೈಕೊಂಡಿರುವುದಾಗಿಯೂ, ತನಗೆ ದ್ರವ್ಯಸಹಾಯ ಮಾಡಬೇಕೆಂಬುದಾಗಿಯೂ ಕೇಳಿದನು. ಋತಧ್ವಜನು ತನ್ನ ಕೊರಳಲ್ಲಿದ್ದ ರತ್ನಹಾರವನ್ನು ಕೊಡಲಾಗಿ, ತಾಳಕೇತು ಬೇಗನೆ ಪಟ್ಟಣವನ್ನು ಸೇರಿ, ಅಂತಃಪುರದಲ್ಲಿದ್ದ ಮದಾಲಸೆಯನ್ನು ಕಂಡು ಆ ರತ್ನಹಾರವನ್ನು ತೋರಿ, ಋತಧ್ವಜನು ಹತನಾದನೆಂದು ತಿಳಿಸಿದನು ಮದಾಲಸೆ ಆ ಕ್ಷಣವೇ ದೇಹತ್ಯಾಗಮಾಡಿದಳು. ಅಷ್ಟರಲ್ಲಿ ಹಿಂದಿರುಗಿ ಬಂದ ಋತಧ್ವಜನು ಅಲ್ಲಿಯ ವಿದ್ಯಮಾನಗಳನ್ನು ಕಂಡು ದುಃಖಾಕ್ರಾಂತನಾಗಿರಲು ಋತಧ್ವಜನ ಗೆಳೆಯರಾದ ನಾಗಕುಮಾರರು ಮದಾಲಸೆ ಯನ್ನು ಬದುಕಿಸಿದರು ನೋಡು—ಅಶ್ವತರ ಇಂತು ಗಾಲವನಿಂದ ಕುವಲಯ ಬಣ್ಣದ ಅಶ್ವವನ್ನು ಪಡೆದ ಕಾರಣ ಇವನಿಗೆ ಕುವಲಾಶ್ವ ಅಥವಾ ಕುವಲಯಾಶ್ವ

ನೆಂಬ ಹೆಸರು ಬಂದಿತು [ಮಾರ್ಕ -೧೮, ೭೨ ಭಾರ.-ವನ ೨೦೪, ೨೦೫. ಹರಿ.-೧, ೧೨. ಬ್ರಹ್ಮ.-೫. ವಾಯು.-೮೮. ಭಾಗ.-೯, ೬] ದೃಢಾಶ್ವ, ಚಂದ್ರಾಶ್ವ, ಕಪಿಲಾಶ್ವ ರೆಂಬ ಮೂವರು ಮಂದಿ ಮಕ್ಕಳು [ಹರಿ.-೧, ೧೨] ಇವನಿಗೆ ದೃಢಾಶ್ವ, ಕಪಿಲಾಶ್ವ, ಭದ್ರಾಶ್ವರೆಂಬ ಮೂವರು ಪುತ್ರರು [ಭಾರ -ವನ ೨೦೭]. ವಿಕ್ರಾಂತ, ಸುಬಾಹು, ಶತ್ರುಮರ್ದನ, ಅಲರ್ಕರೆಂದು ನಾಲ್ವರು ಮಕ್ಕಳು [ಮಾರ್ಕ.-೨೩] ಉತ್ತಂಕ ನೆಂಬ ಮುನಿಯ ತಪೋಭಂಗಕ್ಕೆ ಕಾರಣಭೂತನಾದ ಧುಂಧುವೆಂಬ ರಾಕ್ಷಸನನ್ನು ಕೊಲ್ಲುವಂತೆ, ಉತ್ತಂಕನು ಬೃಹದಶ್ವನ ಬಳಿಗೆ ಬಂದು ಮೊರೆಯಿಟ್ಟನು ಬೃಹ ದಶ್ವನು ವಾನಪ್ರಸ್ಥನಾಗಿ ಹೊರಡಲು ದೀಕ್ಷೆಯನ್ನು ಕೈಕೊಂಡಿದ್ದ ಕಾರಣ, ತಂದೆಯ ಅಪ್ಪಣೆಯಂತೆ ಕುವಲಾಶ್ವನು ತನ್ನ ಮೂವರು ಮಕ್ಕಳೊಂದಿಗೆ ೨೧ ಸಾವಿರ ಸೇನೆ ಯನ್ನು ತೆಗೆದುಕೊಂಡು ಹೋಗಿ ಆ ಧುಂಧುವನ್ನು ಕೊಂದು, ಉತ್ತಂಕನ ತಪಸ್ಸಿಗೆ ನೆಮ್ಮದಿಯನ್ನುಂಟುಮಾಡಿದನು [ವನ. ೨೦೪, ೨೦೫]

**ಕುಶ.**—(i) ಒಂದು ದ್ವೀಪ ಸಪ್ತದ್ವೀಪಗಳಲ್ಲಿ ನಾಲ್ಕನೆಯದು ಇದರ ಸುತ್ತಲೂ ಘೃತಸಮುದ್ರವಿದೆ. ಎಂಟು ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು ಪ್ರಿಯವ್ರತ ರಾಜನ ಮಗನಾದ ಹಿರಣ್ಯರೇತನು ಈ ದ್ವೀಪವನ್ನು ಆಳುತ್ತಿದ್ದು ತನ್ನ ತರುವಾಯ ವಸು, ವಸುದಾನ, ದೃಢರುಚಿ, ನಾಭಿಗುಪ್ತ, ಸ್ತುತ್ಯವ್ರತ, ವಿವಿಕ್ತ, ವಾಮದೇವರೆಂಬ ತನ್ನ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟನು ಈ ದ್ವೀಪದಲ್ಲಿ ಚಕ್ರ, ಚತುಶ್ಶೃಂಗ, ಕಪಿಲ, ಚಿತ್ರಕೂಟ, ದೇವಾನೀಕ, ಊರ್ಧ್ವರೋಮ, ದ್ರವಿಣ ಎಂಬ ಏಳು ಪರ್ವತಗಳಿವೆ ರಸಕುಲ್ಯಾ, ಮಧುಕುಲ್ಯಾ, ಮಿತ್ರವಿಂದಾ, ಶ್ರುತ ವಿಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ ಎಂಬ ಏಳು ನದಿಗಳು ಈ ದ್ವೀಪದಲ್ಲಿ ಮುಖ್ಯವಾದುವು [ಭಾಗ -೫, ೨೦ ದೇ ಭಾಗ -೮, ೧೨ ಭಾ -ಭೀ ೧೨. ಶಿವ.-ಉಮಾ ೧೮]

(ii) ಒಬ್ಬ ಅರಸು ಚಂದ್ರವಂಶದ ಪುರುಕುಲೋತ್ಪನ್ನನಾದ ಜಹ್ನು ರಾಜನ ಸಂತತಿಯವನು ವಿಶ್ವಾಮಿತ್ರನ ಮೂಲಪುರುಷ [ಭಾರ -ಅನು ೭]

(iii) ಶ್ರೀ ರಾಮನಿಂದ ಸೀತೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಹಿರಿಯನು. ಶ್ರೀ ರಾಮನು ಲೋಕಾಪವಾದದಿಂದ ಹೆದರಿ ಸೀತೆಯನ್ನು ವಾಲ್ಮೀಕಿ ಮುನಿಯ ಆಶ್ರಮದ ಬಳಿ ಬಿಟ್ಟು ಬರುವಂತೆ ಲಕ್ಷ್ಮಣನಿಗೆ ಹೇಳಿ ಕಳುಹಿದ ಪ್ರಕಾರ ಲಕ್ಷ್ಮಣನು ಸೀತೆಯನ್ನು ಕಾಡಿನಲ್ಲಿ ಬಿಟ್ಟು ಹೋದನು ಆಗ್ಗೆ ಗರ್ಭಿಣಿಯಾಗಿದ್ದ ಸೀತೆ ತನ್ನ ದುರವಸ್ಥೆಗಾಗಿ ಶೋಕಿಸುತ್ತಿರುವಲ್ಲಿ ವಾಲ್ಮೀಕಿ ಮುನಿ ಅಲ್ಲಿಗೆ ಬಂದು, ಸೀತೆಯನ್ನು ಗುರುತಿಸಿ, ತನ್ನ ಆಶ್ರಮಕ್ಕೆ ಕರೆದುಯ್ದು ಸಂತವಿಸಿದನು [ರಾಮಾ -ಉ. ೪೮, ೫೦].

ಇಂತು ಸೀತೆಯು ವಾಲ್ಮೀಕಿ ಮುನಿಯ ಆಶ್ರಮದಲ್ಲಿ ಋಷಿಪತ್ನಿಯರ ಆರೈಕೆಯಲ್ಲಿರುವಲ್ಲಿ ನವಮಾಸಗಳು ತುಂಬಿದ ಬಳಿಕ ಅವಳಿ ಮಕ್ಕಳನ್ನು ಹೆತ್ತಳು. ವಾಲ್ಮೀಕಿ ಮುನಿ ಹರ್ಷಭರದಿಂದ ಅಲ್ಲಿಗೆ ಬಂದು ಒಬ್ಬನಿಗೆ ಕುಶಮುಷ್ಟಿಯಿಂದಲೂ ಮತ್ತೊಬ್ಬನಿಗೆ ಲವಮುಷ್ಟಿಯಿಂದಲೂ ರಕ್ಷೆಯನ್ನು ಮಾಡಿ, ಅವರಿಬ್ಬರಿಗೂ ಕುಶ, ಲವ ಎಂಬುದಾಗಿ ನಾಮಕರಣಮಾಡಿ, ಇವರಿಬ್ಬರೂ ಮಹಾ ಪರಾಕ್ರಮಶಾಲಿಗಳಾಗಿ ಬಾಳುವರೆಂಬುದಾಗಿ ಸೀತೆಗೆ ಹೇಳಿದನು [ರಾಮಾ-ಉ. ೬೫]. ಇಂತು ಕುಶ, ಲವರು ಕ್ರಮವಾಗಿ ಸಕಾಲದಲ್ಲಿ ವಾಲ್ಮೀಕಿ ಮುನಿಯ ಮೂಲಕ ಅನ್ನಪ್ರಾಶನಾದಿ ಸಂಸ್ಕಾರಗಳನ್ನು ಪಡೆದು ಸಕಲವಿದ್ಯಾ ಪಾರಂಗತರಾದ ಬಳಿಕ, ವಾಲ್ಮೀಕಿ ಮುನಿ ತಾನು ರಚಿಸಿದ ೨೪ ಸಾವಿರ ಗ್ರಂಥ ಪರಿಮಿತಿಯುಳ್ಳ ಆದಿಕಾವ್ಯವೆನಿಸಿದ ರಾಮಾಯಣವನ್ನು ಇವರಿಬ್ಬರಿಗೂ ವಾದ್ಯಸಹಿತವಾಗಿ ಹಾಡುವುದಕ್ಕೆ ಕಲಿಸಿಕೊಟ್ಟನು ಇವರಿಬ್ಬರೂ ಆ ಕಾವ್ಯವನ್ನು ಅಲ್ಲಲ್ಲಿ ಗಾಯನಮಾಡಿ, ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದರು ಇಷ್ಟರಲ್ಲಿ ಶ್ರೀ ರಾಮನು ಅಶ್ವಮೇಧ ದೀಕ್ಷಿತನಾಗಿ ಶತ್ರುಘ್ನನನ್ನು ಕುದುರೆಯ ಅಂಗರಕ್ಷೆಗಾಗಿ ನಿಯಮಿಸಿ ಕುದುರೆಯನ್ನು ಭೂ ಪ್ರದಕ್ಷಿಣೆಗಾಗಿ ಬಿಟ್ಟನು ಆ ಕುದುರೆ ಸಂಚರಿಸುತ್ತ ವಾಲ್ಮೀಕಿಯ ಆಶ್ರಮವನ್ನು ಹೊಕ್ಕಿತು ಆಗ ಲವನು ಆ ಕುದುರೆಯನ್ನು ಹಿಡಿದು ಕಟ್ಟಿಹಾಕಿ, ಶತ್ರುಘ್ನನೊಂದಿಗೆ ಯುದ್ಧಮಾಡಹೋಗಿ, ಮೂರ್ಛಿತನಾಗಲು, ಶತ್ರುಘ್ನನು ಲವನನ್ನು ತನ್ನ ರಥದ ಮೇಲೆ ಇಟ್ಟುಕೊಂಡು ಕುದುರೆಯನ್ನು ಬಿಡಿಸಿಕೊಂಡು ಅಯೋಧ್ಯಾಭಿಮುಖವಾಗಿ ಹೊರಟನು ಅಷ್ಟರಲ್ಲಿ ಈ ಸಮಾಚಾರವನ್ನು ಕೇಳಿ ಕುಶನು ಧನುರ್ಬಾಣಧರನಾಗಿ ಅಲ್ಲಿಗೆ ಬಂದು ಶತ್ರುಘ್ನನನ್ನು ಇದಿರಿಸಿ, ಸೋಲಿಸಿ, ಮೂರ್ಛೆಗೊಳಿಸಿ, ಲವನನ್ನು ಬಿಡಿಸಿಕೊಂಡುಹೋದನು ಈ ಸಮಾಚಾರವನ್ನು ಅಯೋಧ್ಯೆಯಲ್ಲಿದ್ದ ರಾಮನು ಕೇಳಿ, ಲಕ್ಷ್ಮಣನನ್ನು ಸೇನೆಯೊಂದಿಗೆ ಕಳುಹಿದನು ಲಕ್ಷ್ಮಣನೂ ಮೂರ್ಛಾಕ್ರಾಂತನಾಗಲು, ಭರತನು ಬಂದನು ಅವನೂ ಅದೇ ಅವಸ್ಥೆಗೆ ಗುರಿಯಾಗಲಾಗಿ ಶ್ರೀ ರಾಮನೇ ಸ್ವತಃ ಬಂದು ಯುದ್ಧಮಾಡಬೇಕಾಗಿ ಬಂದಿತು ರಾಮನು ಅಲ್ಲಿಗೆ ಬಂದು ಇವರಿಬ್ಬರನ್ನೂ ನೋಡಿ, ಆಂತರಿಕ ಸ್ನೇಹದಿಂದ ಉದಾಸೀನನಾಗಿರಲು, ಇವರಿಬ್ಬರು ತರಳರೂ ಮೇಲೆ ಬಿದ್ದು ಯುದ್ಧಮಾಡಿ, ರಾಮನನ್ನೂ ಮೂರ್ಛೆಗೆಡಹಿದರು ಇಷ್ಟರಲ್ಲಿ ವರುಣ ಲೋಕಕ್ಕೆ ಯಜ್ಞಾರ್ಥವಾಗಿ ಹೋಗಿದ್ದ ವಾಲ್ಮೀಕಿ ಮುನಿ ಆಶ್ರಮವನ್ನು ಸೇರಿ, ಅಲ್ಲಿನ ವಿದ್ಯಮಾನಗಳನ್ನು ಕೇಳಿ, ಭಯಭೀತನಾಗಿ ಬೇಗನೆ ರಣರಂಗವನ್ನು ಹೊಕ್ಕು, ಲವ ಕುಶರ ಪರಾಕ್ರಮವನ್ನು ಶ್ಲಾಘಿಸಿ, ತನ್ನ ಅಮೃತಮಯ ದೃಷ್ಟಿಯಿಂದ ರಾಮಾದಿಗಳನ್ನು ಬದುಕಿಸಿ, ಸೀತೆಯನ್ನೂ ಲವ ಕುಶರನ್ನೂ ರಾಮನಿಗೆ ಒಪ್ಪಿಸಿದನು. ಬಳಿಕ ಶ್ರೀ ರಾಮನು ಮುನಿಯನ್ನು ವಂದಿಸಿ, ಬಹಳವಾಗಿ ಕೊಂಡಾಡಿ, ಪತ್ನೀ ಪುತ್ರ,

ಸೋದರ, ಪರಿವಾರದೊಡನೆ ಅಯೋಧ್ಯೆಗೆ ಹೋಗಿ ಯಜ್ಞವನ್ನು ಪೂರ್ತಿಗೊಳಿಸಿದನು [ಜೈ.ಭಾ.-೨೫, ೨೬]

ರಾಮಾಯಣದ ಪ್ರಕಾರ ರಾಮನು ಅಶ್ವಮೇಧ ದೀಕ್ಷೆಯನ್ನು ವಹಿಸಿ, ತುರಗ ರಕ್ಷಣೆಗಾಗಿ ಲಕ್ಷ್ಮಣನನ್ನು ಕಳುಹಿಸಿದನು ಕೆಲಕಾಲದಲ್ಲಿಯೇ ಕುದುರೆ ನಿರುಪಾಧಿಕವಾಗಿ ಹಿಂದಿರುಗಿತು ಯಜ್ಞ ನೈಮಿಶಾರಣ್ಯದಲ್ಲಿ ನಡೆಯುತ್ತಿರುವಲ್ಲಿ ವಾಲ್ಮೀಕಿ ತನ್ನ ಶಿಷ್ಯರೊಂದಿಗೆ ಯಜ್ಞಶಾಲೆಯನ್ನು ಹೊಕ್ಕು ಸತ್ಕೃತನಾದನು ಮರುದಿನ (ಲವಕುಶರು) ಶಿಷ್ಯರು ರಾಮಾಯಣವನ್ನು ಹಾಡತೊಡಗಿದರು ಯಜ್ಞವಾಟಿಕೆಯಲ್ಲಿ ನೆರೆದಿದ್ದವರೆಲ್ಲರೂ ಆಶ್ಚರ್ಯಭರಿತರಾಗಿ ಕೇಳುತ್ತಿರುವಲ್ಲಿ, ೨೦ ಸರ್ಗಗಳವರೆಗೆ ಕೇಳಿದ ತರುವಾಯ, ಲಕ್ಷ್ಮಣನನ್ನು ಕರೆದು ಆ ಇಬ್ಬರು ಗಾಯಕರಿಗೂ ಪ್ರತ್ಯೇಕವಾಗಿ ೧೮ ಸಾವಿರ ವರಹಗಳನ್ನೂ, ಇನ್ನೂ ಅವರು ಅಪೇಕ್ಷಿಸತಕ್ಕ ವಸ್ತುಗಳನ್ನೂ ಕೊಟ್ಟು ಕಳುಹುವಂತೆ ಅಪ್ಪಣೆಮಾಡಿದನು ಆದರೆ ಈ ಗಾಯಕರು '' ನಾವು ತಾಪಸರು ನಮಗೆ ಹಣದಿಂದ ಕೆಲಸವಿಲ್ಲ ತಾವು ಲಾಲಿಸುವಿರಾದರೆ ಸಂಪೂರ್ಣವಾಗಿ ಹಾಡಬೇಕೆಂದಿರುವೆವು '' ಎಂದರು. ರಾಮನು ಸಮ್ಮತಿಸಿದನು. ಸೀತಾಪರಿತ್ಯಾಗ ಘಟ್ಟದವರೆಗೆ ಹಾಡಿ ನಿಲ್ಲಿಸಿದರು ಮರುದಿನ ಪ್ರಾತಃಕಾಲ ಎಲ್ಲರೂ ಯಜ್ಞವಾಟಿಕೆಯಲ್ಲಿ ನೆರೆದಿರುವಲ್ಲಿ ವಾಲ್ಮೀಕಿ ಸೀತಾ ಲವಕುಶರನ್ನು ಹಿಂದಿಟ್ಟುಕೊಂಡು ಬಂದು ಸೀತೆಯನ್ನು ಪರಿಗ್ರಹಿಸುವಂತೆ ಹೇಳಲಾಗಿ, ರಾಮನು ಸಮ್ಮತಿಸಿದನು ಪ್ರಜೆಗಳೆಲ್ಲರೂ ಆನಂದಭರಿತರಾಗಿರುವಲ್ಲಿ, ಸೀತೆ ತಾನು ಪರಿಶುದ್ಧಚರಿತೆಯಾಗಿದ್ದಲ್ಲಿ ಭೂ ದೇವಿ ತನ್ನನ್ನು ಐಕ್ಯಗೊಳಿಸುವಂತೆ ಬೇಡಿಕೊಂಡಳು ಒಡನೆಯೇ ಭೂಮಾತೆ ವಿವರವನ್ನು ತೋರಲಾಗಿ, ಸೀತೆ ಕಣ್ಮರೆಯಾದಳು ಬಳಿಕ ವಾಲ್ಮೀಕಿ ಲವಕುಶರನ್ನು ರಾಮನಿಗೆ ಒಪ್ಪಿಸಿದನು ಯಜ್ಞ ಸಂಪೂರ್ಣವಾದ ತರುವಾಯ ನೆರೆದಿದ್ದವರೆಲ್ಲರೂ ಹಿಂದೆರಳಿದರು ರಾಮನೂ ಅಯೋಧ್ಯೆಯನ್ನು ಹೊಕ್ಕನು [ರಾಮಾ -ಉ ೯೧, ೯೮] ಲಕ್ಷ್ಮಣ ನಿರ್ಯಾಣಾನಂತರ ರಾಮನು ಲವಕುಶರಿಗೆ ಪಟ್ಟಾಭಿಷೇಕಮಾಡಿ, ವಿಂಧ್ಯಪರ್ವತದ ಬಳಿಯಲ್ಲಿ ಕುಶಾವತಿಯೆಂಬ ಪಟ್ಟಣವನ್ನೂ ಶ್ರಾವಸ್ತಿಯೆಂಬ ಪಟ್ಟಣವನ್ನೂ ನಿರ್ಮಿಸಿ, ಅವುಗಳಲ್ಲಿ ಕ್ರಮವಾಗಿ ಕುಶ ಲವರನ್ನು ನಿಲ್ಲಿಸಿದನು [ಉತ್ತ -೧೦೮] ಕುಶನಿಗೆ ಚಂಪಕಾ, ಕುಮುದ್ವತಿಯೆಂಬುದಾಗಿ ಇಬ್ಬರು ಪತ್ನಿಯರು ಹಿರಿಯವಳಾದ ಚಂಪಕೆ ಚಂಪಕಮಾಲಿನಿ ಮುಂತಾದ ಒಂಬತ್ತು ಮಂದಿ ಹೆಣ್ಣು ಮಕ್ಕಳನ್ನೂ, ಕಿರಿಯವಳಾದ ಕುಮುದ್ವತಿ ಅತಿಥಿ ಮೊದಲಾದ ಎಂಟು ಮಂದಿ ಪುತ್ರರನ್ನೂ ಪಡೆದಳು ಕುಶವಂಶವರ್ಣನೆ [ಶಿವ.-ಉಮಾ ೩೯].

**ಕುಶಧ್ವಜ.**—(1) ಒಬ್ಬ ಅರಸು. ವಿದೇಹವಂಶದ ಹ್ರಸ್ವರೋಮಜನಕನ ಕಿರಿಯ ಮಗನು. ಸೀರಧ್ವಜಜನಕನ ತಮ್ಮನು. ಸೀರಧ್ವಜಜನಕನು ಇಂದ್ರದೇಶವನ್ನು

ಗೆದ್ದು, ಸಾಂಕಾಶ್ಯ ನಗರಿಯನ್ನು ರಾಜಧಾನಿಯಾಗಿ ಏರ್ಪಡಿಸಿ, ಅಲ್ಲಿ ಕುಶಧ್ವಜನನ್ನು ಅರಸನನ್ನಾಗಿ ನಿಯಮಿಸಿದನು ಇವನಿಗೆ ಮಾಂಡವಿ, ಶ್ರುತಕೀರ್ತಿಯೆಂಬ ಇಬ್ಬರು ಕನ್ಯೆಯರಿದ್ದರು. ಸೀತೆಯನ್ನು ರಾಮನಿಗೆ ಕೊಟ್ಟು ಮದುವೆಯಾದ ಬಳಿಕ, ಸೀರಧ್ವಜ ಇವರಿಬ್ಬರನ್ನೂ ಭರತ ಶತ್ರುಘ್ನರಿಗೆ ಕೊಟ್ಟು ಮದುವೆ ಮಾಡಿದನು [ರಾಮಾ.-ಬಾಲ ೭೦, ೭೪].

(11) ವಿದೇಹ ವಂಶದ ವೃಷಧ್ವಜಜನಕನ ಮಗನಾದ ರಥಧ್ವಜಜನಕನ ಮಗನು. ಈತನಿಗೆ ಲಕ್ಷ್ಮಿಯ ಅಂಶದಿಂದ ವೇದವತಿಯೆಂಬ ಮಗಳು ಜನಿಸಿದಳು. ಈ ವೇದವತಿ ಮುಂದಣ ಜನ್ಮದಲ್ಲಿ ಸೀತೆಯಾಗಿ ಜನಿಸಿದವಳು [ರಾಮಾ -ಉ. ೧೭. ದೇ ಭಾ -೯, ೧೫]

**ಕುಶನಾಭ** —ಒಬ್ಬ ಅರಸು ಚಂದ್ರವಂಶದ ಕುಶಿಕ ರಾಜನ ನಾಲ್ಕು ಮಂದಿ ಪುತ್ರರಲ್ಲಿ ಕಡೆಯವನು ಇವನು ಮಹೋದಯವೆಂಬ ನಗರಿಯನ್ನು ಸ್ಥಾಪಿಸಿದನು. ಈತನು ಘೃತಾಚಿಯೆಂಬ ಅಪ್ಸರಸಿಯಲ್ಲಿ ನೂರು ಮಂದಿ ಹೆಣ್ಣುಮಕ್ಕಳನ್ನು ಪಡೆದನು. ಈ ಕುವರಿಯರು ಒಮ್ಮೆ ವನದಲ್ಲಿ ಸಂಚರಿಸುತ್ತಿದ್ದಾಗ ವಾಯುದೇವನು ಇವರನ್ನು ಕಂಡು ಮೋಹಿಸಿದನು ಆದರೆ ಈ ಹುಡುಗಿಯರು ಸಮ್ಮತಿಸಲಿಲ್ಲ. ಇದರಿಂದ ಕುಪಿತನಾದ ವಾಯು ಇವರೆಲ್ಲರನ್ನೂ ಕುಬ್ಜೆಯರಾಗುವಂತೆ ಶಾಪವಿತ್ತನು. ಕೆಲಕಾಲದ ಮೇಲೆ ಬ್ರಹ್ಮದತ್ತನು ಇವರ ಕುಬ್ಜತ್ವವನ್ನು ಹೋಗಲಾಡಿಸಿ, ಇವರನ್ನು ಮದುವೆಯಾದನು ನೋಡು—ಕನ್ಯಾಕುಬ್ಜ [ರಾಮಾ -ಬಾಲ ೩೨, ೩೩].

**ಕುಶಪ್ಲವ** —ಒಂದು ವನ ಕಶ್ಯಪನ ಹಿರಿಯ ಹೆಂಡತಿಯಾದ ದಿತಿ, ತನ್ನ ಮಕ್ಕಳನ್ನು ಇಂದ್ರನು ಸಂಹರಿಸಿದ ಕಾರಣ, ಇಂದ್ರನನ್ನು ಸೋಲಿಸತಕ್ಕಂತಹ ಮಗನನ್ನು ಪಡೆಯುವ ಉದ್ದೇಶದಿಂದ ಬಹಳ ಕಾಲದವರೆಗೆ ತಪಸ್ಸುಮಾಡುತ್ತಿದ್ದಳು ಕಾಲಾಂತರದಲ್ಲಿ ವಿಶಾಲನೆಂಬ ಅರಸು ಈ ಸ್ಥಳದಲ್ಲಿ ಒಂದು ನಗರವನ್ನು ನಿರ್ಮಿಸಿ, ಆ ನಗರಕ್ಕೆ ವಿಶಾಲಾನಗರವೆಂಬ ಹೆಸರಿಟ್ಟನು ವಿಶ್ವಾಮಿತ್ರನು ತನ್ನ ಯಜ್ಞದ ಸಂರಕ್ಷಣಾರ್ಥವಾಗಿ ರಾಮ ಲಕ್ಷ್ಮಣರನ್ನು ಸಂಗಡ ಕರೆದುಕೊಂಡು ಹೋಗುವಾಗ ಈ ನಗರದ ಮೂಲಕ ಪ್ರಯಾಣಮಾಡಿದನು ಆ ಕಾಲದಲ್ಲಿ ಈ ನಗರಿಯನ್ನು ಸುಮತಿಯೆಂಬ ಅರಸು ಪರಿಪಾಲಿಸುತ್ತಿದ್ದನು [ರಾಮಾ.-ಬಾ ೪೬].

**ಕುಶಸ್ಥಲೀ** —ಶ್ರೀ ರಾಮನ ಹಿರಿಯ ಮಗನಾದ ಕುಶನು ರಾಜ್ಯಭಾರಮಾಡುವುದಕ್ಕಾಗಿ ಶ್ರೀ ರಾಮನು ನಿರ್ಮಿಸಿದ ಒಂದು ಪಟ್ಟಣ ಶರ್ಯಾತಿ ರಾಜನ ಮೊಮ್ಮಗನಾದ ರೇವತನೆಂಬ ಅರಸು ಇಲ್ಲಿ ಬಹಳ ಕಾಲ ರಾಜ್ಯಭಾರಮಾಡುತ್ತಿದ್ದನು. ಶ್ರೀ ಕೃಷ್ಣನು ವಾಸವಾಗಿದ್ದ ಮಧುರಾಪುರಿಯನ್ನು ಜರಾಸಂಧನು ಸುಟ್ಟು ಹಾಳುಗೆಡಹಿದ ಬಳಿಕ, ಶ್ರೀ ಕೃಷ್ಣನು ಈ ಪ್ರದೇಶದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನಿಂದ ಅಂದ

ವಾದ ಒಂದು ಪಟ್ಟಣವನ್ನು ಕಲ್ಪಿಸಿ, ಅದಕ್ಕೆ ದ್ವಾರಕೆಯೆಂಬ ಹೆಸರಿಟ್ಟು, ತಾನು ವಾಸಮಾಡತೊಡಗಿದನು [ರಾಮಾ -ಉ ೧೦೮ ಭಾಗ -೧೦, ೫೧. ಭಾರ.- ಸ. ೧೪]. ಶ್ರೀ ಕೃಷ್ಣ ನಿರ್ಯಾಣವಾದ ಏಳನೆಯ ದಿವಸ ಈ ನಗರ ಸಮುದ್ರದಲ್ಲಿ ಮುಳುಗಿ ಹೋಯಿತು [ಭಾರ -ಮೌಸ ೭]

**ಕುಶಾಮ್ಬ** —ಒಬ್ಬ ಅರಸು ಚಂದ್ರವಂಶದ ಪುರು ರಾಜನ ಸಂತತಿಯಲ್ಲಿ ಜನಿಸಿದ ಕೃತಿ ರಾಜನ ಮಗನಾದ ಉಪರಿಚರವಸುವಿನ ಮಗನು ಇವನಿಗೆ ಮಣಿ ವಾಹನನೆಂಬುದು ನಾಮಾಂತರ ಇವನು ಒಂದು ನಗರವನ್ನು ಸ್ಥಾಪಿಸಿ, ಅದಕ್ಕೆ ಕೌಶಾಂಬಿಯೆಂದು ಹೆಸರಿಟ್ಟನು [ಭಾರ.-ಆದಿ ೬೪].

**ಕುಶಾವತೀ** —ನೋಡು—ಕುಶ, ಕುಶಸ್ಥಲೀ

**ಕುಶಾವರ್ತ.**—ಪ್ರಿಯವ್ರತ ವಂಶದ ಋಷಭ ಚಕ್ರವರ್ತಿಯಿಂದ ಜಯಂತಿಯೆಂಬವಳಲ್ಲಿ ಜನಿಸಿದ ನವಖಂಡಾಧಿಪತಿಗಳಲ್ಲಿ ಒಬ್ಬನು ಇವನು ಪಾಲಿಸಿದ ದೇಶಕ್ಕೂ ಇದೇ ಹೆಸರು [ಭಾಗ -೫, ೫].

**ಕುಶಿಕ** —ಒಬ್ಬ ಅರಸು. ಚಂದ್ರವಂಶದ ಪುರು ರಾಜನ ಸಂತತಿಯಲ್ಲಿ ಜನಿಸಿದ ಕುಶ ರಾಜನ ಮಗನು. ಇವನ ಮಗನು ಗಾಧಿ ರಾಜನು [ಭಾರ.-ಅನು. ೭]. ಈತನು ಪುತ್ರಪ್ರಾಪ್ತಿಗಾಗಿ ಬಹಳ ಕಾಲ ತಪಸ್ಸು ಮಾಡಿದನು [ಹರಿ.-೧, ೧೭. ಭಾರ.-ಶಾಂತಿ ೪೮ ಭಾಗ -೯, ೧೫]. ಭೃಗುವಂಶವೂ ಕುಶಿಕವಂಶವೂ ಬೆರೆಯುವುದೆಂಬ ಸಮಾಚಾರ ಚ್ಯವನ ಮುನಿಯ ಕಿವಿಗೆ ಬಿದ್ದಿತು ಅದನ್ನು ಸಹಿಸಲೊಲ್ಲದೆ ಏನಾದರೊಂದು ಎತ್ತುಗಡಿಯಿಂದ ಕುಶಿಕವಂಶವನ್ನೇ ನಿರ್ಮೂಲಗೊಳಿಸಬೇಕೆಂಬ ದುರುದ್ದೇಶದಿಂದ ಚ್ಯವನನು ಕುಶಿಕನ ಮನೆಗೆ ಬಂದನು ರಾಜ ದಂಪತಿಗಳು ಭಯ ಭಕ್ತಿಗಳಿಂದ ಸತ್ಕರಿಸಿದರು. ಚ್ಯವನನು ಎಷ್ಟೋ ದಿನಗಳವರೆಗೆ ಅಲ್ಲಿಯೇ ನಿಂತನು. ಇವರ ಭಕ್ತಿ ವಿಶ್ವಾಸಗಳು ಹೆಚ್ಚುತ್ತಲೇ ಇದ್ದುವು ನಾನಾ ಪ್ರಕಾರದಿಂದ ರಾಜ ದಂಪತಿಗಳನ್ನು ಪೀಡಿಸಿದನು. ಅವರು ಆ ಕಷ್ಟಗಳನ್ನೆಲ್ಲ ಸಂತೋಷದಿಂದಲೇ ಸಹಿಸಿಕೊಂಡರು ಚ್ಯವನನು ಕರ್ತವ್ಯಶೂನ್ಯನಾಗಿ ಆ ದಂಪತಿಗಳ ಸಹನೆಗೆ ಮೆಚ್ಚಿ "ನಿಮ್ಮ ಶುಶ್ರೂಷೆಗೆ ಮೆಚ್ಚಿದೆನು ನಿಮ್ಮ ವಂಶದಲ್ಲಿ ಬ್ರಹ್ಮತೇಜಸ್ಸಿನಿಂದ ಮೆರೆದು ಕೀರ್ತಿಶಾಲಿಯಾಗುವ ಮಹಾ ಪುರುಷನು ಬೇಗನೆ ಹುಟ್ಟುವನು ನಿಮ್ಮ ವಂಶವೂ ವಿಖ್ಯಾತವಾಗುವುದು" ಎಂಬುದಾಗಿ ಹರಸಿ, ಬೀಳ್ಕೊಂಡನು. ಆ ತರುವಾಯ ಕುಶಿಕನ ವಂಶದಲ್ಲಿ ವಿಶ್ವಾಮಿತ್ರನು ಗಾಧಿ ರಾಜನಿಗೆ ಮಗನಾಗಿ ಹುಟ್ಟಿದನು [ಅನು. ೮೭].

**ಕುಹೂ** —ಸ್ವಾಯಂಭುವ ಮನ್ವಂತರದಲ್ಲಿ ಅಂಗಿರಸನೆಂಬ ಮಹರ್ಷಿಯಿಂದ ಶ್ರದ್ಧಾದೇವಿಯಲ್ಲಿ ಜನಿಸಿದ ನಾಲ್ವರು ಕನ್ನಿಕೆಯರಲ್ಲಿ ಒಬ್ಬಳು. ಅಮಾವಾಸ್ಯೆಯ ಅಭಿಮಾನದೇವತೆ. ಸಿನೀವಾಲಿ, ರಾಕಾ, ಅನುಮತಿಗಳು ಇವಳ ಸಹೋದರಿಯರು.

ಈಕೆ ಹವಿಷ್ಮಂತರೆಂಬ ಪಿತೃದೇವತೆಗಳನ್ನು ಮದುವೆಯಾದಳು [ವಿಷ್ಣು.-ಅಂಶ. ೧, ೧೦].

**ಕೂಟ.**—ಕಂಸನ ಆಸ್ಥಾನದಲ್ಲಿದ್ದ ಜಟ್ಟಿಗಳಲ್ಲಿ ಒಬ್ಬ. ಬಲರಾಮ ಕೃಷ್ಣರು ಧನುರ್ಯಾಗಕ್ಕಾಗಿ ಮಥುರೆಗೆ ಹೋಗಿದ್ದಾಗ ಬಲರಾಮನು ಇವನನ್ನು ಕೊಂದನು [ಭಾಗ.-೧೦, ೪೪]

**ಕೂಪಕರ್ಣ.**—ಬಾಣಾಸುರನ ಆಪ್ತನು. ಬಲರಾಮನಿಗೂ ಬಾಣಾಸುರನಿಗೂ, ಉಷಾಪಹರಣ ಸಂದರ್ಭದಲ್ಲಿ ನಡೆದ ಯುದ್ಧದಲ್ಲಿ ಇವನು ಬಾಣಾಸುರನ ಪರವಾಗಿ ಬಲರಾಮನೊಂದಿಗೆ ಯುದ್ಧಮಾಡಿ ಸತ್ತನು [ಭಾಗ -೧೦, ೬೩]

**ಕೂರ್ಮ** —(1) ಆಮೆ ವಿಷ್ಣುವಿನ ಅವತಾರಗಳಲ್ಲಿ ಎರಡನೆಯದು ಈಗ ನಡೆಯುತ್ತಿರುವ ಶ್ವೇತವರಾಹ ಕಲ್ಪದ ಚಾಕ್ಷುಷ ಮನ್ವಂತರದಲ್ಲಿ ನಡೆದುದು ಹಿಂದೊಮ್ಮೆ ರಾಕ್ಷಸರು ದೇವತೆಗಳಿಗಿಂತಲೂ ಬಲಾಧಿಕರಾಗಿದ್ದರು ರಾಕ್ಷಸರು ಪ್ರಬಲಿಸಿದ ಹಾಗೆಲ್ಲ ದೇವತೆಗಳು ಕಳೆಗುಂದಿ ವಿಷ್ಣುವನ್ನು ಮರೆಹೊಕ್ಕರು ಆಗ ವಿಷ್ಣು ದೇವತೆಗಳನ್ನು ಕುರಿತು '' ನಿಮ್ಮ ಶೌರ್ಯ ಪರಾಕ್ರಮಗಳು ಈಗ ನಡೆಯುವುದಿಲ್ಲ ನೀವೀಗ ಬಹಳ ಯುಕ್ತಿಯಿಂದ ನಡೆಯಬೇಕು. ಹೇಗಾದರೂ ರಾಕ್ಷಸರೊಂದಿಗೆ ಸ್ನೇಹಮಾಡಿಕೊಂಡು, ಅಮೃತ ಸಂಪಾದನೆಗಾಗಿ ಅವರನ್ನು ಹುರಿದುಂಬಿಸಿ, ಕ್ಷೀರಸಮುದ್ರವನ್ನು ಮಥನಮಾಡಿದಲ್ಲಿ ಮುಂದೆ ಅದರಿಂದ ನಿಮಗೆ ಮೇಲ್ಮೆಯುಂಟು '' ಎಂಬುದಾಗಿ ಹೇಳಿದನು. ದೇವತೆಗಳು ಅದರಂತೆಯೇ ರಾಕ್ಷಸರ ಬಳಿ ಸಾರಿ ''ಅಣ್ಣಗಳಿರಾ ! ನಾವೆಲ್ಲರೂ ಒಬ್ಬ ತಂದೆಯ ಮಕ್ಕಳು. ನಮ್ಮ ಜನನಿಯೂ ನಿಮ್ಮ ಜನನಿಯೂ ಅಕ್ಕ ತಂಗಿಯರೇ ಹೊರತು, ಸವತಿಯರಂತಲ್ಲ. ಇಂತಿರಲು ಒಂದೇ ಕುಟುಂಬದವರಾದ ನಾವು ಕಚ್ಚಾಡುವುದು ತರವಲ್ಲ. ಈಗ ನಾವೂ ನೀವೂ ಒಟ್ಟುಗೂಡಿ, ಪಾಲ್ಗಡಲನ್ನು ಮಥನಮಾಡಿ, ಅಮೃತವನ್ನು ಸಂಪಾದಿಸಿ, ಸುಖವಾಗಿ ಬಾಳುವ'' ಎಂದರು ಅಲ್ಪ ಸಂತೋಷಿಗಳಾದ ರಾಕ್ಷಸರು ದಿಟವೆಂದು ನಂಬಿ, ಸಮ್ಮತಿಸಿದರು ಮಂದರ ಪರ್ವತವನ್ನು ಕಡೆಗೋಲಾಗಿ ಏರ್ಪಡಿಸಿ, ವಾಸುಕಿಯನ್ನು ಹಗ್ಗಕ್ಕೆ ಪ್ರತಿಯಾಗಿ ಬಿಗಿದು, ರಾಕ್ಷಸರು ತಲೆಯನ್ನು ಹಿಡಿದುಕೊಂಡೂ, ದೇವತೆಗಳು ಬಾಲವನ್ನು ಹಿಡಿದುಕೊಂಡೂ ಕಡೆಯುವಂತೆ ವಿಷ್ಣು ಏರ್ಪಡಿಸಿದನು. ತಲೆಯ ಕಡೆ ದಪ್ಪನಾಗಿರುವುದರಿಂದ ಅದೇ ಬಿಗಿಯಾಗಿ ಹಿಡಿಯಲು ಅನುಕೂಲವೆಂದರಿತು ರಾಕ್ಷಸರು ಅದಕ್ಕೊ ತಲೆದೂಗಿದರು. ಇತ್ತಂಡದವರೂ ಅಕ್ಕರೆಯಿಂದ ಕಡೆಯುತ್ತಿರುವಲ್ಲಿ, ಕಡೆಗೋಲಾಗಿದ್ದ ಮಂದರಪರ್ವತವು ಸಮುದ್ರದ ಅಡಿಯಲ್ಲಿ ಕೂತುಕೊಂಡಿತು. ಆಗ ದೇವತೆಗಳೂ ದಾನವರೂ ಏಕಪ್ರಕಾರವಾಗಿ ಮೊರೆಯಿಡಲು ವಿಷ್ಣು ತನ್ನ ಒಂದು ಅಂಶದಿಂದ ಕೂರ್ಮ ರೂಪವನ್ನು ತಾಳಿ, ತನ್ನ ಬೆನ್ನಮೇಲೆ,

ಮಂದರಪರ್ವತವನ್ನು ಧರಿಸಿ, ಮತ್ತೊಂದು ಅಂಶದಿಂದ ದೇವ ದಾನವರನ್ನು ಕಡೆಯು ವುದಕ್ಕೆ ಪ್ರೋತ್ಸಾಹಗೊಳಿಸಿ ಮುಂದಾಳಾಗಿ ನಿಂತನು [ಭಾರ.-ಆದಿ. ೧೮. ಭಾಗ.-೮, ೭. ಪದ್ಮ-೬ ವಿಷ್ಣು.-೧, ೯].

(ii) ದೇಹದಲ್ಲಿರುವ ಐದು ಉಪ ವಾಯುಗಳಲ್ಲಿ ಒಂದು ಇದರಿಂದ ಉನ್ಮೀಲನ ಕಾರ್ಯ ನಡೆಯುತ್ತದೆ

**ಕೂರ್ಮವ್ಯೂಹ** —ಸೈನ್ಯವನ್ನು ಕೂರ್ಮಾಕಾರವಾಗಿ ಏರ್ಪಡಿಸುವುದು ಮಹಾ ಭಾರತ ಯುದ್ಧದಲ್ಲಿ ಭೀಷ್ಮನು ಏಳನೆಯ ದಿವಸದ ಯುದ್ಧಕ್ಕೆ ಮೊದಲು ಕುರು ಸೇನೆಯನ್ನು ಕೂರ್ಮಾಕಾರವಾಗಿ ರಚಿಸಿದ್ದನು [ಭಾರ -ಭೀ ೮೭]

**ಕೃಕರ** —ದೇಹದೊಳಗಣ ಐದು ಬಗೆಯ ಉಪ ವಾಯುಗಳಲ್ಲಿ ಒಂದು. ಇದು ಪ್ರಾಣಿಗೆ ಹಸಿವನ್ನುಂಟುಮಾಡುತ್ತದೆ

**ಕೃತ.**—(i) ವಸುದೇವನಿಂದ ರೋಹಿಣಿಯಲ್ಲಿ ಜನಿಸಿದ ಏಳು ಮಂದಿ ಮಕ್ಕಳಲ್ಲಿ ಕಡೆಯವನು. ಬಲರಾಮನ ಕಿರಿಯ ತಮ್ಮ [ಭಾಗ -೯, ೨೪ ಹರಿ -೧, ೩೫]

(ii) ನಾಲ್ಕು ಯುಗಗಳಲ್ಲಿ ಮೊದಲನೆಯದು ಮನುಷ್ಯಮಾನ ಪ್ರಕಾರವಾಗಿ ೧೭,೨೮,೦೦೦ ವರ್ಷಗಳು ಇದರ ಪ್ರಮಾಣ [ಮತ್ಸ್ಯ -೬೪] ಸೂರ್ಯ, ಚಂದ್ರ, ಬೃಹಸ್ಪತಿಗಳು ಪುಷ್ಯ ನಕ್ಷತ್ರದಲ್ಲಿ ಸೇರಿದ್ದಾಗ ಕೃತಯುಗ ಪ್ರಾರಂಭವಾಗುತ್ತದೆ ಇದನ್ನು ಆದಿಯುಗವೆಂತಲೂ, ದೇವಯುಗವೆಂತಲೂ ಕರೆಯುತ್ತಾರೆ [ಭಾರ -ವನ. ೧೫೧] "ಕೃತಕೃತ್ಯಾಃ ಪ್ರಜಾ ಜಾತ್ಯಾ ತಸ್ಮಾತ್ ಕೃತಯುಗಂ ವಿದುಃ" ಜನ್ಮ ಮಾತ್ರದಿಂದಲೇ ಪ್ರಜೆಗಳು ಧನ್ಯರಾಗುವರಾದುದರಿಂದ ಈ ಯುಗಕ್ಕೆ ಕೃತಯುಗ ವೆಂಬ ಹೆಸರು [ಭಾಗ -೧೨, ೨]. ಈ ಯುಗದಲ್ಲಿ ಪ್ರಜೆಗಳೆಲ್ಲರೂ ರಾಗದ್ವೇಷ ಶೂನ್ಯ ರಾಗಿ, ಸತ್ಯಸಂಧರೆನಿಸಿ, ಪರಸ್ಪರ ಮೈತ್ರಿಯಿಂದ ನಡೆಯುತ್ತಿದ್ದರಾದುದರಿಂದ ಇದಕ್ಕೆ ಕೃತಯುಗವೆಂದು ಹೆಸರು ಈ ಯುಗದಲ್ಲಿ ಒಬ್ಬರು ಮತ್ತೊಬ್ಬರನ್ನು ಯಾಚಿ ಸುತ್ತಿರಲಿಲ್ಲ ದಾನಮಾಡಬೇಕಾಗಿ ಬಂದಲ್ಲಿ ಪ್ರತಿಗ್ರಹೀತನನ್ನು ಹುಡುಕಿಕೊಂಡು ಹೋಗಬೇಕಾಗಿದ್ದಿತು ಧರ್ಮವೆಂಬ ವೃಷಭ ನಾಲ್ಕು ಕಾಲುಗಳಿಂದಲೂ ಸ್ಥಿರವಾಗಿ ನಿಂತಿದ್ದಿತು [ವನ ೧೯೧, ೧೯೪ ಶಾಂತಿ ೬೯]

**ಕೃತಘ್ನನಿಷ್ಟೆ** —[ಶಾಂತಿ ೧೬೭] ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ [ಶಾಂತಿ. ೨೭೭] ಕೃತಘ್ನನಿಗೆ ಪ್ರಾಯಶ್ಚಿತ್ತ [ಅನು ೩೩]

**ಕೃತದ್ಯುತಿ** —ಅಂಗರಾಜನ ಮಗಳು ಶೂರಸೇನ ದೇಶದ ಅರಸನಾದ ಚಿತ್ರ ಕೇತುವೆಂಬ ಅರಸನನ್ನು ಮದುವೆಯಾಗಿದ್ದಳು ಈಕೆಗೆ ಅನೇಕ ಮಂದಿ ಸವತಿಯ ರಿದ್ದರು. ಯಾರೊಬ್ಬರಿಗೂ ಸಂತಾನವಿರಲಿಲ್ಲ ಅರಸನು ಬಹಳವಾಗಿ ಚಿಂತಾಕ್ರಾಂತ ನಾಗಿರುವಲ್ಲಿ ಒಮ್ಮೆ ಆಂಗಿರಸನೆಂಬ ಋಷಿ ಈತನ ಮನೆಗೆ ಬಂದ, ಅರಸು ತನ್ನ

ಕೊರತೆಯನ್ನು ಹೇಳಿಕೊಳ್ಳಲಾಗಿ ಆದಿತ್ಯೇಷ್ಟಿಯನ್ನು ಮಾಡಿ, ಮಂತ್ರಪೂತವಾದ ಚರುಶೇಷವನ್ನು ಹಿರಿಯ ಹೆಂಡತಿಯಾದ ಕೃತದ್ಯುತಿಗೆ ಕೊಟ್ಟನು ಕೃತದ್ಯುತಿ ದಿವ್ಯ ತೇಜೋಭರಿತನಾದ ಒಬ್ಬ ಕುಮಾರನನ್ನು ಹೆತ್ತಳು. ಇದರಿಂದ ಅರಸನು ಕೃತದ್ಯುತಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದನು ಇದರಿಂದ ಸವತಿಯರ ದ್ವೇಷವು ಕೃತದ್ಯುತಿಯ ಮೇಲೆ ದಿನದಿನಕ್ಕೂ ಹೆಚ್ಚುತ್ತ ಬಂದು, ಕಡೆಗೆ ಆ ಮಗುವಿಗೆ ವಿಷವನ್ನು ಕುಡಿಸಿ ಕೊಂದರು [ಭಾಗ.-೬ ಸ್ಕ -೧೪, ೧೭ ಅಧ್ಯಾ ]

**ಕೃತಧ್ವಜ**—ಒಬ್ಬ ಅರಸು ವಿದೇಹ ವಂಶದ ಧರ್ಮಧ್ವಜಜನಕನ ಇಬ್ಬರು ಮಕ್ಕಳಲ್ಲಿ ಹಿರಿಯವನು ಇವನ ತಮ್ಮನು ಖಾಂಡಿಕ್ಯನು ಧರ್ಮಧ್ವಜನ ಬಳಿಕ ಇವರಿಬ್ಬರೂ ರಾಜ್ಯವನ್ನು ಹಂಚಿಕೊಂಡು, ರಾಜ್ಯಭಾರವಾಡುತ್ತಿದ್ದರು ಕೃತಧ್ವಜನ ಮಗನಾದ ಕೇಶಿಧ್ವಜನು ತನ್ನ ಚಿಕ್ಕಪ್ಪನಾದ ಖಾಂಡಿಕ್ಯನ ಮೇಲೆ ದಂಡೆತ್ತಿ ಹೋಗಿ, ಅವನನ್ನು ಸೋಲಿಸಿ, ಕಾಡಿಗೆ ಅಟ್ಟಿ, ಅವನ ರಾಜ್ಯವನ್ನು ಅಪಹರಿಸಿದನು ಖಾಂಡಿಕ್ಯನು ಅರಣ್ಯದಲ್ಲಿಯೇ ತಾಪಸನಾಗಿದ್ದನು ಒಮ್ಮೆ ಕೇಶಿಧ್ವಜನು ಯಜ್ಞದೀಕ್ಷೆಯನ್ನು ಕೈಕೊಂಡಿದ್ದಾಗ, ಯಾಗ ಪಶುವನ್ನು ಒಂದು ಹುಲಿ ನುಂಗಿಬಿಟ್ಟಿತು ಕರ್ತವ್ಯಶೂನ್ಯನಾದ ಕೇಶಿಧ್ವಜನು ಅದಕ್ಕೆ ಪ್ರತೀಕಾರವೇನೆಂದು ತಿಳಿಯುವ ಸಲುವಾಗಿ ಖಾಂಡಿಕ್ಯನ ಬಳಿಗೆ ಹೋದನು ಖಾಂಡಿಕ್ಯನು ದೂರದಿಂದಲೇ ಕಂಡು, ಓಡಿ ಬಂದು, ಬಿಗಿದಪ್ಪಿ, ಮುದ್ದಾಡಿ, ಕುಳ್ಳಿರಿಸಿ, ಕುಶಲಪ್ರಶ್ನೆಯನ್ನು ಮಾಡಿ, ಅವನು ಬಂದ ಸಮಾಚಾರವನ್ನು ಕೇಳಿ ತಿಳಿದು, ಮುಂದಣ ಕರ್ತವ್ಯವನ್ನು ಅರುಹಿದನು ಸಂತುಷ್ಟನಾದ ಕೇಶಿಧ್ವಜನು "ಗುರುದಕ್ಷಿಣೆಯನ್ನು ಕೊಡುವೆನು ಬೇಕಾದುದನ್ನು ಕೇಳು" ಎನಲಾಗಿ ಖಾಂಡಿಕ್ಯನು ತನ್ನ ರಾಜ್ಯ ಕೋಶಗಳನ್ನು ಕೇಳದೆ, ಕೇಶಿಧ್ವಜನಿಂದ ಅನೇಕ ಯೋಗರಹಸ್ಯಗಳನ್ನು ಕೇಳಿ ತಿಳಿದನು

**ಕೃತಪ್ರಜ್ಞ.**—ಪ್ರಾಗ್ಜ್ಯೋತಿಷ ನಗರಾಧಿಪತಿಯಾದ ನರಕಾಸುರನ ಮಗನಾದ ಭಗದತ್ತನ ಮಗನು ಭಗದತ್ತನು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಯುದ್ಧಮಾಡಿ, ಅರ್ಜುನನಿಂದ ಹತನಾದ ಬಳಿಕ, ಇವನೂ ಇವನ ತಮ್ಮನೂ, ಅರ್ಜುನನನ್ನು ಎದುರಿಸಹೋಗಿ ನಕುಲನಿಂದ ಮಡಿದರು [ಭಾರ -ಕ ೨]

**ಕೃತವರ್ಮ**—ಒಬ್ಬ ಅರಸು ಭೋಜ ದೇಶದ ಅರಸನಾದ ಹೃದಿಕನ ಐದು ಮಂದಿ ಪುತ್ರರಲ್ಲಿ ಮೂರನೆಯವನು. ಹಾರ್ದಿಕನೆಂಬುದು ಇವನ ನಾಮಾಂತರ ಇವನು ಮರುದ್ಗಣಾಂಶ ಸಂಭೂತನಾಗಿದ್ದುದರಿಂದ, ಧೀರನೂ ಮಹಾ ಬಲಸಂಪನ್ನನೂ ಎನಿಸಿದ್ದನು. ಮಹಾಭಾರತ ಯುದ್ಧಾರಂಭದಲ್ಲಿ ಬಲರಾಮನು ಇವನನ್ನು ಒಂದು ಅಕ್ಷೌಹಿಣೀ ಸೈನ್ಯದೊಂದಿಗೆ ದುರ್ಯೋಧನನ ಸಹಾಯಾರ್ಥವಾಗಿ ಕಳುಹಿಸಿದ್ದನು. ಸುಭದ್ರಾ ತನಯನಾದ ಅಭಿಮನ್ಯುವನ್ನು ಕೊಲೆಮಾಡಿದ ಮಹಾ ವೀರರಲ್ಲಿ ಇವನೂ

ಒಬ್ಬನು (ನೋಡು—ಅಶ್ವತ್ಥಾಮನು). ಗದಾಯುದ್ಧಾನಂತರ ದುರ್ಯೋಧನನು ಮರ ಣೋನ್ಮುಖನಾಗಿ ತೊಡೆ ಮುರಿದು ಬಿದ್ದಿದ್ದಾಗ ಇವನು ಅಲ್ಲಿಗೆ ಹೋದನು ಆ ಸಮಯದಲ್ಲಿ ಅಶ್ವತ್ಥಾಮನು ಪಾಂಡವರನ್ನು ಕೊಲ್ಲುವಂತೆ ಪ್ರತಿಜ್ಞೆ ಮಾಡಿದಾಗ ಇವನೂ ಅಲ್ಲಿಯೇ ಇದ್ದನು ಮತ್ತು ಅಶ್ವತ್ಥಾಮನಿಗೆ ಸಹಾಯಕನಾಗಿ ಹಿಂದೆ ಹೋಗಿದ್ದನು. ಅಶ್ವತ್ಥಾಮನು ಪಾಂಡವರ ಶಿಬಿರವನ್ನು ಹೊಕ್ಕು ಘೋರ ಕೃತ್ಯವನ್ನು ನಡಸತೊಡಗಿದಾಗ ಇವನೂ ಕೃಪಾಚಾರ್ಯನೂ ಅವನನ್ನು ಬಹಳಮಟ್ಟಿಗೆ ಅಡ್ಡ ಗಿಸಿದರು ಆದರೆ ಅದು ಫಲಕಾರಿಯಾಗಲಿಲ್ಲ ಅಶ್ವತ್ಥಾಮನು ಉಪಪಾಂಡವ ರನ್ನೂ ಧೃಷ್ಟದ್ಯುಮ್ನನನ್ನೂ ಕೊಲೆಮಾಡಿ ದುರ್ಯೋಧನನ ಬಳಿಗೆ ಮರಳಿ ಹೋದಾಗ ಇವನೂ ಕೃಪನೂ ಅವನನ್ನು ಹಿಂಬಾಲಿಸಿದರು ಮಹಾಭಾರತ ಯುದ್ಧಾನಂತರ ದುರ್ಯೋಧನನ ಪಕ್ಷದಲ್ಲಿ ಉಳಿದ ಮೂವರಲ್ಲಿ (ಕೃಪ, ಕೃತವರ್ಮ, ಅಶ್ವತ್ಥಾಮರಲ್ಲಿ) ಇವನೂ ಒಬ್ಬನು. ಪಾಂಡವರು ಹಸ್ತಿನಾಪತಿಯಲ್ಲಿ ರಾಜ್ಯಭಾರ ಮಾಡತೊಡಗಿದಾಗ ಇವನೂ ಪಾಂಡವರೊಂದಿಗೆ ಬಾಂಧವ್ಯ ಸ್ನೇಹಗಳಿಂದ ನಡೆಯುತೊಡಗಿದನು [ಭಾರ ಸ್ತ್ರೀ ೧೧] ಪಾಂಡವರ ಅಶ್ವಮೇಧ ಸಂದರ್ಭದಲ್ಲಿ ಇವನು ಅರ್ಜುನನೊಂದಿಗೆ ಯಜ್ಞತುರಗ ಸಂರಕ್ಷಣೆಗಾಗಿ ಹೋಗಿದ್ದು, ಯಜ್ಞ ಮುಗಿದ ಬಳಿಕ ಯಾದವರ ಸ್ವಯೂಥ ಕಲಹದಲ್ಲಿ ಸಾತ್ಯಕಿಯಿಂದ ಹತನಾದನು [ಮೌಸಲ. ೪] ಇವನು ಅತಿ ರಥನು [ಉದ್ಯೋ ೧೬೫] ಇವನು ಹುಟ್ಟಿದ ಕಥೆ [ಆದಿ ೬೪ ಸಭಾ. ೪] ಇವನ ಪರಾಕ್ರಮ ವರ್ಣನೆ [ದ್ರೋ ೧೧೪] ಶಿಖಂಡಿಯನ್ನು ಸೋಲಿಸಿದ್ದು [ಕರ್ಣ ೧೭]. ಸಾತ್ಯಕಿಯಿಂದ ಸೋತನು [ದ್ರೋ ೧೧೬ ಶಲ್ಯ ೨೦]

**ಕೃತವೀರ್ಯ.**—ಚಂದ್ರವಂಶದ ಯದುಕುಲದಲ್ಲಿ ಜನಿಸಿದ ಧನಕ ರಾಜನ ಹಿರಿಯ ಮಗನು ಸುಪ್ರಸಿದ್ಧನಾದ ಕಾರ್ತವೀರ್ಯಾರ್ಜುನನು ಇವನ ಮಗನು [ಭಾರ - ಆದಿ ೧೯೪. ಸಭಾ ೮] ಇವನ ವಂಶವರ್ಣನೆ [ಭಾಗ -೯, ೧೨]

**ಕೃತಿ.**—(1) ಒಬ್ಬ ಅರಸು ಚಂದ್ರವಂಶದ ದೇವಮೀಢನ ಕುಲದಲ್ಲಿ ಜನಿಸಿದ ಸನ್ನತಿಮಂತನೆಂಬ ಅರಸನ ಮಗನು. ಇವನು ಜೈಮಿನಿ ಮಹರ್ಷಿಯ ಶಿಷ್ಯನೂ, ಇಕ್ಷ್ವಾಕು ವಂಶದ ವಿಧೃತಿ ರಾಜನ ಮಗನೂ ಎನಿಸಿದ ಹಿರಣ್ಯನಾಭ ರಾಜನಿಂದ ಪ್ರಾಚ್ಯಸಾಮದ ಆರು ಸಂಹಿತೆಗಳನ್ನು ಅಭ್ಯಾಸಮಾಡಿದನು. ಇವನ ಮಗನು ನೀಪ ರಾಜನು [ಭಾಗ.-೯, ೨೧]

(11) ಚಂದ್ರವಂಶದ ಪುರು ಕುಲೋತ್ಪನ್ನನಾದ ಅಜಮೀಢನ ಸಂತತಿಯಲ್ಲಿ ಜನಿಸಿದ ಚ್ಯವನ ರಾಜನ ಮಗನು. ಇವನ ಮಗನು ಉಪರಿಚರವಸು, ನೋಡು— ಉಪರಿಚರ,

(iii) ಪ್ರಹ್ಲಾದನ ಸಹೋದರನಾದ ಸಂಹ್ಲಾದನ ಹೆಂಡತಿ. ಇವಳು ಪಂಚ ಜನನೆಂಬ ಮಗನನ್ನು ಹೆತ್ತಳು [ಭಾಗ -೧೦, ೪೫]

**ಕೃತ್ತಿಕಾ.**—ದಕ್ಷನ ಹೆಣ್ಣುಮಕ್ಕಳಲ್ಲಿ ಒಬ್ಬಳು. ಚಂದ್ರನನ್ನು ಮದುವೆಯಾದಳು. ಒಂದು ನಕ್ಷತ್ರ [ಆದಿ ೬೭ ವಿಷ್ಣು.-೧, ೧೫]. ನೋಡು—ಕಾರ್ತಿಕೇಯ, ಕುಮಾರ. ಸಪ್ತರ್ಷಿ ಪತ್ನಿಗಳಲ್ಲಿ ವಸಿಷ್ಠ ಮಹರ್ಷಿ ಪತ್ನಿಯಾದ ಅರುಂಧತಿಯ ಹೊರತು ಆರು ಮಂದಿಯೂ ಅಗ್ನಿದೇವನಲ್ಲಿ ಕಾಮಾಸಕ್ತಿಯುರಾದರು ಈ ಕಾರಣದಿಂದ ಆ ಋಷಿಗಳು ಆರು ಮಂದಿಯೂ ತಮ್ಮ ಮಡದಿಯರನ್ನು ತ್ಯಾಗಮಾಡಿದರು ಆಗ ಆ ಋಷಿಪತ್ನಿಯರು ಪಾರ್ವತೀ ಪುತ್ರನಾದ ಕುಮಾರಸ್ವಾಮಿಯನ್ನು ಮರೆಹೊಕ್ಕರು ಕುಮಾರನು ಆರು ಮಂದಿಯನ್ನೂ ಜನನೀ ಭಾವದಿಂದ ಮನ್ನಿಸಿ, ನಕ್ಷತ್ರ ಮಂಡಲದಲ್ಲಿ ಅವರಿಗೆ ಸ್ಥಾನವನ್ನು ಕಲ್ಪಿಸಿಕೊಟ್ಟನು [ವನ ೨೨೬]

**ಕೃತ್ಯಾ**—ಅಭಿಚಾರ ಪ್ರಯೋಗದಲ್ಲಿ ನಿರ್ಮಿತವಾದ ಒಂದು ಕ್ಷುದ್ರ ದೇವತೆ. ಚ್ಯವನ ಮಹರ್ಷಿ ಅಶ್ವಿನೀ ದೇವತೆಗಳಿಂದ ತಾರುಣ್ಯವನ್ನು ಪಡೆದು, ಅದಕ್ಕೆ ಪ್ರತಿಫಲರೂಪವಾಗಿ ಶರ್ಯಾತಿ ರಾಜನ ಯಜ್ಞದಲ್ಲಿ ಅಶ್ವಿನೀ ದೇವತೆಗಳಿಗೆ ಹವಿರ್ಭಾಗವನ್ನು ಕೊಡಿಸತೊಡಗಿದನು ಈ ವಿಷಯವನ್ನು ಇಂದ್ರನು ಕೇಳಿ, ಅಶ್ವಿನೀ ದೇವತೆಗಳಿಗೆ ಯಜ್ಞದಲ್ಲಿ ಆಹುತಿ ಕೊಡುವುದು ತನಗೆ ಸಮ್ಮತವಲ್ಲದುದರಿಂದ ಚ್ಯವನನನ್ನು ಕೊಲ್ಲುವುದಕ್ಕಾಗಿ ವಜ್ರಾಯುಧವನ್ನು ಎಸೆಯತೊಡಗಿದನು ಚ್ಯವನನ ಮಂತ್ರಬಲದಿಂದ ಇಂದ್ರನ ತೋಳು ಕಟ್ಟಿಹೋಯಿತು ಮತ್ತೆ ಚ್ಯವನನು ಇಂದ್ರನನ್ನು ಕೊಲ್ಲುವ ಸಲುವಾಗಿ ದುಷ್ಟದೇವತೆಯೊಂದನ್ನು ಸೃಷ್ಟಿಮಾಡಿದನು [ವನ ೧೨೫ ಅನು ೨೬೧] ಭರದ್ವಾಜನೆಂಬ ಮುನಿಯ ಮಗನಾದ ಯವಕ್ರೀತನು ವಿಶ್ವಾಮಿತ್ರನ ಮುಮ್ಮಗನಾದ ಪರಾವಸುವಿನ ಹೆಂಡತಿಯನ್ನು ಬಲಾತ್ಕಾರದಿಂದ ಮಾನಭಂಗಗೊಳಿಸಿದನು ವಿಶ್ವಾಮಿತ್ರನ ಮಗನಾದ ರೈಭ್ಯನು ಈ ಸಮಾಚಾರವನ್ನು ಕೇಳಿ ಕುಪಿತನಾಗಿ ಯವಕ್ರೀತನನ್ನು ಸಂಹರಿಸುವುದಕ್ಕಾಗಿ ಒಂದು ದುಷ್ಟದೇವತೆಯನ್ನೂ, ಒಬ್ಬ ರಾಕ್ಷಸನನ್ನೂ ನಿರ್ಮಿಸಿದನು ಆ ದುಷ್ಟದೇವತೆ ಯವಕ್ರೀತನ ಕಮಂಡಲುವನ್ನು ಅಪಹರಿಸಿತು ರಾಕ್ಷಸನು ಯವಕ್ರೀತನನ್ನು ಕೊಂದನು [ಭಾರ - ವನ. ೧೩೮] ದುರ್ಯೋಧನನು ಘೋಷಯಾತ್ರೆಯ ಸಂದರ್ಭದಲ್ಲಿ ಪಾಂಡವರನ್ನು ಸಂಕಟಪಡಿಸತೊಡಗಿದಾಗ ಗಂಧರ್ವರು ಇವನನ್ನು ಹಿಂಗಟ್ಟು ಬಿಗಿದು ಕೊಂಡುಯ್ಯುತ್ತಿರಲು, ಯುಧಿಷ್ಠಿರನು ಅರ್ಜುನನ ಮೂಲಕ ದುರ್ಯೋಧನನನ್ನು ಬಿಡಿಸಿದನು ಇದರಿಂದ ದುರ್ಯೋಧನನು ನಾಚಿಕೆಗೊಂಡು ಪ್ರಾಣತ್ಯಾಗ ಮಾಡುವುದಕ್ಕಾಗಿ ಪ್ರಾಯೋಪವೇಶ ಮಾಡಿದನು. ಆಗ ಕೃತ್ಯೆ ಇವನನ್ನು ಪಾತಾಳ ಲೋಕಕ್ಕೆ ಒಯ್ಯಲಾಗಿ, ಅಲ್ಲಿದ್ದ ದುರ್ಯೋಧನನ ಮಿತ್ರರಾದ ದೈತ್ಯರು ದುರ್ಯೋಧನನನ್ನು ಪ್ರಾಯೋಪವೇಶ

ಮಾಡಬಾರದೆಂದು ಹೇಳಿ, ಅವನನ್ನು ಹಿಂದಕ್ಕೆ ತಂದುಬಿಟ್ಟರು [ಭಾರ.-ವನ. ೨೫೨]. ಪುಂಡ್ರಕ ದೇಶದ ಅರಸನಾದ ವಾಸುದೇವನೆಂಬವನು ಶ್ರೀ ಕೃಷ್ಣನ ಸಂಹಾರಾರ್ಥವಾಗಿ ಒಂದು ದುರ್ದೇವತೆಯನ್ನು ನಿರ್ಮಿಸಿದ್ದನು ಆದರೆ ಕೃಷ್ಣನು ಅದನ್ನು ಅವನ ಮೇಲೆಯೇ ತಿರುಗಿಸಿದನು [ಭಾಗ -೧೦, ೬೬]

**ಕೃತ್ವೀ** —ವ್ಯಾಸ ಪುತ್ರನಾದ ಶುಕಮುನಿಯ ಮಗಳು ನೋಡು— ಕೀರ್ತಿಮತೀ

**ಕೃಪ** —ಒಬ್ಬ ಬ್ರಾಹ್ಮಣ ಗೌತಮ ವಂಶದ ಶರದ್ವಂತನೆಂಬ ಮುನಿ ತಪೋ ನಿರತನಾಗಿದ್ದಾಗ, ಇಂದ್ರನು ಅವನ ತಪಸ್ಸನ್ನು ಭಂಗಗೊಳಿಸುವುದಕ್ಕಾಗಿ ಜಾಲವತಿ ಅಥವಾ ಜಾನಪದಿಯೆಂಬ ಅಪ್ಸರಸಿಯನ್ನು ಕಳುಹಿಸಿದನು ಶರದ್ವಂತನು ಆಕೆ ಯನ್ನು ಕಂಡು ಮೋಹಗೊಳ್ಳಲಾಗಿ, ಆತನ ವೀರ್ಯ ಅಲ್ಲಿಯೇ ಶರವನದಲ್ಲಿ ಬಿದ್ದಿತು ಕೂಡಲೇ ಒಂದು ಗಂಡೂ, ಒಂದು ಹೆಣ್ಣೂ ಜನಿಸಿದುವು ಆ ಕಾಲಕ್ಕೆ ಸರಿಯಾಗಿ ಭೀಷ್ಮನ ತಂದೆಯಾದ ಶಂತನು ಚಕ್ರವರ್ತಿ ಬೇಟೆಗೆ ಬಂದಿದ್ದವನು ಈ ಇಬ್ಬರು ಮಕ್ಕಳನ್ನೂ ನೋಡಿ, ಕೃಪಾಭರಿತನಾಗಿ, ಎತ್ತಿಕೊಂಡು ಪಟ್ಟಣಕ್ಕೆ ಒಯ್ದು, ಗಂಡು ಶಿಶುವಿಗೆ ಕೃಪನೆಂತಲೂ ಹೆಣ್ಣು ಶಿಶುವಿಗೆ ಕೃಪಿಯೆಂತಲೂ ಹೆಸರಿಟ್ಟು ಕಾಪಾಡಿದನು [ಭಾರ -ಆದಿ ೧೪೦ ಭಾಗ -೯, ೨೧] ಕೆಲ ಕಾಲದ ಬಳಿಕ ಶರ ದ್ವಂತನು ಶಂತನು ರಾಜನ ಬಳಿಗೆ ಬಂದು, ಅವರಿಬ್ಬರೂ ತನ್ನ ಮಕ್ಕಳೆಂದು ಹೇಳಿ, ಕೃಪನಿಗೆ ಉಪನಯನಾದಿ ಸಂಸ್ಕಾರಗಳನ್ನು ನೆರವೇರಿಸಿ, ಧನುರ್ವಿದ್ಯಾರಹಸ್ಯಗಳನ್ನು ಉಪದೇಶಿಸಿ, ಅಸ್ತ್ರವಿದ್ಯಾವಿಶಾರದನನ್ನಾಗಿ ಮಾಡಿದನು ಬಳಿಕ ಕೃಪಾಚಾರ್ಯನು ಪಾಂಡವರಿಗೂ ಕೌರವರಿಗೂ ಧನುರ್ವಿದ್ಯಾ ಗುರುವಾಗಿದ್ದನು ಈತನು ರುದ್ರಗಣಾಂಶ ಸಂಭೂತನು [ಆದಿ ೬೪, ೬೮, ೧೩೯] ಶಂತುವಿನ ತರುವಾಯ ಭೀಷ್ಮರ ಆಶ್ರಯದಲ್ಲಿಯೇ ಇದ್ದು, ಪಾಂಡವರಲ್ಲಿ ಅಭಿಮಾನಭರಿತನಾಗಿದ್ದರೂ, ಭೀಷ್ಮಾದಿ ಗಳಂತೆಯೇ ಕೌರವರ ಪಕ್ಷದಲ್ಲಿದ್ದನು. ಉತ್ತರ ಗೋಗ್ರಹಣ ಸಂದರ್ಭದಲ್ಲಿ ಕರ್ಣನನ್ನು ಬಹಳವಾಗಿ ನಿಂದಿಸಿದನು [ವಿರಾ ೪೯, ೫೦] ಭಾರತ ಯುದ್ಧದಲ್ಲಿ ಕೌರವರ ಪರವಾಗಿ ಯುದ್ಧಮಾಡಿ ಅರ್ಜುನನಿಂದ ಸೋತನು [ದ್ರೋ ೧೪೯] ಈತನು ಅರ್ಜುನನನ್ನು ಹೊಗಳಿದ್ದು [ವಿರಾ. ೪೯] ದ್ರೋಣನು ಮಡಿದ ತರು ವಾಯ ದುರ್ಯೋಧನನು ಸೇನಾಧಿಪತ್ಯವನ್ನು ಕರ್ಣನಿಗೆ ಕೊಟ್ಟನು. ಆಗ ಕೃಪನು ಅಶ್ವತ್ಥಾಮನೇ ಸೇನಾಧಿಕಾರಿಯಾಗಲು ತಕ್ಕವನೆಂತಲೂ, ಕರ್ಣನಿಗೆ ಯೋಗ್ಯತೆಯಿಲ್ಲ ವೆಂತಲೂ ಮುಂತಾಗಿ ಮಾತನಾಡಿ ಕರ್ಣನನ್ನು ಹೀಯಾಳಿಸಲಾಗಿ ಕುಪಿತನಾದ ಕರ್ಣನು ಈತನ ನಾಲಗೆಯನ್ನು ಕತ್ತರಿಸುವ ಹಾಗೆ ಪ್ರತಿಜ್ಞೆ ಮಾಡಿದನು [ದ್ರೋ. ೧೫೯] ಪಾಂಡವರ ಸೇನಾಪತಿಯಾಗಿದ್ದ ಧೃಷ್ಟದ್ಯುಮ್ನನನ್ನು ಯುದ್ಧ ದಲ್ಲಿ ಸೋಲಿಸಿದನು [ಕರ್ಣ ೧೭]. ಭಾರತ ಯುದ್ಧದಲ್ಲಿ ೧೮ ನೆಯ ದಿನ ದುರ್ಯೋ

ಧನನು ಹತನಾದ ಬಳಿಕ ಅಶ್ವತ್ಥಾಮನು ರಾತ್ರಿ ಪಾಂಡವರ ಶಿಬಿರವನ್ನು ಹೊಕ್ಕು ಅವರನ್ನು ಕೊಲ್ಲತೊಡಗಿದಾಗ, ಅಶ್ವತ್ಥಾಮನಿಗೆ ಬಹಳವಾಗಿ ಬುದ್ಧಿ ಹೇಳಿದನು [ಸೌಪ್ತಿ ೪] ಮಹಾಭಾರತ ಯುದ್ಧಾನಂತರ ಕೌರವರ ಸೇನೆಯಲ್ಲಿ ಉಳಿದ ಮೂವರಲ್ಲಿ ಈತನೂ ಒಬ್ಬನು ನೋಡು—ಕೃತವರ್ಮ, ಅಶ್ವತ್ಥಾಮ, ಕೃಪೀ ಯುಧಿಷ್ಠಿರನು ರಾಜ್ಯಾಭಿಷಿಕ್ತನಾದ ತರುವಾಯ ಈತನು ಪಾಂಡವರ ಆಶ್ರಯದಲ್ಲಿಯೇ ಇದ್ದನು [ಸ್ತ್ರೀ ೧೧]. ಶರದ್ವಂತನ ಪುತ್ರನಾದುದರಿಂದ ಶಾರದ್ವತನೆಂತಲೂ, ಗೌತಮ ವಂಶದವನಾದುದರಿಂದ ಗೌತಮನೆಂತಲೂ ಈತನಿಗೆ ಹೆಸರುಗಳಿವೆ ಈತನು ಚಿರಂಜೀವಿ

**ಕೃಪೀ** —ಕೃಪಾಚಾರ್ಯನ ತಂಗಿ ನೋಡು—ಕೃಪ ಪಾಂಡವರ ಅಸ್ತ್ರವಿದ್ಯಾ ಗುರುವಾದ ದ್ರೋಣಾಚಾರ್ಯರ ಹೆಂಡತಿ ಅಶ್ವತ್ಥಾಮನ ಜನನಿ [ಆದಿ ೧೪೦ ಭಾಗ - ೯, ೨೧]

**ಕೃಶ** —(I) ಒಬ್ಬ ಋಷಿ ಶಮೀಕ ಮುನಿಯ ಮಗನಾದ ಶೃಂಗಿಯ ಮಿತ್ರನು. ಪರೀಕ್ಷಿತನು ಸತ್ತ ಹಾವನ್ನು ಶಮೀಕ ಮುನಿಯ ಕೊರಳಿಗೆ ಸುತ್ತಿ ಹೋದ ಸಮಾಚಾರವನ್ನು ಈತನು ಶೃಂಗಿ ಮುನಿಗೆ ತಿಳಿಸಿದನು [ಆದಿ. ೧೪೦ ಭಾಗ -೧, ೧೮]

(II) ಒಬ್ಬ ಮಹರ್ಷಿ ಭೂರಿದ್ಯುಮ್ನ ಮಹಾರಾಜನ ಮಗನಾದ ವೀರ ದ್ಯುಮ್ನನೆಂಬ ರಾಜರ್ಷಿಗೆ, ಆಶೆ ಅತಿ ತುಚ್ಛವಾದುದೆಂತಲೂ, ಆಶೆಯೇ ಸಕಲಾನರ್ಥಗಳಿಗೂ ಮೂಲವೆಂತಲೂ ತಿಳಿಸಿದನು [ಶಾಂತಿ ೧೨೭]

**ಕೃಶಾಶ್ವ** — ಒಬ್ಬ ಮಹರ್ಷಿ ಪ್ರಾಚೇತಸ ದಕ್ಷನ ೬೦ ಮಂದಿ ಕುಮಾರಿಯರಲ್ಲಿ, ಅರ್ಚಿ, ಧಿಷಣಾ ಎಂಬ ಇಬ್ಬರನ್ನೂ ವಿವಾಹವಾಗಿದ್ದನು ಹಿರಿಯವಳಲ್ಲಿ ಧೂಮ್ರಕೇಶನೆಂಬ ಮಗನನ್ನೂ, ಕಿರಿಯವಳಲ್ಲಿ ವೇದಶಿರಸ್ಸು, ವಯುನ, ದೇವಲ ಎಂಬ ಪುತ್ರರನ್ನೂ ಪಡೆದನು ಜಯಾ ಸುಪ್ರಭಾ ಎಂಬ ಇಬ್ಬರು ಕನ್ಯೆಯರೂ ಹುಟ್ಟಿದರು (ಇವರು ಯಾವ ಹೆಂಡತಿಯಲ್ಲಿ ಜನಿಸಿದರೆಂದು ತಿಳಿಯಬರುವುದಿಲ್ಲ ಜಯೆ ನೂರು ಮಂದಿ ಪುತ್ರರನ್ನೂ ಸುಪ್ರಭೆ ಐವತ್ತು ಮಂದಿ ಪುತ್ರರನ್ನೂ ಪಡೆದರು ಕೃಶಾಶ್ವನು ಇವರೆಲ್ಲರೂ ಅಸ್ತ್ರರೂಪವಾಗಿದ್ದುದನ್ನು ಕಂಡು, ತನ್ನ ಶಿಷ್ಯನಾದ ವಿಶ್ವಾಮಿತ್ರನಿಗೆ ಕೊಟ್ಟನು [ರಾಮಾ -ಬಾಲ ೨೧].

**ಕೃಷ್ಣ**.—ಶ್ರೀಮನ್ನಾರಾಯಣನ ಹತ್ತು ಅವತಾರಗಳಲ್ಲಿ ಎಂಟನೆಯದು. ಚಂದ್ರವಂಶದ ಯದುಕುಲದಲ್ಲಿ ಜನಿಸಿದ ಸಾತ್ವತ ರಾಜನ ಸಂತತಿಯಲ್ಲಿ ಶೂರ ರಾಜನ ಮಗನಾದ ವಸುದೇವನ ಹೆಂಡತಿಯಾದ ದೇವಕಿಯಲ್ಲಿ ಜನಿಸಿದ ಎಂಟು ಮಕ್ಕಳಲ್ಲಿ ಕಡೆಯವನು. ವೈಕುಂಠದ ದ್ವಾರಪಾಲಕರಾದ ಜಯ ವಿಜಯರು ಸನಕಾದಿ ಮುನಿ

ಗಳಿಂದ ಶಾಪವನ್ನು ಹೊಂದಿ ಭೂ ಲೋಕದಲ್ಲಿ ಮೂರನೆಯ ಬಾರಿ ಶಿಶುಪಾಲ, ದಂತವಕ್ತ್ರರೆಂಬ ಹೆಸರಿನಿಂದ ಜನಿಸಿರಲಾಗಿ ಅವರನ್ನು ಸಂಹರಿಸುವ ಸಲುವಾಗಿ ನಾರಾಯಣನು ತನ್ನ ಪೂರ್ಣಾಂಶದಿಂದ ಭೂ ಲೋಕದಲ್ಲಿ ಅವತರಿಸಿದನು [ಭಾಗ -೩, ೧೬]. ಈ ಅವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ೨೮ ನೆಯ ದ್ವಾಪರ ಯುಗದ ಅಂತ್ಯಭಾಗದಲ್ಲಿ ನಡೆದಿತು [ದೇ ಭಾಗ -೪, ೧೬ ಭಾರ -ಆದಿ ೬೮ ಉ ೪೯]. ದೇವಕಿಯ ಮೊದಲಣ ಆರು ಗರ್ಭಗಳನ್ನೂ ಕಂಸನು ನಾಶಗೊಳಿಸಲಾಗಿ, ಏಳನೆಯ ಬಾರಿ ದೇವಕಿ ಗರ್ಭವನ್ನು ಧರಿಸಿದ್ದಾಗ ವಿಷ್ಣು ಆ ಗರ್ಭವನ್ನು ವಸುದೇವನ ಮತ್ತೊಬ್ಬ ಪತ್ನಿಯಾದ ರೋಹಿಣಿಯ ಗರ್ಭದಲ್ಲಿರಿಸಿದನು ಈ ರೀತಿಯಾಗಿ ರೋಹಿಣಿಯಿಂದ ಜನಿಸಿದವನೇ ಬಲರಾಮನು ಮತ್ತೊಮ್ಮೆ ದೇವಕಿ ಗರ್ಭಿಣಿಯಾಗಿ ನವ ಮಾಸಗಳು ತುಂಬಿದ ಬಳಿಕ ಶ್ರಾವಣ ಮಾಸದ ಕೃಷ್ಣಾಷ್ಟಮೀ ರೋಹಿಣೀ ನಕ್ಷತ್ರ ಬುಧವಾರ ಮಧ್ಯ ರಾತ್ರಿಯಲ್ಲಿ ವಿಷ್ಣು ಭೂ ಲೋಕದಲ್ಲಿ ಅವತರಿಸಿದನು ದೇವಕೀ ವಸುದೇವರು ಚಿಂತಾಕ್ರಾಂತರಾಗಿರುವಲ್ಲಿ ಈ ಶಿಶುವಿನ ಪ್ರೇರಣೆಯ ಮೇರೆಗೆ ವಸುದೇವನು ಗೋಕುಲಕ್ಕೆ ಕೊಂಡುಹೋಗಿ ತನ್ನ ಮಾನ್ಯ ಮಿತ್ರನಾದ ನಂದನ ಮನೆಯಲ್ಲಿಟ್ಟು ನಂದ ಪತ್ನಿಯಾದ ಯಶೋದೆ ಆಗತಾನೇ ಪ್ರಸವಿಸಿದ್ದ ಹೆಣ್ಣು ಶಿಶುವನ್ನು ಎತ್ತಿಕೊಂಡು ಬಂದು, ದೇವಕಿಯ ಬಳಿಯಲ್ಲಿಟ್ಟನು ಆಗ್ಗ ಶೇಷನು ಬೆಳಕನ್ನು ತೋರಿದನು ಪೂರ್ಣ ಪ್ರವಾಹದಿಂದ ಹರಿಯುವ ಯಮುನೆಯೂ ದಾರಿ ತೋರಿತು ಕಾರಾಗೃಹದ ಕಾವಲುಗಾರರೆಲ್ಲರೂ ಗಾಢನಿದ್ರೆಯಲ್ಲಿದ್ದರು ವಸುದೇವನು ಹಿಂದಿರುಗಿ ಕಾರಾಗೃಹವನ್ನು ಹೊಕ್ಕ ಕೂಡಲೇ ಕಾವಲುಗಾರರೆಲ್ಲರೂ ಎಚ್ಚತ್ತರು. ಹೆಣ್ಣು ಶಿಶುವೂ ಅಳತೊಡಗಿತು ದೇವಕಿ ಪ್ರಸವಿಸಿದ ಸಮಾಚಾರವನ್ನು ಕೇಳಿ ಕಂಸನು ಖಡ್ಗಪಾಣಿಯಾಗಿ ಅಲ್ಲಿಗೆ ಬಂದು ಆ ಶಿಶುವನ್ನು ಮೇಲಕ್ಕೆ ಎಸೆದು ಖಡ್ಗವನ್ನು ಅಡ್ಡಲಾಗಿ ಹಿಡಿದನು ಆ ಶಿಶು ಅಲ್ಲಿಯೇ ನಿಂತು, "ನಿನ್ನನ್ನು ಕೊಲ್ಲತಕ್ಕವನು ಗೋಕುಲದಲ್ಲಿ ಬೆಳೆಯುತ್ತಿದ್ದಾನೆ" ಎಂದು ಹೇಳಿ ಮಾಯವಾಯಿತು [ಭಾಗ -೧೦, ೪ ಭಾರ -ಆದಿ ೬೪ ಸಭಾ ೫೧. ಭಾಗ -೩, ೨. ಪದ್ಮ -೪, ೬೯, ೬, ೨೭೦, ೨೭೯ ಹರಿ -೨ ೪ ದೇ ಭಾಗ -೪, ೨೩, ಲಿಂಗ.- ೬೯]. ವಸುದೇವನ ಸೂಚನೆಯಂತೆ ಗರ್ಗಾಚಾರ್ಯನ ಮೂಲಕ ಬಲರಾಮ ಕೃಷ್ಣರಿಗೆ ನಂದಗೋಪನು ಜಾತಕರ್ಮವನ್ನು ನಡೆಯಿಸಿದನು [ಭಾಗ -೧೦, ೫]. ಗೋಕುಲದಲ್ಲಿ ಹೊಸ ಮಗು ಹುಟ್ಟಿದನೆಂಬ ಸುದ್ದಿಯನ್ನು ಕೇಳಿದ ಕೂಡಲೇ ಆ ಕೂಸನ್ನು ಕೊಲ್ಲುವುದಕ್ಕಾಗಿ ಕಂಸನು ತೃಣಾವರ್ತನೆಂಬ ರಾಕ್ಷಸನನ್ನೂ, ಪೂತನೆಯೆಂಬ ರಕ್ಕಸಿಯನ್ನೂ ಕಳುಹಲಾಗಿ ಕೃಷ್ಣನು ಅವರಿಬ್ಬರನ್ನೂ ಕೊಂದನು ಗರ್ಗ ಮುನಿಯಿಂದ ನಾಮಕರಣ [ಭಾಗ -೧೦, ೮ ಸಭಾ ೫೨. ಹರಿ -೨, ೬

ವಿಷ್ಣು.-೫, ೫]. ವತ್ಸಾಸುರ, ವೃಕಾಸುರ, ಅಘಾಸುರರ ವಧೆ [ಭಾಗ -೧೦, ೧೨] ಒಮ್ಮೆ ದನಗಳನ್ನು ಕಾಯುತ್ತಿದ್ದಾಗ ಬ್ರಹ್ಮನು ಪರೀಕ್ಷೆಗಾಗಿ ದನ ಕರುಗಳನ್ನೂ ಗೊಲ್ಲ ಹುಡುಗರನ್ನೂ ಮರೆಯಿಸಿದುದು, ಧೇನುಕಾಸುರ ವಧೆ, ಕಾಳಿಯ ಮರ್ದನ, ದಾವಾಗ್ನಿಯಿಂದ ಗೋವುಗಳನ್ನು ಕಾಪಾಡಿದ್ದು, ಬಲರಾಮನು ಪ್ರಲಂಬ ದೈತ್ಯನನ್ನು ಕೊಂದದ್ದು [ಭಾಗ -೧೦ ಅ ೧೩, ೧೯ ಸಭಾ. ೫೩. ಹರಿ -೨, ೧೫ ವಿಷ್ಣು -೫, ೧೦] ಋಷಿ ಪತ್ನಿಯರು ರಾಮ, ಕೃಷ್ಣರಿಗೆ ಅನ್ನವನ್ನಿಕ್ಕಿ ಸಾಕಿದ್ದು [ಭಾಗ.-೧೦, ೩೨] ನಂದನು ಇಂದ್ರಯಾಗವನ್ನು ಮಾಡಲು ಯತ್ನಿಸಿದಾಗ ಅದನ್ನು ಅಡ್ಡಗಿಸಿ, ಗೋವರ್ಧನ ಪೂಜೆಗಾಗಿ ಪ್ರೇರಿಸಿದ್ದು [ಭಾಗ -೧೦, ೨೪, ೨೭ ಹರಿ -೨, ೧೫ ವಿಷ್ಣು.-೫. ೧೦] ನಂದನು ಯಮುನಾ ನದಿಯಲ್ಲಿ ಸ್ನಾನಮಾಡುವಾಗ ಕಾಲು ಜಾರಿ ಬೀಳಲಾಗಿ ಕೃಷ್ಣನು ಅವನನ್ನು ಎತ್ತಿದ್ದು [ಭಾಗ -೧೦, ೨೮] ಸರ್ಪಜನ್ಮವನ್ನು ಪಡೆದಿದ್ದ ಸುದರ್ಶನನೆಂಬ ಗಂಧರ್ವನನ್ನು ಉದ್ಧರಿಸಿದ್ದು ಅರಿಷ್ಟ, ಕೇಶಿ, ವ್ಯೋಮಾಸುರರ ವಧೆ [ಭಾಗ -೧೦, ೩೦, ೩೮ ಸಭಾ -೫೩ ಹರಿ.-೨, ೨೪ ವಿಷ್ಣು -೫, ೧೬] ಧನುರ್ಯಾಗಕ್ಕಾಗಿ ಕಂಸನ ಅಪ್ಪಣೆಯ ಮೇರೆಗೆ ಬಲರಾಮ ಕೃಷ್ಣರು ಮಧುರೆಗೆ ಹೊರಟದ್ದು, ಅಕ್ರೂರನು ಯಮುನೆಯಲ್ಲಿ ಮಿಂಯುವಾಗ ಆತನಿಗೆ ಕೃಷ್ಣನು ತನ್ನ ದಿವ್ಯ ರೂಪವನ್ನು ತೋರಿದ್ದು [ಭಾಗ -೧೦, ೩೮, ೪೦ ಹರಿ -೨, ೨೯] ಮಧುರೆಯನ್ನು ಹೊಕ್ಕು ಕಂಸನ ಅಗಸನನ್ನು ಕೊಂದು ರಾಜಯೋಗ್ಯವಾದ ವಸ್ತ್ರಗಳನ್ನು ಧರಿಸಿದ್ದು, ಕುಬ್ಜೆಯ ಗೂನನ್ನು ಹೋಗಲಾಡಿಸಿ ಆಕೆಯನ್ನು ಸುಂದರಿಯನ್ನಾಗಿ ಮಾಡಿದ್ದು, ಕುವಲಯಾಪೀಡವೆಂಬ ಕಂಸನ ಆನೆಯನ್ನು ಕೊಂದದ್ದು, ಕಂಸನ ಆಸ್ಥಾನದಲ್ಲಿದ್ದ ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನು ಸಂಹರಿಸಿದ್ದು, ಕಂಸನನ್ನು ಕೊಂಡು ದೇವಕಿ ವಸುದೇವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿಸಿ, ಕಂಶನ ತಂದೆಯಾದ ಉಗ್ರಸೇನನಿಗೆ ಪಟ್ಟಗಟ್ಟಿದ್ದು [ಭಾಗ -೧೦, ೪೧, ೪೪ ಹರಿ -೨, ೩೦ ವಿಷ್ಣು -೫, ೩೦] ಕಂಸನ ಭೀತಿಯಿಂದ ದಿಕ್ಕುಪಾಲಾಗಿ ಓಡಿಹೋಗಿದ್ದ ಯದುವಂಶದ ವೃಷ್ಣಿ, ಅಂಧಕ, ಕುಕರ, ದಾಶಾರ್ಹ ಮುಂತಾದ ಮನೆತನದ ಅರಸರನ್ನು ಬರಮಾಡಿಸಿ, ಮರಳಿ ಮಧುರೆಯಲ್ಲಿ ನಿಲ್ಲಿಸಿದ್ದು, ಬಲರಾಮ ಕೃಷ್ಣರ ಉಪನಯನ, ಸಾಂದೀಪಿನಿಯ ಬಳಿ ೬೪ ಕಲೆಗಳನ್ನು ಅಭ್ಯಾಸಮಾಡಿದ್ದು [ಭಾಗ.-೧೦, ೪೫ ಸಭಾ -೫೪ ಹರಿ.-೨, ೩೩ ವಿಷ್ಣು -೫, ೧೧] ಗೋಮಂತಕ ಪರ್ವತವನ್ನು ಸುಟ್ಟದ್ದು [ಹರಿ -೨, ೨೪] ವಿದ್ಯಾಭ್ಯಾಸ ಮುಗಿದ ಬಳಿಕ ಮಧುರೆಗೆ ಬಂದು, ತನ್ನ ಸೋದರತ್ತೆಯ ಮಕ್ಕಳಾದ ಪಾಂಡವರ ಯೋಗಕ್ಷೇಮವನ್ನು ತಿಳಿಯುವ ಸಲುವಾಗಿ ಅಕ್ರೂರನನ್ನು ಹಸ್ತಿನಾಪುರಿಗೆ ಕಳುಹಿದನು, ಅಕ್ರೂರನು ಹಸ್ತಿನಾಪುರಿಗೆ ಬಂದು ಧೃತರಾಷ್ಟ್ರ, ಭೀಷ್ಮ, ವಿದುರ,

ಕುಂತಿಯುರನ್ನು ಸಂದರ್ಶಿಸಿ, ಅವರ ಮೂಲಕ ಪಾಂಡವರಿಗೂ, ಕೌರವರಿಗೂ ದ್ವೇಷ ಅಂಕುರಿಸಿರುವುದೆಂಬುದನ್ನು ಕೇಳಿ, ಧೃತರಾಷ್ಟ್ರನಿಗೆ ನೀತಿಯನ್ನು ಬೋಧಿಸಿ, ಕುಂತಿಯನ್ನು ಸಮಾಧಾನಪಡಿಸಿ ಮಥುರೆಗೆ ಬಂದು, ಅಲ್ಲಿಯ ವಿದ್ಯಮಾನ ಗಳನ್ನೆಲ್ಲ ಕೃಷ್ಣನಿಗೆ ಹೇಳಿದ್ದು [ಭಾಗ -೧೦, ೪೮, ೪೯] ಅಷ್ಟರಲ್ಲಿ ಕಂಸನ ಮಾವನಾದ ಜರಾಸಂಧನು ತನ್ನ ಅಳಿಯನನ್ನು ಕೊಂದ ಸೇಡನ್ನು ತೀರಿಸಿಕೊಳ್ಳು ವುದಕ್ಕಾಗಿ ಮಥುರೆಯ ಮೇಲೆ ದಂಡೆತ್ತಿ ಬರಲಾಗಿ, ಬಲರಾಮ ಕೃಷ್ಣರು ಯಾದವ ಸೇನೆಯೊಂದಿಗೆ ಬಂದು ಜರಾಸಂಧನ ಸಂಗಡ ಯುದ್ಧಮಾಡಿದರು ಆದರೆ ಸೋತು ಹೋದರು. ಜರಾಸಂಧನು ಮಾತ್ರ ಪದೇ ಪದೇ ಕೃಷ್ಣನ ಮೇಲೆ ದಂಡೆತ್ತಿ ಬರು ತ್ತಲೇ ಇದ್ದನು ಹೀಗೆಯೇ ೧೭ ಬಾರಿ ನಡೆದುವು ಹದಿನೆಂಟನೆಯ ಬಾರಿ, ಜರಾ ಸಂಧನು ದಂಡೆತ್ತಿ ಬಂದಾಗ ಬಲರಾಮ ಕೃಷ್ಣರು ರೈವತಕ ಗಿರಿಯಲ್ಲಿರಲಾಗಿ, ಜರಾ ಸಂಧನು ಮಥುರಾ ನಗರಿಯನ್ನು ಸುಟ್ಟುಹಾಕಲಾಗಿ, ಕೃಷ್ಣನು ಆನರ್ತ ದೇಶದಲ್ಲಿ ದ್ವಾರಕೆಯನ್ನು ನಿರ್ಮಿಸಿ, ಅಲ್ಲಿಯೇ ಸಕಲ ಯಾದವರೊಂದಿಗೆ ನಾಸಮಾಡತೊಡ ಗಿದನು ನೋಡು—ಕಾಲಯವನ, ಕುಶಸ್ಥಲೀ ಬಲರಾಮನಿಗೆ ರೇವತ ರಾಜನ ಮಗಳಾದ ರೇವತಿಯೊಂದಿಗೆ ವಿವಾಹ, ಕೃಷ್ಣನು ಭೀಷ್ಮಕರಾಜನ ಪುತ್ರಿಯಾದ ರುಕ್ಮಿಣಿಯನ್ನು ಮದುವೆಯಾದದ್ದು [ಭಾಗ -೧೦, ೫೨, ೫೪]

**ಕೃಷ್ಣನ ಅಷ್ಟಮಹಿಷಿಯರು** —(೧) ಭೀಷ್ಮಕ ರಾಜನ ಮಗಳು ರುಕ್ಮಿಣಿ, (೨) ಸತ್ರಾಜಿತನ ಮಗಳು ಸತ್ಯಭಾಮೆ, (೩) ಕೋಸಲ ರಾಜನಾದ ನಗ್ನಜಿತನ ಮಗಳು ನೀಲೆ ಅಥವಾ ಸತ್ಯೆ, (೪) ಕೇಕಯ ದೇಶದ ಧೃಷ್ಟಕೇತುವಿನ ಹೆಂಡತಿ (ವಸುದೇವನ ತಂಗಿ, ಕೃಷ್ಣನ ಸೋದರತ್ತೆ) ಶೃತಕೀರ್ತಿಯ ಮಗಳು ಭದ್ರೆ, (೫) ಅವಂತಿ ದೇಶದ ಜಯತ್ಸೇನನ ಹೆಂಡತಿಯಾದ ಮತ್ತೊಬ್ಬ ಸೋದರತ್ತೆ ರಾಜಾಧಿ ದೇವಿಯ ಮಗಳು ಮಿತ್ರವಿಂದೆ, (೬) ಸೂರ್ಯನ ಮಗಳು ಕಾಳಿಂದಿ, (೭) ಮದ್ರ ರಾಜನ ಪುತ್ರಿಯಾದ ಲಕ್ಷಣೆ (ಲಕ್ಷ್ಮಣೆ), (೮) ಋಕ್ಷ ರಾಜನಾದ ಜಾಂಬವಂತನ ಮಗಳು ಜಾಂಬವತಿ [ಭಾಗ -೧೦ ವಿಷ್ಣು -೫, ೨೮, ೫೬-೫೮] ಕೃಷ್ಣನಿಗೆ ಅಷ್ಟ ಮಹಿಷಿಯರೊಂದಿಗೆ ವಿವಾಹವಾದ ಕಥೆ [ಭಾಗ -೧೦, ೮೩]. ಇಷ್ಟರಲ್ಲಿ ಪಾಂಡ ವರು ಅರಗಿನ ಮನೆಯಲ್ಲಿ ಸುಟ್ಟುಹೋದರೆಂಬ ಸುದ್ದಿಯನ್ನು ಕೇಳಿ, ಯಾದವ ಪ್ರಮುಖರೊಂದಿಗೆ ಇಂದ್ರಪ್ರಸ್ಥಕ್ಕೆ ಹೋಗಿ, ಚಿಂತಾಕ್ರಾಂತನಾದನು. ಅಷ್ಟರಲ್ಲಿ ದ್ರೌಪದೀ ಸ್ವಯಂವರಾರ್ಥವಾಗಿ ದ್ರುಪದ ನಗರಿಗೆ ಹೋಗಿ ಅಲ್ಲಿ ಪಾಂಡವರನ್ನು ನೋಡಿ, ಪಾಂಡವರು ಅಲ್ಲಿಯೇ ನಾಲ್ಕು ತಿಂಗಳ ಕಾಲ ಇರಲಾಗಿ ಈತನು ಕೆಲ ಕಾಲ ಅವರೊಂದಿಗೆ ಇದ್ದು ದ್ವಾರಕೆಗೆ ಬಂದನು ತರುವಾಯ ಮಿತ್ರವಿಂದಾ, ಸತ್ಯಾ, ಭದ್ರಾ, ಲಕ್ಷ್ಮಣೆಯರ ವಿವಾಹ. ಆ ಬಳಿಕ ನರಕಾಸುರನನ್ನು ಕೊಂದು,

ಅವನ ಮಗನಾದ ಭಗದತ್ತನಿಗೆ ಪ್ರಾಗ್ಜ್ಯೋತಿಷ ನಗರದಲ್ಲಿ ಪಟ್ಟಗಟ್ಟಿ, ನರಕಾಸುರನಲ್ಲಿ ಬಂದಿಗಳಾಗಿದ್ದ ೧೬ ಸಾವಿರ ಮಂದಿ ಸ್ತ್ರೀಯರನ್ನೂ ದ್ವಾರಕೆಗೆ ಕರೆತಂದು, ತನ್ನಲ್ಲಿಯೇ ಇಟ್ಟುಕೊಂಡನು ಇದೇ ಸಮಯದಲ್ಲಿಯೇ ರುಕ್ಮಿಣೀ ಪುತ್ರನಾದ ಪ್ರದ್ಯುಮ್ನನಿಗೆ ರುಕ್ಮಿಯ ಮಗಳಾದ ರುಕ್ಮಾವತಿಯನ್ನು ತಂದು ವಿವಾಹವಾಯಿತು [ಭಾಗ.-೧೦, ೬೯, ೯೦ ಹರಿ -೨, ೨೦೩]

## ಶ್ರೀ ಕೃಷ್ಣನಿಂದ ಅಷ್ಟಮಹಿಷಿಯರಲ್ಲಿ ಜನಿಸಿದ ಸಂತಾನ ಪಟ್ಟಿಕೆ

೧ **ರುಕ್ಮಿಣಿಯ ಸಂತಾನ** —ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಚಾರುಚಂದ್ರ, ವಿಚಾರು, ಭದ್ರಚಾರು, ಎಂಬ ಹತ್ತು ಮಂದಿ ಪುತ್ರರು ಚಾರುಮತಿಯೆಂಬ ಕನ್ಯೆ ಈಕೆಯನ್ನು ಕೃತವರ್ಮ ರಾಜನ ಮಗನು ಮದುವೆಯಾದನು

೨ **ಜಾಂಬವತಿಯ ಸಂತಾನ** —ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ, ದ್ರವಿಡ, ಕ್ರತು, ಒಬ್ಬ ಕನ್ಯೆ.

೩ **ಸತ್ಯಭಾಮೆಯ ಸಂತಾನ** —ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀ ಭಾನು, ಪ್ರತಿಭಾನು ಮತ್ತು ಒಬ್ಬ ಮಗಳು

೪ **ಭದ್ರೆಯ ಸಂತಾನ** —ಸಂಗ್ರಾಮಜಿತ್, ಬೃಹತ್ಸೇನ, ಶೂರ, ಪ್ರಹರಣ, ಅರಿಜಿತ್, ಜಯ, ಸುಭದ್ರ, ವಾಮ, ಆಯು, ಸತ್ಯಕ ಮತ್ತು ಒಬ್ಬ ಪುತ್ರಿ

೫ **ಮಿತ್ರವಿಂದೆಯ ಸಂತಾನ** —ವೃಕ, ಹರ್ಷ, ಅನಿಲ, ಗೃಧ್ರ, ವರ್ಧನ, ಉನ್ನಾದ, ಮಹಾಶ, ಪಾವನ, ವಹ್ನಿ, ಕ್ಷುಧಿ

೬. **ಸತ್ಯೆ ಅಥವಾ ನೀಲೆಯ ಸಂತಾನ** —ವೀರ, ಚಂದ್ರ, ಅಶ್ವಸೇನ, ಚಿತ್ರಗು, ವೇಗವಂತ, ವೃಷ, ಆಮ, ಶಂಕು, ಕುಂತಿ

೭ **ಕಾಳಿನ್ದಿಯ ಸಂತಾನ** —ಶ್ರುತ, ಕವಿ, ವೃಷ, ವೀರ, ಸುಬಾಹು, ಭದ್ರ, ಶಾಂತಿ, ದರ್ಶ, ಪೂರ್ಣಮಾಸ, ಸೋಮಕ

೮. **ಲಕ್ಷ್ಮಣೆಯ ಸಂತಾನ** —ಪ್ರಘೋಷ, ಗಾತ್ರವಂತ, ಸಿಂಹಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜ, ಅಪರಿಜಿತ್, ಒಬ್ಬ ಮಗಳು. ಈ ಎಂಟು ಮಂದಿಯಲ್ಲದೆ ರೋಹಿಣಿಯೆಂಬ ಮತ್ತೊಬ್ಬ ಪತ್ನಿಯೂ ಇದ್ದಳು [ಭಾಗ.-೧೦, ೬೧] ಆಕೆಯಲ್ಲಿ ಪ್ರದ್ಯುಮ್ನ, ಅನಿರುದ್ಧ, ದೀಪ್ತಿಮಂತ, ಭಾನು, ಸಾಂಬ, ಮಧು, ಬೃಹದ್ಭಾನು, ಚಿತ್ರಭಾನು, ವೃಕ, ಅರುಣ, ಪುಷ್ಕರ, ವೇದಬಾಹು, ಶ್ರುತವೇಗ, ಸುನಂದನ, ಚಿತ್ರಬಾಹು, ವಿರೂಪ, ಕವಿ, ನ್ಯಗ್ರೋಧ [ಭಾಗ.-೧೦, ೯೦. ಹರಿ.-೨, ೧೦೩].

ಶ್ರೀ ಕೃಷ್ಣನು ಇಷ್ಟು ಮಂದಿಯ ಮನೆಯಲ್ಲಿಯೂ ಏಕ ಕಾಲದಲ್ಲಿಯೇ ಪ್ರತ್ಯೇಕ ರೂಪ ಗಳಿಂದ ಸಂಸಾರ ಮಾಡಿಕೊಂಡಿದ್ದನು [ಭಾಗ -೧೦, ೫೯] ಇಂತು ಶ್ರೀ ಕೃಷ್ಣನು ಅಣ್ಣ, ತಂದೆ, ತಾಯಿ, ಬಂಧು, ಬಳಗಗಳೊಂದಿಗೆ ದ್ವಾರಕೆಯಲ್ಲಿ ಸುಖದಿಂದಿದ್ದನು.

ಜರಾಸಂಧನು ಯಜ್ಞದ ನೆಪದಿಂದ ೨೦ ಸಾವಿರ ಮಂದಿ ರಾಜಪುತ್ರ ರನ್ನು ಬಲಿ ಕೊಡುವುದಕ್ಕಾಗಿ ಸೆರೆಯಲ್ಲಿಟ್ಟಿದ್ದನು ಅವರೆಲ್ಲರೂ ಗುಟ್ಟಾಗಿ ಮಾತ ನಾಡಿಕೊಂಡು "ನೀನು ಹೇಗಾದರೂ ಸಾಹಸ ಮಾಡಿ ಬೇಗನೆ ನಮ್ಮನ್ನು ಪಾರು ಮಾಡಿಸಬೇಕು" ಎಂಬುದಾಗಿ ಗುಪ್ತಚಾರಕನ ಮೂಲಕ ಹೇಳಿಕಳುಹಿಸಲಾಗಿ, ಆ ಚಾರನು ಬಂದು ಕೃಷ್ಣನ ಒಡ್ಡೋಲಗದಲ್ಲಿ ಈ ಸಂಗತಿಯನ್ನು ಬಿನ್ನವಿಸಿದನು. ಈ ವಿಷಯವನ್ನು ಕೇಳಿ ಕೃಷ್ಣನು ದಿಕ್ಕು ತೋರದೆ ಚಿಂತಾಕ್ರಾಂತನಾಗಿರುವಲ್ಲಿ ಆ ಕಾಲಕ್ಕೆ ಸರಿಯಾಗಿ ಯುಧಿಷ್ಠಿರನು ರಾಜಸೂಯ ಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿ, ಕೃಷ್ಣನಿಗೆ ನಿರೂಪವನ್ನು ಕಳುಹಿಸಿದನು ಆಗ ಕೃಷ್ಣನು ಎಲ್ಲಿ ಹೋಗ ಬೇಕೆಂಬುದಾಗಿ ಯೋಚಿಸುತ್ತಿರುವಲ್ಲಿ ಉದ್ಧವನು "ಮೊದಲು ಯುಧಿಷ್ಠಿರನನ್ನು ಸಂದರ್ಶಿಸಿ, ಬಳಿಕ ಜರಾಸಂಧ ವಧೆಗೆ ಉಪಾಯವನ್ನು ಮಾಡುವುದು ಲೇಸು" ಎಂಬು ದಾಗಿ ಸಲಹೆ ಕೊಟ್ಟನು ಕೃಷ್ಣನು ಆನಂದದಿಂದ ಉದ್ಧವನ ಮಾತನ್ನು ಲಾಲಿಸಿ, ಇಬ್ಬರು ದೂತರನ್ನೂ ಸಂಗಡ ಕರೆದುಕೊಂಡು ಇಂದ್ರಪ್ರಸ್ಥಕ್ಕೆ ಬಂದು, ಕೆಲ ಕಾಲ ಪಾಂಡವರಲ್ಲಿಯೇ ಇದ್ದು, ಗಿರಿವ್ರಜದಿಂದ ಬಂದಿದ್ದ ದೂತನ ಮೂಲಕ, ಸೆರೆಯಲ್ಲಿದ್ದ ರಾಜಪುತ್ರರಿಗೆ ಅಭಯವನ್ನಿತ್ತು ಕಳುಹಿದನು [ಭಾಗ -೧೦, ೭೧] ಬಳಿಕ ಭೀಮಾ ರ್ಜುನರನ್ನು ಸಂಗಡ ಕರೆದುಕೊಂಡು ಕೃಷ್ಣನು ಬ್ರಾಹ್ಮಣ ವೇಷದಿಂದ ಗಿರಿವ್ರಜವನ್ನು ಹೊಕ್ಕು ಭೀಮನ ಮೂಲಕ ಜರಾಸಂಧನನ್ನು ಕೊಲ್ಲಿಸಿ, ಜರಾಸಂಧನ ಮಗನಾದ ಸಹದೇವನಿಗೆ ಗಿರಿವ್ರಜದಲ್ಲಿ ಪಟ್ಟಗಟ್ಟಿ, ಸೆರೆಯಲ್ಲಿದ್ದ ರಾಜಪುತ್ರರನ್ನೆಲ್ಲ ಬಿಡಿಸಿ, ಅವ ರೆಲ್ಲರೂ ಯುಧಿಷ್ಠಿರನ ರಾಜಸೂಯದಲ್ಲಿ ಒತ್ತಾಸೆ ಮಾಡುವಂತೆ ಅಪ್ಪಣೆ ಕೊಟ್ಟು ಕಳುಹಿ, ತಾನು ಭೀಮಾರ್ಜುನರ ಸಂಗಡ ಇಂದ್ರಪ್ರಸ್ಥಕ್ಕೆ ಬಂದನು [ಭಾರ - ಸಭಾ ೨೦]. ಪಾಂಡವರ ರಾಜಸೂಯ ಸಮಯದಲ್ಲಿ ಕೃಷ್ಣನು ಯಾಗಾರ್ಥವಾಗಿ ಬಂದ ಬ್ರಾಹ್ಮಣರಿಗೆಲ್ಲ ಪಾದ ಪ್ರಕ್ಷಾಳನಮಾಡಿದನು [ಸಭಾ ೩೮]. ರಾಜಸೂಯ ಯಾಗಾಂತರದಲ್ಲಿ ಸಹದೇವನು ಭೀಷ್ಮನ ಸೂಚನೆಯಂತೆ ಕೃಷ್ಣನಿಗೆ ಅಗ್ರಪೂಜೆ ಯನ್ನು ಮಾಡಿದ್ದು [ಸಭಾ. ೩೯]. ಇದನ್ನು ಕಂಡು ಶಿಶುಪಾಲನು ಸಹಿಸಲಾರದೆ ಕೃಷ್ಣನನ್ನು ಬಾಯಿಗೆ ಬಂದಂತೆ ನಿಂದಿಸಲಾಗಿ, ಚಕ್ರಾಯುಧದಿಂದ ಶಿಶುಪಾಲನನ್ನು ಕೊಂದದ್ದು [ಭಾರ.-ಸಭಾ. ೪೫. ಭಾಗ -೧೦, ೭೪]. ದೇವಲೋಕದಿಂದ ಪಾರಿಜಾತ ವನ್ನು ಅಪಹರಿಸಿ ತಂದದ್ದು [ಸಭಾ. ೫೭. ಹರಿ -೨, ೬೪ ವಿಷ್ಣು -೫, ೩೦ ಭಾಗ.-೧೦, ೫೯]. ಕೃಷ್ಣನ ಮಹಿಮೆಯನ್ನು ಭೀಷ್ಮನು ವರ್ಣಿಸಿದ್ದು [ಸಭಾ. ೪೧. ಅನು ೨೫೧,

೨೫೩]. ಅರ್ಜುನನು ಕೃಷ್ಣನನ್ನು ಸ್ತೋತ್ರಮಾಡಿದ್ದು [ವನ. ೧೨]. ದ್ರೌಪದಿ ಕೃಷ್ಣನನ್ನು ಹೊಗಳಿದ್ದು [ವನ. ೧೨, ೩೬೪]. ಬ್ರಹ್ಮರ್ಷಿಗಳು ಆತನನ್ನು ಕೊಂಡಾಡಿದ್ದು [ಭೀಷ್ಮ. ೬೮] ಯುಧಿಷ್ಠಿರನು ಆತನನ್ನು ಹೊಗಳಿದ್ದು [ಶಾಂತಿ. ೪೨]. ಭೀಷ್ಮನು ಕೃಷ್ಣನನ್ನು ಕೀರ್ತಿಸಿದ್ದು [ಶಾಂತಿ ೪೬]. ಧೃತರಾಷ್ಟ್ರನು ಕೃಷ್ಣನ ಮಹಿಮೆಯನ್ನು ವಿವರಿಸಿದ್ದು [ಉದ್ಯೋ ೭೦] ಈಶ್ವರನು ಆತನ ಗುಣಗಳನ್ನು ಬಣ್ಣಿಸಿದ್ದು, ಕೃಷ್ಣನ ವಂಶಾವಳಿ [ಅನು ೨೫೧] ವಿದುರನು ಕೃಷ್ಣನ ಮಹಿಮೆಯನ್ನು ಧೃತರಾಷ್ಟ್ರನಿಗೆ ಹೇಳಿದ್ದು [ಉದ್ಯೋ ೧೩೦] ಧೃತರಾಷ್ಟ್ರನು ರಾಜ ಸಭೆಯಲ್ಲಿ ಕೃಷ್ಣನ ಚರಿತ್ರೆಯನ್ನು ಬಣ್ಣಿಸಿದ್ದು [ದ್ರೋ ೧೧] ಸಾಲ್ವರಾಜನು ರುಕ್ಮಿಣೀ ವಿವಾಹ ಸಮಯದಲ್ಲಿ ಕುಂಡಿನಪುರಕ್ಕೆ ಬಂದಿದ್ದು, ಯಾದವರಿಂದ ಸೋತು ಓಡಿ ಹೋಗಿದ್ದನು ಅಂದಿನಿಂದಲೂ ಸಾಲ್ವನಿಗೆ ಕೃಷ್ಣನ ಮೇಲೆ ದ್ವೇಷ ಪ್ರಬಲವಾಗುತ್ತಿತ್ತು. ಜರಾಸಂಧನೂ, ಶಿಶುಪಾಲನೂ ಮಡಿದ ತರುವಾಯ, ಒಮ್ಮೆ ಕೃಷ್ಣನು ಇಂದ್ರಪ್ರಸ್ಥಕ್ಕೆ ಹೋಗಿರುವ ಸಮಯವನ್ನು ಕಂಡು ಹಿಡಿದು, ದ್ವಾರಕೆಯ ಮೇಲೆ ದಂಡೆತ್ತಿ ಹೋಗಿ, ಅಂತರಿಕ್ಷದಲ್ಲಿ ನಿಂತು, ಮಾಯಾ ಯುದ್ಧವನ್ನು ಮಾಡತೊಡಗಿದನು ಯಾದವರೆಲ್ಲರೂ ಸೋತು ತಲ್ಲಣಿಸುತ್ತಿದ್ದರು. ಆ ವಾರ್ತೆಯನ್ನು ಕೇಳಿ ಕೃಷ್ಣನು ಬೇಗನೆ ದ್ವಾರಕೆಗೆ ಬಂದು ಸಾಲ್ವನ ವಿಮಾನವನ್ನು ಮುರಿದು, ಅವನನ್ನು ಕೆಳಕ್ಕೆ ಉರುಳಿಸಿ, ಯುದ್ಧಮಾಡಿ ಕೊಂದನು [ಭಾರ -ವನ. ೧೪, ೧೨ ಭಾಗ -೧೦, ೭೬, ೭೭] ಇಷ್ಟರಲ್ಲಿ ಕರೂಶ ದೇಶಾಧಿಪನಾದ ದಂತವಕ್ರನು ಉದ್ಧತನಾಗಿರಲು ಅವನನ್ನೂ ಅವನ ತಮ್ಮನಾದ ವಿದೂರಥನನ್ನೂ ಕೊಂದು, ತನ್ನಲ್ಲಿಗೆ ಬಂದ ಬಾಲ್ಯ ಸ್ನೇಹಿತನಾದ ಕುಚೇಲನನ್ನು ಸತ್ಕರಿಸಿದನು [ಭಾಗ -೧೦, ೭೮, ೮೦]. ನೋಡು— ಕುಚೇಲ. ಇಷ್ಟರಲ್ಲಿ ತನ್ನ ತಂಗಿಯಾದ ಸುಭದ್ರೆಯನ್ನು ದುರ್ಯೋಧನನಿಗೆ ಕೊಡಬೇಕೆಂಬುದಾಗಿ ಬಲರಾಮನು ನಿಷ್ಕರ್ಷೆ ಮಾಡಿರಲಾಗಿ, ಕೃಷ್ಣನು ಅರ್ಜುನನನ್ನು ಯತಿ ವೇಷದಿಂದ ಬರಮಾಡಿಕೊಂಡು, ಬಲರಾಮನು ಇಲ್ಲದ ಸಮಯದಲ್ಲಿ ಅವರಿಬ್ಬರಿಗೂ ಮದುವೆ ಮಾಡಿದನು [ಭಾರ -ಆದಿ. ೨೪೦, ೨೪೨] ಪೌಂಡ್ರಕ ವಾಸುದೇವನು ಮದೋನ್ಮತ್ತನಾಗಿ ದ್ವಾರಕೆಯ ಮೇಲೆ ದಂಡೆತ್ತಿ ಬರಲಾಗಿ ಅವನನ್ನು ಸಂಹರಿಸಿದ್ದು [ಸಭಾ. ೬೧]. ಪಾಂಡವರು ಕಾಮ್ಯಕ ವನದಲ್ಲಿದ್ದಾಗ ಅವರನ್ನು ಸಂದರ್ಶಿಸಲು ಹೋಗಿ, ತನ್ನೊಂದಿಗೆ ಮೊರೆಯಿಟ್ಟ ದ್ರೌಪದಿಯನ್ನೂ ಪಾಂಡವರನ್ನೂ ಸಂತವಿಸಿದನು [ಭಾರ -ವನ ೧೨. ಭಾಗ.-೧೦, ೬೬]. ಮತ್ತೊಂದು ಸಮಯದಲ್ಲಿ ದುರ್ಯೋಧನನ ಸೂಚನೆಯ ಮೇರೆಗೆ ದುರ್ವಾಸ ಮುನಿ ಪಾಂಡವರಲ್ಲಿಗೆ ಅಕಾಲದಲ್ಲಿ ಭೋಜನಕ್ಕೆ ಬಂದನು. ದ್ರೌಪದಿಯ ಭೋಜನವೂ ಆಗಿದ್ದಿತು. ಆಗ ದಿಕ್ಕು ತೋರದೆ ದ್ರೌಪದಿ ಕೃಷ್ಣನನ್ನು ಸ್ತುತಿಸಲಾಗಿ, ಅಲ್ಲಿಗೆ ಬಂದು, ದ್ರೌಪದಿಯನ್ನು ಅನ್ನವಿಕ್ಕು

ವಂತೆ ಬೇಡಿ, ಅಕ್ಷಯಪಾತ್ರೆಯ ಕಂಠದಲ್ಲಿ ಅಂಟಿಕೊಂಡಿದ್ದ ಅಗುಳನ್ನು ತಿಂದನು. ಇದರಿಂದ ಶಿಷ್ಯವರ್ಗದಿಂದ ಕೂಡಿದ ದುರ್ವಾಸಮುನಿ ಆಕಂಠಪೂರ್ತಿಯಾಗಿ ತೃಪ್ತನಾಗಿ ತೇಗುತ್ತ ಓಡಿಹೋದನು [ಭಾರ.-ವನ ೨೬೩, ೨೬೪]. ಕೃಷ್ಣಶಬ್ದ ನಿರ್ವಚನ [ಉದ್ಯೋ. ೬೯ ಶಾಂತಿ ೩೪೨] ಪಾಂಡವರು ಉಪಪ್ಲಾವ್ಯ ನಗರಿಯಲ್ಲಿ ವಾಸ ಮಾಡುತ್ತಿದ್ದಾಗ ಒಮ್ಮೆ ಕೃಷ್ಣನು ಭೀಮನ ಮಹಿಮೆಯನ್ನು ಬಣ್ಣಿಸಿದ್ದು [ಉದ್ಯೋ ೭೬] ಅದೇ ಸಮಯದಲ್ಲಿ ಯುಧಿಷ್ಠಿರನ ಪ್ರಾರ್ಥನೆಯಂತೆ ಪಾಂಡವರಿಗೆ ಸಲ್ಲತಕ್ಕ ಅರ್ಧ ರಾಜ್ಯವನ್ನು ಕೊಡಿಸಿಕೊಡುವುದಕ್ಕಾಗಿ ದುರ್ಯೋಧನನಲ್ಲಿಗೆ ರಾಯಭಾರಿಯಾಗಿ ಹೋಗಿದ್ದನು [ಉದ್ಯೋ ೮೨] ಕೃಷ್ಣನನ್ನು ಸಂದರ್ಶಿಸಲು ಜಮದಗ್ನಿ ಮುಂತಾದ ಋಷಿಗಳು ನಡುದಾರಿಯಲ್ಲಿ ಸಂಧಿಸಿದ್ದು, ಪ್ರಯಾಣಕಾಲದಲ್ಲಿನ ಶುಭ ಶಕುನಗಳು, ಕೃಷ್ಣನ ಆಗಮನ ವಾರ್ತೆಯನ್ನು ಕೇಳಿ, ದುರ್ಯೋಧನನು ದಾರಿಯುದ್ದಕ್ಕೂ ಅಲ್ಲಲ್ಲಿ ಮಂಟಪಗಳನ್ನು ಏರ್ಪಡಿಸಿದ್ದು [ಉದ್ಯೋ ೮೨, ೮೫] ಶ್ರೀ ಕೃಷ್ಣನು ವಿದುರನ ಮನೆಯಲ್ಲಿ ಭೋಜನ ಮಾಡಿದ್ದು [ಉದ್ಯೋ ೯೧] ಶ್ರೀ ಕೃಷ್ಣನು ಆಹ್ನಿಕ ಮಾಡಿದ್ದು [ಉದ್ಯೋ ೯೪ ಭಾಗ.-೧೦, ೭೦] ರಾಜ ಸಭೆಯಲ್ಲಿ ದುರ್ಯೋಧನನು ಕೃಷ್ಣನನ್ನು ಕಟ್ಟಿಹಾಕಬೇಕೆಂದು ನಿರ್ಧರಿಸಿದ್ದು ಧೃತರಾಷ್ಟ್ರನಿಗೆ ದಿವ್ಯ ದೃಷ್ಟಿಯನ್ನು ಅನುಗ್ರಹಿಸಿ, ಕೃಷ್ಣನು ತನ್ನ ದಿವ್ಯ ರೂಪವನ್ನು ತೋರಿದ್ದು [ಉದ್ಯೋ ೧೩೦, ೧೩೧] ಕರ್ಣನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟು, ಪಾಂಡವರೊಂದಿಗೆ ಸೇರುವಂತೆ ಆತನನ್ನು ಪ್ರೋತ್ಸಾಹಿಸಿದ್ದು [ಉದ್ಯೋ ೧೩೭]. ರಣರಂಗದಲ್ಲಿ ಯುದ್ಧ ಮಾಡಲೊಲ್ಲನೆಂದು, ಹಿಂಜರಿದಿದ್ದ ಅರ್ಜುನನಿಗೆ ಗೀತೆಯನ್ನು ಉಪದೇಶಿಸಿ, ತನ್ನ ದಿವ್ಯ ಮಹಿಮೆಯನ್ನು ತೋರಿದ್ದು [ಭೀಷ್ಮ ೩೫]. ಯುದ್ಧದಲ್ಲಿ ತಾನು ಆಯುಧವನ್ನು ಹಿಡಿದು ಯುದ್ಧ ಮಾಡುವುದಿಲ್ಲವೆಂಬುದಾಗಿ ಕೃಷ್ಣನು ದುರ್ಯೋಧನನಿಗೆ ಹೇಳಿದ್ದನು ಈ ಮಾತನ್ನು ಕೇಳಿದ ಭೀಷ್ಮನು, ತಾನು ಹೇಗಾದರೂ ಮಾಡಿ ಕೃಷ್ಣನಿಂದ ಆಯುಧವನ್ನು ಹಿಡಿಸಿಯೇಬಿಡುವೆನೆಂದು ಪ್ರತಿಜ್ಞೆ ಮಾಡಿದನು. ಎರಡನೆಯ ದಿನದ ಯುದ್ಧದಲ್ಲಿಯೇ ಭೀಷ್ಮಾರ್ಜುನರಿಗೆ ಯುದ್ಧವಾಗುತ್ತಿದ್ದಾಗ, ಭೀಷ್ಮನ ಕೈ ಮೇಲಾಯಿತು ಅರ್ಜುನನಿಗೆ ಹಾನಿ ತಟ್ಟುವುದೆಂಬ ಭಯದಿಂದ ಕೃಷ್ಣನು ಚಕ್ರಾಯುಧವನ್ನು ಹಿಡಿದು, ರಥದಿಂದ ದುಮ್ಮಿಕ್ಕಿ ಪಾದಚಾರಿಯಾಗಿಯೇ ಹೊರಟು ಭೀಷ್ಮನನ್ನು ಸಂಹರಿಸಹೋದನು. ಆಗ ಅರ್ಜುನನು ಕೃಷ್ಣನನ್ನು ಅಡ್ಡಗಿಸಿ, ಮರಳಿ ರಥಕ್ಕೆ ಕರೆತಂದನು [ಭೀಷ್ಮ ೫೯]. ಮತ್ತೊಮ್ಮೆ ಭೀಷ್ಮಪ್ರತಾಪದಿಂದ ಪಾಂಡವರೆಲ್ಲರೂ ತಲ್ಲಣಿಸುತ್ತಿದ್ದರು. ತನ್ನೊಂದಿಗೆ ಯುದ್ಧ ಮಾಡಬಲ್ಲ ವೀರನಾವನಾದರೂ ಇದ್ದಲ್ಲಿ ಮುಂದೆ ಬರಲಿ, ಎಂಬುದಾಗಿ ಭೀಷ್ಮನು ಸಿಂಹನಾದ ಮಾಡುತ್ತಿದ್ದನು ಇದರ ರಹಸ್ಯವನ್ನರಿತ ಕೃಷ್ಣನು ದ್ರುಪದ

ಪುತ್ರನಾದ ಶಿಖಂಡಿಯನ್ನು ಮುಂದುಮಾಡಿಕೊಂಡು, ಅರ್ಜುನಾದಿಗಳನ್ನು ಸಂಗಡ ಕರೆದುಕೊಂಡು ಹೋಗಿ, ಶಿಖಂಡಿಯನ್ನು ಭೀಷ್ಮನ ಮುಂದೆ ನಿಲ್ಲಿಸಿ ಭೀಷ್ಮನಿಂದ ಶಸ್ತ್ರತ್ಯಾಗ ಮಾಡಿಸಿದನು [ಭೀ. ೧೧೬, ೧೧೮] ಮತ್ತೊಮ್ಮೆ ನರಕಾಸುರನ ಮಗ ನಾದ ಭಗದತ್ತನು ಅರ್ಜುನನೊಂದಿಗೆ ಯುದ್ಧಮಾಡುವ ಸಂದರ್ಭದಲ್ಲಿ ವೈಷ್ಣ ವಾಸ್ತ್ರವನ್ನು ಪ್ರಯೋಗಿಸಲಾಗಿ, ಕೃಷ್ಣನು ತನ್ನ ವಕ್ಷಸ್ಥಲದಲ್ಲ ಆ ಅಸ್ತ್ರವನ್ನು ಧಾರಣಮಾಡಿ, ಅರ್ಜುನನನ್ನು ಅಪಾಯದಿಂದ ತಪ್ಪಿಸಿದನು [ದ್ರೋ ೨೯] ಅಭಿ ಮನ್ಯುವಧೆಗೆ ಕಾರಣಭೂತನಾದ ಜಯದ್ರಥನನ್ನು ಸೂರ್ಯಾಸ್ತಮಾನದೊಳಗಾಗಿ ಸಂಹರಿಸುವೆನೆಂದು ಅರ್ಜುನನು ಪ್ರತಿಜ್ಞೆಮಾಡಿದ್ದನು ಈ ವಿಷಯವನ್ನು ತಿಳಿದು, ದುರ್ಯೋಧನನು ಸೈಂಧವನನ್ನು ಬಚ್ಚಿಟ್ಟಿದ್ದನು ಸೂರ್ಯನು ಮುಳುಗುವ ಸಮಯ ಬಂದಿತು ಸೈಂಧವನು ಕಣ್ಣಿಗೆ ಬೀಳಲಿಲ್ಲ ಇಂತಹ ಸಮಯದಲ್ಲಿ ಅರ್ಜುನನ ಪ್ರತಿಜ್ಞೆ ಹಾಳಾಗುವುದೆಂದು ಹೆದರಿದ ಕೃಷ್ಣನು ಮಾಯಾಂಧಕಾರವನ್ನು ಕಲ್ಪಿಸಲಾಗಿ, ಕತ್ತಲಾಯಿತೆಂಬ ಸಂತೋಷದಿಂದ ಜಯದ್ರಥನು ಮೇಲಕ್ಕೆ ಎದ್ದು ನಿಂತನು ಒಡನೆಯೇ ಅರ್ಜುನನು ಜಯದ್ರಥನನ್ನು ಕೊಂದನು [ದ್ರೋ ೧೪೭]. ಹದಿಮೂರನೆಯ ದಿನ ರಾತ್ರಿಯಲ್ಲಿಯೂ ಯುದ್ಧ ನಡೆಯುತ್ತಿದ್ದಿತು ಆಗ ಕರ್ಣ ನನ್ನು ಇದಿರಿಸಲು ಅರ್ಜುನನು ಉತ್ಸಾಹಭರಿತನಾಗಿರುವುದನ್ನು ಕಂಡು, ಕರ್ಣನಲ್ಲಿ ಇಂದ್ರನ ಶಕ್ತ್ಯಾಯುಧವು ಇರುವವರೆಗೂ ಅಪರಿಬ್ಬರನ್ನೂ ಯುದ್ಧಕ್ಕೆ ನಿಲ್ಲಿಸುವುದು ಶ್ರೇಯಸ್ಕರವಲ್ಲವೆಂಬ ಅಂಶವನ್ನು ತಿಳಿದಿದ್ದ ಕೃಷ್ಣನು ಯಾವುದೋ ನೆವದಿಂದ ಅರ್ಜುನನನ್ನು ಅಡ್ಡಗಿಸಿ, ಭೀಮ ಪುತ್ರನಾದ ಘಟೋತ್ಕಚನನ್ನು ಕರ್ಣನ ಮೇಲೆ ಯುದ್ಧಕ್ಕೆ ಕಳುಹಿ, ಶಕ್ತ್ಯಾಯುಧಕ್ಕೆ ಘಟೋತ್ಕಚನು ತುತ್ತಾಗುವಂತೆ ಮಾಡಿ ದನು [ದ್ರೋ. ೧೭೪] ಹದಿನಾಲ್ಕನೆಯ ದಿವಸದ ರಾತ್ರಿ ಯುದ್ಧದಲ್ಲಿ ಮೊತ್ತ ಮೊದಲು ದುರ್ಯೋಧನನು ಯುಧಿಷ್ಠಿರನಿಂದ ಸೋತು, ಪಾಂಡು ಸೇನೆಯ ಪರಾ ಕ್ರಮ ಹೆಚ್ಚುತ್ತಿರಲಾಗಿ, ದುರ್ಯೋಧನನು ರೋಷಾವೇಶಭರಿತನಾಗಿ ದ್ರೋಣಾ ಚಾರ್ಯರನ್ನು ಬಹಳವಾಗಿ ಚುಚ್ಚುಮಾತುಗಳಿಂದ ನೋಯಿಸಿದನು ಆಚಾರ್ಯರು ಆವೇಶಭರಿತರಾದರು. ಪಾಂಡವ ಸೇನೆಯಲ್ಲಿ ಘಟೋತ್ಕಚ, ದ್ರುಪದ, ವಿರಾಟಾದಿ ಗಳೆಲ್ಲರೂ ಹತರಾದರು ಇದನ್ನು ಕಂಡು ಕೃಷ್ಣನು ಹದಿನೈದನೆಯ ದಿನ ಯುದ್ಧಾ ರಂಭದಲ್ಲಿಯೇ, ನಕುಲನ ಮೂಲಕ ದುರ್ಯೋಧನನನ್ನು ಸೋಲಿಸಿದನು ಭೀಮನು ಮಾಲವ ದೇಶಾಧಿಪನಾದ ಇಂದ್ರವರ್ಮನ ಅಶ್ವತ್ಥಾಮವೆಂಬ ಆನೆಯನ್ನು ಕೊಂದನು. ಇದನ್ನು ಕಂಡಕೂಡಲೇ ಕೃಷ್ಣನು ಯುಧಿಷ್ಠಿರನ ಬಳಿಗೆ ಹೋಗಿ, ದ್ರೋಣನನ್ನು ಗೆಲ್ಲಲು ಉಪಾಯವಿಲ್ಲ , ಆತನು ಶಸ್ತ್ರತ್ಯಾಗಮಾಡಬೇಕಾದರೆ, ಅಶ್ವ ತ್ಥಾಮನು ಮಡಿದ ವಾರ್ತೆಯನ್ನು ದ್ರೋಣನು ಕೇಳಬೇಕು—ಎಂಬುದನ್ನು ಹೇಳಿ

ದನು ಯುಧಿಷ್ಠಿರನು ಕೃಷ್ಣನ ಬಲಾತ್ಕಾರದಿಂದ " ಅಶ್ವತ್ಥಾಮಾ ಹತಃ" ಎಂದನು. ಆದನ್ನು ಕೇಳಿದ ಕೂಡಲೇ ದ್ರೋಣನು ಶಸ್ತ್ರತ್ಯಾಗ ಮಾಡಿದನು [ದ್ರೋ. ೧೯೧]. ತನ್ನ ತಂದೆಯನ್ನು ಅನ್ಯಾಯವಾಗಿ ಕೊಂದರೆಂಬ ರೋಷದಿಂದ ಅಶ್ವತ್ಥಾಮನು ರಣರಂಗವನ್ನು ಹೊಕ್ಕು ಪಾಂಡು ಸೇನೆಯನ್ನು ನಿರ್ಮೂಲ ಮಾಡಬೇಕೆಂಬುದಾಗಿ ಶಪಥಮಾಡಿ, ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಕಂಡು ಪಾಂಡವ ಸೇನೆ ತಲ್ಲಣಿಸುತ್ತಿರಲಾಗಿ, ಕೃಷ್ಣನ ಹೇಳಿಕೆಯಂತೆ ಎಲ್ಲರೂ ತಂತಮ್ಮ ಆಯುಧ ಗಳನ್ನು ಕೆಳಗಿಟ್ಟು ಪ್ರಾಣವನ್ನು ಉಳಿಸಿಕೊಂಡರು ಭೀಮನು ಮಾತ್ರ ಆಯುಧ ಪಾಣಿಯಾಗಿಯೇ ಇದ್ದನ ಭೀಮನ ತಲೆಯ ಮೇಲೆ ಅಸ್ತ್ರವು ಸುಡತೊಡಗಿತು. ಆಗ ಕೃಷ್ಣನು ಅರ್ಜುನನೊಡನೆ ಭೀಮನಿದ್ದಲ್ಲಿಗೆ ಓಡಿಹೋಗಿ, ಭೀಮನ ಕೈಯಲ್ಲಿದ್ದ ಆಯುಧವನ್ನು ಬೇಗನೆ ಕಸುಗೊಂಡನು, ಇಬ್ಬರೂ ಸೇರಿ ಭೀಮನನ್ನು ರಥದಿಂದ ಇಳಿಸಲಾಗಿ ಭೀಮನು ಬದುಕಿದನು [ದ್ರೋ ೧೯೯, ೨೦೦]. ಇನ್ನೊಂದು ಸಮಯ ದಲ್ಲಿ ಯುಧಿಷ್ಠಿರನು ಕರ್ಣನ ಬಾಣದಿಂದ ನೋವನ್ನು ಅನುಭವಿಸುತ್ತ ಮಲಗಿರ ಲಾಗಿ, ಪಾರ್ಥನು ಭ್ರಾತೃವಾತ್ಸಲ್ಯದಿಂದ ಅಣ್ಣನನ್ನು ನೋಡಹೋದನು. ಯುಧಿಷ್ಠಿರನು ತನ್ನ ತಮ್ಮನು ಕರ್ಣನನ್ನು ಕೊಂದೇ ಬಂದಿರುವನೆಂದು ಭಾವಿಸಿ, ಅರ್ಜುನನನ್ನು ಹೊಗಳತೊಡಗಿ, ಕರ್ಣನಿನ್ನೂ ಸತ್ತಿಲ್ಲವೆಂಬುದನ್ನು ತಿಳಿದು, " ನಿನ್ನ ಕೈಯಲ್ಲಿರುವ ಗಾಂಡೀವವನ್ನು ಕೃಷ್ಣನ ಕೈಗಾದರೂ ಕೊಡು ಆತನಾದರೂ ಕರ್ಣನನ್ನು ಸಂಹರಿಸುವನು" ಎಂಬುದಾಗಿ ಯುಧಿಷ್ಠಿರನು ಹೇಳಿದನು ಅರ್ಜು ನನು ರೋಷಭರಿತನಾಗಿ ಯುಧಿಷ್ಠಿರನನ್ನು ಕೊಲ್ಲಹೋಗುವಾಗ್ಗೆ ಕೃಷ್ಣನು ಅಲ್ಲಿಗೆ ಬಂದು, ಕಾರಣವನ್ನು ತಿಳಿದು, ಅಡ್ಡಗಿಸಿದನು ಬಳಿಕ ಅರ್ಜುನನು ಅಣ್ಣನನ್ನು ಕೊಲ್ಲತೊಡಗಿದುದಕ್ಕಾಗಿ ಮರುಗುತ್ತ ಆತ್ಮಹತ್ಯೆಗೆ ಸಿದ್ಧನಾಗಲು, ಕೃಷ್ಣನು " ಆತ್ಮ ಪ್ರಶಂಸೆ ಮರಣತುಲ್ಯವೆಂತಲೂ, ಹಿರಿಯರನ್ನು ಅಲ್ಲಗಳೆಯುವುದು, ವಧಸದೃಶ ವೆಂತಲೂ ಹೇಳಿದನು ಅಂತೆಯೇ ಅರ್ಜುನನು ಆತ್ಮಗುಣ ಶ್ಲಾಘನಮಾಡಿ, ಯುಧಿ ಷ್ಠಿರನನ್ನು ಹೀಯಾಳಿಸಿದನು ಈ ರೀತಿ ಅವಮಾನವನ್ನು ತಾಳಲಾರದೆ ಯುಧಿಷ್ಠಿ ರನು ರೋಷದಿಂದ ಕಾಡಿಗೆ ಹೋಗಲು ಅನುವಾದಾಗ, ಅವನನ್ನು ಅಡ್ಡಗಿಸಿ, ಅರ್ಜುನನನ್ನು ಕರ್ಣವಧೆಯಲ್ಲಿ ಹುರಿದುಂಬಿದನು [ಕರ್ಣ. ೬೬, ೭೬] ರಣರಂಗ ದಲ್ಲಿ ಕರ್ಣನು ವಿಜೃಂಭಿಸುತ್ತಿದ್ದುದನ್ನು ಕಂಡು, ಕೃಷ್ಣನು ಅರ್ಜುನನನ್ನು ಪ್ರೋತ್ಸಾಹಗೊಳಿಸಿದ್ದು [ಕರ್ಣ ೯೬] ಕರ್ಣಾರ್ಜುನರಿಗೆ ಘೋರ ಯುದ್ಧ ನಡೆ ಯುತ್ತಿರುವಲ್ಲಿ, ಅರ್ಜುನನ ಕೊರಳಿಗೆ ಗುರಿಯಿಟ್ಟು ಪ್ರಯೋಗಿಸಿದ ಕರ್ಣನ ನಾಗಾ ಸ್ತ್ರದ ಗುರಿಯನ್ನು ತಪ್ಪಿಸುವುದಕ್ಕಾಗಿ ಕೃಷ್ಣನು ಅರ್ಜುನನ ರಥವನ್ನು ನೆಲಕ್ಕೆ ಕುಸಿದುಹೋಗುವಂತೆ ಮಾಡಿದ್ದು ಅದರಿಂದ ನಾಗಾಸ್ತ್ರವು ಅರ್ಜುನನ ಕಿರೀಟವನ್ನು

ಮಾತ್ರ ಉರುಳಿಸಿದ್ದು [ಕರ್ಣ ೯೭] ಬ್ರಾಹ್ಮಣನ ಶಾಪದ ಮೇರೆಗೆ ಕರ್ಣನ ರಥದ ಗಾಲಿ ನೆಲದಲ್ಲಿ ಹೂತುಹೋಗಲಾಗಿ, ಕರ್ಣನು ಅರ್ಜುನನನ್ನು ಕುರಿತು "ಒಂದು ಮುಹೂರ್ತ ಕಾಲ ನಿಲ್ಲು ನಾನು ಚಕ್ರವನ್ನು ಎತ್ತಿ ಬರುವೆನು" ಎಂದು ಬೇಡಿಕೊಳ್ಳಲಾಗಿ, ಕೃಷ್ಣನು ಕರ್ಣನ ಧರ್ಮತತ್ಪರತೆಯನ್ನು ಹೀಯಾಳಿಸಿದ್ದು. ಅದನ್ನು ಕೇಳಿ ಕರ್ಣನು ಬಾಣದಿಂದ ಅರ್ಜುನನನ್ನು ನೋಯಿಸಿ, ಅವನು ಚೇತರಿಸಿ ಕೊಳ್ಳುವಷ್ಟರಲ್ಲಿ ರಥದ ಚಕ್ರವನ್ನು ಎತ್ತೋಣವೆಂದು ಕೆಳಕ್ಕೆ ಇಳಿದು, ಚಕ್ರ ವನ್ನು ಎತ್ತುತ್ತಿರುವಾಗಲೇ ಕರ್ಣನನ್ನು ಕೊಲ್ಲಬೇಕೆಂಬುದಾಗಿ ಹೇಳಿ, ಅರ್ಜುನ ನನ್ನು ಬಗೆಬಗೆಯಾಗಿ ಹುರಿದುಂಬಿಸಿ, ಆ ಸಮಯದಲ್ಲಿಯೇ ಅರ್ಜುನನಿಂದ ಬಾಣ ಪ್ರಯೋಗಮಾಡಿಸಿ, ಕರ್ಣನನ್ನು ಕೊಲ್ಲಿಸಿದ್ದು [ಕರ್ಣ ೯೭, ೯೮]. ಕರ್ಣ, ಶಲ್ಯ ರಿಬ್ಬರೂ ಮಡಿದ ಬಳಿಕ, ದುರ್ಯೋಧನನು ಜಲಸ್ತಂಭನ ಮಾಡಿರುವನೆಂಬ ಸಮಾ ಚಾರವನ್ನು, ಬೇಡರ ಮೂಲಕ ತಿಳಿದು, ಕೃಷ್ಣನು ಯುಧಿಷ್ಠಿರ, ಭೀಮಾದಿಗಳೊಂದಿಗೆ ಅಲ್ಲಿಗೆ ಬಂದದ್ದು [ಶಲ್ಯ ३೦] ದುರ್ಯೋಧನನು ಮಡುವಿನಿಂದ ಹೊರಬಂದಾಗ ಯುಧಿ ಷ್ಠಿರನು ದುರ್ಯೋಧನನನ್ನು ಕುರಿತು "ನಮ್ಮಲ್ಲಿ ಯಾರು ಸೋತರೂ ರಾಜ್ಯ ನಿನ್ನದೇ ಆಗಿದೆ" ಎಂದು ಹೇಳಿದಾಗ ಕೃಷ್ಣನು ಯುಧಿಷ್ಠಿರನ ಮೇಲೆ ಸಿಟ್ಟಾ ದದ್ದು, ಭೀಮನು ತನ್ನ ಸಾಮರ್ಥ್ಯವನ್ನು ಕೊಚ್ಚಿಕೊಳ್ಳಲು, ಅವನನ್ನು ಪ್ರೋತ್ಸಾ ಹಿಸಿದ್ದು [ಶಲ್ಯ ३३]. ಭೀಮನು ದುರ್ಯೋಧನನನ್ನು ತೊಡೆಯಲ್ಲಿ ಹೊಡೆದದ್ದು ಅನ್ಯಾಯವೆಂಬುದಾಗಿ ಸಿಟ್ಟುಗೊಂಡ ಬಲರಾಮನು, ತನ್ನ ಹಲಾಯುಧವನ್ನು ಎತ್ತಿ ಭೀಮನನ್ನು ಕೊಲ್ಲಹೋದನು ಆಗ ಕೃಷ್ಣನು ಬಲರಾಮನನ್ನು ಸಮಾ ಧಾನೋಕ್ತಿಗಳಿಂದ ಶಾಂತಿಗೊಳಿಸಿ, ಆತನನ್ನು ದ್ವಾರಕೆಗೆ ಕಳುಹಿದ್ದು [ಶಲ್ಯ ೬೧]. ಕೃಷ್ಣ ದುರ್ಯೋಧನರು ಬಯ್ದಾಡಿದ್ದು ಯುದ್ಧಾವಸಾನದಲ್ಲಿ ಭೀಷ್ಮಾದಿಗಳ ಕೊಲೆ ಯಿಂದ ಪಾಂಡವರು ಬಹಳವಾಗಿ ಶೋಕಿಸುತ್ತಿರಲು, ಕೃಷ್ಣನು ಸಮಯೋಚಿತವಾಗಿ ಅವರನ್ನು ಸಮಾಧಾನಗೊಳಿಸಿದ್ದು [ಶಲ್ಯ. ೬೨] ಪಾಂಡವರೆಲ್ಲರೂ ತಮ್ಮ ತಮ್ಮ ರಥಗಳಲ್ಲಿ ಕುಳಿತು ದುರ್ಯೋಧನನ ಬಿಡಾರಕ್ಕೆ ಬಂದದ್ದು, ಕೃಷ್ಣನು ಅರ್ಜುನ ನನ್ನು ರಥದಿಂದ ಮೊದಲು ಇಳಿಸಿ, ಬಳಿಕ ತಾನೂ ಇಳಿಹಕೂಡಲೇ ಆ ರಥ ಸುಟ್ಟುಹೋದದ್ದು. ಅದಕ್ಕೆ ಕಾರಣವನ್ನು ಅರ್ಜುನನಿಗೆ ಹೇಳಿದ್ದು ಪಾಂಡವರನ್ನು ಆ ರಾತ್ರಿ ಓಘವತೀ ನದೀತೀರದಲ್ಲಿಯೇ ನಿಲ್ಲುವಹಾಗೆ ಕೃಷ್ಣನು ಅವರಿಗೆ ಸೂಚಿಸಿದ್ದು. ಯುಧಿಷ್ಠಿರನ ಕೋರಿಕೆಯಂತೆ ಕೃಷ್ಣನು ಗಾಂಧಾರಿಯನ್ನು ಸಂತವಿಸುವುದಕ್ಕಾಗಿ ಹಸ್ತಿನಾವತಿಗೆ ಹೋದದ್ದು [ಶಲ್ಯ. ೬೪]. ಉಪಪಾಂಡವರನ್ನೂ ಧೃಷ್ಟದ್ಯುಮ್ನ ನನ್ನೂ ಮಲಗಿರುವಾಗ ಕೊಂದುಹಾಕಿದ ಅಶ್ವತ್ಥಾಮನನ್ನು ಹುಡುಕಿಕೊಂಡು ಶ್ರೀಕೃಷ್ಣನು ಪಾಂಡವರನ್ನು ಸಂಗಡ ಕರೆದುಕೊಂಡು ಹೊರಟು, ಗಂಗಾತೀರದಲ್ಲಿದ್ದ

ವ್ಯಾಸ ಮುನಿಯ ಬಳಿ ಅಶ್ವತ್ಥಾಮನನ್ನು ಕಂಡದ್ದು ಪಾಂಡವರನ್ನು ಕಂಡ ಕೂಡಲೇ ಅಶ್ವತ್ಥಾಮನು ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸಲಾಗಿ ಕೃಷ್ಣನು ಅರ್ಜುನನಿಂದ ಪ್ರತ್ಯಸ್ತ್ರವನ್ನು ಪ್ರಯೋಗಮಾಡಿಸಿದ್ದು ವ್ಯಾಸ ನಾರದರ ಅಭಿಪ್ರಾಯಾನುಸಾರವಾಗಿ ಅರ್ಜುನನು ತಾನು ಬಿಟ್ಟ ಪ್ರತ್ಯಸ್ತ್ರವನ್ನು ಹಿಂದಕ್ಕೆ ತೆಗೆದುಕೊಂಡರೂ ಅಶ್ವತ್ಥಾಮನು ತನ್ನ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ, ಆ ಅಸ್ತ್ರವನ್ನು ಅಭಿಮನ್ಯು ಪತ್ನಿಯಾದ ಉತ್ತರೆಯ ಗರ್ಭದಮೇಲೆ ಬೀಳಹೇಳಿದ್ದು ತಾನು ಉತ್ತರೆಯ ಗರ್ಭವನ್ನು ಕಾಪಾಡುವುದಾಗಿ ಕೃಷ್ಣನ ಪ್ರತಿಜ್ಞೆ ಮತ್ತು ಅದರ ಪರಿಪಾಲನೆ ಕೃಷ್ಣನು ಅಶ್ವತ್ಥಾಮನಿಗೆ ಶಾಪ ಕೊಟ್ಟದ್ದು ಅಶ್ವತ್ಥಾಮನಿಗೆ ಅಷ್ಟೊಂದು ಬಲ ಮಹಿಮೆಗಳಿಗೆ ಕಾರಣವೇನೆಂದು ಯುಧಿಷ್ಠಿರನು ಕೇಳಲಾಗಿ ಕೃಷ್ಣನು ಅದನ್ನು ವಿವರಿಸಿದ್ದು [ಸೌಪ್ತಿ ೧೩, ೧೮] ಪಾಂಡವರನ್ನು ಕೃಷ್ಣನು ಧೃತರಾಷ್ಟ್ರನಲ್ಲಿಗೆ ಕರೆತಂದು ನಮಸ್ಕಾರಮಾಡಿಸಿದ್ದು ಕ್ರುದ್ಧನಾದ ಧೃತರಾಷ್ಟ್ರನನ್ನು ಕೃಷ್ಣನು ಸಂತವಿಸಿದ್ದು [ಸ್ತ್ರೀ ೧೧, ೧೨] ಕೃಷ್ಣನು ಪಾಂಡವರೊಂದಿಗೆ ಗಾಂಧಾರಿಯ ಬಳಿಗೆ ಬಂದದ್ದು ಗಾಂಧಾರಿ ಯುಧಿಷ್ಠಿರನಿಗೆ ಶಾಪ ಕೊಡುವಳೆಂಬ ಸೂಚನೆಯನ್ನು ತಿಳಿದು ಕೃಷ್ಣನು ವ್ಯಾಸರ ಮೂಲಕ ಗಾಂಧಾರಿಯ ಕೋಪವನ್ನು ಶಾಂತಿಗೊಳಿಸಿದ್ದು [ಸ್ತ್ರೀ ೧೩] ಗಾಂಧಾರಿ ರಣಾಂಗಣದಲ್ಲಿ ಗೋಳಾಡುತ್ತಿದ್ದ ಸ್ತ್ರೀಯರನ್ನೆಲ್ಲ ಕೃಷ್ಣನಿಗೆ ತೋರಿಸಿ, '' ಕುರು ಪಾಂಡವರ ನಾಶಕ್ಕೆಲ್ಲಾ ನೀನೇ ಕಾರಣವಾದುದರಿಂದ ಇಂದಿಗೆ ೩೬ ವರ್ಷಕ್ಕೆ ನಿನ್ನ ವಂಶವೂ ಇಂತೆಯೇ ನಾಶವಾಗಲಿ '' ಎಂದು ಶಾಪ ಕೊಟ್ಟದ್ದು [ಸ್ತ್ರೀ ೨೫] ಕೃಷ್ಣನು ಕೈಲಾಸ ಪರ್ವತವನ್ನು ಸುಟ್ಟದ್ದು [ಅನು ೨೦೩] ಪುತ್ರಪ್ರಾಪ್ತಿಗಾಗಿ ಕೃಷ್ಣನು ಈಶ್ವರನನ್ನು ಕುರಿತು ತಪಸ್ಸು ಮಾಡಿದ್ದು [ಭಾರ-ಅನು ೨೦೩ ಸ್ಕಾ-ಉಮಾಖಂ ೧] ಈಶ್ವರನು ಕೃಷ್ಣನಿಗೆ ಪ್ರಸನ್ನನಾಗಿ ವರ ಕೊಟ್ಟದ್ದು [ಅನು ೪೬] ಕೃಷ್ಣನು ಉದಂಕ ಮುನಿಯ ಆಶ್ರಮವನ್ನು ಹೊಕ್ಕದ್ದು ಉದಂಕನು ಕುರುಕುಲ ನಾಶಕ್ಕೂ ಭೂ ಮಂಡಲದಲ್ಲಿನ ರಾಜಮಂಡಲದ ವಿನಾಶಕ್ಕೂ ಕೃಷ್ಣನೇ ಮೂಲಕಾರಣವೆಂಬುದಾಗಿ, ಶಾಪವನ್ನು ಕೊಡಬೇಕೆಂದಿರಲು, ಕೃಷ್ಣನು ತನ್ನ ಮಾಹಾತ್ಮ್ಯೆಯನ್ನು ಹೇಳಿ, ಆತನಿಗೆ ತನ್ನ ನಿಜ ಸ್ವರೂಪವನ್ನು ತೋರಿದ್ದು [ಅಶ್ವ ೫೩, ೫೫] ಪರೀಕ್ಷಿತನು ಜನಿಸಿದೊಡನೆಯೇ ಸಾಯಲಾಗಿ ಕೃಷ್ಣನು ಆ ಶಿಶುವನ್ನು ಬದುಕಿಸಿದ್ದು [ಅಶ್ವ ೬೬] ದುರ್ವಾಸ ಮುನಿ ಒಂದು ಸಲ ಕೃಷ್ಣನನ್ನು ಪರೀಕ್ಷಿಸುವುದಕ್ಕಾಗಿ ದ್ವಾರಕೆಗೆ ಬಂದು, ಭೋಜನ ಸಮಯದಲ್ಲಿ ಪಾಯಸವನ್ನು ಕೃಷ್ಣನ ಮೇಲೆಯೂ, ರುಕ್ಮಿಣಿಯ ಮೇಲೆಯೂ ಚೆಲ್ಲಿದನು ದುರ್ವಾಸನ ಸ್ವಭಾವವನ್ನು ಅರಿತಿದ್ದ ದಂಪತಿಗಳು ಬೇಸರಗೊಳ್ಳಲಿಲ್ಲ. ದುರ್ವಾಸನ ಎಂಜಲು ಪಾಯಸವನ್ನು ಕೃಷ್ಣನು ಮಹಾ ಪ್ರಸಾದವೆಂದು ಭಾವಿಸಿ

ತನ್ನ ಮೈಯ್ಗೆಲ್ಲಾ ಬಳಿದುಕೊಂಡನು. ದುರ್ವಾಸನು ಹೊರಡುವಾಗ "ನೀನು ಪಾಯುಸವನ್ನು ದೇಹಕ್ಕೆಲ್ಲಾ ಬಳಿದುಕೊಂಡರೂ, ಅಂಗಾಲಿಗೆ ಹಚ್ಚಿಕೊಳ್ಳಲಿಲ್ಲವಾಗಿ ನಿನಗೆ ಅಂಗಾಲಿನ ಮೂಲಕವಾಗಿಯೇ ಸಾವು" ಎಂದು ಹೇಳಿಹೋದನು [ಅನು ೨೬೪]. ಮತ್ತೊಮ್ಮೆ ಸೂರ್ಯಗ್ರಹಣ ಸಮಯದಲ್ಲಿ ಶ್ರೀ ಕೃಷ್ಣನು ಸ್ನಾನಾರ್ಥವಾಗಿ ತಂದೆ, ತಾಯಿ, ಬಂಧು, ಬಳಗ ಪರಿವಾರದೊಂದಿಗೆ ಸ್ಯಮಂತಪಂಚಕಕ್ಕೆ ಹೋಗಿದ್ದನು ಪಾಂಡವರೂ ಅಲ್ಲಿಗೆ ಬಂದಿದ್ದರು. ಎಲ್ಲರೂ ಒಟ್ಟುಗೂಡಿ, ಕೆಲ ಕಾಲ ಸಂತೋಷವಾಗಿ ಅಲ್ಲಿಯೇ ಇದ್ದರು. ಆಗ ನಾರದ, ವ್ಯಾಸ, ಚ್ಯವನ, ವಿಶ್ವಾಮಿತ್ರ, ವಸಿಷ್ಠ, ಭರದ್ವಾಜ, ಗೌತಮ ಮುಂತಾದ ಅನೇಕ ಮಹರ್ಷಿಗಳೂ ಅಲ್ಲಿಗೆ ಬಂದಿರಲಾಗಿ, ಕೃಷ್ಣನು ಅವರೆಲ್ಲರನ್ನೂ ತನ್ನಲ್ಲಿಯೇ ಉಳಿಸಿಕೊಂಡು ವಸುದೇವನ ಮೂಲಕ ಒಂದು ಯಜ್ಞವನ್ನು ಮಾಡಿಸಿದನು ಮೂರು ತಿಂಗಳವರೆಗೆ ಆ ಮಹರ್ಷಿಗಳೊಂದಿಗೆ ಅನೇಕ ವಿಧವಾದ ವೈದಿಕ ಕರ್ಮಗಳ ವಿಚಾರವಾಗಿ ಚರ್ಚೆಮಾಡಿ ತಿಳಿದು, ಆ ಮುನಿಗಳನ್ನು ಬೀಳ್ಕೊಟ್ಟು, ಪಾಂಡವರನ್ನು ಹಸ್ತಿನಾವತಿಗೆ ಕಳುಹಿ, ತಾನು ತನ್ನ ತಾಯ್ತಂದೆಗಳೊಂದಿಗೆ ದ್ವಾರಕೆಗೆ ಹೋದನು [ಭಾಗ -೧೦, ೮೨, ೮೪] ಇನ್ನೊಮ್ಮೆ ದೇವಕಿ ಏಳು ಮಂದಿ ಮಡಿದ ಮಕ್ಕಳನ್ನೂ ನೋಡಬೇಕೆಂದು ಆಸೆಪಡಲಾಗಿ, ಕೃಷ್ಣನು ಅವರನ್ನೆಲ್ಲ ಬರಮಾಡಿ ತೋರಿಸಿದನು [ಭಾಗ -೧೦, ೮೬] ಮಿಥಿಲಾ ನಗರಿಯನ್ನು ಆಳುತ್ತಿದ್ದ ಬಹುಳಾಶ್ವಜನಕ ರಾಜನ ಆಸ್ಥಾನದಲ್ಲಿ ಶ್ರುತದೇವನೆಂಬ ಸಕಲ ಶಾಸ್ತ್ರ ಪಾರಂಗತನಾದ ಬ್ರಾಹ್ಮಣನಿರುವನೆಂಬುದನ್ನು ತಿಳಿದು ಆ ರಾಜನಲ್ಲಿಗೆ ಹೋಗಿ ಬಹಳ ಕಾಲದವರೆಗೆ ಆ ಬ್ರಾಹ್ಮಣನ ಸಂಗಡ ಚರ್ಚೆಮಾಡಿ ಅನೇಕ ರಹಸ್ಯಗಳನ್ನು ತಿಳಿದನು [ಭಾಗ -೧೦, ೮೬] ರುಕ್ಮಿಣಿಯೊಂದಿಗೆ ಕೃಷ್ಣನ ಪ್ರೇಮಕಲಹ [ಭಾಗ -೧೦, ೬೦] ಪುತ್ರಶೋಕದಿಂದ ಮರುಗುತ್ತಿದ್ದ ಬ್ರಾಹ್ಮಣನನ್ನು ಸಂತೋಷಗೊಳಿಸುವುದಕ್ಕಾಗಿ ಶ್ವೇತದ್ವೀಪಕ್ಕೆ ಹೋಗಿ, ಬ್ರಾಹ್ಮಣನ ಮೃತನಾದ ಪುತ್ರನನ್ನು ಬದುಕಿಸಿ ಕರೆತಂದನು [ಭಾಗ -೧೦, ೮೯ ಹರಿ -೨, ೧೩] ಒಂದಾವೃತ್ತಿ ಕೆಲವು ಮಂದಿ ಮಹರ್ಷಿಗಳು ಕೃಷ್ಣನ ಸಂದರ್ಶನಾರ್ಥವಾಗಿ ದ್ವಾರಕೆಗೆ ಬಂದಿದ್ದಾಗ ಹಲವು ಮಂದಿ ಯಾದವರು ಒಟ್ಟುಗೂಡಿ, ಜಾಂಬವತಿಯ ಮಗನಾದ ಸಾಂಬನಿಗೆ ಹೆಣ್ಣುವೇಷ ಹಾಕಿ, ಆ ಮುನಿಗಳ ಬಳಿಗೆ ಹೋಗಿ "ಈ ಗರ್ಭಿಣಿ ಎಂತಹ ಮಗುವನ್ನು ಹೆರುವಳು" ಎಂದು ಪ್ರಶ್ನೆಮಾಡಲಾಗಿ "ವಂಶವಿನಾಶಕವಾದ ಉಕ್ಕಿನ ಒನಕೆಯನ್ನು ಹೆರುತ್ತಾಳೆ" ಎಂಬುದಾಗಿ ಕ್ರುದ್ಧರಾದ ಮುನಿಗಳು ಹೇಳಿದರು ಅಂತೆಯೇ ಮರುದಿನ ಸಾಂಬನು ಉಕ್ಕಿನ ಒನಕೆಯನ್ನು ಹೆರಲಾಗಿ, ಯಾದವರೆಲ್ಲರೂ ಹೆದರಿ, ಕೃಷ್ಣನ ಅಪ್ಪಣೆಯ ಮೇರೆಗೆ ಆ ಒನಕೆಯನ್ನು ಪುಡಿಮಾಡಿ ಸಮುದ್ರದಲ್ಲಿ ಎಸೆದರು. ದ್ವಾರಕೆಯಲ್ಲಿ ಅನೇಕ ವಿಧವಾದ ಉತ್ಪಾತಗಳು ಕಂಡುಬರುತ್ತಿದ್ದುವು. ಅದರಿಂದ

ಭೀತನಾದ ಕೃಷ್ಣನು, ಗಾಂಧಾರಿಯ ಶಾಪ ಫಲಿಸುವ ಕಾಲ ಸಮಾಪಿಸಿತೆಂದು ತಿಳಿದು, ಸಕಲ ಯಾದವರೂ ತೀರ್ಥಯಾತ್ರೆಗೆ ಹೋಗಬೇಕೆಂದು, ಅಪ್ಪಣೆ ಮಾಡಲಾಗಿ, ಎಲ್ಲರೂ ಪ್ರಭಾಸ ಕ್ಷೇತ್ರಕ್ಕೆ ಹೋದರು ಎಲ್ಲರೂ ಮದ್ಯಪಾನಮಾಡಿ ನೃತ್ತ ಗೀತಾದಿಗಳಿಂದ ಮಹೋತ್ಸವವನ್ನು ಅನುಭವಿಸುತ್ತಿದ್ದಾಗ ಸಾತ್ಯಕಿ ಕೃತವರ್ಮನನ್ನು ಚುಚ್ಚುಮಾತುಗಳಿಂದ ನೋಯಿಸಿ, ತನ್ನ ಖಡ್ಗದಿಂದ ಕೃತವರ್ಮನ ತಲೆಯನ್ನು ಕಡಿದನು ಇಷ್ಟರಲ್ಲಿ ಪುಡಿಮಾಡಿ ನೀರಿನಲ್ಲಿ ಎಸೆದಿದ್ದ ಒನಕೆಯ ಪುಡಿಗಳೆಲ್ಲವೂ, ಶರಕಾಂಡಗಳಾಗಿ ಬೆಳೆದಿದ್ದುವು. ಕೃತವರ್ಮನು ಮಡಿದುದನ್ನು ಕಂಡು, ಕೃತವರ್ಮನ ಪಕ್ಷದವರೂ, ಸಾತ್ಯಕಿಯ ಪಕ್ಷದವರೂ ಅದೇ ಶರಕಾಂಡಗಳಿಂದಲೇ ತಮ್ಮಲ್ಲಿ ತಾವು ಹೊಡೆದಾಡಿ ಹತರಾದರು ಅಷ್ಟರಲ್ಲಿ ಕೃಷ್ಣನು ಬಲರಾಮನನ್ನು ಹುಡುಕಿಕೊಂಡು ಹೋಗುವಾಗ್ಗೆ ಬಲರಾಮನು ಒಂದು ಮರದಮೇಲೆ ಕಾಣಬಂದು ಕೃಷ್ಣನನ್ನು ನೋಡಿದೊಡನೆಯೇ ಸರ್ಪಶರೀರವನ್ನು ಧರಿಸಿ, ಸಮುದ್ರದಲ್ಲಿ ಮುಳುಗಿದನು [ಮೌಸಲ ೩, ೪] ಶ್ರೀ ಕೃಷ್ಣನು ಪಾಂಡವರನ್ನು ಕರೆತರಲು ದಾರುಕನನ್ನು ಕಳುಹಿ, ಯೋಗಾಭ್ಯಾಸದಿಂದ ದೇಹತ್ಯಾಗಮಾಡುವುದಕ್ಕಾಗಿ ಒಂದು ಮರದ ಅಡಿಯಲ್ಲಿ ಮಲಗಿರುವಾಗ ಜರನೆಂಬ ಬೇಡನೊಬ್ಬನು, ಜಿಂಕೆಯೆಂಬ ಭ್ರಾಂತಿಯಿಂದ ಕೃಷ್ಣನ ಅಂಗಾಲಿಗೆ ಬಾಣ ಹೊಡೆದನು ಬಳಿಕ ಹತ್ತಿರ ಬಂದು ನೋಡಿ ಬಹಳವಾಗಿ ಪಶ್ಚಾತ್ತಾಪದಿಂದ ಮರುಗುತ್ತಿದ್ದ ಆ ಬೇಡನಿಗೆ ಸ್ವರ್ಗಪ್ರಾಪ್ತಿಯಾಗುವಂತೆ ಅನುಗ್ರಹಿಸಿದನು ಬಳಿಕ ಕೃಷ್ಣನು ದೇಹತ್ಯಾಗಮಾಡಿ, ಸ್ವರ್ಗಕ್ಕೆ ಹೋಗಲಾಗಿ ದೇವತೆಗಳೆಲ್ಲರೂ ಪೂಮಳೆಯನ್ನು ಗರೆದು ಸಕಲ ಪರಿವಾರದೊಂದಿಗೆ ವೈಕುಂಠಕ್ಕೆ ಕರೆದುಯ್ದರು [ಮೌಸಲ ೪] ಅರ್ಜುನನು ಬಂದು ವೃತ್ತಾಂತವನ್ನೆಲ್ಲ ತಿಳಿದು, ಶೋಕಿಸಿ, ದ್ವಾರಕೆಗೆ ಹೋಗಿ, ವಸುದೇವಾದಿಗಳಿಗೆ ನಡೆದ ಸಮಾಚಾರವನ್ನು ತಿಳುಹಿ, ದ್ವಾರಕೆ ಬೇಗನೆ ಮುಳುಗಿಹೋಗುವುದು ಅದರಿಂದ ನೀವೆಲ್ಲರೂ ಇಂದ್ರಪ್ರಸ್ಥಕ್ಕೆ ಹೊರಡಬೇಕೆಂದು ಹೇಳಿ ಎಲ್ಲರನ್ನೂ ದ್ವಾರಕೆಯಿಂದ ಹೊರಕ್ಕೆ ಕರೆತಂದನು. ಮರುದಿನ ವಸುದೇವನು ಯೋಗಾಭ್ಯಾಸದಿಂದ ದೇಹತ್ಯಾಗಮಾಡಲಾಗಿ, ಆತನ ಪತ್ನಿಯರೆಲ್ಲರೂ ಸಹಗಮನಮಾಡಿದರು ಅರ್ಜುನನು ಅವರಿಗೆ ಅಗ್ನಿಸಂಸ್ಕಾರವನ್ನು ಮಾಡಿ, ರಾಮ, ಕೃಷ್ಣರ ಶವಗಳನ್ನು ಸಂಸ್ಕರಿಸುವಾಗ್ಗೆ ಅನೇಕ ಮಂದಿ ಸಹಗಮನ ಮಾಡಿದರು. ಕೂಡಲೇ ದ್ವಾರಕೆಯೂ ಸಮುದ್ರದಲ್ಲಿ ಮುಳುಗಿಹೋಯಿತು ರುಕ್ಮಿಣಿ ಮುಂತಾದವರು ಸಹಗಮನಮಾಡಿದರು. ಸತ್ಯಭಾಮೆ ಮೊದಲಾದವರು ತಪಸ್ವಿಗಾಗಿ ಕಾಡಿಗೆ ಹೋದರು [ಮೌಸಲ ೭, ೮] ನೋಡು—ಅರ್ಜುನ. ಕೃಷ್ಣನ ಶಂಖದ ಹೆಸರು ಪಾಂಚಜನ್ಯ [ಭೀಷ್ಮ ೨೫]. ಸಾರಥಿ—ದಾರುಕ [ವನ. ೨೦. ಅಶ್ವ. ೧೧೮. ಮೌಸಲ. ೪]. ಯಶೋದೆಯ ಮಗಳು ಏಕಾನಂಗಾ ಎಂಬವಳು

ಕೃಷ್ಣನ ಪ್ರೀತಿಪಾತ್ರಳಾದ ತಂಗಿ [ಸಭಾ ೫೯] ಗದೆಯ ಹೆಸರು ಕೌಮೋದಕೀ [ಆದಿ. ೨೫೧] ಆತನ ಕುದುರೆಗಳು—ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬುದಾಗಿ ನಾಲ್ಕು [ಅಶ್ವ. ೧೧೮] ಆತನು ದ್ರೌಪದೀ ಸ್ವಯಂವರ ಸಮಯ ದಲ್ಲಿ ಮತ್ಸ್ಯಯಂತ್ರವನ್ನು ಭೇದಿಸದಿರಲು ಕಾರಣಗಳು [ಆದಿ ೨೦೬]

(ii) ಸತ್ಯವತೀ ಪುತ್ರನಾದ ವ್ಯಾಸಮಹರ್ಷಿ [ಆದಿ ೧೧೫]

(iii) ಅರ್ಜುನನ ನಾಮಾಂತರ [ವಿರಾ. ೪೩].

(iv) ಉತ್ತಾನಪಾದ ವಂಶದ ಹವಿರ್ಧಾನ ರಾಜನಿಂದ ಜನಿಸಿದ ಆರು ಮಂದಿ ಪುತ್ರರಲ್ಲಿ ನಾಲ್ಕನೆಯವನು [ಮತ್ಸ್ಯ -೫]

**ಕೃಷ್ಣದ್ವೈಪಾಯನ**—ವ್ಯಾಸ ಮಹರ್ಷಿ ಕೃಷ್ಣವರ್ಣದ ಯಮುನಾ ನದಿಯ ಒಂದು ದ್ವೀಪದಲ್ಲಿ ಜನಿಸಿದವನಾದುದರಿಂದ ಕೃಷ್ಣದ್ವೈಪಾಯನನೆಂತಲೂ, ಬದರೀ ವನದಲ್ಲಿ ಆಶ್ರಮವನ್ನು ಕಲ್ಪಿಸಿಕೊಂಡು ತಪಸ್ಸು ಮಾಡುತ್ತಿದ್ದವನಾದುದರಿಂದ ಬಾದರಾಯಣನೆಂತಲೂ, ಪರಾಶರ ಮುನಿ ಪುತ್ರನಾದುದರಿಂದ ಪಾರಾಶರ್ಯನೆಂತಲೂ, ವೇದಗಳನ್ನು ವಿಭಾಗ ಮಾಡಿದ ಕಾರಣ ವೇದವ್ಯಾಸನೆಂತಲೂ, ಕೃಷ್ಣವರ್ಣದ ಮೈ ಬಣ್ಣವುಳ್ಳವನಾದುದರಿಂದ ಕೃಷ್ಣನೆಂತಲೂ ಹೆಸರು ಈತನು ಪರಾಶರ ಮುನಿ ಯಿಂದ ಸತ್ಯವತಿ (ಮತ್ಸ್ಯಗಂಧೆ) ಯಲ್ಲಿ ಜನಿಸಿದವನು ನೋಡು—ಪರಾಶರ, ಸತ್ಯವತಿ [ಭಾ -ಆದಿ ೬೦] ವೇದ ವಿಭಾಗ ಮಾಡಿದವರಿಗೆಲ್ಲ ವ್ಯಾಸ ಅಥವ ವೇದ ವ್ಯಾಸರೆಂದು ಹೆಸರು ಒದೊಂದು ಮಹಾ ಯುಗದಲ್ಲಿ ಒಬ್ಬೊಬ್ಬನು ವ್ಯಾಸನು ಇಂದಿಗೆ ೨೭ ಮಹಾ ಯುಗಗಳು ಕಳೆದುವು ಈಗ ನಡೆಯುತ್ತಿರುವುದು ೨೮ ನೆಯ ಮಹಾ ಯುಗ ಈ ಪರ್ಯಾಯದಲ್ಲಿ ಕೃಷ್ಣದ್ವೈಪಾಯನ ಮುನಿ ವ್ಯಾಸನಾಗಿದ್ದಾನೆ. ಮುಂದಣ ಮಹಾ ಯುಗದಲ್ಲಿ ದ್ರೋಣ ಪುತ್ರನಾದ ಅಶ್ವತ್ಥಾಮನು ವ್ಯಾಸನಾಗು ವನು [ದೇ ಭಾ.-೧, ೪. ವಿಷ್ಣು -೩, ೪] ಈತನ ಉತ್ಪತ್ತಿ ಕಥೆ [ಭಾರ.-ಆ. ೬೦, ೬೪, ೧೧೪ ಶಾತಿ -೩೫೯ ಭಾಗ.-೧೨, ೬ ದೇ ಭಾ -೩, ೧, ೨]. ಈತನ ಅವತಾರ ಕಾಲ [ಭಾಗ ೧, ೪] ಈತನ ಉಪನಯನ [ಆದಿ -೬೪ ಅಧಿಕ ಪಾಠಾನು ಸಾರವಾಗಿ ೭೬] ಆತನ ವೇದಾಧ್ಯಯನ [ಆದಿ ೬೦] ವೇದಗಳನ್ನು ವಿಭಾಗ ಮಾಡಿದ್ದು [ಆದಿ ೬೦ ಭಾಗ -೧೨, ೬ ವಿಷ್ಣು -೩, ೩, ೪ ವಾಯು -೬೦]. ಭಾರತವನ್ನು ನಿರ್ಮಿಸಿದ್ದು [ಆದಿ ೧ ಭೀ ೨] ಭಾರತವನ್ನು ಬರೆಯುವುದಕ್ಕಾಗಿ ಗಣಪತಿಯನ್ನು ಬೇಡಿ, ಪ್ರತ್ಯಕ್ಷ ಮಾಡಿಕೊಂಡು, ಆತನನ್ನು ಲೇಖಕನನ್ನಾಗಿ ಒಪ್ಪಿಸಿಕೊಂಡದ್ದು, ಬ್ರಹ್ಮನು ಹೊಗಳಿದ್ದು [ಆದಿ ೧]. ಆತನು ಯಜ್ಞ ಮಾಡಿದ್ದು [ಆದಿ ೫೫]. ವ್ಯಾಸಸ್ತುತಿ [ಆದಿ ೧ ದ್ರೋ. ೨೦೨. ಶಾಂತಿ. ೩೫೬, ೩೫೯]. ಜನಮೇಜಯನ ಸರ್ಪ ಯಾಗಕ್ಕೆ ಬಂದದ್ದು [ಆದಿ. ೬೦]. ಶಂತನು ಪುತ್ರ

ನಾದ ವಿಚಿತ್ರವೀರ್ಯನು ಸಾಯುವಾಗ್ಗೆ ಆತನಿಗೆ ಸಂತಾನವಿರಲಿಲ್ಲ ಭೀಷ್ಮನು ಬ್ರಹ್ಮ ಚರ್ಯವ್ರತವನ್ನು ಕೈಗೊಂಡು ರಾಜ್ಯಾಧಿಕಾರದ ಹಕ್ಕನ್ನು ವಿಚಿತ್ರವೀರ್ಯನಿಗೇ ಬಿಟ್ಟು ಕೊಟ್ಟಿದ್ದನು. ಹೀಗಾಗಿ ರಾಜ್ಯಕ್ಕೆ ಉತ್ತರಾಧಿಕಾರಿಗಳು ಇಲ್ಲದಂತಾಯಿತು. ಆಗ ಭೀಷ್ಮನ ಸೂಚನೆಯಂತೆ ಸತ್ಯವತಿ ವ್ಯಾಸ(ಕೃಷ್ಣದ್ವೈಪಾಯನ)ನನ್ನು ಸ್ಮರಿಸ ಲಾಗಿ, ವಿಚಿತ್ರವೀರ್ಯನ ಹಿರಿಯ ಹೆಂಡತಿಯಾದ ಅಂಬಿಕೆ ಈತನ ಸಾನ್ನಿಧ್ಯದಿಂದ ಧೃತ ರಾಷ್ಟ್ರನನ್ನೂ, ಕಿರಿಯವಳಾದ ಅಂಬಾಲಿಕೆ ಪಾಂಡು ರಾಜನನ್ನೂ, ಅಂಬಿಕೆಯ ದಾಸಿ ವಿದುರನನ್ನೂ ಪಡೆದರು[ಆದಿ ೧೧೫ ದೇ ಭಾ -೨, ೬] ಜನನಿಯಾದ ಸತ್ಯವತಿಯನ್ನು ಹಸ್ತಿನಾವತಿಯಿಂದ ತಪೋವನಕ್ಕೆ ಕರೆದುಯ್ದುದು[ಆದಿ ೧೩೭] ಪಾಂಡವರು ಶಾಲಿ ಹೋತ್ರ ಮುನಿಯ ಆಶ್ರಮದಲ್ಲಿದ್ದಾಗ ಅವರಿಗೆ ದರ್ಶನ ಕೊಟ್ಟಿದ್ದು [ಆ ೧೬೮] ಪಾಂಡವರು ಕುಂತಿಯೊಂದಿಗೆ ಏಕಚಕ್ರ ನಗರಕ್ಕೆ ಹೋಗುತ್ತಿದ್ದಾಗ ನಡುದಾರಿಯಲ್ಲಿ ಅವರನ್ನು ಸಂಧಿಸಿ, ಮುಂದಣ ಕರ್ತವ್ಯವನ್ನು ಬೋಧಿಸಿದ್ದು [ಆದಿ ೧೭೦] ದ್ರೌಪದಿ ಪಾಂಡವರಿಗೇ ದೊರೆಯುವಳೆಂಬುದಾಗಿ ಅವರಿಗೆ ಭವಿಷ್ಯತ್ತನ್ನು ಹೇಳಿದ್ದು [ಆದಿ ೧೮೪] ಪಾಂಡವರು ದ್ರುಪದ ನಗರಕ್ಕೆ ಹೋಗುವಾಗ ನಡುದಾರಿಯಲ್ಲಿ ಅವರನ್ನು ಸಂಧಿಸಿದ್ದು [ಆದಿ ೨೦೦] ಪಾಂಡವರೊಂದಿಗೆ ಸಂಧಿಮಾಡಿಕೊಂಡು, ಅವರಿಗೆ ಸಲ್ಲತಕ್ಕ ರಾಜ್ಯವನ್ನು ಕೊಡುವಂತೆ ಧೃತರಾಷ್ಟ್ರನಿಗೆ ತಿಳಿಯಹೇಳಿದ್ದು [ವನ ೮] ಯುಧಿಷ್ಠಿರನಿಗೆ ಪ್ರತಿಸ್ಮೃತಿವಿದ್ಯೆಯನ್ನು ಉಪದೇಶಿಸಿದ್ದು [ವನ ೩೬]. ಪಾಂಡವರು ಕಾಮ್ಯಕ ವನದಲ್ಲಿದ್ದಾಗ ಅವರಲ್ಲಿಗೆ ಹೋಗಿ, ಅನೇಕ ಧರ್ಮಗಳನ್ನು ತಿಳಿಸಿ, ದಾನ ಪ್ರಶಂಸೆಯನ್ನು ವಿವರಿಸಿದ್ದು [ವನ ೨೬೦] ಧೃತರಾಷ್ಟ್ರನು ಕೇಳ ತಕ್ಕ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುವಹಾಗೆ ಸಂಜಯನಿಗೆ ಹೇಳಿದ್ದು [ಉದ್ಯೋ ೬೬] ಅಭಿಮನ್ಯುವಿನ ಕೊಲೆಯಿಂದ ಸಂಕಟಪಡುತ್ತಿದ್ದ ಯುಧಿಷ್ಠಿರನನ್ನು ಸಂತ ವಿಸಿ, ಅಕಂಪನನ ಚರಿತ್ರೆಯನ್ನು ಆತನಿಗೆ ವಿವರಿಸಿದ್ದು [ದ್ರೋ ೫೨, ೫೪] ಯುಧಿ ಷ್ಠಿರನಿಗೆ ಷೋಡಶ ಮಹಾರಾಜರ ಚರಿತ್ರೆಯನ್ನು ಹೇಳಿದ್ದು [ದ್ರೋ ೫೫, ೭೧] ಮಹಾಭಾರತ ಯುದ್ಧದಲ್ಲಿ ನಡೆಯುವ ವಿಷಯಗಳನ್ನೆಲ್ಲ ಇದ್ದಲ್ಲಿಯೇ ತಿಳಿದು ವಿವರಿಸು ವಂತಹ ಸರ್ವಜ್ಞತ್ವವನ್ನು ಸಂಜಯನಿಗೆ ಅನುಗ್ರಹಿಸಿದ್ದು [ಭೀ ೨] ಅಶ್ವತ್ಥಾ ಮನು, ಪ್ರಯೋಗಿಸಿದ ನಾರಾಯಣಾಸ್ತ್ರವು ವಿಫಲವಾಗಲು ಕಾರಣವೇನೆಂದು ಪ್ರಶ್ನೆ ಮಾಡಲಾಗಿ, ಕೃಷ್ಣಾರ್ಜುನರು, ನಾರಾಯಣ ನರ ಸ್ವರೂಪರೆಂತಲೂ ಅವರ ವಿಷಯದಲ್ಲಿ ಈ ಅಸ್ತ್ರ ಪ್ರವರ್ತಿಸಲಾರದೆಂತಲೂ ತಿಳಿಯಹೇಳಿದ್ದು [ದ್ರೋ ೨೦೨] ದುರ್ಯೋಧನನ ಸಂಹಾರಾರ್ಥವಾಗಿ ತಾನೇ ಅವನನ್ನು ಕೊಲ್ಲುವೆನೆಂದು ಹೊರಟಿದ್ದ ಯುಧಿಷ್ಠಿರನನ್ನು ಅಡ್ಡಗಿಸಿದ್ದು [ದ್ರೋ ೧೮೪] ರಣರಂಗದಲ್ಲಿ ಅರ್ಜುನನಿಗೆ ಶತರುದ್ರೀಯವನ್ನು ವಿವರಿಸಿದ್ದು [ದ್ರೋ ೨೦೩] ಯುದ್ಧಭೂಮಿ

ಯಲ್ಲಿ ಸಂಜಯನನ್ನು ಕೊಲ್ಲಲು ಉದ್ಯುಕ್ತನಾಗಿದ್ದ ಸಾತ್ಯಕಿಯನ್ನು ಸಮಾಧಾನ ಪಡಿಸಿ, ಸಂಜಯನನ್ನು ಬಿಡಿಸಿದ್ದು [ಶಲ್ಯ. ೨೯] ದುರ್ಯೋಧನ ವಧಾನಂತರ ರಣರಂಗದಲ್ಲಿ ಪುತ್ರಶೋಕದಿಂದ ಗೋಳಾಡುತ್ತಿದ್ದ ಧೃತರಾಷ್ಟ್ರನಲ್ಲಿಗೆ ಹೋಗಿ, ತತ್ತ್ವೋಪದೇಶ ಮಾಡಿ ಆತನ ದುಃಖವನ್ನು ತೊಲಗಿಸಿ, ಪಾಂಡವರ ವಿಷಯದಲ್ಲಿ ಅಭಿಮಾನ, ಪ್ರೀತಿಗಳನ್ನು ಇಡುವ ಹಾಗೆ ಬೋಧಿಸಿದ್ದು [ಸ್ತ್ರೀ ೮] ಯುಧಿಷ್ಠಿರಾದಿಗಳು ನಮಸ್ಕಾರ ಮಾಡಲು ಬಂದಾಗ, ಯುಧಿಷ್ಠಿರನಿಗೆ ಶಾಪ ಕೊಡಬೇಕೆಂದಿದ್ದ ಗಾಂಧಾರಿಗೆ ತಿಳಿವಳಿಕೆಯನ್ನು ಹೇಳಿ, ಆಕೆಯ ಶೋಕವನ್ನು ತೊಲಗಿಸಿ, ಪಾಂಡವರನ್ನು ಪುತ್ರರಂತೆ ಕಾಣಹೇಳಿದ್ದು [ಸ್ತ್ರೀ ೧೩] ಯುಧಿಷ್ಠಿರನು ಕ್ಷತ್ರಧರ್ಮವನ್ನು ಬಿಟ್ಟು ತಾಪಸ ವೃತ್ತಿಯನ್ನು ಕೈಕೊಳ್ಳಬೇಕೆಂದಿರುವಲ್ಲಿ ಆತನಿಗೆ ಶಂಖ ಲಿಖಿತರ ಕಥೆಯನ್ನು ಹೇಳಿ, ಕ್ಷತ್ರಿಯ ಧರ್ಮವನ್ನು ಸ್ವೀಕರಿಸುವಂತೆ ಬಲಾತ್ಕರಿಸಿ, ಸಮ್ಮತಿಪಡಿಸಿದ್ದು [ಶಾಂತಿ ೨೩] ಪುತ್ರಪ್ರಾಪ್ತಿಗಾಗಿ ಕೃಷ್ಣದ್ವೈಪಾಯನನು ತಪಸ್ಸು ಮಾಡಿದ್ದು, ಘೃತಾಚಿಯೆಂಬ ಅಪ್ಸರಸಿಯಲ್ಲಿ ಶುಕನೆಂಬ ತನಯನನ್ನು ಪಡೆದದ್ದು [ಶಾಂತಿ. ೩೩೧, ೩೩೨] ಶುಕ ಮುನಿಗೆ ಸೃಷ್ಟಿ, ಸ್ಥಿತಿ, ಲಯ ಪ್ರಕಾರವನ್ನು ಬೋಧಿಸಿದ್ದು [ಶಾಂತಿ ೨೩೮, ೨೪೯] ಅಧ್ಯಾತ್ಮವಿಚಾರವಾಗಿ ಶ್ರೀ ಕೃಷ್ಣನೊಂದಿಗೆ ಸಂವಾದ ಮಾಡಿದ್ದು [ಅನು ೬೩] ಬ್ರಹ್ಮಹತ್ಯೆಯ ವಿಷಯವಾಗಿ ಆತನ ಸಿದ್ಧಾಂತ [ಅನು ೬೩] ಒಂದು ಕೀಟದಿಂದ ಅದರ ಪೂರ್ವಜನ್ಮ ವೃತ್ತಾಂತವನ್ನು ಕೇಳಿ, ಅದಕ್ಕೆ ರಾಜ್ಯವನ್ನು ಕೊಟ್ಟದ್ದು [ಅನು ೧೭೯, ೧೮೦] ವಿದ್ಯೆ, ತಪಸ್ಸು, ದಾನ ಇವುಗಳಲ್ಲಿ ದಾನವೇ ಶ್ರೇಷ್ಠವೆಂಬ ವಿಷಯದಲ್ಲಿ ಮೈತ್ರೇಯ ಮುನಿಯೊಂದಿಗೆ ಸಂವಾದ [ಅನು ೧೮೨, ೧೮೪] ಬಂಧುಗಳ ಕೊಲೆಯಿಂದ ಖಿನ್ನನಾಗಿದ್ದ ಯುಧಿಷ್ಠಿರನಿಗೆ ಅಶ್ವಮೇಧ ಮಾಡುವ ಹಾಗೆ ಬೋಧಿಸಿದ್ದು [ಅಶ್ವ ೩] ಧೃತರಾಷ್ಟ್ರ, ಗಾಂಧಾರಿ, ಕುಂತಿ ಇವರು ಆಶ್ರಮವಾಸಕ್ಕೆ ಹೊರಟಾಗ ವ್ಯಾಸನು ಅವರನ್ನು ಬರಮಾಡಿಕೊಂಡದ್ದು ಯುಧಿಷ್ಠಿರನು ತಮ್ಮಂದಿರೊಂದಿಗೆ ಸೇನಾಸಹಿತನಾಗಿ ಒಂದು ತಿಂಗಳವರೆಗೆ ವ್ಯಾಸನ ಆಶ್ರಮದಲ್ಲಿಯೇ ವಾಸವಾಗಿದ್ದದ್ದು ಗಾಂಧಾರಿ ತನ್ನ ಮಕ್ಕಳನ್ನು ನೋಡಬೇಕೆಂದು ಆಸೆಪಟ್ಟದ್ದು ವ್ಯಾಸನು ಗಾಂಧಾರಿಯ ಕೋರಿಕೆಯನ್ನು ಕುಂತಿಗೆ ಹೇಳಿ, ಆಕೆಯ ಇಷ್ಟಾರ್ಥವೇನೆಂದು ಕೇಳಿದ್ದು ಕುಂತಿ ಕರ್ಣನು ತನ್ನ ಮಗನೆಂದು ಹೇಳಿ, ಆತನನ್ನು ನೋಡಬಯಸಿದ್ದು ವ್ಯಾಸನು ಎಲ್ಲರನ್ನೂ ಕರೆದುಕೊಂಡು ಗಂಗಾ ತೀರಕ್ಕೆ ಹೋಗಿ, ಮಹಾಭಾರತ ಯುದ್ಧದಲ್ಲಿ ಹತರಾದವರನ್ನೆಲ್ಲ ಆ ರಾತ್ರಿಯಲ್ಲಿ ತಾನು ಮರಳಿ ಬರಮಾಡಿ ತೋರುವಂತೆ ಹೇಳಿ ಪ್ರತಿಜ್ಞೆ ಮಾಡಿದ್ದು. ಕುಂತಿ, ಗಾಂಧಾರಿ ಮುಂತಾದವರು ಕುತೂಹಲಭರಿತರಾಗಿ ಆ ಹಗಲನ್ನು ಅತಿ ಪ್ರಯಾಸದಿಂದ ಕಳೆಯಲಾಗಿ, ರಾತ್ರಿಯಾದ

ಕೂಡಲೇ ವ್ಯಾಸನು ಗಂಗೆಯಲ್ಲಿ ಮುಳುಗಿ ಕರೆಯಲಾಗಿ, ಭಾರತ ಯುದ್ಧದಲ್ಲಿ ಮಡಿದ, ಇತ್ತಂಡದವರೂ ತಮ್ಮತಮ್ಮ ವಸ್ತ್ರ, ಭೂಷಣ, ವಾಹನಾದಿಗಳೊಂದಿಗೆ ನೀರಿನಿಂದ ಎದ್ದು ಬಂದು, ದಡದಲ್ಲಿ ನಿಂತದ್ದು ವ್ಯಾಸಾನುಗ್ರಹದಿಂದ ಧೃತ ರಾಷ್ಟ್ರನು ದಿವ್ಯ ನೇತ್ರವನ್ನು ಪಡೆದು ಎಲ್ಲರನ್ನೂ ಸಂದರ್ಶಿಸಿದ್ದು ಯುಧಿಷ್ಠಿರಾದಿ ಗಳು, ವ್ಯಾಸರ ಅನುಗ್ರಹದಿಂದ ಬದುಕಿ ಬಂದ ಅವರೆಲ್ಲರೊಂದಿಗೆ ಆ ರಾತ್ರಿ ಯೆಲ್ಲ ಸುಖವಾಗಿ ವಿಹರಿಸಿದ್ದು [ಆಶ್ರ ೩೦, ೩೫] ಮೃತರಾದ ಪರೀಕ್ಷಿತ್, ಶಮೀಕ, ಶೃಂಗಿ ಮುನಿಗಳನ್ನು ನೋಡಬೇಕೆಂದು ಜನಮೇಜಯನು ಬಯಸಲಾಗಿ, ಅವರನ್ನು ಬರಮಾಡಿ ತೋರಿಸಿದ್ದು ಮುಂತಾಗಿ [ಆಶ್ರ. ೩೭ ದೇ ಭಾ ೨, ೭]. ಕೃಷ್ಣನಿರ್ಯಾಣಾನಂತರ ಅರ್ಜುನನು ವ್ಯಾಸ ಮುನಿಯ ಆಶ್ರಮಕ್ಕೆ ಬಂದು, ನಡೆದ ಸಮಾಚಾರವನ್ನೆಲ್ಲ ಹೇಳಲಾಗಿ, ವ್ಯಾಸನು ಪಾಂಡವರಿಗೆ ಮಹಾಪ್ರಸ್ಥಾನ ಮಾಡು ವಂತೆ ಸೂಚಿಸಿದ್ದು [ಮೌಸ ೯] (ಮಿಕ್ಕ ವಿಷಯಗಳನ್ನು ವ್ಯಾಸ ಶಬ್ದದಲ್ಲಿ ನೋಡುವುದು)

**ಕೃಷ್ಣವೇಣೀ(ಕೃಷ್ಣಾ).**— ಒಂದು ನದಿ [ಭಾರ -ಸ ೯ ಭೀ. ೯]

**ಕೇಕಯ.**—(I) ಭರತ ಖಂಡದ ಒಂದು ದೇಶ ಶತದ್ರೂ ನದಿಗೂ ವಿಪಾಶಾ ನದಿಗೂ ನಡುವೆ ಇದೆ ಈ ದೇಶದ ಅರಸರಿಗೂ ಈ ಹೆಸರು ಸಲ್ಲುತ್ತದೆ [ಭಾರ.-ಭೀ ೯]

(II) ಕೇಕಯ ದೇಶದ ಒಬ್ಬ ಅರಸು ದಶರಥ ರಾಜನ ಕಾಲದಲ್ಲಿ ಅಶ್ವಪತಿ ಯೆಂಬ ಅರಸು ಇಲ್ಲಿ ರಾಜ್ಯಭಾರ ಮಾಡುತ್ತಿದ್ದನು ದಶರಥನ ಮೂರನೆಯ ಹೆಂಡತಿಯೂ, ಭರತನ ಜನನಿಯೂ ಆದ ಕೈಕಯಿ ಈತನ ಮಗಳು ಪಾಂಡವರ ಕಾಲದಲ್ಲಿ ಧೃಷ್ಟಕೇತುವೆಂಬ ರಾಜನು ಕೇಕಯ ದೇಶಕ್ಕೆ ಅರಸನಾಗಿದ್ದನು ಗಿರಿವ್ರಜವು ಇದರ ರಾಜಧಾನಿ [ಭಾಗ -೯, ೨೪]

(III) ಮತ್ತೊಬ್ಬ ಅರಸು ಈತನೂ ಕೇಕಯ ದೇಶವನ್ನೇ ಪಾಲಿಸು ತ್ತಿದ್ದನು ಆದರೆ ಈತನ ಹೆಸರೇನು, ಯಾವ ಕಾಲದಲ್ಲಿದ್ದವನು ಎಂಬ ವಿಷಯ ಗಳೊಂದೂ ತಿಳಿಯಬರುವುದಿಲ್ಲ ಆದರೆ, ಈತನ ವಿಷಯವಾಗಿ ಒಂದು ಇತಿಹಾಸ ಮಾತ್ರ ವಿಖ್ಯಾತವಾಗಿದೆ ಒಮ್ಮೆ ಈ ಅರಸು ಬೇಟೆಗೆ ಹೋಗಿದ್ದಾಗ ಒಬ್ಬ ರಾಕ್ಷಸನು ಈತನನ್ನು ಕಂಡು ಹಿಡಿಯಹೋದನು. ಆಗ ರಾಜನು ಹಿಂಜರಿಯದೆ ಅಲ್ಲಿಯೇ ನಿಂತು '' ಎಲೋ ! ನನ್ನನ್ನು ಮುಟ್ಟಬೇಡ. ನನ್ನ ಮಾತನ್ನು ಕೇಳು. ನನ್ನ ದೇಶದಲ್ಲಿ ಚಾತುರ್ವರ್ಣ್ಯವೂ ತಮ್ಮತಮ್ಮ ವೃತ್ತಿಯಲ್ಲಿ ಯಥಾವಿಧಿಯಾಗಿ ನೆಲೆಗೊಂಡಿದೆ ನಾನು ಯಾವ ವಿಧದಲ್ಲಿಯೂ ಪಾಪಕರ್ಮವನ್ನು ಮಾಡಿದವನಲ್ಲ ......ಇಂತಿರಲು ನನಗೆ ರಾಕ್ಷಸರಿಂದ ಭಯವೆತ್ತಣದು ? '' ಎಂದನು. ಆಗ

ರಾಕ್ಷಸನು "ಅಯ್ಯಾ, ನೀನು ಸಕಲ ವಿಧದಲ್ಲಿಯೂ ಧರ್ಮೈಕಶರಣನಾಗಿರುವೆ ಯಾದುದರಿಂದ ನಿನ್ನನ್ನು ನಾನು ಪೀಡಿಸಲಾರೆನು. ನೀನು ಸುಖವಾಗಿ ಮನೆಗೆ ತೆರಳು. ನಾನೂ ಹೋಗುತ್ತೇನೆ" ಎಂದನು. ಈ ಉಪಾಖ್ಯಾನದಿಂದ ಈತನು ಉತ್ತಮ ರೀತಿಯಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದನೆಂದು ತಿಳಿಯಬರುತ್ತದೆ [ಭಾರ -ಶಾಂತಿ ೭೭]

(iv) ಕೇಕಯ ದೇಶದ ಮತ್ತೊಬ್ಬ ಅರಸು ರಥಕಾರನೆಂಬುದು ಈತನ ಹೆಸರು. ಹೆಂಡತಿ ಮಾಲವ್ಯೆ ವಿರಾಟನ ಹೆಂಡತಿಯಾದ ಸುದೇಷ್ಣೆಯೂ ಕೀಚಕರೂ ಇವನ ಮಕ್ಕಳು [ವಿರಾ ೨೧]

**ಕೇತುಮತೀ**—ಸುಮಾಲಿಯೆಂಬ ರಾಕ್ಷಸನ ಹೆಂಡತಿ ರಾವಣನ ಜನನಿ ಯಾದ ಕೇಕಸಿಯ ಜನನಿ ನೋಡು—ವಿಶ್ರವಸ್, ಸುಮಾಲಿ

**ಕೇತುಮನ್ತ.**—ಬೇಡರ ಅರಸು ಏಕಲವ್ಯನ ಮಗ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಭೀಮನಿಂದ ಮಡಿದನು [ಭೀ ೫೪]

**ಕೇತುಮಾಲ**—ಒಬ್ಬ ಅರಸು ಜಂಬೂ ದ್ವೀಪಕ್ಕೆ ಅರಸನಾಗಿದ್ದ ಅಗ್ನೀಧ್ರ ರಾಜನ ಒಂಬತ್ತು ಮಂದಿ ಪುತ್ರರಲ್ಲಿ ಒಬ್ಬನು ಈತನು ಮೇರು ಪುತ್ರಿಯಾದ ದೇವವೀತಿಯನ್ನು ಮದುವೆಯಾಗಿದ್ದನು ಈತನು ಪಾಲಿಸುತ್ತಿದ್ದ ದೇಶಕ್ಕೂ ಇದೇ ಹೆಸರು ಈ ಖಂಡವು ಮಾಲ್ಯವತ್ಪರ್ವತಕ್ಕೂ ಲವಣ ಸಮುದ್ರಕ್ಕೂ ನಡುವೆ ಇದೆ ಭೂಮಿಯ ನವಖಂಡಗಳಲ್ಲಿ ಒಂದು [ಭೀ ೬ ಭಾಗ ೫, ೧೬]. ಇದು ಪುಣ್ಯವಂತರಿಗೆ ಸುಖಭೋಗ ಸ್ಥಾನವೆನಿಸಿ, ಪರಮ ಪವಿತ್ರವಾದದ್ದು [ಭಾರ - ಅನು. ೨೪೦]

**ಕೇತುಮಾಲಾ.**—ಕಾಮ್ಯಕ ವನದ ಪಶ್ಚಿಮ ದಿಕ್ಕಿನಲ್ಲಿರುವ ಭರತ ಖಂಡದ ಒಂದು ನದಿ [ವನ ೮೭]

**ಕೇತುವರ್ಮ**—ಒಬ್ಬ ರಾಜ ಪುತ್ರನು ತ್ರಿಗರ್ತ ದೇಶಾಧಿಪನಾದ ಸೂರ್ಯ ವರ್ಮನ ತಮ್ಮ ಪಾಂಡವರ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ ಅರ್ಜುನ ನಿಂದ ಹತನಾದ [ಭಾರ ಅಶ್ವ ೭೪]

**ಕೇದಾರ**—(i) ಒಂದು ತೀರ್ಥ ಗಂಗಾ ದ್ವಾರದಿಂದ ಮೊದಲ್ಗೊಂಡು ತಮಸಾ ನದಿಯವರೆಗೂ ವ್ಯಾಪಿಸಿದೆ ಕಾಳೀಗಂಗಾ ಎಂಬ ಹೊಳೆ ಇಲ್ಲಿಂದಲೇ ಹುಟ್ಟುತ್ತದೆ ಈ ತೀರ್ಥ ಹರಿದ್ವಾರಕ್ಕೆ ಉತ್ತರದಲ್ಲಿ ೧೪೬ ಮೈಲುಗಳ ದೂರ ದಲ್ಲಿ ಬದರಿಕಾಶ್ರಮಕ್ಕೆ ಬಹಳ ಸಮೀಪದಲ್ಲಿದೆ ಇಲ್ಲಿ ಪ್ರತಿಷ್ಠಿತನಾಗಿರುವ ಈಶ್ವರ ನಿಗೂ ಈ ಹೆಸರು ಸಲ್ಲುತ್ತದೆ [ಭಾರ -ವನ. ೮೧].

(ii) ಮಹಾಮಹಿಮನಾದ ಒಬ್ಬ ರಾಜರ್ಷಿ [ದೇ ಭಾ.-೯, ೪೨].

**ಕೇರಲ.**—(i) ಒಂದು ದೇಶ ಪೂರ್ವಕ್ಕೆ ಘಟ್ಟಗಳು, ಪಶ್ಚಿಮಕ್ಕೆ ಸಮುದ್ರ, ಉತ್ತರಕ್ಕೆ ತುಳು ನಾಡು, ದಕ್ಷಿಣಕ್ಕೆ ಕರ್ಣಾಟಕ ದೇಶ—ಇವುಗಳ ನಡುವೆ ಇದೆ. ಇದನ್ನು ಈಗ ಮಲಯಾಳವೆಂದು ಕರೆಯುತ್ತಾರೆ ಪಾಂಡವರ ರಾಜಸೂಯ ಸಮಯದಲ್ಲಿ ಚಂದ್ರಹಾಸನ ಜನಕ ತಂದೆಯಾದ ಸುಧರ್ಮನು ಇಲ್ಲಿ ರಾಜ್ಯಭಾರ ಮಾಡುತ್ತಿದ್ದನು [ಭಾರ.-ಸ. ೩೨. ಭೀ ೯].

(ii) ಸೂರ್ಯವಂಶದ ಮರುತ್ತ ರಾಜನ ಮಗನಾದ ಸುಧೃತಿ ರಾಜನ ಮೊಮ್ಮಗನು ನರನೆಂಬ ಅರಸು ಇವನ ತಂದೆ ಈತನು ಪಾಲಿಸಿದ ದೇಶಕ್ಕೆ ಕೇರಳ ದೇಶವೆಂದು ಹೆಸರು [ಭಾಗ -೯, ೨].

**ಕೇಶವ**—ವಿಷ್ಣುವಿನ ನಾಮಾಂತರ ಕೇಶವಶಬ್ದ ನಿರ್ವಚನ [ಶಾಂತಿ. ೩೫೦].

**ಕೇಶವಾದಿ ದ್ವಾದಶಮೂರ್ತಿ ರೂಪಗಳು**—[ಅನು ೧೭೧. ಅಶ್ವ ೧೧೪].

**ಕೇಶಿ**—(i) ಒಬ್ಬ ರಾಕ್ಷಸನು. ಇವನು ಊರ್ವಶಿಯನ್ನೂ ಚಿತ್ರಲೇಖೆಯನ್ನೂ ಅಪಹರಿಸಿಕೊಂಡು ಹೋಗುತ್ತಿದ್ದಾಗ, ಪುರೂರವನು ಇವನನ್ನು ಕೊಂದು, ಅವರಿಬ್ಬರನ್ನೂ ಬಿಡಿಸಿದನು [ಮತ್ಸ್ಯ.-೨೪].

(ii) ದನುವಿನ ಮಗನಾದ ಒಬ್ಬ ಅಸುರನು. ಪ್ರಜಾಪತಿಯ ಮಗಳಾದ ದೇವಸೇನೆಯನ್ನು ಅಪಹರಿಸಲಾಗಿ, ಇಂದ್ರನು ಇವನನ್ನು ಕೊಂದು, ದೇವಸೇನೆಯನ್ನು ಷಣ್ಮುಖನಿಗೆ ಕೊಟ್ಟು ಮದುವೆ ಮಾಡಿಸಿದನು [ಭಾರ.-ವನ ೨೨೩]

(iii) ಕಂಸನ ಪರಿವಾರಕ್ಕೆ ಸೇರಿದ ಒಬ್ಬ ರಾಕ್ಷಸನು ಇವನು ಕುದುರೆಯ ರೂಪವನ್ನು ತಾಳಿ, ಗೋಕುಲದಲ್ಲಿ ಬಲರಾಮ ಕೃಷ್ಣರನ್ನೂ, ಗೊಲ್ಲ ಹುಡುಗರನ್ನೂ ಪೀಡಿಸಲಾಗಿ, ಕೃಷ್ಣನು ಇವನನ್ನು ಕೊಂದನು [ಭಾಗ.-೧೦, ೩೭. ಸಭಾ. ೫೩. ಹರಿ -೨, ೨೪ ವಿಷ್ಣು.-೫, ೧೬].

(iv) ವಸುದೇವನ ಪತ್ನಿಯರಲ್ಲಿ ಒಬ್ಬಳಾದ ಕೌಸಲ್ಯೆಯೆಂಬವಳಲ್ಲಿ ಜನಿಸಿದವನು [ಭಾಗ -೧೦, ೮೨].

**ಕೇಶಿನಿ**—(i) ಒಂದು ನದಿ ಅಯೋಧ್ಯೆಗೂ ಗಂಗಾ ನದಿಗೂ ನಡುವೆ ಇದೆ [ರಾಮಾ.-ಉತ್ತ ೫೧]

(ii) ಚಂದ್ರ ವಂಶದ ಭುಮನ್ಯು ಪುತ್ರನಾದ ಅಜಮೀಢ ರಾಜನ ಪತ್ನಿಯರಲ್ಲಿ ಒಬ್ಬಳು. ಈಕೆಯ ಮಗನು ಗಂಗೆಯನ್ನು ಪಾನಮಾಡಿದ ಜಹ್ನು [ಆದಿ. ೧೦೧].

(iii) ಸಗರ ಚಕ್ರವರ್ತಿಯ ಎರಡನೆಯ ಹೆಂಡತಿ. ಈಕೆ ಶಿಬಿ ರಾಜನ ಮಗಳು. ಶೈಬ್ಯಾ, ಭಾನುಮತೀ ಎಂಬುವು ಇವಳ ನಾಮಾಂತರಗಳು. ಅಸಮಂಜನು ಈಕೆಯ ಮಗನು. ನೋಡು—ಅಸಮಂಜ.

(iv) ಒಬ್ಬ ರಾಜ ಪುತ್ರಿ ಈಕೆಯ ಮದುವೆಯ ಸಮಯದಲ್ಲಿ, ಬ್ರಾಹ್ಮಣ ಕ್ಷತ್ರಿಯರಲ್ಲಿ ಯಾರು ಶ್ರೇಷ್ಠರೆಂಬ ವಿಷಯದಲ್ಲಿ ಪ್ರಹ್ಲಾದ ಪುತ್ರನಾದ ವಿರೋಚನ ನಿಗೂ, ಅಂಗಿರಸ್ಸೆಂಬ ಋಷಿಯ ಮಗನಾದ ಸುಧನ್ವನಿಗೂ "ನಾನು ಹೆಚ್ಚು ತಾನು ಹೆಚ್ಚು" ಎಂಬುದಾಗಿ ವಿವಾದ ತೊಡಗಿತು ಇಬ್ಬರೂ ಪ್ರಹ್ಲಾದನಲ್ಲಿಗೆ ಹೋಗಿ ತಮ್ಮ ತಮ್ಮ ಪ್ರಾಣವನ್ನೇ ಪಣವಾಗಿಟ್ಟು, ವ್ಯವಸ್ಥೆಮಾಡ ಹೇಳಿದರು ಪ್ರಹ್ಲಾದನು ಬ್ರಾಹ್ಮಣನೇ ಶ್ರೇಷ್ಠನೆಂದು ನಿರ್ಣಯಿಸಿದನು ಬಳಿಕ ಸುಧನ್ವನು ಪ್ರಹ್ಲಾದನ ನಿಷ್ಪಕ್ಷಪಾತ ಬುದ್ಧಿಗೆ ಮೆಚ್ಚಿ ಆತನ ಮಗನ ಪ್ರಾಣವನ್ನು ಉಳಿಸಿದನು ಬಳಿಕ ಕೇಶಿನಿ ಸುಧನ್ವನನ್ನೇ ಮದುವೆಯಾದಳು [ಉದ್ಯೋ ೩೫]

(v) ದಮಯಂತಿಯ ಸಖಿ ವಿದರ್ಭ ದೇಶಾಧಿಪನಾದ ಭೀಮ ರಾಜನು ಇವಳನ್ನು ದಮಯಂತಿಗೆ ಬಳುವಳಿಯಾಗಿ ಕೊಟ್ಟಿದ್ದನು ದಮಯಂತಿಗೆ ಎರಡ ನೆಯ ಬಾರಿ, ಸ್ವಯಂವರವೆಂಬ ಸುದ್ದಿಯನ್ನು ಹರಡಿಸಿದಾಗ, ನಳನು ಋತುಪರ್ಣನ ಸಂಗಡ ಸ್ವಯಂವರಕ್ಕೆ ಹೋಗಿದ್ದಾಗ, ಕೇಶಿನಿ ನಳನನ್ನು ಗುರುತಿಸಿ, ದಮ ಯಂತಿಯ ಮೂಲಕ ಭೀಮ ರಾಜನಿಗೆ ತಿಳಿಸಿದಳು [ಭಾರ -ವನ ೭೨]

(vi) ಒಬ್ಬ ಅಪ್ಸರಸಿ ದಕ್ಷ ಪುತ್ರಿಯಾದ ಪ್ರಾಧೆಯಲ್ಲಿ ಕಶ್ಯಪನಿಂದ ಜನಿಸಿದವಳು ಊರ್ವಶಿ, ಮೇನಕೆ, ಘೃತಾಚೀ, ಚಿತ್ರಸೇನಾ, ಮಿಶ್ರಕೇಶೀ ಮುಂತಾದ ೩೧ ಮಂದಿ ಇವಳ ಒಡಹುಟ್ಟಿದವರು [ಭಾರ.-ಆ ೬೬].

**ಕೇಸರಿ**—ಒಬ್ಬ ವಾನರ ಅಂಜನೆಯ ಗಂಡ ಗೋಕರ್ಣ ಕ್ಷೇತ್ರದ ಬಳಿ ವಾಸವಾಗಿದ್ದನು. ಶಂಬಸಾದನನೆಂಬ ರಾಕ್ಷಸನು ಮಹಾ ಬಲಾಢ್ಯನಾಗಿದ್ದು, ಋಷಿ ಗಳನ್ನು ಬಹಳವಾಗಿ ಪೀಡಿಸುತ್ತಿರುವಲ್ಲಿ, ಕೇಸರಿ ಆ ಋಷಿಗಳ ಅಪ್ಪಣೆಯ ಮೇರೆಗೆ ಶಂಬಸಾದನನ ಸಂಗಡ ಯುದ್ಧಮಾಡಿ ಅವನನ್ನು ಕೊಂದನು ಬಳಿಕ ಸಂತುಷ್ಟರಾದ ಮುನಿಪುಂಗವರು "ನಿನಗೆ ಸಕಲಶಾಸ್ತ್ರ ಪಾರಂಗತನೂ, ಕಾಮಚಾರಿಯೂ, ಬಲಾಧಿಕನೂ, ಬ್ರಹ್ಮನಿಷ್ಠನೂ ಆದ ಮಗನು ಜನಿಸುವನು" ಎಂಬುದಾಗಿ ವರ ವಿತ್ತರು ಬಳಿಕ ಹನೂಮಂತನು ಅಂಜನೆಯಲ್ಲಿ ಜನಿಸಿದನು [ರಾಮಾ -ಸುಂ. ೩೫ ಭಾರ -ವನ ೧೪೯]

**ಕೈಕಯಿ**—ಕೇಕಯ ದೇಶದ ಅರಸನಾದ ಅಶ್ವಪತಿ ರಾಜನ ಮಗಳು. ದಶ ರಥನ ಪತ್ನಿಯರಲ್ಲಿ ಕಿರಿಯವಳು ಭರತನ ಜನನಿ [ಭಾರ -ವನ ೨೭೪, ದೇ. ಭಾ -೩, ೨೮]. ದಶರಥನು ರಾಮನನ್ನು ಯೌವರಾಜ್ಯದಲ್ಲಿ ಪ್ರತಿಷ್ಠೆಗೊಳಿಸ ಬೇಕೆಂದು ನಿಶ್ಚಯಿಸಿ, ಸಕಲ ಸಂಭಾರಗಳನ್ನೂ ಸಿದ್ಧಪಡಿಸಿ, ಈಕೆಯ ಬಳಿಗೆ ಹೋದನು ಅದಕ್ಕೆ ಸ್ವಲ್ಪ ಮುಂಚಿತವಾಗಿ ತನ್ನ ದಾಸಿಯಾದ ಮಂಥರೆಯಿಂದ ಬೋಧಿತಳಾದ ಕೈಕಯಿ ಕ್ರೋಧಾಗಾರವನ್ನು ಹೊಕ್ಕು, ನೆಲದ ಮೇಲೆ ಮಲಗಿ

ದ್ದಳು ದಶರಥನು ಅವಳನ್ನು ಅಂತಃಪುರದಲ್ಲಿ ಕಾಣದೆ, ದಾಸಿಯರ ಮೂಲಕ ಸಮಾಚಾರವನ್ನು ತಿಳಿದು, ಕ್ರೋಧಾಗಾರವನ್ನು ಹೊಕ್ಕು, ತನ್ನ ಪ್ರೇಯಸಿಯ ಅವಸ್ಥೆಯನ್ನು ನೋಡಿ ಕಾರಣವೇನೆಂದು ಎಷ್ಟು ಬಗೆಯಿಂದ ಕೇಳಿದರೂ ಈಕೆ ಮಾತನಾಡದಿರಲು, ದಶರಥನು ರಾಮನ ಮೇಲೆ ಆಣೆಯಿಟ್ಟು, ತಾನು ಆಕೆಯ ಇಷ್ಟಾರ್ಥವನ್ನು ನೆರವೇರಿಸಿಕೊಡುವುದಾಗಿ ವಾಗ್ದಾನ ಮಾಡಿದನು

ಹಿಂದೊಮ್ಮೆ ಕೈಕಯಿ ದಶರಥನೊಂದಿಗೆ ಯುದ್ಧಕ್ಕೆ ಹೋಗಿದ್ದಾಗ, ಆತನು ಅಪಾಯಕ್ಕೆ ಗುರಿಯಾಗಿದ್ದಾಗ ದಶರಥನ ಪ್ರಾಣಗಳನ್ನು ಉಳಿಸಿದ್ದಳು ಆಗ ದಶರಥನು ಈಕೆಗೆ ಎರಡು ವರಗಳನ್ನು ಕೊಟ್ಟನು ಈಕೆ ಅವುಗಳನ್ನು ದಶರಥನಲ್ಲಿಯೇ ನ್ಯಾಸವಾಗಿರಿಸಿ, ತನಗೆ ಆವಶ್ಯಕತೆ ಬಂದಾಗ ಕೇಳುವಂತೆ ಹೇಳಿದ್ದಳು ಈಗ ಅದಕ್ಕೆ ಸಮಯವೆಂದರಿತು, ಆ ಎರಡು ವರಗಳಲ್ಲಿ ಒಂದರಿಂದ ರಾಮನು ೧೪ ವರ್ಷಗಳವರೆಗೆ ಅರಣ್ಯವಾಸಕ್ಕೆ ಹೋಗಬೇಕೆಂತಲೂ, ಮತ್ತೊಂದು ವರದಿಂದ ಭರತನನ್ನು ಯುವರಾಜ ಪದವಿಯಲ್ಲಿ ಪ್ರತಿಷ್ಠೆಗೊಳಿಸಬೇಕೆಂತಲೂ ಕೇಳಿಕೊಂಡಳು ದಶರಥನು ವಜ್ರಾಹತನಂತೆ ಮೂರ್ಛೆ ಬಿದ್ದು, ಬಹು ಕಷ್ಟದಿಂದ ಚೇತರಿಸಿಕೊಂಡು, ತನ್ನ ಪ್ರೇಯಸಿಯನ್ನು ಎಷ್ಟೋ ಬಗೆಯಿಂದ ಬೇಡಿಕೊಂಡನು ಎಲ್ಲವೂ ವ್ಯರ್ಥವಾಯಿತು ಬಳಿಕ ರಾಮನು ಅಲ್ಲಿಗೆ ಬಂದು ನಡೆದ ವೃತ್ತಾಂತವನ್ನೆಲ್ಲ ಕೇಳಿ, ಎದೆಗುಂದದೆ ಆಕೆಯ ಇಷ್ಟವನ್ನು ನೆರವೇರಿಸುವ ಸಲುವಾಗಿ, ಸೀತಾ ಲಕ್ಷ್ಮಣರನ್ನು ಸಂಗಡ ಕರೆದುಕೊಂಡು, ತಾಪಸ ವೇಷದಿಂದ ಅರಣ್ಯಕ್ಕೆ ಹೋದನು [ಅಯೋಧ್ಯಾ. ೪೦, ೪೪ ಭಾರ -ವನ. ೨೭೭]

(ii) ಮತ್ಸ್ಯ ದೇಶಾಧಿಪತಿಯಾದ ವಿರಾಟನ ರಾಣಿಯಾದ ಸುದೇಷ್ಣೆಯೂ ಕೇಕಯ ರಾಜಪುತ್ರಿಯಾದುದರಿಂದ ಆಕೆಗೂ ಈ ಹೆಸರು ಸಲ್ಲುತ್ತದೆ [ವಿರಾ ೧೪]. ನೋಡು—ಕೇಕಯ

(iii) ಶಿಬಿ ದೇಶದ ಅರಸನಾದ ಸೃಂಜಯನ ಹೆಂಡತಿ ನೋಡು—ಸೃಂಜಯ [ದೇ ಭಾ -೬, ೨೭ ಶಾಂತಿ ೩೦]

**ಕೈಕಸಿ.**—ಸುಮಾಲಿಯೆಂಬ ರಾಕ್ಷಸನ ಮಗಳು ಸುಕೇಶಿಯ ಮಕ್ಕಳಾದ ಮಾಲಿ, ಮಾಲ್ಯವಂತ, ಸುಮಾಲಿಗಳೆಂಬ ಮೂವರೂ ಬ್ರಹ್ಮಕುಲ ಸಂಭೂತರು. ಇವರು ತೀವ್ರ ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ, ಅನೇಕ ವರಗಳನ್ನು ಪಡೆದು, ವಿಶ್ವಕರ್ಮನ ಮೂಲಕ ಸಕಲ ಸಂಪತ್ತುಗಳಿಂದೊಪ್ಪುವ, ಅತಿ ಸುಂದರವಾದ ಲಂಕಾ ಪಟ್ಟಣವನ್ನು ನಿರ್ಮಿಸಿ, ಅದರಲ್ಲಿ ದಿವ್ಯ ಭೋಗಗಳನ್ನು ಅನುಭವಿಸುತ್ತ ಸುಖದಿಂದಿದ್ದರು. ಒಂದು ದಿನ ಸುಮಾಲಿ ತನ್ನ ಮಗಳಾದ ಕೈಕಸಿಯನ್ನು ರಥದಲ್ಲಿ

ಕುಳ್ಳಿರಿಸಿಕೊಂಡು ವಿಶ್ರವಸನೆಂಬ ಮಹರ್ಷಿಯ ಆಶ್ರಮಕ್ಕೆ ಕರೆತಂದು "ನೀನು ಈತನನ್ನು ಶುಶ್ರೂಷೆ ಮಾಡಿಕೊಂಡಿರು ಈತನೇ ನಿನಗೆ ಪತಿಯಾಗತಕ್ಕವನು" ಎಂದು ಹೇಳಿ ತೆರಳಿದನು. ಕೈಕಸಿ ಅಂತೆಯೇ ಇದ್ದಳು. ಒಂದು ದಿನ ಸಂಧ್ಯಾ ಸಮಯದಲ್ಲಿ ಬಹಿರ್ಮುಖನಾದ ವಿಶ್ರವಸನು "ನೀನು ಯಾರು ? ಯಾವ ಕಾರಣ ಇಲ್ಲಿ ಪರಿಚರ್ಯೆ ಮಾಡುತ್ತಿರುತ್ತೀಯೆ" ಎಂದು ಕೇಳಿದನು. ಆಗ ಕೈಕಸಿ ತನ್ನವೃತ್ತಾಂತ ವನ್ನೆಲ್ಲ ಅರುಹಿ, "ತಮ್ಮನ್ನು ಮದುವೆಯಾಗಿ ಪುತ್ರಸಂತಾನವನ್ನು ಪಡೆಯುವ ಆಸೆಯಿಂದ ಇಲ್ಲಿ ತಮ್ಮ ಸೇವೆಯನ್ನು ಮಾಡುತ್ತಿದ್ದೇನೆ" ಎಂದಳು ವಿಶ್ರವಸನು ಚಿಂತಾಭರಿತನಾಗಿ "ದೈವವಿಲಾಸವನ್ನು ಮೀರುವುದು ಯಾರಿಗೂ ತರವಲ್ಲ ಸಂಧ್ಯಾ ಸಮಯದಲ್ಲಿ ನೀನು ಪುತ್ರಸಂತಾನ ವಿಷಯವಾಗಿ ಪ್ರಸ್ತಾವಿಸಿರುವೆ ಆದರಿಂದ ನಿನ್ನ ಹೊಟ್ಟೆಯಲ್ಲಿ ಹುಟ್ಟುವರೆಲ್ಲರೂ ರಾಕ್ಷಸರಾಗುವರು. ಇದಕ್ಕಾಗಿ ಇನ್ನು ಚಿಂತಿಸಿ ಫಲವಿಲ್ಲ" ಎಂದನು ಅದಕ್ಕೆ ತಕ್ಕಂತೆಯೇ ರಾವಣ, ಕುಂಭಕರ್ಣ, ವಿಭೀಷಣರೂ, ಶೂರ್ಪಣಖೆಯೂ ಜನಿಸಿದರು ಕುಬೇರನು ಈಕೆಯ ಸವತಿಯ ಮಗನು [ರಾಮಾ - ಉತ್ತ ೪, ೮]. ರಾವಣನು ವಿಶ್ರವಸನಿಂದ ಪುಷ್ಪೋತ್ಕಟೆಯಲ್ಲಿ ಜನಿಸಿದವನು. ಕುಂಭಕರ್ಣನೂ ಇವನೂ ಒಬ್ಬ ತಾಯಮಕ್ಕಳು. ವಿಭೀಷಣನು ಮಾಲಿನಿಯೆಂಬವಳಲ್ಲಿ ಜನಿಸಿದವನು ಶೂರ್ಪಣಖೆಯು ರಾಕೆಯೆಂಬವಳ ಮಗಳು [ಭಾರ -ವನ ೨೭೬].

**ಕೈಟಭ**.—ಒಬ್ಬ ರಾಕ್ಷಸ ವಿಷ್ಣುವಿನ ಕರ್ಣಮಲ ಸಂಭೂತನು ಮಧುವೆಂಬವನು ಇವನ ಅಣ್ಣ ಕಲ್ಪಾದಿಯಲ್ಲಿ ವಿಷ್ಣು ವಟಪತ್ರಶಾಯಿಯಾಗಿ ಮಲಗಿದ್ದಾಗ ಆತನ ಕಿವಿಯ ಮಲದಿಂದ ಮಧು ಕೈಟಭರೆಂಬ ಇಬ್ಬರು ರಾಕ್ಷಸರು ಜನಿಸಿ, ನಾಭಿ ಕಮಲದಲ್ಲಿದ್ದ ಚತುರ್ಮುಖನನ್ನು ಪೀಡಿಸತೊಡಗಿದರು. ಚತುರ್ಮುಖನು ವಿಷ್ಣುವನ್ನು ಹೊಗಳಲಾಗಿ, ಎಚ್ಚತ್ತ ವಿಷ್ಣು ಚತುರ್ಮುಖನಿಗೆ ಅಭಯವಿತ್ತು ಮಧು ಕೈಟಭರ ಸಂಗಡ ಯುದ್ಧಮಾಡತೊಡಗಿದನು ಮಧು ಕೈಟಭರು ಎಷ್ಟು ಮಾತ್ರಕ್ಕೂ ಜಗ್ಗಲಿಲ್ಲ. ಆಗ ವಿಷ್ಣು ಪರಾಶಕ್ತಿಯನ್ನು ಹೊಗಳಿ, ಆಕೆಯ ವರಪ್ರಭಾವದಿಂದ ಮರಳಿ ಅವರ ಸಂಗಡ ಯುದ್ಧಮಾಡುತ್ತಿರುವಲ್ಲಿ ಆ ರಕ್ಕಸರಿಬ್ಬರೂ "ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿದೆವು ಬೇಕಾದ ವರವನ್ನು ಬೇಡು" ಎಂದರು ಆಗ ವಿಷ್ಣು "ನಿಮಗೆ ಬೇರೆ ಮತ್ತೇನು ವರವೂ ಬೇಡ. ನೀವು ನನ್ನಿಂದ ವಧ್ಯರಾಗುವ ವರ ವನ್ನು ಕೊಡಿ" ಎಂದನು ಮೋಸಹೋದ ಮಧು ಕೈಟಭರು ಎಲ್ಲೆಲ್ಲಿಯೂ ಜಲವೇ ಆವರಿಸಿಕೊಂಡಿದ್ದುದರಿಂದ "ಎಲ್ಲಿ ಭೂಮಿಯನ್ನು ನೀರು ಆವರಿಸಿ ಕೊಂಡಿಲ್ಲವೋ ಅಲ್ಲಿ ಸಂಹರಿಸು" ಎಂದರು ಆಗ ವಿಷ್ಣು ಅವರಿಬ್ಬರನ್ನೂ ತನ್ನ ತೊಡೆಯ ಮೇಲೆಯೇ ಕೊಂದನು [ಶಿವಪು.-ಉಮಾಖಂ. ೪೪. ದೇ.ಭಾ -೧, ೪, ೯. ಭಾರ.-ವನ. ೨೦೬. ಮಾರ್ಕ.-೭೮. ಕಾಳಿಕಾ.-೬೧].

**ಕೈಲಾಸ** —ಹಿಮವತ್ಪರ್ವತದ ಶಿಖರಗಳಲ್ಲಿ ಉತ್ತರ ಭಾಗದಲ್ಲಿರುವ ಒಂದು ಪ್ರದೇಶಕ್ಕೆ ಕೈಲಾಸ ಪರ್ವತವೆಂದು ಹೆಸರು ಇದನ್ನೇ ರಜತಾದ್ರಿಯೆಂತಲೂ ಹೇಳುತ್ತಾರೆ ಪರಮೇಶ್ವರನ ವಾಸಸ್ಥಾನ [ಭಾರ -ಭೀ ೬] ಪಾಂಡವರು ತಮ್ಮ ಅರಣ್ಯವಾಸ ಸಮಯದಲ್ಲಿ ತೀರ್ಥಯಾತ್ರೆಗೆ ಹೋಗಿದ್ದಾಗ, ಇಲ್ಲಿಗೂ ಬಂದಿದ್ದರು [ವನ ೧೪೧] ಶ್ರೀ ಕೃಷ್ಣನು ಪುತ್ರಾರ್ಥವಾಗಿ ಈ ಪರ್ವತದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿದನು [ಶಿವ -ಉಮಾ ೧ ಅನು ೨೦೩] ಮಹಾಭಾರತ ಯುದ್ಧದ ಸಂದರ್ಭದಲ್ಲಿ ಕೃಷ್ಣಾರ್ಜುನರಿಬ್ಬರೂ ಇಲ್ಲಿಗೆ ಬಂದಿದ್ದರು [ಭಾರ -ದ್ರೋ ೮೦] ಹೇಮಕೂಟ ಪರ್ವತದ ಒಂದು ತುದಿ ಭಾಗಕ್ಕೂ ಕೈಲಾಸ ವೆಂದು ಹೆಸರು ಕುಬೇರನ ರಾಜಧಾನಿಯಾದ ಅಲಕಾ ಪಟ್ಟಣ ಇದೇ ಶಿಖರ ದಲ್ಲಿದೆ [ಆದಿ ೭೯ ವನ ೧೬೩]

**ಕೈಶಿಕ** —ಒಬ್ಬ ಅರಸು ಯದು ವಂಶದ ಜ್ಯಾಮಘ ರಾಜನ ಮಗನಾದ ವಿದರ್ಭನ ನಾಲ್ವರು ಮಕ್ಕಳಲ್ಲಿ ಒಬ್ಬನು ಈತನ ಮಗನೇ ಚಿದಿಯೆಂಬ ಅರಸು. ಈ ಚಿದಿ ರಾಜನೇ ಚೇದಿ ದೇಶವನ್ನು ಸ್ಥಾಪಿಸಿದವನು, ಮತ್ತು ಶಿಶುಪಾಲನ ವಂಶದ ಮೂಲ ಪುರುಷನು [ಭಾಗ ೭, ೧]

**ಕೊಙ್ಕಣ.**—ಭಾರತ ವರ್ಷದೊಳಗಣ ಒಂದು ದೇಶ [ಭೀಷ್ಮ ೯] ಪರಶು ರಾಮನು ಯಜ್ಞಮಾಡಿ ಭೂ ಮಂಡಲವನ್ನೆಲ್ಲ ಕಶ್ಯಪ ಮುನಿಗೆ ದಾನಮಾಡಿದನು. ಬಳಿಕ ಕಶ್ಯಪ ಮುನಿ ತನಗೆ ದಾನ ಕೊಟ್ಟ ಭೂಮಿಯಲ್ಲಿ ಪರಶುರಾಮನು ವಾಸ ಮಾಡಕೂಡದೆಂದು ಹೇಳಿದನು ಆಗ ಪರಶುರಾಮನು ಸಮುದ್ರ ರಾಜನ ಮೂಲಕ ಹೊಸದಾಗಿ ಸ್ವಲ್ಪ ಭೂ ಭಾಗವನ್ನು ಬಿಡಿಸಿಕೊಂಡನು ಇದಕ್ಕೆ ಶೂರ್ಪಾರಕ ವೆಂತಲೂ ಕೊಂಕಣವೆಂತಲೂ ಹೆಸರು ಈ ಪ್ರದೇಶ ಬೊಂಬಾಯಿಯಿಂದ, ಪೂರ್ವಕ್ಕೆ ಸಹ್ಯಾದ್ರಿ, ಪಶ್ಚಿಮಕ್ಕೆ ಸಮುದ್ರ, ಉತ್ತರದಲ್ಲಿ ಗುಜರಾತು, ದಕ್ಷಿಣದಲ್ಲಿ ಹೈಗ (ಗೋಕರ್ಣ) ಇವುಗಳ ನಡುವೆ ಇದೆ [ಶಾಂತಿ ೪೯]

**ಕೊಲ್ಹಾಪುರ** —ಭರತ ಖಂಡದಲ್ಲಿ ಸುಪ್ರಸಿದ್ಧವಾದ ೧೮ ಶಕ್ತಿ ಪೀಠಗಳಲ್ಲಿ ಒಂದು ಇಲ್ಲಿರುವ ದೇವಿಗೆ ಮಹಾಲಕ್ಷ್ಮಿಯೆಂದು ಹೆಸರು. ಇದನ್ನೇ ಕರವೀರ ಕ್ಷೇತ್ರವೆಂತಲೂ ಹೇಳುತ್ತಾರೆ ಇಲ್ಲಿ ಒಂದು ಸ್ಮಾರ್ತಸಂಪ್ರದಾಯ ಮಠವಿದೆ. ಈ ಪೀಠಕ್ಕೆ ಕರವೀರ ಪೀಠವೆಂತಲೇ ಹಸರು [ದೇ ಭಾ.-೭, ೩೮]

**ಕೋಟರಾ** —ಬಲಿ ಚಕ್ರವರ್ತಿಯ ಎರಡನೆಯ ಹೆಂಡತಿ. ಬಾಣಾಸುರನ ಜನನಿ [ಭಾಗ -೧೦, ೬೩].

**ಕೋಟಿಕ.**—ಒಬ್ಬ ಅರಸು. ಶಿಬಿ ವಂಶದ ಸುರಥನೆಂಬ ರಾಜನ ಮಗನು. ಸಿಂಧು ದೇಶದ ಅರಸನಾದ ಸೈಂಧವ(ಜಯದ್ರಥ)ನ ಆಪ್ತ ಸ್ನೇಹಿತನು. ಪಾಂಡವರು

ಅರಣ್ಯವಾಸ ಮಾಡುತ್ತಿದ್ದಾಗ, ಹೇಗಾದರೂ ದ್ರೌಪದಿಯನ್ನು ಒಲಿಸಿಕೊಳ್ಳುವ ಹಾಗೆ ಇವನು ಜಯದ್ರಥನಿಗೆ ಪ್ರೇರಿಸಿದನು. ಜಯದ್ರಥನು ದ್ರೌಪದಿಯನ್ನು ಕೆಣಕಲಾಗಿ ಭೀಮನು ಜಯದ್ರಥನ ಮೇಲೆ ಬಿದ್ದನು ಆಗ ಇವನು ಜಯದ್ರಥನಿಗೆ ಸಹಾಯ ಮಾಡಲು ಹೋಗಿ, ಭೀಮನಿಂದ ಹತನಾದನು ಇವನಿಗೆ ಕೋಟಿಕಾಸ್ಯ ನೆಂಬುದು ನಾಮಾಂತರ [ವನ ೨೬೬, ೨೭೨].

**ಕೋಟಿತೀರ್ಥ** —ಒಂದು ಪವಿತ್ರವಾದ ಸರೋವರ. ಬಂದೇಲು ಖಂಡದ ಜಿಲ್ಲೆಯಲ್ಲಿ ಕಾಲಿಂಜರವೆಂಬ ಗ್ರಾಮದಲ್ಲಿದೆ [ವನ ೮೦, ೮೧, ೮೨, ೮೩] ಗೋಕರ್ಣ ದಲ್ಲಿಯೂ, ಉತ್ತರ ಮಥುರೆಯಲ್ಲಿಯೂ, ರಾಮೇಶ್ವರದಲ್ಲಿಯೂ ಇದೇ ಹೆಸರಿನ ಪುಣ್ಯತೀರ್ಥಗಳು ಹೆಸರುಗೊಂಡಿವೆ

**ಕೋಪ.**—ಸಿಟ್ಟು ಇದರ ಪರಿಣಾಮ ಮತ್ತು ಸ್ವರೂಪ, ಕೋಪದ ನಿಂದೆ [ಆದಿ -೪೨, ೭೩, ವನ ೨೯ ಅನು ೧೩]

**ಕೋಲಾಹಲ** —ಒಂದು ಪರ್ವತ ಮಧ್ಯ ಹಿಂದೂಸ್ಥಾನದಲ್ಲಿ ಮಾಳವ ದೇಶಕ್ಕೂ ಬಂದೇಲ ಖಂಡಕ್ಕೂ ನಡುವೆ ಇರುವ ಪರ್ವತ ಶ್ರೇಣಿ [ಆದಿ ೬೪].

**ಕೋಸಲ** —ಭರತ ಖಂಡದ ಒಂದು ದೇಶ ಅಯೋಧ್ಯೆ ಇದರ ರಾಜಧಾನಿ. ಸೂರ್ಯವಂಶದ ಅರಸರು ಬಹಳ ಕಾಲದಿಂದಲೂ ಇಲ್ಲಿ ರಾಜ್ಯಭಾರ ಮಾಡುತ್ತಿದ್ದರು ಸರಯೂ ನದಿಯ ಉತ್ತರ ಭಾಗದಲ್ಲಿರುವ ಪ್ರದೇಶಕ್ಕೆ ಉತ್ತರ ಕೋಸಲವೆಂತಲೂ, ದಕ್ಷಿಣ ಭಾಗದ ಪ್ರದೇಶಕ್ಕೆ ದಕ್ಷಿಣ ಕೋಸಲವೆಂತಲೂ ಹೆಸರು [ಭೀ ೯]

**ಕೋಹಳ.**—(1) ಒಬ್ಬ ಋಷಿ. ಜನಮೇಜಯನ ಸರ್ಪ ಯಾಗದಲ್ಲಿ ಋತ್ವಿಜ ನಾಗಿದ್ದ [ಆದಿ ೫೩].

(II) ಸಂಗೀತ ಶಾಸ್ತ್ರವನ್ನು ಬರೆದ ಒಬ್ಬ ಮಹರ್ಷಿ

**ಕೌಣ್ಡಿನ್ಯ** —ಒಬ್ಬ ಮಹರ್ಷಿ ವಸಿಷ್ಠ ಮುನಿಯ ಸಂತತಿಯವನು. ಗೋತ್ರ ಪ್ರವರ್ತಕನು [ಸಭಾ ೪] ನೋಡು—ಕುಣ್ಡಿನ

(II) ಯುಧಿಷ್ಠಿರನ ಅಶ್ವಮೇಧ ಯಾಗದಲ್ಲಿ ಸದಸ್ಯನಾಗಿದ್ದ ಒಬ್ಬ ಮಹರ್ಷಿ [ಜೈ ಭಾ -೬೩].

**ಕೌತ್ಸ.**—ಭೃಗು ವಂಶದ ಒಬ್ಬ ಬ್ರಹ್ಮರ್ಷಿ. ಈತನು ಭಗೀರಥ ರಾಜನ ಮಗಳಾದ ಹಂಸಿಯೆಂಬವಳನ್ನು ಮದುವೆಯಾಗಿದ್ದನು [ಅನು ೨೦೦]

**ಕೌಮೋದಕೀ** —ವಿಷ್ಣುವಿನ ಗದೆಯ ಹೆಸರು ಖಾಂಡವ ವನವನ್ನು ಸುಟ್ಟ ಸಮಯದಲ್ಲಿ ಅಗ್ನಿ ಶ್ರೀ ಕೃಷ್ಣನ ವಿಷಯದಲ್ಲಿ ಪ್ರಸನ್ನನಾಗಿ ವರುಣನಿಂದ ಈ ಗದೆ ಯನ್ನು ಕೃಷ್ಣನಿಗೆ ಕೊಡಿಸಿದನು [ಆದಿ. ೨೫೧].

**ಕೌರವ್ಯ** —ಸರ್ಪ ರಾಜನು ಐರಾವತನೆಂಬ ನಾಗರಾಜನ ವಂಶದವನು. ಇವನ ಸಂತತಿಯು ಹತ್ತು ಮನೆತನದವರು ಜನಮೇಜಯನ ಸರ್ಪಯಾಗದಲ್ಲಿ ಸುಟ್ಟುಹೋದರು. ಅರ್ಜುನನ ಹೆಂಡತಿಯರಲ್ಲಿ ಒಬ್ಬಳಾದ ಉಲೂಪಿ ಈತನ ಮಗಳು [ಆದಿ ೨೩೪, ೨೩೫] ಒಮ್ಮೆ ಉಲೂಪಿ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾಗ ಅಲ್ಲಿ ನೆರೆದಿದ್ದ ವಸುಗಳು ತಮ್ಮ ಅಣ್ಣನಾದ ಭೀಷ್ಮಾಚಾರ್ಯನನ್ನು ಶಿಖಂಡಿಯ ಮೂಲಕ ಕೊಲ್ಲಿಸಿದ ಅರ್ಜುನನಿಗೆ ನರಕಪ್ರಾಪ್ತಿಯಾಗುವಂತೆ ಶಾಪವಿತ್ತುದನ್ನು ಕೇಳಿದಳು ಒಡನೆಯೇ ಆ ಸಮಾಚಾರವನ್ನು ತನ್ನ ತಂದೆಗೆ ತಿಳುಹಿದಳು ಕೌರವ್ಯನು ಕೂಡಲೇ ವಸುಗಳ ಬಳಿಗೆ ಹೋಗಿ ತನ್ನ ಅಳಿಯನಿಗೆ ನರಕಪ್ರಾಪ್ತಿಯಾಗದಿರುವಂತೆ ಬೇಡಿಕೊಂಡನು "ಅರ್ಜುನನು ತನ್ನ ಮಗನೊಂದಿಗೆ ಯುದ್ಧ ಮಾಡಿ ಸೋತರೆ ಆ ಪಾಪವು ತೊಲಗುವುದು" ಎಂದು ವಸುಗಳು ಹೇಳಲಾಗಿ, ಕೌರವ್ಯನು ಈ ಸಮಾಚಾರವನ್ನು ತನ್ನ ಮಗಳಿಗೆ ಹೇಳಿದನು ಯುಧಿಷ್ಠಿರನ ಅಶ್ವಮೇಧ ಸಮಯದಲ್ಲಿ ಅರ್ಜುನನು, ಕುದುರೆಯನ್ನು ಹಿಂಬಾಲಿಸಿ ಬರಲಾಗಿ, ಉಲೂಪಿ ಬಭ್ರುವಾಹನನ ಮೂಲಕ ಕುದುರೆಯನ್ನು ಕಟ್ಟಿಸಿ, ಅರ್ಜುನನೊಂದಿಗೆ ಯುದ್ಧ ಮಾಡಿಸಿದಳು ಆಗ ಬಭ್ರುವಾಹನನ ಮೂಲಕ ಅರ್ಜುನನು ಹತನಾಗಲು, ಉಲೂಪಿ ಕೌರವ್ಯನ ಸಹಾಯದಿಂದ ನಾಗಲೋಕದಲ್ಲಿದ್ದ ಸಂಜೀವಕರತ್ನವನ್ನು ತಂದು ಅರ್ಜುನನನ್ನು ಬದುಕಿಸಿದಳು ನೋಡು—ಅರ್ಜುನ, ಉಲೂಪಿ [ಅಶ್ವ. ೮೧ ಜೈ ಭಾರ -೨೧, ೪೦]

**ಕೌಶಿಕ** —(1) ವೇದಾಧ್ಯಯನ ಸಂಪನ್ನನಾದ ಒಬ್ಬ ಬ್ರಾಹ್ಮಣ ಈತನು ಕಾಡಿನಲ್ಲಿ ಒಂದು ಮರದ ಅಡಿಯಲ್ಲಿ ಕುಳಿತು ಧ್ಯಾನಾಸಕ್ತನಾಗಿರುವಲ್ಲಿ ಅದೇ ಮರದ ಮೇಲಿದ್ದ ಒಂದು ಕೊಕ್ಕರೆ ಇವನ ತಲೆಯ ಮೇಲೆ ಹೇಸಿಗೆ ಮಾಡಿತು. ಬ್ರಾಹ್ಮಣನು ಬಹಿರ್ಮುಖನಾದ ಕೂಡಲೇ ಆ ಕೊಕ್ಕರೆಯನ್ನು ನೋಡಲಾಗಿ ಆ ಕೊಕ್ಕರೆ ಸುಟ್ಟು ಬೂದಿಯಾಯಿತು ಕೌಶಿಕನಿಗೆ ತನ್ನ ತಪಸ್ಸು ಸಿದ್ಧಿಯಾಯಿತೆಂಬ ಹೆಮ್ಮೆ ಮಿತಿಮೀರಿತು ಬಳಿಕ ಈತನು ಭಿಕ್ಷಾರ್ಥವಾಗಿ ಒಂದು ಗ್ರಾಮವನ್ನು ಹೊಕ್ಕು, ಒಬ್ಬ ಬ್ರಾಹ್ಮಣನ ಮನೆಯ ಬಾಗಿಲಲ್ಲಿ ನಿಂತು ಭಿಕ್ಷೆಯನ್ನು ಬೇಡಿದನು ಆ ಮನೆಯ ಗೃಹಿಣಿ ಅದೇ ಸಮಯದಲ್ಲಿ ತನ್ನ ಗಂಡನಿಗೆ ಬಡಿಸುತ್ತಿದ್ದ ಕಾರಣ, ಸ್ವಲ್ಪ ತಡಮಾಡಿ ಭಿಕ್ಷೆಯನ್ನು ತಂದಳು ಕೌಶಿಕನು ದುರದುರನೆ ಆಕೆಯನ್ನು ನೋಡಿದನು ಆ ಗೃಹಿಣಿ "ಅಯ್ಯಾ! ನಿನ್ನ ಸಿಟ್ಟಿಗೆ ಗುರಿಯಾಗುವುದಕ್ಕೆ ನಾನು ಕೊಕ್ಕರೆಯಲ್ಲ" ಎಂದಳು. ಕೌಶಿಕನು ಲಜ್ಜೆಯಿಂದಲೂ ಆಶ್ಚರ್ಯದಿಂದಲೂ ಆಕೆಗೆ ಅಡ್ಡಬಿದ್ದು, "ತಾಯೆ! ಈಗತಾನೇ ಅರಣ್ಯದಲ್ಲಿ ನಡೆದ ಈ ಸಂಗತಿ ನಿನಗೆ ತಿಳಿದ ಬಗೆ ಯಾವುದು? ಅದನ್ನು ನನಗೆ ಉಪದೇಶಮಾಡಿ

ಅನುಗ್ರಹಿಸು" ಎಂದು ಬೇಡಿದನು. ಆ ಪತಿವ್ರತೆ ಆತನಿಗೆ ಕೆಲವು ಧರ್ಮ ರಹಸ್ಯಗಳನ್ನು ಉಪದೇಶಿಸಿ, "ಇನ್ನೂ ಹೆಚ್ಚಾಗಿ ತಿಳಿಯಬೇಕೆಂಬ ಕುತೂಹಲ ವಿರುವುದಾದರೆ ಮಿಥಿಲಾನಗರ ವಾಸಿಯಾದ ಧರ್ಮವ್ಯಾಧನಲ್ಲಿಗೆ ಹೋಗು" ಎಂಬು ದಾಗಿ ಹೇಳಿದಳು. ಕೌಶಿಕನು ಅಲ್ಲಿಗೆ ಹೋಗಿ ಆತನ ಮೂಲಕ ಅನೇಕ ಧರ್ಮ ತತ್ವಗಳನ್ನು ತಿಳಿದನು [ವನ. ೨೦೯]

(ii) ಸತ್ಯಸಂಧನಾದ ಮತ್ತೊಬ್ಬ ಮಹರ್ಷಿ ಈತನು ತನ್ನ ಆಶ್ರಮದಲ್ಲಿ ತಪೋನಿರತನಾಗಿದ್ದಾಗ, ಕಳ್ಳರ ಬಾಧೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಕೆಲವು ಮಂದಿ ದಾರಿಹೋಕರು ಈತನ ಆಶ್ರಮವನ್ನು ಹೊಕ್ಕು ಅವಿತುಕೊಂಡರು ಕಳ್ಳರು ಹಿಂದಟ್ಟಿ ಬಂದು ಕೇಳಲಾಗಿ ಈ ಮುನಿ ಸುಳ್ಳು ಹೇಳಲೊಲ್ಲದೆ ಆ ಪ್ರಯಾಣಿಕರನ್ನು ಕಳ್ಳರಿಗೆ ತೋರಿದನು. ಬಳಿಕ ಕಳ್ಳರು ಆ ಪ್ರಯಾಣಿಕರನ್ನು ಸುಲಿಗೆ ಮಾಡಿ ಸಂತೋಷದಿಂದ ಹೊರಟುಹೋದರು ಇಂತು ಕೌಶಿಕನು ವಿವೇಚನೆಯಿಲ್ಲದೆ ಸತ್ಯವನ್ನೇ ನುಡಿದು, ನರಕಕ್ಕೆ ಹೋದನು [ಕರ್ಣ ೬೨].

(iii) ಜರಾಸಂಧನ ಸೇನಾಪತಿ [ಭಾರ.-ಸ ೨೨].

(iv) ಕುಶಿಕ ರಾಜನ ವಂಶದಲ್ಲಿ ಜನಿಸಿದವರಿಗೆಲ್ಲ ಈ ಹೆಸರು ಸಲ್ಲುತ್ತದೆ [ರಾಮಾ -ಬಾಲ ೫೫, ೫೬]

(v) ವಿಶ್ವಾಮಿತ್ರನ ವಂಶದ ಒಬ್ಬ ಮಹರ್ಷಿ. ಈತನಿಗೆ ಹೈಮವತಿ ಯೆಂಬ ಹೆಂಡತಿಯಿದ್ದಳು [ಭಾರ -ಉ. ೧೧೬]

**ಕೌಶಿಕೀ**—(i) ಹಿಂದೆ ಶುಂಭ, ನಿಶುಂಭರೆಂಬ ಇಬ್ಬರು ದೈತ್ಯರು ಲೋಕ ಕಂಟಕರಾಗಿರುವಲ್ಲಿ, ದೇವತೆಗಳು ಪಾರ್ವತಿಯನ್ನು ಮರೆಹೊಕ್ಕರು ಆಗ ಪಾರ್ವತಿಯ ದೇಹ ಕೋಶದಿಂದ ಒಂದು ಸ್ತ್ರೀ ವ್ಯಕ್ತಿ ಹೊರಬಂದು, ಸಕಲ ದೇವತೆಗಳಿಂದಲೂ, ಆಯುಧಾದಿಗಳನ್ನು ಪಡೆದು, ಶುಂಭ ನಿಶುಂಭರೊಡನೆ ಹೋರಾಡಿ, ಅವರನ್ನು ಕೊಂದಳು ಇಂತು ಜಗನ್ಮಾತೆಯ ದೇಹ ಕೋಶದಿಂದ ಬಂದ ವ್ಯಕ್ತಿಗೆ ಕೌಶಿಕಿ ಯೆಂದು ಹೆಸರು [ದೇ ಭಾಗ -೫, ೨೩, ೩೧ ಮಾರ್ಕ -೮೨].

(ii) ಒಂದು ನದಿ ' ವಿಶ್ವಾಮಿತ್ರನ ಸೋದರಿಯೂ ಜಮದಗ್ನಿಯ ಜನನಿಯೂ ಆದ ಸತ್ಯವತಿ ನದೀ ರೂಪದಿಂದ ಹರಿಯತೊಡಗಿ ಕೌಶಿಕಿಯೆಂಬ ಹೆಸರನ್ನು ಪಡೆದಳು. ಈ ನದಿ ಹಿಮವತ್ಪ್ರಾಂತದಲ್ಲಿದೆ ಗಂಗೆಗೆ ಉಪ ನದಿ [ರಾಮಾ.-ಬಾಲ. ೩೪, ೩೫]. ಇದು ಬಂಗಾಳ ಕೊಲ್ಲಿಯಲ್ಲಿ ಗಂಗೆಯೊಡನೆ ಸೇರಿ ಸಮುದ್ರಕ್ಕೆ ಬೀಳುವ ಸ್ಥಳವನ್ನು ಕೌಶಿಕೀ ತೀರ್ಥವೆನ್ನುತ್ತಾರೆ [ಭಾರ.-ಆ. ೨೩೫. ವನ. ೮೨, ೧೧೧. ಭೀ. ೯. ಅನು. ೬].

**ಕೌಸಲ್ಯ.**—ಒಬ್ಬ ಅರಸು. ನೋಡು—ಕಾಲಕವೃಕ್ಷೀಯ [ಶಾಂತಿ. ೧೦೪].

**ಕೌಸಲ್ಯಾ.**—(i) ಕೋಸಲ ದೇಶದ ಅರಸನಾದ ಭಾನುಮಂತನೆಂಬ ರಾಜನ ಮಗಳು ದಶರಥನ ಹಿರಿಯ ರಾಣಿ ಶ್ರೀ ರಾಮನ ಜನನಿ ಕೌಸಲ್ಯಾ, ದಶರಥರು ಹಿಂದಣ ಜನ್ಮದಲ್ಲಿ ಅದಿತಿ ಮತ್ತು ಕಶ್ಯಪರು ಈಕೆ ದಶರಥನಿಂದ ರಾಮನನ್ನು ಪಡೆದಳು. ನೋಡು—ದಶರಥ, ರಾಮ ಕಶ್ಯಪ

(ii) ಚಂದ್ರವಂಶದ ಯಯಾತಿ ರಾಜನಿಂದ ಶರ್ಮಿಷ್ಠೆಯಲ್ಲಿ ಜನಿಸಿದ ಪೂರು ರಾಜನ ಹೆಂಡತಿ ಜನಮೇಜಯನೆಂಬವನು ಇವಳ ಮಗನು [ಭಾರ -ಆದಿ ೬೩]

(iii) ಶ್ರೀ ಕೃಷ್ಣನ ತಂದೆಯಾದ ವಸುದೇವನ ಪತ್ನಿಯರಲ್ಲಿ ಒಬ್ಬಳು ಈಕೆ ಕೇಶಿಯೆಂಬ ಒಬ್ಬ ಮಗನನ್ನು ಹೆತ್ತಳು [ಭಾಗ -೧೦, ೮೪ ಹರಿ -೧, ೩೫]

**ಕೌಸವಿ**—ದ್ರುಪದ ರಾಜನ ಹೆಂಡತಿ ಈಕೆಗೆ ಸೌತ್ರಾಮಣಿಯೆಂಬ ನಾಮಾಂತರವೂ ಇದೆ [ಆದಿ ೧೪೯]

**ಕೌಸ್ತುಭ**—ಒಂದು ರತ್ನ ದೇವ ದಾನವರು ಕ್ಷೀರ ಸಮುದ್ರವನ್ನು ಮಥನ ಮಾಡಿದಾಗ ಹೊರಬಂದದ್ದು ವಿಷ್ಣು ಇದನ್ನು ತನ್ನ ಎದೆಯಲ್ಲಿರಿಸಿದನು [ಆದಿ. ೮೦]

**ಕ್ರತು**—(i) ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬನು ಈತನು ಚತುರ್ಮುಖನ ಅಂಗಯ್ಯಿಂದ ಜನಿಸಿದವನು [ಭಾರ -ಆದಿ ೬೬,೬೭ ಸಭಾ ೧೧] ಸೂರ್ಯನ ಅನುಚರರಾದ ವಾಲಖಿಲ್ಯರು ಈತನ ಮಕ್ಕಳು [ಆದಿ ೬೭] ಈತನ ಹೆಂಡತಿ ಕ್ರಿಯೆಯೆಂಬವಳು [ಭಾಗ -೪, ೧] ಮತ್ತು ಸನ್ನತಿಯೆಂಬವಳು [ವಿಷ್ಣು -೧, ೧೦]

(ii) ಶ್ರೀ ಕೃಷ್ಣನಿಂದ ಜಾಂಬವತಿಯಲ್ಲಿ ಜನಿಸಿದವನು ನೋಡು—ಕೃಷ್ಣ

(iii) ಪಾಂಚಾಲ ರಾಜ ಪುತ್ರರಲ್ಲಿ ಒಬ್ಬನು ಭಾರತ ಯುದ್ಧದಲ್ಲಿ ಕರ್ಣನಿಂದ ಹತನಾದನು [ಕರ್ಣ ೫೧]

**ಕ್ರಥ**—(i) ಚಂದ್ರವಂಶದ ವಿದರ್ಭರಾಜನ ನಾಲ್ವರು ಪುತ್ರರಲ್ಲಿ ಒಬ್ಬನು ಈತನ ಮಗನು ಕುಂತಿಭೋಜನು ನೋಡು—ಕುಂತಿಭೋಜ

(ii) ಅಮೃತವನ್ನು ಕಾಪಾಡುವ ಒಬ್ಬ ದೇವನು [ಆದಿ ೩೨]

**ಕ್ರಥಕೈಶಿಕ**—ಒಂದು ದೇಶ ಈಗಣ ಬಿರಾರಿನಲ್ಲಿದೆ ಹಿಂದೆ ವಿದರ್ಭ ದೇಶಕ್ಕೆ ರಾಜಧಾನಿಯಾಗಿದ್ದಿತು [ಸಭಾ ೯]

**ಕ್ರಥನ**—ಕಪಿ ನಾಯಕರಲ್ಲಿ ಒಬ್ಬನು ರಾಮಾಯಣ ಯುದ್ಧದಲ್ಲಿ ಸುಗ್ರೀವನ ಸೇನಾಪತಿಯಾಗಿದ್ದನು [ರಾಮಾ -ಯು. ೨೬, ೨೭]

**ಕ್ರಿಯಾ**—(i) ಸ್ವಾಯಂಭುವ ಮನ್ವಂತರದಲ್ಲಿ ದಕ್ಷಬ್ರಹ್ಮನ ಪುತ್ರಿಯರಲ್ಲಿ ಒಬ್ಬಳು. ಧರ್ಮಪುರುಷನ ಹೆಂಡತಿ. ಯೋಗನೆಂಬವನು ಈಕೆಯ ಮಗನು [ಆದಿ. ೬೭].

(ii) ಕರ್ದಮ ಬ್ರಹ್ಮನ ಒಂಬತ್ತು ಮಂದಿ ಪುತ್ರಿಯರಲ್ಲಿ ಒಬ್ಬಳು. ಕ್ರತು ವಿನ ಹೆಂಡತಿ. ನೋಡು—ಕ್ರತು

**ಕ್ರೋಧ** —(i) ನೋಡು—ಕೋಪ

(ii) ಚತುರ್ಮುಖನ ಭ್ರುಕುಟಿಯಿಂದ ಜನಿಸಿದ ಕ್ರೋಧೆಯೆಂಬವಳ ಮಗನು. ಒಮ್ಮೆ ಜಮದಗ್ನಿ ತನ್ನ ಪಿತೃಕಾರ್ಯಕ್ಕಾಗಿ ಪಾಯಸವನ್ನು ಸಿದ್ಧಗೊಳಿಸುತ್ತಿದ್ದಾಗ ಇವನು ಸರ್ಪರೂಪದಿಂದ ಹೋಗಿ ಜಮದಗ್ನಿಗೆ ತಿಳಿಯದಂತೆ ಅದರಲ್ಲಿ ವಿಷವನ್ನು ಕಾರಿ, ಜಮದಗ್ನಿಯ ಪಿತೃಗಳ ಶಾಪದಿಂದ ಬಹಳ ಕಾಲದವರೆಗೆ ಮುಂಗುಸಿಯಾಗಿದ್ದು ಬಳಿಕ ಶಾಪವನ್ನು ಕಳೆದನು [ಜೈ ಭಾರ -೬೭]

**ಕ್ರೋಧವಶ** – (i) ರಾವಣನ ಮಗನಾದ ಇಂದ್ರಜಿತ್ತಿನ ಆಪ್ತ ಪರಿವಾರದಲ್ಲಿ ಒಬ್ಬನು [ವನ ೨೮೬].

(ii) ಕಶ್ಯಪ ಮುನಿಯಿಂದ ಕ್ರೋಧೆಯೆಂಬವಳಲ್ಲಿ ಜನಿಸಿದ ಕ್ರೂರ ಸ್ವಭಾವದ ರಾಕ್ಷಸರು ಕುಬೇರನ ಉದ್ಯಾನವನವನ್ನು ಕಾಯುತ್ತಿದ್ದು, ಭೀಮಸೇನನು ಸೌಗಂಧಿಕ ಪುಷ್ಪವನ್ನು ತರುವುದಕ್ಕೆ ಹೋಗಿದ್ದಾಗ ಆತನಿಂದ ಹತರಾದರು [ವನ. ೧೫೪, ೧೫೫]

**ಕ್ರೋಧವಶಾ** —ದಕ್ಷಬ್ರಹ್ಮನ ಮಗಳು ಕಶ್ಯಪನ ೧೩ ಮಂದಿ ಹೆಂಡಿರಲ್ಲಿ ಒಬ್ಬಳು ಕ್ರೂರ ಸ್ವಭಾವದ ಮೃಗ ಪಕ್ಷಿಗಳನ್ನು ಹೆತ್ತವಳು ಈಕೆಗೆ ಕ್ರೋಧೆ ಯೆಂಬುದು ನಾಮಾಂತರ [ಆದಿ ೬೬]

**ಕ್ರೋಧಾ** —ಕ್ರೋಧವಶೆಯ ನಾಮಾಂತರ ಈಕೆಗೆ ಮೃಗಿ, ಮೃಗಮಂದಾ, ಹರೀ, ಭದ್ರಮನಾ, ಮಾತಂಗೀ, ಶಾರ್ದೂಲೀ, ಶ್ವೇತಾ, ಸುರಭಿ, ಸುರಸಾ ಎಂಬುದಾಗಿ ಒಂಬತ್ತು ಮಂದಿ ಪುತ್ರಿಯರು [ಆದಿ ೬೮]

**ಕ್ರೋಷ್ಟುಕಿ** —ಒಬ್ಬ ಮಹರ್ಷಿ ಮಾರ್ಕಂಡೇಯ ಮುನಿ ಈತನಿಗೆ ಅನೇಕ ರಹಸ್ಯಗಳನ್ನು ಅರುಹಿದನು [ಮಾರ್ಕ -೪೨]

**ಕ್ರೌಂಚ**.—(i) ಒಂದು ಬೆಟ್ಟ ಹಿಮವಂತನ ಮಗನಾದ ಮೈನಾಕನ ಮಗನು [ಭೀ ೧೨ ಹರಿ -೧, ೧೮]. ದೇವಸೇನಾ ಪತಿಯಾದ ಕುಮಾರಸ್ವಾಮಿ ಇದನ್ನು ಸೀಳಿದ ಕಾರಣ ಕ್ರೌಂಚದಾರಣನೆಂಬ ಹೆಸರನ್ನು ಪಡೆದನು [ಶಲ್ಯ ४೬].

(ii) ಒಂದು ದ್ವೀಪ ಭೂಮಿಯ ಸಪ್ತ ದ್ವೀಪಗಳಲ್ಲಿ ಒಂದು ಇದರ ಸುತ್ತಲೂ ಘೃತ ಸಮುದ್ರ ಸುತ್ತಿಕೊಂಡಿದೆ ಇದರ ವಿಸ್ತೀರ್ಣ ೧೬ ಲಕ್ಷ ಯೋಜನ. ಪ್ರಿಯವ್ರತ ರಾಜನ ಮಗನಾದ ಘೃತಪೃಷ್ಠನೆಂಬವನು ಇಲ್ಲಿ ರಾಜ್ಯ ಭಾರ ಮಾಡುತ್ತಿದ್ದನು ಈ ದ್ವೀಪದಲ್ಲಿ ಕ್ರೌಂಚವೆಂಬ ಅತ್ಯುನ್ನತವಾದ ಒಂದು ಬೆಟ್ಟವಿರುವುದರಿಂದ ಇದಕ್ಕೆ ಕ್ರೌಂಚ ದ್ವೀಪವೆಂದು ಪೆಸರು. ಇದರಲ್ಲಿ ಶುಕ್ಲ,

ವರ್ಧಮಾನ, ಭೋಜನ, ಉಪಬರ್ಹಿಣ, ನಂದ, ನಂದನ, ಸರ್ವತೋಭದ್ರಗಳೆಂಬ ಏಳು ಪರ್ವತಗಳೂ, ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ವೃತ್ತಿರೂಪವತೀ, ಪವಿತ್ರವತೀ, ಶುಕ್ಲಾ ಎಂಬ ಏಳು ಮಹಾ ನದಿಗಳೂ ಇವೆ ಘೃತಪೃಷ್ಠನು ತನ್ನ ಅನಂತರ ಈ ದ್ವೀಪವನ್ನು ಏಳು ಭಾಗ ಮಾಡಿ, ತನ್ನ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟನು. ನೋಡು—ಘೃತಪೃಷ್ಠ [ಶಿವ -ಉಮಾ ೧೮ ವಿಷ್ಣು -೨, ೪. ಭಾಗ -೫, ೨೦. ದೇ.ಭಾಗ -೮, ೧೨]

**ಕ್ರೌಞ್ಚವ್ಯೂಹ** —ಸೇನೆಯನ್ನು ಕೊಂಚೆಹಕ್ಕಿಯ ಆಕಾರದಲ್ಲಿ ನಿಲ್ಲಿಸುವುದು. ಭಾರತ ಯುದ್ಧದ ಎರಡನೆಯ ದಿನದಲ್ಲಿ ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನು ಪಾಂಡವರ ಸೇನೆಯನ್ನು ಈ ಆಕಾರದಲ್ಲಿ ಏರ್ಪಡಿಸಿದ್ದನು [ಭೀಷ್ಮ ೫೦]. ಐದನೆಯ ದಿನದ ಯುದ್ಧದಲ್ಲಿ ಕುರು ಸೇನೆಯನ್ನು ಈ ರೀತಿ ನಿಲ್ಲಿಸಿದ್ದರು [ಭೀಷ್ಮ ೭೫]

**ಕ್ರೌಞ್ಚಾರಣ್ಯ** —ಒಂದು ವನ ದಂಡಕಾರಣ್ಯಕ್ಕೆ ದಕ್ಷಿಣ ದಿಕ್ಕಿನಲ್ಲಿದ್ದಿತು ರಾಮ ಲಕ್ಷ್ಮಣರು ತಮ್ಮ ವನವಾಸ ಕಾಲದಲ್ಲಿ ಸಂಚರಿಸುವಾಗ ಈ ಅರಣ್ಯದಲ್ಲಿ ಅಯೋಮುಖಿಯನ್ನು ವಿರೂಪಗೊಳಿಸಿ, ಕಬಂಧನೆಂಬ ರಕ್ಕಸನನ್ನು ಕೊಂದರು [ರಾಮಾ -ಅರ ೭೩] ಇದಕ್ಕೆ ಕ್ರೌಂಚಾವಟವೆಂಬುದು ನಾಮಾಂತರ [ರಾಮಾ.- ಅರ ೧೦೯]

**ಕ್ಷತ್ತಾ**.—ವಿದುರನ ನಾಮಾಂತರ [ಆದಿ ೨]

**ಕ್ಷತ್ರಞ್ಜಯ** — ಒಬ್ಬಕ್ಷತ್ರಿಯ ಧೃಷ್ಟದ್ಯುಮ್ನನ ಮಕ್ಕಳಲ್ಲಿ ಒಬ್ಬ ಭಾರತ ಯುದ್ಧದಲ್ಲಿ ದ್ರೋಣನಿಂದ ಹತನಾದನು [ದ್ರೋ ೧೦, ೧೫೬]

**ಕ್ಷತ್ರದೇವ** —ಶಿಖಂಡಿಯ ಮಗ ಭಾರತ ಯುದ್ಧದಲ್ಲಿ ದುರ್ಯೋಧನನ ಮಗನಾದ ಲಕ್ಷ್ಮಣನಿಂದ ಹತನಾದನು ರಥೋತ್ತಮನು [ಉದ್ಯೋ. ೧೭೧ ಭೀ ೯೩ ದ್ರೋ ೨೩ ಕ ೩].

**ಕ್ಷತ್ರಧ(ವ)ರ್ಮ** —ಧೃಷ್ಟದ್ಯುಮ್ನನ ಮಗನು ಅರ್ಧ ರಥನು ಭಾರತ ಯುದ್ಧದಲ್ಲಿ ಹದಿನಾಲ್ಕನೆಯ ದಿನ ದ್ರೋಣನನ್ನು ಕೆಣಕಿ ಮಡಿದನು [ಉದ್ಯೋ ೧೭೧. ದ್ರೋ ೧೨೫]

**ಕ್ಷತ್ರಬಂಧು** —ಒಬ್ಬ ಅರಸು ಒಂದು ದಿನ ಒಬ್ಬ ಬ್ರಾಹ್ಮಣನ ಹೊಲದಿಂದ ಗಾಳಿಗೆ ಸ್ವಲ್ಪ ಮಣ್ಣು ಹೊಡೆದುಕೊಂಡು ಹೋಗುತ್ತಿದ್ದುದನ್ನು ಕಂಡು ಒಬ್ಬ ಚಂಡಾಲನು ಗಾಬರಿಯಿಂದ ದೂರವಾಗಿ ಓಡಿಹೋದನು. ಇದನ್ನು ಕಂಡ ಕ್ಷತ್ರಬಂಧು ಆ ಚಂಡಾಲನನ್ನು ಕರೆದು ಕಾರಣವೇನೆಂದು ಕೇಳಲಾಗಿ, ಅವನು "ಹಿಂದಣ ಜನ್ಮದಲ್ಲಿ ನಾನು ಬ್ರಾಹ್ಮಣನು ಒಬ್ಬ ಬ್ರಾಹ್ಮಣನ ಸ್ವತ್ತನ್ನು

ಸ್ವಲ್ಪ ತಿಂದೆನಾಗಿ ಈಗ ಈ ಜನ್ಮವು ಪ್ರಾಪ್ತವಾಗಿದೆ ನಿನ್ನೆಯ ರಾತ್ರಿ ಕನಸಿನಲ್ಲಿ ನನಗೊಬ್ಬ ಬ್ರಾಹ್ಮಣನು ಪ್ರೈದೋರಿ " ನಾಳೆ ನಿನಗೆ ಕ್ಷತ್ರಬಂಧು ರಾಜನೊಂದಿಗೆ ಸಂವಾದವಾಗುವುದು. ಬಳಿಕ ನೀನು ಈ ಜನ್ಮದಿಂದ ಪಾರಾಗುವೆ " ಎಂದು ಹೇಳುತ್ತಿದ್ದಂತೆಯೇ ಆ ಚಂಡಾಲ ದೇಹವನ್ನು ಬಿಟ್ಟನು [ಭಾರ -ಅನು. ೧೫೮].

**ಕ್ಷತ್ರವೃದ್ಧ.**—ಒಬ್ಬ ಅರಸು ಯದು ವಂಶದ ಆಯು ರಾಜನ ನಾಲ್ವರು ಪುತ್ರರಲ್ಲಿ ಎರಡನೆಯವನು ನಹುಷ ಚಕ್ರವರ್ತಿ ಇವನ ತಮ್ಮ ಈ ಕ್ಷತ್ರವೃದ್ಧನ ಮಗನು ಸುಹೋತ್ರ [ಆದಿ ೩೫]

**ಕ್ಷತ್ರಿಯ** —ನಾಲ್ಕು ವರ್ಣಗಳಲ್ಲಿ ಎರಡನೆಯದು. ಈ ವರ್ಣ ಬ್ರಾಹ್ಮಣ ವರ್ಣದಿಂದ ಜನಿಸಿದ್ದು [ಆದಿ ೬೫] ಕ್ಷತ್ರಿಯ ಲಕ್ಷಣ [ಶಾಂತಿ ೧೮೭]. ಕ್ಷತ್ರಿಯನ ಮಹಿಮೆ [ವನ ೧೯೭] ಕ್ಷತ್ರಿಯ ಧರ್ಮ [ಶಾಂತಿ ೨೭] ಕ್ಷತ್ರಿಯರು—ಯುಧಿಷ್ಠಿರನು ಮಯನಿರ್ಮಿತವಾದ ಸಭೆಯನ್ನು ಪ್ರವೇಶಿಸಿದಾಗ ನೆರೆದಿದ್ದವರು [ಸಭಾ ೪] ಯಮನ ಸಭೆಯಲ್ಲಿರುವವರು [ಸಭಾ ೮] ಕ್ಷತ್ರಿಯರು—ದ್ರೌಪದೀ ಸ್ವಯಂವರದಲ್ಲಿ [ಆದಿ ೨೦೧]. ಕ್ಷತ್ರಿಯರು ಪ್ರಾತಃಕಾಲದಲ್ಲಿ ಸ್ಮರಿಸಲು ತಕ್ಕವರು [ಅನು ೨೬೧] ಕ್ಷತ್ರಿಯನ ಮಾತು ಬೆಣ್ಣೆಯ ಹಾಗೆ, ಹೃದಯ ಚೂಪಾದ ಕತ್ತಿಯ ಮೊನೆಯ ಹಾಗೆ [ಆದಿ ೩]

**ಕ್ಷಮಾ** —ತಾಳ್ಮೆ, ಅದರ ಆವಶ್ಯಕತೆ [ಆದಿ ೪೨] ಅದರ ಪ್ರಶಂಸೆ [ವನ ೨೯]

**ಕ್ಷೀರವತೀ** —(ಕ್ಷೀರಾ) ದಕ್ಷಿಣ ಹಿಂದೂಸ್ಥಾನದಲ್ಲಿ ಪಾಲಾರ್ ಎಂಬ ಹೆಸರಿನಿಂದ ಪ್ರಖ್ಯಾತಿಗೊಂಡಿರುವ ಒಂದು ನದಿ [ಭಾರ -ವನ ೮೨]

**ಕ್ಷೀರಸಮುದ್ರ** —ಸಪ್ತ ಮಹಾಸಮುದ್ರಗಳಲ್ಲಿ ಐದನೆಯದು ಇದು ಆರು ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು ನೋಡು—ಸಪ್ತ ಸಮುದ್ರಗಳು [ಭೀಷ್ಮ ೧೧]. ಅಮೃತ ಪ್ರಾಪ್ತಿಗಾಗಿ ದೇವ ದಾನವರು ಇದನ್ನು ಮಥನ ಮಾಡಿದ್ದು [ಆದಿ ೧೮. ಭಾಗ -೮, ೬ ರಾಮಾ -೧, ೪೫ ವಿಷ್ಣು -೧, ೯ ಪದ್ಮ -೩, ೯, ೬, ೨೬೦] ಉಪಮನ್ಯುವೆಂಬ ಮುನಿಪುತ್ರನಿಂದ ಪ್ರಾರ್ಥಿತನಾದ ಶಿವನು ಪಾಲ್ಗಡಲನ್ನು ಆತನಿಗೆ ಕೊಟ್ಟದ್ದು [ಅನು ೪೫]

**ಕ್ಷುಪ.**—ಒಬ್ಬ ಅರಸು. ಸೃಷ್ಟಿಯ ಆದಿಯಲ್ಲಿ ರಾಜನಿಲ್ಲದ ಕಾರಣ ಲೋಕವೆಲ್ಲವೂ ಅನಾಯಕವಾಗಿರಲು, ಪ್ರಜೆಗಳು ಸ್ವೇಚ್ಛೆಯಿಂದ ನಡೆಯತೊಡಗಿದರು ಆಗ ಬ್ರಹ್ಮನು ಒಮ್ಮೆ ಸೀತು, ತನ್ನ ಮೂಗಿನಿಂದ ಒಬ್ಬನನ್ನು ಕಲ್ಪಿಸಿಕೊಟ್ಟನು. ಈ ಕಾರಣದಿಂದ ಈ ಅರಸನಿಗೆ (ಕ್ಷುತದಿಂದ ಹುಟ್ಟಿದವನಾಗಿ) ಕ್ಷುಪನೆಂಬ ಹೆಸರು ಬಂದಿತು [ಭಾರ.-ಶಾಂತಿ. ೧೨೨].

**ಕ್ಷೇತ್ರ ಕ್ಷೇತ್ರಜ್ಞ ಸಂಬಂಧ ಕಥನ.**—ಕ್ಷೇತ್ರ= ಶರೀರ, ಕ್ಷೇತ್ರಜ್ಞ = ಆತ್ಮ, ಇವೆರಡಕ್ಕೂ ಇರತಕ್ಕ ಸಂಬಂಧ [ಭಾರ -ಅಶ್ವ ೫೦]

**ಕ್ಷೇಮದರ್ಶಿ** —ಒಬ್ಬ ಅರಸು. ನೋಡು—ಕಾಲಕವೃಕ್ಷೀಯ

**ಕ್ಷೇಮಧೂರ್ತಿ** —(i) ಸಾಲ್ವ ರಾಜನ ಮಂತ್ರಿ ಮತ್ತು ಸೇನಾಪತಿ ಇವನು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಯುದ್ಧಮಾಡಿ, ಶ್ರೀ ಕೃಷ್ಣನ ಮಗ ನಾದ ಸಾಂಬನಿಂದ ಸೋತನು [ವನ ೧೬] ಬೃಹತ್‌ಕ್ಷತ್ರನಿಂದ ಮಡಿದನು [ದ್ರೋ ೧೦೭]

(ii) ಕರೂಶ ದೇಶದ ಅರಸು ಭೀಷ್ಮನಿಂದ ಹತನಾದನು [ಕರ್ಣ. ೯].

(iii) ಒಬ್ಬ ಅರಸು ಕರೂಶ ದೇಶದ ಬೃಹಂತ ರಾಜನ ಸಹೋದರನು. ಭಾರತ ಯುದ್ಧದಲ್ಲಿ ಇವನಿಗೂ ಸಾತ್ಯಕಿಗೂ ಯುದ್ಧವಾಗುತ್ತಿದ್ದಾಗ ಇವನ ಹಾವಳಿಗೆ ಸಾತ್ಯಕಿ ದಿಕ್ಕುತೋರದಿರುವಲ್ಲಿ ಭೀಮನು ಇವನನ್ನು ಕೊನೆಗಾಣಿಸಿದನು [ದ್ರೋ. ೨೫]

**ಕ್ಷೇಮವೃದ್ಧಿ** —ಸಾಲ್ವ ರಾಜನ ಸೇನಾಪತಿ ನೋಡು—ಸಾಲ್ವ

## ಖ

**ಖಗಮ** —ಒಬ್ಬ ಬ್ರಾಹ್ಮಣ ಈತನ ಸಹಪಾಠಿಯಾದ ಸಹಸ್ರಪಾದನೆಂಬ ಬ್ರಾಹ್ಮಣನು ಹುಲ್ಲಿನಿಂದ ಒಂದು ಸರ್ಪವನ್ನು ಹೊಸೆದು ಖಗಮನ ಮೇಲೆ ಎಸೆದನು ಆದರಿಂದ ಹೆದರಿದ ಖಗಮನು ಸಹಸ್ರಪಾದನನ್ನು ಕುರಿತು "ನೀನು ಸತ್ವವಿಲ್ಲದ ಸರ್ಪಾಕಾರದಿಂದ ನನ್ನನ್ನು ಹೆದರಿಸಿದೆಯಾಗಿ, ವಿಷವಿಲ್ಲದ ಒಳ್ಳೆಯಾಗಿ (ನೀರು ಹಾವು) ಜನಿಸು" ಎಂದು ಶಾಪವಿತ್ತನು ಖಿನ್ನನಾದ ಸಹಸ್ರಪಾದನು ಶಾಪವಿಮೋಚನೆಯನ್ನು ಕೇಳಲಾಗಿ, "ರುರುವೆಂಬ ಋಷಿಯು ಮೂಲಕ ಪೆಟ್ಟು ತಿಂದು ಮರಳಿ ಮನುಷ್ಯ ಜನ್ಮವನ್ನು ಪಡೆಯುವೆ" ಎಂಬುದಾಗಿ ಹೇಳಿದನು [ಭಾರ -ಆದಿ ೮, ೧೧ ಅನು ೮]

**ಖಗೋಲವರ್ಣನ** —[ಭಾಗ -೫, ೨೧ ವಾಯು -೫೧, ೫೩ ವಿಷ್ಣು -೨, ೮, ೧೨ ಶಿವ -ಉಮಾಖಂ ೧೯]

**ಖಟ್ವಾಂಗ.**—ಒಬ್ಬ ಅರಸು ಸೂರ್ಯವಂಶದ ದಿಲೀಪ ಚಕ್ರವರ್ತಿಯು ನಾಮಾಂತರ ಸಗರ ಚಕ್ರವರ್ತಿಯು ಮರಿಮಗನಾದ ಅಂಶುಮಂತನ ಮಗ ಈತನ ಮಗನು ಭಗೀರಥನು [ಭಾರ.-ದ್ರೋ. ೬೧. ವನ ೧೦೭. ಸಭಾ. ೮]. ಈತನು ದೊಡ್ಡ ಯಜ್ಞವನ್ನು ಮಾಡಲಾಗಿ, ಆ ಯಜ್ಞದಲ್ಲಿ ವಿಶ್ವಾವಸು ಮೊದಲಾದ

ಅರುವತ್ತು ಸಾವಿರ ಗಂಧರ್ವರೂ ಗಾಯನ ಮಾಡಿದರು. ಯೂಪಸ್ತಂಭವನ್ನು ಸುವರ್ಣ ದಿಂದಲೇ ರಚಿಸಿದ್ದನು ವೇದಘೋಷ, ಜ್ಯಾಘೋಷ, ದಾನಘೋಷಗಳು ಮೂರೂ ಏಕಪ್ರಕಾರವಾಗಿ ಮೊಳಗುತ್ತಿದ್ದುವು [ಶಾಂತಿ ೨೯]. ಈತನು ಒಮ್ಮೆ ದೇವ ದಾನವ ಯುದ್ಧದಲ್ಲಿ ಇಂದ್ರನಿಗೆ ಒತ್ತಾಸೆ ಮಾಡಹೋಗಿ, ಹಿಂದಿರುಗಿ ಬರುವಾಗ ಇಂದ್ರ ಲೋಕದಲ್ಲಿ ಕಲ್ಪವೃಕ್ಷದ ಅಡಿಯಲ್ಲಿ ಮಲಗಿದ್ದ ಕಾಮಧೇನುವನ್ನು ನಮಸ್ಕರಿಸದೆಯೇ ಬಂದುದರಿಂದ ಕುಪಿತೆಯಾದ ಕಾಮಧೇನು ದಿಲೀಪನಿಗೆ ಮಕ್ಕಳಾಗದಿರುವಂತೆ ಶಾಪ ಕೊಟ್ಟಳು ಬಹಳ ಕಾಲದವರೆಗೂ ಮಕ್ಕಳಾಗದಿರಲು, ಈತನು ತನ್ನ ಕುಲಗುರುವಾದ ವಸಿಷ್ಠ ಮುನಿಯ ಆಶ್ರಮಕ್ಕೆ ಹೋಗಿ, ಆತನ ಅಪ್ಪಣೆಯಂತೆ ತನ್ನ ಮಡದಿಯೊಂದಿಗೆ, ಕಾಮಧೇನುವಿನ ಮಗಳಾದ ನಂದಿನೀ ಧೇನುವನ್ನು ಕೆಲ ಕಾಲ ಅನನ್ಯಭಾವದಿಂದ ಸೇವಿಸಿ, ಶಾಪಮುಕ್ತನಾಗಿ ಪುತ್ರನನ್ನು ಪಡೆದನು ಈತನ ಮಗನು ರಘು ರಾಜನು [ಪದ್ಮ ೧೯೭] ದಿಲೀಪನ ಕಥೆ [ರಾಮಾ-ಬಾಲ ೪೨ ಮತ್ಸ್ಯ-೧೨ ದ್ರೋ ೬೧ ಶಾಂತಿ ೨೮] ದಿಲೀಪನು ಮತ್ತೊಮ್ಮೆ ದೇವ ಲೋಕಕ್ಕೆ ಹೋಗಿ, ರಾಕ್ಷಸರನ್ನು ಕೊಂದು ದೇವತೆಗಳಿಗೆ ಸುಖವನ್ನುಂಟು ಮಾಡಿದನು ದೇವತೆಗಳು ಸಂತುಷ್ಟರಾಗಿ ವರವನ್ನು ಬೇಡುವಂತೆ ಹೇಳಿದರು ಈತನು ತನಗೆ ಆಯುಷ್ಯ ಇನ್ನೂ ಎಷ್ಟಿರುವುದೆಂದು ಕೇಳಲಾಗಿ, ಅವರು ಎರಡು ಜಾವ ಗಳು ಮಾತ್ರವೇ ಇರುವುದಾಗಿ ಹೇಳಿದರು ದಿಲೀಪನು ಒಡನೆಯೇ ಅಯೋಧ್ಯೆ ಯನ್ನು ಸೇರಿ, ರಾಜ್ಯಭಾರವನ್ನು ಮಗನಿಗೆ ಒಪ್ಪಿಸಿ, ಯೋಗನಿರತನಾಗಿದ್ದು ದೇಹ ತ್ಯಾಗ ಮಾಡಿದನು [ಭಾರ-ದ್ರೋ ೬೧]

**ಖಡ್ಗ** — ಖಡ್ಗದ ಉತ್ಪತ್ತಿಯ ಕಥೆ [ಶಾಂತಿ ೧೬೪] ಅದರ ಯುದ್ಧವಿವರ [ಕರ್ಣ ೧೬]

**ಖಣ್ಡ** — ಭೂಭಾಗ ಮಹಾದ್ವೀಪಗಳಲ್ಲಿನ ಭೂಭಾಗಗಳಿಗೆ ವರ್ಷಗಳೆಂತಲೂ, ಆ ವರ್ಷಗಳಲ್ಲಿನ ಭೂಭಾಗಗಳಿಗೆ ಖಂಡಗಳೆಂತಲೂ ಹೆಸರು [ಮತ್ಸ್ಯ-೧೧೩ ದೇ.ಭಾಗ-೧೧, ೨೧].

**ಖನಕ** — ವಿದುರನ ಆಪ್ತ ಸ್ನೇಹಿತನು ದುರ್ಯೋಧನನು ಪಾಂಡವರ ಸಂಹಾ ರಾರ್ಥವಾಗಿ, ವಾರಣಾವತದಲ್ಲಿ ಅರಗಿನ ಮನೆಯನ್ನು ಕಟ್ಟಿಸಿದಾಗ, ಈತನು ಅದರ ಮೇಲ್ವಿಚಾರಣೆಯಲ್ಲಿದ್ದು, ವಿದುರನ ಸೂಚನೆಯ ಮೇರೆಗೆ ಗುಪ್ತವಾಗಿ ಒಂದು ಸುರಂಗದ್ವಾರವನ್ನು ಕಲ್ಪಿಸಿದ್ದನು ಪಾಂಡವರು ಹಸ್ತಿನಾವತಿಯಿಂದ ವಾರಣಾ ವತಕ್ಕೆ ಬರುವ ಸಮಯದಲ್ಲಿ, ವಿದುರನು ಈ ಸಮಾಚಾರವನ್ನು ರಹಸ್ಯವಾಗಿ ಭೀಮನಿಗೆ ಹೇಳಿದ್ದನು. ಬಳಿಕ ಭೀಮನು ಸಮಯಬಂದಾಗ ಜನನೀ ಸೋದರರನ್ನು ಎತ್ತಿಕೊಂಡು ಆ ಮಾರ್ಗದಿಂದ ಹೊರಬಿದ್ದನು [ಆದಿ. ೧೪೯].

**ಖನಿ.**—ಕುಣಿಗಾರ್ಗ್ಯ ಮುನಿಯ ನಾಮಾಂತರ ನೋಡು—ಕುಣಿಗಾರ್ಗ್ಯ.

**ಖನೀನೇತ್ರ.**—ಒಬ್ಬ ಅರಸು ಸೂರ್ಯವಂಶದ ಇಕ್ಷ್ವಾಕುವಿನ ಸಂತತಿಯವನಾದ ವಿವಿಂತನೆಂಬ ಅರಸನ ಮಗನು. ಈತನಿಗೆ ಮಕ್ಕಳಿಲ್ಲದ ಕಾರಣ ಪುತ್ರಪ್ರಾಪ್ತಿಗಾಗಿ ಪಿತೃದೇವತೆಗಳಿಗೆ ಮಾಂಸಾಹಾರದಿಂದ ಶ್ರಾದ್ಧವನ್ನು ಮಾಡಬೇಕೆಂದು ಸಂಕಲ್ಪಿಸಿ, ಮಾಂಸವನ್ನು ತರುವುದಕ್ಕಾಗಿ ಅರಣ್ಯಕ್ಕೆ ಹೋದನು ಅಲ್ಲಿ ಒಂದು ಜಿಂಕೆ ಅರಸನ ಮುಂದೆ ಬಂದು ನಿಂತು "ಅಯ್ಯಾ, ನನಗೆ ಮಕ್ಕಳಿಲ್ಲ. ಈ ದುಃಖವನ್ನು ಸಹಿಸಲಾರೆನು. ನನ್ನನ್ನು ಕೊಲ್ಲು" ಎಂದಿತು ಅಷ್ಟರಲ್ಲಿಯೇ ಮತ್ತೊಂದು ಜಿಂಕೆ ಅಲ್ಲಿಗೆ ಬಂದು "ಅಯ್ಯಾ, ನನಗೆ ತುಂಬ ಮರಿಗಳಿರುವುವು ಎಲ್ಲಿ, ಯಾವಾಗ, ಯಾವುದು ಕ್ರೂರ ಜಂತುಗಳ ಬಾಯಿಗೆ ತುತ್ತಾಗುವುದೋ ಎಂದು ಒಂದೊಂದು ಕ್ಷಣವೂ ಹೆದರುತ್ತಿದ್ದೇನೆ ನನ್ನನ್ನೇ ಕೊಲ್ಲು" ಎಂದು ಹೇಳಿತು ಇಂತು ಆ ಜಿಂಕೆಗಳ ಪರಸ್ಪರ ವಿರುದ್ಧವಾದ ಮಾತುಗಳನ್ನು ಕೇಳಿದ ಖನೀನೇತ್ರನು ಆ ಜಿಂಕೆಗಳನ್ನು ಕೊಲ್ಲಲೊಲ್ಲದೆ ಪಟ್ಟಣಕ್ಕೆ ಹಿಂದಿರುಗಿ ಬಂದು ತಪೋನಿರತನಾಗಿದ್ದು ಪುತ್ರರನ್ನು ಪಡೆದನು ಖನೀನೇತ್ರನು ಪ್ರಜಾನುರಾಗವಿಲ್ಲದವನಾದುದರಿಂದ, ಪ್ರಜೆಗಳೆಲ್ಲರೂ ಇವನನ್ನು ರಾಜ್ಯದಿಂದ ಒಡಿಸಿ, ಇವನ ಮಗನಾದ ಕರಂಧಮನಿಗೆ ರಾಜ್ಯದಲ್ಲಿ ಪಟ್ಟಗಟ್ಟಿದರು ನೋಡು—ಕರಂಧಮ [ಅಶ್ವ ೪ ಮಾರ್ಕ.-೧೧೭]

**ಖರ.**—ಒಬ್ಬ ರಾಕ್ಷಸ ವಿಶ್ರವಸನೆಂಬ ಋಷಿಯಿಂದ ರಾಕಾ ಎಂಬ ರಾಕ್ಷಸಿಯಲ್ಲಿ ಜನಿಸಿದವನು ರಾವಣನ ಬಲತಾಯ ಮಗನು ಶೂರ್ಪಣಖೆಯೂ ದೂಷಣನೆಂಬ ರಾಕ್ಷಸನೂ ಇವನ ಒಡಹುಟ್ಟಿದವರು [ಭಾರ -ವನ ೨೭೬] ಒಮ್ಮೆ ರಾವಣನು ತನ್ನ ದಿಗ್ವಿಜಯ ಸಮಯದಲ್ಲಿ ತನ್ನನ್ನು ಇದಿರಿಸಿದ, ಶೂರ್ಪಣಖೆಯ ಗಂಡನಾದ ವಿದ್ಯುಜ್ಜಿಹ್ವನನ್ನು ಕೊಂದನು ಶೂರ್ಪಣಖೆ ರಾವಣನಲ್ಲಿಗೆ ಹೋಗಿ ತನ್ನ ಪತಿಯನ್ನು ಕೊಂದುದಕ್ಕಾಗಿ ರಾವಣನನ್ನು ನಿಂದಿಸಿದಳು ಆಗ ರಾವಣನು ಶೂರ್ಪಣಖೆಗೆ ಅಭಯವಿತ್ತು, ಆಕೆಯನ್ನು ಖರ ದೂಷಣರ ವಶದಲ್ಲಿರುವ ಹಾಗೆ ನಿಯಮಿಸಿ, ಖರನಿಗೆ ದಂಡಕಾರಣ್ಯ ರಾಜ್ಯವಿತ್ತು, ೧೪,೦೦೦ ಮಂದಿ ರಾಕ್ಷಸರನ್ನು ಬೆಂಬಲವಾಗಿ ಕೊಟ್ಟು ಕಳುಹಿದನು [ರಾಮಾ.-ಉತ್ತ ೨೩, ೨೪]. ಬಳಿಕ ರಾಮನು ಪಂಚವಟಿಯಲ್ಲಿ ಸೀತಾ ಲಕ್ಷ್ಮಣರೊಂದಿಗೆ ವಾಸಮಾಡುತ್ತಿದ್ದಾಗ ಶೂರ್ಪಣಖೆ ರಾಮನನ್ನು ಮೋಹಿಸಿ, ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕುಯಿಸಿಕೊಂಡು, ಖರನಲ್ಲಿಗೆ ಹೋಗಿ ಮೊರೆಯಿಟ್ಟಳು ಆಗ ಖರನು ತನ್ನ ೧೪ ಸಾವಿರ ಸೇನೆಯೊಂದಿಗೆ ರಾಮನನ್ನು ಇದಿರಿಸಿ ಸೇನಾಸಮೇತನಾಗಿ ಹತನಾದನು [ರಾಮಾ.-ಅರ ೧೯, ೩೦. ಭಾರ.-ವನ. ೨೭೮]

**ಖಾಣ್ಡವ.**—ಇಂದ್ರನ ಉದ್ಯಾನ ವನಗಳಲ್ಲಿ ಒಂದು. ಇದು ಸರಸ್ವತೀ, ದೃಷದ್ವತೀ ನದಿಗಳಿಗೆ ಪೂರ್ವದಲ್ಲಿತ್ತು. ಒಮ್ಮೆ ವರುಣಲೋಕದಲ್ಲಿ ೧೨ ವರ್ಷಗಳವರೆಗೆ ಒಂದು ಯಜ್ಞ ನಡೆದುದರಿಂದ ಅಗ್ನಿದೇವನ ಜೀರ್ಣಶಕ್ತಿಯು ಕುಗ್ಗಿತು ದೇವವೈದ್ಯರಾದ ಅಶ್ವಿನೀದೇವತೆಗಳು ಇಂದ್ರನ ಖಾಂಡವವನದಲ್ಲಿ ಅಜೀರ್ಣವನ್ನು ಹೋಗಲಾಡಿಸುವ ಉತ್ತಮವಾದ ಮೂಲಿಕೆಗಳಿರುವುವೆಂತಲೂ, ಅವುಗಳನ್ನು ಸೇವಿಸಿದರೆ ಅಗ್ನಿಮಾಂದ್ಯ ಮಾಯವಾಗುವುದೆಂತಲೂ ತಿಳಿಸಿದರು ಅಗ್ನಿದೇವನು ಕೃಷ್ಣಾರ್ಜುನರಲ್ಲಿಗೆ ಬ್ರಾಹ್ಮಣವೇಷದಿಂದ ಹೋಗಿ, ಅವರಿಂದ ಅಭಯವನ್ನು ಪಡೆದು ಆ ವನವನ್ನು ಸುಡತೊಡಗಿದನು ಇಂದ್ರನು ಯುದ್ಧಕ್ಕೆ ಬಂದನು. ಅರ್ಜುನನು ಇಂದ್ರನನ್ನು ಸೋಲಿಸಿಬಿಟ್ಟನು. ಅಗ್ನಿಯನ್ನು ಶಾಂತಗೊಳಿಸುವುದಕ್ಕೆ ಇಂದ್ರನು ಮಳೆ ಸುರಿಸಿದನು ಅರ್ಜುನನು ಶರಪಂಜರದಿಂದ ಆ ಮಳೆ ಅಗ್ನಿಯ ಮೇಲೆ ಬೀಳದಂತೆ ಮಾಡಿದನು ಆ ಸಮಯದಲ್ಲಿ ಅದೇ ವನದಲ್ಲಿ ವಾಸಮಾಡುತ್ತಿದ್ದ, ಕೃಷ್ಣನ ಹಗೆಯಾದ ಮಯನೆಂಬ ರಾಕ್ಷಸನು ಅರ್ಜುನನನ್ನು ಮರೆಹೊಕ್ಕನು. ಖಾಂಡವವನವಿದ್ದ ಸ್ಥಳದಲ್ಲಿಯೇ ಶ್ರೀ ಕೃಷ್ಣನು ದೇವಶಿಲ್ಪಿಯಾದ ವಿಶ್ವಕರ್ಮನ ಮೂಲಕ ಇಂದ್ರಪ್ರಸ್ಥವನ್ನು ನಿರ್ಮಿಸಿದನು [ಭಾರ.-ಆದಿ ೨೫೦, ೨೬೦].

**ಖಾಣ್ಡವಪ್ರಸ್ಥ.**—ಹಸ್ತಿನಾವತಿಯ ಸಮೀಪದಲ್ಲಿರುವ ಒಂದು ಪಟ್ಟಣ ನೋಡು—ಇಂದ್ರಪ್ರಸ್ಥ, ಖಾಣ್ಡವ ದ್ರೌಪದೀ ಸ್ವಯಂವರಾನಂತರ ಧೃತರಾಷ್ಟ್ರನು ಪಾಂಡವರನ್ನು ಬರಮಾಡಿಕೊಂಡು, ಅವರಿಗೆ ಅರ್ಧರಾಜ್ಯವನ್ನು ಕೊಟ್ಟನು ಆಗ ಪಾಂಡವರು ಇಲ್ಲಿಯೇ ರಾಜ್ಯಭಾರ ಮಾಡುತ್ತಿದ್ದರು. ಮಯನು ಈ ಪಟ್ಟಣದಲ್ಲಿಯೇ ಒಂದು ಸಭೆಯನ್ನು ಪಾಂಡವರಿಗಾಗಿ ನಿರ್ಮಿಸಿದನು ಇಲ್ಲಿ ಪಟ್ಟಣ ಏರ್ಪಡುವುದಕ್ಕೆ ಮೊದಲು ಖಾಂಡವವನವಿದ್ದಿತು [ಭಾರ -ಆ ೬೧, ೨೨೭]

**ಖಾಣ್ಡಿಕ್ಯ** —ಒಬ್ಬ ಋಷಿ ವಿದೇಹವಂಶದ ಮಿತಧ್ವಜನ ಮಗನು ನೋಡು—ಕೃತಧ್ವಜ

**ಖ್ಯಾತಿ.**—ಕರ್ದಮಬ್ರಹ್ಮನ ಒಂಬತ್ತು ಮಂದಿ ಪುತ್ರಿಯರಲ್ಲಿ ಒಬ್ಬಳು ಭೃಗು ಮಹರ್ಷಿಯನ್ನು ಮದುವೆಯಾಗಿ, ಲಕ್ಷ್ಮೀದೇವಿಯನ್ನು ಪಡೆದಳು [ಭಾರ.-ಆದಿ. ೬೭. ಭಾಗ -೪, ೧. ವಿಷ್ಣು.-೧, ೧೦].

## ಗ

**ಗಙ್ಗಾ.**—ಭಾರತ ವರ್ಷದಲ್ಲಿ ಪುಣ್ಯತಮವೆನಿಸಿದ ಒಂದು ಮಹಾ ನದಿ. ಈ ನದಿಯ ಅಭಿಮಾನದೇವತೆಗೂ ಇದೇ ಹೆಸರು [ಭಾರ.-ಆ. ೬೩. ಭೀ. ೬]. ಒಮ್ಮೆ

ದೇವಲೋಕದಲ್ಲಿ ಬ್ರಹ್ಮಾದಿಗಳೆಲ್ಲರೂ ನೆರೆದಿರುವಲ್ಲಿ ಈಕೆಯೂ ದಿವ್ಯರೂಪದಿಂದ ಅಲ್ಲಿಗೆ ಹೋಗಿದ್ದಳು. ಆ ಸಮಯದಲ್ಲಿ ಈಕೆಯ ಸೆರಗು ಗಾಳಿಗೆ ಹಾರಿಹೋಗಲಾಗಿ ಅಲ್ಲಿಯೇ ದೂರದಲ್ಲಿದ್ದ, ಇಕ್ಷ್ವಾಕುವಂಶದ ಮಹಾಭಿಷನೆಂಬ ಅರಸು ಆಕೆಯನ್ನು ಕುತೂಹಲ ದೃಷ್ಟಿಯಿಂದ ನೋಡಿದನು. ಅವನ ಮುಖವನ್ನು ಕಂಡು ಗಂಗೆಯೂ ಮೋಹಗೊಂಡಳು. ಇದನ್ನು ಕಂಡು ಚತುರ್ಮುಖನು ಇವರಿಬ್ಬರೂ ಭೂ ಲೋಕದಲ್ಲಿ ಜನಿಸುವಂತೆ ಶಾಪವಿತ್ತನು ಬಳಿಕ ಮಹಾಭಿಷನು ಚಂದ್ರವಂಶದ ಪ್ರತೀಪನೆಂಬ ರಾಜನಿಗೆ ಶಂತನುವೆಂಬ ಹೆಸರಿನಿಂದ ಮಗನಾಗಿ ಜನಿಸಿದನು ಗಂಗೆಯೂ ದುಃಖ ಭರಿತೆಯಾಗಿ ಭೂ ಲೋಕಕ್ಕೆ ಬರುತ್ತಿದ್ದಳು ಭೂ ಲೋಕದಲ್ಲಿ ಜನಿಸುವಂತೆ ವಸಿಷ್ಠ ನಿಂದ ಶಪ್ತರಾದ ಅಷ್ಟವಸುಗಳು ನಡುದಾರಿಯಲ್ಲಿ ಈಕೆಯನ್ನು ಸಂಧಿಸಿ ತಮಗೆ ಜನನಿಯಾಗುವಂತೆ ಬೇಡಿದರು ಗಂಗೆಯೂ ಇದಕ್ಕೆ ಸಮ್ಮತಿಸಿದಳು

ಪ್ರತೀಪನ ತರುವಾಯ ಶಂತನು ರಾಜ್ಯಕ್ಕೆ ಬಂದನು. ಒಮ್ಮೆ ಈತನು ಗಂಗಾ ತೀರದಲ್ಲಿ ಸಂಚರಿಸುತ್ತಿರುವಲ್ಲಿ ಗಂಗೆ ದಿವ್ಯತಾರುಣ್ಯಭರಿತವಾದ ರೂಪದಿಂದ ಕಾಣಿಸಿ ದಳು ಇಬ್ಬರೂ ಮೋಹಗೊಂಡರು ಶಂತನು ಗಂಗೆಯನ್ನು ಕುರಿತು ತನ್ನನ್ನು ಮದುವೆಯಾಗ ಹೇಳಿದನು. ಆಗ ಗಂಗೆ " ನಾನು ಯಾವ ಕೆಲಸವನ್ನು ಮಾಡಿದರೂ ನೀನು ಅಡ್ಡಗಿಸಲಾಗದು , ಕಾರಣವನ್ನೂ ಕೇಳಲಾಗದು. ಇದಕ್ಕೆ ನೀನು ಸಮ್ಮತಿಸುವು ದಾದರೆ ನಾನು ನಿನ್ನನ್ನು ಮದುವೆಯಾಗುವೆನು " ಎಂದಳು. ಅದಕ್ಕೆ ಶಂತನುವೂ ಒಪ್ಪಿದನು. ಬಳಿಕ ಗಂಗೆ ಶಂತನು ಚಕ್ರವರ್ತಿಯೊಂದಿಗೆ ಸಂಸಾರಮಾಡಿಕೊಂಡಿದ್ದು ಪುತ್ರನನ್ನು ಪಡೆದು, ಆ ಶಿಶುವನ್ನು ಒಡನೆಯೇ ಪ್ರವಾಹದಲ್ಲಿ ಬಿಸುಟಳು. ಇಂತೆಯೇ ಏಳು ಬಾರಿ ನಡೆಯಿತು ಎಂಟನೆಯ ಸಲ ಗಂಗೆ ಗರ್ಭಿಣಿಯಾಗಿ, ಪ್ರಸವಕಾಲ ಸಮೀಪಿಸಿ, ಗಂಡು ಶಿಶುವನ್ನು ಹೆತ್ತು ಮೊದಲಿನಂತೆಯೇ ಮಾಡತೊಡಗಿದಾಗ, ಗಂಗೆಯ ದೌರಾತ್ಮ್ಯವನ್ನು ತಾಳಲಾರದೆ ಶಂತನು ಅಡ್ಡಬಂದು " ಇಂದಿನವರೆಗೆ ಏಳು ಮಂದಿ ಮಕ್ಕಳನ್ನು ಕೊಂದುಹಾಕಿದೆ. ಈ ಗರ್ಭವನ್ನು ಎಷ್ಟುಮಾತ್ರಕ್ಕೂ ನಾನು ನಿನ್ನ ಕೈಗೆ ಕೊಡಲಾರೆನು " ಎಂದು ಹೇಳಿದನು. " ಗಂಗೆ ನಮ್ಮ ಒಪ್ಪಂದ ಮುರಿದುಹೋಯಿತು ಇನ್ನು ಅರೆಗಳಿಗೆಯಾದರೂ ನಾನು ನಿನ್ನಲ್ಲಿ ಇರಲೊಲ್ಲೆನು " ಎಂದು ಹೇಳಿ, ವಸುಗಳ ಶಾಪಕ್ರಮವನ್ನು ವಿವರಿಸಿ, ಎಂಟನೆಯ ಮಗುವನ್ನು ತಕ್ಕ ಸಮಯದಲ್ಲಿ ಶಂತನುವಿಗೆ ಒಪ್ಪಿಸುವುದಾಗಿ ಮಾತುಕೊಟ್ಟು, ಮಗುವಿನೊಂದಿಗೆ ಕಣ್ಮರೆಯಾದಳು. ಈ ಎಂಟನೆಯ ಮಗನೇ ಭೀಷ್ಮಾಚಾರ್ಯನು [ಆದಿ. ೧೦೨, ೧೦೬] ಸಗರನ ಅರುವತ್ತು ಸಾವಿರ ಮಂದಿ ಮಕ್ಕಳೂ ಕಪಿಲ ಮುನಿಯ ಕೋಪಾಗ್ನಿಯಿಂದ ಬೂದಿಯಾಗಿರುವಲ್ಲಿ, ಅವರ ಮರಿಮಗನಾದ ಭಗೀರಥನು ತನ್ನ ಮುತ್ತಜ್ಜಂದಿರಿಗೆ ಸದ್ಗತಿಯನ್ನುಂಟುಮಾಡುವುದಕ್ಕಾಗಿ, ಗಂಗೆಯನ್ನು ಭೂ

ಲೋಕಕ್ಕೆ ತರುವ ಉದ್ದೇಶದಿಂದ ಗಂಗೆಯನ್ನು ಕುರಿತು ತಪಸ್ಸುಮಾಡಿದನು ಗಂಗೆ ಪ್ರತ್ಯಕ್ಷವಾಗಿ "ನಾನು ನಿನ್ನ ಇಷ್ಟಾರ್ಥವನ್ನು ಕೈಗೂಡಿಸುವೆನು ಆದರೆ ನನ್ನ ವೇಗವನ್ನು ತಡೆಯುವವರಾರು?" ಎನಲು, ಭಗೀರಥನು ಶಿವನನ್ನು ಮೆಚ್ಚಿಸಿ, ಒಪ್ಪಿಸಿದನು ಗಂಗೆ ಶಿವನ ಮಸ್ತಕದ ಮೇಲೆ ಬಿದ್ದು, ಅಲ್ಲಿಂದ ಭಗೀರಥನ ಹಿಂದೆಯೇ ಬರುತ್ತ ದಾರಿಯಲ್ಲಿ ಜಹ್ನುವಿನ ಯಜ್ಞಶಾಲೆಯನ್ನು ಕೊಚ್ಚಿಕೊಂಡು ಹರಿಯತೊಡಗಿತು ಜಹ್ನು ಗಂಗೆಯನ್ನು ಶೋಷಿಸಿಬಿಟ್ಟನು. ಭಗೀರಥನು ಜಹ್ನುವನ್ನು ಬೇಡಲಾಗಿ, ಜಹ್ನು ಮರಳಿ ಪ್ರವಹಿಸುವಂತೆ ಮಾಡಿದನು. ಈ ಕಾರಣದಿಂದಲೇ ಗಂಗೆಗೆ "ಜಾಹ್ನವೀ" ಎಂದು ಹೆಸರು ಬಳಿಕ ಭಗೀರಥನು ಗಂಗೆಯನ್ನು ತನ್ನ ಹಿಂದೆಯೇ ಕರೆದುಯ್ದು ತನ್ನ ಮುತ್ತಜ್ಜಂದಿರ ಬೂದಿಯ ರಾಶಿಯ ಮೇಲೆ ಪ್ರವಹಿಸುವಂತೆ ಮಾಡಿ, ಅವರಿಗೆ ಸದ್ಗತಿಯನ್ನೊದವಿಸಿದನು ಹೀಗೆ ಭಗೀರಥನ ಇಷ್ಟಾನುಸಾರ ಭೂ ಲೋಕಕ್ಕೆ ಇಳಿದುಬಂದುದರಿಂದ ಗಂಗೆಗೆ "ಭಾಗೀರಥಿ' ಯೆಂದು ಹೆಸರು [ರಾಮಾ.-೧, ೪೩. ಭಾಗ.-೯, ೯. ಭಾರ -ವನ ೧೦೯ ದ್ರೋ ೬೦ ಮಾರ್ಕ ೫೩] ಕಾಶಿರಾಜನ ಮಗಳಾದ ಅಂಬೆಯ ಸಲುವಾಗಿ ಪರಶುರಾಮನಿಗೂ ಭೀಷ್ಮನಿಗೂ ಯುದ್ಧವಾದ ಸಂದರ್ಭದಲ್ಲಿ ಗಂಗೆ ಭೀಷ್ಮನಿಗೆ ದರ್ಶನವಿತ್ತಳು [ಉದ್ಯೋ. ೧೮೬] ಕಲಿಯುಗದಲ್ಲಿ ಗಂಗೆಯ ಪ್ರಾಶಸ್ತ್ಯ [ವನ. ೮೩] ಭೀಷ್ಮ ಮರಣದಿಂದ ದುಃಖಿತೆಯಾದ ಗಂಗೆಯನ್ನು ಶ್ರೀ ಕೃಷ್ಣನು ಸಂತವಿಸಿದ್ದು [ಅನು. ೨೭೪] ಗಂಗೆಯ ಮಹಿಮೆ [ಅನು ೬೫ ಭಾಗ -೫, ೧೭]. ಪಾರ್ವತೀ ಪರಮೇಶ್ವರರು ಕ್ರೀಡಾಸಕ್ತರಾಗಿದ್ದಾಗ ಅಗ್ನಿ ಭಂಗವನ್ನುಂಟುಮಾಡಿದನೆಂಬ ಕೋಪದಿಂದ ಕುಪಿತೆಯಾದ ಪಾರ್ವತಿ ಅಗ್ನಿಯನ್ನೇ ಗರ್ಭಧಾರಣ ಮಾಡುವಂತೆ ಶಪಿಸಿದಳು. ಅಗ್ನಿ ಅದನ್ನು ಕೆಲಕಾಲ ಧರಿಸಿ, ತಾಳಲಾರದೆ ಗಂಗೆಯಲ್ಲಿ ಬಿಟ್ಟನು ಗಂಗೆ ಬೇಸತ್ತು ಶರಗುಲ್ಮದಲ್ಲಿ (ಜೊಂಡು ಹುಲ್ಲಿನಲ್ಲಿ) ಬಿಟ್ಟಳು ಅಲ್ಲಿ ಉತ್ಪನ್ನನಾದ ಕುಮಾರನೇ ಷಣ್ಮುಖನು ನೋಡು—ಕಾರ್ತಿಕೇಯ [ರಾಮಾ -೧, ೩೭ ಭಾರ - ವನ ೨೨೭ ಶಾಂತಿ ೪೫ ಅನು ೧೩೩ ಸ್ಕಾ -ಮಾಹೇ ೨೭ ಕೌಮಾರಿ.-೨೯]. ತನ್ನ ಮಗನಾದ ಭೀಷ್ಮನನ್ನು ಅರ್ಜುನನು ಕೊಂದುದಕ್ಕಾಗಿ ಅರ್ಜುನನಿಗೆ ಶಾಪವಿತ್ತಳು ನೋಡು—ಕೌರವ್ಯ, ಉಲೂಪಿ, ಚಿತ್ರಾಂಗದೆ, ಬಭ್ರುವಾಹನ

**ಗಙ್ಗಾದ್ವಾರ.**—ಹರಿದ್ವಾರ ಕ್ಷೇತ್ರದ ಹೆಸರು ಇದಕ್ಕೆ ಮಾಯಾಪುರೀ ಎಂಬುದು ನಾಮಾಂತರ ಚಂದ್ರವಂಶದ ಪ್ರತೀಪ ರಾಜನು ಈ ಸ್ಥಳದಲ್ಲಿ ತಪಸ್ಸು ಮಾಡಿದನು ಆಗ ಗಂಗೆ ಪ್ರತೀಪನ ಬಳಿಗೆ ಬಂದಳು. ನೋಡು—ಪ್ರತೀಪ [ಭಾರ.- ಆದಿ. ೧೦೩]. ಇದೇ ಸ್ಥಳದಲ್ಲಿಯೇ ತಪೋನಿರತನಾಗಿದ್ದ ಭರದ್ವಾಜ ಮುನಿಯ ತಪಸ್ಸನ್ನು ಭಂಗಗೊಳಿಸ ಬಂದ ಘೃತಾಚಿಯೆಂಬ ಅಪ್ಸರಸಿಯನ್ನು ಕಂಡು ಕ್ಷೋಭೆ

ಗೊಂಡ ಭರದ್ವಾಜನಿಂದ ದ್ರೋಣಾಚಾರ್ಯನು ಜನಿಸಿದನು [ಆದಿ. ೧೪೦]. ತೀರ್ಥ ಯಾತ್ರೆಗೆ ಹೋಗಿದ್ದ ಅರ್ಜುನನು ಈ ಪ್ರದೇಶದಲ್ಲಿ ಸ್ನಾನಮಾಡುವುದಕ್ಕಾಗಿ ಗಂಗೆ ಯೊಳಗೆ ಇಳಿದಾಗ ಉಲೂಪಿಯೆಂಬ ನಾಗಕನ್ಯೆ ಅರ್ಜುನನನ್ನು ಪಾತಾಳಲೋಕಕ್ಕೆ ಕರೆದುಯ್ದಳು [ಆದಿ. ೨೩೪]

**ಗಜ** —(i) ಸುಗ್ರೀವನ ಸೇನಾಪತಿಗಳಲ್ಲಿ ಒಬ್ಬನು [ವನ ೨೮೪].

(ii) ಒಬ್ಬ ಅರಸು ಮಗನು ಶಕುನಿಯ ಒಡಹುಟ್ಟಿದವನು. ಭಾರತ ಯುದ್ಧದಲ್ಲಿ ಅರ್ಜುನನ ಮಗನಾದ ಇರಾವಂತನಿಂದ ಹತನಾದನು

(iii) ಒಬ್ಬ ಅರಸು. ಮಹಿಷಾಸುರನ ಮಗನು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ವರಗಳನ್ನು ಪಡೆದು ದೇವತೆಗಳನ್ನು ಪೀಡಿಸುತ್ತಿರಲಾಗಿ, ದೇವತೆ ಗಳು ಶಿವನನ್ನೇ ಮರೆಹೊಕ್ಕರು. ಶಿವನು ಇವನ ಮೇಲೆ ಯುದ್ಧಕ್ಕೆ ಬಂದನು. ಆಗ ಗಜಾಸುರನು "ಸ್ವಾಮಿನ್, ನಿನ್ನಿಂದಲೇ ಸಾಯಬೇಕೆಂಬ ಉದ್ದೇಶದಿಂದಲೇ ನಾನು ದೇವತೆಗಳನ್ನು ಪೀಡಿಸಿದೆನು. ನನ್ನನ್ನು ಕೊಂದು ನನ್ನ ಚರ್ಮವನ್ನು ನೀನು ಧರಿಸು ವುದಾಗಿ ವಾಗ್ದಾನಮಾಡಿದರೆ ನಾನು ಸಂತೋಷವಾಗಿ ಸಾಯುವೆನು" ಎಂದನು. ಶಿವನು ಅದಕ್ಕೆ ಸಮ್ಮತಿಸಿ, ಅವನನ್ನು ಕೊಂದು, ಅವನ ಬಯಕೆಯಂತೆಯೇ ಮಾಡಿದನು [ಮತ್ಸ್ಯ -೧೫೨].

(iv) ಅಗಸ್ತ್ಯ ಮುನಿಯ ಶಾಪದಿಂದ ಗಜರೂಪವನ್ನು ಧರಿಸಿದ್ದ ಅರಸು. ನೋಡು—ಇಂದ್ರದ್ಯುಮ್ನ.

**ಗಜಪುರ** —ಹಸ್ತಿನಾವತಿಯ ನಾಮಾಂತರ.

**ಗಜಾನನ.**—ಗಣಪತಿಯ ನಾಮಾಂತರ. ಒಮ್ಮೆ ಪಾರ್ವತಿ ತನ್ನ ಮೆಯ್ಗೆ ಅಂಗರಾಗವನ್ನು ಬಳಿದುಕೊಳ್ಳುವಾಗ ನೆಲದ ಮೇಲೆ ಬಿದ್ದ ಅಂಗರಾಗವನ್ನೆಲ್ಲ ಒಟ್ಟು ಗೂಡಿಸಿ, ಪುರುಷಾಕಾರದ ಒಂದು ಬೊಂಬೆಯನ್ನು ಮಾಡಿದಳು ಅದು ಆನೆಯ ಹಾಗಿತ್ತು. ಬಳಿಕ ಅದನ್ನು ಗಂಗೆಯಲ್ಲಿ ಬಿಟ್ಟಳು ಗಂಗೆ ಅದನ್ನು ಪುತ್ರ ವಾತ್ಸಲ್ಯದಿಂದ "ಮಗೂ" ಎಂದು ಕರೆದಳು ಪಾರ್ವತಿಯೂ ಅಂತೆಯೇ ಕರೆದಳು ಈ ಕಾರಣದಿಂದ ಜೀವಕಳೆಯನ್ನು ತಳೆದ ಆ ವ್ಯಕ್ತಿ ದ್ವೈಮಾತುರ ನಾದನು. ಬಳಿಕ ಈತನಿಗೆ ವಿನಾಯಕನೆಂದು ಹೆಸರಿಟ್ಟು ಗಣಾಧಿಪತ್ಯವನ್ನು ಕೊಟ್ಟ ಕಾರಣ ಗಣಪತಿಯಾದನು [ಮತ್ಸ್ಯ.-೧೫೩ ಸ್ಕಾ -ಕೌಮಾ ೨೮] ದಕ್ಷ ಯಜ್ಞಧ್ವಂಸ ಸಮಯದಲ್ಲಿ ವೀರಭದ್ರನು ವಿನಾಯಕನ ತಲೆಯನ್ನೂ ಕಡಿದನು. ಇಂತು ವಿಘ್ನರಾಜನು ಮಡಿದುದರಿಂದ ತಮ್ಮ ಕಾರ್ಯಗಳು ನಿರ್ವಿಘ್ನವಾಗಿ ನೆರವೇರ ಲಾರವೆಂದು ಹೆದರಿದ ಬ್ರಹ್ಮಾದಿಗಳು ಶಿವನನ್ನು ಮರೆಹೊಕ್ಕು ಹೇಗಾದರೂ ವಿನಾಯಕನನ್ನು ಬದುಕಿಸಿಕೊಡಬೇಕೆಂದು ಬೇಡಿಕೊಂಡರು ಆಗ ಪರಮ ಕರುಣಾ

ಶಾಲಿಯಾದ ಶಿವನು "ಉತ್ತರದಿಕ್ಕಿಗೆ ತಲೆಮಾಡಿ ಮಲಗಿರುವ ಯಾವುದಾದರೊಂದು ಪ್ರಾಣಿಯ ತಲೆಯನ್ನು ತಂದು ಈ ಮುಂಡಕ್ಕೆ ಸೇರಿಸಿ" ಎಂದು ಅಪ್ಪಣೆ ಮಾಡಿದನು. ಆಗ ಹುಡುಕುವಾಗ್ಗೆ ಒಂದು ಮದಿಸಿದ ಆನೆ ಉತ್ತರಕ್ಕೆ ತಲೆಮಾಡಿ ಮಲಗಿದ್ದಿತು ಅದರ ಕೊರಳನ್ನು ಕುಯ್ದು ತಂದು ಈ ಮುಂಡಕ್ಕೆ ಸೇರಿಸಿದರು. ಇಂತು ವಿನಾಯಕನೇ ಗಜಾನನನಾದನು [ಲಿಂಗ.-೧೦೫ ಬ್ರಹ್ಮವೈ -ಗಣಪತಿಖಂ ೮]. ಒಮ್ಮೆ ಈತನು ಮೂಷಕಾರೂಢನಾಗಿ ಬಿಜಮಾಡುತ್ತಿದ್ದುದನ್ನು ಕಂಡು ಚಂದ್ರನು ನಕ್ಕನು ಗಜಾನನನು ಕುಪಿತನಾಗಿ "ನಿನ್ನನ್ನು ಚತುರ್ಥಿಯ ದಿನ ನೋಡಿದವರಿಗೆ ಅಪವಾದ ತಪ್ಪಿದುದಲ್ಲ" ಎಂದು ಶಾಪವಿತ್ತನು ಚಂದ್ರನು ಗತಿಗಾಣದೆ ಗಜಾನನನನ್ನೇ ಮರೆಹೊಕ್ಕನು ಆಗ ಗಜಾನನನು, ಚತುರ್ಥಿಯ ದಿನ ಗಣಪತಿ ವ್ರತವನ್ನು ಕೈಕೊಂಡವರಿಗೆ ಆ ಶಾಪದ ಭಯವಿಲ್ಲವೆಂದು ಅನುಗ್ರಹಿಸಿದನು ಇಂತಿರಲು ಒಂದು ಸಲ ಶ್ರೀ ಕೃಷ್ಣನು ಚತುರ್ಥಿಯ ದಿನ ಚಂದ್ರನನ್ನು ನೋಡಿದನು ಅದರ ಫಲವಾಗಿ, ಶ್ರೀ ಕೃಷ್ಣನೇ ಪ್ರಸೇನನನ್ನು ಕೊಂದು, ಸ್ಯಮಂತಕ ಮಣಿಯನ್ನು ಅಪಹರಿಸಿದನೆಂಬ ಅಪವಾದಕ್ಕೆ ಗುರಿಯಾದನು ಬಳಿಕ ಗಣಪತಿ ವ್ರತವನ್ನು ಕೈಕೊಂಡು ಆ ಶಾಪವನ್ನು ನೀಗಿಕೊಂಡನು. ನೋಡು—ಸ್ಯಮಂತಕ [ಭಾಗ ೧೦, ೫೬, ೫೭]. ವ್ಯಾಸ ಮುನಿ ಮಹಾಭಾರತವನ್ನು ರಚಿಸತೊಡಗಿದಾಗ ಭಾರತವನ್ನು ಬರೆಯುವುದಕ್ಕಾಗಿ ಗಣಪತಿಯನ್ನು ಬೇಡಿ, ಬರಮಾಡಿಕೊಂಡನು [ಆದಿ. ೧].

**ಗಜಾಸುರ.**—ಒಬ್ಬ ರಾಕ್ಷಸನು. ನೋಡು—ಗಜ

**ಗಜೇಂದ್ರ (ಗಜೇಂದ್ರಮೋಕ್ಷ)** —ನೋಡು—ಇಂದ್ರದ್ಯುಮ್ನ

**ಗಣ್ಡಕ** —ಭರತಖಂಡದೊಳಗಣ ಒಂದು ದೇಶ ಪಾಂಚಾಲ ದೇಶಕ್ಕೆ ಪೂರ್ವದಲ್ಲಿದೆ [ಭಾರ -ಸ ೩೦]

**ಗಣ್ಡಕೀ** —ಭಾರತ ವರ್ಷದ ಒಂದು ನದಿ ಇದರಲ್ಲಿರುವ ಕಲ್ಲುಗಳೇ ಸಾಲಿಗ್ರಾಮಗಳು ಈ ನದಿ ಹಿಮವತ್ಪರ್ವತದಿಂದ ಹುಟ್ಟಿ ದಕ್ಷಿಣವಾಹಿನಿಯಾಗಿ ಹರಿಯುತ್ತದೆ [ಮತ್ಸ್ಯ.-೧೧೩].

**ಗತಿ.**—ಕರ್ದಮಬ್ರಹ್ಮನ ಒಂಬತ್ತು ಮಂದಿ ಕುವರಿಯರಲ್ಲಿ ಒಬ್ಬಳು. ಸ್ವಾಯಂಭುವ ಮನ್ವಂತರದ ಪುಲಹ ಋಷಿಯನ್ನು ಮದುವೆಯಾಗಿ ಕರ್ಮಶ್ರೇಷ್ಠ, ವರೀಯಸ್, ಸಹಿಷ್ಣುಗಳೆಂಬ ಮೂವರು ಪುತ್ರರನ್ನು ಪಡೆದಳು ಇವರೆಲ್ಲರೂ ಪರಮೇಶ್ವರನ ಶಾಪದಿಂದ ಬ್ರಹ್ಮಪುತ್ರ ನದಿಯಲ್ಲಿ ಬಿದ್ದು ಮೃತರಾದರು [ಮತ್ಸ್ಯ.-೧೯೪].

**ಗದ.**—ವಸುದೇವನಿಂದ ರೋಹಿಣಿಯಲ್ಲಿ ಜನಿಸಿದವನು. ಬಲರಾಮನ ಸಹೋದರನು. ಕೃಷ್ಣನಿಗೆ ಸವತಿತಾಯ ಮಗನು. ಇವನು ಮಹಾ ಪರಾಕ್ರಮಶಾಲಿ. ಎರಡು ಕೈಗಳಿಂದಲೂ ಅಸ್ತ್ರಗಳನ್ನು ಪ್ರಯೋಗಿಸಬಲ್ಲವನು. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ನಿಂತು ಯುದ್ಧಮಾಡಿದನು. ಮಹಾಭಾರತ ಯುದ್ಧದಲ್ಲಿ ಪಾಂಡವರ ಪಕ್ಷದಲ್ಲಿ ಬದುಕಿದವರಲ್ಲಿ ಇವನೂ ಒಬ್ಬನು [ಭಾರ -ಆದಿ ೨೦೧, ೨೫೯. ಸ ೪. ಭಾಗ -೯, ೨೪] ಕೃಷ್ಣನಿರ್ಯಾಣ ಸಮಯದಲ್ಲಿ ಸತ್ತನು [ಮೌಸ ೪]

**ಗದಾಯುದ್ಧ** —ಭೀಮ ಜರಾಸಂಧರಿಗೆ [ಸಭಾ ೨೪] ಭೀಮ ದುರ್ಯೋಧನರಿಗೆ [ಶಲ್ಯ. ೩೩] ಅದರ ಭೇದಗಳು [ಸಭಾ ೨೪]

**ಗದ್ಗದ** —ಋಕ್ಷ ರಾಜರಲ್ಲಿ ಒಬ್ಬನು ಜಾಂಬವಂತ ಮತ್ತು ಕೇಸರಿ—ಇವರ ತಂದೆ [ರಾಮಾ.-೬, ೩೦]

**ಗನ್ಧಮಾದನ** —(1) ಒಂದು ಬೆಟ್ಟ ಬದರಿಕಾಶ್ರಮದ ಸಮೀಪದಲ್ಲಿದೆ [ಭೀಷ್ಮ ೬] ರಾಜಸೂಯ ಯಾಗದ ಸಂದರ್ಭದಲ್ಲಿ ಅರ್ಜುನನು ಈ ಪರ್ವತಕ್ಕೆ ಹೋಗಿ, ಅದರ ಸುತ್ತಮುತ್ತಣ ಅರಸರನ್ನು ಗೆದ್ದನು [ಸಭಾ ೨೯]. ಪಾಂಡವರು ತಮ್ಮ ತೀರ್ಥಯಾತ್ರೆಯ ಸಂದರ್ಭದಲ್ಲಿ ಈ ಪರ್ವತಕ್ಕೆ ಹೋಗಿದ್ದರು [ವನ ೧೪೩]. ಭೀಮಸೇನನು ಸೌಗಂಧಿಕಪುಷ್ಪವನ್ನು ತರುವುದಕ್ಕಾಗಿ ಕುಬೇರನ ಉದ್ಯಾನಕ್ಕೆ ಹೋಗುವಾಗ ಇಲ್ಲಿಗೆ ಹೋಗಿದ್ದನು [ವನ ೧೫೩]. ಇದು ಮೇರು ಪರ್ವತಕ್ಕೆ ಪಶ್ಚಿಮದಲ್ಲಿದೆ ಇದು ದಕ್ಷಿಣೋತ್ತರನಾಗಿ ಹಬ್ಬಿ ನೀಲ ಮತ್ತು ನಿಷಧಪರ್ವತಗಳನ್ನು ಸೇರಿಕೊಂಡಿದೆ ಇದಕ್ಕೂ ಪಶ್ಚಿಮ ಸಮುದ್ರಕ್ಕೂ ನಡುವಣ ಭೂ ಭಾಗಕ್ಕೆ ಭದ್ರಾಶ್ವವರ್ಷವೆಂದು ಹೆಸರು [ಭಾಗ -೫, ೧೬]

(11) ಹಿಮಾಲಯ ಪರ್ವತದ ಒಂದು ಶಿಖರಕ್ಕೂ ಈ ಹೆಸರು ಸಲ್ಲುತ್ತದೆ. ಪಾಂಡವರು ವನವಾಸ ಸಮಯದಲ್ಲಿ ಇಲ್ಲಿ ವಾಸಮಾಡುತ್ತಿದ್ದಾಗ, ಇಂದ್ರಕೀಲ ಪರ್ವತದಿಂದ ದೇವಲೋಕಕ್ಕೆ ಹೋಗಿದ್ದ ಅರ್ಜುನನು ಇಲ್ಲಿಗೆ ಬಂದು ಪಾಂಡವರನ್ನು ಸಂಧಿಸಿದನು [ವನ ೧೬೫]

(111) ಸುಗ್ರೀವನ ಕಪಿಸೇನಾ ನಾಯಕರಲ್ಲಿ ಒಬ್ಬನು. ಕುಂಭಕರ್ಣನನ್ನು ಯುದ್ಧದಲ್ಲಿ ಇದಿರಿಸಿದ ಮಹಾವೀರನು [ರಾಮಾ.-ಯು. ೬೪, ೬೮]

(1v) ಯದುವಂಶದ ಶ್ವಫಲ್ಕನಿಂದ ಗಾಂದಿನಿಯಲ್ಲಿ ಜನಿಸಿದ ೧೩ ಮಂದಿ ಪುತ್ರರಲ್ಲಿ ಒಬ್ಬನು ಅಕ್ರೂರನ ಸಹೋದರನು [ಭಾಗ -೧೦, ೫೭]

**ಗನ್ಧರ್ವ.**—ದೇವಗಾಯಕರು. ಇವರ ಉತ್ಪತ್ತಿ ಮತ್ತು ಹೆಸರುಗಳು [ಭಾರ.-ಆದಿ. ೬೬].

**ಗನ್ಧವತೀ.**—ಸತ್ಯವತಿಯ ನಾಮಾಂತರ [ಆದಿ. ೬೪]

**ಗಯ.**—(i) ಒಬ್ಬ ರಾಜ. ಪ್ರಿಯವ್ರತವಂಶದ ಋಷಭದೇವನ ಸಂತತಿಯಲ್ಲಿ ಪೃಥುಷೇಣನೆಂಬ ರಾಜನಿಂದ ದ್ಯುತಿ(ದ್ರುತಿ)ಯೆಂಬವಳಲ್ಲಿ ಜನಿಸಿದವನು. ಈತನಿಗೆ ಗಯಂತಿಯೆಂಬ ಹೆಂಡತಿಯಲ್ಲಿ ಚಿತ್ರರಥ, ಸುಗತಿ, ಅವರೋಧನರೆಂಬ ಮೂವರು ತನಯರು ಜನಿಸಿದರು [ಭಾಗ -೫, ೧೫]

(ii) ಚಂದ್ರವಂಶದ ವಿಜಯಕುಲೋತ್ಪನ್ನನಾದ ಅಮೂರ್ತ್ತರಯನ ಮಗನು. ಈತನು ಅನೇಕ ಯಜ್ಞಗಳನ್ನು ಮಾಡಿ ಚಿನ್ನದಿಂದಲೇ ಯಜ್ಞವೇದಿಕೆಯನ್ನು ನಿರ್ಮ್ಮಿಸಿ, ಯಾಗಾವಸಾನದಲ್ಲಿ ಆ ವೇದಿಕೆಯನ್ನು ಬ್ರಾಹ್ಮಣರಿಗೆ ಹಂಚಿಕೊಟ್ಟನು. ಈತನ ಯಜ್ಞಶಾಲೆ ವಾನರಮಾಲಿನೀ ನದಿಯ ತೀರದಲ್ಲಿ ನಿರ್ಮಿತವಾಗಿದ್ದು ಅದರ ಬಳಿ ತುಪ್ಪವನ್ನೂ ಜೇನನ್ನೂ ಸಮೃದ್ಧಿಯಾಗಿ ತುಂಬಿದ್ದನು. ಯಜ್ಞ ಮುಗಿದ ಬಳಿಕ ಈತನು ಅಗ್ನಿಪುರುಷನ ಅನುಗ್ರಹದಿಂದ ಘೃತವನ್ನೂ ಮಧುವನ್ನೂ ನದಿಯ ರೂಪವಾಗಿ ಹರಿಸುವಂತೆ ಮಾಡಿದನು ಅವು ಘೃತಕುಲ್ಯಾ, ಮಧುಕುಲ್ಯಾ ಎಂಬ ಹೆಸರಿನಿಂದ ಪ್ರವಹಿಸಿದುವು [ಭಾರ -ವನ ೯೫. ಸಭಾ ೮ ದ್ರೋ ೬೬ ಶಲ್ಯ ೨೮].

(iii) ಚಂದ್ರವಂಶದ ಆಯು ರಾಜನಿಂದ ಸ್ವರ್ಭಾನುವಿನಲ್ಲಿ ಜನಿಸಿದವನು. ನಹುಷ ಮತ್ತು ಅನೇನಸರು ಇವನ ಸಹೋದರರು [ಆದಿ ೬೯]

(iv) ಒಬ್ಬ ರಾಕ್ಷಸ ಇವನು ವಿಷ್ಣುವಿನ ವರಪ್ರದಾನದಿಂದ ಮತ್ತನಾಗಿ ಲೋಕಕಂಟಕನಾದನು. ದೇವತೆಗಳು ಬ್ರಹ್ಮನಲ್ಲಿ ಮೊರೆಯಿಟ್ಟರು ಬ್ರಹ್ಮನು ಗಯನ ಬಳಿಗೆ ಬಂದು, "ಅಯ್ಯಾ, ನಾನೊಂದು ಯಜ್ಞವನ್ನು ಮಾಡಬೇಕೆಂದಿರುವೆನು ಯಜ್ಞವೇದಿಕೆಯನ್ನು ಕಲ್ಪಿಸಲು ನಿನ್ನ ದೇಹಕ್ಕಿಂತಲೂ ಪರಿಶುದ್ಧವಾದ ಪ್ರದೇಶ ಮತ್ತೊಂದಿಲ್ಲ" ಎನಲು ಗಯನು ಉಬ್ಬಿಹೋಗಿ, ತನ್ನ ಶರೀರದ ಮೇಲೆಯೇ ವೇದಿಕೆಯನ್ನು ರಚಿಸುವಂತೆ ಹೇಳಿದನು. ಬ್ರಹ್ಮನು ಗಯನ ಎದೆಯ ಮೇಲೆ ವಿಶಾಲವಾದ ಒಂದು ಹಾಸುಗಲ್ಲನ್ನಿಟ್ಟು ವೇದಿಯನ್ನು ರಚಿಸಿದನು. ಗಯನು ಅಲುಗಾಡಿದಾಗ ಆ ವೇದಿಯೂ ಅಲ್ಲಾಡತೊಡಗಿತು. ಆಗ ವಿಷ್ಣು ಗಯನು ಕದಲದಿರುವಂತೆ ಅವನ ಮೇಲೆ ನಿಂತನು. ಆಗ ಗಯನು "ನಾನು ಸತ್ತ ಬಳಿಕ ಈ ಪ್ರದೇಶ ಪುಣ್ಯಕ್ಷೇತ್ರವಾಗುವ ಹಾಗೆ ವರವನ್ನು ಕೊಡುವುದಾದರೆ ನಾನು ಅಲುಗದಿರುವೆನು. ಆ ಕ್ಷೇತ್ರವೂ ನನ್ನ ಹೆಸರಿನಿಂದಲೇ ಪ್ರಖ್ಯಾತಿ ಪಡೆಯಬೇಕು ಈಗ ನಾನು ತಲೆಯಿಟ್ಟಿರುವ ಪ್ರದೇಶ ಪರಮ ಪುಣ್ಯಸ್ಥಲವೆನಿಸಿ, ಈ ಪ್ರದೇಶದಲ್ಲಿ ಪಿತೃಪ್ರೀತ್ಯರ್ಥವಾಗಿ ಮಾಡಿದ ಪಿಂಡದಾನ ಅಕ್ಷಯ್ಯವಾಗಬೇಕು" ಎಂದು ಬೇಡಿದನು. ವಿಷ್ಣು "ತಥಾಸ್ತು" ಎಂದನು. ಇಂತು ಗಯನು ನಿರ್ಯಾಣಹೊಂದಿದ ಪ್ರದೇಶವೇ ಗಯಾಕ್ಷೇತ್ರವೆನಿಸಿತು. ಅವನ ತಲೆ

ಯಿದ್ದ ಭೂ ಭಾಗವೇ ಗಯಾಶೀರ್ಷವೆನಿಸಿ ಪ್ರಸಿದ್ಧಿ ಪಡೆದಿತು. ಈಗಲೂ ಈ ಪ್ರದೇಶದಲ್ಲಿ ಯಾತ್ರಿಕರು ಪಿತೃಪ್ರೀತ್ಯರ್ಥವಾಗಿ ಪಿಂಡವನ್ನು ಕೊಡುತ್ತಾರೆ [ಆದಿ. ೨೩೫. ವನ. ೮೩. ವಾಯು -೧೦೬] ಒಬ್ಬ ಗಂಧರ್ವ. ಮಣಿಪುರದ ಅರಸು. ಶಿವಭಕ್ತಾಗ್ರೇಸರ. ಒಮ್ಮೆ ಇವನು ಶಿವಪೂಜೆಗಾಗಿ ಕೈಲಾಸಕ್ಕೆ ಹೋಗಿದ್ದು, ಹಿಂದಿರುಗಿ ತನ್ನ ಮಡದಿ ಮಕ್ಕಳೊಂದಿಗೆ ವಿಮಾನದಲ್ಲಿ ಕುಳಿತು ಬರುವಾಗ ಕರ್ಪೂರವೀಳೆಯವನ್ನು ಸೇವಿಸುತ್ತ ತಂಬುಲವನ್ನು ಉಗುಳಿದನು. ಆ ತಂಬುಲ, ಸೂರ್ಯನಿಗೆ ಅರ್ಘ್ಯವನ್ನು ಕೊಡುವ ಸಲುವಾಗಿ ಬೊಗಸೆಯಲ್ಲಿ ನೀರನ್ನು ಹಿಡಿದುಕೊಂಡು ಕಣ್ಮುಚ್ಚಿ ನಿಂತಿದ್ದ ಶ್ರೀ ಕೃಷ್ಣನ ಬೊಗಸೆಯಲ್ಲಿ ಬಿದ್ದಿತು. ಶ್ರೀ ಕೃಷ್ಣನು ಕಣ್ದೆರೆದು ನೋಡುವಷ್ಟರಲ್ಲಿ ನೀರೆಲ್ಲ ಕೆಂಪೇರಿದ್ದಿತು. ಕ್ರುದ್ಧನಾಗಿ "ಇಂತಹ ಅಪರಾಧವನ್ನು ಮಾಡಿದವನನ್ನು ಕೊಲ್ಲದೆ ಬಿಡೆನು" ಎಂದು ಪ್ರತಿಜ್ಞೆ ಮಾಡಿದನು ಈ ಸುದ್ದಿ ಗಯನ ಕಿವಿಗೂ ಬೀಳದಿರಲಿಲ್ಲ. ಗಯನು ಅತ್ಯಂತ ಭೀತನಾಗಿ ಕಂಡಕಂಡ ದೇವತೆಗಳಿಗೆಲ್ಲ ಮೊರೆಯಿಟ್ಟನು ಯಾರೂ ಇವನಿಗೆ ಅಭಯ ಕೊಡಲಿಲ್ಲ ಕಡೆಗೆ ನಾರದರ ಸೂಚನೆಯ ಮೇರೆಗೆ ಅರ್ಜುನನನ್ನು ಮರೆಹೊಕ್ಕು ಅಭಯವನ್ನು ಕೇಳಿದನು. ಅರ್ಜುನನು ಹಿಂದುಮುಂದು ನೋಡದೆ ಅಭಯಪ್ರದಾನಮಾಡಿ, ಬಳಿಕ ಗಯನ ಪೂರ್ವೋತ್ತರಗಳನ್ನು ತಿಳಿದು, ಚಕಿತನಾಗಿ ತನ್ನ ಅವಿವೇಕವನ್ನು ನಿಂದಿಸುತ್ತಿರುವಷ್ಟರಲ್ಲಿ, ಈ ಸುದ್ದಿ ನಾರದರ ಮೂಲಕ ಶ್ರೀ ಕೃಷ್ಣನಿಗೂ ತಿಳಿದುಬಂತು. "ಒಡನೆಯೇ ಗಯನನ್ನು ತನಗೆ ಬಿಟ್ಟುಕೊಡಬೇಕು" ಎಂಬುದಾಗಿ ಕೃಷ್ಣನು ಹೇಳಿಕಳುಹಿದ ದೂತನು ಬಂದು ಅರ್ಜುನನಿಗೆ ತಿಳಿಸಿದನು ಧರ್ಮಾದಿಗಳು "ಎಂತಹ ಕಿರುಕುಳಕ್ಕೆ ಸಿಕ್ಕಿದೆವು?" ಎಂಬುದಾಗಿ ಚಿಂತೆಮಾಡತೊಡಗಿದರು ಆಗ ಧೀರನಾದ ಪಾರ್ಥನು "ಮರೆಹೊಕ್ಕವರನ್ನು ಎಷ್ಟುಮಾತ್ರಕ್ಕೂ ಬಿಟ್ಟುಕೊಡಲಾರೆನು" ಎಂಬುದಾಗಿ ಹೇಳಿಕಳುಹಲಾಗಿ, ಕೃಷ್ಣಾರ್ಜುನರು ಗಯನಿಗಾಗಿ ಇದಿರಿಸಿ ಯುದ್ಧ ಮಾಡಬೇಕಾಯಿತು. ಆಗ ದೇವತೆಗಳೆಲ್ಲರೂ ಅಲ್ಲಿಗೆ ಬಂದು ಅವರಿಬ್ಬರನ್ನೂ ಸಮಾಧಾನಪಡಿಸಿ, ಗಯನನ್ನು ಶ್ರೀ ಕೃಷ್ಣನ ಚರಣಗಳಿಗೆ ಅಡ್ಡಬೀಳಿಸಿ, ಅಭಯಪ್ರದಾನ ಮಾಡಿಸಿದರು ಈ ಕಥೆ ಗಯೋಪಾಖ್ಯಾನವೆಂಬ ಹೆಸರಿನಿಂದ ಜನಜನಿತವಾಗಿದ್ದರೂ ಭಾರತ ಭಾಗವತಾದಿಗಳಲ್ಲಿ ಎಲ್ಲಿಯೂ ಕಂಡುಬರುವಂತಿಲ್ಲ.

**ಗಯಾ.**—ಒಂದು ಕ್ಷೇತ್ರ. ನೋಡು—ಗಯ.

**ಗರುಡ.**—ಪಕ್ಷಿರಾಜ ಕಶ್ಯಪ ಮುನಿಯಿಂದ ವಿನತೆಯಲ್ಲಿ ಜನಿಸಿದವನು. ಮಹಾ ಪರಾಕ್ರಮಸಂಪನ್ನನು. ಸೂರ್ಯನ ಸಾರಥಿಯಾದ ಅರುಣನ ತಮ್ಮ [ಭಾರ.- ಆದಿ. ೨೩, ೬೬. ಸಭಾ ೯. ಉ ೧೧೨]. ತನ್ನ ಜನನಿಯಾದ ವಿನತೆ ಕದ್ರುವಿಗೆ (ನೋಡು –ಕದ್ರೂ) ದಾಸಿಯಾಗಿದ್ದುದರಿಂದಲೂ, ತಾನು ಅಂತಹವಳ ಮಗನಾ

ಗಿದ್ದುದರಿಂದಲೂ ತಾನೂ ಕದ್ರುವಿನ ಮಾತಿನಂತೆ ನಡೆಯಬೇಕಾಗಿದ್ದಿತು. ಒಮ್ಮೆ ಕದ್ರು ತನ್ನ ಮಕ್ಕಳನ್ನು ಇವನು ಹೆಗಲಮೇಲೆ ಏರಿಸಿಕೊಂಡು ಸುತ್ತಾಡಿಸಿ ಬರುವಂತೆ ಗರುಡನಿಗೆ ಹೇಳಿದಳು. ಅಂತೆಯೇ ಗರುಡನು, ಅವರನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡು ಆಕಾಶಕ್ಕೆ ಹಾರಿ ಬಹಳಹೊತ್ತಿನವರೆಗೆ ಹಾರಾಡುತ್ತಿದ್ದು ಕೆಳಕ್ಕೆ ಇಳಿಯುವಷ್ಟರಲ್ಲಿ ಕದ್ರುವಿನ ಮಕ್ಕಳಲ್ಲಿ ಅನೇಕ ಮಂದಿ ಸೂರ್ಯನ ತಾಪವನ್ನು ತಟ್ಟಿಕೊಳ್ಳಲಾರದೆ ಸತ್ತುಹೋಗಿದ್ದರು ಇದನ್ನು ಕಂಡು ಕದ್ರು ಗರುಡನನ್ನು ನಾನಾ ಪ್ರಕಾರವಾಗಿ ಬಯ್ದು, ಗದರಿಸಿ, ನಿಂದಿಸಿದಳು ಗರುಡನು ಅದನ್ನು ಸಹಿಸಲಾರದೆ ತನ್ನ ಜನನಿಯ ಬಳಿಗೆ ಸಾರ್ದು "ಜನನೀ, ನಾನೇಕೆ ಇವರಿಗೆ ಅಡಿಯಾಳಾಗಿರಬೇಕು? ನೀನು ಇವಳಿಗೆ ದಾಸಿಯಾಗಿರಲು ಕಾರಣವೇನು? ನನ್ನನ್ನು ಹೇಡಿಯೆಂದು ತಿಳಿದೆಯಾ? ಮೂರು ಲೋಕವನ್ನೂ ಧ್ವಂಸಮಾಡತಕ್ಕ ಪರಾಕ್ರಮವುಳ್ಳ ನಾನು ಇವಳಲ್ಲಿ ದಾಸನಾಗಿರಬೇಕೇ?" ಎಂದು ಕೇಳಿದನು ಈ ಮಾತಿಗೆ ಸುಪರ್ಣೆ ಸಂಗತಿಗಳನ್ನೆಲ್ಲ ವಿವರಿಸಿದಳು ಬಳಿಕ ಗರುಡನು ಕದ್ರುವಿನ ಬಳಿಗೆ ಹೋಗಿ ತನ್ನ ತಾಯಿಯ ದಾಸ್ಯವನ್ನು ತಪ್ಪಿಸಬೇಕಾದರೆ ಏನುಮಾಡಬೇಕೆಂಬುದಾಗಿ ಕೇಳಿದಲ್ಲಿ, ಕದ್ರು "ಅಮೃತವನ್ನು ತಂದುಕೊಟ್ಟಲ್ಲಿ ವಿನತೆ ದಾಸ್ಯದಿಂದ ಬಿಡುಗಡೆ ಹೊಂದುವಳು" ಎಂದಳು ಆಗ ಗರುಡನು ತಂದೆಯ ಬಳಿಗೆ ಬಂದು ನಮಸ್ಕರಿಸಿ, ಆತನ ಅನುಮತಿಯನ್ನು ಪಡೆದು, ದೇವಲೋಕಕ್ಕೆ ಹೋಗಿ, ಅಮೃತ ರಕ್ಷಕರನ್ನು ಕೊಂದು, ಅಮೃತಕಲಶದ ಸುತ್ತಲೂ ಸಂಚರಿಸುತ್ತಿದ್ದ ಚಕ್ರವನ್ನು ಉಪಾಯದಿಂದ ತಪ್ಪಿಸಿಕೊಂಡು, ಇಂದ್ರನ ವಜ್ರಾಯುಧಪ್ರಹಾರವನ್ನು ಲೆಕ್ಕಿಸದೆ, ಅಗ್ನಿಬಾಧೆಯನ್ನೂ ನೀಗಿಸಿ, ಸೂಕ್ಷ್ಮರೂಪದಿಂದ ಒಳಹೊಕ್ಕು, ಅಲ್ಲಿ ಕಾವಲಿದ್ದ ಘಟಸರ್ಪಗಳನ್ನು ಕೊಂದು ಅಮೃತಕಲಶವನ್ನು ತೆಗೆದುಕೊಂಡು ಹಾರಿಬರುತ್ತಿದ್ದನು. ಅಷ್ಟರಲ್ಲಿ ಇಂದ್ರನು ಈ ಸಮಾಚಾರವನ್ನು ಕೇಳಿ, ವಜ್ರವನ್ನೆಸೆಯಲು ಅದನ್ನು ತಿರಸ್ಕರಿಸಲೊಲ್ಲದೆ, ಆ ವಜ್ರಾಯುಧಕ್ಕೆ ತನ್ನ ಒಂದು ಗರಿಯನ್ನು ಮಾತ್ರ ಬಲಿಗೊಟ್ಟು ಮುಂದುವರಿದನು ಆಗ ಇಂದ್ರನು ಇವನ ಸಾಮರ್ಥ್ಯಕ್ಕೆ ಮೆಚ್ಚಿ ಸ್ನೇಹಭಾವದಿಂದ "ಅಯ್ಯಾ, ಈ ಅಮೃತವನ್ನು ಹೆರರ ಪಾಲು ಮಾಡಬೇಡ" ಎಂದನು. ಆಗ ಗರುಡನು ತನ್ನ ಸಂಕಲ್ಪವನ್ನು ತಿಳುಹಲಾಗಿ, ಇಂದ್ರನೂ ಅದಕ್ಕೆ ಸಮ್ಮತಿಸಿ, ಸರ್ಪಗಳು ಗರುಡನಿಗೆ ಆಹಾರವಾಗಿರುವಂತೆ ವರವನ್ನಿತ್ತು ಕಳುಹಿದನು. ಬಳಿಕ ಅಮೃತಕಲಶದೊಂದಿಗೆ ಕದ್ರುವಿನ ಬಳಿಸಾರ್ದು ಅಡ್ಡಬೀಳಲಾಗಿ, ಕದ್ರು ವಿನತೆಯನ್ನು ದಾಸ್ಯದಿಂದ ಬಿಡುಗಡೆ ಮಾಡಿದಳು [ಭಾರ.-ಆದಿ. ೨೫, ೩೨, ೩೪. ಅನು. ೨೭, ೨೮]. ಇಂತು ಗರುಡನ ಸಾಮರ್ಥ್ಯವನ್ನು ಕಂಡು ಸಂತಸಗೊಂಡ ವಿಷ್ಣು ಗರುಡನಿಗೆ ಸುಪರ್ಣನೆಂಬ ಹೆಸರನ್ನು ಕೊಟ್ಟು ಆತನನ್ನು ತನ್ನ ವಾಹವನ್ನಾಗಿ

ಮಾಡಿಕೊಂಡು ಲೋಕೋತ್ತರ ಶಕ್ತಿಸಾಮರ್ಥ್ಯವನ್ನು ಅನುಗ್ರಹಿಸಿದನು ಮತ್ತು ತನ್ನ ಧ್ವಜದಲ್ಲಿ ನೆಲಸಿರುವಂತೆ ಹೇಳಿದನು [ಆದಿ ೩೩] ಗರುಡನು ಹುಟ್ಟಿದ್ದು [ಆದಿ. ೨೩, ಅನು ೨೧] ವಾಲಖಿಲ್ಯರು ತಪಸ್ಸು ಮಾಡಿದುದರಿಂದ ಗರುಡನು ಹುಟ್ಟಿದ್ದು ಪಕ್ಷಿರಾಜ್ಯದಲ್ಲಿ ಅಭಿಷೇಕ [ಆದಿ. ೩೧] ದೇವತೆಗಳು ಗರುಡನನ್ನು ಹೊಗಳಿದ್ದು [ಆದಿ ೨೩] ಹುಟ್ಟಿದಕೂಡಲೇ ಸಂಚರಿಸತೊಡಗಿದ್ದು [ಆದಿ. ೨೫]. ಗರುಡಶಬ್ದ ನಿರ್ವಚನ [ಆದಿ ೩೦] ಗರುಡನ ಮಕ್ಕಳು ಸಾವಿರ ಮಂದಿ ಗಂಧಮಾದನ ಪರ್ವತದ ಗುಹೆಯಲ್ಲಿ ವಾಸಮಾಡುತ್ತಿದ್ದರು ತಾರಕಾಸುರನು ಇವರನ್ನು ಗೆದ್ದು ತನ್ನ ರಥಕ್ಕೆ ವಾಹನನಾಗಿರಿಸಿದನು [ಸ್ಕಾ-ಕೌಮಾ. ೨೦] ಗರುಡನ ಪುತ್ರರು—ಸುಮುಖ, ಸುನಾಮ, ಸುನೇತ್ರ, ಸುವರ್ಚ, ಸುರುಚೀ, ಸುಬಲ, ಸುವರ್ಣಚೂಡ ಮುಂತಾದವರು [ಉದ್ಯೋ ೧೦೨] ಗರುಡನು ಗರ್ವಿತನಾಗಲು, ವಿಷ್ಣು ತನ್ನ ತೋಳನ್ನು ಗರುಡನ ಮೇಲೆ ಇರಿಸಿ, ಆತನ ಗರ್ವವನ್ನು ಮುರಿದದ್ದು [ಉ ೧೦೫]. ವಿಷ್ಣುಭಕ್ತನಾದ ಗಾಲವನನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ನಾನಾ ದೇಶಗಳನ್ನು ಸುತ್ತುತ್ತ ಪೂರ್ವದಿಕ್ಕಿಗೆ ಹೊರಟಾಗ ನಡುದಾರಿಯಲ್ಲಿ ವಿಶ್ರಮಿಸಿಕೊಳ್ಳುವುದಕ್ಕಾಗಿ ಋಷಭಾಚಲದಲ್ಲಿ ಇಳಿದನು ಅಲ್ಲಿದ್ದ ಶಾಂಡಿಲಿಯೆಂಬ ಬ್ರಾಹ್ಮಣಿಯನ್ನು ಕಂಡು, ಆಕೆಯಿಂದ ಆತಿಥ್ಯವನ್ನು ಪಡೆದು, ಆಕೆಯ ವಿಷಯದಲ್ಲಿ ಕೇಡು ಬಗೆದು, ಗರುಡನ ರೆಕ್ಕೆಗಳೆಲ್ಲವೂ ಉದುರಿಹೋದದ್ದು ಮರಳಿ ಆಕೆಯ ಅನುಗ್ರಹದಿಂದ ಹೊಸ ರೆಕ್ಕೆಗಳು ಹುಟ್ಟಲು, ಮುಂದಕ್ಕೆ ಪ್ರಯಾಣಮಾಡಿದನು [ಉದ್ಯೋ ೧೦೭, ೧೧೩] ಗರುಡನು ಕಶ್ಯಪನೊಂದಿಗೂ, ಮಿಕ್ಕ ಮುನಿಗಳೊಂದಿಗೂ ನಾರಾಯಣನ ಮಹಿಮೆಯ ವಿಷಯವಾಗಿ ಸಂವಾದಮಾಡಿದ್ದು [ಅನು ೪೦, ೪೨]. ಪರಶುರಾಮನು ಗರುಡನ ಮಹಿಮೆಯನ್ನು ವಿವರಿಸಿದ್ದು [ಅನು ೧೯]. ನೋಡು—ಕಾಳಿಯ, ಗರುಡಕಲ್ಪ, ಗರುಡತೀರ್ಥ, ವಾಲಖಿಲ್ಯ, ಮಾತಲಿ

**ಗರುಡಕಲ್ಪ**—ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಬ್ರಹ್ಮನ ಒಂದು ತಿಂಗಳಿನ ೧೪ನೆಯ ದಿನದಲ್ಲಿ ಗರುಡನು ಅವತರಿಸಿದನು ಆ ದಿನಕ್ಕೆ ಗರುಡಕಲ್ಪವೆಂದು ಹೆಸರು ನೋಡು—ಕಲ್ಪ [ಮತ್ಸ್ಯ-೨೮೯].

**ಗರುಡತೀರ್ಥ**—ಗೌತಮೀ ನದಿಯಲ್ಲಿ ಒಂದು ಪ್ರದೇಶ ಇಂದ್ರನ ವರವನ್ನು ಅನುಸರಿಸಿ, ಗರುಡನು ಸರ್ಪಗಳನ್ನು ತಿನ್ನತೊಡಗಿದನು. ಒಮ್ಮೆ ಆದಿಶೇಷನ ಮಗನಾದ ಮಣಿನಾಗನನ್ನು ಮೂಗಿನಿಂದ ಕಚ್ಚಿಹಿಡಿದು ಆಕಾಶಕ್ಕೆ ಹಾರಿದನು. ಮಣಿನಾಗನು ಶಿವನನ್ನು ಬೇಡಿಕೊಂಡನು ಶಿವನು ತನ್ನ ಮಾತು ನಡೆಯದಿರಲು ನಂದೀಶ್ವರನ ಮೂಲಕ ವಿಷ್ಣುವಿಗೆ ಹೇಳಿಕಳುಹಿದನು. ವಿಷ್ಣು ಮಣಿನಾಗನನ್ನು ಬಿಟ್ಟುಬಿಡುವಂತೆ ಗರುಡನಿಗೆ ಹೇಳಿದನು. ಗರುಡನು ಆಗಲೂ ಬಿಡಲಿಲ್ಲ. ವಿಷ್ಣು

ವಿಗೆ ಕೋಪಬಂದು ಗರುಡನ ಬಲ ಕುಗ್ಗುವಂತೆ ಶಾಪವಿತ್ತನು. ಗರುಡನು ತೇಜೋಹೀನನಾಗಿ ಮರುಗುತ್ತ ವಿಷ್ಣುವನ್ನು ಮರೆಹೊಕ್ಕನು ವಿಷ್ಣು ಶಿವನನ್ನು ತೋರಿದನು. ಗರುಡನು ಶಿವನ ಬಳಿ ಮೊರೆಯಿಟ್ಟನು. ಆಗ ಶಿವನು, ಗೌತಮೀ ನದಿ ಯಲ್ಲಿ ಮಿಂದು ಬರುವಹಾಗೆ ಗರುಡನಿಗೆ ಹೇಳಿದನು ಇಂತು ಗರುಡನು ಸ್ನಾನಮಾಡಿ, ತನ್ನ ಪೂರ್ವ ಬಲಸಾಮರ್ಥ್ಯಗಳನ್ನು ಪಡೆದ ಪ್ರದೇಶ ಗರುಡತೀರ್ಥವೆನಿಸುತ್ತದೆ [ಬ್ರ.ವೈ.]

**ಗರುಡವ್ಯೂಹ.**—ಒಂದು ಬಗೆಯ ಸೇನಾವಿನ್ಯಾಸ ಭಾರತ ಯುದ್ಧದ ಮೂರನೆಯ ದಿನದಲ್ಲಿ ಭೀಷ್ಮನು ಕೌರವ ಸೇನೆಯನ್ನು ಗರುಡಾಕಾರವಾಗಿ ನಿಲ್ಲುವಂತೆ ಏರ್ಪಡಿಸಿದ್ದನು [ಭಾರ.-ಭೀ. ೫೬].

**ಗರುಡಾಚಲ**—ಒಂದು ಬೆಟ್ಟ. ವರಾಹಾವತಾರ ಮುಗಿದ ಬಳಿಕ, ಅದೇ ರೂಪ ದಿಂದಲೇ ವೈಕುಂಠಕ್ಕೆ ಹೋದಲ್ಲಿ ಲಕ್ಷ್ಮಿ ತನ್ನನ್ನು ಪರಿಹಾಸಮಾಡುವಳೆಂಬ ಭಾವನೆಯಿಂದ, ವಿಷ್ಣು ಗರುಡನನ್ನು ಕರೆದು, ವೈಕುಂಠದಲ್ಲಿರುವ ತನ್ನ ಕ್ರೀಡಾ ಪರ್ವತವನ್ನು ಭೂ ಲೋಕಕ್ಕೆ ತರಹೇಳಿದನು ಗರುಡನು ತಂದನು. ಬಳಿಕ ವಿಷ್ಣು ಇಲ್ಲಿಯೇ ನಿಲ್ಲಲಾಗಿ, ಲಕ್ಷ್ಮಿ ಕೆಲ ಕಾಲದವರೆಗೆ ನಿರೀಕ್ಷಿಸಿ, ವಿಷ್ಣು ಭೂಮಿಯಲ್ಲಿ ನಿಂತನೆಂಬುದನ್ನು ತಿಳಿದು, ತಾನೂ ಆಕಾಶರಾಯನಿಗೆ ಪದ್ಮಾವತಿಯೆಂಬ ಹೆಸರಿ ನಿಂದ ಮಗಳಾಗಿ ಜನಿಸಿ, ಆತನನ್ನೇ ಮದುವೆಯಾದಳು ಇಂತು ಗರುಡನು ತಂದ ಬೆಟ್ಟಕ್ಕೆ ಗರುಡಾಚಲವೆಂದು ಹೆಸರು ಇದನ್ನು ಈಗ ತಿರುಪತಿ ಬೆಟ್ಟವೆಂದು ಕರೆ ಯುತ್ತಾರೆ [ಸ್ಕಾ -ವೈಷ್ಣವಖಂ ವೆಂ ಮಾ ೧]

**ಗರ್ಗ**—ಒಬ್ಬ ಮಹರ್ಷಿ [ಭಾರ - ಅನು ೪೯] ಯಾದವರ ಪುರೋಹಿತ. ನೋಡು—ಕಾಲಯವನ [ಭಾಗ -೧೦-೮] ದಿವೋದಾಸನ ಮಗನಾದ ಪ್ರತರ್ದನನ ಪುತ್ರನು. ವತ್ಸ ಮುನಿ ಈತನ ಒಡಹುಟ್ಟಿದವನು [ವಾಯು -೯೨]

**ಗರ್ಭ.**—ಗರ್ಭೋತ್ಪತ್ತಿ ಪ್ರಕಾರ [ಆದಿ ೮೪ ಅಧ್ಯಾ ರಾ.-ಕಿಷ್ಕಿ. ೮. ಭಾಗ - ३, ३೧]. ಜೀವನು ಗರ್ಭವನ್ನು ಪ್ರವೇಶಿಸುವುದು [ಅಶ್ವ. ೧೯. ಸ್ತ್ರೀ ೪. ಅನು. ೨೨೮. ಭಾಗ -३, ३೧. ಮಾರ್ಕ -೧೧. ಸ್ಕಾ -ಕೌ. ೪೯, ೫೦ ವಿಷ್ಣು.-೬-೫]. ಗರ್ಭ ವನ್ನು ನಾಶಗೊಳಿಸುವ ಗ್ರಹಗಳು [ವನ. ೨३೦]

**ಗವಯ.**—ಒಬ್ಬ ವಾನರ. ಸುಗ್ರೀವನ ಸೇನಾಧಿಪತಿ.

**ಗವಲ್ಗಣ.**—ಧೃತರಾಷ್ಟ್ರನ ಮಂತ್ರಿ ಮತ್ತು ಸಾರಥಿ ಈತನ ಮಗನೇ ಸಂಜಯ [ಆದಿ. ೬೪].

**ಗವಾಕ್ಷ.**—(1) ಒಬ್ಬ ವಾನರ. ಕಪಿಸೇನಾನಾಯಕರಲ್ಲಿ ಒಬ್ಬನು. ಕುಂಭ ಕರ್ಣನನ್ನು ಇದಿರಿಸಿದವನು [ರಾಮಾ.-ಯು. ೬೫, ೬೮]

(11) ಒಬ್ಬ ಕ್ಷತ್ರಿಯ ಕುಮಾರ ಶಕುನಿಯ ಸಹೋದರ. ಭಾರತಯುದ್ಧದಲ್ಲಿ ಇರಾವಂತನಿಂದ ಹತನಾದನು [ಭೀಷ್ಮ. ೯೦] ಭೀಮಸೇನನಿಂದ ಹತನಾದನು [ದ್ರೋ. ೧೫೮].

**ಗವಿಜಾತ.**—ಒಬ್ಬ ಮುನಿ. ಚ್ಯವನ ಮುನಿ ಜಲಮಧ್ಯದಲ್ಲಿ ಮುಳುಗಿ ತಪಸ್ಸು ಮಾಡುತ್ತಿರಲಾಗಿ, ಬೆಸ್ತರು ಮೀನು ಹಿಡಿಯುವುದಕ್ಕಾಗಿ ಬೀಸಿದ ಬಲೆಯೊಳಕ್ಕೆ ಸಿಕ್ಕಬಿದ್ದನು. ಅಷ್ಟರಲ್ಲಿ ಅಲ್ಲಿಗೆ ಬಂದ ನಹುಷ ರಾಜನು ಆತನನ್ನು ಬಿಡಿಸುವ ಉದ್ದೇಶದಿಂದ ಬೆಸ್ತರನ್ನು ಕಂಡು, ಅಯ್ಯಾ, ಈತನನ್ನು ಬಿಟ್ಟುಕೊಡಿ ಈತನ ತೂಕದಷ್ಟು ಚಿನ್ನವನ್ನು ನಿಮಗೆ ಕೊಡುತ್ತೇನೆಂದು ಹೇಳಿದನು ಬೆಸ್ತರೂ ಅದಕ್ಕೆ ಒಪ್ಪಿಕೊಂಡರು ಬಳಿಕ ಚ್ಯವನ ಮುನಿಯನ್ನು ತಕ್ಕಡಿಯಲ್ಲಿ ಕುಳ್ಳಿರಿಸಿ ತೂಕ ಮಾಡತೊಡಗಿದಾಗ, ನಹುಷನ ರಾಜ್ಯವನ್ನೆಲ್ಲ ಅರ್ಪಿಸಿದರೂ ಸಾಲಲಿಲ್ಲ. ನಹುಷನು ದಿಕ್ಕುತೋರದವನಾದನು ಆಗ ಗವಿಜಾತನು ಅಲ್ಲಿಗೆ ಬಂದು ಪವಿತ್ರವಾದ ಬ್ರಾಹ್ಮಣನ ದೇಹಕ್ಕೆ ಸರಿತೂಗುವಂತಹ ವಸ್ತು ಆಕಳೇ ಹೊರತು ಬೇರೆ ಯಾವುದೂ ಆಗಲಾರದೆಂದನು [ಅನು ೮೩]

**ಗಾಙ್ಗೇಯ**—ಗಂಗೆಯ ಮಗ ಅರ್ಥಾತ್ ಭೀಷ್ಮ

**ಗಾಣ್ಡೀವ.**—ಒಂದು ದಿವ್ಯ ಧನುಸ್ಸು [ಆದಿ ೨೫೧] ಮೊತ್ತಮೊದಲು ಬ್ರಹ್ಮನಲ್ಲಿತ್ತು ಬಳಿಕ ಇಂದ್ರನಿಗೂ, ತರುವಾಯ ವರುಣನಿಗೂ ಬಂದು ಸೇರಿತು ಆಮೇಲೆ ಅಗ್ನಿ ಅದನ್ನು ವರುಣನಿಂದ ಪಡೆದುಕೊಂಡನು ಖಾಂಡವ ವನ ದಾಹ ಸಮಯದಲ್ಲಿ ಅರ್ಜುನನು ತನಗೆ ಮಾಡಿದ ಉಪಕಾರಕ್ಕಾಗಿ ಇದನ್ನು ಆತನಿಗೆ ಕೊಟ್ಟನು ಇದರ ಮಹಿಮೆಯಿಂದ ಅರ್ಜುನನು ಎಲ್ಲ ದಿಕ್ಕುಗಳನ್ನೂ ಗೆದ್ದು ಇಂದ್ರನನ್ನೂ ಸೋಲಿಸಿದನು ಇದು ಅರ್ಜುನನ ಮುಖ್ಯವಾದ ಬಿಲ್ಲು ಈ ಕಾರಣದಿಂದಲೇ ಅರ್ಜುನನಿಗೆ ಗಾಂಡೀವಿಯೆಂದು ಹೆಸರು ಗಾಂಡೀವಶಬ್ದ ನಿರ್ವಚನ [ಉದ್ಯೋ ೯೮]. ಅರ್ಜುನನು ಇದರ ತುದಿಯಿಂದ ಶಿವನ ತಲೆಯ ಮೇಲೆ ಹೊಡೆದು ಗಾಯಮಾಡಿದ್ದು [ವನ. ೩೯]. ಮಹಾಪ್ರಸ್ಥಾನ ಸಮಯದಲ್ಲಿ ಇದನ್ನು ಸಮುದ್ರದಲ್ಲಿ ಬಿಸಾಡಿದ್ದು [ಮಹಾಪ್ರ ೧].

**ಗಾಧಿ.**—ಒಬ್ಬ ಕ್ಷತ್ರಿಯ ಚಂದ್ರವಂಶದ ಜಹ್ನುರಾಜನ ಸಂತತಿಯಲ್ಲಿ ಜನಿಸಿದ ಕುಶಿಕ ರಾಜನ ಮಗನು. ಕನ್ಯಾಕುಬ್ಜ ದೇಶದ ಅರಸು. ಪುರುಕುತ್ಸನ ಮಗಳು ಈತನ ಜನನಿ. ಈತನ ಮಗನೇ ವಿಶ್ವಾಮಿತ್ರ [ಆದಿ ೧೯-೧. ಭಾಗ.-೯, ೧೫. ಹರಿ.-೧, ೨೭]. ಈತನಿಗೆ ಸತ್ಯವತಿಯೆಂಬ ಮಗಳಿದ್ದಳು. ಋಚೀಕ ಮುನಿ ಈಕೆಯನ್ನು ಕಂಡು ಮೋಹಭರಿತನಾಗಿ, ಗಾಧಿಯನ್ನು ಕೇಳಿದನು. ಬಳಿಕ ಗಾಧಿಯು ಇಷ್ಟದಂತೆ ಕನ್ಯಾಶುಲ್ಕವನ್ನು ತಂದುಕೊಟ್ಟು ಮದುವೆಯಾದನು. ಬಳಿಕ ಗಾಧಿ

ಋಚೀಕನ ಅನುಗ್ರಹದಿಂದ ವಿಶ್ವಾಮಿತ್ರನನ್ನು ಪಡೆದನು [ವನ. ೧೧೬. ಶಾಂ ೪೮ ಅನು ೭]

**ಗಾನ್ದಿನಿ.**—ಕಾಶಿರಾಜನ ಮಗಳು ಈಕೆ ಹನ್ನೆರಡು ವರ್ಷಗಳವರೆಗೆ ಮಾತೃ ಗರ್ಭದಲ್ಲಿಯೇ ಇದ್ದಳು. ಕಾಶಿರಾಜನು ಚಿಂತಾಕ್ರಾಂತನಾಗಿ, ತನ್ನ ಪುರೋಹಿತನ ಸೂಚನೆಯ ಮೇರೆಗೆ ಯದುವಂಶದ ಶ್ವಫಲ್ಕನನ್ನು ಬರಮಾಡಿಕೊಂಡು, ವಿದ್ಯ ಮಾನವನ್ನು ತಿಳಿಸಲಾಗಿ, ಶ್ವಫಲ್ಕನು ಗರ್ಭದಲ್ಲಿರುವುದು ಹೆಂಗೂಸೆಂದು ತಿಳಿದು "ಎಲೌ, ನಿನ್ನ ತಾಯಿಯನ್ನು ಹೀಗೆ ಪೀಡಿಸಲು ಕಾರಣವೇನು ? ಬೇಗನೆ ಹೊರಗೆ ಬಾ" ಎಂದನು ಆಗ ಆ ಶಿಶು "ನಾನು ಹುಟ್ಟಿದುದು ಮೊದಲು ಅನುದಿನವೂ ಒಂದೊಂದು ಗೋವನ್ನು ದಾನಮಾಡುವುದಾದರೆ ನಾನು ಕೂಡಲೇ ಹೊರಬರುತ್ತೇನೆ" ಎಂದಳು ರಾಜ ದಂಪತಿಗಳು ಸಂತೋಷದಿಂದ ಒಪ್ಪಿಕೊಂಡರು ಕೂಡಲೇ ಪ್ರಸವನಾಯಿತು ಆ ದೇಶದಲ್ಲಿ ಹನ್ನೆರಡು ವರ್ಷಗಳಿಂದಲೂ ಮಳೆ ಬೀಳದಿದ್ದು ಇವಳು ಜನಿಸಿದ ಕೂಡಲೇ ಆಗ ಸುವೃಷ್ಟಿಯಾಯಿತು ಬಳಿಕ ಅವಳನ್ನು ಶ್ವಫಲ್ಕನಿಗೇ ಕೊಟ್ಟು ಮದುವೆಮಾಡಿದರು ನೋಡು—ಅಕ್ರೂರ [ಭಾಗ.- ೧೦, ೫೭]

**ಗಾನ್ಧರ್ವವೇದ**—ಸಾಮವೇದಕ್ಕೆ ಉಪವೇದ ಸಂಗೀತಶಾಸ್ತ್ರ ಇದರಲ್ಲಿ ವರ್ಣಿತ ವಾಗಿದೆ ಇದು ಚತುರ್ಮುಖನ ಪಶ್ಚಿಮದಿಕ್ಕಿನ ಮುಖದಿಂದ ಹೊರಬಂದುದು ವೇದಗಳೂ, ಉಪವೇದಗಳೂ ಸತ್ಯಲೋಕದಲ್ಲಿ ಮೂರ್ತಿಮಂತಗಳಾಗಿರುತ್ತವೆ [ಭಾಗ -೩, ೧೨ ಅಧ್ಯಾ -೧-೧ ಬ್ರಹ್ಮಾ-ಉತ್ತರ ೬೧]

**ಗಾನ್ಧಾರ.**—ಒಂದು ದೇಶ ಇದು ಕಾಬೂಲ್ (ಕಾಪಿಲ) ನದೀ ತೀರದಲ್ಲಿ ಸಿಂಧು ಮತ್ತು ಕುನಾರ್ ನದಿಗಳ ನಡುವೆ ಇದೆ ಪುರುಷಪುರ (ಪೆಷಾವರ್) ಎಂಬುದು ಇದರ ರಾಜಧಾನಿ. ಶ್ರೀ ರಾಮನ ಕಾಲದಲ್ಲಿ ತಕ್ಷಶಿಲೆ ಇದರ ರಾಜಧಾನಿಯಾಗಿತ್ತು ಇದಕ್ಕೆ ಪುಷ್ಕರಾವತಿಯೆಂಬುದು ನಾಮಾಂತರ [ರಾಮಾ - ಉತ್ತ. ೧೦೦. ಭಾರ -ಭೀ. ೯] ಪಾಂಡವರ ಕಾಲಕ್ಕೆ ಮೊದಲು ಇದರಲ್ಲಿ ಧೃತರಾಷ್ಟ್ರನ ಮಾವನಾದ ಸುಬಲನು ರಾಜ್ಯಭಾರಮಾಡುತ್ತಿದ್ದನು ಈ ಕಾರಣದಿಂದಲೇ ಧೃತರಾಷ್ಟ್ರನ ಪತ್ನಿಗೂ ಆಕೆಯ ಸಹೋದರರಿಗೂ ಗಾಂಧಾರೀ, ಗಾಂಧಾರ ಎಂಬ ಹೆಸರುಗಳು ಸಲ್ಲುತ್ತವೆ. ಆದರೆ ಮಹಾಭಾರತದಲ್ಲಿ ಈ ಶಬ್ದ ವಿಶೇಷವಾಗಿ ಶಕುನಿಗೇ ಅನ್ವಯಿಸುತ್ತದೆ.

**ಗಾನ್ಧಾರೀ**—(1) ಒಬ್ಬ ರಾಜ ಪುತ್ರಿ. ಚಂದ್ರವಂಶದ ವಿಕುಂಜನನ ಮಗನಾದ ಅಜಮೀಢನನ್ನು ಮದುವೆಯಾಗಿದ್ದಳು. ಕೈಕಯಿ, ನಾಗಾ, ವಿಮಲಾ, ಋಕ್ಷಾ ಎಂಬ ನಾಲ್ವರು ಈಕೆಯ ಸವತಿಯರು [ಆದಿ. ೬೩].

(ii) ಗಾಂಧಾರ ದೇಶದ ಅರಸನಾದ ಸುಬಲನ ಮಗಳು. ಈಕೆಗೆ ಶಕುನಿ ಮೊದಲಾದ ಹದಿಮೂರು ಮಂದಿ ಸಹೋದರರೂ, ಸತ್ಯವ್ರತಾ, ಸತ್ಯಸೇನಾ, ಸುದೇಷ್ಣಾ, ಸಂಹಿತಾ, ತೇಜಶ್ಶ್ರವಾ, ಸುಶ್ರವಾ, ನಿಕೃತಿ, ಶುಭಾ, ಶಮ್ಭುಟಾ, ದಶಾರ್ಣಾ ಎಂಬುದಾಗಿ ಹತ್ತು ಮಂದಿ ಸೋದರಿಯರೂ ಇದ್ದರು ಈಕೆ ಧೃತರಾಷ್ಟ್ರನ ವಿಕ್ರಮಾದಿ ಗುಣಸಂಪತ್ತಿಗೆ ಮರುಳಾಗಿ ಆತನು ಕುರುಡನಾಗಿದ್ದರೂ ಆತನನ್ನೇ ಮದುವೆಯಾದಳು [ಭಾರ.-ಆದಿ. ೬೩, ೧೧೦]. ಈಕೆ ಮಹಾ ಪತಿವ್ರತೆ. ಬಾಲ್ಯದಲ್ಲಿಯೇ ಶಿವನನ್ನು ಆರಾಧನೆಮಾಡಿ, ನೂರು ಮಂದಿ ಮಕ್ಕಳಾಗುವ ಹಾಗೆ ವರವನ್ನು ಪಡೆದಳು. ಈಕೆ ಗರ್ಭಿಣಿಯಾಗಿದ್ದಾಗ, ಕುಂತಿ ಅರಣ್ಯದಲ್ಲಿ ಧರ್ಮಪುತ್ರನನ್ನು ಪಡೆದಳೆಂಬ ಸುದ್ದಿಯನ್ನು ಕೇಳಿ, ತನಗೆ ಇನ್ನೂ ಮಗು ಹುಟ್ಟದಿರುವುದಕ್ಕಾಗಿ ಅನುದಿನವೂ ಮರುಗುತ್ತಿದ್ದು, ಒಂದು ದಿನ ಬಲಾತ್ಕಾರದಿಂದ ಗರ್ಭವನ್ನು ಹೊರತೆಗೆಯಲು ಪ್ರಯತ್ನ ಮಾಡಲಾಗಿ, ಆ ಗರ್ಭ ಹೊರಬಿದ್ದು, ಮೃತಪ್ರಾಯವಾಗಿದ್ದ, ಅಂಗುಷ್ಠ ಪ್ರಮಾಣದ ನೂರು ಚೂರುಗಳು ಕಂಡುಬಂದುವು ಇದನ್ನು ಕಂಡು ಗಾಂಧಾರಿ ಚಿಂತಿಸುತ್ತಿರುವಲ್ಲಿ, ಕೃಷ್ಣದ್ವೈಪಾಯನನು ಅಲ್ಲಿಗೆ ಬಂದು, ಗಾಂಧಾರಿಯನ್ನು ಸಂತವಿಸಿ, ಒಡನೆಯೇ ನೂರು ತುಪ್ಪದ ಗಡಿಗೆಗಳನ್ನು ತರಿಸಿ, ಆ ಪಿಂಡ ಖಂಡಗಳನ್ನು ಅವುಗಳಲ್ಲಿರಿಸಿದನು ಕೆಲ ಕಾಲದ ಬಳಿಕ ಆ ಕುಂಭಗಳಿಂದ ನೂರು ಮಂದಿ ಪುತ್ರರು ಹೊರಬಂದರು. ಈ ಸಮಯದಲ್ಲಿಯೇ ಕುಂತಿ ಭೀಮನನ್ನು ಹೆತ್ತಳು [ಆದಿ ೧೨೬, ೧೨೯] ಈಕೆ ಧರ್ಮವಿನಾಶಕದೇವತೆಯ ಅಂಶದಿಂದ ಜನಿಸಿದವಳು [ಆದಿ ೬೭] ಈಕೆಯ ಸೋದರಿಯರು ಹತ್ತು ಮಂದಿಯೂ ಕೂಡ ಧೃತರಾಷ್ಟ್ರನನ್ನೇ ಮದುವೆಯಾದರು [ಆದಿ ೧೧೯] ಗಾಂಧಾರಿ ದುಶ್ಶಲೆಯೆಂಬ ಕನ್ಯೆಯನ್ನು ಹೆತ್ತಳು [ಆದಿ. ೧೩೦]. ದುರ್ಯೋಧನನು ಪ್ರಾಪ್ತವಯಸ್ಕನಾದ ಬಳಿಕ ಪಾಂಡವರಿಗೂ ಕೌರವರಿಗೂ ಪ್ರಬಲವಾದ ದ್ವೇಷ ಅಂಕುರಿಸಿದುದನ್ನು ಕಂಡು, ತನ್ನ ಮಕ್ಕಳಿಗೆ ನಾನಾ ವಿಧದಿಂದ ಬುದ್ಧಿವಾದವನ್ನು ಹೇಳಿದಳು ಭಾರತ ಯುದ್ಧಕ್ಕೆ ಮುಂಚಿತನಾಗಿ, ಸರ್ವಪ್ರಕಾರದಿಂದಲೂ ಯುದ್ಧವನ್ನು ಮಾಡಲೇಕೂಡದೆಂದು ಒತ್ತಿ ಒತ್ತಿ ಹೇಳಿದಳು [ಉದ್ಯೋ ೧೨೯]. ದುರ್ಯೋಧನನು ಹತನಾದ ತರುವಾಯ ಗಾಂಧಾರಿ ರಣರಂಗವನ್ನು ಹೊಕ್ಕು ಗೋಳಾಡುತ್ತಿದ್ದಾಗ ಶ್ರೀ ಕೃಷ್ಣನು ಆಕೆಯನ್ನು ಸಂತವಿಸಿದ್ದು [ಶಲ್ಯ ೬೪]. ಪುತ್ರಶೋಕವಿಹ್ವಲೆಯಾದ ಗಾಂಧಾರಿ ಯುಧಿಷ್ಠಿರನಿಗೆ ಶಾಪ ಕೊಡಬೇಕೆಂದಿರುವಾಗ ವ್ಯಾಸ ಮುನಿ ಆಕೆಯನ್ನು ಶಾಂತಿಗೊಳಿಸಿದ್ದು [ಸ್ತ್ರೀ ೧೩]. ಗಾಂಧಾರಿ ರಣರಂಗದಲ್ಲಿ ಮಡಿದ ತನ್ನ ಮಕ್ಕಳ ಶವಗಳನ್ನು ಕೃಷ್ಣನಿಗೆ ತೋರಿ ಗೋಳಾಡಿದ್ದು [ಸ್ತ್ರೀ. ೧೮, ೨೫]. ಗಾಂಧಾರಿಯ ಕ್ರೂರ ದೃಷ್ಟಿಪಾತದಿಂದ ಯುಧಿಷ್ಠಿರನ ಉಗುರುಗಳೆಲ್ಲವೂ ವಕ್ರವಾದದ್ದು [ಸ್ತ್ರೀ. ೧೫]. ದುರ್ಯೋಧನನ ನಡೆ

ವಳಿಯ ವಿಷಯವಾಗಿ, ಗಾಂಧಾರಿ ಭೀಮಸೇನನೊಂದಿಗೆ ವಿವಾದಮಾಡಿದ್ದು [ಸ್ತ್ರೀ ೧೪] ಗಾಂಧಾರಿ ಕೃಷ್ಣನನ್ನು ಕುರಿತು, ಇಂತು ಕುರುಕುಲ ವಿನಾಶಕ್ಕೆ ನೀನೆ ಮುಖ್ಯಕಾರಣವಾದುದರಿಂದ "ಇಂದಿಗೆ ಮೂವತ್ತಾರನೆಯ ವರ್ಷದಲ್ಲಿ ನಿನ್ನ ಬಂಧುಬಳಗವೆಲ್ಲವೂ ಹಾಳಾಗಲಿ" ಎಂದು ಶಪಿಸಿದ್ದು [ಸ್ತ್ರೀ ೨೫]. ಪುತ್ರಶೋಕ ಪೀಡಿತೆಯಾಗಿ, ದುಃಖಭರಿತೆಯಾಗಿದ್ದ ದ್ರೌಪದಿಯನ್ನು ಸಂತವಿಸಿ, ಪಟ್ಟೆವಸ್ತ್ರ ದಿಂದ ತನ್ನ ಕಣ್ಣುಗಳನ್ನು ಬಿಗಿಸಿದ್ದು [ಸ್ತ್ರೀ. ೧೫] ಗಾಂಧಾರಿ ವ್ಯಾಸಮುನಿಯ ಅನುಗ್ರಹದಿಂದ ದಿವ್ಯಚಕ್ಷುಸ್ಸನ್ನು ಪಡೆದು, ತನ್ನ ಪುತ್ರರನ್ನು ಕಂಡು, ಆಲಿಂಗಿಸಿ, ಮುದ್ದಾಡಿ, ಗೋಳಾಡಿದ್ದು [ಸ್ತ್ರೀ ೧೬, ೧೭] ಯುಧಿಷ್ಠಿರನು ಪಟ್ಟಾಭಿಷಿಕ್ತ ನಾದ ತರುವಾಯ ಕೆಲವು ದಿನಗಳವರೆಗೆ ಅವನ ಸಂಗಡಲೇ ಹಸ್ತಿನಾವತಿಯ ಲ್ಲಿದ್ದದ್ದು, ಒಮ್ಮೆ ಭೀಮನು ಬಿರುನುಡಿಗಳಿಂದ ನೋಯಿಸಲಾಗಿ, ಧೃತರಾಷ್ಟ್ರನು ಆ ಮಾತುಗಳಿಂದ ಮನನೊಂದು, ವೈರಾಗ್ಯವನ್ನು ತಳೆದು ವಿದುರ, ಕುಂತಿ, ಗಾಂಧಾರಿಯರನ್ನು ಸಂಗಡ ಕರೆದುಕೊಂಡು ತಪೋವನಕ್ಕೆ ಹೋದದ್ದು [ಆಶ್ರಮ. ೧೭]. ಕೆಲ ಕಾಲದ ಬಳಿಕ ಒಂದು ದಿನ ಧೃತರಾಷ್ಟ್ರನು ಗಾಂಧಾರಿ, ಕುಂತಿ, ಸಂಜಯರ ಸಂಗಡ, ಗಂಗೆಗೆ ಹೋಗಿ, ಮಿಂದು, ಹಿಂದಿರುಗಿ ಬರುವಾಗ ನಡುದಾರಿ ಯಲ್ಲಿ ಕಾಳ್ಕಿಚ್ಚು ಇವರನ್ನೆಲ್ಲಾ ಸುತ್ತಿಕೊಳ್ಳಲಾಗಿ, ಧೃತರಾಷ್ಟ್ರನು ಸಂಜಯ ನನ್ನು ಬಲಾತ್ಕಾರದಿಂದ ದೂರಕ್ಕೆ ಕಳುಹಿ, ಕುಂತಿ, ಗಾಂಧಾರಿಯರ ಸಂಗಡ ಕಾಳ್ಕಿಚ್ಚನ್ನು ಹೊಕ್ಕಾಗ ಧೃತರಾಷ್ಟ್ರನು ದೇಹತ್ಯಾಗ ಮಾಡಿದಕೂಡಲೇ ಗಾಂಧಾರಿ ತಾನೂ ಜೀವವನ್ನು ತೊರೆದಳು [ಆಶ್ರ ೩೯]

**ಗಾಯತ್ರಿ**.—ಬ್ರಾಹ್ಮಣನ ಜ್ಞಾನಶಕ್ತಿ ಗಾಯತ್ರಿ, ಸಾವಿತ್ರಿ, ಸರಸ್ವತಿ ಎಂಬ ನಾಮಾಂತರಗಳೂ ಇವೆ ಈ ದೇವತೆಯನ್ನು ಉಪಾಸನೆ ಮಾಡುವುದಕ್ಕೆ ಸಾಧನವಾದ ಒಂದು ಮಂತ್ರವಿಶೇಷಕ್ಕೂ ಇದೇ ಹೆಸರು. ಆ ಮಂತ್ರವನ್ನು ಜಪ ಮಾಡುವುದರ ಮಹಿಮೆ ಮುಂತಾಗಿ [ಭಾರ -ಅಶ್ವ ೯೯, ೧೧೫. ದೇ. ಭಾಗ.-೧೨-೧-೭]. ಗಾಯತ್ರೀ ಪುರಶ್ಚರಣಾದಿಗಳು [ದೇ ಭಾಗ -೧೧, ೨೧]

**ಗಾರ್ಗ್ಯ**.—(i) ಒಬ್ಬ ಋಷಿ ಅಂಗಿರಸನೆಂಬ ಋಷಿಯ ವಂಶದವನು. ಈತನು ಕೇಕಯ ದೇಶಾಧಿಪತಿಯಾಗಿದ್ದ ಯುಧಾಜಿತನ ಪುರೋಹಿತನು. ಗಂಧರ್ವ ದೇಶವನ್ನು ಗೆಲ್ಲುವ ಉದ್ದೇಶದಿಂದ ಯುಧಾಜಿತನು ಹತ್ತು ಸಾವಿರ ಕುದುರೆಗಳನ್ನೂ ಅನೇಕ ರತ್ನಾಭರಣಗಳನ್ನೂ ಈತನ ಮೂಲಕ ಶ್ರೀ ರಾಮನಿಗೆ ಕಾಣಿಕೆ ಮಾಡಿದ್ದನು [ರಾಮಾ.-ಉತ್ತ. ೯೯].

(ii) ಒಬ್ಬ ಋಷಿ. ವೇಣುಹೋತ್ರನೆಂಬ ಮುನಿಯ ಮಗನು [ವಾಯು.-೯೨]. ಒಮ್ಮೆ ವಿಷ್ಣು ಇಂದ್ರನಿಗೆ ಅನೇಕ ಧರ್ಮರಹಸ್ಯಗಳನ್ನು ತಿಳಿಸಿದನು. ಆ ಬಳಿಕ

ವಿಶ್ವಾಮಿತ್ರಾದಿ ಮುನಿಗಳೂ ವಿವರಿಸಿದರು. ಆಗ ಗಾರ್ಗ್ಯನೂ ಇಂದ್ರನಿಗೆ ಧರ್ಮ ರಹಸ್ಯಗಳನ್ನು ತಿಳಿಸಿದನು [ಅನು. ೧೯೦]. ಈತನ ಮಗನನ್ನು ಹಿಂಸೆಮಾಡಿದ ಕಾರಣ, ಪಾಂಡವರ ಮೂಲಪುರುಷನಾದ ಜನಮೇಜಯರಾಯನು ಬ್ರಹ್ಮಹತ್ಯೆಗೆ ಗುರಿಯಾಗಿ, ಶೌನಕ ಮುನಿಯ ಮೂಲಕ ಯಜ್ಞಮಾಡಿಸಿ, ಆ ಪಾತಕವನ್ನು ಕಳೆದನು [ಶಾಂತಿ.-೧೫. ಹರಿ. ೧-೩೦]

(iii) ವಿಶ್ವಾಮಿತ್ರನ ಮಕ್ಕಳಲ್ಲಿ ಒಬ್ಬನು ನೋಡು—ವಿಶ್ವಾಮಿತ್ರ [ಭಾರ.- ಅನು. ೭].

(iv) ಯಾದವರ ಪುರೋಹಿತ. ನೋಡು—ಕಾಲಯವನ, ಕೃಷ್ಣ

**ಗಾಲವ.**—(i) ಒಬ್ಬ ಋಷಿ. ವಿಶ್ವಾಮಿತ್ರ ಮಹರ್ಷಿಯಲ್ಲಿ ಶುಕ್ಲಯಜುರ್ವೇದವನ್ನು ಸಾಂಗವಾಗಿ ಅಧ್ಯಯನಮಾಡಿದ ತರುವಾಯ, ತನ್ನ ಮನೆಗೆ ಹೋಗುವಂತೆ ವಿಶ್ವಾಮಿತ್ರನಿಂದ ಅನುಜ್ಞೆಯನ್ನು ಪಡೆದು "ಸ್ವಾಮಿ, ತಮಗೆ ನಾನು ಯಾವ ವಿಧವಾದ ಗುರುದಕ್ಷಿಣೆಯನ್ನು ಸಮರ್ಪಿಸಬೇಕು?" ಎಂಬುದಾಗಿ ವಿಶ್ವಾಮಿತ್ರನನ್ನು ಕೇಳಿದನು ವಿಶ್ವಾಮಿತ್ರನು "ನಾನು ನಿನ್ನ ಶುಶ್ರೂಷೆಯಿಂದಲೇ ಸಂತುಷ್ಟನಾಗಿದ್ದೇನೆ. ನನಗೆ ಬೇರೆ ಯಾವ ದಕ್ಷಿಣೆಯೂ ಆವಶ್ಯವಿಲ್ಲ" ಎಂದು ಎಷ್ಟು ವಿಧವಾಗಿ ಹೇಳಿದರೂ, ಗಾಲವನು ಪದೇ ಪದೇ ಬಲಾತ್ಕರಿಸಿ ಕೇಳಲಾಗಿ, ವಿಶ್ವಾಮಿತ್ರನು "ಮೈಯೆಲ್ಲವೂ ಬೆಳ್ಳಗೂ ಒಂದು ಕಿವಿ ಕಪ್ಪಗೂ ಇರುವ ೮೦೦ ಕುದುರೆಗಳನ್ನು ತಂದೊಪ್ಪಿಸು" ಎಂದು ಅಪ್ಪಣೆಕೊಟ್ಟನು [ಭಾರ -ಉ. ೧೦೬, ೧೦೭]. ಗಾಲವನು ಇಂತಹ ಕುದುರೆಗಳನ್ನು ಸಂಪಾದಿಸುವುದಕ್ಕಾಗಿ ಎಷ್ಟೆಷ್ಟೋ ಪಾಡು ಪಟ್ಟನು. ಒಂದು ಕುದುರೆಯಾದರೂ ಸಿಕ್ಕಲಿಲ್ಲ ಬಳಿಕ ಇವನು ವಿಷ್ಣುವನ್ನು ಕುರಿತು ತಪಸ್ಸುಮಾಡಲಾಗಿ ವಿಷ್ಣು ಇವನ ಬಳಿಗೆ ಗರುಡನನ್ನು ಕಳುಹಿ, ಇವನ ಇಷ್ಟಾರ್ಥವನ್ನು ನೆರವೇರಿಸ ಹೇಳಿದನು ಗಾಲವನು ಗರುಡನ ಮೇಲೆ ಕುಳಿತು, ಭೂ ಮಂಡಲವನ್ನೆಲ್ಲ ಸುತ್ತಿ, ಆಶ್ಚರ್ಯಭರಿತನಾಗಿ, ಗರುಡನನ್ನು ಕುರಿತು, ನಾನು ಇಲ್ಲಿಯೇ ಇಳಿದು ದೇಹತ್ಯಾಗ ಮಾಡುತ್ತೇನೆಂದನು. ಆಗ ಗರುಡನು ಗಾಲವನಿಗೆ ಮನುಷ್ಯಜನ್ಮದ ಮಹತ್ತ್ವವನ್ನು ತಿಳಿಸಿ, ಗಾಲವನಿಂದ ಅವನ ಇಷ್ಟಾರ್ಥವೇನೆಂಬುದನ್ನು ತಿಳಿದು, ತನ್ನ ಸ್ನೇಹಿತನೂ ಪ್ರತಿಷ್ಠಾನಗರಾಧೀಶ್ವರನೂ ಆದ ಯಯಾತಿ ರಾಜನಲ್ಲಿಗೆ ಕರೆತಂದು ಅವನ ವೃತ್ತಾಂತವನ್ನೆಲ್ಲ ತಿಳುಹಿದನು ಯಯಾತಿ ರಾಜನು ತನ್ನ ಮಗಳಾದ ಮಾಧವಿಯೆಂಬ ಕನ್ಯೆಯನ್ನು ಗಾಲವನಿಗೆ ಒಪ್ಪಿಸಿ, ಅವಳನ್ನು ಯಾವ ರಾಜನಿಗಾದರೂ ಕೊಟ್ಟು ಕುದುರೆಗಳನ್ನು ಸಂಪಾದಿಸಿಕೊಳ್ಳುವ ಹಾಗೆ ಹೇಳಿದನು. ಬಳಿಕ ಗಾಲವನು ಇಕ್ಷ್ವಾಕು ರಾಜನಲ್ಲಿಗೆ ಹೋಗಿ ೨೦೦ ಕುದುರೆಗಳನ್ನು ಪಡೆದು ಮಾಧವಿಯನ್ನು ಒಪ್ಪಿಸಿದನು. ಇಕ್ಷ್ವಾಕು ಮಾಧವಿ

ಯಲ್ಲಿ ಸಂತಾನವನ್ನು ಪಡೆದ ಬಳಿಕ, ಗಾಲವನು ಮಾಧವಿಯನ್ನು ಕರೆದುಕೊಂಡು ದಿವೋದಾಸನಲ್ಲಿಗೆ ಹೋದನು. ಆತನಿಂದಲೂ ೨೦೦ ಕುದುರೆಗಳನ್ನು ಪಡೆದು, ಆ ತರುವಾಯ ಔಶೀನ ರಾಜನಿಂದ ೨೦೦ ಕುದುರೆಗಳನ್ನು ಸಂಪಾದಿಸಿ, ಈ ೬೦೦ ಕುದುರೆಗಳನ್ನೂ, ಮಿಕ್ಕ ೨೦೦ ಕುದುರೆಗಳಿಗೆ ಪ್ರತಿಯಾಗಿ ಮಾಧವಿಯನ್ನೂ ವಿಶ್ವಾಮಿತ್ರನಲ್ಲಿಗೆ ಒಪ್ಪಿಸಿದನು [ಭಾರ -ಉ ೧೧೮, ೧೧೯]. ಈತನ ಮಗನಾದ ಶೃಂಗವಂತನು ವೃದ್ಧಕನ್ಯೆಯನ್ನು ಮದುವೆಯಾದನು. ನೋಡು—ಕುಣಿಗಾರ್ಗ್ಯ [ಶಲ್ಯ. ೫೩] ಮೋಕ್ಷಸಾಧನೆಯ ವಿಷಯವಾಗಿ ನಾರದರೊಂದಿಗೆ ಸಂವಾದ ಮಾಡಿದ್ದು [ಶಾಂತಿ ೨೯೩] ಪರಮೇಶ್ವರನ ಚರಿತೆಯನ್ನು ವರ್ಣಿಸಿದ್ದು [ಅನು ೪೯]

(ii) ವಿಶ್ವಾಮಿತ್ರನ ಮಕ್ಕಳಲ್ಲಿ ಒಬ್ಬನು ಒಮ್ಮೆ ಹನ್ನೆರಡು ವರ್ಷಗಳವರೆಗೆ ಮೀರಕ್ಷಾಮ ಬಂದಿತು ಅರಸರನ್ನು ಕೇಳಿ ತಿರಿದು ಜೀವನಮಾಡಲೊಲ್ಲದ ವಿಶ್ವಾಮಿತ್ರನು ಹೆಂಡತಿ ಮಕ್ಕಳನ್ನು ಅವರ ಪಾಡಿಗೆ ಬಿಟ್ಟು ತಾನು ಎಲ್ಲಿಯೋ ಹೋದನು. ಆಗ ಅವನ ಹೆಂಡತಿ ತನ್ನ ಮಕ್ಕಳಲ್ಲಿ ಒಬ್ಬನ ಕುತ್ತಿಗೆಗೆ ದರ್ಭೆಯ ಹುರಿಯನ್ನು ಬಿಗಿದು ಅವನನ್ನು ಯಾರಿಗಾದರೂ ಮಾರಿ, ಅದರ ಮೂಲಕ ಬಂದ ಹಣದಿಂದ ಜೀವನವನ್ನು ನಡೆಯಿಸಬೇಕೆಂಬ ಉದ್ದೇಶದಿಂದ ಒಯ್ಯುತ್ತಿದ್ದಳು. ನಡುದಾರಿಯಲ್ಲಿ ಸತ್ಯವ್ರತನೆಂಬ ಅರಸು ಇವಳನ್ನು ಸಂಧಿಸಿ, ಸಮಾಚಾರವನ್ನೆಲ್ಲ ತಿಳಿದು, ವಿಶ್ವಾಮಿತ್ರನ ಕುಟುಂಬದ ಗೃಹಕೃತ್ಯವನ್ನು ತಾನು ನಿರ್ವಹಿಸುವುದಾಗಿ ಅಭಯಪ್ರದಾನಮಾಡಿ, ಆ ಹುಡುಗನನ್ನು ಬಿಡಿಸಿದನು. ಇಂತು ಕುತ್ತಿಗೆಗೆ ಗಾಳ ಹಾಕಿದವನಾದುದರಿಂದ ಗಾಲವನೆಂದು ಹೆಸರು [ದೇ ಭಾ -೭, ೧೦ ಭಾರ - ಅನು ೭ ಹರಿ.-೧, ೧೨ ವಾಯು -೮೮. ಬ್ರಹ್ಮ ೭].

(iii) ಒಬ್ಬ ಮುನಿ. ಕುಂತಲ ರಾಜನ ಪುರೋಹಿತ. ನೋಡು—ಚಂದ್ರಹಾಸ

**ಗಾವಲ್ಗಣಿ**—ಧೃತರಾಷ್ಟ್ರನ ಮಂತ್ರಿಯೂ ಸಾರಥಿಯೂ ಆಗಿದ್ದ ಗವಲ್ಗಣನ ಮಗನು ಸಂಜಯ [ಆದಿ. ೨೪೭] ಭಾರತ ಯುದ್ಧದಲ್ಲಿ ನಡೆಯುವ ಸಮಾಚಾರ ಗಳನ್ನೆಲ್ಲ ವಿವರವಾಗಿ ಇದ್ದಲ್ಲಿಯೇ ಧೃತರಾಷ್ಟ್ರನಿಗೆ ತಿಳಿಸುವುದಕ್ಕೂ ಧೃತರಾಷ್ಟ್ರನ ಪ್ರಶ್ನೆಗಳಿಗೆಲ್ಲ ತಕ್ಕ ಸಮಾಧಾನವನ್ನು ಹೇಳುವುದಕ್ಕೂ ವ್ಯಾಸ ಮುನಿ ಈತನಿಗೆ ದಿವ್ಯ ದೃಷ್ಟಿಯನ್ನು ಕೊಟ್ಟನು [ಉದ್ಯೋ. ೬೬].

"ಚಕ್ಷುಷಾ ಸಂಜಯೋ ರಾಜನ್ ! ದಿವ್ಯೇನೈವ ಸಮನ್ವಿತಃ ।
ಕಥಯಿಷ್ಯತಿ ತೇ ಯುದ್ಧಂ ಸರ್ವಜ್ಞಶ್ಚ ಭವಿಷ್ಯತಿ ॥
ಪ್ರಕಾಶಂ ವಾಪ್ರಕಾಶಂ ವಾ ದಿವಾ ವಾ ಯದಿ ವಾ ನಿಶಿ ॥
ಮನಸಾ ಚಿಂತಿತಮಪಿ ಸರ್ವಂ ವೇತ್ಸ್ಯತಿ ಸಂಜಯಃ ॥

ನೈನಂ ಶಸ್ತ್ರಾಣಿ ಛೇತ್ಸ್ಯಂತಿ ನೈನಂ ಬಾಧಿಷ್ಯತೇ ಶ್ರಮಃ।
ಗಾವಲ್ಗಣಿರಯಂ ಜೀವನ್ ಯುದ್ಧಾದಸ್ಮಾದ್ವಿಮೋಕ್ಷ್ಯತಿ ॥'' [ಭೀ. ೨].
ಈ ರೀತಿಯಾಗಿ ವ್ಯಾಸನು ಅನುಗ್ರಹಿಸಿದ್ದ ದಿವ್ಯಜ್ಞಾನ ಭಾರತಯುದ್ಧ ಮುಗಿದಬಳಿಕ ಮಾಯವಾಯಿತು [ಸೌ ೯] ನೋಡು—ಕೃಷ್ಣದ್ವೈಪಾಯನ, ಗಾಂಧಾರಿ, ಧೃತರಾಷ್ಟ್ರ.

**ಗಿರಿಕಾ** —ಕೋಲಾಹಲ ಪರ್ವತದಿಂದ ಶುಕ್ತಿಮತೀ ನದಿಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಹೆಂಗೂಸು. ಇವಳು ಉಪರಿಚರವಸುವನ್ನು ಮದುವೆಯಾದಳು. ಬೃಹದ್ರಥನೇ ಮೊದಲಾದ ಆರು ಮಂದಿ ಪುತ್ರರನ್ನೂ ಮತ್ಸ್ಯಗಂಧಿಯೆಂಬ ಮಗಳನ್ನೂ ಹೆತ್ತಳು ಈ ಮತ್ಸ್ಯಗಂಧಿಯೇ ಸತ್ಯವತಿ [ಭಾರ -ಆದಿ ೬೪].

**ಗಿರಿಭದ್ರಾ**.—ಮಿತ್ರನೆಂಬ ಅರಸನ ಹೆಂಡತಿ ಈಕೆ ಒಂದು ಗಂಡು ಶಿಶುವನ್ನು ಹೆತ್ತಳು. ಮಗು ಹುಟ್ಟಿದ ಆರನೆಯ ರಾತ್ರಿ ಗಿರಿಭದ್ರೆ ಮಗುವನ್ನು ನೋಡಿ ಹಿಗ್ಗುತ್ತಿದ್ದಳು ಅದನ್ನು ಕಂಡು ಮಗು ಫಕ್ಕನೆ ನಗತೊಡಗಿತು. ಗಿರಿಭದ್ರೆ ಮಗುವನ್ನು ಕುರಿತು, ಹಾಗೆ ನಗುವುದಕ್ಕೆ ಕಾರಣವೇನೆಂದು ಕೇಳಲಾಗಿ ''ಜಾತಹಾರಿಣಿ'' ಯೆಂಬ ರಕ್ಕಸಿ ನನಗಾಗಿ ಕಾದಿದ್ದಾಳೆ ನೀನು ನನ್ನನ್ನು ಅಕ್ಕರೆಯಿಂದ ನೋಡುತ್ತಿದ್ದೀಯೆ ''ನನ್ನಿಂದ ನಿನಗೆ ಯಾವ ಉಪಕಾರವೂ ಇಲ್ಲವಲ್ಲಾ'' ಎಂದಿತು ಗಿರಿಭದ್ರೆ ''ರಕ್ಕಸಿ'' ಎಂಬ ಶಬ್ದವನ್ನು ಕೇಳಿದ ಕೂಡಲೇ ಹೆದರಿ ಸ್ವಲ್ಪ ಹಿಂಜರಿದಳು. ಒಡನೆಯೇ ಜಾತಹಾರಿಣಿ ಮಗುವನ್ನು ಎತ್ತಿಕೊಂಡು ಹೋದಳು. ಮಿತ್ರ ರಾಜನಿಗೆ ಅನಮಿತ್ರನೆಂಬುದು ನಾಮಾಂತರ. ನೋಡು—ಚಾಕ್ಷುಷ [ಮಾರ್ಕ.-೭೩].

**ಗಿರಿವ್ರಜ**.—(I) ಕೇಕಯ ದೇಶದ ರಾಜಧಾನಿ. ಭರತನ ಮಾತಾಮಹನಾದ ಯುಧಾಜಿತನು ಇಲ್ಲಿ ರಾಜ್ಯಭಾರಮಾಡುತ್ತಿದ್ದನು [ರಾಮಾ.-ಅಯೋ. ೬೮]. ಇದಕ್ಕೆ ವಸುಮತಿಯೆಂಬುದು ನಾಮಾಂತರ [ರಾಮಾ.-ಬಾಲ. ೩೩].

(II) ಮಗಧ ದೇಶದ ಮುಖ್ಯ ಪಟ್ಟಣ. ಜರಾಸಂಧನ ರಾಜಧಾನಿ. ಈಗ ಬಿಹಾರಿಗೆ ಸೇರಿ, ರಾಜಗಿರಿಯೆಂಬ ಹೆಸರಿನಿಂದ ರೂಢವಾಗಿದೆ. ಈ ಪಟ್ಟಣದ ಸುತ್ತಲೂ ಗೋರಥ, ಋಷಭ, ವೈಹಾರ, ಚೈತ್ರಕಗಳೆಂಬ ಪರ್ವತಶ್ರೇಣಿಗಳಿವೆ. ಜರಾಸಂಧನ ಕಾಲದಲ್ಲಿ ಶತ್ರುಗಳು ಇವನ ಗಡಿಯನ್ನು ತುಳಿದರಾದರೆ ಚೈತ್ರಕಾದ್ರಿಯ ಶೃಂಗಗಳಲ್ಲಿರಿಸಿದ್ದ ನಗಾರಿಗಳು ತಾನಾಗಿಯೇ ಮೊಳಗುತ್ತಿದ್ದುವು. ಭೀಮನು ಜರಾಸಂಧನನ್ನು ಕೊಂದ ತರುವಾಯ, ಅವನ ಮಗನಾದ ಸಹದೇವನು ಇಲ್ಲಿಗೆ ಅರಸನಾದನು [ಸಭಾ. ೨೧. ೨೪].

**ಗುಡಾಕೇಶ**.—ಅರ್ಜುನನ ನಾಮಾಂತರ. ಗುಡಾಕಾ = ನಿದ್ರೆ. ಈಶ = ಅಧಿಪತಿ. ನಿದ್ರೆಯನ್ನು ಗೆದ್ದವನು. ಈ ಶಬ್ದ ಅರ್ಜುನನನ್ನೇ ಬೋಧಿಸುತ್ತದೆ [ಭಾರ.-ಆ.೧೫೧].

**ಗುಣಕೇಶಿ.**—ಇಂದ್ರನ ಸಾರಥಿಯಾದ ಮಾತಲಿಯ ಮಗಳು. ಇವಳ ತಾಯಿ ಸುಧರ್ಮೆ. ಗೋಮುಖನೆಂಬವನು ಒಡಹುಟ್ಟಿದವನು. ಮಾತಲಿ ಇವಳನ್ನು ನಾಗ ವಂಶದ ಸುಮುಖನೆಂಬವನಿಗೆ ಕೊಡಬೇಕೆಂಬ ಉದ್ದೇಶದಿಂದ ಪಾತಾಳಲೋಕಕ್ಕೆ ಹೋಗಿ, ಸುಮುಖನ ಪಿತಾಮಹನಾದ ಆರ್ಯಕನನ್ನೂ, ಮಾತಾಮಹನಾದ ವಾಮನ ನಾಗನನ್ನೂ ಕಲೆತು ಕೇಳುವಲ್ಲಿ ಅವರಿಬ್ಬರೂ ಅಯ್ಯಾ, "ಇವನಿಗೂ ಗರುಡನಿಗೂ ಪ್ರಬಲವಾದ ವೈರವುಂಟು. ಇವನ ತಂದೆಯಾದ ಚಿಕುರನಾಗನನ್ನೂ ಗರುಡನೇ ಕೊಂದನು ಇನ್ನೊಂದು ತಿಂಗಳೊಳಗಾಗಿ ಇವನನ್ನೂ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದಾನೆ" ಎಂಬುದಾಗಿ ಹೇಳಿದರು ಮಾತಲಿ ವಿಷ್ಣುವಿನ ಮೂಲಕ ಗರುಡ ನಿಗೆ ಹೇಳಿಸಿ, ಸುಮುಖನ ಗೋಜಿಗೆ ಹೋಗದಂತೆ ಮಾಡಿ, ಇಂದ್ರನ ಮೂಲಕ ಸುಮುಖನಿಗೆ ಅಮೃತವನ್ನು ಕೊಡಿಸಿ, ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು [ಭಾರ.-ಉದ್ಯೋ ೯೭, ೧೦೪]

**ಗುರು.**—(i) ನೋಡು—ಬೃಹಸ್ಪತಿ, ಜೀವ

(ii) ವಿದ್ಯೋಪದೇಶ ಮಾಡಿದವ. ಗುರುವಿನ ಮಹಿಮೆ [ಉ ೪೪. ಶಾಂ. ೧೦೮]. ಗುರುವಿನಲ್ಲಿರಬೇಕಾದ ಗುಣಗಳು [ಅಶ್ವ. ೧೧೦]. ಗುರುಪೂಜೆ [ಅನು. ೭೫]. ಗುರುತಲ್ಪ ಪ್ರಾಯಶ್ಚಿತ್ತ [ಶಾಂತಿ. ೧೬೫].

**ಗುಹ.**—(i) ಷಣ್ಮುಖನ ನಾಮಾಂತರ.

(ii) ಬೇಡರ ಅರಸು. ಶೃಂಗಬೇರ ಪುರದಲ್ಲಿ ರಾಜ್ಯಭಾರಮಾಡುತ್ತಿದ್ದ. ದಶರಥನ ಆಪ್ತಮಿತ್ರ. ರಾಮ ಅಯೋಧ್ಯೆಯಿಂದ ಅರಣ್ಯಕ್ಕೆ ಹೋಗುವಾಗ, ಗುಹ ನಿಂದ ಸತ್ಕೃತನಾಗಿ, ಒಂದು ರಾತ್ರಿ ಅಲ್ಲಿಯೇ ಇದ್ದ ಮರುದಿನ ಬೆಳಗಾಗುತಲೇ ಗುಹ ತನ್ನ ಪರಿವಾರದವರ ಮೂಲಕ ದೋಣಿಗಳನ್ನು ತರಿಸಿ, ಸೀತಾ ರಾಮ ಲಕ್ಷ್ಮಣ ರನ್ನು ಗಂಗೆಯ ದಕ್ಷಿಣತೀರಕ್ಕೆ ದಾಟಿಸಿದ [ರಾಮಾ.-ಅಯೋ. ೫೭, ೫೭]. ರಾಮ ಚಿತ್ರಕೂಟ ಪರ್ವತದಲ್ಲಿದ್ದಾಗ ಭರತ ರಾಮನನ್ನು ಹಿಂದಕ್ಕೆ ಕರೆತರುವ ಉದ್ದೇಶ ದಿಂದ ಸೇನಾಸಮೇತನಾಗಿ ಬಂದ. ಗುಹ ಭರತನ ಬರುವಿಕೆಯನ್ನು ತಿಳಿದು, ಅವನ ನಡೆವಳಿಯ ವಿಷಯವಾಗಿ ಸಂಶಯಪಟ್ಟು ಭರತನನ್ನು ಇದಿರಿಸಲು ಸಿದ್ಧ ನಾದ. ಆದರೆ ಭರತನ ಅಭಿಪ್ರಾಯ ತಿಳಿದುಬಂದ ತರುವಾಯ ಭರತನನ್ನೂ ತನ್ನ ಅತಿಥಿಯನ್ನಾಗಿಟ್ಟುಕೊಂಡು, ಉಪಚರಿಸಿ, ಅವನನ್ನೂ ಅವನ ಸೇನೆಯನ್ನೂ ಗಂಗೆಯ ಆಚೆಯ ದಡಕ್ಕೆ ಸೇರಿಸಿದ [ರಾಮಾ.-ಅಯೋ. ೮೪, ೯೭].

**ಗುಹ್ಯಕಾಸ್ತ್ರ.**—ಅಂಬೆಯ ಸಲುವಾಗಿ ಪರಶುರಾಮನಿಗೂ ಭೀಷ್ಮನಿಗೂ ನಡೆದ ಯುದ್ಧದಲ್ಲಿ ಪರಶುರಾಮ ಈ ಅಸ್ತ್ರವನ್ನು ಭೀಷ್ಮನಮೇಲೆ ಬಿಟ್ಟ [ಉದ್ಯೋ. ೧೮೦]. ನೋಡು—ಅಂಬಾ.

**ಗೃತ್ಸಮದ.**—ಒಬ್ಬ ಬ್ರಾಹ್ಮಣ. ವೀತಹವ್ಯನೆಂಬ ಅರಸು ಭೃಗು ಮಹರ್ಷಿಯ ಅನುಗ್ರಹದಿಂದ ಬ್ರಾಹ್ಮಣ್ಯವನ್ನು ಪಡೆದ ತರುವಾಯ ಜನಿಸಿದವ. ಈತನ ಮಗನು ಸಾವ್ಯೆನಸ [ಭಾರ.-ಅನು. ೮, ೪೯].

**ಗೃಧ್ರ**—ಈ ಜಾತಿಯ ಉತ್ಪತ್ತಿ ಕಥೆ [ಆದಿ. ೬೭]

**ಗೃಧ್ರ ಜಂಬುಕ ಸಂವಾದ.**—ಒಬ್ಬ ಬ್ರಾಹ್ಮಣ ಪುತ್ರನು ಸಾಯಲಾಗಿ, ಅವನ ಹೆಣವನ್ನು ಸ್ಮಶಾನಕ್ಕೆ ಕೊಂಡುಹೋಗಿ, ಬಂಧುಗಳೆಲ್ಲರೂ ಅಳುತ್ತಿರುವಲ್ಲಿ, ಅಲ್ಲಿಗೆ ಒಂದು ಹದ್ದೂ, ಒಂದು ನರಿಯೂ ಬಂದುವು. ನರಿ ಹದ್ದಿಗೆ ಮೋಸಮಾಡಿ, ಆ ಶವವನ್ನು ತಾನೇ ತಿನ್ನಬೇಕೆಂಬ ಉದ್ದೇಶದಿಂದ, ಶವದ ಅನುಯಾಯಿಗಳನ್ನು ಕುರಿತು "ಹುಚ್ಚರಿರಾ! ಈ ಹುಡುಗ ಬದುಕಬಹುದೆಂದು ತೋರುತ್ತದೆ. ಎಷ್ಟೋ ಮಂದಿ ಹಾಗೆ ಬದುಕಿಯೂ ಇದ್ದಾರೆ" ಎಂದು ಮುಂತಾಗಿ ಹೇಳಿತು. ಆಗ ಹದ್ದು, ಕತ್ತಲಾದ ಬಳಿಕ ತನಗೆ ಅವಕಾಶ ಸಿಕ್ಕಲಾರದೆಂಬ ಭಾವನೆಯಿಂದ "ಸತ್ತವರು ಎಲ್ಲಿಯಾದರೂ ಬದುಕುವುದುಂಟೇ? ಬೇಗನೆ ಚಿತೆಯಮೇಲಿರಿಸಿ ಹೋಗಿ. ಎಷ್ಟು ವ್ಯಥೆಪಟ್ಟರೂ ಫಲವಿಲ್ಲ" ಎಂದು ಮುಂತಾಗಿ ಒಕ್ಕಾಣಿಸಿತು [ಶಾಂತಿ. ೧೫೩].

**ಗೃಹಸ್ಥ.**—ಎರಡನೆಯ ಆಶ್ರಮವನ್ನು ಅವಲಂಬಿಸಿರತಕ್ಕವ. ಗೃಹಸ್ಥ ಆಚರಿಸ ಬೇಕಾದ ನಡೆವಳಿಗಳ ನಿರೂಪಣ [ಆದಿ. ೮೫. ಶಾಂತಿ ೧೮೯, ೨೪೯]. ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಉತ್ತಮವಾದದ್ದು. ಗೃಹಸ್ಥಧರ್ಮಪ್ರಶಂಸೆ [ಶಾಂತಿ. ೧೧. ಅನು. ೧೫೪. ಮಾರ್ಕ -೨೫, ೨೬]

**ಗೋ.**—(i) ಪುಲಸ್ತ್ಯ ಮುನಿಯ ಹೆಂಡತಿ. ವಿಶ್ರವಸನ ಜನನಿ. ನೋಡು—ವಿಶ್ರವ [ವನ. ೨೭೫].

(ii) ಗೋವು. ಆಕಳು. ಅದರ ಉತ್ಪತ್ತಿ [ಆದಿ. ೬೪. ಅನು. ೧೧೮]. ಮಧುಪರ್ಕ ಸಮಯದಲ್ಲಿ ಅವುಗಳನ್ನು ಉಪಯೋಗಿಸುವುದಕ್ಕೆ ಶಾಸ್ತ್ರಪ್ರಮಾಣ [ಆದಿ ೬೦]. ಗೋವಿನ ಮಹಿಮೆ [ಅನು. ೧೨೪, ೧೯೬]. ಅವುಗಳಿಗೆ ಕೊಂಬುಗಳು ಹುಟ್ಟಿದ್ದು [ಅನು ೧೧೬]. ಗೋದಾನ ಫಲವರ್ಣನೆ [ಅನು. ೧೦೬, ೧೦೯, ೨೩೫. ಅಶ್ವ. ೧೦೨]. ಗೋವನ್ನು ದಾನಮಾಡುವ ವಿಧಾನ [ಅನು. ೧೧೧]. ಅವುಗಳಿಗೆ ಗ್ರಾಸವನ್ನು ಕೊಡುವುದರ ಫಲ [ಅಶ್ವ. ೧೦೯].

**ಗೋ ಕಪಿಲ ಸಂವಾದ.**—[ಶಾಂತಿ. ೨೭೪, ೨೭೬].

**ಗೋಕರ್ಣ.**—(i) ಉತ್ತರ ದಿಕ್ಕಿನಲ್ಲಿರುವ ಪರ್ವತ [ರಾಮಾ.-ಸುಂ. ೩೫].

(ii) ದಂಡಕಾರಣ್ಯದಲ್ಲಿರುವ ಒಂದು ಪುಣ್ಯಕ್ಷೇತ್ರ. ಪೂರ್ವದಲ್ಲಿ ಕುಂಭ ಕರ್ಣನು ಇಲ್ಲಿಯೇ ತಪಸ್ಸುಮಾಡಿ, ಬ್ರಹ್ಮನನ್ನು ಒಲಿಸಿಕೊಂಡ [ರಾಮಾ.-ಉತ್ತ.

೧೦. ಭಾರ.-ವನ. ೮೩, ೮೬, ೨೭೮. ಅನು ೪೯]. ಅರ್ಜುನ ತೀರ್ಥಯಾತ್ರೆ ಸಂದರ್ಭದಲ್ಲಿ ಇಲ್ಲಿಗೆ ಬಂದಿದ್ದ [ಆದಿ ೨೩೭]. ಈ ಕ್ಷೇತ್ರ ಈಗ ಬೊಂಬಾಯಿ ಅಧಿಪತ್ಯಕ್ಕೆ ಸೇರಿದ ಉತ್ತರಕನ್ನಡ ಜಿಲ್ಲೆಯಲ್ಲಿ ಗೋವೆಯಿಂದ ३೦ ಮೈಲುಗಳ ದೂರದಲ್ಲಿದೆ. ಇದೂ ಪರಶುರಾಮ ಕ್ಷೇತ್ರಕ್ಕೆ ಸೇರಿದ್ದು

**ಗೋಗ್ರಹಣ ಪರ್ವ.**—[ವಿರಾ ೨೯, ೭೩]

**ಗೋದಾವರಿ.**—ಒಂದು ನದಿ. ಒಂದು ಕಾಲದಲ್ಲಿ ಲೋಕದಲ್ಲೆಲ್ಲ ಕ್ಷಾಮ ಆವರಿಸಿರುವಾಗ ಮುನಿಗಳೆಲ್ಲರೂ ಕುಲಪತಿಯಾದ ಗೌತಮ ಮುನಿಯ ಆಶ್ರಮವನ್ನು ಸೇರಿ ಸುಖದಿಂದಿದ್ದರು ಗೌತಮನ ತಪೋಮಹಿಮೆಯಿಂದ ಆತನ ಭೂಮಿಗಳು ಚೆನ್ನಾಗಿ ಫಲವಂತಗಳಾಗಿದ್ದವು ಇದನ್ನು ಕಂಡು ಸಹಿಸಲಾರದ ಕೆಲ ಮಂದಿ ಮುನಿಗಳು ಒಂದು ಕೃತ್ರಿಮ ಗೋವನ್ನು ಸೃಜಿಸಿ, ಆತನ ಭೂಮಿಗಳಲ್ಲಿ ಮೇಯ ಬಿಟ್ಟರು. ಗೌತಮ ಗೋವನ್ನು ಹೊಡೆಯಲು ಇಷ್ಟವಿಲ್ಲದೆ, ಒಂದು ಬೊಗಸೆಯ ನೀರನ್ನು ಅದರ ಮೇಲೆ ಚೆಲ್ಲಿದನು ಆ ಕೃತ್ರಿಮ ಪಶು ಅಲ್ಲಿಯೇ ಸತ್ತಿತು. ಇದನ್ನು ಕಂಡು ಮುನಿಗಳೆಲ್ಲರೂ ಗೌತಮನನ್ನು ಗೋಹತ್ಯೆ ಮಾಡಿದವನೆಂಬುದಾಗಿಯೂ, ಅವನ ಅನ್ನವನ್ನು ತಿನ್ನಬಾರದೆಂಬುದಾಗಿಯೂ ನಿಂದಿಸತೊಡಗಿದರು. ಆಗ ಗೌತಮ ಅವರನ್ನೆಲ್ಲ ಬೇಡಿಕೊಂಡು ತಡೆದು, ಶಿವನನ್ನು ಪ್ರಾರ್ಥಿಸಿದ ಶಿವ ಮೆಯ್ದೋರಿ ತನ್ನ ಜಡೆಯಿಂದ ಒಂದು ಹಿಡಿಯಷ್ಟು ಕೂದಲನ್ನು ಕಿತ್ತು, ಗೌತಮನಿಗೆ ಕೊಟ್ಟು ಅದರಲ್ಲಿರುವ ಗಂಗಾ ಜಲವನ್ನು ಆ ಸತ್ತ ಗೋವಿನ ಮೇಲೆ ಹಿಂಡುವ ಹಾಗೆ ಹೇಳಿದ ಗೌತಮ ಅಂತೆಯೇ ಮಾಡಲಾಗಿ ಆ ಗೋವು ಬದುಕಿಕೊಂಡಿತು ಗಂಗಾ ಜಲ ಪ್ರವಾಹರೂಪವಾಗಿ ಹರಿಯತೊಡಗಿತು ಈ ಕಾರಣದಿಂದ ಈ ನದಿಗೆ ಗೌತಮಿಯೆಂತಲೂ, ಸತ್ತ ಆಕಳು ಬದುಕಿ ನದೀ ರೂಪದಿಂದ ಹರಿಯತೊಡಗಿದುದರಿಂದ ಗೋದಾವರಿಯೆಂತಲೂ ವ್ಯವಹಾರ ಇದಕ್ಕೆ ವೃದ್ಧಗಂಗೆಯೆಂತಲೂ ಹೆಸರು ಈ ನದಿ ಸಹ್ಯವೆಂಬ ಪರ್ವತದಲ್ಲಿ ಹುಟ್ಟಿ ಹರಿಯುತ್ತದೆ [ಭಾರ.-ಆದಿ. ೨೩೫ ಸ ೯. ವನ. ೮೩ ಭೀ ೯ ಶಿವ.-ಕೋಟಿ. ೨೫, ೨೭ ದೇ.ಭಾ.-೧೨-೯. ಮತ್ಸ್ಯ.-೧೧೩]

**ಗೋಪತಿ.**—(1) ಶಿಬಿ ಚಕ್ರವರ್ತಿಯ ಮೊಮ್ಮಗನು. ಪರಶುರಾಮ ಕ್ಷತ್ರಿಯ ನಿರ್ಮೂಲಕ್ಕಾಗಿ ದಂಡಯಾತ್ರೆ ಮಾಡಿದಾಗ, ಇವನು ಅರಣ್ಯದಲ್ಲಿ ದನಗಳನ್ನು ಕಾಯುತ್ತ ತಲೆ ತಪ್ಪಿಸಿಕೊಂಡು ಕಾಲಾಂತರದಲ್ಲಿ ಶ್ರೀಕೃಷ್ಣನಿಂದ ಹತನಾದ [ವನ. ೧೨ ಶಾಂತಿ. ೪೮]

(II) ದೇವ ಗಂಧರ್ವರಲ್ಲಿ ಒಬ್ಬ. ದಕ್ಷಪುತ್ರಿಯಾದ ಮುನಿಯೆಂಬವಳಲ್ಲಿ ಕಶ್ಯಪನಿಂದ ಜನಿಸಿದವ [ಆದಿ. ೬೬].

(iii) ಪಾಂಚಾಲ ದೇಶದ ಒಬ್ಬ ಅರಸು ಇವನು ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿದ. ಇವನ ಮಗ ಸಿಂಹಸೇನಪಾಂಚಾಲ [ದ್ರೋ. ೨೩]

**ಗೋಪಾಲಕಕ್ಷ.**—ಭರತಖಂಡದೊಳಗಣ ಒಂದು ದೇಶ. ಆಗ್ನೇಯ ಕೋಸಲಕ್ಕೂ ಈಶಾನ್ಯ ಕೋಸಲಕ್ಕೂ ನಡುವೆ ಇದೆ. ರಾಜಸೂಯ ಯಾಗ ಸಮಯದಲ್ಲಿ ಭೀಮಸೇನನು ಈ ದೇಶವನ್ನು ಗೆದ್ದು, ಅದರ ಅರಸನಿಂದ ಕಪ್ಪವನ್ನು ತಂದ [ಸಭಾ. ೩೧].

**ಗೋಪ್ರತಾರ**—ಒಂದು ತೀರ್ಥ ಸರಯೂನದೀ ತೀರದಲ್ಲಿ ಫೈಜಾಬಾದಿನ ಬಳಿ ಇದೆ ಯಾತ್ರಾಸ್ಥಳ [ವನ ೮೨]

**ಗೋಬಿಲ**—ಒಬ್ಬ ಮಹರ್ಷಿ ಕಶ್ಯಪ ವಂಶದವ ದೇವದತ್ತನೆಂಬ ಮುನಿ ಮಾಡಿದ ಯಜ್ಞದಲ್ಲಿ ಉದ್ಗಾತೃವಾಗಿದ್ದು (ಸಾಮವೇದ ಮಂತ್ರಗಳನ್ನು ಪಠನ ಮಾಡತಕ್ಕವ) ಸ್ವರವನ್ನು ವ್ಯತ್ಯಸ್ತವಾಗಿ ನುಡಿದ ದೇವದತ್ತನು ಸಿಟ್ಟಿನಿಂದ "ಮೂರ್ಖಾ" ಎನ್ನುವಷ್ಟರಲ್ಲಿ ಗೋಬಿಲ "ನಿನಗೆ ಮೂರ್ಖನಾದ ಮಗನೇ ಹುಟ್ಟುವನು" ಎಂದ. ದೇವದತ್ತನು ಹೆದರಿ ಮರೆಹುಗಲಾಗಿ, "ಕೆಲ ಕಾಲ ಮೂರ್ಖನಾಗಿದ್ದು, ಬಳಿಕ ಕವಿಯಾಗುವನು" ಎಂದು ಅನುಗ್ರಹಿಸಿದನು [ದೇ. ಭಾ.].

**ಗೋಮತಿ.**—ಅಯೋಧ್ಯೆಯ ಬಳಿ ಹರಿಯುವ ಒಂದು ನದಿ. ಹಿಮವತ್ಪರ್ವತದಲ್ಲಿ ಹುಟ್ಟಿ ಗಂಗೆಯನ್ನು ಸೇರುತ್ತದೆ [ಸಭಾ ೯. ವನ ೮೨ ಭೀ ೯]

**ಗೋಮಂತ**—(i) ಕ್ರೌಂಚ ದ್ವೀಪದಲ್ಲಿರುವ ಒಂದು ಪರ್ವತ [ಭೀ. ೧೨].

(ii) ದ್ವಾರಕೆಯ ಸಮೀಪದಲ್ಲಿ ಒಂದು ಪರ್ವತ ಪಶ್ಚಿಮ ಘಟ್ಟಗಳಿಗೆ ಉತ್ತರಕ್ಕೆ ನಿರ್ಮಾನುಷವಾದ ಪ್ರದೇಶದಲ್ಲಿದೆ. ಒಮ್ಮೆ ಬಲರಾಮ, ಕೃಷ್ಣರು ಈ ಬೆಟ್ಟವನ್ನು ಹತ್ತಿರುವುದನ್ನು ಕಂಡ ಜರಾಸಂಧನು ಅವರಿಬ್ಬರನ್ನೂ ಕೊಲ್ಲುವ ಉದ್ದೇಶದಿಂದ ಈ ಪರ್ವತವನ್ನೇ ಸುಡಿಸಿದ [ಸಭಾ. ೧೪ ಹರಿ -೨, ೪೨].

(iii) ಭಾರತ ವರ್ಷದ ಒಂದು ದೇಶ ಈಗ "ಗೋವೆ"ಯೆಂದು ಪ್ರಸಿದ್ಧವಾಗಿದೆ [ಭೀ. ೯].

**ಗೋಮುಖ.**—ಇಂದ್ರನ ಸಾರಥಿಯಾದ ಮಾತಲಿಯ ಮಗ ಇವನು ಇಂದ್ರನ ಮಗನಾದ ಜಯಂತನ ಸಾರಥಿ [ಸಭಾ. ೧೦೦].

**ಗೋರಥ.**—ಒಂದು ಬೆಟ್ಟ. ಮಗಧ ದೇಶದ ರಾಜಧಾನಿಯಾದ ಗಿರಿವ್ರಜದ ಸಮೀಪದಲ್ಲಿರುವ ಐದು ಪರ್ವತಗಳಲ್ಲಿ ಒಂದು [ಸಭಾ. ೨೦].

**ಗೋಲಾಙ್ಗೂಲ.**—ವಾನರ ಜಾತಿ ಪ್ರಭೇದ. ಇವುಗಳ ಬಾಲ ಆಕಳಿನ ಬಾಲದ ಹಾಗೆ ಇರುತ್ತದೆ. ಇವು ಕಶ್ಯಪ ಪತ್ನಿಯಾದ ಕ್ರೋಧವಶೆಯಲ್ಲಿ ಜನಿಸಿದ ಹರಿಯೆಂಬವಳಿಂದ ಜನಿಸಿದವು [ಆದಿ ೬೭].

**ಗೋಲೋಕ ವರ್ಣನೆ.**—ಬ್ರಹ್ಮಲೋಕಕ್ಕಿಂತಲೂ ಮೇಲುಗಡೆ ಇದೆ. ಗೋ ದಾನ ಮಾಡಿದವರು ಈ ಲೋಕಕ್ಕೆ ಹೋಗುತ್ತಾರೆ [ಅನು. ೧೧೭].

**ಗೋವರ್ಧನ**—ಒಂದು ಪರ್ವತ ಯಮುನಾ ನದಿಯ ತೀರದಲ್ಲಿ ಬೃಂದಾ ವನಕ್ಕೆ ಸಮೀಪದಲ್ಲಿದೆ. ಒಮ್ಮೆ ನಂದಗೋಕುಲದ ಗೊಲ್ಲರೆಲ್ಲರೂ ಇಂದ್ರಯಾಗ ವನ್ನು ಮಾಡಬೇಕೆಂದಿರುವಾಗ, ಶ್ರೀ ಕೃಷ್ಣ ಆ ಯಾಗವನ್ನು ನಿಲ್ಲಿಸಿ ಗೋವರ್ಧನ ಗಿರಿಯನ್ನೇ ಪೂಜೆಮಾಡುವಂತೆ ಹೇಳಲಾಗಿ ಗೊಲ್ಲರೆಲ್ಲರೂ ಅದಕ್ಕೆ ಸಮ್ಮತಿಸಿದರು. ಆಗ ಇಂದ್ರ ಕೋಪದಿಂದ ಚಂಡವೃಷ್ಟಿಯನ್ನು ಸುರಿಸಲಾಗಿ, ಗೊಲ್ಲರ ಗೋಳನ್ನು ಕೇಳಿ ಶ್ರೀ ಕೃಷ್ಣ ತನ್ನ ಬಾಹುಬಲದಿಂದ ಆ ಪರ್ವತವನ್ನು ಮೇಲಕ್ಕೆತ್ತಿ ಗೊಲ್ಲ ರನ್ನೂ ದನಗಳನ್ನೂ ಅದರ ಕೆಳಗೆ ಸುಖವಾಗಿರಿಸಿದ [ಹರಿ -೨, ೨೮. ವಿಷ್ಣು.-೫, ೧೧. ಭಾಗ.-೧೦, ೨೪, ೨೫ ಭಾರ.-ಸ. ೫೩].

**ಗೋವಿಂದ.**—(i) ಒಂದು ಬೆಟ್ಟ [ಭೀ ೧೨].

(ii) ವಿಷ್ಣುವಿನ ನಾಮಾಂತರ ಗೋವಿಂದಶಬ್ದ ನಿರ್ವಚನ [ಉದ್ಯೋ. ೧೯. ಶಾಂತಿ. ૩೫೨]

**ಗೋವೃಷಧ್ವಜ.**—ಕೃಪಾಚಾರ್ಯ ತನ್ನ ರಥದ ಧ್ವಜದಲ್ಲಿ ಗೂಳಿಯ ಆಕಾರ ವನ್ನು ಚಿತ್ರಿಸಿರುವುದರಿಂದ ಈ ಹೆಸರು ಆತನಿಗೆ ಸಲ್ಲುತ್ತದೆ [ದ್ರೋ. ೧೦೫].

**ಗೋಶೃಙ್ಗ**—ಒಂದು ಪರ್ವತ. ನಿಷಾದ ಭೂಮಿಯ ಸಮೀಪದಲ್ಲಿದೆ (ಪಟಚ್ಚರ ದೇಶಕ್ಕೆ ದಕ್ಷಿಣದಲ್ಲಿ) ಪಾಂಡವರ ಕಾಲದಲ್ಲಿ ಶ್ರೇಣಿಮಂತನೆಂಬ ಅರಸು ಇಲ್ಲಿ ರಾಜ್ಯ ಭಾರ ಮಾಡುತ್ತಿದ್ದ [ಸಭಾ. ೩೨].

**ಗೌತಮ.**—(i) ಒಬ್ಬ ಮಹರ್ಷಿ. ಉಚಥ್ಯನ ಮಗನಾದ ದೀರ್ಘತಮ ಮುನಿಯ ಮಗ ಸಪ್ತರ್ಷಿಗಳಲ್ಲಿ ಒಬ್ಬ ಕುಲಪತಿ. ಗೋತ್ರಪ್ರವರ್ತಕನು. ಈತನ ಹೆಂಡತಿ ಅಹಲ್ಯೆ [ಆದಿ ೧೧೩. ಸಭಾ. ೪, ೧೧. ಅಶ್ವ ೫೩. ಬ್ರ. ವೈ. ಪ್ರಕೃತಿಖಂ. ೫೧]. ಬ್ರಾಹ್ಮಣ ಮಹಿಮೆಯ ವಿಷಯವಾಗಿ ಅತ್ರಿ ಮಹರ್ಷಿಯೊಂದಿಗೆ ಸಂವಾದ [ವನ. ೧೮೮]. ಶಿವನ ಅಪ್ಪಣೆಯಮೇರೆಗೆ ಭೂಮಿಯಲ್ಲಿ ತಪಸ್ಸುಮಾಡ ಬಂದ ಪಾರ್ವತಿಗೆ ಅರುಣಾಚಲಕ್ಷೇತ್ರ ಮಾಹಾತ್ಮ್ಯೆಯನ್ನು ತಿಳಿಸಿದ [ಸ್ಕಾ. ಅರು. ಪೂ. ೬, ೯] ನದೀ ಮಹಿಮೆಯ ವಿಷಯವಾಗಿ ಅಂಗಿರಸನೊಂದಿಗೆ ಸಂವಾದ. ನೋಡು—ಅಹಲ್ಯಾ [ಅನು. ೬೪]. ಗೌತಮಶಬ್ದ ನಿರ್ವಚನ [ಅನು. ೧೪೨]. ಮಾತಾಪಿತೃ ಗಳನ್ನು ಶುಶ್ರೂಷೆ ಮಾಡುವುದರ ಮೂಲಕ ಅವರ ಋಣವನ್ನು ಕಳೆದುಕೊಳ್ಳಬಹು-

ದೆಂಬ ವಿಷಯದಲ್ಲಿ ಯಮನೊಂದಿಗೆ ಸಂವಾದ [ಶಾಂತಿ. ೧೨೯]. ಉದಂಕಮುನಿ ಈತನ ಶಿಷ್ಯನಾಗಿದ್ದು, ಬಳಿಕ ಅಳಿಯನಾದದ್ದು [ಅಶ್ವ. ೫೬] ಅನಾವೃಷ್ಟಿ ಸಮಯ ದಲ್ಲಿ ಅನೇಕ ಮಂದಿ ಬ್ರಾಹ್ಮಣರನ್ನು ಕಾಪಾಡಿದ್ದು, ಗೋಹತ್ಯೆಯನ್ನು ಪಡೆದದ್ದು ಮುಂತಾಗಿ [ದೇ ಭಾ.-೧೨, ೯] ನೋಡು—ಗೋದಾವರಿ ಈತನ ಮಗ ಜನಕ ರಾಜನ ಪುರೋಹಿತನಾದನು [ಭಾಗ.-೯, ೨೧ ರಾಮಾ.-ಬಾಲ ೫೧] ಈತನ ಜನನಿ ಪ್ರದ್ವೇಷಿಣಿಯೆಂಬವಳು [ಆದಿ. ೧೧೩]

(ii) ಮಧ್ಯದೇಶ ವಾಸಿಯಾದ ಒಬ್ಬ ಬ್ರಾಹ್ಮಣ. ಕೃತಘ್ನ, ಮಿತ್ರದ್ರೋಹಿಗಳ ಕಥಾಸಂದರ್ಭದಲ್ಲಿ ಈತನ ಕಥೆ ದೃಷ್ಟಾಂತವಾಗಿ ವರ್ಣಿತವಾಗಿದೆ [ಶಾಂತಿ. ೧೬೭, ೧೭೨]. ಈತನು ರಾಜಧರ್ಮವೆಂಬ ಬಕಪಕ್ಷಿಯನ್ನು ಕೊಂದದ್ದು [ಶಾಂತಿ. ೧೭೧].

(iii) ಒಬ್ಬ ಬ್ರಾಹ್ಮಣ ಒಮ್ಮೆ ಇಂದ್ರನು ಧೃತರಾಷ್ಟ್ರ ರೂಪದಿಂದ ಈತ ನಲ್ಲಿಗೆ ಬರಲಾಗಿ, ಈತನು ಒಂದು ಆನೆಯ ಸಲುವಾಗಿ ಆತನೊಡನೆ ಹೋರಾಡಿ ದನು [ಅನು. ೧೫೯].

(iv) ಗೌತಮ ಮುನಿಯ ವಂಶದಲ್ಲಿ ಜನಿಸಿದ ಒಬ್ಬ ಮಹರ್ಷಿಯಾದ ಮೇಧಾತಿಥಿಗೂ ಈ ಹೆಸರು ಸಲ್ಲುತ್ತದೆ. ಈತನ ಮಗ ಚಿರಕಾರಿ [ಶಾಂತಿ. ೨೭೨].

(v) ಕೃಪಾಚಾರ್ಯನು ಗೌತಮ ಗೋತ್ರದಲ್ಲಿ ಜನಿಸಿದವನಾದುದರಿಂದ ಭಾರತದಲ್ಲಿ ಅಲ್ಲಲ್ಲಿ ಈ ಹೆಸರು ಕೃಪಾಚಾರ್ಯನಿಗೆ ಅನ್ವಯಿಸುತ್ತದೆ [ಉದ್ಯೋ. ೧೬೪].

(vi) ಕೌಶಿಕ ಮುನಿಯ ಶಿಷ್ಯ ಶ್ರೀ ರಾಮನ ಆಸ್ಥಾನದಲ್ಲಿ ಧರ್ಮಶಾಸ್ತ್ರ ವಿಶಾರದನಾಗಿದ್ದ [ರಾಮಾ -ಉತ್ತ. ೪]

(vii) ಅಂಗಿರಸನ ವಂಶದಲ್ಲಿ ಜನಿಸಿದ ಒಬ್ಬ ಮಹರ್ಷಿ ಈತನು ಈಗ ನಡೆ ಯುತ್ತಿರುವ ಮನ್ವಂತರದಲ್ಲಿ ೨೦ ನೆಯ ಪರ್ಯಾಯದಲ್ಲಿ ವ್ಯಾಸನಾಗಿದ್ದ [ದೇ. ಭಾ.- ೧, ೪].

**ಗೌತಮಿ** —(i) ವೃದ್ಧಬ್ರಾಹ್ಮಣ ಸ್ತ್ರೀ ನೋಡು—ಅರ್ಜುನಕ [ಅನು. ೧].

(ii) ದ್ರೋಣಾಚಾರ್ಯನ ಪತ್ನಿಯಾದ ಕೃಪಿ [ಆದಿ. ೧೪೦].

(iii) ಗೋದಾವರೀ ನದಿಯ ನಾಮಾಂತರ. ನೋಡು—ಗೋದಾವರಿ, ಗೌತಮ.

**ಗೌರಮುಖ.**—(i) ಶಮೀಕ ಮುನಿಯ ಶಿಷ್ಯ. ಶಮೀಕನ ಮಗನಾದ ಶೃಂಗಿ ಮುನಿಯೂ ಈತನೂ ಸ್ನೇಹಿತರು. ಪರೀಕ್ಷಿತನು ಶಮೀಕನ ಕೊರಳಿಗೆ ಸತ್ತ ಹಾವನ್ನು ಸುತ್ತಿಹೋದ ಸಂಗತಿಯನ್ನು ತಿಳಿದು ಕ್ರೋಧಾಂಧನಾದ ಶೃಂಗಿ ತನ್ನ ತಂದೆಯನ್ನು ಇಂತು ತಿರಸ್ಕರಿಸಿದವನು " ಇಂದಿಗೆ ಏಳು ದಿನಗಳಲ್ಲಿ ತಕ್ಷಕನಿಂದ

ದಷ್ಟನಾಗಿ ಸಾಯಲಿ " ಎಂಬುದಾಗಿ ಶಾಪವಿತ್ತು, ತಕ್ಷಕನ ಮೂಲಕ ಉಂಟಾಗ ಬಹುದಾದ ವಿಪತ್ತನ್ನು ತಪ್ಪಿಸಿಕೊಳ್ಳುವುದಕ್ಕೆ ತಕ್ಕ ಉಪಾಯವನ್ನು ಹುಡುಕಿ ಕೊಳ್ಳುವಂತೆ ಈತನ ಮೂಲಕ ಪರೀಕ್ಷಿತನಿಗೆ ಹೇಳಿಕಳುಹಿದ [ಆದಿ. ೪೨, ೫೦].

(ii) ಒಬ್ಬ ಮುನಿ. ದುರ್ಜಯನೆಂಬ ಅರಸು ಒಮ್ಮೆ ಬೇಟೆಯಾಡಿ ದಣಿದು, ಈತನ ಆಶ್ರಮವನ್ನು ಹೊಕ್ಕನು ಋಷಿ ವಿಷ್ಣುವಿನ ಅನುಗ್ರಹದಿಂದ ಪಡೆದಿದ್ದ ರತ್ನದ ಮಹಿಮೆಯಿಂದ ಅರಸನಿಗೂ ಅವನ ಪರಿವಾರಕ್ಕೂ ಔತಣ ಮಾಡಿದ ಅಚ್ಚರಿ ಗೊಂಡ ಅರಸು ಆ ರತ್ನವನ್ನು ಬಲಾತ್ಕಾರವಾಗಿ ಕಸುಗೊಳ್ಳಲು ಪ್ರಯತ್ನಿಸಿದಾಗ, ಮುನಿ ಆ ಮಣಿಯನ್ನು ಕೈಯಲ್ಲಿ ಹಿಡಿದುಕೊಂಡು, ಗಂಗೆಯಲ್ಲಿ ಮುಳುಗಿದ ಬಳಿಕ ನದಿಯಿಂದ ಚತುರಂಗಸೇನೆ ಹೊರಬಿದ್ದು ಅರಸನನ್ನೂ ಅವನ ಸೇನೆಯನ್ನೂ ಧ್ವಂಸಮಾಡಿತು [ವರಾಹ ]

**ಗೌರೀ** —(i) ಸ್ವಾಯಂಭುವ ಮನ್ವಂತರದಲ್ಲಿ, ಪಶ್ಚಿಮ ದಿಕ್ಕಿಗೆ ಅಧಿಪತಿ ಯಾದ ವರುಣನ ಹೆಂಡತಿ [ಉದ್ಯೋ ೧೭೧]

(ii) ನೋಡು—ಕಲ್ಪ, ಕೌಶಿಕಿ. ಪಾರ್ವತಿಯ ರೂಪಾಂತರ ಶುಂಭ ನಿಶುಂಭರೆಂಬ ರಾಕ್ಷಸರು ದೇವತೆಗಳನ್ನು ಪದಚ್ಯುತರನ್ನಾಗಿ ಮಾಡಿದಾಗ ದೇವತೆ ಗಳೆಲ್ಲರೂ ಪಾರ್ವತಿಯನ್ನು ಹೊಗಳಿದರು ಆಗ ಪಾರ್ವತಿಯ ದೇಹಕೋಶದಿಂದ ದಿವ್ಯ ಸೌಂದರ್ಯವತಿಯಾದ ಒಬ್ಬ ಯುವತಿ ಹೊರಬಂದಳು ನೋಡು—ಕೌಶಿಕಿ. ಆಗ ಪಾರ್ವತಿ ಕಪ್ಪಗೆ ಕಂಡಳು ಶಿವ ಆಕೆಯನ್ನು ಕಾಳಿಯೆಂದು ಕರೆದ. ಆಗ ಪಾರ್ವತಿ ತಪಸ್ಸುಮಾಡಿ ಗೌರದೇಹವನ್ನು ತಳೆದಳು [ಮತ್ಸ್ಯ -೧೫೬]

(iii) ಕಾಬೂಲ್ ನದಿಗೆ ಸೇರತಕ್ಕ ಒಂದು ಉಪ ನದಿ [ಭೀಷ್ಮ ೯].

**ಗೌರೀಶಿಖರ** —ಹಿಮವತ್ಪರ್ವತದ ಒಂದು ಶಿಖರ ಪಾರ್ವತಿ ಶಿವನನ್ನು ಮದುವೆಯಾಗುವ ಉದ್ದೇಶದಿಂದ ಇಲ್ಲಿ ತಪಸ್ಸುಮಾಡಿದ ಕಾರಣ ಈ ಶಿಖರಕ್ಕೆ ಗೌರೀಶಿಖರವೆಂದು ಹೆಸರು

**ಗ್ರಂಥಿಕ.**—ಪಾಂಡವರು ವಿರಾಟ ನಗರದಲ್ಲಿ ಅಜ್ಞಾತವಾಸ ಮಾಡಿದಾಗ ನಕುಲನು ಇಟ್ಟುಕೊಂಡಿದ್ದ ಹೆಸರು [ವಿರಾ. ೧೬೦]

**ಗ್ರಸನ.**—ಒಬ್ಬ ಅಸುರ. ತಾರಕಾಸುರನ ಸೇನಾಪತಿ ತಾರಕಾಸುರನಿಗೂ ದೇವತೆ ಗಳಿಗೂ ನಡೆದ ಯುದ್ಧದಲ್ಲಿ ವಿಷ್ಣುವಿನಿಂದ ಹತನಾದ [ಮತ್ಸ್ಯ.-೧೫೨]

**ಗ್ರಹ.**—ಸೂರ್ಯನೇ ಮೊದಲಾದ ಒಂಬತ್ತು ಗ್ರಹಗಳು. ಇವರ ಉತ್ಪತ್ತಿ ಮುಂತಾದವು [ಸಭಾ. ೧೧. ಶಿವ.-ಉಮಾ. ೧೮ ಲಿಂಗ.-೬೧.] ಗ್ರಹಗಳ ಸಂಚಾರ ರೀತಿಯ ವರ್ಣನೆ [ವನ. ೧೬೪ ಭಾಗ -೫, ೨೨. ಲಿಂಗ -೫೧. ಬ್ರಹ್ಮ ಅನುಷಂಗ. ೨೩]. ಗ್ರಹಗಳ ಮಂಡಲಗಳು, ಕಾಂತಿ ಮುಂತಾದ ವಿವರ [ಭೀ. ೧೨. ಲಿಂಗ.-೫೫, ೫೮].

**ಗ್ರಾಹ**—ಮೊಸಳೆ ದ್ರೋಣಾಚಾರ್ಯನನ್ನು ಹಿಡಿದು ಅರ್ಜುನನಿಂದ ಹತವಾದದ್ದು [ಆದಿ. ೧೪೩]. ಶಾಪದಿಂದ ಮೊಸಳೆಗಳಾಗಿ, ನಾರೀತೀರ್ಥದಲ್ಲಿದ್ದು, ಅರ್ಜುನನ ತೀರ್ಥಯಾತ್ರಾ ಸಂದರ್ಭದಲ್ಲಿ ಶಾಪವಿಮೋಚನೆಯನ್ನು ಪಡೆದದ್ದು [ಆದಿ ೨೩೭]. ನೋಡು—ಅರ್ಜುನ, ನಾರೀತೀರ್ಥ

## ಘ

**ಘಟೋತ್ಕಚ**—ಹಿಡಿಂಬನ ತಂಗಿಯಾದ ಹಿಡಿಂಬೆ ಅಥವಾ ಕಮಲಪಾಲಿಕೆಯಲ್ಲಿ ಪಾಂಡು ಪುತ್ರನಾದ ಭೀಮಸೇನನಿಂದ ಜನಿಸಿದವನು ಮಹಾ ಪರಾಕ್ರಮಶಾಲಿ [ಭಾರ -ಆದಿ ೬೧, ೬೪] ಘಟೋತ್ಕಚಶಬ್ದ ನಿರ್ವಚನ [ಆದಿ ೧೬೯] ಯುಧಿಷ್ಠಿರನು ರಾಜಸೂಯಯಾಗ ಮಾಡಿದ ಸಂದರ್ಭದಲ್ಲಿ ಲಂಕಾ ಪಟ್ಟಣಕ್ಕೆ ಹೋಗಿ, ವಿಭೀಷಣನಿಂದ ಕಪ್ಪವನ್ನು ತಂದ [ಸಭಾ -೩೨, ೩೪] ಪಾಂಡವರು ವನವಾಸ ಸಮಯದಲ್ಲಿ ತೀರ್ಥಯಾತ್ರೆಗೆ ಹೋಗಿದ್ದಾಗ ಗಂಧಮಾದನ ಪರ್ವತದ ದಾರಿಯಲ್ಲಿ ದ್ರೌಪದಿ ನಡೆಯಲಾರದೆ ಮೂರ್ಛೆಬಿದ್ದಾಗ, ಭೀಮಸೇನನು ಘಟೋತ್ಕಚನನ್ನು ಸ್ಮರಿಸಿದಕೂಡಲೇ, ಇವನು ಅವರಲ್ಲಿಗೆ ಹೋಗಿ, ದ್ರೌಪದಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ನಾರಾಯಣಾಶ್ರಮಕ್ಕೆ ತಂದು ಬಿಟ್ಟ [ವನ ೧೪೬, ೧೪೭] ಭೀಮಸೇನನು ಸೌಗಂಧಿಕ ಪುಷ್ಪವನ್ನು ತರುವುದಕ್ಕಾಗಿ ಗಂಧಮಾದನ ಪರ್ವತದಲ್ಲಿ ಸೌಗಂಧಿಕ ಸರೋವರಕ್ಕೆ ಹೋಗಿದ್ದಾಗ, ಯುಧಿಷ್ಠಿರನು ಅಪಶಕುನಗಳಿಂದ ಹೆದರಿದ್ದ ಕಾಲದಲ್ಲಿ ಘಟೋತ್ಕಚನು ಯುಧಿಷ್ಠಿರನನ್ನು ಕರೆದುಕೊಂಡು ಭೀಮನಿದ್ದಲ್ಲಿಗೆ ಹೋದ [ವನ ೧೫೬]. ರಥಯೂಥ ಯೂಥಪ [ಭಾರ -ಉದ್ಯೋ ೧೭೨] ಬಲರಾಮನ ಮಗಳಾದ ವತ್ಸಲೆಯನ್ನು ಅಭಿಮನ್ಯುವಿಗೆ ಕೊಡುವುದಾಗಿ ಮೊದಲು ಮಾತಾಗಿತ್ತು. ಪಾಂಡವರು ರಾಜ್ಯಭ್ರಷ್ಟರಾದ ಬಳಿಕ, ದುರ್ಯೋಧನನ ಮಗನಾದ ಲಕ್ಷ್ಮಣನಿಗೆ ಕೊಡುವುದಾಗಿ ಶಕುನಿಯ ಮೂಲಕ ಮಾತುಕಥೆಗಳು ನಡೆಯುತ್ತಿದ್ದವು. ದುರ್ಯೋಧನನೂ ಅಟ್ಟಹಾಸದಿಂದ ದ್ವಾರಕೆಗೆ ಬಂದು ಸೇರಿದ ಸುಭದ್ರೆ ದುಃಖಭರಿತೆಯಾದಳು. ಆಗ ಘಟೋತ್ಕಚನು ತನ್ನ ಮಾಯೆಯ ಬಲದಿಂದ, ದುಶ್ಯಲೆಯನ್ನು ಅಭಿಮನ್ಯುವಿಗೇ ಮದುವೆಮಾಡಿಸಿದ. ಈ ಕಥೆ ಜೈಮಿನಿಭಾರತ ವನಪರ್ವದಲ್ಲಿರುವುದಾಗಿ ಹೇಳುತ್ತಾರೆ. ಮಹಾಭಾರತ ಯುದ್ಧದಲ್ಲಿ ಇವನೂ ಇವನ ಮಕ್ಕಳೂ ಪಾಂಡವರ ಪರವಾಗಿ ಹೋರಾಡಿದರು. ಇವನು ಸಹಜವಾಗಿಯೇ ದೊಡ್ಡ ಆಕಾರದವನಾದುದರಿಂದ ಎಂಟು ಚಕ್ರಗಳ ರಥವನ್ನು ಕಲ್ಪಿಸಿ, ಅದಕ್ಕೆ ನೂರು ಕುದುರೆಗಳನ್ನು ಹೂಡಿ, ಪೌಲಸ್ತ್ಯವೆಂಬ ಬಿಲ್ಲನ್ನು ಹಿಡಿದು, ವಿರೂಪಾಕ್ಷನೆಂಬ ಸಾರಥಿಯನ್ನು ಮುಂದುಮಾಡಿಕೊಂಡು

ಯುದ್ಧಕ್ಕೆ ಹೊರಟ. ಇವನು ಗೃಧ್ರಧ್ವಜ [ದ್ರೋಣ. ೨೩]. ದುರ್ಯೋಧನನನ್ನು ಯುದ್ಧದಲ್ಲಿ ತಲ್ಲಣಗೊಳಿಸಿದ್ದು ಮತ್ತು ಘಟೋತ್ಕಚನು ಮಾಡಿದ ಸಾಹಸಗಳು [ಭೀಷ್ಮ. ೯೧, ೯೪]. ಇವನಿಗೆ ಅಂಜನಪರ್ವ, ಮೇಘನಾದರೆಂಬ ಇಬ್ಬರು ಮಕ್ಕಳಲ್ಲಿ ಅಂಜನಪರ್ವನನ್ನು ಅಶ್ವತ್ಥಾಮನು ಕೊಂದನು [ದ್ರೋ. ೧೫೭]. ನಾಲ್ಕನೆಯ ದಿವಸದ ಯುದ್ಧದಲ್ಲಿ ಭೀಮನು ದುರ್ಯೋಧನನ ಎಂಟು ಮಂದಿ ತಮ್ಮಂದಿರನ್ನೂ ಕೊಂದು, ರೋಷಾವೇಶಭರಿತನಾಗಿ, ಹೆಬ್ಬುಲಿಯಂತೆ ರಣರಂಗದಲ್ಲಿ ಸಂಚರಿಸುತ್ತಿದ್ದಾಗ, ಘಟೋತ್ಕಚನೂ ಅವನಿಗೆ ಹಿಂಬಲವಾಗಿ ಬಂದನು ಇದನ್ನು ಕಂಡು, ದುರ್ಯೋಧನನು ಹೆದರಿ, ತನ್ನ ಸೇನೆಯನ್ನು ರಣರಂಗದಿಂದ ಹಿಂದಿರುಗಿಸಿದ [ಭೀ. ೬೪]. ಜಟಾಸುರನ ಮಗನಾದ ಅಲಂಬುಸನು ಅರ್ಜುನನ ಮಗನಾದ ಇರಾವಂತನನ್ನು ಕೊಲ್ಲಲಾಗಿ ಘಟೋತ್ಕಚನು ಅಲಂಬುಸನನ್ನು ಕೊಂದ [ದ್ರೋ ೧೦೯]. ಬಕಾಸುರನ ತಮ್ಮನಾದ ಅಲಂಬಲನನ್ನು ಕೊಂದು ಕರ್ಣನನ್ನು ಪೀಡಿಸಿದ [ದ್ರೋ. ೧೭೪, ೧೭೫] ಅಶ್ವತ್ಥಾಮ ಘಟೋತ್ಕಚರ ಯುದ್ಧ [ದ್ರೋ ೧೫೭]. ಬಕಾಸುರನ ಮತ್ತೊಬ್ಬ ತಮ್ಮನಾದ ಅಲಾಯುಧನನ್ನು ಕೊಂದ [ದ್ರೋ ೧೭೯]. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಘಟೋತ್ಕಚನು ಕುರು ಸೇನೆಗೆ ಮೃತ್ಯುಸ್ವರೂಪನಾಗಿರುವಲ್ಲಿ ಕರ್ಣನು ಇಂದ್ರನಿಂದ ಪಡೆದು, ಅರ್ಜುನ ಸಂಹಾರಕ್ಕಾಗಿ ಮೀಸಲಿಟ್ಟಿದ್ದ ಶಕ್ತ್ಯಾಯುಧದಿಂದ ಇವನನ್ನು ಕೊಂದ [ದ್ರೋ ೧೮೦] ಘಟೋತ್ಕಚನ ಕೊಲೆಯಿಂದ ಮರುಗುತ್ತಿದ್ದ ಯುಧಿಷ್ಠಿರನಿಗೆ ಶ್ರೀ ಕೃಷ್ಣನು, ಘಟೋತ್ಕಚನ ಅಯೋಗ್ಯತೆಯನ್ನು ವಿವರಿಸಿದ್ದು [ದ್ರೋ ೧೮೨]. ಘಟೋತ್ಕಚವಧ ಪರ್ವ [ದ್ರೋ ೧೫೪, ೧೮೪].

**ಘಂಟಾಕರ್ಣ**.—ಒಬ್ಬ ಶಿವಭಕ್ತನು ಅನುಗಾಲವೂ ಶಿವನ ಚರಿತ್ರೆಯ ಹೊರತು ಮತ್ತೆ ಯಾವ ಶಬ್ದವೂ ತನ್ನ ಕಿವಿಗೆ ಬೀಳದಿರಲೆಂಬ ಅಭಿಪ್ರಾಯದಿಂದ ತನ್ನ ಎರಡು ಕಿವಿಗಳಿಗೂ ಘಂಟೆಗಳನ್ನು ಕಟ್ಟಿಕೊಂಡಿದ್ದನು [ಶಲ್ಯ. ೪೬] ಇವನ ಜನ್ಮವೃತ್ತಾಂತ [ಹರಿ.-ಭವಿ. ೮೦, ೮೩].

**ಘೂರ್ಣಿಕಾ**.—ಶುಕ್ರಾಚಾರ್ಯನ ಮಗಳಾದ ದೇವಯಾನಿಯ ದಾಸಿ ವೃಷಪರ್ವರಾಜನ ಮಗಳಾದ ಶರ್ಮಿಷ್ಠೆ ದೇವಯಾನಿಯನ್ನು ಬಾವಿಯಲ್ಲಿ ತಳ್ಳಿಹೋದ ಬಳಿಕ, ಇವಳು ದೇವಯಾನಿಯನ್ನು ಹುಡುಕುತ್ತ ಬಂದು, ಕಂಡುಹಿಡಿದಳು [ಭಾರ -ಆದಿ. ೭೨].

**ಘೃತಪೃಷ್ಠ**.—ಪ್ರಿಯವ್ರತ ರಾಜನ ಹತ್ತು ಮಂದಿ ಪುತ್ರರಲ್ಲಿ ಆರನೆಯವ. ಈತನು ಕ್ರೌಂಚ ದ್ವೀಪದ ಅರಸನಾಗಿದ್ದು, ತನ್ನ ಅವಸಾನಕಾಲದಲ್ಲಿ, ಆ ದ್ವೀಪವನ್ನು ಏಳು ಖಂಡಗಳಾಗಿ ವಿಭಾಗಮಾಡಿ, ಅವು, ಮಧುರುಹ, ಮೇಘಪೃಷ್ಠ, ಸುಧಾಮ,

ಭ್ರಾಜಿಷ್ಠ, ಲೋಹಿತಾರ್ಣ, ವನಸ್ಪತಿಗಳೆಂಬ ತನ್ನ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟ [ಭಾಗ.-೫, ೧].

**ಘೃತಸಮುದ್ರ.**—ಸಪ್ತ ಮಹಾ ಸಮುದ್ರಗಳಲ್ಲಿ ಒಂದು ಇದು ಕುಶ ದ್ವೀಪ ವನ್ನು ಸುತ್ತಿಕೊಂಡಿದೆ. ಕ್ರೌಂಚ ದ್ವೀಪ ಇದನ್ನುಸುತ್ತಿಕೊಂಡಿದೆ [ಭಾಗ.-೫, ೧].

**ಘೃತಾಚೀ**—ಒಬ್ಬ ಅಪ್ಸರಸಿ. ಕಶ್ಯಪ ಮುನಿಯಿಂದ ಪ್ರಾಧೆಯೆಂಬವಳಲ್ಲಿ ಜನಿಸಿದವಳು [ಆದಿ. ೧೮೦. ಸಭಾ. ೧೦. ಅನು. ೫೦, ೨೭೧]. ಭಾರದ್ವಾಜ ಮುನಿ ಈಕೆಯುನ್ನು ನೋಡಿ ಕ್ಷೋಭೆಗೊಂಡು, ದ್ರೋಣನನ್ನು ಪಡೆದದ್ದು [ಆದಿ. ೧೮೦]. ಈಕೆ ಶುಕರೂಪವನ್ನು ಧರಿಸಿರುವಲ್ಲಿ ವ್ಯಾಸನು ಈಕೆಯಿಂದ ಶುಕಮುನಿಯುನ್ನು ಪಡೆದದ್ದು [ಶಾಂತಿ. ೩೩೨]. ಪ್ರಮಿತಿಯೆಂಬ ಮುನಿ ಈಕೆಯಲ್ಲಿ ರುರುವೆಂಬ ತನಯುನನ್ನು ಪಡೆದದ್ದು [ಆದಿ. ೫]. ಒಮ್ಮೆ ಈಕೆ ದಿವ್ಯಾಲಂಕಾರ ಭೂಷಿತೆಯಾಗಿ ಸಂಚರಿಸುತ್ತಿರುವಲ್ಲಿ ದೇವತೆಗಳ ಬಡಗಿಯಾದ ವಿಶ್ವಕರ್ಮನು ಈಕೆಯುನ್ನು ವರಿಸಿದ. ಘೃತಾಚಿ ಸಮ್ಮತಿಸದಿರಲು, ವಿಶ್ವಕರ್ಮನು, ಆಕೆಯುನ್ನು ಭೂ ಲೋಕದಲ್ಲಿ ಜನಿಸು ವಂತೆ ಶಾಪವಿತ್ತ. ಇವಳೂ ವಿಶ್ವಕರ್ಮನನ್ನು ಅಂತೆಯೇ ಶಪಿಸಿದಳು. ಬಳಿಕ ಘೃತಾಚಿ ಪ್ರಯಾಗ ಕ್ಷೇತ್ರದಲ್ಲಿ ಗೊಲ್ಲನಿಗೆ ಮಗಳಾಗಿ ಹುಟ್ಟಿದಳು. ಒಂದು ದಿನ ಘೃತಾಚಿ ವಿಶ್ವಕರ್ಮನನ್ನು ಕಂಡು ಮೋಹಗೊಂಡಳು ಇಬ್ಬರಿಗೂ ಹಿಂದಣ ಕಥೆ ನೆನಪಿಗೆ ಬಂದು ಬೇಗನೆ ಮನುಷ್ಯಜನ್ಮವನ್ನು ತೊಲಗಿಸಿಕೊಳ್ಳಬೇಕೆಂಬ ಆಸೆ ಯಿಂದ ಇಬ್ಬರೂ ಕಲೆತು ಸುಖದಿಂದಿದ್ದು, ಅನೇಕ ಮಂದಿ ಮಕ್ಕಳನ್ನು ಪಡೆದು, ದೇಹತ್ಯಾಗಮಾಡಿ, ತಮ್ಮ ಪೂರ್ವ ರೂಪವನ್ನು ಹೊಂದಿದರು. ಇಂತು ಇವರಿಬ್ಬರೂ ಪರಸ್ಪರ ಶಾಪದಿಂದ ಭೂ ಲೋಕದಲ್ಲಿದ್ದಾಗ ಹುಟ್ಟಿದ ಮಕ್ಕಳೇ ಅಕ್ಕಸಾಲಿಗರು, ಕಮ್ಮಾರರು, ಬಡಗಿಗಳು ಎಂಬುದಾಗಿ ಹೇಳಿದೆ [ಬ್ರ ವೈ]

**ಘೋರ.**—(i) ವೈವಸ್ವತ ಮನ್ವಂತರದಲ್ಲಿ ಅಂಗಿರಸ ಮುನಿಯು ಎಂಟು ಮಂದಿ ಮಕ್ಕಳಲ್ಲಿ ಒಬ್ಬ [ಭಾರ.-ಅನು. ೮೫].

(ii) ನೋಡು—ಕಲ್ಪ. ಈಗ ನಡೆಯುತ್ತಿರುವ ಬ್ರಹ್ಮನ ತಿಂಗಳಲ್ಲಿ ಇಪ್ಪತ್ತೈದನೆಯ ದಿನದ ಹೆಸರು.

**ಘೋಷ.**—ಧರ್ಮ ಮುನಿಯಿಂದ ಲಂಬೆಯೆಂಬವಳಲ್ಲಿ ಜನಿಸಿದವನು [ಮತ್ಸ್ಯ. ೨೦೩. ಭಾರ.-ಆದಿ. ೬೬].

**ಘೋಷಯಾತ್ರಾ ಪರ್ವ.**—ಪಾಂಡವರು ಅರಣ್ಯವಾಸ ಮಾಡುತ್ತಿದ್ದಾಗ ದುರ್ಯೋಧನನು, ಪಾಂಡವರ ಮನಸ್ಸನ್ನು ನೋಯಿಸುವ ಉದ್ದೇಶದಿಂದ ಚೈತ್ರಯಾತ್ರೆ ಹೊರಟದ್ದು, ಗಂಧರ್ವರು ಇವನನ್ನು ಕಟ್ಟಿ ಕೊಂಡು ಹೋದದ್ದು, ಯುಧಿಷ್ಠಿರನ

ಕೋರಿಕೆಯಂತೆ ಅರ್ಜುನನು ಗಂಧರ್ವರನ್ನು ಸೋಲಿಸಿ, ದುರ್ಯೋಧನಾದಿಗಳನ್ನು ಬಿಡಿಸಿಕೊಂಡು ಬಂದದ್ದು ಮುಂತಾಗಿ [ವನ. ೨೩೭, ೨೫೮].

## ಚ

**ಚಕ್ರ.**—(i) ಕುಶ ದ್ವೀಪದಲ್ಲಿರುವ ಏಳು ಪರ್ವತಗಳಲ್ಲಿ ಒಂದು [ಭಾಗ.-೫, ೨೦. ದೇ.ಭಾ.-೮, ೧೨].

(ii) ವಿಷ್ಣುವಿನ ಆಯುಧ [ಆದಿ ೨೫೧]. ದುರ್ವಾಸ ಮುನಿಯನ್ನು ಕಾಪಾಡುವುದಕ್ಕಾಗಿ ಅಂಬರೀಷನು ಚಕ್ರಾಯುಧವನ್ನು ಹೊಗಳಿದ್ದು [ಭಾಗ.-೯, ೫]. ನೋಡು—ಅಂಬರೀಷ.

**ಚಕ್ರವ್ಯೂಹ.**—ಸೇನೆಯನ್ನು ಚಕ್ರಾಕಾರವಾಗಿ ನಿಲ್ಲಿಸುವುದು. ಇದನ್ನೇ ಪದ್ಮವ್ಯೂಹವೆನ್ನುವರು. ಹದಿಮೂರನೆಯ ದಿವಸದ ಯುದ್ಧದಲ್ಲಿ ದ್ರೋಣ ಕುರುಸೇನೆಯನ್ನು ಚಕ್ರಾಕಾರವಾಗಿ ರಚಿಸಿದ್ದ [ದ್ರೋ ೩೪].

**ಚಞ್ಚಲಾ.**—ಒಂದು ನದಿ. ಋಷ್ಯವತ್ಪರ್ವತದಿಂದ ಹುಟ್ಟಿ ಹರಿಯುತ್ತದೆ [ಮತ್ಸ್ಯ.-೧೧೩]

**ಚಣ್ಡ** —(i) ಶಿವನ ಪಾರಿಷದರಲ್ಲಿ ಒಬ್ಬ ಈತನಿಗೆ ಚಂಡಿ, ಚಂಡೀಶ್ವರ, ಚಂಡೇಶ, ಚಂಡಘಂಟೆ ಮುಂತಾದ ಹೆಸರುಗಳೂ ಇವೆ ವೀರಭದ್ರನು ದಕ್ಷಯಜ್ಞವನ್ನು ಧ್ವಂಸಗೊಳಿಸಿದ ಕಾಲದಲ್ಲಿ ಈತನು ಪೂಷನೆಂಬ ಋತ್ವಿಜನನ್ನು ಹಿಂಗಟ್ಟು ಬಿಗಿದನು [ಭಾಗ -೪, ೫].

(ii) ಒಬ್ಬ ರಾಕ್ಷಸ ಇವನ ತಮ್ಮ ಮುಂಡನೆಂಬವನು ಇವರಿಬ್ಬರೂ ಶುಂಭ ನಿಶುಂಭರಲ್ಲಿ ಸೇನಾಪತಿಗಳಾಗಿದ್ದರು ಇವರಿಬ್ಬರೂ ಮಹಾ ಕಾಲಿಯಿಂದ ಹತರಾದರು. ಈ ಕಾರಣದಿಂದಲೇ ಕಾಳಿಗೆ "ಚಾಮುಣ್ಡಾ" ಎಂಬ ಹೆಸರು [ದೇ.ಭಾ.-೫. ೨೧. ಶಿವ ಉಮಾ.-೪೭. ಮಾರ್ಕ -೮೪]

(iii) ಕಪಿಸೇನೆಯಲ್ಲಿದ್ದ ಒಬ್ಬ ವಾನರನು [ರಾಮಾ.-ಯು. ೨೬]

**ಚಣ್ಡಕೌಶಿಕ.**—ಒಬ್ಬ ಬ್ರಹ್ಮರ್ಷಿ. ಕಕ್ಷೀವಂತನ ಮಗನು ಬೃಹದ್ರಥ ರಾಜನು ಈತನ ಅನುಗ್ರಹದಿಂದ ಜರಾಸಂಧನನ್ನು ಪಡೆದ [ಸಭಾ. ೧೭].

**ಚಣ್ಡಬಲ.**—ಕಪಿನಾಯಕರಲ್ಲಿ ಒಬ್ಬ ಕುಂಭಕರ್ಣನಿಂದ ಹತನಾದ [ರಾಮಾ.-ಯು. ೬೭].

**ಚಣ್ಡಭಾರ್ಗವ.**—ಚ್ಯವನ ವಂಶಕ್ಕೆ ಸೇರಿದ ಒಬ್ಬ ಮಹರ್ಷಿ. ಜನಮೇಜಯನ ಸರ್ಪಸತ್ರದಲ್ಲಿ ಹೋತೃ (ಋಗ್ವೇದ ಮಂತ್ರಗಳನ್ನು ಹೇಳುವವನು) ಆಗಿದ್ದ [ಆ.೫೩].

**ಚಣ್ಡಮುಣ್ಡ.**—ನೋಡು—ಚಂಡ.

**ಚಣ್ಡಾಲಸಂವಾದ, ಧರ್ಮ.**—[ಶಾಂತಿ. ೧೪೧, ಅನು. ೧೫೮, ೨೨೩].

**ಚಣ್ಡಾಶ್ವ.**—ಕುವಲಾಶ್ವನ ಹೆಸರು. ನೋಡು—ಕುವಲಾಶ್ವ.

**ಚಂಡಿಕಾ, ಚಣ್ಡೀ.**—ಪಾರ್ವತಿಯ ಹೆಸರು

(11) ಉದ್ದಾಲಕ ಮುನಿಯ ಹೆಂಡತಿ ನೋಡು—ಉದ್ದಾಲಕ

**ಚಣ್ಡೋದರೀ.**—ಒಬ್ಬ ರಾಕ್ಷಸಿ ಅಶೋಕ ವನದಲ್ಲಿ ಸೀತೆಯ ಸುತ್ತಲೂ ಕಾವಲಿದ್ದವರಲ್ಲಿ ಒಬ್ಬಳು [ಸುಂದ ೨೪].

**ಚತುರ್ಥದಿವಸ ಯುದ್ಧ.**—ಭಾರತ ಯುದ್ಧದ ನಾಲ್ಕನೆಯ ದಿನದ ಯುದ್ಧ ಮತ್ತು ಅದರ ಸಮಾಪ್ತಿ [ಭೀಷ್ಮ ೬೦, ೬೪]

**ಚತುಶ್ಶೃಙ್ಗ.**—ಕುಶ ದ್ವೀಪದಲ್ಲಿರುವ ಒಂದು ಪರ್ವತ [ಭಾಗ -೫, ೨೦, ದೇ. ಭಾ -೮, ೧೨]

**ಚನ್ದನಾವತಿ.**—ಒಂದು ಪಟ್ಟಣ ಕುಂತಳ ದೇಶದ ರಾಜಧಾನಿ. ನೋಡು—ಚಂದ್ರಹಾಸ

**ಚನ್ದ್ರ.**—ನವಗ್ರಹಗಳಲ್ಲಿ ಒಬ್ಬನು. ಅತ್ರಿ ಮುನಿಯ ಮಗ ಈತನು ಸ್ವಾಯಂಭುವ ಮನ್ವಂತರದವನು [ಭಾಗ -೪, ೧] ಬ್ರಹ್ಮನು ಅತ್ರಿ ಮುನಿಯನ್ನು ಸೃಷ್ಟಿ ಕಾರ್ಯದಲ್ಲಿ ನಿಯಮಿಸಿದ. ಅತ್ರಿ ತಪೋನಿರತನಾಗಿದ್ದಾಗ ಆತನ ಕಣ್ಣಿನಿಂದ ದಿವ್ಯವಾದ ತೇಜಸ್ಸು ಹೊರಬಂದಿತು. ಆ ತೇಜಸ್ಸನ್ನು ಹತ್ತು ದಿಕ್ಕುಗಳೂ ಧರಿಸಿದುವು ಆದರೆ ಆ ತೇಜಸ್ಸಿನ ವೇಗವನ್ನು ಸಹಿಸಲಾರದೆ ಕ್ಷೀರಸಮುದ್ರದಲ್ಲಿ ಬಿಟ್ಟುವು ಬ್ರಹ್ಮ ಆ ತೇಜಸ್ಸನ್ನೆಲ್ಲ ಒಟ್ಟುಗೂಡಿಸಿ, ಪುರುಷಾಕಾರದಿಂದ ಒಂದು ವ್ಯಕ್ತಿಯಾಗುವಂತೆ ಮಾಡಿ, ಚಂದ್ರನೆಂಬ ಹೆಸರಿಟ್ಟು ಗ್ರಹಮಂಡಲದಲ್ಲಿ ಒಬ್ಬನಾಗಿರುವಂತೆ ನಿಯಮಿಸಿದ ಸೋಮನೆಂಬುದು ನಾಮಾಂತರ [ಬ್ರಹ್ಮಾ. ೨೩]. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಧರ್ಮಪ್ರಜಾಪತಿಯಿಂದ ವಸುಮ್ನಿಯೆಂಬ ಪತ್ನಿಯಲ್ಲಿ ಜನಿಸಿದವನು ಅಷ್ಟವಸುಗಳಲ್ಲಿ ಒಬ್ಬ ಗ್ರಹಗಳಲ್ಲಿ ಒಬ್ಬ. ಈತನ ಮಗ ವರ್ಚನೆಂಬಾತನು. ಈತನು ದಕ್ಷಬ್ರಹ್ಮನ ಪುತ್ರಿಯರಾದ ಅಶ್ವಿನ್ಯಾದಿ ಇಪ್ಪತ್ತೇಳು ಮಂದಿ ಕನ್ಯೆಯರನ್ನೂ ಮದುವೆಯಾಗಿದ್ದನು [ಆದಿ. ೬೭. ಶಿವ.-ಶತರುದ್ರಖಂಡ. ೧೯. ಲಿಂಗ.-೬೧] ಚಂದ್ರನು ಬೃಹಸ್ಪತ್ಯಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ. ಆತನ ಪತ್ನಿಯಾದ ತಾರೆಗೂ ಈತನಿಗೂ ಮೋಹ ಅಂಕುರಿಸಿತು. ಬೃಹಸ್ಪತಿ ಇಲ್ಲದ ಸಮಯದಲ್ಲಿ ಈತನು ತಾರೆಯನ್ನು ಅಪಹರಿಸಿದ. ಬೃಹಸ್ಪತಿ ಬ್ರಹ್ಮನಲ್ಲಿ ಮೊರೆಯಿಟ್ಟ ಬ್ರಹ್ಮ ತಾರೆಯನ್ನು ಬೃಹಸ್ಪತಿಗೆ ಒಪ್ಪಿಸುವಂತೆ ಚಂದ್ರನಿಗೆ ಹೇಳಿ ಒಪ್ಪಿಸಿದ. ಆದರೆ ಅಗ್ಗ ತಾರೆ ಚಂದ್ರನಿಂದ ಗರ್ಭವನ್ನು ಧರಿಸಿದ್ದ ಕಾರಣ, ಮಗು

ವಿನ ವಿಷಯದಲ್ಲಿ ಇಬ್ಬರಿಗೂ ವಿವಾದ ಬಂತು. ಬ್ರಹ್ಮ ತಾರೆಯ ಮೂಲಕ ವಿಷಯ ವನ್ನು ತಿಳಿದು ಮಗು ಚಂದ್ರನಿಗೇ ಸೇರತಕ್ಕುದೆಂದು ನಿಷ್ಕರ್ಷೆ ಮಾಡಿದ. ಇಂತು ಚಂದ್ರನಿಂದ ತಾರೆಯಲ್ಲಿ ಜನಿಸಿದವನೇ ಬುಧನು [ಭಾಗ.-೯, ೨೪. ಹರಿ.-೧, ೨೫ ಪದ್ಮ. ೫, ೧೨. ಬ್ರಹ್ಮ.-೯. ವಾಯು.-೯೦. ಮತ್ಸ್ಯ.-೨೩. ದೇ.ಭಾ -೧, ೧೧] ಚಂದ್ರನು ದಕ್ಷಪುತ್ರಿಯರಲ್ಲಿ ಅಶ್ವಿನೀ ಮೊದಲಾದ ಇಪ್ಪತ್ತೇಳು ಮಂದಿಯನ್ನೂ ಮದುವೆಯಾಗಿದ್ದ ಆದರೆ ಅವರಲ್ಲಿ ರೋಹಿಣಿಯೆಂಬವಳಲ್ಲಿ ಮಾತ್ರ ವಿಶೇಷವಾಗಿ ಲೋಲನಾಗಿದ್ದನು. ಮಿಕ್ಕವರೆಲ್ಲರೂ ಈ ವಿಷಯವನ್ನು ತಮ್ಮ ತಂದೆಯಾದ ದಕ್ಷ ನಲ್ಲಿ ಹೇಳಿಕೊಂಡರು. ಚಂದ್ರನಿಗೆ ಕ್ಷಯರೋಗ ಬರುವಹಾಗೆ ದಕ್ಷನು ಶಾಪ ವಿತ್ತ ಇದನ್ನು ಚಂದ್ರನು ಕೇಳಿ ಭಯಪಟ್ಟು ಶಿವನಲ್ಲಿ ಮೊರೆಯಿಟ್ಟ. ಶಿವನು ಅಭಯಕೊಡಲಾಗಿ ಚಂದ್ರ ಸುಖನಾಗಿದ್ದ. ಈ ಮಾತನ್ನು ಕೇಳಿ ದಕ್ಷನು ಶಿವ ನಲ್ಲಿಗೆ ಬಂದು, ಚಂದ್ರನನ್ನು ದೂರಿ ಆತನನ್ನು ತನ್ನ ವಶಕ್ಕೆ ಕೊಡಬೇಕೆಂದು ಕೇಳಿದ ಶರಣಾಗತನನ್ನು ಬಿಟ್ಟುಕೊಡಲಾರೆನೆಂದು ಶಿವನು ಹೇಳಿದ. ಕುಪಿತ ನಾದ ದಕ್ಷನು ಶಿವನಿಗೆ ಶಾಪ ಕೊಡಬೇಕೆಂದಿರುವಷ್ಟರಲ್ಲಿ ಬ್ರಹ್ಮ, ವಿಷ್ಣುಗಳು ಅಲ್ಲಿಗೆ ಬಂದು, ಚಂದ್ರನನ್ನು ಎರಡು ಭಾಗಮಾಡಿ, ಒಂದು ಭಾಗಕ್ಕೆ ವೃದ್ಧಿ ಕ್ಷಯಗಳಿಲ್ಲ ದಂತೆ ಮಾಡಿ, ಆ ಭಾಗವನ್ನು ಶಿವನಿಗೆ ಒಪ್ಪಿಸಿ, ವೃದ್ಧಿಕ್ಷಯಗಳಿಂದ ಕೂಡಿದ ಮತ್ತೊಂದು ಭಾಗವನ್ನು ನಕ್ಷತ್ರಗಳಿಗೆ ಕೊಟ್ಟರು ಇಂತು ದಕ್ಷನು ಶಾಪವಿತ್ತ ಕಾರಣ ಖಿನ್ನನಾದ ಚಂದ್ರನು ದಕ್ಷನ ಸಂಪತ್ತು ನಾಶವಾಗುವ ಹಾಗೆ ಶಾಪವಿತ್ತು ಎಲ್ಲಿಯೋ ಅಡಗಿಕೊಂಡ. ಓಷಧಿಗಳಿಗೆ ಅಧಿಪತಿಯಾದ ಚಂದ್ರನಿಲ್ಲದುದರಿಂದ ಪೈರು, ಪಚ್ಚೆ, ಗಿಡ, ಮರ, ಬಳ್ಳಿಗಳೆಲ್ಲವೂ ಸಾರಹೀನವಾದುವು ಆಗ ದೇವತೆಗಳೆಲ್ಲರೂ ಬ್ರಹ್ಮನಲ್ಲಿ ಮೊರೆಯಿಟ್ಟರು ಆಗ ಬ್ರಹ್ಮನ ಸೂಚನೆಯ ಮೇರೆಗೆ ದೇವತೆಗಳೆಲ್ಲರೂ ಒಟ್ಟುಗೂಡಿ, ಓಷಧಿಗಳನ್ನೆಲ್ಲ ತಂದು ಪಾಲ್ಗಡಲಲ್ಲಿ ಹಾಕಿ ಕಡೆಯಲಾಗಿ ಚಂದ್ರನು ಅಲ್ಲಿಂದ ಹೊರಬಂದನು [ಲಿಂಗ -೫೭, ೫೯]. ದಕ್ಷನಿಂದ ಶಾಪಗ್ರಸ್ತನಾದ ಚಂದ್ರನು ಪ್ರಭಾಸತೀರ್ಥದಲ್ಲಿ ಸ್ನಾನಮಾಡಿ, ಕ್ಷಯರೋಗದಿಂದ ನಿವೃತ್ತಿಯನ್ನು ಪಡೆದನು [ಭಾರ -ಶ ೩೬]. ದೇವತೆಗಳು ಕ್ಷೀರಸಮುದ್ರವನ್ನು ಮಥನಮಾಡಿದಾಗ ಚಂದ್ರನು ಅಲ್ಲಿಂದ ಹುಟ್ಟಿದವನು. ಈತನನ್ನು ಶಿವನು ಪರಿಗ್ರಹಿಸಿದನು [ವಿಷ್ಣು.-೧, ೯] ಪ್ರಚೇತಸರು ಗಿಡಮರ ಬಳ್ಳಿಗಳನ್ನು ಸುಡತೊಡಗಿದರು. ಓಷಧಿಗಳೆಲ್ಲವೂ ತಮ್ಮ ಒಡೆಯನಾದ ಚಂದ್ರನಲ್ಲಿ ಹೇಳಿಕೊಳ್ಳಲು ಚಂದ್ರನು ವೃಕ್ಷಪುತ್ರಿಯಾದ ಮಾರಿಷೆಯೆಂಬ ಕನ್ಯೆಯನ್ನು ಪ್ರಚೇತಸರಿಗೆ ಕೊಡಿಸಿ, ಪ್ರಚೇತಸರ ಕೋಪವನ್ನು ಶಾಂತಿಗೊಳಿಸಿ, ವೃಕ್ಷಗಳ ದುಃಖವನ್ನು ಪರಿಹರಿಸಿದನು [ವಿಷ್ಣು.-೧, ೧೫]. ಅಮೃತ ಮಥನಾನಂತರ ದೇವ ದಾನವರು ಅಮೃತಪ್ರಾಶನಕ್ಕಾಗಿ ಕುಳಿತಿದ್ದ ಸಮಯದಲ್ಲಿ

ರಾಹು ದೇವತೆಗಳೊಂದಿಗೆ ಕುಳಿತು ಅಮೃತಪ್ರಾಶನ ಮಾಡುತ್ತಿದ್ದನು. ಇದನ್ನು ಕಂಡು ಸೂರ್ಯ ಚಂದ್ರರು ವಿಷ್ಣುವಿಗೆ ಹೇಳಲಾಗಿ, ವಿಷ್ಣು ಚಕ್ರಾಯುಧದಿಂದ ಅವನ ಕೊರಳನ್ನು ಕೊಯ್ದ. ಆದರೆ ಅಮೃತವನ್ನು ಕುಡಿದಿದ್ದನಾಗಿ ರಾಹುವಿನ ರುಂಡ ಮುಂಡಗಳೆರಡೂ ರಾಹು ಕೇತುಗಳೆಂಬ ಹೆಸರಿನಿಂದ ಸಜೀವಗಳಾದುವು. ಸೂರ್ಯ ಚಂದ್ರರು ತನ್ನ ಮೇಲೆ ದೂರು ಹೇಳಿದರೆಂಬ ದ್ವೇಷದಿಂದ ರಾಹು ಆಗಾಗ್ಗೆ ಸೂರ್ಯ ಚಂದ್ರರನ್ನು ಪೀಡಿಸುತ್ತಾನೆ [ಆದಿ. ೧೯]. ಒಮ್ಮೆ ಅತ್ರಿ ತಪಸ್ಸು ಮಾಡುತ್ತಿದ್ದಾಗ ಆತನ ಕಣ್ಣುಗಳಿಂದ ನೀರು ಸುರಿಯಲಾಗಿ, ಹತ್ತು ದಿಕ್ಕುಗಳನ್ನೂ ಬೆಳಗುವಂತಹ ಕಾಂತಿ ಲೋಕವನ್ನೆಲ್ಲ ಆವರಿಸಿಕೊಂಡಿತು. ಅಂತು ಚರಾಚರಗಳನ್ನೂ ಬೆಳಗುತ್ತಿರುವ ಆ ತೇಜಸ್ಸಿಗೆ ಮರುಳಾಗಿ ದಿಕ್ಕುಗಳು ಸ್ತ್ರೀ ರೂಪದಿಂದ ಆ ತೇಜಸ್ಸನ್ನು ತಮ್ಮ ಗರ್ಭದಲ್ಲಿ ಬಹಳ ಕಾಲದವರೆಗೆ ಧರಿಸಿದ್ದು, ತಾಳಿಕೊಳ್ಳಲಾರದೆ ಕೆಳಗೆ ಬಿಟ್ಟುವು. ಆಗ ಚತುರ್ಮುಖನು ಆ ಗರ್ಭಗಳನ್ನೆಲ್ಲ ಒಟ್ಟುಗೂಡಿಸಿ, ಸರ್ವಾಯುಧ ಧಾರಿಯಾದ ಒಬ್ಬ ಯುವಕನನ್ನಾಗಿ ಮಾಡಿ, ಸಾವಿರ ಕುದುರೆಗಳನ್ನು ಹೂಡಿದ, ವೇದಶಕ್ತಿಸ್ವರೂಪವಾದ ಒಂದು ರಥದಲ್ಲಿ ಕುಳ್ಳಿರಿಸಿಕೊಂಡು ತನ್ನ ಲೋಕಕ್ಕೆ ಕರೆದುಯ್ದ ಅಲ್ಲಿ ದೇವತೆಗಳೂ, ಋಷಿಗಳೂ ಓಷಧಿಗಳೂ ಸೋಮದೇವತಾಕಗಳಾದ ಮಂತ್ರಗಳಿಂದ ಹೊಗಳಿದರು ಉಮಾಸಹಿತನಾದ ಶಿವನು ಈ ಯುವಕನನ್ನು ತನ್ನ ಎಂಟನೆಯ ಒಂದು ಅಂಶದಿಂದ ನೋಡಿ ಅನುಗ್ರಹಿಸಿದ ಈ ಕಾರಣದಿಂದಲೇ ಈ ಯುವಕನಿಗೆ ಸೋಮನೆಂಬ ಹೆಸರು ಬಂತು ಇಂತು ದೇವಾದಿಗಳು ಹೊಗಳಿದ ಹಾಗೆಲ್ಲ ಈತನ ತೇಜಸ್ಸು ಬೆಳಗುತ್ತ ಬಂತು ಈತನ ಕಾಂತಿಯಿಂದ ಓಷಧಿಗಳೆಲ್ಲವೂ ರಸಯುಕ್ತಗಳಾದುವು ಆದುದರಿಂದಲೇ ಚಂದ್ರನಿಗೆ ಓಷಧೀಶ, ದ್ವಿಜರಾಜ, ಎಂಬ ಹೆಸರುಗಳೂ ಬಂದವು [ಮತ್ಸ್ಯ -೨೩, ಕಾಳಿಕಾ ೨೦]

**ಚಂದ್ರಕಲಾ.**—ಚಂದ್ರನ ಹದಿನಾರು ಕಲೆಗಳು

ಕಾಮಕಲೆಗಳು —

ಪೂಷಾ ಯಶಾಸ್ಸುಮನಸಾ ರತಿಃ ಪ್ರಾಪ್ತಿಸ್ತಥಾ ಧೃತಿಃ ।
ಋದ್ಧಿಸ್ಸೌಮ್ಯಾ ಮರೀಚಿಶ್ಚ ತಥಾ ಚೈವಾಂಶುಮಾಲಿನೀ ॥
ಅಂಗಿರಾ ಶಶಿನೀ ಚೇತಿ ಛಾಯಾ ಸಂಪೂರ್ಣಮಂಡಲಾ ।
ತುಷ್ಟಿಶ್ಚೈವಾಮೃತಾ ಚೇತಿ ಕಲಾಸ್ಸೋಮಸ್ಯ ಷೋಡಶ ॥

ಮಂತ್ರಶಾಸ್ತ್ರದಲ್ಲಿ—

ಅಮೃತಾ ಮಾನದಾ ಪೂಷಾ ಪುಷ್ಟಿಸ್ತುಷ್ಟೀರತಿರ್ಧೃತಿಃ ।
ಶಶಿನೀ ಚಂದ್ರಿಕಾ ಕಾಂತಿರ್ಜ್ಯೋತ್ಸ್ನಾ ಶ್ರೀಃ ಪ್ರೀತಿರಂಗದಾ ॥
ಪೂರ್ಣಾ ಪೂರ್ಣಾಮೃತಾ ಕಾಮದಾಯಿನ್ಯಶ್ಶಶಿನಃ ಕಲಾಃ ॥ [ರು.ಯಾ.]

**ಚನ್ದ್ರಕಾನ್ತ.**—(i) ಯಾಜ್ಞವಲ್ಕ್ಯ ಮುನಿಯ ಹಿರಿಯ ಮಗ. ಇವನೂ ಇವನ ತಮ್ಮಂದಿರಾದ ಮಹಾಮೋಘ, ವಿಜಯ ಎಂಬ ಮೂರು ಮಂದಿಯೂ ತಮ್ಮ ಹದಿನಾಲ್ಕುಸಾವಿರ ಮಂದಿ ಶಿಷ್ಯರೊಂದಿಗೆ, ರಾಕ್ಷಸ ಜನ್ಮವನ್ನು ಪಡೆಯುವ ಹಾಗೆ ಶಿವನಿಂದ ಶಾಪವನ್ನು ಹೊಂದಿ ಖರ, ದೂಷಣ, ತ್ರಿಶಿರಸ್ಸುಗಳೆಂಬ ಹೆಸರಿನಿಂದ ಜನಿಸಿದರು ನೋಡು—ಖರ [ರಾಮಾ.-ಅರ. ೧೯].

(ii) ಲಕ್ಷ್ಮಣನ ಮಗನಾದ ಚಂದ್ರಕೇತು ರಾಜ್ಯಭಾರಮಾಡುತ್ತಿದ್ದ ಪಟ್ಟಣದ ಹೆಸರು. ಕಾರೂಪಥ ದೇಶಕ್ಕೆ ಉತ್ತರ ಭಾಗದಲ್ಲಿದೆ ಈ ಪಟ್ಟಣಕ್ಕೆ ಧನರತ್ನವೆಂಬ ನಾಮಾಂತರವೂ ಸಲ್ಲುತ್ತದೆ [ರಾಮಾ.-ಉತ್ತ. ೧೦೨]

**ಚನ್ದ್ರಕೇತು.**—(i) ಲಕ್ಷ್ಮಣನ ಕಿರಿಯ ಮಗನು. ಚಂದ್ರಕಾನ್ತ ನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಶ್ರೀ ರಾಮನು ಲಕ್ಷ್ಮಣನ ಹಿರಿಯ ಮಗನಾದ ಅಂಗದನನ್ನು ತಾರಾಪಥದಲ್ಲಿಯೂ, ಕಿರಿಯವನಾದ ಚಂದ್ರಕೇತುವನ್ನು ಚಂದ್ರಕಾಂತ ನಗರದಲ್ಲಿಯೂ ಪಟ್ಟಾಭಿಷಿಕ್ತನನ್ನಾಗಿ ಮಾಡಿದ. ಲಕ್ಷ್ಮಣನು ಅಂಗದನ ಸಂಗಡ ಒಂದು ವರ್ಷಕಾಲವಿದ್ದು ರಾಜ್ಯವನ್ನು ಸಂಪೂರ್ಣವಾಗಿ ಸ್ವಾಧೀನಮಾಡಿಕೊಟ್ಟು ಅಯೋಧ್ಯೆಗೆ ರಾಮನ ಬಳಿಗೆ ಬಂದು ಸೇರಿದ ಭರತನು ಚಂದ್ರಕೇತುವಿನ ಸಂಗಡ ಒಂದು ವರ್ಷ ಕಾಲವಿದ್ದು ಆ ದೇಶವನ್ನು ಅವನಿಗೆ ಸ್ವಾಧೀನಮಾಡಿಕೊಟ್ಟು ರಾಮನಲ್ಲಿಗೆ ಬಂದು ಸೇರಿದ [ರಾಮಾ -ಉತ್ತ. ೧೦೧].

(ii) ಒಬ್ಬ ಅರಸು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿದ ಮಹಾ ಪರಾಕ್ರಮಸಂಪನ್ನ ಭಾರತ ಯುದ್ಧದ ಎಂಟನೆಯ ದಿನದ ಯುದ್ಧದಲ್ಲಿ ಅಭಿಮನ್ಯುವಿನಿಂದ ಹತನಾದ [ದ್ರೋ ೪೮].

(iii) ಕೃಪಾಚಾರ್ಯನ ವಿಚಾರಣೆಗೆ ಮೇಲ್ಪಟ್ಟಿದ್ದ ಒಬ್ಬ ಚಕ್ರರಕ್ಷಕ [ವಿರಾ. ೬೧]

(iv) ಹಂಸಧ್ವಜ ರಾಜನ ಮಗ ನೋಡು—ಹಂಸಧ್ವಜ.

**ಚನ್ದ್ರಗಿರಿ**—ಕಾರ್ತವೀರ್ಯಾರ್ಜುನನ ಮಂತ್ರಿ. ಜಮದಗ್ನಿಯ ಆಶ್ರಮದಲ್ಲಿದ್ದ ಧೇನುವನ್ನು ಹೇಗಾದರೂ ಅಪಹರಿಸಲೇಬೇಕೆಂಬುದಾಗಿ ಕಾರ್ತವೀರ್ಯನಿಗೆ ಬೋಧಿಸಿದ. ನೋಡು—ಕಾರ್ತವೀರ್ಯ.

**ಚನ್ದ್ರದೇವ.**—ಒಬ್ಬ ಅರಸು. ಪಾಂಚಾಲ ದೇಶಕ್ಕೆ ಒಳಪಟ್ಟ ಒಂದು ಚಿಕ್ಕ ದೇಶಕ್ಕೆ ರಾಜನಾಗಿದ್ದನು ಭಾರತ ಯುದ್ಧದ ಹದಿನೇಳನೆಯ ದಿನದಲ್ಲಿ ಕರ್ಣನಿಂದ ಹತನಾದ [ಕರ್ಣ. ೪೪].

**ಚನ್ದ್ರಪ್ರಭ** -ಇಲ ರಾಜನ ಕುದುರೆಯ ಹೆಸರು. ಇಲನು ಶರವಣವನ್ನು ಹೊಕ್ಕು ಹೆಂಗಸಾದಾಗ ಈ ಕುದುರೆಯನ್ನು ಏರಿ ಆ ವನವನ್ನು ಹೊಕ್ಕನು [ಮತ್ಸ್ಯ.-೧೧].

(ii) ಮೇರು ಪರ್ವತದಲ್ಲಿರುವ ಒಂದು ಸರೋವರ. ಜಂಬೂ ನದಿ ಈ ಸರೋವರದಿಂದ ಹುಟ್ಟುತ್ತದೆ [ಭೀಷ್ಮ ೫, ೬]

(iii) ಹಿಮಾಲಯ ಪರ್ವತದಲ್ಲಿ ಕೈಲಾಸದ ಈಶಾನ್ಯ ಭಾಗದ ಒಂದು ಶಿಖರ. ಮಣಿಭದ್ರನೆಂಬ ಯಕ್ಷನು ಇಲ್ಲಿ ವಾಸವಾಗಿದ್ದ [ಮತ್ಸ್ಯ -೧೧೩]

**ಚನ್ದ್ರಪ್ರಮರ್ದನ**—ಒಬ್ಬ ರಾಕ್ಷಸ ಕಶ್ಯಪ ಮುನಿಯಿಂದ ಸಿಂಹಿಕೆಯೆಂಬವಳಲ್ಲಿ ಜನಿಸಿದ ನಾಲ್ವರು ಪುತ್ರರಲ್ಲಿ ಮೂರನೆಯವ. ರಾಹು, ಸುಚಂದ್ರ, ಚಂದ್ರಹರ್ತರೆಂಬವರು ಇವನ ಒಡಹುಟ್ಟಿದವರು [ಆದಿ. ೬೬].

**ಚನ್ದ್ರಭಾಗಾ.**—ಒಂದು ನದಿ ಇದು ಹಿಮವತ್ಪರ್ವತದ ಶಿಖರಗಳಲ್ಲಿ ಹುಟ್ಟುತ್ತದೆ ಬ್ರಹ್ಮನು ಈ ಶಿಖರಗಳ ಮೇಲೆ ಚಂದ್ರನನ್ನು ಎರಡು ಭಾಗವಾಡಿ ಶಿವನಿಗೂ ನಕ್ಷತ್ರಗಳಿಗೂ ಹಂಚಿಕೊಟ್ಟನಾದುದರಿಂದ ಈ ಶಿಖರಗಳಿಗೂ ಅಲ್ಲಿಂದ ಹುಟ್ಟುವ ನದಿಗೂ ಚಂದ್ರಭಾಗಾ ಎಂಬ ಹೆಸರು ಬಂದಿತು [ಸಭಾ ೯ ಭೀ ೯ ಅನು. ೬೪. ಕಾಳಿಕಾಖಂ. ೨೨]

**ಚನ್ದ್ರಭಾನು.**—ಶ್ರೀ ಕೃಷ್ಣನಿಂದ ಸತ್ಯಭಾಮೆಯಲ್ಲಿ ಜನಿಸಿದ ಪುತ್ರರಲ್ಲಿ ಒಬ್ಬ. ನೋಡು—ಕೃಷ್ಣ

**ಚನ್ದ್ರಮಂಡಲ.**—ಅಲ್ಲಿ ಅನೇಕ ದ್ವೀಪಗಳಿವೆ [ಭೀ ೫].

**ಚನ್ದ್ರಮತಿ**—ಹರಿಶ್ಚಂದ್ರನ ಹೆಂಡತಿ ಈಕೆಯ ಮಗ ರೋಹಿತಾಶ್ವ. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಕೊಡಬೇಕಾಗಿದ್ದ ದಕ್ಷಿಣಾ ದ್ರವ್ಯಕ್ಕಾಗಿ ಇವರಿಬ್ಬರನ್ನೂ ಕಾಶೀ ಪಟ್ಟಣದಲ್ಲಿ ಒಬ್ಬ ಬ್ರಾಹ್ಮಣನಿಗೆ ಮಾರಿದ (ಈಕೆಗೆ ಚಂದ್ರವತಿಯೆಂಬುದು ನಾಮಾಂತರ). ನೋಡು—ಹರಿಶ್ಚಂದ್ರ.

**ಚನ್ದ್ರವಂಶ.**—[ಭಾರ.-ಆದಿ. ೬೯. ವಿಷ್ಣು -೪, ೬. ಭಾಗ.-೯, ೧೪. ವಾಯು.-೯೧ ಮತ್ಸ್ಯ.-೨೪].

**ಚನ್ದ್ರಶುಕ್ರ**—ಒಂದು ಉಪ ದ್ವೀಪ ಜಂಬೂ ದ್ವೀಪದ ಸುತ್ತಲೂ ಕ್ಷಾರ ಸಮುದ್ರದ ನಡುವೆ ಸ್ವರ್ಣಪ್ರಸ್ಥ, ಚಂದ್ರಶುಕ್ರ, ಆವರ್ತನ, ರಮಣಕ, ಮಂದರ, ಹರಿಣ, ಪಾಂಚಜನ್ಯ, ಸಿಂಹಳ, ಲಂಕಾ ಎಂಬುದಾಗಿ ಎಂಟು ಉಪ ದ್ವೀಪಗಳಿವೆ [ಭಾಗ.-೫, ೧೯. ದೇ.ಭಾ.-೧೧, ೩೦]

**ಚನ್ದ್ರಸೇನ.**—(1) ಸಿಂಹಳ ದ್ವೀಪದ ಅರಸು ಈತನಿಗೆ ಮಂದೋದರಿ, ಇಂದುಮತಿಯೆಂಬುದಾಗಿ ಇಬ್ಬರು ಪುತ್ರಿಯರಿದ್ದರು. ಹೆಂಡತಿ ಗುಣವತಿಯೆಂಬವಳು. ಈತನು ತನ್ನ ಹಿರಿಯಮಗಳನ್ನು ಇಂದ್ರದೇಶದ ಅರಸನಾದ ಸುಧನ್ವ ರಾಜನ ಮಗನಾದ ಕಂಬುಗ್ರೀವನಿಗೆ ಕೊಡುವುದಾಗಿ ಗೊತ್ತು ಮಾಡಿದ್ದ. ಆಗ

ಮಗಳು "ಗಂಡಸರು ನಂಬಲು ಯೋಗ್ಯರಲ್ಲ ಪರಸ್ತ್ರೀ ರತರಾಗಿರುತ್ತಾರೆ" ಎಂದು ಮುಂತಾಗಿ ಹೇಳಿ ತಾನು ವಿವಾಹವನ್ನೇ ಮಾಡಿಕೊಳ್ಳುವುದಿಲ್ಲವೆಂದು ಹಠ ತೊಟ್ಟಳು. ತಂದೆ ಎಷ್ಟು ವಿಧದಿಂದ ಹೇಳಿದರೂ ಸಮ್ಮತಿಸಲಿಲ್ಲ. ಬಳಿಕ ಅರಸು ತನ್ನ ಕಿರಿಯ ಮಗಳಾದ ಇಂದುಮತಿಯ ಮದುವೆಮಾಡಲೆಳಸಿ, ಅನೇಕ ಮಂದಿ ರಾಜಪುತ್ರರನ್ನು ಸೇರಿಸಿರುವಲ್ಲಿ, ಮಂದೋದರಿ ಮದ್ರದೇಶದ ರಾಜಪುತ್ರನಾದ ಚಾರುದೇಷ್ಣನೆಂಬವನು ಮಹಾ ರೂಪವಂತನಾಗಿದ್ದುದನ್ನು ಕಂಡು, ಅವನನ್ನು ಮೋಹಿಸಿ, ತನ್ನನ್ನು ಆತನಿಗೆ ಕೊಟ್ಟು ಮದುವೆಮಾಡಬೇಕೆಂಬುದಾಗಿ ತಂದೆಗೆ ಹೇಳಲಾಗಿ, ಈತನು ಇಂದುಮತಿಯ ವಿವಾಹದೊಂದಿಗೆ ಈಕೆಗೂ ವಿವಾಹಮಾಡಿದನು [ದೇ. ಭಾ.-೫, ೧೭, ೧೮]

(II) ಪಾಂಡವ ಪಕ್ಷದ ಒಬ್ಬ ಅರಸು ರಥೋದಾರನು [ಸಭಾ ೩೧ ಉ. ೧೭೧] ಹದಿನೈದನೆಯ ದಿವಸದ ಯುದ್ಧದಲ್ಲಿ ಅಶ್ವತ್ಥಾಮನಿಂದ ಹತನಾದ [ದ್ರೋ ೧೫೭]

(III) ಶಲ್ಯನ ಮೇಲ್ವಿಚಾರಣೆಗೆ ಒಳಪಟ್ಟಿದ್ದ ಸೇನಾಚಕ್ರರಕ್ಷಕನು ಹದಿನೆಂಟನೆಯ ದಿವಸದ ಯುದ್ಧದಲ್ಲಿ ಯುಧಿಷ್ಠಿರನಿಂದ ಹತನಾದ [ಶಲ್ಯ. ೧೧].

(IV) ಸಮುದ್ರಸೇನ ರಾಜನ ಮಗನು [ಆದಿ ೬೦೧] ಅಶ್ವತ್ಥಾಮನಿಂದ ಮಡಿದನು [ದ್ರೋ ೨೩, ೧೫೭]

**ಚನ್ದ್ರಹರ್ತಾ**—ಸಿಂಹಿಕೆಯ ಮಗನು ನೋಡು—ಚಂದ್ರಮರ್ದನ [ಭಾರ. ಆದಿ ೬೬]

**ಚನ್ದ್ರಹಾಸ**—ಕೇರಳ ದೇಶದ ಅರಸನಾದ ಸುಧಾರ್ಮಿಕ ರಾಜನ ಮಗ ಈತನು ಮೂಲ ನಕ್ಷತ್ರದ ಅರಿಷ್ಟಾಂಶದಲ್ಲಿ ಜನಿಸಿದವನಾದುದರಿಂದಲೂ, ಎಡಗಾಲಿನಲ್ಲಿ ಆರು ಬೆರಳುಗಳಿದ್ದುದರಿಂದಲೂ, ಬಾಲ್ಯದಲ್ಲಿಯೇ ಶತ್ರುಗಳು ಈತನ ತಂದೆಯನ್ನು ಕೊಂದು ರಾಜ್ಯವನ್ನು ಆಕ್ರಮಿಸಿಕೊಂಡರು. ಜನನಿ ತಂದೆಯೊಂದಿಗೆ ಸಹಗಮನ ಮಾಡಿದಳು ಬಳಿಕ ಒಬ್ಬ ದಾದಿ ಇವನನ್ನು ಎತ್ತಿಕೊಂಡು ಕುಂತಲ ದೇಶವನ್ನು ಹೊಕ್ಕು, ಈ ಬಾಲಕನನ್ನು ಪೋಷಿಸುತ್ತಿದ್ದಳು ಕೆಲವು ವರ್ಷಗಳಲ್ಲಿಯೇ ಆ ದಾದಿಯೂ ಸತ್ತಳು ಬಳಿಕ ಅನಾಥನಾದ ಈ ಬಾಲಕನು ಜನಗಳ ಕನಿಕರಕ್ಕೆ ಪಾತ್ರನಾಗಿ ಅಲ್ಲಿಯೇ ಜೀವಿಸಿಕೊಂಡಿದ್ದ. ಒಂದು ದಿನ ಕುಂತಲ ದೇಶದ ಮಂತ್ರಿಯಾದ ದುಷ್ಟಬುದ್ಧಿಯ ಮನೆಯಲ್ಲಿ ಸಂತರ್ಪಣೆ ನಡೆದಾಗ ಆ ಊರ ಬಾಲಕರೊಂದಿಗೆ ಇವನೂ ಹೋಗಿದ್ದ. ಆಗ ಅಲ್ಲಿ ನೆರೆದಿದ್ದ ಬ್ರಾಹ್ಮಣರು ಇವನನ್ನು ನೋಡಿ, ಆಶ್ಚರ್ಯಭರಿತರಾಗಿ ಮಂತ್ರಿಯನ್ನು ಕುರಿತು "ಅಯ್ಯಾ, ಇವನು ಚಕ್ರವರ್ತಿಯಾಗತಕ್ಕವನು. ಇವನನ್ನು ಅಕ್ಕರೆಯಿಂದ ಕಾಪಾಡು" ಎಂದರು. ಕುಂತಲ

ರಾಜನಿಗೆ ಸಂತಾನವಿಲ್ಲದ ಕಾರಣ, ರಾಜ್ಯವನ್ನು ತಾನೇ ಅಪಹರಿಸಬೇಕೆಂಬ ದುರುದ್ದೇಶದಿಂದ ಕೂಡಿದ್ದ ಮಂತ್ರಿ ಈ ಮಾತುಗಳನ್ನು ಕೇಳಿ, ಅಂತರಂಗದಲ್ಲಿ ಹೆದರಿ, ಗೂಢವಾಗಿ ಚಂಡಾಲರನ್ನು ಕರೆಯಿಸಿ, ಈ ಬಾಲನನ್ನು ಕೊಂದು ಯಾವುದಾದರೊಂದು ಕುರುಹನ್ನು ತಂದು ತೋರಿದಲ್ಲಿ ಆ ಚಂಡಾಲರಿಗೆ ವಿಶೇಷವಾದ ಬಹುಮಾನವನ್ನು ಕೊಡುವುದಾಗಿ ಹೇಳಿದ ಕಟುಗರು ಇವನನ್ನು ಕಾಡಿಗೆ ಕೊಂಡು ಹೋಗಿ, ಕೊಲ್ಲುವುದಕ್ಕೆ ಮನಸ್ಸು ಬಾರದೆ, ಅವನ ಎಡಗಾಲಿನಲ್ಲಿದ್ದ ಆರನೆಯ ಬೆರಳನ್ನು ತಂದು ಮಂತ್ರಿಗೆ ತೋರಲಾಗಿ ಅವನು ಆ ಚಂಡಾಲರನ್ನು ಮನ್ನಿಸಿ ಕಳುಹಿದ.

ಚಂದ್ರಹಾಸನು ಕಾಡಿನಲ್ಲಿ ಅಳುತ್ತಿರುವಲ್ಲಿ ಅಲ್ಲಿಗೆ ಬೇಟೆಗೆ ಬಂದ ಕುಳಿಂದನೆಂಬ ಬೇಡರ ಅರಸು ಈ ಬಾಲಕನನ್ನು ಕಂಡು, ತನಗೆ ಮಕ್ಕಳಿಲ್ಲದ ಕಾರಣ, ಮರುಕಗೊಂಡು ಅವನನ್ನೇ ತನ್ನ ಮಗನೆಂದು ಭಾವಿಸಿ, ಮನೆಗೆ ಕರೆತಂದು, ಚಂದ್ರಹಾಸನೆಂದು ಹೆಸರಿಟ್ಟು ಅಕ್ಕರೆಯಿಂದ ಸಾಕುತ್ತಿದ್ದ. ಚಂದ್ರಹಾಸನು ಕ್ರಮವಾಗಿ ವಿದ್ಯಾಪಾರಂಗತನಾಗಿ, ರಾಜಕಾರ್ಯಗಳಲ್ಲಿ ಕುಳಿಂದನಿಗೆ ಒತ್ತಾಸೆಮಾಡುತ್ತ, ಸುತ್ತಮುತ್ತಣ ರಾಜ್ಯಗಳನ್ನು ಗೆದ್ದು ತನ್ನ ರಾಜ್ಯವನ್ನೂ ಬೊಕ್ಕಸವನ್ನೂ ಬಲಪಡಿಸಿದ. ಇಂತಿರಲು ಒಂದು ದಿನ ದುಷ್ಟಬುದ್ಧಿ ಇವನ ರಾಜ್ಯಕ್ಕೆ ಬಂದಿದ್ದಾಗ ಇವನನ್ನು ಗುರುತಿಸಿ, ಕುಳಿಂದನ ಮೂಲಕ ನಡೆದ ಸಮಾಚಾರವನ್ನೆಲ್ಲ ತಿಳಿದು, ಮನಮರುಗಿ, " ಇವನಿಗೆ ವಿಷವನ್ನು ಕೊಡುವುದು " ಎಂಬುದಾಗಿ ರಹಸ್ಯವಾಗಿ ಒಂದು ಕಾಗದವನ್ನು ತನ್ನ ಮಗನಿಗೆ ಬರೆದು, ಚಂದ್ರಹಾಸನ ಮೂಲಕ ಕಳುಹಿಸಿಕೊಟ್ಟ ಚಂದ್ರಹಾಸನು ನಡೆತಂದು ಕುಂತಲ ನಗರಿಯ ಬಾಹ್ಯೋದ್ಯಾನದಲ್ಲಿ ವಿಶ್ರಮಿಸಿಕೊಂಡಿರುವಲ್ಲಿ, ದುಷ್ಟಬುದ್ಧಿಯ ಮಗಳಾದ ವಿಷಯೆಯೆಂಬವಳು ತನ್ನ ಸಖಿಯರೊಂದಿಗೆ ವನವಿಹಾರಾರ್ಥವಾಗಿ ಬಂದಿದ್ದು, ಈತನನ್ನು ಕಂಡು ಮೋಹಪರವಶೆಯಾಗಿ, ಅವನ ಕಿಸೆಯಲ್ಲಿ ಕಂಡುಬಂದ ಓಲೆಯನ್ನು ತೆಗೆದು ಬಿಚ್ಚಿ ಓದಿನೋಡಿ, ಅದು ತಮ್ಮ ತಂದೆಯ ಬರಹವೆಂದು ಗುರುತಿಸಿ ಇಂತಹ ಸುಕುಮಾರನಿಗೆ ವಿಷವನ್ನು ಕೊಡುವುದಾಗಿ ನಮ್ಮ ತಂದೆ ನಮ್ಮ ಅಣ್ಣನಾದ ಮದನನಿಗೆ ಬರೆದಿರುವುದನ್ನು ನೋಡಿದರೆ ಇದು ಹಸ್ತಪ್ರಮಾದವಲ್ಲದೆ ಬೇರೆಯಲ್ಲ. " ವಿಷಯೆಯನ್ನು ಕೊಡು " ಎಂದು ಬರೆಯುವಾಗ ವಿಷವನ್ನು ಎಂದು ಪ್ರಮಾದದಿಂದ ಬರೆದಿರಬಹುದು! ಇದನ್ನು ಸರಿಪಡಿಸುವೆನೆಂದು ಭಾವಿಸಿ " ವಿಷಯೆಯನ್ನು " ಎಂಬುದಾಗಿ ತಿದ್ದುಪಡಿ ಮಾಡಿ, ಆ ಪತ್ರವನ್ನು ಅಲ್ಲಿಯೇ ಇಟ್ಟು ತೆರಳಿದಳು.

ಚಂದ್ರಹಾಸನು ಎಚ್ಚತ್ತು ಪಟ್ಟಣವನ್ನು ಹೊಕ್ಕು ಆ ಲೇಖವನ್ನು ಮದನನಿಗೆ ಕೊಟ್ಟು, ಅವನಿಂದ ಮಾನಿತನಾಗಿ, ವಿಷಯೆಯನ್ನು ಮದುವೆಯಾದ. ಇಷ್ಟ

ರಲ್ಲಿ ದುಷ್ಟಬುದ್ಧಿ ಅಲ್ಲಿಗೆ ಬಂದು, ನಡೆದ ಸಮಾಚಾರವನ್ನು ಕೇಳಿ ಖತಿಗೊಂಡು, ಚಂದ್ರಹಾಸನನ್ನು ಕೊಲ್ಲಿಸುವ ಉದ್ದೇಶದಿಂದ, ಕಟುಗರನ್ನು ಕರೆಯಿಸಿ, "ನೀವು ಕಾಳಿಕಾಲಯದಲ್ಲಿ ಅವಿತುಕೊಂಡಿದ್ದು, ಸಂಜೆಯಾದ ಕೂಡಲೇ ಅಲ್ಲಿಗೆ ಪೂಜಾದ್ರವ್ಯ ಗಳೊಂದಿಗೆ ಬರತಕ್ಕವನನ್ನು ಕೊಂದುಹಾಕಿರಿ" ಎಂದು ಆಣತಿಯಿತ್ತು ಕಳುಹಿ, ಚಂದ್ರಹಾಸನನ್ನು ಕರೆದು "ಅಯ್ಯಾ, ಹೊಸ ಮದುಮಣಿಗನು ಕಾಳೀಪೂಜೆ ಮಾಡ ತಕ್ಕದ್ದು ನಮ್ಮ ಮನೆಯ ಸಂಪ್ರದಾಯ ಈ ದಿನ ಸಾಯಂಕಾಲಕ್ಕೆ ನೀನು ಊರ ಹೊರಗಣ ಕಾಳಿಕಾಲಯಕ್ಕೆ ಹೋಗಿ ಕಾಳಿಯನ್ನು ಪೂಜಿಸಿ ಬರಬೇಕು" ಎಂದು ಹೇಳಿ, ಸಂಜೆಯಾದಕೂಡಲೇ ಪೂಜಾ ಸಾಮಗ್ರಿಗಳೊಂದಿಗೆ ಚಂದ್ರಹಾಸನನ್ನು ಕಾಳೀಮಂದಿರಕ್ಕೆ ಕಳುಹಿಸಿಕೊಟ್ಟ

ಇಷ್ಟು ದಿನಗಳವರೆಗೂ ದುಷ್ಟಬುದ್ಧಿ ಗ್ರಾಮಾಂತರಕ್ಕೆ ಹೋಗಿದ್ದ ಕಾರಣ, ಅರಮನೆಯಲ್ಲಿನ ರಾಜಕಾರ್ಯಗಳನ್ನೆಲ್ಲ ದುಷ್ಟಬುದ್ಧಿಯ ಮಗನಾದ ಮದನನೇ ನೋಡಿಕೊಳ್ಳುತ್ತಿದ್ದ ಆ ದಿನವೂ ಎಂದಿನಂತೆ ಮದನನು ಅರಮನೆಗೆ ಹೋಗಿದ್ದಾಗ, ರಾಜಪುರೋಹಿತನಾದ ಗಾಲವನು ಅರಸನಿಗೆ ಅವಸಾನಕಾಲ ಸಮಿಾಪಿಸುತ್ತಿದೆ ಯೆಂದು ತಿಳಿಸಲಾಗಿ, ಅರಸನು ಚಂದ್ರಹಾಸನನ್ನು ಮದುವೆಯ ಸಮಯದಲ್ಲಿ ಕಂಡಿದ್ದನಾಗಿ, ತನಗೆ ಪುತ್ರಸಂತಾನವಿಲ್ಲದ ಕಾರಣ, ಚಂದ್ರಹಾಸನೇ ತನ್ನ ಮಗಳಿಗೂ ವರನಾಗಲು ತಕ್ಕವನೆಂತಲೂ, ತನ್ನ ರಾಜ್ಯಕ್ಕೂ ಉತ್ತರಾಧಿಕಾರಿಯಾಗಲು ಯೋಗ್ಯನೆಂತಲೂ ನಿಶ್ಚಯಿಸಿ, ಚಂದ್ರಹಾಸನನ್ನು ತತ್‌ಕ್ಷಣವೇ ಅರಮನೆಗೆ ಕರೆ ತರುವಂತೆ ಮದನನನ್ನು ಕಳುಹಿಸಿದ ನಡುದಾರಿಯಲ್ಲಿ ಚಂದ್ರಹಾಸನನ್ನು ಇದಿ ರ್‍ಗೊಂಡ ಮದನನು, ಚಂದ್ರಹಾಸನನ್ನು ರಾಜನ ಬಳಿಗೆ ಕಳುಹಿ, ಅವನಿಗೆ ಪ್ರತಿ ಯಾಗಿ ತಾನೇ ಕಾಳೀಮಂದಿರವನ್ನು ಹೊಕ್ಕು ಕಟುಗರಿಂದ ಹತನಾದ. ಇತ್ತಲಾಗಿ ಚಂದ್ರಹಾಸನು ಅರಮನೆಗೆ ಹೋಗಿ, ಅರಸನಿಂದ ಸನ್ಮಾನಿತನಾಗಿ, ರಾಜಪುತ್ರಿ ಯಾದ ಚಂಪಕಮಾಲಿನಿಯನ್ನು ಮದುವೆಯಾಗಿ, ಕುಂತಲ ರಾಜ್ಯಾಧಿಕಾರವನ್ನು ಪಡೆದ ಅಷ್ಟರಲ್ಲಿ ಈ ಸುದ್ದಿ ದುಷ್ಟಬುದ್ಧಿಯ ಕಿವಿಗೂ ಬಿತ್ತು. ಅವನ ದುಃಖಕ್ಕೆ ಪಾರವೇ ಇಲ್ಲವಾಯಿತು. ಅದೇ ಸಮಯದಲ್ಲಿಯೇ ಮದನನ ಕೊಲೆಯೂ ತಿಳಿದು ಬಂತು. ಒಡನೆಯೇ ದೇವಾಲಯವನ್ನು ಹೊಕ್ಕು ಮದನನ ದುಃಸ್ಥಿತಿಯನ್ನು ಕಂಡು, ತಲೆಯನ್ನು ಒಡೆದುಕೊಂಡು ದೇಹತ್ಯಾಗಮಾಡಿದ. ಬೆಳಗಾಗುತಲೇ ಗುಡಿಯ ಪೂಜಾರಿಯ ಮೂಲಕ, ದೇವಾಲಯದಲ್ಲಿ ನಡೆದ ಹತ್ಯೆಯನ್ನು ಕೇಳಿ ಚಂದ್ರಹಾಸನು ಅಲ್ಲಿಗೆ ಹೋಗಿ, ಅವರಿಬ್ಬರನ್ನೂ ಬದುಕಿಸುವುದಕ್ಕಾಗಿ ಕಾಳಿಯನ್ನು ಪ್ರಾರ್ಥಿಸಿ, ಕಾಳಿ ಪ್ರಸನ್ನೆಯಾಗದಿರಲು, ತನ್ನ ಕೊರಳನ್ನೇ ಕುಯ್ದುಕೊಳ್ಳಲು ಪ್ರಯತ್ನಿಸಿದಾಗ ಕಾಳಿ ಪ್ರತ್ಯಕ್ಷವಾಗಿ, ಮದನನನ್ನೂ ದುಷ್ಟಬುದ್ಧಿಯನ್ನೂ ಬದು

ಕಿಸಿ, ಚಂದ್ರಹಾಸನಿಗೆ ಅನೇಕ ವರಗಳನ್ನಿತ್ತು ಅನುಗ್ರಹಿಸಿದಳು. ಬಳಿಕ ಚಂದ್ರಹಾಸನು ಕುಂತಲ ರಾಜ್ಯಾಧಿಕಾರವನ್ನು ವಹಿಸಿ, ಕುಳಿಂದನನ್ನೂ ಅವನ ಪತ್ನಿಯನ್ನೂ ಬರಮಾಡಿಕೊಂಡು ಬಹಳ ಕಾಲದವರೆಗೆ ಸುಖವಾಗಿ ರಾಜ್ಯಭಾರಮಾಡುತ್ತಿದ್ದ ಈತನಿಗೆ ರಾಜಪುತ್ರಿಯಾದ ಚಂಪಕಮಾಲಿನಿಯಲ್ಲಿ ಪದ್ಮಾಕ್ಷನೆಂಬ ಪುತ್ರನೂ, ಮಂತ್ರಿಪುತ್ರಿಯಾದ ವಿಷಯೆಯಲ್ಲಿ ಮಕರಾಕ್ಷನೆಂಬ ಮಗನೂ ಜನಿಸಿದರು

ಈ ಹುಡುಗರಿಬ್ಬರೂ ಒಮ್ಮೆ ಈ ಪಟ್ಟಣದ ಹೊರಭಾಗದಲ್ಲಿ ಸಂಚರಿಸುತ್ತಿದ್ದಾಗ, ಯುಧಿಷ್ಠಿರನ ಅಶ್ವಮೇಧದ ಕುದುರೆ ಅಲ್ಲಿಗೆ ಬಂದುದನ್ನು ಕಂಡು, ವಿಸ್ಮಿತರಾಗಿ, ಈ ಸಮಾಚಾರವನ್ನು ತಮ್ಮ ತಂದೆಯಾದ ಚಂದ್ರಹಾಸನಿಗೆ ತಿಳುಹಿದರು ಚಂದ್ರಹಾಸನು ಕೂಡಲೇ ಪಟ್ಟಣದಿಂದ ಹೊರಬಂದು ಕೃಷ್ಣಾರ್ಜುನರನ್ನು ಸಂದರ್ಶಿಸಿ, ತನ್ನ ಅರಮನೆಗೆ ಕರೆದುಯ್ದು ಮೂರು ದಿನಗಳವರೆಗೆ ತನ್ನ ಮನೆಯಲ್ಲಿಟ್ಟುಕೊಂಡು ಆದರಿಸಿ, ಮಕರಾಕ್ಷನಿಗೆ ರಾಜ್ಯದಲ್ಲಿ ಪಟ್ಟಗಟ್ಟಿ, ಯುಧಿಷ್ಠಿರನ ಅಶ್ವಮೇಧಕ್ಕೆ ವಿಶೇಷವಾಗಿ ದ್ರವ್ಯವನ್ನೂ ಹಿಂಬಲವಾಗಿ ವಿಪುಲವಾದ ಸೇನೆಯನ್ನೂ ಕೊಟ್ಟು, ತಾನೂ ಕೃಷ್ಣಾರ್ಜುನರೊಂದಿಗೆ ಕುದುರೆಯ ಸಂಗಡ ಹೊರಟ [ಜೈ.ಭಾ.-೫೦, ೫೯]

(ii) ರಾವಣನು ಈಶ್ವರನ ವರಪ್ರಸಾದದಿಂದ ಪಡೆದ ಖಡ್ಗ [ರಾಮಾ.-ಉತ್ತರ. ೧೬].

**ಚಮ್ಪಕಮಾಲಿನಿ.**—(i) ಶ್ರೀ ರಾಮನ ಪುತ್ರನಾದ ಕುಶನ ಹಿರಿಯ ಹೆಂಡತಿ. ನೋಡು—ಕುಶ.

(ii) ಚಂದ್ರಹಾಸನ ಕಿರಿಯ ಹೆಂಡತಿ ಕುಂತಲ ರಾಜನ ಮಗಳು. ನೋಡು—ಚಂದ್ರಹಾಸ

**ಚಮ್ಪಕಾ.**— ಹಂಸಧ್ವಜನ ರಾಜಧಾನಿ [ಜೈ.ಭಾರ.-೧೭].

**ಚಮ್ಪಕಾವತಿ.**—ಒಂದು ಪಟ್ಟಣ ಅಂಗದೇಶದ ರಾಜಧಾನಿ [ಭಾರ.-ವನ. ೮೩, ೧೧೩]. ಪಾಂಡವರ ಕಾಲದಲ್ಲಿ ಕರ್ಣನು ಇಲ್ಲಿ ರಾಜ್ಯಭಾರ ಮಾಡುತ್ತಿದ್ದ. ಇದಕ್ಕೆ ಚಂಪಾಯೆಂಬುದು ನಾಮಾಂತರ ಭಾಗಲ್‌ಪುರದ ಬಳಿ ಇದೆ [ಭಾರ.-ಶಾಂತಿ ೫]. ಹರಿಶ್ಚಂದ್ರನ ಮೊಮ್ಮಗನಾದ ಚಂಪನೆಂಬವನು ಇದನ್ನು ಸ್ಥಾಪಿಸಿದನು [ಭಾಗ.-೯-೮].

**ಚಮ್ಪಿಕಾ** —ಕುಶನ ಹೆಂಡತಿಯಾದ ಚಂಪಕಮಾಲಿನಿಯ ನಾಮಾಂತರ.

**ಚಮಸ.**—ಋಷಭದೇವನ ಮಕ್ಕಳಲ್ಲಿ ಒಬ್ಬ. ಇವನೂ ಇವನ ಒಡಹುಟ್ಟಿದವರಾದ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿಹೋತ್ರ, ದ್ರುಮಿಲ, ಕರಭಾಜನರೆಂಬ ಎಂಟು ಮಂದಿ ಇವನ ಒಡಹುಟ್ಟಿದವರೂ, ಲೋಕ

ವ್ಯವಹಾರವನ್ನು ಬಿಟ್ಟು ಬ್ರಹ್ಮನಿಷ್ಠರಾದರು. ಬ್ರಹ್ಮವಿದ್ಯಾಸಂಬಂಧವಾಗಿ ಜನಕ ರಾಜನೊಂದಿಗೆ ಅತ್ಯುತ್ತಮ ರೀತಿಯಲ್ಲಿ ಸಂವಾದಮಾಡಿದನು [ಭಾಗ.-೧೧-೧, ೫].

**ಚರ್ಮಣ್ವತಿ.**—ದಕ್ಷಿಣ ಪಾಂಚಾಲದೇಶದಲ್ಲಿ ಹರಿಯುವ ಒಂದು ನದಿ ಕುಂತಿ ದೇಶಕ್ಕೆ ದಕ್ಷಿಣದಲ್ಲಿದೆ. ಚಂಪಕಾವತೀ ನದಿಯು ಬಳಿ ಗಂಗೆಯಲ್ಲಿ ಸೇರುತ್ತದೆ. ಈಗ ಇದನ್ನು ಚಂಬಾಲ್ (Chambal) ಎಂದು ಕರೆಯುತ್ತಾರೆ [ಭಾರ.-ಸಭಾ. ೯, ೩೨. ವನ. ೩೦೯]. ಹಿಂದೆ ರಂತಿದೇವನೆಂಬ ಅರಸು ಮಾಡಿದ ಯಜ್ಞದಲ್ಲಿ ಅನೇಕ ಪಶುಗಳನ್ನು ಕೊಂದು ಅವುಗಳ ಚರ್ಮವನ್ನು ರಾಶಿಹಾಕಿರಲಾಗಿ, ಅಲ್ಲಿಂದ ಹರಿದು ಬಂದದ್ದು [ದ್ರೋ. ೬೭. ಅನು. ೧೨೩]. ಇದರ ಮಹಿಮೆ [ವನ. ೮೦].

**ಚರ್ಮವನ್ತ** —ಶಕುನಿಯು ಸಹೋದರ ಭಾರತ ಯುದ್ಧದಲ್ಲಿ ಎಂಟನೆಯು ದಿನ ಅರ್ಜುನ ಪುತ್ರನಾದ ಇರಾವಂತನಿಂದ ಹತನಾದ [ಭೀಷ್ಮ. ೯೦]

**ಚಕ್ಷು.**—ಉತ್ತಾನಪಾದ ವಂಶದ ಸರ್ವತೇಜನೆಂಬ ರಾಜರ್ಷಿಯಿಂದ ಆಕೂತಿ ಯೆಂಬ ಹೆಂಡತಿಯಲ್ಲಿ ಜನಿಸಿದವ. ಈತನು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರಕ್ಕೆ ಮೊದಲು ಆರನೆಯ ಮನ್ವಂತರದಲ್ಲಿ ರಾಜ್ಯಭಾರಮಾಡುತ್ತಿದ್ದ [ಭಾಗ -೮, ೧೩. ವಿಷ್ಣು -೧, ೩೮] ಈತನು ರಾಜ್ಯಭಾರಮಾಡಿದ ಕಾಲಕ್ಕೆ ಚಾಕ್ಷುಷ ಮನ್ವಂತರವೆಂದು ಹೆಸರು. ಆ ಕಾಲದಲ್ಲಿ ಭೃಗು, ಸುಧಾಮ, ವಿರಜ, ಸಹಿಷ್ಣು, ನಾದ, ವಿವಸ್ವಂತ, ಅತಿನಾಮ ಎಂಬ ಏಳು ಮಂದಿ ಋಷಿಗಳೂ, ಲೇಖ, ಋಭು, ಆದ್ಯ, ವರಿಮೂಲ, ಋಭರೆಂಬ ಐದು ಬಗೆಯ ದೇವತೆಗಳೂ, ಮಂತ್ರದ್ರುಮನೆಂಬ ಇಂದ್ರನೂ ಇದ್ದರು. ವೈರಾಜನೆಂಬ ಋಷಿಯಿಂದ ಸಂಭೂತಿಯೆಂಬಾಕೆಯಲ್ಲಿ ಜನಿಸಿದ ಅಜಿತನೆಂಬ ವಿಷ್ಣು ಅದೇ ಕಾಲದಲ್ಲಿಯೇ ಅವತರಿಸಿದನು ಈತನೇ ಕೂರ್ಮಾವ ತಾರವನ್ನು ತಳೆದು ಮಂದರ ಪರ್ವತವನ್ನು ತನ್ನ ಬೆನ್ನಮೇಲೆ ಹೊತ್ತು ದೇವತೆ ಗಳಿಗೆ ಅಮೃತವನ್ನು ಸಂಪಾದಿಸಿಕೊಟ್ಟವನು [ಭಾಗ.-೮, ೫]. ಈ ಚಕ್ಷುರ್ಮನು ನಡ್ವಲಾ(ವೀರಿಣೀ) ಯೆಂಬವಳನ್ನು ಮದುವೆಯಾಗಿ ಪುರು, ಕುತ್ಸ, ತ್ರಿತ, ದ್ಯುಮ್ನ, ಸತ್ಯವಂತ, ಧೃತವ್ರತ, ಅಗ್ನಿಷ್ಟೋಮ, ಅತಿರಾತ್ರ, ಪ್ರದ್ಯುಮ್ನ, ಶಿಬಿ, ಉಲ್ಮುಕ ರೆಂಬ ಹನ್ನೊಂದು ಮಂದಿ ಪುತ್ರರನ್ನು ಪಡೆದನು [ಹರಿ.-೧, ೭. ವಿಷ್ಣು.- ೩, ೧. ಬ್ರಹ್ಮ.-೫ ಬ್ರ.ವೈ -೨, ೯೩. ಮಾರ್ಕ.-೫೦]. ಮತ್ಸ್ಯಪುರಾಣದ ಪ್ರಕಾರ ರುರು, ಪುರು ಅಥವಾ ಪುರುಷ, ಶತದ್ಯುಮ್ನ, ತಪಸ್ವಿ, ಸತ್ಯವಾಕ್, ಹವಿ, ಅಗ್ನಿಷ್ಟುತ, ಅತಿರಾತ್ರ, ಸುದ್ಯುಮ್ನ, ಅಭಿಮನ್ಯುಗಳೆಂಬ ಹತ್ತು ಮಂದಿ ಮಕ್ಕಳೆಂಬುದಾಗಿ ತಿಳಿದುಬರುತ್ತದೆ.

**ಚಾಕ್ಷುಷೀ** —ಒಂದು ಬಗೆಯ ವಿದ್ಯೆ. ಪಾಂಡವರು ಏಕಚಕ್ರ ನಗರದಿಂದ ದ್ರೌಪದೀ ಸ್ವಯಂವರಕ್ಕೆ ಹೋಗುತ್ತಿದ್ದಾಗ ಅರ್ಜುನನಿಂದ ಸೋತ ಚಿತ್ರರಥನೆಂಬ

ಗಂಧರ್ವನು ಈ ವಿದ್ಯೆಯನ್ನು ಅರ್ಜುನನಿಗೆ ಉಪದೇಶಮಾಡಿದ. ನೋಡು—ಅರ್ಜುನ [ಆದಿ. ೧೮೬, ೧೯೯].

**ಚಾಣೂರ**—(I) ಕಂಸನ ಆಸ್ಥಾನದಲ್ಲಿದ್ದ ಜಟ್ಟಿಗಳಲ್ಲಿ ಒಬ್ಬ. ಬಲರಾಮ ಕೃಷ್ಣರು ಧನುರ್ಯಾಗಕ್ಕಾಗಿ ಕಂಸನ ಅಪ್ಪಣೆಯ ಮೇರೆಗೆ ಮಥುರೆಗೆ ಹೋಗಿದ್ದಾಗ, ಇವನೂ ಇವನ ಜತೆಗಾರನಾದ ಮುಷ್ಟಿಕನೂ ಕಂಸನ ಪ್ರೇರಣೆಯಿಂದ, ರಾಮ ಕೃಷ್ಣರನ್ನು ಕೊಲ್ಲಹೋಗಿ, ಮುಷ್ಟಿಯುದ್ಧದಲ್ಲಿ ತಾವೇ ಹತರಾದರು [ಸಭಾ. ೫೩ ಭಾಗ - ೧೦, ೪೪]

(II) ಯುಧಿಷ್ಠಿರನ ಸಭೆಯಲ್ಲಿದ್ದ ಒಬ್ಬ ಅರಸು [ಸಭಾ.-೪].

**ಚಾತುರಾಶ್ರಮ್ಯ**—ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ನ್ಯಾಸಗಳೆಂಬ ನಾಲ್ಕು ಆಶ್ರಮಗಳು. ಇವುಗಳ ಧರ್ಮಗಳು [ಆದಿ. ೮೫, ೮೬. ಶಾಂತಿ .೬೦, ೬೫, ೧೮೯, ೨೪೦, ೨೪೧, ೨೪೮, ೨೫೧. ಅನು ೨೦೮ ಅಶ್ವ ೪೫, ೪೭]

**ಚಾತುರ್ವರ್ಣ್ಯ**—ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳು. ಅವುಗಳ ಧರ್ಮಗಳು, ಹನೂಮಂತನು ಭೀಮನಿಗೆ ತಿಳುಹಿದ್ದು [ವನ. ೧೫೨] ವಿದುರನು ಧೃತರಾಷ್ಟ್ರನಿಗೆ ಹೇಳಿದ್ದು [ಉದ್ಯೋ ೪೦] ಭೀಷ್ಮನು ಯುಧಿಷ್ಠಿರನಿಗೆ ಹೇಳಿದ್ದು [ಶಾಂತಿ ೫೯]. ಭೃಗು ಮುನಿ ಭರದ್ವಾಜನಿಗೆ ಹೇಳಿದ್ದು [ಶಾಂತಿ -೧೮೯]. ಪಾರ್ವತಿ ಪರಮೇಶ್ವರನಿಗೆ ಹೇಳಿದ್ದು [ಅನು ೨೮] ಶ್ರೀ ಕೃಷ್ಣನು ಯುಧಿಷ್ಠಿರನಿಗೆ ಹೇಳಿದ್ದು [ಅಶ್ವ. ೯೭]

**ಚಾನ್ದ್ರಾಯಣ**.—ಪಾಪಪರಿಹಾರಾರ್ಥವಾಗಿ ಮಾಡತಕ್ಕ ಪ್ರಾಯಶ್ಚಿತ್ತರೂಪವಾದ ಒಂದು ವ್ರತ ಇದರಲ್ಲಿ ಪಿಪೀಲಿಕಾಮಧ್ಯ ಚಾಂದ್ರಾಯಣವೆಂತಲೂ ಯವಮಧ್ಯ ಚಾಂದ್ರಾಯಣವೆಂತಲೂ ಎರಡು ವಿಧ ಹುಣ್ಣಿಮೆಯ ದಿನ ೧೫ ಕಬಳಗಳನ್ನು ತಿಂದು ಕ್ರಮವಾಗಿ ಅಮಾವಾಸ್ಯೆಯವರೆಗೆ ಒಂದೊಂದನ್ನೇ ಕಡಮೆ ಮಾಡುತ್ತ ಬಂದು ಮರಳಿ ಶುಕ್ಲಪ್ರತಿಪತ್ತಿನಿಂದ ಹುಣ್ಣಿಮೆಯವರೆಗೆ ಕ್ರಮವಾಗಿ ಒಂದೊಂದೇ ಕಬಳವನ್ನು ಹೆಚ್ಚಿಸುತ್ತ ಬರುವುದು. ಪಿಪೀಲಿಕಾಮಧ್ಯ ಚಾಂದ್ರಾಯಣ (ಇರುವೆ ಎರಡು ಕಡೆಗಳಲ್ಲಿಯೂ ದಪ್ಪನಾಗಿದ್ದು ನಡುವೆ ಸಣ್ಣಗಿರುತ್ತದೆ) ಅಂತೆಯೇ ಪ್ರಾರಂಭದ ಹುಣ್ಣಿಮೆಯ ದಿನ ೧೫ ಕಬಳಗಳು, ಅಮಾವಾಸ್ಯೆಯ ದಿನ ಒಂದು ಕಬಳ, ಮರಳಿ ಕ್ರಮವಾಗಿ ಹುಣ್ಣಿಮೆಗೆ ೧೫ ತುತ್ತುಗಳು. ಅಮಾವಾಸ್ಯೆಯ ದಿನ ಒಂದು ಕಬಳದಿಂದ ಪ್ರಾರಂಭಮಾಡಿ ಹುಣ್ಣಿಮೆಗೆ ೧೫ ಕಬಳಗಳಿಗೆ ಹೆಚ್ಚಿಸಿ, ಮರಳಿ ಕ್ರಮವಾಗಿ ಒಂದೊಂದೇ ಕಬಳವನ್ನು ಕಡಮೆಮಾಡುತ್ತ ಬರುವುದಾದರೆ ಇದನ್ನು ಯವಮಧ್ಯ ಚಾಂದ್ರಾಯಣವೆಂದು ಕರೆಯುತ್ತಾರೆ (ಗೋಧಿಯ ಕಾಳು

ಅತ್ತಿತ್ತ ಸಣ್ಣಗಿದ್ದು ನಡುವೆ ದಪ್ಪನಾಗಿರುತ್ತದೆ) ಅಂತೆಯೇ ಇದನ್ನೂ ಊಹಿಸ ಬೇಕು [ಅನು. ೧೭೩. ಅಶ್ವ. ೧೧೨].

**ಚಾಮುಣ್ಡಾ.**—ಮಹಾ ಕಾಳಿಯ ನಾಮಾಂತರ. ನೋಡು—ಚಂಡ, ಚಂಡ ಮುಂಡ [ದೇ.ಭಾಗ -೫, ೨೬. ಮಾರ್ಕ.-೮೪].

**ಚಾರುದೇಷ್ಣ.**—(i) ಶ್ರೀ ಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದವನು [ಆದಿ. ೨೦೧, ೨೩೯. ಸಭಾ.-೧೪, ವನ. ೧೬] ಚಾರುಮತಿಯೆಂಬವಳು ಇವನ ಒಡಹುಟ್ಟಿ ದವಳು. ಕೃತವರ್ಮನ ಮಗನಾದ ಬಲಿ ರಾಜನನ್ನು ಮದುವೆಯಾಗಿದ್ದಳು[ಭಾಗ.-೧೦, ೬೧. ವಿಷ್ಣು -೫, ೨೮]. ಇವನು ಮಡಿದದ್ದು [ಮೌಸಲ ೪]

(ii) ಮದ್ರ ದೇಶದ ರಾಜಪುತ್ರ ಸಿಂಹಳ ದ್ವೀಪದ ಅರಸನಾದ ಚನ್ದ್ರ ಸೇನನ ಮಗಳಾದ ಮಂದೋದರಿಯೆಂಬವಳನ್ನು ಮದುವೆಯಾಗಿದ್ದನು. ನೋಡು—ಚಂದ್ರಸೇನ.

**ಚಾರ್ವಾಕ.**—ದುರ್ಯೋಧನನ ಆಪ್ತ ಸ್ನೇಹಿತನಾದ ಒಬ್ಬ ರಾಕ್ಷಸ. ಇವನು ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ, ಅಮರತ್ವವನ್ನು ಬೇಡಿದ. ಬ್ರಹ್ಮನು ಅದಕ್ಕೆ ಸಮ್ಮತಿಸಿ, "ನೀನು ಬ್ರಾಹ್ಮಣರನ್ನು ಮಾತ್ರ ಅಪಮಾನಗೊಳಿಸಬೇಡ" ಎಂದು ಹೇಳಿ ವರ ಕೊಟ್ಟ. ಕೆಲವು ಕಾಲದ ಬಳಿಕ ದ್ವಾಪರಯುಗದಲ್ಲಿ ದುರ್ಯೋಧನನಿಗೂ ಇವನಿಗೂ ಅತ್ಯಂತ ಗಾಢವಾದ ಸ್ನೇಹ ಬೆಳೆಯಿತು. ದುರ್ಯೋಧನನ ವಧಾನಂತರ ಯುಧಿಷ್ಠಿರನ ಪಟ್ಟಾಭಿಷೇಕ ಸಮಯದಲ್ಲಿ ಇವನು ಬ್ರಾಹ್ಮಣ ಸನ್ಯಾಸಿಯಾಗಿ, ಆಸ್ಥಾನ ಮಂಟಪವನ್ನು ಹೊಕ್ಕು ಅಸಂಬದ್ಧವಾಗಿ ಮಾತನಾಡಿ ಅಲ್ಲಿದ್ದ ಬ್ರಾಹ್ಮಣರ ಕೋಪಾಗ್ನಿಯಿಂದ ದಗ್ಧನಾದ [ಶಲ್ಯ ೬೫. ಶಾಂತಿ ೩೭] ಇವನ ಪೂರ್ವಜನ್ಮ ವೃತ್ತಾಂತ [ಶಾಂತಿ. ೩೮]

**ಚಿಕುರ.**—ಆರ್ಯಕನೆಂಬ ಸರ್ಪ ರಾಜನ ಮಗನು. ಸುಮುಖನಾಗನ ತಂದೆ. ನೋಡು—ಗರುಡ [ಉದ್ಯೋ. ೧೦೩]

**ಚಿತ್ರ.**—(i) ಒಬ್ಬ ಅರಸು. ದುರ್ಯೋಧನನ ಪರವಾಗಿ ಯುದ್ಧಮಾಡಿ, ಹದಿ ನಾರನೆಯ ದಿನದ ಯುದ್ಧದಲ್ಲಿ ಯುಧಿಷ್ಠಿರ ಪುತ್ರನಾದ ಪ್ರತಿವಿಂಧ್ಯನಿಂದ ಹತ ನಾದನು [ಕರ್ಣ. ೧೧].

(ii) ಚೇದಿ ದೇಶದ ಅರಸು. ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಹತನಾದ [ಕರ್ಣ. ೫೧].

(iii) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ [ಆದಿ. ೬೮, ೧೩೧]. ಭೀಮನಿಂದ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಹತನಾದ [ದ್ರೋ. ೧೩೭].

**ಚಿತ್ರಕೂಟ.**—ಒಂದು ಪರ್ವತ ಉತ್ತರ ಹಿಂದೂಸ್ಥಾನದಲ್ಲಿ ಪ್ರಯಾಗ ಕ್ಷೇತ್ರದ ಬಳಿ ಬಂದೇಲಖಂಡದ ಜಿಲ್ಲೆಯಲ್ಲಿ ಬಾಂದಾ ಎಂಬ ಪಟ್ಟಣಕ್ಕೆ ೫೦ ಮೈಲುಗಳ ದೂರದಲ್ಲಿದೆ [ವನ ೮೫.-ರಾಮಾ -ಅಯೋ ೫೫, ೫೭]. ಇದರ ಬಳಿ ಪಯೋಷ್ಣೀ ನದಿ ಹರಿಯುತ್ತದೆ. ಶ್ರೀ ರಾಮನು ಸೀತಾ ಲಕ್ಷ್ಮಣರೊಂದಿಗೆ ಅರಣ್ಯವಾಸಕ್ಕೆ ಹೊರಟಾಗ ಇಲ್ಲಿಯೇ ಮೊತ್ತಮೊದಲು ಆಶ್ರಮವನ್ನು ಕಲ್ಪಿಸಿಕೊಂಡು ವಾಸಮಾಡುತ್ತಿದ್ದ [ವನ. ೨೭೮] ಭರತನು ಶ್ರೀ ರಾಮನನ್ನು ಅಯೋಧ್ಯೆಗೆ ಕರೆದುಯ್ಯಲು ಬಂದಿದ್ದಾಗ ಇಲ್ಲಿಯೇ ಸಂಧಿಸಿ, ದಶರಥನ ಮರಣವಾರ್ತೆಯನ್ನು ರಾಮನಿಗೆ ತಿಳುಹಿ, ಅವನಿಂದ ಪಾದುಕೆಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಹಿಂದಿರುಗಿದ [ರಾಮಾ.-ಅಯೋ. ೯೩, ೧೧೩]. ನೋಡು—ಕಾಕಾಸುರ ಚಿತ್ರಕೂಟ ಪರ್ವತದ ವರ್ಣನೆ [ರಾಮಾ -ಅಯೋ. ೯೪]

(ii) ಕುಶ ದ್ವೀಪದಲ್ಲಿರುವ ಒಂದು ಪರ್ವತ [ಭಾಗ -೫, ೨೦. ದೇ.ಭಾ -೮, ೧೨].

**ಚಿತ್ರಕೇತು** —(i) ಶೂರಸೇನ ದೇಶದ ಅರಸು. ಈತನಿಗೆ ಅನೇಕ ಮಂದಿ ಪತ್ನಿಯರಿದ್ದರೂ ಒಬ್ಬಳಲ್ಲಿಯೂ ಸಂತಾನವಾಗದಿದ್ದುದರಿಂದ ಅರಸು ಚಿಂತಾಕ್ರಾಂತನಾಗಿರುವಲ್ಲಿ, ಅಂಗಿರಸನೆಂಬ ಮುನಿ ಈತನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಿ, ಹೋಮಶೇಷವನ್ನು ಪಟ್ಟದರಸಿಯಾದ ಕೃತದ್ಯುತಿಯೆಂಬವಳಿಗೆ ಕೊಡಿಸಲು, ಆಕೆ ಗರ್ಭಧಾರಣಮಾಡಿ ಗಂಡುಶಿಶುವನ್ನು ಹೆತ್ತಳು. ಈ ಕಾರಣದಿಂದ ಅರಸನಿಗೆ ಕೃತದ್ಯುತಿಯಮೇಲೆ ಮಮತೆ ಹೆಚ್ಚಿತು ಇದನ್ನು ಕಂಡು ಸವತಿಯರು ಆ ಮಗುವಿಗೆ ವಿಷವನ್ನು ಕೊಡಿಸಿ ಕೊಂದರು ರಾಜನು ದುಃಖಸಾಗರದಲ್ಲಿ ಮುಳುಗಿ ಕರ್ತವ್ಯಶೂನ್ಯನಾಗಿರಲು, ನಾರದಾದಿಗಳು ಈತನಲ್ಲಿಗೆ ಬಂದು ವಿವೇಕವನ್ನು ತಿಳುಹಿದರು. ಅರಸು ವೈರಾಗ್ಯವನ್ನು ತಳೆದು ಅರಣ್ಯಕ್ಕೆ ಹೋಗಿ, ತಪಸ್ಸಿದ್ಧಿಯನ್ನು ಪಡೆದು ಸುಖದಿಂದಿದ್ದ. ಒಮ್ಮೆ ವಿಮಾನಾರೂಢನಾಗಿ ಕೈಲಾಸಕ್ಕೆ ಹೋಗಿದ್ದಾಗ, ಪಾರ್ವತಿಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡಿದ್ದ ಪರಮೇಶ್ವರನನ್ನು ಕಂಡು ಶಿವನನ್ನು ಆಕ್ಷೇಪಿಸಿದ ಪಾರ್ವತಿ ರೋಷಭರಿತೆಯಾಗಿ ಚಿತ್ರಕೇತುವನ್ನು ರಾಕ್ಷಸನಾಗಿ ಜನಿಸುವಂತೆ ಶಾಪವಿತ್ತಳು. ಬಳಿಕ ಚಿತ್ರಕೇತು ವೃತ್ರಾಸುರನಾಗಿ ಜನಿಸಿದ[ಭಾಗ.-೬, ೧೪, ೧೭]

(ii) ಲಕ್ಷ್ಮಣ ಪುತ್ರನಾದ ಚಂದ್ರಕೇತುವಿನ ನಾಮಾಂತರ

(iii) ದೇವಭಾಗನಿಂದ ಕಂಸೆಯಲ್ಲಿ ಜನಿಸಿದ ಮಕ್ಕಳಲ್ಲಿ ಹಿರಿಯುವ. ಬೃಹದ್ಬಲ, ಉದ್ಧವರು ಇವನ ಒಡಹುಟ್ಟಿದವರು [ವಿಷ್ಣು -೪, ೧೪].

(iv) ಶ್ರೀ ಕೃಷ್ಣನಿಂದ ಜಾಂಬವತಿಯಲ್ಲಿ ಜನಿಸಿದ ಮಕ್ಕಳಲ್ಲಿ ಒಬ್ಬ. ನೋಡು—ಕೃಷ್ಣ.

(v) ಪಾಂಚಾಲ ದೇಶದ ಅರಸು. ಸುಕೇತುವಿನ ತಂದೆ. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ದ್ರೋಣನಿಂದ ಮಡಿದ [ದ್ರೋಣ. ೧೨೨]

**ಚಿತ್ರಗುಪ್ತ.**—ಸೂರ್ಯವಂಶದ ಅರಸು ಈತನು ಚಿರಕಾಲ ಸೂರ್ಯನನ್ನು ಆರಾಧಿಸಿ ಆತನ ವರಪ್ರದಾನದಿಂದ ಸರ್ವಜ್ಞನಾಗಿದ್ದ ಇದನ್ನು ತಿಳಿದಿದ್ದ ಸೂರ್ಯಪುತ್ರನಾದ ಯಮನು ಇಂತಹವನು ತನ್ನಲ್ಲಿ ಇದ್ದುದಾದರೆ ತನ್ನ ಕಾರ್ಯಭಾರ ಸುಖವಾಗಿ ನಡೆಯುವುದೆಂದು ತಿಳಿದು, ಒಮ್ಮೆ ಈತನು ಸಮುದ್ರಸ್ನಾನಕ್ಕೆ ಹೋಗಿರುವಾಗ, ಸಶರೀರನಾಗಿಯೇ ಈತನನ್ನು ತನ್ನ ಲೋಕಕ್ಕೆ ಬರಮಾಡಿಸಿ, ಪ್ರಾಣಿಗಳ ಶುಭಾಶುಭ ಕರ್ಮಗಳನ್ನು ಬರೆಯುವಂತೆ ನಿಯಮಿಸಿದ ಈತನು ಧರ್ಮರಹಸ್ಯಗಳನ್ನು ವಿವರಿಸಿದ್ದು [ಭಾರ.-ಅನು. ೧೯೩]

**ಚಿತ್ರಮುಖ**—ಈತನು ವೈಶ್ಯನಾಗಿ ಜನಿಸಿ, ತಪಸ್ಸಿನಿಂದ ಬ್ರಾಹ್ಮಣನಾದ ತರುವಾಯ ಈತನಿಗೆ ಅದೃಶ್ಯಂತಿಯೆಂಬ ಮಗಳು ಜನಿಸಿದಳು ಈಕೆಯನ್ನು ವಸಿಷ್ಠಮಹರ್ಷಿಯ ಪುತ್ರನಾದ ಶಕ್ತಿಮುನಿ ಮದುವೆಯಾದ [ಅನು ೫೩].

**ಚಿತ್ರರಥ**—(i) ಕಶ್ಯಪ ಮುನಿಯಿಂದ ಮುನಿಯೆಂಬಾಕೆಯಲ್ಲಿ ಜನಿಸಿದ ದೇವಗಂಧರ್ವರಲ್ಲಿ ಒಬ್ಬ [ಆದಿ. ೬೬. ಸಭಾ ೧೦] ಇವನಿಗೆ ಅಂಗಾರಪರ್ಣನೆಂಬುದು ನಾಮಾಂತರ ಈತನ ಹೆಂಡತಿ ಕುಂಭೀನಸಿ [ಆದಿ ೧೮೬] ಚಿತ್ರರಥನು ಅರ್ಜುನನಿಂದ ಸೋತು ಅವನಿಗೆ ಸಂಮೋಹನಾಸ್ತ್ರವನ್ನು ಕೊಟ್ಟದ್ದು [ಆದಿ. ೧೮೬, ೧೯೯] ರಾಜಸೂಯಯಾಗ ಸಮಯದಲ್ಲಿ ಅರ್ಜುನನಿಗೆ ಕುದುರೆಗಳನ್ನು ಕಾಣಿಕೆಯಾಗಿ ಕೊಟ್ಟದ್ದು [ಸಭಾ. ೭೮].

(ii) ದ್ರುಪದ ರಾಜನ ಮಕ್ಕಳಲ್ಲಿ ಒಬ್ಬ ಹದಿನಾಲ್ಕನೆಯ ದಿನಸದ ಯುದ್ಧದಲ್ಲಿ ದ್ರೋಣನಿಂದ ಹತನಾದ [ದ್ರೋ ೧೨೨]

(iii) ಒಬ್ಬ ಅರಸು ಒಮ್ಮೆ ಈತನು ತನ್ನ ಅಂತಃಪುರ ಪರಿವಾರದೊಂದಿಗೆ ನರ್ಮದೆಯಲ್ಲಿ ಜಲಕೇಳಿಯನ್ನಾಡುತ್ತಿದ್ದಾಗ, ನೀರು ತರುವುದಕ್ಕಾಗಿ ಬಂದಿದ್ದ ರೇಣುಕೆ ಈತನನ್ನು ಕಂಡು ಮೋಹಪರವಶಳಾಗಿ, ಶಿರಶ್ಛೇದ ಶಿಕ್ಷೆಯನ್ನು ಅನುಭವಿಸಿದಳು [ವನ ೧೧೭]

(iv) ಅಂಗ ದೇಶದ ಅರಸು. ಭರದ್ವಾಜ ಮುನಿ ಪುತ್ರಿಯಾದ ಪ್ರಭಾವತಿಯೆಂಬವಳನ್ನು ಮದುವೆಯಾದ [ಭಾರ -ಅನು ೭೭].

**ಚಿತ್ರರೇ(ಲೇ)ಖಾ.**—(i) ಒಬ್ಬ ಅಪ್ಸರಸಿ ಇಂದ್ರನ ಒಡ್ಡೋಲಗದಲ್ಲಿ ನಾಟ್ಯವಾಡುತ್ತ, ಇಂದ್ರನ ಮುಖವನ್ನು ನೋಡದೆ, ದೂರದಲ್ಲಿದ್ದ ಒಂದು ಜಿಂಕೆಯನ್ನೇ ನೋಡುತ್ತಿದ್ದ ಕಾರಣ ಕುಪಿತನಾದ ಇಂದ್ರನು. ಹರಿಣಯೋನಿಯಲ್ಲಿ ಜನಿಸು

ವಂತೆ ಈಕೆಗೆ ಶಾಪವಿತ್ತ. ಚಿತ್ರಲೇಖೆ ಹೆದರಿ ಪ್ರತೀಕಾರವನ್ನು ಬೇಡಿದಳು. "ವಿಭಾಂಡಕ ಮುನಿಯಿಂದ ಪುತ್ರನನ್ನು ಪಡೆದಕೂಡಲೇ ಶಾಪ ತೊಲಗುವುದು" ಎಂಬುದಾಗಿ ಇಂದ್ರನು ಅನುಗ್ರಹಿಸಿದ. ಈಕೆ ಅಂತೆಯೇ ಹರಿಣಿಯಾಗಿ ಜನಿಸಿ, ಜಲಪಾನಮಾಡುವಾಗ ಅಲ್ಲಿಯೇ ಮೀಯುತ್ತಿದ್ದ ವಿಭಾಂಡಕ ಮುನಿಯ ತೇಜಸ್ಸಿನಿಂದ ಮಿಶ್ರವಾದ ನೀರನ್ನು ಕುಡಿದು, ಗರ್ಭವನ್ನು ಧರಿಸಿ, ಋಷ್ಯಶೃಂಗನೆಂಬ ಮಗನನ್ನು ಪಡೆದು ದೇಹತ್ಯಾಗಮಾಡಿ, ತನ್ನ ಪೂರ್ವದೇಹವನ್ನು ಪಡೆದಳು. ನೋಡು—ಋಷ್ಯಶೃಂಗ [ಭಾರ.-ವನ ೧೧೦, ೧೧೨]

(ii) ಬಾಣಾಸುರನ ಮಂತ್ರಿಯಾದ ಕುಂಭಾಂಡನ ಮಗಳು. ಉಷೆಯ ಸಖಿ ಚಿತ್ರಕಲೆಯಲ್ಲಿ ಅತಿ ಚತುರೆ. ಒಮ್ಮೆ ಉಷೆ ಅನಿರುದ್ಧನನ್ನು ಸ್ವಪ್ನದಲ್ಲಿ ನೋಡಿ, ಆತನ ರೂಪಕ್ಕೆ ಮರುಳಾಗಿ, ಆತನು ಯಾರೆಂದು ಚಿಂತಿಸುತ್ತಿರುವಲ್ಲಿ, ಚಿತ್ರಲೇಖೆ ಅನೇಕ ಮಂದಿ ತರುಣರ ಭಾವಚಿತ್ರಗಳನ್ನು ತಂದು ಉಷೆಗೆ ತೋರಿದಳು. ಆಗ ಉಷೆ ಅನಿರುದ್ಧನನ್ನು ಗುರುತಿಸಲಾಗಿ, ಚಿತ್ರರೇಖೆ ತನ್ನ ಮಾಯಾಬಲದಿಂದ ಅನಿರುದ್ಧನನ್ನು ಉಷೆಯ ಬಳಿ ತಂದುಬಿಟ್ಟಳು ನೋಡು—ಅನಿರುದ್ಧ, ಉಷಾ, ತಿಲೋತ್ತಮೆ [ಹರಿ.-ವಿಷ್ಣು -೧೧೮]

(iii) ಒಬ್ಬ ಅಪ್ಸರಸಿ ಊರ್ವಶಿಯ ಸಖಿ ಕೇಶಿಯೆಂಬ ದೈತ್ಯನು ಈಕೆಯನ್ನೂ ಊರ್ವಶಿಯನ್ನೂ ಅಪಹರಿಸಿಕೊಂಡು ಹೋಗಿರಲಾಗಿ ಪುರೂರವನು ಇವರಿಬ್ಬರನ್ನೂ ಬಿಡಿಸಿಕೊಂಡು ಬಂದ [ಮತ್ಸ್ಯ -೨೪].

**ಚಿತ್ರವರ್ಮ.**—ಒಬ್ಬ ಅರಸು. ಪಾತಾಳವಾಸಿಯಾದ ನಾಗರಾಜನ ಸ್ನೇಹಿತನು. ಈತನಿಗೆ ಎಂಟು ಮಂದಿ ಪುತ್ರರೂ ಸೀಮಂತಿನಿಯೆಂಬ ಕುವರಿಯೂ ಜನಿಸಿದರು. ಈ ಸೀಮಂತಿನಿ ವಿಧವೆಯಾಗುವಳೆಂಬುದನ್ನು ದೈವಜ್ಞರ ಮೂಲಕ ತಿಳಿದಿದ್ದ ಚಿತ್ರವರ್ಮನು, ಈ ಸಂಗತಿಯನ್ನು ಯಾರಿಗೂ ಹೇಳದೆ, ಚಂದ್ರಾಂಗದನೆಂಬ ರಾಜಪುತ್ರನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ, ಅಳಿಯನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡಿದ್ದ. ಕೆಲವು ಕಾಲದ ಬಳಿಕ ಚಂದ್ರಾಂಗದನು ಹಡಗಿನಲ್ಲಿ ಪ್ರಯಾಣ ಮಾಡುವಾಗ, ಹಡಗು ಮುಳುಗಿಹೋಯಿತು. ಆಗ ಪಾತಾಳವಾಸಿಯಾದ ನಾಗರಾಜನು ಚಂದ್ರಾಂಗದನನ್ನು ತನ್ನಲ್ಲಿಗೆ ಕರೆದುಕೊಂಡುಹೋಗಿ, ಉಪಚರಿಸಿ, ಅನೇಕ ಮರ್ಯಾದೆಗಳೊಂದಿಗೆ ಚಿತ್ರವರ್ಮನಲ್ಲಿಗೆ ಕಳುಹಿದನು [ಸ್ಕಾಂ.-ಬ್ರಹ್ಮ ೮]

(ii) ದ್ರುಪದ ರಾಜನ ಮಗ. ಹದಿನಾಲ್ಕನೆಯ ದಿನದ ಯುದ್ಧದಲ್ಲಿ ದ್ರೋಣನಿಂದ ಹತನಾದ ನೋಡು—ಚಿತ್ರರಥ [ದ್ರೋ. ೧೨೨].

(iii) ಪಾಂಚಾಲ ದೇಶದ ಸುಚಿತ್ರ ರಾಜನ ಮಗನು. ಭಾರತ ಯುದ್ಧದಲ್ಲಿ ದ್ರೋಣನಿಂದ ಮಡಿದನು [ಕರ್ಣ. ೩].

(iv) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ [ಆದಿ. ೬೮, ೧೩೧] ಭೀಮನಿಂದ ಹತನಾದ [ದ್ರೋ. ೧೩೬].

**ಚಿತ್ರವಾಹನ.**—ಒಬ್ಬ ಅರಸು ಪಾಂಡ್ಯ ವಂಶದವನು. ಮಣಲೂರಿನಲ್ಲಿ ರಾಜ್ಯ ಭಾರಮಾಡುತ್ತಿದ್ದ. ಈತನಿಗೆ ಚಿತ್ರಾಂಗದೆಯೆಂಬ ಮಗಳಿದ್ದಳು. ಗಂಡುಮಕ್ಕಳಿರ ಲಿಲ್ಲ. ಅರ್ಜುನನು ತೀರ್ಥಯಾತ್ರೆ ಹೊರಟಿದ್ದ ಕಾಲದಲ್ಲಿ ಚಿತ್ರಾಂಗದೆಯನ್ನು ಅರ್ಜುನ ನಿಗೆ ಕೊಟ್ಟು ಮದುವೆಮಾಡಿ, ಅವನಿಂದ ಜನಿಸಿದ ಬಭ್ರುವಾಹನನೆಂಬ ಮಗನನ್ನು (ದೌಹಿತ್ರನನ್ನು) ಸ್ವೀಕಾರಮಾಡಿ ಮಗಳನ್ನೂ ಮೊಮ್ಮಗನನ್ನೂ ತನ್ನಲ್ಲಿಯೇ ಇರಿಸಿಕೊಂಡ [ಭಾರ.-ಆದಿ. ೨೩೫] ಈತನಿಗೆ ಮಲಧ್ವಜ, ಪ್ರವೀರ ಎಂಬ ಬೇರೆ ಹೆಸರುಗಳೂ ಇವೆ [ಭಾರ -ಸಭಾ ೩೩] ಭಾರತ ಯುದ್ಧದಲ್ಲಿ ಪಾಂಡವರ ಪಕ್ಷವನ್ನು ಸೇರಿ, ವಿಶೇಷ ಪರಾಕ್ರಮದಿಂದ ಹೋರಾಡಿ, ಹದಿನೇಳನೆಯ ದಿನದ ಯುದ್ಧದಲ್ಲಿ ಅಶ್ವತ್ಥಾಮನಿಂದ ಹತನಾದ [ಕರ್ಣ ೫೬]

**ಚಿತ್ರಸೇನ.**—(i) ಒಬ್ಬ ಗಂಧರ್ವ ವಿಶ್ವಾವಸು ಗಂಧರ್ವನ ಮಗ. ಅರ್ಜುನನು ಇಂದ್ರಕೀಲ ಪರ್ವತದಿಂದ ದೇವಲೋಕಕ್ಕೆ ಹೋಗಿ, ಅಲ್ಲಿಯೇ ಕೆಲವು ವರ್ಷಗಳ ವರೆಗೆ ವಾಸಮಾಡುತ್ತಿದ್ದ ಕಾಲದಲ್ಲಿ ಈತನು ಅರ್ಜುನನಿಗೆ ಗಾಂಧರ್ವವೇದವನ್ನು ಕಲಿಸಿದ [ವನ. ೪೩]. ಅದೇ ಸಮಯದಲ್ಲಿಯೇ ಇವನು ಇಂದ್ರನ ಪ್ರೇರಣೆಯಿಂದ ಊರ್ವಶಿಯನ್ನು ಅರ್ಜುನನಲ್ಲಿಗೆ ಕಳುಹಿದ. ನೋಡು—ಅರ್ಜುನ, ಊರ್ವಶೀ [ವನ. ೪೪] ದುರ್ಯೋಧನನು ಘೋಷಯಾತ್ರೆಯ ನೆಪದಿಂದ ಪಾಂಡವರು ವಾಸ ಮಾಡುತ್ತಿದ್ದ ಅರಣ್ಯದಲ್ಲಿ ಸೇನಾಸಮೇತನಾಗಿ ನಿಂತು ತನ್ನ ವೈಭವವನ್ನು ಪ್ರಕಾಶ ಗೊಳಿಸಿ ಅವರನ್ನು ನೋಯಿಸತೊಡಗಿದಾಗ, ಈತನು ಇಂದ್ರನ ಅಪ್ಪಣೆಯ ಮೇರೆಗೆ ಆ ವನಕ್ಕೆ ಬಂದು ದುರ್ಯೋಧನನನ್ನು ಅಪಮಾನಗೊಳಿಸಿ, ಹಿಂಗಟ್ಟು ಬಿಗಿದು ಇಂದ್ರಲೋಕಕ್ಕೆ ಕೊಂಡುಯ್ಯುತ್ತಿದ್ದ [ವನ ೨೪೧, ೨೪೩] ಬಳಿಕ ಯುಧಿ ಷ್ಠಿರನ ಅಪ್ಪಣೆಯ ಮೇರೆಗೆ ಅರ್ಜುನನು ಇವನೊಂದಿಗೆ ಯುದ್ಧಮಾಡಿ, ಸೋಲಿಸಿ, ದುರ್ಯೋಧನನನ್ನು ಬಿಡಿಸಿದ [ವನ ೨೪೫, ೨೪೭].

(ii) ಅಭೀಸಾರ ದೇಶದ ಅರಸು. ಪಾಂಡವರ ರಾಜಸೂಯ ಸಮಯದಲ್ಲಿ ಅರ್ಜುನನಿಂದ ಸೋತನು [ಸಭಾ ೨೮] ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನಾರನೆಯ ದಿನದ ಯುದ್ಧದಲ್ಲಿ, ಸಹದೇವನಿಂದ ದ್ರೌಪದಿ ಯಲ್ಲಿ ಜನಿಸಿದ ಶ್ರುತಕರ್ಮನಿಂದ ಹತನಾದ [ಕರ . ೧೧].

(iii) ಪಾಂಡವರ ಪರವಾಗಿ ಹೋರಾಡಿದ ಅರಸು. ಹದಿನಾರನೆಯ ದಿನದ ಯುದ್ಧದಲ್ಲಿ ಪಾಂಡವ ಪಕ್ಷದವನೇ ಆಗಿದ್ದ ಸಮುದ್ರಸೇನನಿಂದ ಹತನಾದ [ಕರ್ಣ. ೩].

(iv) ಕರ್ಣನ ಮಕ್ಕಳಲ್ಲಿ ಒಬ್ಬ. ಹದಿನೆಂಟನೆಯ ದಿನದ ಯುದ್ಧದಲ್ಲಿ ನಕುಲನಿಂದ ಮಡಿದ [ಶಲ್ಯ. ೯].

(v) ದ್ರುಪದ ರಾಜನ ಮಕ್ಕಳಲ್ಲಿ ಒಬ್ಬ. ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಸತ್ತ [ಕರ್ಣ. ೪೩].

(vi) ಜರಾಸಂಧನ ಸೇನಾಪತಿ [ಸಭಾ ೨೨].

(vii) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ [ಆದಿ ೬೩] ಹದಿನಾರನೆಯ ದಿನದ ಯುದ್ಧದಲ್ಲಿ ಭೀಮನಿಂದ ಹತನಾದ [ಕರ್ಣ. ೨].

(viii) ಪಾಂಡವಪಕ್ಷದ ಮತ್ತೊಬ್ಬ ಅರಸು ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಧೃಷ್ಟದ್ಯುಮ್ನನೊಂದಿಗೆ ದ್ರೋಣನನ್ನು ಇದಿರಿಸಿ ಆತನಿಂದ ಮಡಿದ [ದ್ರೋ. ೧೨೨].

(ix) ಶ್ವೇತವರಾಹಕಲ್ಪದ ಹದಿಮೂರನೆಯ ಮನ್ವಂತರದಲ್ಲಿ ಪ್ರಭುವಾಗಿದ್ದ ದೇವಸಾವರ್ಣಿ ಮನುವಿನ ಹಿರಿಯ ಮಗನು ವಿಚಿತ್ರನೆಂಬವನು ಇವನ ತಮ್ಮ [ಭಾಗ -೮, ೧೩]

(x) ಸೂರ್ಯ ವಂಶದ ವೈವಸ್ವತ ಮನುವಿನ ಹತ್ತು ಮಂದಿ ಮಕ್ಕಳಲ್ಲಿ ಒಬ್ಬನಾದ ನರಿಷ್ಯಂತ ರಾಜನ ಹಿರಿಯ ಮಗ. ದಮನೆಂಬವನು ಇವನ ಒಡಹುಟ್ಟಿದವ [ಭಾಗ -೯, ೧].

**ಚಿತ್ರಾ** —(i) ದಕ್ಷನ ಮಗಳು. ಚಂದ್ರನ ಇಪ್ಪತ್ತೇಳು ಮಂದಿ ಹೆಂಡಿರಲ್ಲಿ ಒಬ್ಬಳು [ಆದಿ ೬೭]

(ii) ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು.

**ಚಿತ್ರಾಙ್ಗದ** —(i) ಶಂತನು ಚಕ್ರವರ್ತಿಯಿಂದ ಸತ್ಯವತಿಯಲ್ಲಿ ಜನಿಸಿದವ [ಆದಿ. ೬೩] ಇವನು ಚಿತ್ರಾಂಗದನೆಂಬ ಗಂಧರ್ವನಿಂದ ಹತನಾದ ಇವನ ಜನ್ಮಕಥೆ ಮುಂತಾಗಿ [ಆದಿ. ೧೦೮]

(ii) ದಶಾರ್ಣ ದೇಶದ ಅರಸು. ದ್ರೌಪದೀ ಸ್ವಯಂವರಕ್ಕೆ ಬಂದಿದ್ದ [ಆದಿ ೨೦೧] ಪಾಂಡವರ ಅಶ್ವಮೇಧಕ್ಕೆ ಮೊದಲು ಅರ್ಜುನನಿಂದ ಸೋತು, ಕಪ್ಪ ಕಾಣಿಕೆಗಳನ್ನು ಕೊಟ್ಟ [ಅಶ್ವ. ೮೪].

(iii) ಒಬ್ಬ ಗಂಧರ್ವನು. ಶಂತನು ಪುತ್ರನಾದ ಚಿತ್ರಾಂಗದನನ್ನು ಕೊಂದವ [ಆದಿ. ೧೦೮].

(iv) ಕಳಿಂಗ ದೇಶದ ಅರಸು ರಾಜಪುರವೆಂಬುದು ಇವನ ರಾಜಧಾನಿಯಾಗಿತ್ತು. ದುರ್ಯೋಧನನ ಮಾವ (ಇವನ ಮಗಳ ಹೆಸರೇನೆಂಬುದು ತಿಳಿಯ ಬರುವುದಿಲ್ಲ) [ಶಾಂತಿ. ೪].

**ಚಿತ್ರಾಙ್ಗದಾ.**—ಮಣಲೂರಿನ ಅರಸನಾಗಿದ್ದ ಚಿತ್ರವಾಹನನ ಮಗಳು. ಅರ್ಜುನನ ಹೆಂಡತಿ. ಬಭ್ರುವಾಹನನ ತಾಯಿ [ಆದಿ ೬೩]. ಇವಳ ಮದುವೆ [ಆದಿ. ೨೩೫]. ಬಭ್ರುವಾಹನನು ಹುಟ್ಟಿದ್ದು [ಆದಿ ೨೩೭]. ರಾಜಸೂಯ ಯಾಗ ಸಮಯದಲ್ಲಿ ದಕ್ಷಿಣದಿಕ್ಕಿಗೆ ಜೈತ್ರಯಾತ್ರೆ ಹೊರಟಿದ್ದ ಸಹದೇವನಿಗೆ ಕಪ್ಪವನ್ನು ಕೊಟ್ಟಳು [ಸಭಾ ೩೩]. ಅಶ್ವಮೇಧಕ್ಕೆ ಮೊದಲು ದಿಗ್ವಿಜಯಕ್ಕೆ ಹೊರಟ ಅರ್ಜುನನನ್ನು ಬಭ್ರುವಾಹನನು ಕೊಲ್ಲಲಾಗಿ, ಚಿತ್ರಾಂಗದೆ ರಣರಂಗಕ್ಕೆ ಬಂದು, ಅರ್ಜುನನ ಶವವನ್ನು ಅಪ್ಪಿಕೊಂಡು ಪ್ರಲಾಪಿಸಿ, ಉಲೂಪಿಯನ್ನೂ ಬಭ್ರುವಾಹನನನ್ನೂ ನಿಂದಿಸಿದ್ದು, ಉಲೂಪಿಯ ಮೂಲಕ ಸಂಜೀವನರತ್ನವನ್ನು ತರಿಸಿ, ಅರ್ಜುನನನ್ನು ಬದುಕಿಸಿದ್ದು [ಅಶ್ವ ೭೯, ೮೧]. ಚಿತ್ರಾಂಗದೆ ಅಶ್ವಮೇಧಯಾಗಕ್ಕಾಗಿ ಹಸ್ತಿನಾವತಿಗೆ ಬಂದದ್ದು [ಅಶ್ವ ೮೯]. ಪಾಂಡವರು ಮಹಾಪ್ರಸ್ಥಾನ ಮಾಡಿದ ಬಳಿಕ ಇವಳು ಮರಳಿ ಮಣಲೂರಿಗೆ ಹೋದದ್ದು [ಮಹಾಪ್ರ. ೧]

**ಚಿತ್ರಾಯುಧ**—ಒಬ್ಬ ಅರಸು ದ್ರೌಪದೀ ಸ್ವಯಂವರ ಸಮಯದಲ್ಲಿ ದ್ರುಪದ ರಾಜನಲ್ಲಿಗೆ ಬಂದಿದ್ದ [ಆದಿ ೧೮೬, ೨೦೧] ಭಾರತ ಯುದ್ಧದಲ್ಲಿ ಪಾಂಡವರ ಪಕ್ಷವನ್ನು ಸೇರಿದ್ದ ಮಹಾರಥ [ಉದ್ಯೋ ೧೭೧] ಇವನ ರಥವೂ ಕುದುರೆಗಳೂ ಹಲಸಿನ ಹೂವಿನ ಬಣ್ಣದ್ದು [ದ್ರೋ ೨೩] ಹದಿನೇಳನೆಯ ದಿವಸದ ಯುದ್ಧದಲ್ಲಿ ಕರ್ಣನಿಂದ ಹತನಾದ [ಕರ್ಣ. ೫೧]

**ಚಿತ್ರಾಶ್ವ**—ಸಾಳ್ವ ದೇಶಾಧಿಪತಿಯಾದ ದ್ಯುಮತ್ಸೇನನ ಮಗ ಮದ್ರ ದೇಶಾಧಿಪತಿಯಾದ ಅಶ್ವಪತಿಯ ಮಗಳಾದ ಸಾವಿತ್ರಿಯನ್ನು ಮದುವೆಯಾಗಿದ್ದ ಇವನು ಯಾವಾಗಲೂ ಚಿತ್ರದಲ್ಲಿ ಕುದುರೆಗಳನ್ನು ಬರೆಯುತ್ತಲೂ, ಕುದುರೆಗಳ ಸಂಗಡ ಆಟವಾಡುತ್ತಲೂ ಇದ್ದವನಾದುದರಿಂದ ಚಿತ್ರಾಶ್ವನೆಂಬ ಹೆಸರು [ವನ ೨೯೫] ನೋಡು—ಸತ್ಯವಾನ್, ಸಾವಿತ್ರಿ

**ಚಿತ್ರೋಪಲಾ**—ಋಷ್ಯವತ್ಪರ್ವತದಿಂದ ಹುಟ್ಟಿ ಓಢ್ರ ದೇಶದಲ್ಲಿ ಹರಿಯುವ ಒಂದು ನದಿ [ಭೀ ೯].

**ಚಿದಿ**—ಯದು ವಂಶದ ಜಾಮ್ಯಘ ರಾಜನ ಮೊಮ್ಮಗನಾದ ವಿದರ್ಭ ರಾಜನ ನಾಲ್ವರು ಮಕ್ಕಳಲ್ಲಿ ಒಬ್ಬ. ಚೇದಿ ದೇಶವನ್ನು ಸ್ಥಾಪಿಸಿದವ. ಇವನ ಮಗನಾದ ಕುಶಿಕ ರಾಜನು ವಿಶ್ವಾಮಿತ್ರನ ವಂಶಕ್ಕೆ ಮೂಲಪುರುಷ [ಅನು ೫೦, ೫೧]. **ನೋಡು—ಋಚೀಕ**

**ಚಿರಕಾರಿ (ಕ)**—ಗೌತಮ ವಂಶದ ಮೇಧಾತಿಥಿಯ ಕಿರಿಯ ಮಗ. ಯಾವ ಕೆಲಸವನ್ನಾದರೂ ದುಡುಕದೆ, ಚೆನ್ನಾಗಿ ಯೋಚಿಸಿ ಮಾಡತಕ್ಕವನಾದುದರಿಂದ ಇವನಿಗೆ ಚಿರಕಾರಿಯೆಂದು ಹೆಸರು. ಒಮ್ಮೆ ಮೇಧಾತಿಥಿ ಹೆಂಡತಿಯ ಮೇಲೆ ಕೋಪಿಸಿ

ಕೊಂಡು ಆಕೆಯ ತಲೆಯನ್ನು ಕಡಿಯುವ ಹಾಗೆ ಚಿರಕಾರಿಗೆ ಅಪ್ಪಣೆ ಕೊಟ್ಟ. ಚಿರಕಾರಿ ಮಾತೃಹತ್ಯೆ ಪಾತಕವೆಂತಲೂ, ಪಿತೃವಾಕ್ಯ ವಿಚಾರತಕ್ಕದ್ದಲ್ಲವೆಂತಲೂ ಮುಂದುಗಾಣದೆ ಯೋಚಿಸುತ್ತಿದ್ದನು ಅಷ್ಟರಲ್ಲಿ ಮೇಧಾತಿಥಿಯ ಕೋಪ ಶಾಂತವಾಗಿ, ಮಗನು ತನ್ನ ಅಪ್ಪಣೆಯನ್ನು ಎಲ್ಲಿ ನೆರವೇರಿಸಿಬಿಟ್ಟನೋ ! ಎಂಬುದಾಗಿ ಕಳವಳಪಡುತ್ತ ಚಿರಕಾರಿಯ ಬಳಿಗೆ ಬಂದು, ಸಮಾಚಾರವನ್ನು ಕೇಳಿ ತಿಳಿದು ಸಂತೋಷಪಟ್ಟು, ಮಗನಿಗೆ ಅನೇಕ ವರಗಳನ್ನು ಕೊಟ್ಟ [ಭಾರ -ಶಾಂತಿ. ೨೬೨].

**ಚೀನ.**—ಹಿಂದೂಸ್ಥಾನಕ್ಕೆ ಸೇರಿದಂತಿರುವ ಒಂದು ದೊಡ್ಡ ದೇಶ ಇಂದ್ರಪ್ರಸ್ಥದಿಂದ ಈಶಾನ್ಯಕ್ಕೆ ಪ್ರಾಗ್ಜ್ಯೋತಿಷ ದೇಶಕ್ಕೆ ಸೇರಿಕೊಂಡಿದೆ [ಆದಿ. ೧೧೯ ಸಭಾ. ೨೮. ಭೀ. ೯]

**ಚೀರಿಣೀ.**—ಬದರಿಕಾಶ್ರಮದಲ್ಲಿ ಹರಿಯುವ ಒಂದು ನದಿ. ವೈವಸ್ವತಮನು ಇದರ ತೀರದಲ್ಲಿ ಹತ್ತು ಸಾವಿರ ವರ್ಷಗಳವರೆಗೆ ತಪಸ್ಸುಮಾಡಿದ [ಭಾರ.-ವನ. ೧೯೦]

**ಚೂಡಾಲಾ.**—ಶಿಖಿಧ್ವಜನೆಂಬ ಅರಸನ ಹೆಂಡತಿ ಈಕೆ ತಾನಾಗಿಯೇ ಪಾಡುಪಟ್ಟು ಆತ್ಮಜ್ಞಾನವನ್ನು ಸಂಪಾದಿಸಿಕೊಂಡಳು. ಈಕೆಯ ಉಪದೇಶದಿಂದ ಶಿಖಿಧ್ವಜನೂ ಜ್ಞಾನಸಂಪನ್ನನಾಗಲಾಗಿ ಇವರಿಬ್ಬರೂ ರಾಜ್ಯವನ್ನು ಬಿಟ್ಟು ಅರಣ್ಯಕ್ಕೆ ಹೋದರು [ಯೋಗವಾಸಿಷ್ಠ-ನಿರ್ವಾ. ೭೭, ೮೦] ನೋಡು—ಶಿಖಿಧ್ವಜ.

**ಚೂಲಿ**—ಒಬ್ಬ ಋಷಿ ಈತನು ಅತ್ಯುಗ್ರವಾದ ತಪಸ್ಸಿನಲ್ಲಿ ನಿರತನಾಗಿರುವಲ್ಲಿ ಸೋಮದೆಯೆಂಬ ಗಂಧರ್ವ ತರುಣಿ ಈತನನ್ನು ಅನನ್ಯಭಾವದಿಂದ ಸೇವಿಸುತ್ತಿದ್ದಳು ಬಹಿರ್ಮುಖನಾದ ಚೂಲಿ ಆಕೆಯ ಇಷ್ಟಾರ್ಥವೇನೆಂದು ಪ್ರಶ್ನೆ ಮಾಡಲಾಗಿ, ಸೋಮದೆ ಸಂತಾನೇಚ್ಛೆಯನ್ನು ಹೊರಪಡಿಸಿದಳು ಆಗ ಚೂಲಿ ಸಮ್ಮತಿಸಿ ಈಕೆಗೆ ಒಬ್ಬ ಪುತ್ರನನ್ನು ಅನುಗ್ರಹಿಸಿದ ಈತನು ಬ್ರಹ್ಮದತ್ತನೆಂದು ಪ್ರಸಿದ್ಧನಾದನು [ರಾಮಾ.-ಬಾಲ. ೩೩].

**ಚೇಕಿತಾನ.**—ಯದು ವಂಶದ ಒಬ್ಬ ಶೂರಾಗ್ರೇಸರನು ಪಾಂಡವ ಪಕ್ಷಪಾತಿ [ಸಭಾ. ೭೯. ಉದ್ಯೋ ೨೫, ೫೭, ೧೯೬. ಭೀ. ೧೯] ಹದಿನೆಂಟನೆಯ ದಿವಸದ ಯುದ್ಧದಲ್ಲಿ ಕೃಪಾಚಾರ್ಯನನ್ನು ಇದಿರಿಸಿ, ಬಹಳ ಕಾಲದವರೆಗೆ ಹೋರಾಡಿ, ಆತನನ್ನು ಮೂರ್ಛೆಗೊಳಿಸಲಾಗಿ, ದುರ್ಯೋಧನನು ಈತನನ್ನು ಕೊಂದ [ಶಲ್ಯ. ೧೧].

**ಚೇದಿ.**—ಒಂದು ದೇಶ. ನೋಡು—ಚಿದಿ. ಬುಂದೇಲುಖಂಡದ ದಕ್ಷಿಣಭಾಗವನ್ನೂ ಜಬ್ಬಲ್‌ಪುರದ ಉತ್ತರಭಾಗವನ್ನೂ ಒಳಗೊಂಡಿದೆ [ಭೀ. ೯]. ಪಾಂಡವರ ಕಾಲದಲ್ಲಿ ಈ ದೇಶವನ್ನು ಶಿಶುಪಾಲನು ಆಳುತ್ತಿದ್ದನು. ಈ ಕಾರಣದಿಂದಲೇ ಶಿಶುಪಾಲನಿಗೆ ಚೈದ್ಯನೆಂಬ ಹೆಸರು. ಈಗ ಈ ದೇಶವನ್ನು ರೇವಾ ಎಂಬುದಾಗಿ

ಕರೆಯುತ್ತಾರೆ [ಭಾಗ.-೧೦, ೭೪]. ಇದರ ರಾಜಧಾನಿ ಶುಕ್ತಿಮತಿಯೆಂಬ ಪಟ್ಟಣ [ಭಾರ.-ಸಭಾ. ೩೦].

**ಚೈತ್ಯ(ತ್ರ)ಕ.**—ಮಗಧ ದೇಶದಲ್ಲಿರುವ ಒಂದು ಪರ್ವತ. ನೋಡು—ಗಿರಿವ್ರಜ.

**ಚೈತ್ರರಥ** —(i) ಕುಬೇರನ ಉದ್ಯಾನವನದ ಹೆಸರು [ಉದ್ಯೋ. ೧೧೧].

(ii) ಚಂದ್ರ ವಂಶದ ಕುರು ರಾಜನ ಮಗ [ಭಾರ.-ಆದಿ. ೧೧೧].

**ಚೈತ್ರರಥಪರ್ವ.**—ಪಾಂಡವರು ದ್ರೌಪದೀ ಸ್ವಯಂವರ ವಾರ್ತೆಯನ್ನು ಕೇಳಿದ್ದು ಮೊದಲ್ಗೊಂಡು, ಅರ್ಜುನನು ಚಿತ್ರರಥನನ್ನು ಗೆದ್ದು, ಆತನಿಗೆ ಆಗ್ನೇಯಾಸ್ತ್ರವನ್ನು ಅನುಗ್ರಹಿಸಿದವರೆಗಣ ಕಥೆಯನ್ನು ಒಳಗೊಂಡಿರುವ ಕಥಾಭಾಗ [ಆದಿ. ೧೭೯, ೧೯೯]

**ಚೋಳ** —ಒಂದು ದೇಶ ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಸಿದ್ಧವಾಗಿರುವ ಚೋರ(ಳ), ಕೇರಳ, ಪಾಂಡ್ಯಗಳೆಂಬ ಮೂರು ದೇಶಗಳಲ್ಲಿ ಒಂದು. ರಾಜಸೂಯ ಸಮಯದಲ್ಲಿ ದಕ್ಷಿಣದಿಕ್ಕಿಗೆ ಸಹದೇವನು ಜೈತ್ರಯಾತ್ರೆಗಾಗಿ ಹೋಗಿದ್ದಾಗ ಇಲ್ಲಿಯ ಅರಸು ಸಹದೇವನಿಗೆ ಶರಣಾಗತನಾಗಿ ಕಪ್ಪವನ್ನು ಕೊಟ್ಟ [ಸಭಾ. ೩೩].

**ಚ್ಯವನ** —ಒಬ್ಬ ಮಹರ್ಷಿ ವರುಣ ಪುತ್ರನಾದ ಭೃಗು ಮಹರ್ಷಿಯ ಮಗ. ಈತನು ತನ್ನ ಜನನಿಯಾದ ಪುಲೋಮೆಯ ಗರ್ಭದಲ್ಲಿರುವಾಗ ಒಬ್ಬ ರಾಕ್ಷಸನು ಪುಲೋಮೆಯನ್ನು ಅಪಹರಿಸಿದ ಪುಲೋಮೆ ಭಯಗ್ರಸ್ತೆಯಾಗಲು ಕೂಡಲೇ ಶಿಶು ಗರ್ಭದಿಂದ ಚ್ಯುತನಾದುದರಿಂದ ಈತನಿಗೆ ಚ್ಯವನನೆಂದು ಹೆಸರು. ಶಿಶು ಆ ರಾಕ್ಷಸನನ್ನು ಕ್ರೂರದೃಷ್ಟಿಯಿಂದ ನೋಡಿದ ಕೂಡಲೇ ರಾಕ್ಷಸನು ಅಲ್ಲಿಯೇ ಬೂದಿಯಾದ [ಆದಿ ೪, ೬] ಚ್ಯವನನ ಉತ್ಪತ್ತಿ ಕಥೆ [ಆದಿ. ೬, ೬೭] ರಾಕ್ಷಸ ಗುರುವಾದ ಶುಕ್ರಾಚಾರ್ಯನೂ ಈತನೂ ಸೋದರರು ಈತನು ಮನು ಪುತ್ರಿಯಾದ ಆರುಷಿಯೆಂಬ ಕನ್ಯೆಯನ್ನು ಮದುವೆಯಾಗಿ ಔರ್ವನೆಂಬ ಮಗನನ್ನು ಪಡೆದ [ಆದಿ ೬೭] ಶರ್ಯಾತಿ ರಾಜನ ಮಗಳಾದ ಸುಕನ್ಯೆಯೆಂಬವಳನ್ನು ಮದುವೆಯಾಗಿ ಪ್ರಮತಿಯೆಂಬ ಮಗನನ್ನು ಪಡೆದ [ಆದಿ. ೮]. ಚ್ಯವನನು ತಪಸ್ಸುಮಾಡಿದ್ದು [ವನ. ೧೨೩] ಈತನು ತಪೋನಿರತನಾಗಿದ್ದಾಗ ಈತನ ದೇಹದ ಸುತ್ತಲೂ ಹುತ್ತ ಬೆಳೆದು, ಈತನ ಕಣ್ಣುಗಳು ಮಾತ್ರ ಆ ಹುತ್ತದ ರಂಧ್ರಗಳ ಮೂಲಕ ಮಿನುಗುಟ್ಟುತ್ತಿದ್ದುವು. ಒಮ್ಮೆ ಶರ್ಯಾತಿ ರಾಜನು ತನ್ನ ಸೇನೆಯೊಂದಿಗೆ ಚ್ಯವನ ಮುನಿಯ ಆಶ್ರಮದ ಬಳಿ ಬಿಡಾರಮಾಡಿದ್ದ. ಶರ್ಯಾತಿ ಪುತ್ರಿಯಾದ ಸುಕನ್ಯೆ ಸಖಿಯರೊಂದಿಗೆ ಅತ್ತಿತ್ತ ತಿರುಗಾಡುತ್ತ ಆ ಹುತ್ತದ ಬಳಿ ಸಾರ್ದು ಅದರ ಕಂಡಿಗಳ ಮೂಲಕ ಕಾಣಬರುವ ಬೆಳಕನ್ನು ಕಂಡು ಕುತೂಹಲದಿಂದ ಒಂದು ಮುಳ್ಳಿನ ಮೊನೆಯಿಂದ ಆತನ ಕಣ್ಣುಗಳನ್ನು ಚುಚ್ಚಿದಳು. ಇದರ ಪರಿಣಾಮ

ವಾಗಿ ಶರ್ಯಾತಿ ರಾಜನ ಸೇನಾಪರಿವಾರಕ್ಕೆ ಮಲಮೂತ್ರಗಳು ಬದ್ಧವಾದವು. ಇದಕ್ಕೆ ಕಾರಣವೇನೆಂಬುದನ್ನು ಯೋಚಿಸುತ್ತಿದ್ದ ರಾಜನು ಕಟ್ಟಕಡೆಗೆ ತನ್ನ ಮಗಳ ಮೂಲಕವಾಗಿಯೇ ಆಕೆಯಿಂದ ನಡೆದುಹೋದ ಅಪಚಾರವನ್ನು ತಿಳಿದು, ಚ್ಯವನನಲ್ಲಿಗೆ ಹೋಗಿ ಕ್ಷಮೆಯನ್ನು ಬೇಡಿದ ಆಗ ಆ ಮುನಿ ಕುರುಡನಾದ ತನ್ನ ಶುಶ್ರೂಷೆಗಾಗಿ ಸುಕನ್ಯೆಯನ್ನು ಕೊಡಹೇಳಿದ ಅರಸನು ಚಿಂತಾಕ್ರಾಂತನಾದ ಆಗ ಸುಕನ್ಯೆ ತನ್ನ ಒಬ್ಬಳ ಸಲುವಾಗಿ ಅಷ್ಟು ಮಂದಿಯೂ ಪ್ರಾಣವನ್ನು ಕಳೆದುಕೊಳ್ಳುವುದು ಯುಕ್ತವಲ್ಲವೆಂದು ತಿಳಿದು ಚ್ಯವನನನ್ನು ಮದುವೆಯಾಗಿ, ಅಲ್ಲಿಯೇ ಶುಶ್ರೂಷೆ ಮಾಡಿಕೊಂಡಿದ್ದಳು ಒಡನೆಯೇ ಶರ್ಯಾತಿ ರಾಜನ ಪರಿವಾರ ಆರೋಗ್ಯವನ್ನು ಹೊಂದಿತು [ವನ ೧೨೩] ಒಂದು ದಿನ ಸುಕನ್ಯೆ ಕೊಳದಲ್ಲಿ ಮಿಂದು ಒದ್ದೆಯ ಬಟ್ಟೆಯಲ್ಲಿಯೇ ಹೊರಬರುತ್ತಿದ್ದಾಗ ಅಶ್ವಿನೀದೇವತೆಗಳು ಈಕೆಯನ್ನು ಕಂಡು ಮೋಹಭರಿತರಾಗಿ, ತಮ್ಮ ಅಭಿಪ್ರಾಯವನ್ನು ಆಕೆಗೆ ಸೂಚಿಸಿದರು ಸುಕನ್ಯೆ ಅವರನ್ನು ಶಪಿಸಹೋಗಲಾಗಿ, ಅಶ್ವಿನೀದೇವತೆಗಳು ತಮ್ಮ ನಿಜರೂಪವನ್ನು ತೋರಿ ವರವನ್ನು ಬೇಡುವಂತೆ ಹೇಳಿದರು ಸುಕನ್ಯೆ ತನ್ನ ಪತಿಗೆ ಯೌವನವನ್ನು ಬೇಡಿದಳು ಆಗ ಅಶ್ವಿನೀದೇವತೆಗಳು ಚ್ಯವನನನ್ನು ಬರಮಾಡಿಸಿ, ಆತನೊಂದಿಗೆ ತಾವೂ ಅದೇ ಕೊಳದಲ್ಲಿಯೇ ಸ್ನಾನಮಾಡಿದರು. ಮೇಲಕ್ಕೆ ಬರುವಾಗ್ಗೆ ಮೂವರೂ ಒಂದೇ ರೂಪದಿಂದಿದ್ದರು ಆಗ ಸುಕನ್ಯೆ ತನ್ನ ಪಾತಿವ್ರತ್ಯಮಹಿಮೆಯಿಂದ ಚ್ಯವನನನ್ನು ಗುರುತಿಸಿ ಕೈ ಹಿಡಿದಳು ಇಂತು ಚ್ಯವನನು ಅಶ್ವಿನೀದೇವತೆಗಳ ಮೂಲಕ ತಾರುಣ್ಯವನ್ನು ಪಡೆದ ಕಾರಣ, ಅದಕ್ಕೆ ಪ್ರತಿಫಲರೂಪವಾಗಿ ತನ್ನ ಮಾವನಾದ ಶರ್ಯಾತಿ ರಾಜನಿಂದ ಯಜ್ಞವನ್ನು ಮಾಡಿಸಿ, ಆ ಯಜ್ಞದಲ್ಲಿ ಅಶ್ವಿನೀ ದೇವತೆಗಳಿಗೆ ಹವಿರ್ಭಾಗವನ್ನು ಕೊಡಿಸಿದ ಅದುವರೆಗೂ ಯಜ್ಞದಲ್ಲಿ ಭಾಗಿಗಳಾಗಿರದ ಅಶ್ವಿನೀದೇವತೆಗಳು ಚ್ಯವನನ ಮೂಲಕ ಹವಿರ್ಭಾಗವನ್ನು ಪಡೆದುದನ್ನು ಕಂಡು ರೋಷಭರಿತನಾದ ಇಂದ್ರನು ಚ್ಯವನನನ್ನು ಕೊಲ್ಲುವ ಸಲುವಾಗಿ ಅನೇಕ ತಂತ್ರಗಳನ್ನು ಹೂಡಿದ ಚ್ಯವನನು ತನ್ನ ಮಂತ್ರಬಲದಿಂದ ಅವುಗಳನ್ನೆಲ್ಲ ತಪ್ಪಿಸಿಕೊಂಡು, ಇಂದ್ರನನ್ನು ಸಂಹರಿಸುವುದಕ್ಕಾಗಿ ಒಂದು ದುರ್ದೇವತೆಯನ್ನು ಸೃಷ್ಟಿಮಾಡಿ ಇಂದ್ರನ ಮೇಲೆ ಕಳುಹಿದ [ವನ ೧೨೪, ೧೨೫. ಅನು ೨೬೧] ಚ್ಯವನನು ನೀರಿನಲ್ಲಿ ಮುಳುಗಿ ತಪಸ್ಸುಮಾಡುತ್ತಿದ್ದಾಗ ಮೀನು ಹಿಡಿಯುವುದಕ್ಕಾಗಿ ಬಲೆಯನ್ನು ಬೀಸಿದ ಬೆಸ್ತರ ಬಲೆಗೆ ಸಿಕ್ಕಿಬಿದ್ದ. ನಹುಷ ರಾಜ ಈತನನ್ನು ಬಿಡಿಸಿದನು. ನೋಡು—ಗವಿಜಾತ [ಅನು. ೮೬]. ಕ್ಷತ್ರಿಯನಾದ ಕುಶಿಕನ ವಂಶದೊಂದಿಗೆ ಬ್ರಾಹ್ಮಣನಾದ ಭೃಗು ಮುನಿಯ ವಂಶ ಕಲೆತುಹೋಗುವುದೆಂಬುದಾಗಿ ದೇವತೆಗಳಿಂದ ತಿಳಿದು, ಅದನ್ನು ಸಹಿಸಲಾರದೆ ಕುಶಿಕನ ಮನೆಗೆ ಹೋಗಿ, ಕೆಲಕಾಲ

ಅಲ್ಲಿಯೇ ನಿಂತು ಪತ್ನೀಸಮೇತನಾದ ಕುಶಿಕನ ಶುಶ್ರೂಷೆಗೂ ಸಹನೆಗೂ ಮೆಚ್ಚಿ, ತನ್ನ ಯೋಗಮಹಿಮೆಯಿಂದ ಒಂದು ಸ್ವರ್ಗವನ್ನು ಸೃಷ್ಟಿಮಾಡಿ, ಅವರಿಗೆ ತೋರಿ, ಕುಶಿಕ ವಂಶದಲ್ಲಿ ಬ್ರಾಹ್ಮಣನು ಜನಿಸುವಂತೆ ವರವನ್ನಿತ್ತನು [ಅನು. ೮೭, ೯೦]. ಚ್ಯವನನ ಚರಿತ್ರೆ [ಭಾರ.-ವನ. ೧೨೨. ಅನು. ೨೬೧. ಭಾಗ.-೯, ೩. ದೇ.ಭಾ.-೭. ಸ್ಕಂ.-ಅಧ್ಯಾ ೩, ೭]

## ಛ

**ಛತ್ರವತಿ.**—ಒಂದು ಪಟ್ಟಣ ದ್ರೋಣಾಚಾರ್ಯನು ದ್ರುಪದನನ್ನು ಜಯಿಸಿ ಆತನ ರಾಜ್ಯವನ್ನು ಕಿತ್ತುಕೊಂಡ ತರುವಾಯ ದ್ರುಪದನು ಹೊಸದಾಗಿ ಈ ಪಟ್ಟಣ ವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಏರ್ಪಡಿಸಿದನು [ಆದಿ. ೧೪೮].

**ಛತ್ರೋತ್ಪತ್ತಿ**—ಒಮ್ಮೆ ಜಮದಗ್ನಿ ಪತ್ನಿಯಾದ ರೇಣುಕೆ ಬಿಸಿಲಿನ ತಾಪ ದಿಂದ ಬಳಲಿ ನಡೆಯಲಾರದಿರುವಾಗ ಜಮದಗ್ನಿ ಆಕೆಯ ಉಪಯೋಗಕ್ಕೆ ಛತ್ರ ವನ್ನೂ ಪಾದುಕೆಗಳನ್ನೂ ನಿರ್ಮಿಸಿದನು [ಅನು. ೧೪೪, ೧೪೫].

**ಛಾಯಾ**—ಸೂರ್ಯನ ಹೆಂಡತಿಯಾದ ಸಂಜ್ಞೆಯ ಪ್ರತಿಬಿಂಬ. ಸೂರ್ಯನು ರೈವತನ ಮಗಳಾದ ರಾಜ್ಞಿಯನ್ನೂ, ತ್ವಷ್ಟೃವಿನ ಮಗಳಾದ ಸಂಜ್ಞೆಯನ್ನೂ, ಪ್ರಭೆಯೆಂಬ ಮತ್ತೊಬ್ಬ ತರುಣಿಯನ್ನೂ, ಅಂತೂ ಮೂವರು ಮಡದಿಯರನ್ನು ಮದುವೆಯಾಗಿದ್ದ ರಾಜ್ಞಿಯೆಂಬವಳು ರೇವತನನ್ನೂ, ಪ್ರಭೆ ಪ್ರಭಾತನನ್ನೂ, ಸಂಜ್ಞೆ ವೈವಸ್ವತ ಮನುವನ್ನೂ, ಯಮ, ಯಮುನೆಯೆಂಬ ಅವಳಿ ಮಕ್ಕಳನ್ನೂ ಹೆತ್ತರು ಬಳಿಕ ಸಂಜ್ಞೆ ತನ್ನ ಶರೀರದಿಂದ ತನ್ನಂತೆಯೇ ಇರುವ ಒಬ್ಬ ತರುಣಿ ಯನ್ನು ಸೃಷ್ಟಿಸಿ, ಛಾಯೆಯೆಂದು ಹೆಸರಿಟ್ಟು, ತನ್ನ ಪತಿಯೊಂದಿಗೆ ಸಂಸಾರಮಾಡಿ ಕೊಂಡಿರುವಂತೆಯೂ, ತನ್ನ ಮಕ್ಕಳನ್ನು ಅವಳ ಮಕ್ಕಳಂತೆಯೇ ಮಾತೃವಾತ್ಸಲ್ಯ ದಿಂದ ಕಾಣುವಂತೆಯೂ ಹೇಳಿ ತಪಸ್ಸಿಗೆ ಹೊರಟುಹೋದಳು ಬಳಿಕ ಛಾಯೆ ಸೂರ್ಯನಿಂದ, ಮನುವಿನಂತೆಯೇ ಇರುವ ಸಾವರ್ಣಿ ಮನುವನ್ನೂ, ಶನೈಶ್ಚರನನ್ನೂ, ತಪತಿಯನ್ನೂ ಹೆತ್ತಳು. ಸೂರ್ಯನೂ ಈಕೆಯನ್ನು ಸಂಜ್ಞಾದೇವಿಯೆಂತಲೇ ತಿಳಿ ದಿದ್ದ. ಛಾಯೆ ತನ್ನ ಮಕ್ಕಳನ್ನು ಹೆಚ್ಚು ಅಕ್ಕರೆಯಿಂದ ಕಾಣುತ್ತ ಸಂಜ್ಞೆಯ ಮಕ್ಕಳನ್ನು ಅಸಡ್ಡೆಮಾಡುತ್ತಿದ್ದಳು. ಯಮನು ಇದನ್ನು ಸಹಿಸಲಾರದೆ, ಬಲ ಗಾಲನ್ನು ಎತ್ತಿ ತೋರಿ ಆಕೆಯನ್ನು ಹೆದರಿಸಿದನು. ಛಾಯೆ "ನಿನ್ನ ಕಾಲಿನಲ್ಲಿ ಹುಳುಬಿದ್ದು ವಾಸನೆ ಹಿಡಿದು, ಕೆಟ್ಟನೀರು ಸುರಿಯಲಿ" ಎಂದು ಶಾಪವಿತ್ತಳು. ಯಮನು ಈ ವಿಷಯವನ್ನು ಸೂರ್ಯನಲ್ಲಿ ಹೇಳಿ, ಬಹುಶಃ ಆಕೆ ತನ್ನ ಜನನಿಯಾಗಿರ

ಲಾರಳೆಂದು ಸೂಚಿಸಿದನು. ಬಳಿಕ ಸೂರ್ಯನು ಒಂದು ಕೋಳಿಯನ್ನು ನಿರ್ಮಿಸಿ, ಯಮನನ್ನು ಕುರಿತು "ಈ ಕೋಳಿ ನಿನ್ನ ಕಾಲಿನ ಹುಣ್ಣಿನಲ್ಲಿರುವ ಹುಳುಗಳನ್ನೆಲ್ಲ ತೆಗೆದುಹಾಕಿ ರಕ್ತವನ್ನೆಲ್ಲ ಸರಿಪಡಿಸುವುದು" ಎಂದ ಬಳಿಕ ಯಮನು ಆರೋಗ್ಯವನ್ನು ಪಡೆದು ಗೋಕರ್ಣಕ್ಷೇತ್ರದಲ್ಲಿ ತಪಸ್ಸುಮಾಡಿ ಶಿವನ ಅನುಗ್ರಹದಿಂದ ಧರ್ಮಾಧರ್ಮಗಳನ್ನು ವಿವೇಚನೆಮಾಡುವ ಲೋಕಪಾಲತ್ವವನ್ನೂ, ಪಿತೃದೇವಾಧಿಪತ್ಯವನ್ನೂ ಪಡೆದ ಸೂರ್ಯನು ಬಳಿಕ ಸಂಜ್ಞೆಯೇ ಇಂತು ಮಕ್ಕಳನ್ನು ಸರಿಯಾಗಿ ಆದರಿಸುತ್ತಿಲ್ಲವೆಂಬ ಭಾವನೆಯಿಂದ ಆಕೆಯ ತಂದೆಯಾದ ತ್ವಷ್ಟಾರನಲ್ಲಿಗೆ ಹೋಗಿ, ನಡೆದ ವೃತ್ತಾಂತವನ್ನೆಲ್ಲ ತಿಳುಹಿದ. ಆಗ ತ್ವಷ್ಟಾರನು ವಾಸ್ತವಾಂಶವನ್ನು ವಿವರಿಸಿ, ಸಂಜ್ಞೆ ತನ್ನಲ್ಲಿಗೆ ಬಂದುದನ್ನೂ, ತಾನು ಆಕೆಯನ್ನು ಮನೆಯಲ್ಲಿ ಸೇರಗೊಳಿಸದಿದ್ದುದನ್ನೂ ಹೇಳಿ "ನಿನ್ನ ತೇಜಸ್ಸು ಸಹಿಸಲು ಅಶಕ್ಯವಾಗಿದೆ ನೀನು ಸಮ್ಮತಿಸುವುದಾದರೆ ಆ ತೇಜಸ್ಸನ್ನು ಕಡಮೆಮಾಡುತ್ತೇನೆ" ಎನಲು ಸೂರ್ಯನೂ ಅದಕ್ಕೆ ಸಮ್ಮತಿಸಿದ. ತ್ವಷ್ಟನು ಸೂರ್ಯನ ದೇಹದಿಂದ ತೇಜಸ್ಸನ್ನು ಕೊರೆದು ತೆಗೆದು, ಆ ಭಾಗದಿಂದ ವಿಷ್ಣುವಿನ ಚಕ್ರಾಯುಧವನ್ನೂ, ಶಿವನ ಶೂಲಾಯುಧವನ್ನೂ, ಇಂದ್ರನ ವಜ್ರಾಯುಧವನ್ನೂ ಏರ್ಪಡಿಸಿದ ಇಂತು ಸೂರ್ಯನ ತೇಜಸ್ಸು ಸ್ವಲ್ಪ ಶಾಂತವಾಗಲು ಸೂರ್ಯನು ಉತ್ತರ ಕುರುವಿನ ಮರುಭೂಮಿಯಲ್ಲಿ ಕುದುರೆಯ ರೂಪದಿಂದ ಮೇಯುತ್ತಿದ್ದ ಸಂಜ್ಞೆಯನ್ನು ಗುರುತಿಸಿ ಮೋಹಪರವಶನಾಗಿ ತಾನೂ ಗಂಡು ಕುದುರೆಯ ವೇಷವನ್ನು ತಳೆದು ಆಕೆಯಲ್ಲಿ ರಮಿಸಲಾಗಿ, ಇವನು ಪರಪುರುಷನೆಂಬ ಭಾವನೆಯಿಂದ ಸಂಜ್ಞೆ ಸೂರ್ಯನ ತೇಜಸ್ಸನ್ನು ಮೂಗಿನ ಮೂಲಕ ಹೊರಬಿಟ್ಟಳು. ಕೂಡಲೇ ಆ ತೇಜಸ್ಸಿನಿಂದ ಅಶ್ವಿನೀದೇವತೆಗಳು ಜನಿಸಿದರು ಬಳಿಕ ಸಂಜ್ಞೆ ಸೂರ್ಯನನ್ನು ಗುರುತಿಸಿ ಸಂತೋಷಪಟ್ಟು, ವಿಮಾನವನ್ನೇರಿ ಪತಿಯ ಸಂಗಡ ಹೊರಟುಹೋದಳು [ಮತ್ಸ್ಯ.-೧೧. ಶಿವ. ಉಮಾ. ೧].

## ಜ

**ಜಗತ್ಸೃಷ್ಟಿಕಥೆ** —[ಭಾರ.-ಆದಿ. ೧ ಸಭಾ. ೪೩. ಶಾಂತಿ. ೧೮೦, ೩೪೭].

**ಜಟಾಯು** —ಒಬ್ಬ ಪಕ್ಷಿರಾಜ ವಿನತೆಯ ಪುತ್ರನಾದ ಅರುಣನಿಂದ ಶ್ಯೇನಿಯೆಂಬವಳಲ್ಲಿ ಜನಿಸಿದ ಕಿರಿಯ ಮಗ ಸಂಪಾತಿ ಇವನ ಅಣ್ಣ [ಭಾರ.-ಆದಿ. ೬೭]. ಒಮ್ಮೆ ಸಂಪಾತಿಯೂ ಜಟಾಯುವೂ ತಮ್ಮ ತಮ್ಮ ವೇಗವನ್ನು ಪರೀಕ್ಷಿಸಿ ತಿಳಿಯುವುದಕ್ಕಾಗಿ ಆಕಾಶದಲ್ಲಿ ಬಹಳ ಮೇಲೆ ಹೋದರು. ಸೂರ್ಯನ ತಾಪವನ್ನು ಸಹಿಸಲಾರದೆ ಜಟಾಯು ಮೋಹಗೊಂಡುದನ್ನು ಕಂಡು ಸಂಪಾತಿ ತನ್ನ ರೆಕ್ಕೆಗಳನ್ನು

ಅಗಲವಾಗಿ ಮಾಡಿ, ಜಟಾಯುವಿನ ಮೇಲೆಯೇ ಬರುತ್ತಿದ್ದ. ಅಷ್ಟರಲ್ಲಿ ಜಟಾಯು ಸೊರಗಿ ದಂಡಕಾರಣ್ಯದಲ್ಲಿ ಬಿದ್ದ. ಸಂಪಾತಿ ದಕ್ಷಿಣಸಮುದ್ರ ತೀರದಲ್ಲಿ ಬಿದ್ದ. ಸಂಪಾತಿಯ ರೆಕ್ಕೆಗಳೆಲ್ಲವೂ ಸುಟ್ಟುಹೋದವು ಸೂರ್ಯಕಿರಣ ತಾಪದಿಂದ ಮರಣೋನ್ಮುಖನಾಗಿದ್ದ ಸಂಪಾತಿಯನ್ನು ಕಂಡ, ಅಲ್ಲಿಯೇ ತಪಸ್ಸುಮಾಡಿಕೊಂಡಿದ್ದ ನಿಶಾಕರನೆಂಬ ಮುನೀಶ್ವರನು ಸಂಪಾತಿಯನ್ನು ಉಪಚರಿಸಿದ. ಆ ಬಳಿಕ ಸಂಪಾತಿಯೂ ಜಟಾಯುವೂ ಮರಳಿ ಸಂಧಿಸಲಿಲ್ಲ ಜಟಾಯು ಚೇತರಿಸಿಕೊಂಡ ಬಳಿಕ, ದಂಡಕಾರಣ್ಯದಲ್ಲಿಯೇ ಒಂದು ಪರ್ವತ ಗುಹೆಯಲ್ಲಿ ವಾಸಮಾಡಿಕೊಂಡಿದ್ದ [ಅರಣ್ಯ ಪರ್ವ, ೨೭೫]. ಶ್ರೀ ರಾಮನು ಸೀತಾಲಕ್ಷ್ಮಣರೊಂದಿಗೆ ಅಗಸ್ತ್ಯಾಶ್ರಮದಿಂದ ಪಂಚವಟಿಯ ಕಡೆಗೆ ಬರುತ್ತಿದ್ದಾಗ ನಡುದಾರಿಯಲ್ಲಿ ಕಂಡುಬಂದ ಜಟಾಯುವನ್ನು ರಾಮನು '' ನೀನು ಯಾರು ? '' ಎಂದು ಮುಂತಾಗಿ ಪ್ರಶ್ನೆಮಾಡಲಾಗಿ ಜಟಾಯು ತನ್ನ ಪೂರ್ವೋತ್ತರಗಳನ್ನೆಲ್ಲ ವಿವರಿಸಿ, ತಾನೂ ದಶರಥನೂ ಬಾಲ್ಯದಿಂದಲೂ ಆಪ್ತಸ್ನೇಹಿತರೆಂಬುದಾಗಿ ಹೇಳಿದ ಬಳಿಕ ರಾಮನು '' ನಾವು ಇಲ್ಲಿಯೇ ಪಂಚವಟಿಯಲ್ಲಿ ವಾಸಮಾಡಬಂದಿದ್ದೇವೆ. ನೀನು ನಮ್ಮ ಯೋಗಕ್ಷೇಮಗಳನ್ನು ನೋಡಿಕೊಂಡಿರು '' ಎಂದು ಹೇಳಿದ [ರಾಮಾ -ಅರಣ್ಯ. ೧೪] ಖರ, ದೂಷಣ, ತ್ರಿಶಿರಸರನ್ನು ರಾಮನು ಕೊಂದಕಾರಣ, ಸೀತೆಯನ್ನು ಅಪಹರಿಸುವುದಕ್ಕಾಗಿ ರಾವಣನು ಯತಿವೇಷದಿಂದ ಬಂದು ರಾಮ ಲಕ್ಷ್ಮಣರು ಆಶ್ರಮದಲ್ಲಿಲ್ಲದಂತೆ ಮಾಡಿ, ಸೀತೆಯನ್ನು ಒಯ್ಯುತ್ತಿರಲಾಗಿ, ಸೀತೆಯ ಗೋಳನ್ನು ಕೇಳಿ ಜಟಾಯು ರಾವಣನನ್ನು ಇದಿರಿಸಿ ಹೋರಾಡಿದ ರಾವಣನು ಯುಕ್ತಿಯಿಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಲಾಗಿ ಜಟಾಯು ಕೆಳಗೆ ಬಿದ್ದ [ರಾಮಾ -ಅರ ೪೯, ೫೨] ರಾಮ ಲಕ್ಷ್ಮಣರು ಸೀತೆಯನ್ನು ಆಶ್ರಮದಲ್ಲಿ ಕಾಣದೆ ಹುಡುಕುತ್ತ ಮುಂದೆ ನಡೆದುಬರಲಾಗಿ ಜಟಾಯು ನಡೆದ ವೃತ್ತಾಂತವನ್ನೆಲ್ಲ ತಿಳಿಸಿ ಪ್ರಾಣತ್ಯಾಗಮಾಡಿದ [ರಾಮಾ - ಅರ ೬೪, ೬೭] ಬಳಿಕ ರಾಮನು ಜಟಾಯುವಿಗೆ ಯಥಾವಿಧಿಯಾಗಿ ಅಗ್ನಿಸಂಸ್ಕಾರ ಮಾಡಿ, ತಿಲಾಂಜಲಿಯನ್ನು ಕೊಟ್ಟು, ಅಲ್ಲಿಂದ ಮುಂದಕ್ಕೆ ತೆರಳಿದ [ರಾಮಾ -ಅರ. ೬೮] ಜಟಾಯುವಿಗೆ ಕರ್ಣಿಕಾರ, ಶತಗಾಮಿ, ಸಾರಸ, ರಜ್ಜುಬಾಲ, ಭೇರುಂಡ ಎಂಬ ಐದು ಮಂದಿ ಮಕ್ಕಳಿದ್ದರು [ಭಾರ -ಆದಿ ೬೭] ಜಟಾಯು ವೃತ್ತಾಂತ [ಭಾರ.-ವನ. ೨೭೫, ೨೮೦, ೨೮೩].

**ಜಟಾಸುರ** —ಒಬ್ಬ ರಾಕ್ಷಸ ಪಾಂಡವರು ಅರಣ್ಯವಾಸ ಸಮಯದಲ್ಲಿ ತೀರ್ಥಯಾತ್ರೆಗೆ ಹೊರಟು ಬದರಿಕಾಶ್ರಮದಲ್ಲಿರುವಾಗ ಇವನು ಮುನಿವೇಷದಿಂದ ಅವರಲ್ಲಿಗೆ ಬಂದು, ಅತಿಥಿಯಾಗಿ ಕೆಲಕಾಲ ಅವರಲ್ಲಿಯೇ ನಿಂತು, ಅನೇಕ ಧರ್ಮರಹಸ್ಯಗಳನ್ನು ಕುರಿತು ಪ್ರಶಂಸೆಮಾಡುತ್ತ ನಂಬಿಕೆಯನ್ನು ಹುಟ್ಟಿಸಿ, ಅಚ್ಚುಮೆಚ್ಚಾಗಿದ್ದ.

ಭೀಮಸೇನನು ಇಲ್ಲದ ಸಮಯದಲ್ಲಿ ಮಿಕ್ಕ ಪಾಂಡವರನ್ನು ಕೊಂದು ದ್ರೌಪದಿಯನ್ನು ಅಪಹರಿಸಬೇಕೆಂಬುದಾಗಿ ಸಮಯವನ್ನು ಹೊಂಚುಹಾಕುತ್ತಿದ್ದ. ಪಾಂಡವರಿಗೆ ಇವನ ದುರುದ್ದೇಶ ತಿಳಿಯದೆ ಇವನನ್ನು ದಿಟವಾಗಿಯೂ ಮುನಿಯೆಂತಲೇ ಭಾವಿಸಿ, ಶುಶ್ರೂಷೆಮಾಡುತ್ತಿದ್ದರು ಇಂತಿರಲು ಒಂದು ದಿನ ಭೀಮನು ಹಣ್ಣುಹಂಪಲನ್ನು ತರುವುದಕ್ಕಾಗಿ ಎಲ್ಲಿಯೋ ಹೋಗಿದ್ದಾಗ ದ್ರೌಪದಿಯನ್ನೂ, ಯುಧಿಷ್ಠಿರ, ನಕುಲ, ಸಹದೇವರನ್ನೂ ಹೊತ್ತುಕೊಂಡು ಹೊರಟ ಆ ಕಾಲದಲ್ಲಿ ಅರ್ಜುನನು ದೇವಲೋಕದಲ್ಲಿದ್ದ ಯುಧಿಷ್ಠಿರನು ಇವನಿಗೆ ಎಷ್ಟೋ ಬಗೆಯಿಂದ ನೀತಿಯನ್ನು ಹೇಳಿದರೂ ಕೇಳದೆ ಮುಂದಕ್ಕೆ ವೇಗವಾಗಿ ಹೊರಟ. ಅಷ್ಟರಲ್ಲಿ ಭೀಮ ಆಶ್ರಮಕ್ಕೆ ಬಂದು ಒಬ್ಬರನ್ನೂ ಕಾಣದೆ ಹುಡುಕುತ್ತ ಹೊರಟು, ಇವನನ್ನು ಕಂಡು ಹಿಡಿದು ಓಡಿಬಂದು, ಅವನೊಂದಿಗೆ ಯುದ್ಧಮಾಡಿ ಕೊಂದ [ಭಾರ.-ವನ. ೧೫೮]. ಇವನ ಮಗನಾದ ಅಲಂಬಲನು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಘಟೋತ್ಕಚನಿಂದ ಹತನಾದ [ದ್ರೋ ೧೭೫]

(ii) ಮದ್ರದೇಶದ ಒಬ್ಬ ಅರಸು [ಸಭಾ. ೪]

**ಜಟಿಲಾ** —ಗೌತಮ ಮುನಿಯ ವಂಶದಲ್ಲಿ ಜನಿಸಿದ ಒಬ್ಬ ಹೆಂಗಸು. ಈಕೆ ಏಳು ಮಂದಿಯನ್ನು ಮದುವೆಯಾಗಿದ್ದಳು ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿದ ತರುವಾಯ, ದ್ರೌಪದಿಯನ್ನು ಪಾಂಡವರೈವರಿಗೂ ಕೊಡುವ ವಿಷಯವಾಗಿ ದ್ರುಪದನು ಹಿಂದುಮುಂದು ನೋಡುತ್ತಿರುವಲ್ಲಿ, ವ್ಯಾಸ ಮುನಿ ಇವಳ ಕಥೆಯನ್ನು ದ್ರುಪದನಿಗೆ ಹೇಳಿ, ದ್ರೌಪದಿಯನ್ನು ಐದು ಮಂದಿಗೂ ಕೊಟ್ಟು ವಿವಾಹಮಾಡಲು, ಸಮ್ಮತಿಗೊಳಿಸಿದ [ಭಾರ -ಆದಿ ೨೧೧]

**ಜಟೀ** —ಪಾತಾಳಲೋಕ ನಿವಾಸಿಗಳಾದ ನಾಗ ರಾಜರಲ್ಲಿ ಒಬ್ಬ. ಮಹಾಶೂರ. ರಾವಣ ತನ್ನ ದಿಗ್ವಿಜಯ ಸಮಯದಲ್ಲಿ ಇವನನ್ನು ಗೆದ್ದ [ರಾಮಾ -ಯುದ್ಧ. ೭].

**ಜಡಭರತ** —ಒಬ್ಬ ಅರಸು ಪ್ರಿಯವ್ರತ ವಂಶದಲ್ಲಿ ಪ್ರಸಿದ್ಧನಾದ ಋಷಭದೇವನೆಂಬ ರಾಜರ್ಷಿಯಿಂದ ಜಯಂತಿಯೆಂಬಾಕೆಯಲ್ಲಿ ಜನಿಸಿದವ. ಈತನಿಗೆ ಕುಶಾವರ್ತ, ಇಲಾವರ್ತ, ಆರ್ಯಾವರ್ತ, ಮಲಯಕೇತು, ಭದ್ರಸೇನರೆಂಬ ಆರು ಮಂದಿ ಸಹೋದರರಿದ್ದರು ಈತನು ಪಂಚಜನಿಯೆಂಬಾಕೆಯನ್ನು ಮದುವೆಯಾಗಿ ಸುಮತಿ, ಸುದರ್ಶನ, ರಾಷ್ಟ್ರಭುಜ, ಧೂಮ್ರಕೇತು, ಆದರ್ಶರೆಂಬ ಮಕ್ಕಳನ್ನು ಪಡೆದು, ತನ್ನ ತಂದೆಯಾದ ಋಷಭದೇವನ ತರುವಾಯ ಕೆಲಕಾಲ ರಾಜ್ಯಭಾರ ಮಾಡುತ್ತಿದ್ದು, ತಾನು ಕಾಪಾಡುತ್ತಿದ್ದ ಅಜನಾಭದೇಶವನ್ನು (ಭಾರತವರ್ಷ) ತನ್ನ ಮಕ್ಕಳಿಗೆ ಹಂಚಿಕೊಟ್ಟು, ತಪಸ್ಸಿಗಾಗಿ ಅರಣ್ಯಕ್ಕೆ ಹೋದ. ಒಂದು ದಿನ

ಈತನು ನದಿಯಲ್ಲಿ ಸ್ನಾನಮಾಡುತ್ತಿದ್ದಾಗ, ಅಲ್ಲಿಗೆ ನೀರು ಕುಡಿಯುವುದಕ್ಕಾಗಿ ಬಂದ, ಗರ್ಭವನ್ನು ಧರಿಸಿದ್ದ ಒಂದು ಹುಲ್ಲೆ ಗುಡುಗಿನ ಶಬ್ದವನ್ನು ಕೇಳಿ, ಗರ್ಭಸ್ರಾವವಾಗಲು, ಒಡನೆಯೇ ಸತ್ತುಹೋಯಿತು. ಜಡಭರತನು ಆ ಹರಿಣಶಿಶುವನ್ನು ಕಂಡು ಕನಿಕರದಿಂದ, ಅದನ್ನು ತನ್ನ ಆಶ್ರಮಕ್ಕೆ ಕೊಂಡುಯ್ದು ಸಾಕತೊಡಗಿದ. ಮಕ್ಕಳಮೇಲಣ ಮಮತೆಯನ್ನು ತೊರೆದು ಕಾಡಿಗೆ ಬಂದರೂ, ಹರಿಣಶಿಶುವಿನ ಮೂಲಕ ಈತನ ಮಮತೆ ದಿನದಿನಕ್ಕೂ ಬೆಳೆಯುತ್ತ ಬಂತು. ಕೊನೆಗೆ ಅವಸಾನ ಕಾಲದಲ್ಲಿಯೂ ಆ ಜಿಂಕೆಯ ಮರಿಯನ್ನೇ ಸ್ಮರಿಸುತ್ತ ದೇಹತ್ಯಾಗ ಮಾಡಿದುದರಿಂದ ಮುಂದಣ ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಿದ ಆದರೆ ಹಿಂದಣ ಜನ್ಮದ ತಪೋ ಮಹಿಮೆಯಿಂದ ಈತನಿಗೆ ತನ್ನ ವೃತ್ತಾಂತವೆಲ್ಲವೂ ನೆನಪಿನಲ್ಲಿತ್ತು. ಆ ಬಳಿಕ ಮರುಜನ್ಮದಲ್ಲಿ ಈತನು ಅಂಗಿರಸನೆಂಬ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿ ಹುಚ್ಚನಂತೆ ಅಲೆಯುತ್ತಿದ್ದ ಇಂತಿರಲು ಒಂದು ದಿನ ವೃಷಲನೆಂಬ ಅರಸು ಕಾಳಿಕಾ ದೇವಿಗೆ ನರಬಲಿಯನ್ನು ಕೊಡುವುದಕ್ಕಾಗಿ ಯಾವನಾದರೊಬ್ಬನನ್ನು ಹಿಡಿತರುವಂತೆ ತನ್ನ ಭಟರಿಗೆ ಆಜ್ಞಾಪಿಸಿದ ಭಟರು ಒಬ್ಬನನ್ನು ಹಿಡಿತಂದರು ದೇವತೆಗೆ ಬಲಿ ಕೊಡುವ ಸಮಯದಲ್ಲಿ ಅವನು ತಪ್ಪಿಸಿಕೊಂಡು ಓಡಿಹೋದ ರಾಜಭಟರು ಮತ್ತೊಬ್ಬ ಪುರುಷನಿಗಾಗಿ ಹುಡುಕುತ್ತ ಹೊರಟು ಬೇರೆ ಯಾರೂ ಸಿಕ್ಕದಿದ್ದ ಕಾರಣ ಹುಚ್ಚನಂತಿದ್ದ ಇವನನ್ನು ಕಾಳೀಮಂದಿರಕ್ಕೆ ಕರೆದುಯ್ದರು. ಆಗ ಕಾಳಿ ಪ್ರತ್ಯಕ್ಷವಾಗಿ ಅರಸನನ್ನೂ ಅವನ ಪರಿವಾರವನ್ನೂ ಕೊಂದಳು ಬಳಿಕ ಇವನು ಮನಸ್ಸು ಬಂದಂತೆ ದೇಶದೇಶಗಳಲ್ಲಿ ಅಲೆಯುತ್ತಿರುವಾಗ, ಸಿಂಧೂದೇಶದ ಅರಸನಾದ ರಹೂಗಣನು ವೇದಾಂತರಹಸ್ಯಗಳನ್ನು ತಿಳಿದುಕೊಳ್ಳುವ ಕುತೂಹಲದಿಂದ, ಪಲ್ಲಕ್ಕಿಯನ್ನೇರಿ ಕಪಿಲ ಮುನಿಯ ಬಳಿಗೆ ಹೋಗುತ್ತಿದ್ದ ದಾರಿಯಲ್ಲಿ ಬೋಯಿಗಳು ಉಂಡಾಡಿಗನಂತಿದ್ದ ಈತನನ್ನು ಬಿಟ್ಟಿ ಹಿಡಿದು ತಮ್ಮೊಂದಿಗೆ ಪಲ್ಲಕ್ಕಿಯನ್ನು ಹೊರಿಸಿದರು ಈತನು ಅದಕ್ಕೂ ಅಸಮಾಧಾನಪಟ್ಟುಕೊಳ್ಳದೆ, ತನ್ನ ಮನಸ್ಸು ಬಂದಂತೆ, ಹಳ್ಳತಿಟ್ಟುಗಳನ್ನೂ ಕಲ್ಲುಮುಳ್ಳುಗಳನ್ನೂ ಲೆಕ್ಕಿಸದೆ ನಡೆಯತೊಡಗಿದ. ಇದರಿಂದ ರಹೂಗಣನು ಆಯಾಸಪಟ್ಟು ಈತನನ್ನು ಬಾಯಿಗೆ ಬಂದಂತೆ ಬಯ್ದ. ಈತನು ಆಗಲೂ ಕೋಪಿಸಿಕೊಳ್ಳದೆ "ಅಯ್ಯಾ, ದೂಷಣ ಭೂಷಣಗಳೆಂಬವು ಈ ದೇಹಕ್ಕೇ ಹೊರತು ಆತ್ಮನಿಗಲ್ಲ" ಎಂದ. ಇದನ್ನು ಕೇಳಿದ ರಹೂಗಣನು ಒಡನೆಯೇ ಪಲ್ಲಕ್ಕಿಯಿಂದಿಳಿದು, ಆತನ ಅಡಿದಾವರೆಗಳಿಗೆ ನಮಸ್ಕರಿಸಿ, "ಮಹಾನುಭಾವಾ, ನೀನು ದೊಡ್ಡ ವೇದಾಂತಿ ನನ್ನ ಅಪರಾಧವನ್ನು ಮನ್ನಿಸು" ಎಂದು ಬೇಡಿಕೊಂಡ. ಇಂತು ಜಡಭರತನು ಆ ಜಿಂಕೆಯ ಮರಿಯ ಮೇಲಣ ಮಮತೆಯಿಂದ ಮೂರು ಜನ್ಮಗಳನ್ನು ಎತ್ತಬೇಕಾಗಿ ಬಂತು [ಭಾಗ.-೫. ಸ್ಕಂ. ೯, ೧೪].

**ಜತುಗೃಹ.**—ಪಾಂಡವರನ್ನು ಕೊಲ್ಲುವುದಕ್ಕಾಗಿ ದುರ್ಯೋಧನನು ಕಟ್ಟಿಸಿದ್ದ ಅರಗಿನ ಮನೆ. ಇದನ್ನು ಭೀಮನು ಸುಟ್ಟನು [ಆದಿ ೧೫೪, ೧೫೭, ೧೬೦].

**ಜನಕ.**— ವೈವಸ್ವತಮನುವಿನ ಮಗನಾದ ಇಕ್ಷ್ವಾಕು ರಾಜನ ಮಕ್ಕಳಲ್ಲಿ ಒಬ್ಬನಾದ ನಿಮಿಯೆಂಬವನು ವಸಿಷ್ಠನ ಶಾಪದಿಂದ ದೇಹತ್ಯಾಗಮಾಡಿದ ಬಳಿಕ ದೇಶ ಅರಾಜಕವಾಗಲು ಪ್ರಜೆಗಳೆಲ್ಲರೂ ಒಟ್ಟುಗೂಡಿ ನಿಮಿಯ ಬಲತೋಳನ್ನು ಮಥನಮಾಡಿ, ಅದರಿಂದ ಜನಿಸಿದ ಪುರುಷನಿಗೆ ವಿದೇಹ, ಮಿಥಿ, ಜನಕ ಎಂಬುದಾಗಿ ಹೆಸರಿಟ್ಟು, ಆತನನ್ನು ತಮ್ಮ ರಾಜ್ಯಕ್ಕೆ ಅರಸನನ್ನಾಗಿ ಮಾಡಿಕೊಂಡರು [ರಾಮಾ.-ಉತ್ತ. ೫೫, ೫೭] ಇಂತು ನಿಮಿಯ ತರುವಾಯ ಆ ವಂಶದಲ್ಲಿ ಜನಿಸಿದವರಿಗೆಲ್ಲ ವೈದೇಹ, ಮೈಥಿಲ, ಜನಕ ಎಂಬ ಹೆಸರುಗಳು ರೂಢವಾದವು ಕೆಲಕಾಲದ ಮೇಲೆ ಈ ವಂಶದಲ್ಲಿ ಸೀರಧ್ವಜನೆಂಬ ಅರಸು ರಾಜ್ಯಭಾರಮಾಡುತ್ತಿದ್ದ ಈತನಿಗೆ ಪುತ್ರಸಂತಾನವಿಲ್ಲದ ಕಾರಣ, ಪುತ್ರಕಾಮೇಷ್ಟಿ ಯಾಗಕ್ಕೆ ಭೂಮಿಯನ್ನು ಶೋಧಿಸುತ್ತಿದ್ದಾಗ ನೇಗಿಲ ತುದಿಗೆ ಒಂದು ಚಿನ್ನದ ಪೆಟ್ಟಿಗೆ ಸಿಕ್ಕಿತು. ಅದನ್ನು ತೆರೆದು ನೋಡುವಲ್ಲಿ ಅದರಲ್ಲಿ ಒಂದು ಹೆಣ್ಣುಶಿಶು ಲೋಕೋತ್ತರವಾದ ಅಂದಚೆಂದಗಳಿಂದ ಬೆಳಗುತ್ತಿತ್ತು. ಸಂತಾನಹೀನನಾದ ಜನಕನು ಆ ಮಗುವನ್ನು ಅಕ್ಕರೆಯಿಂದ ತೆಗೆದುಕೊಂಡು ಹೋಗಿ ಸೀತೆಯಿಂದ (ನೇಗಿಲ ಸಾಲಿನಿಂದ) ಹೊರಬಂದವಳಾದುದರಿಂದ ಆ ಮಗುವಿಗೂ ಸೀತೆಯೆಂತಲೇ ನಾಮಕರಣಮಾಡಿ ಕಾಪಾಡುತ್ತಿದ್ದ. ಈ ಮಗು ಮನೆಗೆ ಬಂದ ತರುವಾಯ ಜನಕನಿಗೆ ಒಂದು ಹೆಣ್ಣುಶಿಶು ಹುಟ್ಟಿತು. ಆವಳಿಗೆ ಊರ್ಮಿಳೆಯೆಂದು ಹೆಸರಿಟ್ಟ ಇವರಿಬ್ಬರೂ ಅಂದಚೆಂದಗಳಿಂದ ಲೋಕಾನಂದವನ್ನುಂಟುಮಾಡುತ್ತ ಕ್ರಮವಾಗಿ ವಿವಾಹಯೋಗ್ಯವಾದ ವಯಸ್ಸನ್ನು ಹೊಂದಿದರು (ನೋಡು—ಸುಧನ್ವ) ಆಗ ಜನಕ ತನ್ನ ಮಗಳಿಗೆ ಸ್ವಯಂವರವನ್ನು ಏರ್ಪಡಿಸಿ, ತನ್ನ ಮನೆಯಲ್ಲಿ ಬಹಳ ಹಿಂದಿನಿಂದಲೂ ಇದ್ದ ಶಿವಧನುಸ್ಸನ್ನು ಎತ್ತಿದವರಿಗೆ ತನ್ನ ಮಗಳನ್ನು ಕೊಡುವುದಾಗಿ ಪಣವನ್ನು ಏರ್ಪಡಿಸಿದ. ದೇಶದ ಅರಸರಿಗೆಲ್ಲ ಸಮಾಚಾರ ತಿಳಿದು ಸಾವಿರಾರು ಮಂದಿ ರಾಜರು ಬಂದು ನೆರೆದರು ದಿಕ್ಕು ದಿಕ್ಕುಗಳಲ್ಲಿನ ಋಷಿಗಳೂ, ಬ್ರಾಹ್ಮಣರೂ ಸೇರಿದರು. ವಿಶ್ವಾಮಿತ್ರ ಮುನಿಗೂ ಆಹ್ವಾನ ಕೊಟ್ಟಿದ್ದ ಕಾರಣ ಆತನೂ ರಾಮ ಲಕ್ಷ್ಮಣರೊಂದಿಗೆ ಅಲ್ಲಿಗೆ ಬಂದು ಸೇರಿದ. ಪಣವಾಗಿರಿಸಿದ್ದ ಶಿವನ ಬಿಲ್ಲನ್ನು ಅರಸರಲ್ಲಿ ಯಾರೊಬ್ಬರೂ ಎತ್ತಲಾರದೆ ಹೋದರು ಆಗ ಶ್ರೀ ರಾಮ ವಿಶ್ವಾಮಿತ್ರನ ಅಪ್ಪಣೆಯಮೇರೆಗೆ ಆ ಬಿಲ್ಲನ್ನು ಎತ್ತಿ, ಹೆದೆಯನ್ನು ಬಿಗಿಯುವಾಗ ಆ ಬಿಲ್ಲು ಮುರಿದುಹೋಯಿತು [ರಾಮಾ.-ಬಾಲ. ೬೭]. ಬಳಿಕ ಜನಕನು ದೂತರ ಮೂಲಕ ದಶರಥನಿಗೆ ಲಗ್ನಪತ್ರಿಕೆಯನ್ನು ಬರೆದು ಕಳುಹಿ, ಅವರೆಲ್ಲರೂ ಬಂದ ಬಳಿಕ ಶುಭಮುಹೂರ್ತದಲ್ಲಿ

ಸೀತೆಯನ್ನು ರಾಮನಿಗೂ, ತನ್ನ ಔರಸಪುತ್ರಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ, ತನ್ನ ತಮ್ಮನಾದ ಕುಶಧ್ವಜನ ಪುತ್ರಿಯರು ಮಾಂಡವೀ, ಶೃತಕೀರ್ತಿಯೆಂಬಿಬ್ಬರನ್ನೂ ಭರತ ಶತ್ರುಘ್ನರಿಗೂ ಕೊಟ್ಟು ವಿಶೇಷವಾದ ಬಳುವಳಿಯನ್ನಿತ್ತು ಮದುವೆ ಮಾಡಿದ [ರಾಮಾ.-ಬಾಲ. ೭೦, ೭೩] ಕೆಲವು ದಿನಗಳವರೆಗೆ ದಶರಥಾದಿಗಳನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದು, ಉಪಚರಿಸಿ, ಎಲ್ಲರನ್ನೂ ಅಯೋಧ್ಯೆಗೆ ಕಳುಹಿಸಿ ಕೊಟ್ಟ [ರಾಮಾ.-ಬಾಲ ೭೪ ಭಾರ -ವನ. ೨೭೫ ಸಂ ೮]. ನೋಡು—ನಿಮಿ, ಸೀರಧ್ವಜ ಪಂಚಶಿಖನೆಂಬ ಮುನಿಯೊಂದಿಗೆ ಅಧ್ಯಾತ್ಮವಿಚಾರವಾಗಿ ಮಾತಾಡಿದ್ದು [ಶಾಂತಿ. ೨೨೧, ೩೨೪] ಜನಕನ ವಂಶವರ್ಣನೆ [ರಾಮಾ.-ಬಾಲ ೭೧. ಭಾಗ.-೯, ೧೩ ವಾಯು -೭೯] "ಕ್ಷತ್ರಿಯನು ಪ್ರಜಾಪರಿಪಾಲನೆಯನ್ನು ಅವಶ್ಯವಾಗಿ ಮಾಡಲೇಬೇಕು, ಜ್ಞಾನವನ್ನು ಸಂಪಾದಿಸಿದ ಮಾತ್ರದಿಂದಲೇ ಕ್ಷತ್ರಿಯ ಧರ್ಮವನ್ನು ಬಿಡಲಾಗದು" ಎಂಬ ವಿಷಯದಲ್ಲಿ ತನ್ನ ಹೆಂಡತಿಯಾದ ಸುಮೇಧೆಯೆಂಬವಳೊಂದಿಗೆ ಸಂವಾದ [ಶಾಂತಿ ೧೮] ಅಶ್ಮನೆಂಬ ಬ್ರಾಹ್ಮಣನೊಂದಿಗೆ ಧರ್ಮವಿಷಯವಾಗಿ ಸಂವಾದ. ಯುಧಿಷ್ಠಿರನು ಕರ್ಣಾದಿಗಳನ್ನು ಕೊಂದುದಕ್ಕಾಗಿ ಮನನೊಂದು ನಿರ್ವಿಣ್ಣನಾಗಿರುವಲ್ಲಿ ವ್ಯಾಸ ಮುನಿ ಈ ಕಥೆಯನ್ನು ಯುಧಿಷ್ಠಿರನಿಗೆ ಹೇಳಿದ [ಶಾಂತಿ. ೨೭] ಜನಕನು ತನ್ನ ಯೋಧರನ್ನೆಲ್ಲ ಕರೆದು ಸ್ವರ್ಗ, ನರಕಗಳನ್ನು ತೋರಿದ್ದು [ಶಾಂತಿ. ೯೯] ಕಹೋಳ ಮುನಿ ಜನಕನಲ್ಲಿ ವಾದಮಾಡಿದ್ದು [ವನ. ೧೧೪]. ಮಿಥಿಲೆ ಸುಡುತ್ತಿದ್ದಾಗಲೂ ಜನಕನು ನಿಶ್ಚಿಂತನಾಗಿದ್ದುದು, ಅವನ ಮನಸ್ಥೈರ್ಯ [ಶಾಂತಿ ೨೨೩] ಶುಕ ಮುನಿ ಜ್ಞಾನಸಂಪಾದನೆಗಾಗಿ ಜನಕನಲ್ಲಿಗೆ ಬಂದದ್ದು [ಶಾಂತಿ ೩೩೩ ಬೃಹನ್ನಾರ -೫೮, ೬೦]. ಆಶೆಯನ್ನು ಬಿಡುವುದೇ ಸುಖಕ್ಕೆ ಮುಖ್ಯಸಾಧನವೆಂಬ ವಿಷಯವಾಗಿ ಮಾಂಡವ್ಯ ಮಹರ್ಷಿಯೊಂದಿಗೆ ಸಂವಾದ [ಶಾಂತಿ ೨೮೨]. ಪರಾಶರ ಮಹರ್ಷಿಯೊಂದಿಗೆ ಸಂವಾದ. ಇದನ್ನೇ ಪರಾಶರಗೀತೆಯೆಂದು ಹೇಳುತ್ತಾರೆ [ಶಾಂತಿ. ೨೯೬, ೩೦೪] ಭೂತಸೃಷ್ಟಿ ವಿಷಯವಾಗಿ ಯಾಜ್ಞವಲ್ಕ್ಯ ಮಹರ್ಷಿಯೊಂದಿಗೆ ಸಂವಾದ [ಶಾಂತಿ ೩೧೫-೩೨೩] ಮಮತೆಯನ್ನು ಬಿಡುವುದೇ ಪರಮಪುರುಷಾರ್ಥವೆನಿಸಿದ ಮೋಕ್ಷಕ್ಕೆ ಸಾಧನವೆಂಬ ವಿಷಯವಾಗಿ ಒಬ್ಬ ಬ್ರಾಹ್ಮಣನೊಂದಿಗೆ ಸಂವಾದ [ಅಶ್ವ. ೩೩].

**ಜನದೇವ** —ನಿಮಿ ವಂಶದ ಒಬ್ಬ ಅರಸು. ಈತನು ಜ್ಞಾನಸಂಪನ್ನನಾಗಿದ್ದುದರಿಂದ ತನ್ನಲ್ಲಿಗೆ ಬಂದ ಒಬ್ಬೊಬ್ಬ ಋಷಿಯನ್ನೂ ಆತ್ಮವಿಚಾರವಾಗಿ ಪ್ರಶ್ನೆ ಮಾಡುತ್ತಿದ್ದು, ಯಾರಿಂದಲೂ ಸಮರ್ಪಕವಾದ ಉತ್ತರ ದೊರೆಯದಿದ್ದುದರಿಂದ ಚಿಂತಾಕ್ರಾಂತನಾಗಿದ್ದ. ಒಮ್ಮೆ ಪಂಚಶಿಖನೆಂಬ ಮುನಿ ತನ್ನಲ್ಲಿಗೆ ಬರಲಾಗಿ ಆತನಿಂದ ಅನೇಕ ರಹಸ್ಯಗಳನ್ನು ತಿಳಿದು ಸಂತುಷ್ಟನಾಗಿದ್ದ. ಒಂದು ಸಮಯದಲ್ಲಿ

ಅರಮನೆ ಸುಟ್ಟುಹೋಯಿತು. ಜನದೇವನು ಆಗಲೂ ವಿಕಾರಗೊಳ್ಳದೆ, "ಇವೆಲ್ಲವೂ ಸ್ಥಿರವಲ್ಲ ಇದ್ದರೆಷ್ಟು? ಹೋದರೆಷ್ಟು?" ಎಂಬುದಾಗಿ ಹೇಳಿದ [ಭಾರ -ಶಾಂತಿ. ೨೨೦. ಬೃಹನ್ನಾರ -೪೫].

**ಜನಮೇಜಯ** —(I) ಸೂರ್ಯ ವಂಶದ ದಿಷ್ಟ ರಾಜನ ಸಂತತಿಯಲ್ಲಿ ಜನಿಸಿದ ಸುಮತಿ ರಾಜನ ಮಗ ಈತ ಮೂರೇ ದಿನಗಳಲ್ಲಿ ಭೂಮಂಡಲವನ್ನೆಲ್ಲ ಗೆದ್ದು ಚಕ್ರವರ್ತಿಯೆನಿಸಿಕೊಂಡ [ಭಾರ.-ಶಾಂತಿ. ೧೨೪].

(II) ಚಂದ್ರ ವಂಶದ ಅರಸು. ಸುಭದ್ರಾರ್ಜುನರ ಪುತ್ರನಾದ ಅಭಿಮನ್ಯುವಿನಿಂದ ಜನಿಸಿದ ಪರೀಕ್ಷಿದ್ರಾಜನಿಂದ ಭದ್ರವತಿಯೆಂಬ ಪಟ್ಟಮಹಿಷಿಯಲ್ಲಿ ಜನಿಸಿದ. ಅರ್ಜುನನ ಮರಿಮಗ [ಭಾರ.-ಆದಿ. ೧] ಜನಮೇಜಯನ ರಾಜ್ಯಾಭಿಷೇಕ [ಆದಿ. ೩] ಕಾಶೀ ರಾಜನಾದ ಸುವರ್ಮನೆಂಬ ಅರಸನ ಮಗಳಾದ ವಪುಷ್ಟಮೆಯೆಂಬ ತರುಣಿಯನ್ನು ಮದುವೆಯಾಗಿ ಶತಾನೀಕ, ಶಂಕುಕರ್ಣರೆಂಬ ಇಬ್ಬರು ಪುತ್ರರನ್ನು ಪಡೆದ [ಆದಿ ೪೪, ೬೩]. ಈತನು ವೈಶಂಪಾಯನ ಮಹರ್ಷಿಯ ಮೂಲಕ ಭಾರತ ಕಥೆಯನ್ನು ಸಂಪೂರ್ಣವಾಗಿ ಕೇಳಿ ತಿಳಿದು, ತನ್ನ ತಂದೆಯಾದ ಪರೀಕ್ಷಿತನು ಸರ್ಪದಷ್ಟನಾಗಿ ಮೃತನಾದುದರಿಂದ, ಲೋಕದಲ್ಲಿ ಸರ್ಪ ಕುಲವೇ ಇಲ್ಲದಂತೆ ಮಾಡಬೇಕೆಂದು ಸಂಕಲ್ಪಿಸಿ ಸರ್ಪಯಾಗವನ್ನು ಮಾಡತೊಡಗಿದ [ಭಾರ.-ಆದಿ. ೫೧]. ಶ್ರುತಶ್ರವಸನೆಂಬ ಋಷಿಯ ಮಗನಾದ ಸೋಮಶ್ರವನೆಂಬವನು ಇವನ ಪುರೋಹಿತ [ಆದಿ. ೩] ಈತನು ದೀರ್ಘಸತ್ರಕ್ಕೆ ಮೊದಲುಮಾಡಿ, ಯಜ್ಞ ನಡೆಯುತ್ತಿರುವಲ್ಲಿ ಅಲ್ಲಿಗೆ ಒಂದು ಸಾರಮೇಯ (ನಾಯಿ) ಬಂತು ಇವನ ತಮ್ಮಂದಿರಾದ ಶ್ರುತಸೇನ, ಉಗ್ರಸೇನ, ಭೀಮಸೇನರೆಂಬವರು ಆ ನಾಯನ್ನು ಹೊಡೆದು ಅಟ್ಟಿದರು. ಪೆಟ್ಟುತಿಂದ ನಾಯಿ ತನ್ನ ಜನನಿಯಾದ ಸರಮೆಯಲ್ಲಿ ಮೊರೆಯಿಟ್ಟಿತು ಸರಮೆ ಒಡನೆಯೇ ಯಾಗಶಾಲೆಗೆ ಬಂದು "ಅಯ್ಯಾ, ನಿನ್ನ ತಮ್ಮಂದಿರು ಅನ್ಯಾಯವಾಗಿ ನನ್ನ ಮಗನನ್ನು ಹೊಡೆದರು. ನಿನ್ನ ಸಂಪತ್ತು ಹಾಳಾಗುವುದಕ್ಕೆ ಇವೆಲ್ಲವೂ ದುಶ್ಶಕುನಗಳು" ಎಂದಿತು ಜನಮೇಜಯನು ಹೆದರಿ ಆ ಅಪಶಕುನಗಳನ್ನು ನಿವಾರಣೆಮಾಡುವುದಕ್ಕಾಗಿ ಶಾಂತಿಕರ್ಮವನ್ನು ನಡೆಯಿಸಿದ [ಆದಿ. ೩]. ಈತನು ಮಾಡಿದ ಸರ್ಪಯಾಗದಲ್ಲಿ ಚಂಡಭಾರ್ಗವನೆಂಬ ಮುನಿ ಹೋತೃವಾಗಿಯೂ (ಋಗ್ವೇದ ಮಂತ್ರಗಳನ್ನು ಹೇಳತಕ್ಕವ), ಪಿಂಗಳನೆಂಬ ಋಷಿ ಅಧ್ವರ್ಯುವಾಗಿಯೂ (ಯಜುರ್ವೇದ ಮಂತ್ರಗಳನ್ನು ಹೇಳತಕ್ಕವ), ಜೈಮಿನಿ ಮಹರ್ಷಿ ಉದ್ಗಾತೃವಾಗಿಯೂ (ಸಾಮ ಮಂತ್ರಗಳನ್ನು ಹೇಳತಕ್ಕವ), ಅಂಗಿರಸ ಮುನಿ ಬ್ರಹ್ಮನಾಗಿಯೂ ಇದ್ದರು. ಅಸಿತ, ದೇವಲ, ವ್ಯಾಸ, ಉದ್ದಾಲಕ, ಶ್ವೇತಕೇತು, ಪರ್ವತ, ನಾರದ, ಕಹೋಳ ಮುಂತಾದವರು

ಸದಸ್ಯರಾಗಿದ್ದರು. ಸರ್ಪಯಜ್ಞಕ್ಕೆ ಪ್ರಾರಂಭವಾಗಿ, ಋತ್ವಿಜರು ಹೋಮಮಾಡು ವಾಗ ಸರ್ಪಗಳು ಒಂದರ ಹಿಂದೆ ಒಂದು ಬಂದು, ಅಗ್ನಿಕುಂಡದಲ್ಲಿ ಬಿದ್ದು ಬೂದಿ ಯಾಗುತ್ತ ಬಂದವು. ಉಳಿದ ಸರ್ಪಗಳು ಜರತ್ಕಾರುವನ್ನು ಮರೆಹೊಗಲಾಗಿ ಆಕೆ ತನ್ನ ಮಗನಾದ ಆಸ್ತೀಕನನ್ನು ಜನಮೇಜಯನಲ್ಲಿಗೆ ಕಳುಹಿ, ಸರ್ಪಸತ್ರವನ್ನು ನಿಲ್ಲಿಸುವಹಾಗೆ ಹೇಳಿದಳು ಆಸ್ತೀಕನು ಜನಮೇಜಯನ ಯಾಗಶಾಲೆಯನ್ನು ಹೊಕ್ಕು, ತನ್ನ ವಿದ್ಯಾಬಲದಿಂದ ಪ್ರಾಣಿಹಿಂಸೆ ತಕ್ಕದಲ್ಲವೆಂಬುದನ್ನು ಬೋಧಿಸಿ ಸರ್ಪಸತ್ರವನ್ನು ನಿಲ್ಲಿಸಿದ [ಆದಿ ೫೪, ೫೮] ನೋಡು— ಆಸ್ತೀಕ

" ಜನ್ಮನಾ ಶತ್ರೂನ್ ಏಜಯತಿ, ಕಮ್ಪಯತೀತಿ ಜನ್ಮೇಜಯಃ "

ಅತಿ ಶುದ್ಧವಾದ ತನ್ನ ಜನ್ಮದಿಂದಲೇ ಶತ್ರುಗಳನ್ನು ನಡುಗಿಸಿದವನು ಜನಮೇಜಯ [ದೇ ಭಾ -೨, ೧೧]

(iii) ಒಬ್ಬ ಅರಸು. ಚಂದ್ರ ವಂಶದ ದುಷ್ಯಂತನಿಂದ ಜನಿಸಿದವ ಈತನ ಜನನಿ ಲಾಕ್ಷಿಯೆಂಬವಳು ಲಾಕ್ಷಿಗೆ ಲಾಕ್ಷ್ಯಾ, ಲಕ್ಷಣಾ ಎಂಬ ನಾಮಾಂತರ ಗಳೂ ಇವೆ [ಆದಿ. ೯೩, ೮೮].

(iv) ಇನ್ನೊಬ್ಬ ಅರಸು ಚಂದ್ರ ವಂಶದ ಪೂರು ರಾಜನಿಂದ ಕೌಸಲ್ಯೆ ಯೆಂಬವಳಲ್ಲಿ ಜನಿಸಿದವ. ಈತ ಮಗಧ ರಾಜಪುತ್ರಿಯಾದ ಸುನಂದೆಯನ್ನು ಮದುವೆಯಾಗಿ ಪ್ರಾಚೀನ್ವಂತನೆಂಬ ತನಯನನ್ನು ಪಡೆದ [ಆದಿ ೯೩] ಈ ಜನಮೇಜಯನು ಗಾರ್ಗ್ಯ ಮಹರ್ಷಿಯ ಮಗನನ್ನು ಹಿಂಸೆಮಾಡಿ, ಬ್ರಹ್ಮಹತ್ಯೆಗೆ ಗುರಿಯಾಗಿ, ಶೌನಕ ವಂಶೀಯನಾದ ಇಂದ್ರೋತಮನೆಂಬ ಮುನಿಯಿಂದ ಅಶ್ವಮೇಧ ಯಾಗವನ್ನು ಮಾಡಿಸಿ ಶಾಪವಿಮುಕ್ತನಾದ [ಶಾಂತಿ ೧೫೧ ಹರಿ -೧-೩೦ ಬ್ರಹ್ಮ -೧೨]. ಆತನಿಗೆ ಸ್ತ್ರೀ ಹತ್ಯೆ ಸಂಭವಿಸಿದ್ದು [ಭಾರ.-ಅನು ೯]

(v) ಪರ್ವತ ವಂಶದ ಅರಸು ಪಾಂಡವರ ಪರವಾಗಿ ಹೋರಾಡಿ, ಹದಿ ನಾರನೆಯ ದಿನದ ಯುದ್ಧದಲ್ಲಿ ದುರ್ಯೋಧನನ ತಮ್ಮನಾದ ದುರ್ಮುಖನಿಂದ ಹತ ನಾದ [ಭಾರ -ಕರ್ಣ. ೩]

**ಜನಸ್ಥಾನ** —ದಂಡಕಾರಣ್ಯದಲ್ಲಿ ಒಂದು ಭಾಗ ಖರನು ಇಲ್ಲಿ ಹದಿನಾಲ್ಕು ಸಾವಿರ ಮಂದಿ ರಾಕ್ಷಸರೊಂದಿಗೆ ವಾಸವಾಗಿದ್ದ. ನೋಡು—ಖರ. ಇದು ಪೂರ್ವ ಕಾಲದಲ್ಲಿ ದೊಡ್ಡ ಅರಣ್ಯವಾಗಿತ್ತು. ಈಗ ಔರಂಗಾಬಾದ್ ಎಂಬ ಪಟ್ಟಣವನ್ನು ಕಟ್ಟಿದ್ದಾರೆ [ಶಲ್ಯ ೪೦. ವನ. ೨೭೮ ರಾಮಾ -ಅರ. ೧೮].

**ಜನಲೋಕ.**—ಭೂ ಲೋಕದ ಮೇಲ್ಭಾಗದಲ್ಲಿರುವ ಏಳು ಲೋಕಗಳಲ್ಲಿ ಐದನೆ ಯದು. ಬ್ರಹ್ಮಮಾನಸಪುತ್ರರಾದ ಸನಕಾದಿಗಳು ಇಲ್ಲಿ ವಾಸಮಾಡುತ್ತಾರೆ [ದೇ.ಭಾ.-೮, ೧೮].

**ಜಂತು.**—ಸೋಮಕ ರಾಜನ ಮಗ. ಸೋಮಕನು ಅನೇಕ ಮಂದಿ ಸ್ತ್ರೀಯರನ್ನು ಮದುವೆಯಾಗಿದ್ದರೂ ಇವನೊಬ್ಬನೇ ಮಗ. ರಾಜವನಿತೆಯರೆಲ್ಲರೂ ಇವನನ್ನು ತುಂಬ ಅಕ್ಕರೆಯಿಂದ ಕಾಣುತ್ತಿದ್ದರು. ಒಂದು ದಿನ ಜಂತುಕುಮಾರನನ್ನು ಒಂದು ಇರುವೆ ಕಚ್ಚಿದ ಕಾರಣ, ಇವನು ಅಳುತ್ತಿದ್ದುದನ್ನು ಕಂಡು ಅವರೆಲ್ಲರೂ "ಇಂತಹ ಹುಡುಗನನ್ನು ನೆಚ್ಚಿ ಬದುಕಿರುವುದಾದರೂ ಹೇಗೆ ?" ಎಂದು ಚಿಂತಿಸುತ್ತಿದ್ದರು. ಆಗ ಪುರೋಹಿತ ಅಲ್ಲಿಗೆ ಬಂದು "ಅಯ್ಯಾ, ಈ ಹುಡುಗನನ್ನೇ ಪಶುವನ್ನಾಗಿ ಮಾಡಿ ಆಹುತಿ ಕೊಟ್ಟರೆ ನಿನಗೆ ಅನೇಕ ಮಂದಿ ಮಕ್ಕಳಾಗುವರು" ಎಂದ. ಸೋಮಕನು ಅಂತೆಯೇ ಮಾಡಿ ಅನೇಕ ಪುತ್ರರನ್ನು ಪಡೆದ [ಭಾರ.-ವನ ೧೨೮].

**ಜಮದಗ್ನಿ**—ಒಬ್ಬ ಋಷಿ. ಭೃಗುವಂಶೋತ್ಪನ್ನನಾದ ಋಚೀಕ ಮುನಿಯಿಂದ ಗಾಧಿ ರಾಜನ ಮಗಳಾದ ಸತ್ಯವತಿಯಲ್ಲಿ ಜನಿಸಿದವ. ವಿಶ್ವಾಮಿತ್ರನ ಸೋದರಳಿಯ [ಆದಿ ೬೭ ಅನು ೭]. ಜಮದಗ್ನಿ ಹುಟ್ಟಿದ ಕಥೆ ನೋಡು—ಋಚೀಕ [ವನ ೧೧೬ ಅನು ೭]. ಈತನು ಪ್ರಸೇನಜಿತನ ಮಗಳಾದ ರೇಣುಕೆಯನ್ನು ಮದುವೆಯಾಗಿ ರುಮಣ್ವಂತ, ಸುಷೇಣ, ವಸು, ವಿಶ್ವಾವಸು, ಪರಶುರಾಮ ಎಂಬ ಐವರು ಪುತ್ರರನ್ನು ಪಡೆದ [ವನ ೧೧೭ ಆದಿ ೬೭]. ರೇಣುಕೆ ಒಮ್ಮೆ ಸ್ನಾನಾರ್ಥವಾಗಿ ನದಿಗೆ ಹೋಗಿದ್ದಾಗ ಅಲ್ಲಿ ತನ್ನ ಮಡದಿಯರ ಸಂಗಡ ಜಲಕೇಳಿಯಲ್ಲಿದ್ದ ಚಿತ್ರರಥನೆಂಬ ಗಂಧರ್ವನನ್ನು ಕಂಡು, ಮೋಹಭ್ರಾಂತೆಯಾಗಿ, ಅಲ್ಲಿಯೇ ಕೆಲಕಾಲವಿದ್ದು ಹೊತ್ತುಮೀರಿ ಆಶ್ರಮಕ್ಕೆ ಹೋದಳು. ಜಮದಗ್ನಿ ಈಕೆಯ ಚಾರಿತ್ರದ ವಿಷಯವಾಗಿ ಶಂಕಿಸಿ, ಆಕೆಯ ಕೊರಳನ್ನು ಕಡಿಯುವ ಹಾಗೆ ತನ್ನ ನಾಲ್ವರು ಮಕ್ಕಳಿಗೂ ಹೇಳಲಾಗಿ ಆ ನಾಲ್ವರೂ ತಂದೆಯ ಅಪ್ಪಣೆಯನ್ನು ಅಸಡ್ಡೆ ಮಾಡಿದರು. ಆಗ ಅವರನ್ನು ಜಡರಾಗುವ ಹಾಗೆ ಶಪಿಸಿ, ಪರಶುರಾಮನಿಗೆ ಹೇಳಿದ. ತನ್ನ ನಾಲ್ವರು ಅಣ್ಣಂದಿರಿಗೆ ಒದಗಿದ ದುರ್ಗತಿಯನ್ನು ನೋಡಿ, ಪರಶುರಾಮ ಒಡನೆಯೇ ತಂದೆಯ ಅಪ್ಪಣೆಯನ್ನು ನೆರವೇರಿಸಿ ಬಂದು, ತಂದೆಗೆ ನಮಸ್ಕರಿಸಿದ. ಸಂತುಷ್ಟನಾದ ಜಮದಗ್ನಿ ವರವನ್ನು ಬೇಡುವಂತೆ ಹೇಳಲಾಗಿ, ಪರಶುರಾಮನು, ಜನನಿಯನ್ನು ಬದುಕಿಸಿಕೊಡಬೇಕೆಂದಾಗಿಯೂ ತನ್ನ ನಾಲ್ವರು ಅಣ್ಣಂದಿರೂ ಪೂರ್ವಸ್ಥಿತಿಯನ್ನು ಪಡೆಯಬೇಕೆಂತಲೂ, ಜಮದಗ್ನಿ ಕೋಪವನ್ನು ಬಿಡಬೇಕೆಂದಾಗಿಯೂ ಕೇಳಿಕೊಂಡ. ಜಮದಗ್ನಿ ಇದಕ್ಕೆಲ್ಲಾ ಸಮ್ಮತಿಸಿದನು [ಭಾರ.-ವನ ೧೧೬]. ನೋಡು—ಕಾರ್ತವೀರ್ಯಾರ್ಜುನ, ಕ್ರೋಧ. ಕಡೆಗೆ ಜಮದಗ್ನಿ ಕಾರ್ತವೀರ್ಯನ ಮಗನಾದ ಶೂರ (ಶೂರಸೇನ) ರಾಜನಿಂದ ಹತನಾದ [ಭಾರ.-

ವನ. ೧೧೬]. ಈತನು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಸಪ್ತರ್ಷಿ ಗಳಲ್ಲಿ ಒಬ್ಬ. ಗೋತ್ರಪ್ರವರ್ತಕ.[ಭಾಗ.-೮, ೧೩].

**ಜಮ್ಬುಮಾಲಿ.**—(i) ರಾವಣನ ಮಂತ್ರಿಯಾದ ಪ್ರಹಸ್ತನ ಮಗ. ಹನೂಮಂತ ಅಶೋಕವನವನ್ನು ಹಾಳುಮಾಡಿದಾಗ ಆತನನ್ನು ಹಿಡಿದುತರುವಂತೆ ರಾವಣನಿಂದ ಪ್ರೇರಿತನಾಗಿ ಹನೂಮಂತನೊಡನೆ ಯುದ್ಧಕ್ಕೆ ಹೋಗಿ ಆತನಿಂದ ಹತನಾದ [ರಾಮಾ.-ಸುಂ. ೪೩, ೪೪].

(ii) ಲಂಕೆಯೊಳಗಣ ಮತ್ತೊಬ್ಬ ರಾಕ್ಷಸ. ರಾಮಾಯಣ ಯುದ್ಧದಲ್ಲಿ ಹನೂಮಂತನಿಂದ ಹತನಾದ [ರಾಮಾ.-ಯುದ್ಧ. ೪೩].

**ಜಮ್ಬೂ.**—(i) ಭೂಮಿಯ ಸಪ್ತ ಮಹಾದ್ವೀಪಗಳಲ್ಲಿ ಮೊದಲನೆಯದು ಇದು ಮೇರುಪರ್ವತದ ಸುತ್ತಲೂ ಗುಂಡಾಗಿದೆ ಇದರ ನಡುವೆ ಇರತಕ್ಕ ಮೇರು ಪರ್ವತದ ಸುತ್ತಲೂ ಭೂಮಿ ಇದೆ. ಇದನ್ನು ಲವಣಸಮುದ್ರ ಸುತ್ತಿಕೊಂಡಿದೆ ಸೃಷ್ಟಿಯ ಆದಿಯಲ್ಲಿ ಪ್ರಿಯವ್ರತ ರಾಜನ ಮಗನಾದ ಆಗ್ನೀಧ್ರನು ಇದನ್ನು ಪಾಲಿಸುತ್ತಿದ್ದ. ಆತನು ತನ್ನ ಅನಂತರದಲ್ಲಿ ಈ ಜಂಬೂ ದ್ವೀಪವನ್ನು ಒಂಬತ್ತು ಖಂಡ ಗಳಾಗಿ ಭಾಗಮಾಡಿ ತನ್ನ ಒಂಬತ್ತು ಮಂದಿ ಮಕ್ಕಳಿಗೂ ಹಂಚಿಕೊಟ್ಟ ಅವರು ಪಾಲಿಸಿದ ಭೂ ಭಾಗಗಳು ಅವರವರ ಹೆಸರುಗಳಿಂದಲೇ ಅಜನಾಭವರ್ಷ, ಕಿಂಪುರುಷ ವರ್ಷ, ಹರಿವರ್ಷ, ಭದ್ರಾಶ್ವವರ್ಷ, ರಮ್ಯಕವರ್ಷ, ಹಿರಣ್ಮಯವರ್ಷ, ಕುರುವರ್ಷ, ಕೇತುಮಾಲವರ್ಷ, ಇಲಾವೃತವರ್ಷಗಳೆಂದು ಪ್ರಸಿದ್ಧಿಪಡೆದಿವೆ ಈ ದ್ವೀಪದಲ್ಲಿ ದೊಡ್ಡದಾದ ಒಂದು ಜಂಬೂ ವೃಕ್ಷ (ನೇರಿಲೆ ಮರ) ಇದೆ. ಈ ಕಾರಣದಿಂದಲೇ ಈ ದ್ವೀಪಕ್ಕೆ ಜಂಬೂ ದ್ವೀಪವೆಂದು ಹೆಸರಾಯಿತು ಇದನ್ನು ಸುದರ್ಶನ ದ್ವೀಪ ವೆಂತಲೂ ಕರೆಯುತ್ತಾರೆ. ಈ ಮರದ ಹಣ್ಣುಗಳನ್ನು ತಿಂದವರಿಗೆ ಮುಪ್ಪು ಸಾವುಗಳಿಲ್ಲ [ಸಭಾ. ೨೯]. ಜಂಬೂ ದ್ವೀಪವರ್ಣನೆ [ಭೀ ೫ ಭಾಗ -೫-೧೬ ವಾಯು.-೩೪. ವಿಷ್ಣು.-೨, ೧].

**ಜಮ್ಬೂ ನದೀ** —ಮೇಲೆ ಹೇಳಿದ ಜಂಬೂ ವೃಕ್ಷದ ಫಲರಸ ನದೀರೂಪವಾಗಿ ಹರಿದು ಜಂಬೂ ನದಿಯೆಂದು ಪ್ರಖ್ಯಾತಿಗೊಂಡಿದೆ ಇದರ ತೀರದಲ್ಲಿ ದೊರೆಯುವ ಚಿನ್ನಕ್ಕೂ ಜಾಂಬೂನದವೆಂತಲೇ ಹೆಸರು ಈ ನದಿಯ ಸುತ್ತಲೂ ಇರುವ ಭೂ ಭಾಗ ಸ್ವರ್ಗತುಲ್ಯವಾದದ್ದು ಇದಕ್ಕೆ ಜಂಬೂ ವನವೆಂದು ಹೆಸರು [ಭಾರ.-ಅನು. ೨೪೦].

**ಜಮ್ಬೂ ಮಾರ್ಗ.**—ಒಂದು ಕ್ಷೇತ್ರ. ಪುಷ್ಕರ ಕ್ಷೇತ್ರದ ಸಮೀಪದಲ್ಲಿದೆ. ಪಾಂಡವರು ಅರಣ್ಯವಾಸ ಮಾಡುತ್ತಿದ್ದಾಗ ಇಲ್ಲಿಗೂ ಹೋಗಿದ್ದರು [ಭಾರ.-ವನ. ೮೦, ೮೭].

**ಜಮ್ಬೂ ವನ.**—ನೋಡು—ಜಂಬೂ ನದೀ

**ಜಮ್ಭ.**—ಒಬ್ಬ ರಾಕ್ಷಸ ರಾಕ್ಷಸ ರಾಜನಾಗಿದ್ದ ತಾರಕಾಸುರನ ಹತ್ತು ಮಂದಿ ಪ್ರಧಾನರಲ್ಲಿ ಒಬ್ಬ. ಇವನ ಮಗಳಾದ ಕಯಾಧು ಹಿರಣ್ಯಕಶಿಪುವನ್ನು ಮದುವೆಯಾಗಿ ಪ್ರಹ್ಲಾದನೇ ಮೊದಲಾದ ನಾಲ್ವರು ಪುತ್ರರನ್ನು ಪಡೆದಳು. ಜಂಭನು ತಾರಕಾಸುರನ ಸಂಹಾರಕಾಲದಲ್ಲಿ ವಿಷ್ಣುವಿನಿಂದ ಹತನಾದ [ಭಾರ.-ವನ. ೨೮೬. ಭಾಗ.-೬, ೧೮]

**ಜಯ** —(i) ವಿಷ್ಣುವಿನ ದ್ವಾರಪಾಲಕರಲ್ಲಿ ಒಬ್ಬ. ಇವನೂ ಇವನ ಜತೆಗಾರನಾದ ವಿಜಯನೂ ವೈಕುಂಠದ ಬಾಗಿಲಿನಲ್ಲಿ ಕಾವಲಿರುತ್ತಿದ್ದರು. ಒಮ್ಮೆ ವಿಷ್ಣುವನ್ನು ನೋಡುವುದಕ್ಕೆ ಬಂದ ಸನಕಾದಿ ಮುನಿಗಳನ್ನು ಅಡ್ಡಗಿಸಿ, ಭೂ ಲೋಕದಲ್ಲಿ ರಾಕ್ಷಸರಾಗಿ ಜನಿಸುವಂತೆ ಶಾಪವನ್ನು ಪಡೆದು, ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪುಗಳೆಂಬ ಹೆಸರಿನಿಂದ ಹುಟ್ಟಿ ವರಾಹ, ನೃಸಿಂಹರಿಂದ ಹತರಾಗಿ, ಎರಡನೆಯ ಬಾರಿ ರಾವಣ, ಕುಂಭಕರ್ಣರಾಗಿ ಜನಿಸಿ ಶ್ರೀ ರಾಮನಿಂದ ಮಡಿದು, ಮೂರನೆಯ ಸಲ ಶಿಶುಪಾಲ, ದಂತವಕ್ತ್ರರಾಗಿ ಜನ್ಮವೆತ್ತಿ ಶ್ರೀ ಕೃಷ್ಣನಿಂದ ಹತರಾದರು [ಭಾಗ -೩, ೧೬]

(ii) ಮಹಾಭಾರತ ಗ್ರಂಥಕ್ಕೆ " ಜಯ "ವೆಂಬ ಹೆಸರು ಸಲ್ಲುತ್ತದೆ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ "ಜಯ "ಮುದೀರಯೇತ್ ॥

[ಸ್ವರ್ಗಾ ೫]

(iii) ಅಜ್ಞಾತವಾಸ ಸಮಯದಲ್ಲಿ ಯುಧಿಷ್ಠಿರನ ಗೂಢವಾದ ಹೆಸರು. ಮಿಕ್ಕ ಪಾಂಡವರು ಆತನನ್ನು ಈ ಹೆಸರಿನಿಂದಲೇ ಕರೆಯುತ್ತಿದ್ದರು [ವಿರಾ. ೭, ೨೭]

(iv) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ [ಭೀ. ೭೭] ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಇವನು ಭೀಮನಿಂದ ಮಡಿದ [ದ್ರೋ ೧೩೫]

(v) ಒಬ್ಬ ಅರಸು. ಉತ್ತಾನವಾದ ರಾಜನ ಮಗನಾದ ಶಿಷ್ಟರಾಜನಿಂದ ಅಗ್ನಿ ಪುತ್ರಿಯಾದ ಸುಚ್ಛಾಯೆಯಲ್ಲಿ ಜನಿಸಿದ ಆರು ಮಂದಿ ಮಕ್ಕಳಲ್ಲಿ ಒಬ್ಬ [ಮತ್ಸ್ಯ.-೪].

(vi) ವ್ಯಾಸ ಪುತ್ರನಾದ ಶುಕ ಮುನಿಯಿಂದ ಪಿತೃದೇವತೆಗಳ ಮಾನಸ ಪುತ್ರಿಯಾದ ಪೀವರಿಯಲ್ಲಿ ಜನಿಸಿದ ಐದು ಮಂದಿ ಪುತ್ರರಲ್ಲಿ ಒಬ್ಬ [ಭಾಗ.-೯-೨೧. ದೇ. ಭಾ -೧, ೧೯. ಮತ್ಸ್ಯ.-೧೫].

(vii) ಯದು ವಂಶದ ಸಾತ್ವತನ ಸಂತತಿಯವನಾದ ಸಾತ್ಯಕಿಯ ಹತ್ತು ಮಂದಿ ಪುತ್ರರಲ್ಲಿ ಹಿರಿಯವ. ಈತ ತನ್ನ ತಮ್ಮಂದಿರೊಂದಿಗೆ ಭಾರತ ಯುದ್ಧದಲ್ಲಿ

ಪಾಂಡವರ ಪರವಾಗಿ ಹೋರಾಡಿ, ನಾಲ್ಕನೆಯ ದಿವಸದ ಯುದ್ಧದಲ್ಲಿ ತನ್ನ ಒಂಬತ್ತು ಮಂದಿ ಒಡಹುಟ್ಟಿದವರೊಂದಿಗೆ ಭೂರಿಶ್ರವನಿಂದ ಹತನಾದ [ಭೀ. ೭೪].

(viii) ಹತ್ತನೆಯದಾದ ಬ್ರಹ್ಮಸಾವರ್ಣಿ ಮನ್ವಂತರದಲ್ಲಿದ್ದ ಸಪ್ತರ್ಷಿಗಳಲ್ಲಿ ಒಬ್ಬ [ಭಾಗ.-೮-೧೩].

(ix) ಪಾಂಡವ ಪಕ್ಷದ ಒಬ್ಬ ಅರಸು. ಹದಿನೇಳನೆಯ ದಿವಸದ ಯುದ್ಧದಲ್ಲಿ ಕರ್ಣನಿಂದ ಮಡಿದ [ಕರ್ಣ. ೫೬]

(x) ವಸುದೇವನ ಹತ್ತು ಮಂದಿ ಸಹೋದರರಲ್ಲಿ ಏಳನೆಯವನಾದ ಕಂಕನಿಂದ ಕರ್ಣಿಕೆಯೆಂಬಾಕೆಯಲ್ಲಿ ಜನಿಸಿದ ಕಿರಿಯ ಮಗ [ಆದಿ ೨೦೧]

(xi) ಶ್ರೀ ಕೃಷ್ಣನಿಂದ ಭದ್ರೆಯಲ್ಲಿ ಜನಿಸಿದ ಹಿರಿಯ ಮಗ ನೋಡು— ಕೃಷ್ಣ.

**ಜಯುತ್ಸೇನ** —(i) ಅಜ್ಞಾತವಾಸ ಸಮಯದಲ್ಲಿ ನಕುಲನ ಗೂಢವಾದ ಹೆಸರು [ವಿರಾ. ೭, ೨೭]

(ii) ಒಬ್ಬ ಅರಸು. ಚಂದ್ರ ವಂಶದ ಸಾರ್ವಭೌಮ ರಾಜನಿಂದ ಕೇಕಯ ರಾಜಪುತ್ರಿಯಾದ ಸುಂದರಾ ಎಂಬವಳಲ್ಲಿ ಜನಿಸಿದವ ಈತ ಸುಶ್ರವೆಯೆಂಬ ತರುಣಿಯನ್ನು ಮದುವೆಯಾಗಿ ಅಪರಾಚೀನನೆಂಬ ಪುತ್ರನನ್ನು ಪಡೆದ [ಆದಿ. ೬೩, ೬೮]

(iii) ಮಗಧ ದೇಶದ ಅರಸು. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಮೊದಲನೆಯ ದಿನದ ಯುದ್ಧದಲ್ಲಿಯೇ ಅಭಿಮನ್ಯುವಿನಿಂದ ಹತನಾದ [ಭೀ ೪೭].

**ಜಯದ್ಬಲ** —ಅಜ್ಞಾತವಾಸ ಕಾಲದಲ್ಲಿ ಸಹದೇವನ ಗೂಢವಾದ ಹೆಸರು [ವಿರಾ. ೭. ೨೭]

**ಜಯದ್ರಥ** — ಒಬ್ಬ ಅರಸು ಸಿಂಧು ದೇಶದ ಅರಸನಾದ ವೃದ್ಧಕ್ಷತ್ರನ ಮಗ. ಧೃತರಾಷ್ಟ್ರನ ಮಗಳಾದ ದುಶ್ಶಲೆಯನ್ನು ಮದುವೆಯಾಗಿದ್ದ [ಆದಿ ೬೮, ೧೩೧. ದ್ರೋ ೧೪೮]. ದ್ವಿಗುಣರಥ [ಉದ್ಯೋ ೧೭೫] ಇವನಿಗೆ ಅಂಗಾರಕ, ಕುಂಜರ, ಗುಪ್ತ, ಶತ್ರುಂಜಯ, ಸಂಜಯ, ಸುಪ್ರವೃದ್ಧ, ಪ್ರಭಂಕರ, ಭ್ರಮರ, ರವಿ, ಶೂರ, ಪ್ರತಾಪ, ಕುಹನ, ಬಲಾಕ, ಅನೀತಕವಿದಾರಣ ಮೊದಲಾಗಿ ಅನೇಕ ಮಂದಿ ತಮ್ಮಂದಿರಿದ್ದರು [ಭಾರ.-ವನ ೨೬೬] ಪಾಂಡವರು ಕಾಮ್ಯಕವನದಲ್ಲಿ ವಾಸ ಮಾಡುತ್ತಿದ್ದಾಗ, ಇವನು ಸಾಳ್ವ ರಾಜನ ಪುತ್ರಿಯ ಸ್ವಯಂವರಕ್ಕಾಗಿ ತನ್ನ ಸಹೋದರರನ್ನೂ, ತ್ರಿಗರ್ತ ರಾಜಪುತ್ರನನ್ನೂ, ಇಕ್ಷ್ವಾಕು ವಂಶದ ಸುಪುಷ್ಪಿತನೆಂಬ ಅರಸು ಮಗನನ್ನೂ, ಕುಳಿಂದ ರಾಜಪುತ್ರನನ್ನೂ ಸಂಗಡ ಕರೆದುಕೊಂಡು ಬಹಳ ಸೈನ್ಯದೊಂದಿಗೆ ಹೊರಟು ನಡುದಾರಿಯಲ್ಲಿ ಪಾಂಡವರು ವಾಸಮಾಡುತ್ತಿದ್ದ

ಆಶ್ರಮದ ಬಳಿಯಲ್ಲಿಯೇ ಬಿಡಾರಮಾಡಿದ್ದ. ಪಾಂಡವರು ಧೌಮ್ಯ ಮುನಿಯನ್ನು ದ್ರೌಪದಿಯ ನೈಗಾವಲಿಗಿಟ್ಟು ಎಲ್ಲರೂ ಬೇಟೆಗೆ ಹೋಗಿದ್ದಾಗ ಆಶ್ರಮದ ಬಾಗಿಲಲ್ಲಿ ನಿಂತಿದ್ದ ದ್ರೌಪದಿಯನ್ನು ಕಂಡು ಮೋಹಭರಿತನಾಗಿ, ಆಕೆ ಯಾರೆಂಬುದನ್ನು ತಿಳಿಯುವ ಉದ್ದೇಶದಿಂದ ತನ್ನ ಆಪ್ತಮಿತ್ರನಾದ ಕೋಟಿಕಾಸ್ಯನನ್ನು ಕಳುಹಿ, ಆತನ ಮೂಲಕ ಸಮಾಚಾರವನ್ನು ತಿಳಿದು, ಪಾಂಡವರ ಆಶ್ರಮವನ್ನು ಹೊಕ್ಕ. ದ್ರೌಪದಿ ಉಚಿತರೀತಿಯಿಂದ ಬರಮಾಡಿ ಕುಶಲಪ್ರಶ್ನಾದಿಗಳನ್ನು ನಡೆಯಿಸಿದಳು. ಕುಟಿಲಬುದ್ಧಿಯಾದ ಜಯದ್ರಥನು ತನ್ನ ಅಂತರಂಗವನ್ನು ಬಹಿರಂಗಪಡಿಸಲಾಗಿ, ದ್ರೌಪದಿ ಎಷ್ಟೋ ಬಗೆಯಿಂದ ತಿಳಿಯ ಹೇಳಿದಳು. ಜಯದ್ರಥನು ಬಲಾತ್ಕಾರದಿಂದ ಆಕೆಯನ್ನು ಎತ್ತಿಕೊಂಡು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಹೊರಟ. ಧೌಮ್ಯನೂ ರಥವನ್ನು ಹಿಂಬಾಲಿಸಿದ ಅಷ್ಟರಲ್ಲಿ ಪಾಂಡವರು ಆಶ್ರಮಕ್ಕೆ ಬಂದು, ಸುತ್ತಮುತ್ತಣ ಮುನಿಗಳಿಂದ ಸಮಾಚಾರವನ್ನು ತಿಳಿದರು. ಭೀಮನು ಒಡನೆಯೇ ಜಯದ್ರಥನನ್ನು ಸಂಧಿಸಿ, ಅವನ ಆಪ್ತಮಿತ್ರನಾದ ಕೋಟಿಕಾಸ್ಯನನ್ನು ಕೊಂದ. ಅಷ್ಟರಲ್ಲಿ ಯುಧಿಷ್ಠಿರನು ಭೀಮನನ್ನು ಕುರಿತು " ನಮ್ಮ ತಂಗಿಯಾದ ದುಶ್ಶಲೆಯನ್ನೂ ವೃದ್ಧರಾದ ಗಾಂಧಾರೀ ಧೃತರಾಷ್ಟ್ರರನ್ನೂ ಸಂಕಟಕ್ಕೆ ಗುರಿಪಡಿಸಬಾರದು. ಜಯದ್ರಥನನ್ನು ಮಾತ್ರ ಕೊಲ್ಲಬೇಡ ' ಎಂದು ಹೇಳಿದ. ಭೀಮ ಇದಕ್ಕೆ ಅನುಸಾರವಾಗಿಯೇ ಜಯದ್ರಥನಿಗೆ ಪಂಚಶಿಖೆಗಳನ್ನು ಕಲ್ಪಿಸಿ, ದ್ರೌಪದಿಯನ್ನು ಬಿಡಿಸಿಕೊಂಡು ಆಶ್ರಮಕ್ಕೆ ಬಂದ ಬಳಿಕ ಜಯದ್ರಥನು ಸ್ವಯಂವರಕ್ಕೆ ಹೋಗದೆ ಅಲ್ಲಿಂದ ತನ್ನ ಪಟ್ಟಣಕ್ಕೆ ಬಂದು, ಸೈನ್ಯವನ್ನೆಲ್ಲ ಅಲ್ಲಿಯೇ ಬಿಟ್ಟು, ಗಂಗಾದ್ವಾರದಲ್ಲಿ ಬಂದು ನಿಂತು ಶಿವನನ್ನು ಕುರಿತು ತೀವ್ರವಾಗಿ ತಪಸ್ಸುಮಾಡಿ, ಶಿವನು ಪ್ರತ್ಯಕ್ಷನಾಗಲು, ಐದು ಮಂದಿ ಪಾಂಡವರನ್ನೂ ತಾನೊಬ್ಬನೇ ಗೆಲ್ಲುವಂತೆ ವರವನ್ನು ಬೇಡಿಕೊಂಡ ಆದರೆ " ಅರ್ಜುನನ ಹೊರತು ಮಿಕ್ಕ ನಾಲ್ವರನ್ನೂ ನೀನು ಒಮ್ಮೆ ಮಾತ್ರ ಗೆಲ್ಲುವೆ " ಎಂಬುದಾಗಿ ವರವನ್ನಿತ್ತು ಶಿವನು ಕಣ್ಮರೆಯಾದ [ಭಾರ -ವನ ೨೬೮-೨೭೩ ದ್ರೋ ೪೨]. ಭಾರತ ಯುದ್ಧದ ಹದಿಮೂರನೆಯ ದಿನ ಅರ್ಜುನನು ಸಂಶಪ್ತಕರ ಯುದ್ಧಕ್ಕಾಗಿ ಬೇರೆ ಕಡೆ ಹೋಗಿದ್ದಾಗ, ದ್ರೋಣಾಚಾರ್ಯರು ಪದ್ಮವ್ಯೂಹವನ್ನು ರಚಿಸಿ, ಅಂದಿನ ದಿನದಲ್ಲಿ ಪಾಂಡವರ ಸೇನೆಯಲ್ಲಿ ಯಾವನಾದರೊಬ್ಬ ಮಹಾರಥನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದರು. ತರಳನಾದ ಅಭಿಮನ್ಯು ಯುಧಿಷ್ಠಿರನ ಸೂಚನೆಯ ಮೇರೆಗೆ ಅವರನ್ನೂ ತನ್ನ ಸಂಗಡ ಕರೆದುಕೊಂಡು ಚಕ್ರವ್ಯೂಹವನ್ನು ಭೇದಿಸಿ ಒಳಹೊಕ್ಕ. ಅಡ್ಡಲಾಗಿ ನಿಂತಿದ್ದ ಜಯದ್ರಥನು ಯುಧಿಷ್ಠಿರಾದಿಗಳಿಗೆ ಅವಕಾಶ ಕೊಡಲಿಲ್ಲ. ಚಕ್ರವ್ಯೂಹದ ಒಳಗಡೆ ಕರ್ಣ, ದುಶ್ಶಾಸನಾದಿಗಳು ಒಟ್ಟುಗೂಡಿ ಅಭಿಮನ್ಯು

ಕುಮಾರನನ್ನು ಕೊಂದುಬಿಟ್ಟರು. ಅಭಿಮನ್ಯುವಿನ ಕೊಲೆಯಲ್ಲಿ ಜಯದ್ರಥನೇ ಮುಖ್ಯ ಕಾರಣನಾಗಿದ್ದುದರಿಂದ "ನಾಳಿನ ಸಂಜೆಯೊಳಗಾಗಿ ನಾನು ಸೈಂಧವನ ರುಂಡವನ್ನು ಕೆಡಹದಿದ್ದರೆ ಅಗ್ನಿಪ್ರವೇಶ ಮಾಡುವೆನು" ಎಂಬುದಾಗಿ ಅರ್ಜುನನು ಪ್ರತಿಜ್ಞೆ ಮಾಡಿದುದನ್ನು ಕೇಳಿ ಹೆದರಿದ ಜಯದ್ರಥನು ಸೇನೆಯೊಂದಿಗೆ ತನ್ನ ಪಟ್ಟಣಕ್ಕೆ ಹೊರಟಿದ್ದ ದ್ರೋಣ, ದುರ್ಯೋಧನಾದಿಗಳು ಅಭಯವಿತ್ತು ಅವನನ್ನು ನಿಲ್ಲಿಸಿದರು [ದ್ರೋ ೭೩, ೭೪] ಮರುದಿನ ಬೆಳಗಾಗುತ್ತಲೇ ಆಚಾರ್ಯರು ವ್ಯೂಹದ ಪ್ರವೇಶಮಾರ್ಗದಲ್ಲಿ ಅಡ್ಡಲಾಗಿ ನಿಂತರು. ಅರ್ಜುನನು ರಥದಲ್ಲಿ ಕುಳಿತು ಬರುವಾಗ ಕೃಷ್ಣ ಅರ್ಜುನನನ್ನು ಕುರಿತು "ನೀನು ದ್ರೋಣನ ಸಂಗಡ ಯುದ್ಧ ಮಾಡುವುದು ಈಗ ಯುಕ್ತವಲ್ಲ"ವೆಂದು ಸೂಚಿಸಿದ. ಅರ್ಜುನನು ಅವರಲ್ಲಿಗೆ ಬಂದು ನಮಸ್ಕರಿಸಲಾಗಿ, ಆಚಾರ್ಯರು "ಶತ್ರುವಾಗಿರುವ ನಾನು ಅಡ್ಡಲಾಗಿ ನಿಂತಿರುವಲ್ಲಿ ನನ್ನನ್ನು ಜಯಿಸದೆ ನೀನು ಒಳಹುಗುವುದಾದರೂ ಹೇಗೆ ?" ಎಂದರು. ಆ ಮಾತಿಗೆ ಅರ್ಜುನನು "ಸ್ವಾಮಿ, ತಾವು ನನಗೆ ಗುರುಗಳು. ಹಗೆಯಲ್ಲ. ನಾನು ತಮಗೆ ಶಿಷ್ಯನಾದುದರಿಂದ ಪುತ್ರಸಮನು ತಮ್ಮನ್ನು ಗೆಲ್ಲಬಲ್ಲ ಪುರುಷನಾದರೂ ಲೋಕದಲ್ಲಿರುವನೇ "

ಗುರುರ್ಭವಾನ್ ನ ಮೇ ಶತ್ರುಃ ಶಿಷ್ಯಃ ಪುತ್ರಸಮೋಽಸ್ಮಿ ತೇ ।
ನ ಚಾಸ್ತಿ ಸ ಪುಮಾನ್ ಲೋಕೇ ಯಸ್ತ್ವಾಂ ಯುಧಿ ಪರಾಜಯೇತ್ ॥
[ದ್ರೋ ೯೧, ಶ್ಲೋ. ೩೪]

ಎಂಬುದಾಗಿ ಹೇಳಿ ವ್ಯೂಹವನ್ನು ಹೊಕ್ಕ ಎಷ್ಟು ಹುಡುಕಿದರೂ ಜಯದ್ರಥನು ಕಾಣಲಿಲ್ಲ ಬಳಿಕ ಯುಧಿಷ್ಠಿರಾದಿಗಳೂ ಸಾತ್ಯಕಿಯೂ ವ್ಯೂಹವನ್ನು ಹೊಕ್ಕು ಹುಡುಕತೊಡಗಿದರು ದುರ್ಯೋಧನನು ಜಯದ್ರಥನನ್ನು ಬಚ್ಚಿಟ್ಟ. ಬಳಿಕ ಯುಧಾಮನ್ಯು, ಉತ್ತಮೌಜ, ಭೀಮಸೇನ ಮುಂತಾದವರೂ ವ್ಯೂಹವನ್ನು ಹೊಕ್ಕು ಹುಡುಕತೊಡಗಿದರು ದುರ್ಯೋಧನನಿಗೆ ಭೀತಿ ಅಧಿಕವಾಗಿ, ಜಯದ್ರಥನನ್ನು ಬಚ್ಚಿಟ್ಟ ಕಡೆಗೆ ಹೋಗುವ ಮಾರ್ಗವನ್ನು ಅಡ್ಡಗಿಸಿ, ಅವನ ವೈಗಾವಲಿಗಾಗಿ ತಾನೇ ನಿಂತ [ದ್ರೋ ೯೯-೧೦೧] ಅರ್ಜುನ ದುರ್ಯೋಧನರಿಬ್ಬರೂ ತಮ್ಮ ತಮ್ಮ ಶಪಥವನ್ನು ನೆರವೇರಿಸಿಕೊಳ್ಳುವುದರಲ್ಲಿ ತಹತಹಪಡುತ್ತಿದ್ದರು ಇಷ್ಟರಲ್ಲಿ ಕೃಷ್ಣ ಮಾಯಾಂಧಕಾರವನ್ನು ಕಲ್ಪಿಸಿ, ಎರಡು ಸೇನೆಯವರಿಗೂ ಸೂರ್ಯಾಸ್ತವಾಯಿತೆಂಬ ಭ್ರಾಂತಿಯನ್ನುಂಟುಮಾಡಿದ. ಅರ್ಜುನನ ಮೋರೆ ಕಳೆಗುಂದಿತು. ಕೌರವರು ಆನಂದಪರವಶದಿಂದ ಮೆರೆಯತೊಡಗಿದರು ಅಷ್ಟರಲ್ಲಿ ಜಯದ್ರಥನು ಕಾಣಬರಲಾಗಿ, ಅರ್ಜುನನು ಅವನ ಶಿರವನ್ನು ಕರಿದು ಆ ರುಂಡವನ್ನು ವೃದ್ಧಕ್ಷತ್ರನ ತೊಡೆಯಮೇಲೆ ಬೀಳುವಂತೆ ಮಾಡಿದ (ನೋಡು—

ವೃದ್ಧಕ್ಷತ್ರ, ಕೋಟಿಕಾಸ್ಯ) ಜಯದ್ರಥನು ಹತನಾದ ಕೂಡಲೇ ಮರಳಿ ಸೂರ್ಯನು ಬೆಳಗತೊಡಗಿದ. ಕುರು ಪಾಂಡವರು ಶೋಕ, ಸಂತೋಷ ಸಮುದ್ರದಲ್ಲಿ ಈಸಾಡ ತೊಡಗಿದರು ಬಳಿಕ ದಿಟವಾಗಿಯೂ ಸೂರ್ಯನು ಮುಳುಗಿದ ಕೂಡಲೇ ಇತ್ತಂಡ ದವರೂ ತಮ್ಮ ತಮ್ಮ ಬಿಡಾರಗಳನ್ನು ಸೇರಿದರು [ದ್ರೋ ೧೪೭, ೧೪೮]. ಇವನ ಮಕ್ಕಳಲ್ಲಿ ಒಬ್ಬನು ದ್ರೌಪದೀ ಸ್ವಯಂವರ ಸಮಯದಲ್ಲಿ ಅರ್ಜುನನಿಂದ ಹತನಾದ [ಆದಿ ೨೧೮]. ಮತ್ತೊಬ್ಬ ಮಗನಾದ ಸುರಥನೆಂಬವನು, ಯುಧಿಷ್ಠಿರನ ಅಶ್ವ ಮೇಧ ಯಾಗಕ್ಕೆ ಮೊದಲು, ಅರ್ಜುನನು ತನ್ನಿಂದ ಕಪ್ಪಕಾಣಿಕೆಗಳನ್ನು ಕೊಂಡು ಹೋಗಲು ಬರುತ್ತಿರುವನೆಂಬ ಸುದ್ದಿಯನ್ನು ಕೇಳಿದೊಡನೆಯೇ ಪ್ರಾಣತ್ಯಾಗ ಮಾಡಿದ [ಅಶ್ವ ೭೮] ದ್ರೌಪದೀ ಜಯದ್ರಥರ ಸಂವಾದ [ವನ ೨೬೮]

**ಜಯನ್ತ.**—(i) ಇಂದ್ರನ ಮಗನು ಪೌಲೋಮಿ ಈತನ ಜನನಿ [ಆದಿ ೧೨೩]

(ii) ಪಾಂಚಾಲ ದೇಶದ ಅರಸು ಮಹಾ ರಥ [ಉದ್ಯೋ. ೧೭೧]

**ಜಯರಾತ**—ಒಬ್ಬ ಅರಸು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನೈದನೆಯ ದಿನ ಭೀಮನಿಂದ ಹತನಾದ [ದ್ರೋ ೧೫೬]

**ಜಯ ವಿಜಯರು.**—ನೋಡು—ಜಯ.

**ಜಯಸೂಚಕ ಚಿಹ್ನಗಳು**—[ಭೀ. ೩ ಶಾಂತಿ. ೨೦೨].

**ಜಯಸೇನ**—(i) ಅವಂತಿ ದೇಶದ ಅರಸು ಈತನು ವಸುದೇವನ ತಂಗಿ ಯಾದ ರಾಜಾಧಿದೇವಿಯನ್ನು ಮದುವೆಯಾಗಿ, ವಿಂದ, ಅನುವಿಂದರೆಂಬ ಪುತ್ರ ರನ್ನೂ ಮಿತ್ರವಿಂದೆಯೆಂಬ ಕನ್ಯೆಯನ್ನೂ ಪಡೆದ ಈ ಮಿತ್ರವಿಂದೆ ಶ್ರೀ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು [ಭಾಗ.-೧೦, ೫೮]. ನೋಡು—ಕೃಷ್ಣ

(ii) ಒಬ್ಬ ಅರಸು ಚಂದ್ರ ವಂಶದ ಸಾರ್ವಭೌಮ ರಾಜನ ಮಗ. ಇವ ನನ್ನು ಜಯತ್ಸೇನನೆಂದು ಕರೆಯುವುದೂ ಉಂಟು ನೋಡು—ಜಯತ್ಸೇನ [ಭಾರ -ಆದಿ ೬೩, ೬೮].

**ಜಯಾ.**—ಕೃಶಾಶ್ವ ಮುನಿಯಿಂದ ದಕ್ಷಪುತ್ರಿಯಾದ ಧಿಷಣೆಯಲ್ಲಿ ಜನಿಸಿದ ಇಬ್ಬರು ಪುತ್ರಿಯರಲ್ಲಿ ಒಬ್ಬಳು ನೋಡು—ಕೃಶಾಶ್ವ [ರಾಮಾ.-ಬಾಲ. ೨೧].

**ಜಯಾನೀಕ**—(i) ಪಾಂಚಾಲ ರಾಜನಾದ ದ್ರುಪದನ ಮಕ್ಕಳಲ್ಲಿ ಒಬ್ಬ. ಹದಿನೈದನೆಯ ದಿವಸದ ಯುದ್ಧದಲ್ಲಿ ಅಶ್ವತ್ಥಾಮನಿಂದ ಹತನಾದ [ಭಾರ.-ದ್ರೋ. ೧೫೭].

(ii) ಒಬ್ಬ ಅರಸು ಮತ್ಸ್ಯದೇಶಾಧಿಪನಾದ ವಿರಾಟನ ಸಹೋದರ, ಅಶ್ವತ್ಥಾಮನಿಂದ ಮಡಿದ [ದ್ರೋ. ೧೫೯].

**ಜಯಾಶ್ವ.**—(1) ಪಾಂಚಾಲ ರಾಜನ ಪುತ್ರ ಜಯಾನೀಕನ ಸಹೋದರ. ಅಶ್ವತ್ಥಾಮನಿಂದ ಹತನಾದ [ದ್ರೋ. ೧೫೭].

(II) ವಿರಾಟನ ಸಹೋದರ ಇವನೂ ಅಶ್ವತ್ಥಾಮನಿಂದಲೇ ಹತನಾದ [ದ್ರೋ. ೧೫೯].

**ಜಯೇಶ** —ಅಜ್ಞಾತವಾಸ ಸಮಯದಲ್ಲಿ ಭೀಮಸೇನನ ಗೂಢವಾದ ಹೆಸರು [ವಿರಾ. ೭, ೨೭].

**ಜರ.**—ಒಬ್ಬ ಬೇಡ. ಯಾದವರು ಯಮುನಾ ತೀರದಲ್ಲಿ ಪ್ರಭಾಸತೀರ್ಥದ ಬಳಿ, ಮದ್ಯಪಾನ ಮಾಡಿ, ಒಬ್ಬರನ್ನೊಬ್ಬರು ತಮ್ಮಲ್ಲಿ ತಾವೇ ಕೊಂದುಬಿದ್ದಿದ್ದನ್ನು ಕಂಡು, ಚಿಂತಾತುರನಾದ ಶ್ರೀ ಕೃಷ್ಣನು, ಒಂದು ಮರದ ಅಡಿಯಲ್ಲಿ ಕಾಲು ಚಾಚಿ ಕೊಂಡು ಮಲಗಿರುವಾಗ ಈ ಬೇಡನು ಶ್ರೀ ಕೃಷ್ಣನ ಚರಣವನ್ನು ದೂರದಿಂದ ನೋಡಿ ಜಿಂಕೆಯೆಂಬ ಭ್ರಾಂತಿಯಿಂದ ಬಾಣವನ್ನು ಎಸೆದ ಬಳಿಕ ಹತ್ತಿರಕ್ಕೆ ಬಂದು, ಭಯ ಭ್ರಾಂತನಾಗಿ ಕೃಷ್ಣನನ್ನು ಮರೆಹೊಕ್ಕು, ನಾನಾ ಪರಿಯಿಂದ ಬೇಡಿಕೊಂಡು, ಆತನ ಅನುಗ್ರಹದಿಂದ ಸದ್ಗತಿಯನ್ನೈದಿದನು [ಮೌಸ. ೫] ಹಿಂದೆ ತ್ರೇತಾಯುಗದಲ್ಲಿ ರಾಮನಿಂದ ಮರೆಯಾಗಿ ಹತನಾದ ವಾಲಿ, ದ್ವಾಪರಯುಗದಲ್ಲಿ ಬೇಡನ ರೂಪದಿಂದ ಹುಟ್ಟಿ, ಜಿಂಕೆಯೆಂಬ ಭಾವನೆಯಿಂದ ಕೃಷ್ಣನ ಮೇಲೆ ಬಾಣವನ್ನೆಸೆದು ತನ್ನ ಸೇಡನ್ನು ತೀರಿಸಿಕೊಂಡನು

**ಜರತ್ಕಾರು.**—(1) ಭೃಗು ವಂಶದ ಒಬ್ಬ ಮಹರ್ಷಿ ಆಸ್ತಿಕನ ತಂದೆ [ಆದಿ ೧೩, ೨೮] ಈತನು ನೈಷ್ಠಿಕ ಬ್ರಹ್ಮಚರ್ಯದಿಂದಲೇ ಜೀವವನ್ನು ಕೊನೆ ಗಾಣಿಸಬೇಕೆಂದಿದ್ದ ಒಂದು ದಿನ ತನ್ನ ಪಿತೃಗಳು ತಲೆಕೆಳಗಾಗಿ ಜೋಲು ಬಿದ್ದಿದ್ದುದನ್ನು ಕಂಡು "ಅಯ್ಯಾ, ನೀವು ಯಾರು? ಇಂತು ತಲೆಕೆಳಗಾಗಿ ಜೋಲಾಡುವುದಕ್ಕೆ ಕಾರಣವೇನು?" ಎಂಬುದಾಗಿ ಪ್ರಶ್ನೆ ಮಾಡಿದ ಆಗ ಆ ಪಿತೃಗಳು "ಅಯ್ಯಾ, ನಮ್ಮ ಅವಸ್ಥೆಯನ್ನು ಏನೆಂದು ಹೇಳೋಣ. ನಮ್ಮ ವಂಶದಲ್ಲಿ ಜರತ್ಕಾರುವೆಂಬವನು ಜನಿಸಿದ್ದಾನೆ ಅವನು ಮದುವೆ ಮಾಡಿ ಕೊಳ್ಳದಿರುವ ಕಾರಣ ಸಂತಾನಹೀನನಾದ ಆತನ ಮೂಲಕ ನಮಗೆ ಈ ಅವಸ್ಥೆ ಪ್ರಾಪ್ತವಾಗಿದೆ" ಎಂದರು. ಆಗ ಜರತ್ಕಾರು "ನಾನೇ ಆ ಜರತ್ಕಾರು. ನಿಮ್ಮನ್ನು ಈ ಅಧೋಗತಿಯಿಂದ ಪಾರುಮಾಡುತ್ತೇನೆ ಆದರೆ ನಾನು ನನ್ನ ಹೆಸರಿನ ಹುಡುಗಿ ಯನ್ನೇ ಮದುವೆಯಾಗುವೆನು" ಎನಲು ಪಿತೃದೇವತೆಗಳು ಅದಕ್ಕೆ ಸಮ್ಮತಿಸಿದರು. ಬಳಿಕ ಜರತ್ಕಾರು ಹುಡುಗಿಯನ್ನು ಹುಡುಕುತ್ತ ವಾಸುಕಿಯ ತಂಗಿ ಜರತ್ಕಾರು ವೆಂಬ ಹೆಸರಿನವಳೆಂಬುದನ್ನು ತಿಳಿದು ಆತನಲ್ಲಿಗೆ ಹೋಗಿ, ಆತನ ತಂಗಿಯನ್ನು ತನಗೆ ಕೊಡುವುದಾಗಿ ಕೇಳಿದ. ನಾಗ ರಾಜನಾದ ವಾಸುಕಿ ಸಮ್ಮತಿಸಿ ಮದುವೆ

ಮಾಡಿಕೊಟ್ಟ. ಬಳಿಕ ಜರತ್ಕಾರು ಆಕೆಯನ್ನು ಕರೆಹುಕೊಂಡು ತನ್ನ ಆಶ್ರಮವನ್ನು ಸೇರಿದ [ಭಾರ.-ಆದಿ ೪೫-೪೮].

(II) ನಾಗ ರಾಜನಾದ ವಾಸುಕಿಯ ಸಹೋದರಿ. ಮೇಲೆ ಹೇಳಿದ ಜರತ್ಕಾರು ಮುನಿಯ ಹೆಂಡತಿ ಆಸ್ತಿಕ ಮುನಿಯನ್ನು ಹೆತ್ತವಳು [ಭಾರ.-ಆದಿ. ೩೮, ೩೯, ೫೪] ಒಮ್ಮೆ ಸಂಧ್ಯಾ ಸಮಯದಲ್ಲಿ ಜರತ್ಕಾರು ನಿದ್ರಿಸುತ್ತಿದ್ದ ಸಂಧ್ಯಾ ಸಮಯ ಮೀರಿಹೋಗುವುದೆಂಬ ಭಯದಿಂದ ಈಕೆ ಹೆದರುತ್ತಲೇ ತನ್ನ ಪತಿಯನ್ನು ಎಚ್ಚರಗೊಳಿಸಿದಳು. ಜರತ್ಕಾರು ಮುನಿ ಎಚ್ಚತ್ತು ಕೋಪದಿಂದ, ತನ್ನ ಪತ್ನಿ ತನ್ನನ್ನು ಸ್ವಲ್ಪವೂ ಲೆಕ್ಕಿಸದೆ ಇಂತಹ ಅಪಮಾನಮಾಡಿದಳೆಂಬ ಕೋಪದಿಂದ ತಪಸ್ಸಿಗಾಗಿ ಅರಣ್ಯಕ್ಕೆ ಹೋದನು [ಆದಿ. ೧೩-೧೬, ೪೫-೪೭] ಉಗ್ರ ತಪಸ್ಸಿನಿಂದ ದೇಹವನ್ನು ಕೃಶಮಾಡಿದವನಾದುದರಿಂದ ಜರತ್ಕಾರುವೆಂದು ಹೆಸರು [ಆದಿ ೪೦]

**ಜರಾ** —(I) ಮುಪ್ಪು—ಅದರ ದೋಷಗಳು [ಆದಿ ೭೮]

(II) ಒಬ್ಬ ರಾಕ್ಷಸಿ ಜರಾಸಂಧನ ಉಪ ಮಾತೆ [ಸಭಾ. ೧೭]. ಇವಳು ಆಹಾರಾರ್ಥವಾಗಿ ಬೃಹದ್ರಥನ ಅರಮನೆಯ ಸುತ್ತಲೂ ತಿರುಗಾಡುತ್ತಿರುವಾಗ ತಿಪ್ಪೆಯಮೇಲೆ ಬಿದ್ದಿದ್ದ ಒಂದೇ ಶಿಶುವಿನ ಎರಡು ಸೀಳುಗಳನ್ನು ನೋಡಿ ತಿನ್ನಬೇಕೆಂಬ ಆಸೆಯಿಂದ ಆ ಎರಡು ಸೀಳುಗಳನ್ನೂ ತೆಗೆದು ಜೋಡಿಸುವಷ್ಟರಲ್ಲಿ ಅವೆರಡೂ ಸೇರಿ ಒಂದು ಪುರುಷ ಶಿಶುವಿನ ಆಕಾರವನ್ನು ಪಡೆದವು. ಕೂಡಲೇ ಶಿಶುವೂ ಅಳತೊಡಗಿತು ಜರೆ ಇದನ್ನು ಕಂಡು ಆಶ್ಚರ್ಯಭರಿತಳಾಗಿ, ದಿವ್ಯವಾದ ಸ್ತ್ರೀ ರೂಪವನ್ನು ಧರಿಸಿ, ರಾಜನಲ್ಲಿಗೆ ಬಂದು ಆ ಶಿಶುವನ್ನು ಅರ್ಪಣಮಾಡಿ, ತನಗೆ ಆಹಾರವನ್ನು ಕೊಡಿಸುವಂತೆ ಕೇಳಿಕೊಂಡಳು. ರಾಜನು ಸಂತೋಷದಿಂದ ಮಗುವನ್ನು ಎತ್ತಿಕೊಂಡು ರಾಣಿವಾಸಕ್ಕೆ ಕಳುಹಿ ಆ ಹೆಂಗಸಿಗೆ ಯಥೇಷ್ಟವಾಗಿ ಆಹಾರವನ್ನು ಕೊಡಿಸಿದ [ಸಭಾ ೧೮]. ಜರಾಸಂಧ ಹಿರಿಯವನಾದ ತರುವಾಯ ಶ್ರೀ ಕೃಷ್ಣನನ್ನು ಕೊಲ್ಲುವುದಕ್ಕಾಗಿ ಈ ಜರೆಯನ್ನು ಕಳುಹಿದ. ಆಗ ಬಲರಾಮನು ಸ್ಥೂಣಾಕರ್ಣಾಸ್ತ್ರದಿಂದ ಇವಳನ್ನು ಕೊಂದ [ದ್ರೋ ೧೮೨]. ಜರೆಯೆಂಬ ರಕ್ಕಸಿಯ ಸ್ವರೂಪ ವರ್ಣನ [ಸಭಾ. ೧೮].

**ಜರಾಸಂಧ** —ಮಗಧ ದೇಶಾಧಿಪತಿಯಾದ ಬೃಹದ್ರಥ ರಾಜನ ಮಗ. ಉಪರಿ ಚರವಸುವಿನ ಮೊಮ್ಮಗ [ಆದಿ ೨೦೧. ಸಭಾ ೧೮] ಬೃಹದ್ರಥನಿಗೆ ಬಹಳ ಕಾಲದವರೆಗೆ ಸಂತಾನವಿರಲಿಲ್ಲವಾಗಿ, ಒಂದು ದಿನ ಅರಣ್ಯಕ್ಕೆ ಹೋಗಿ ಒಂದು ಮಾವಿನ ಮರದ ಅಡಿಯಲ್ಲಿ ತಪೋನಿರತನಾಗಿದ್ದ ಚಂಡಕೌಶಿಕ ಮುನಿಯನ್ನು ಮರೆಹೊಕ್ಕು ತನ್ನ ಸ್ಥಿತಿಯನ್ನು ವಿವರಿಸಿದ. ಅಷ್ಟರಲ್ಲಿ ಆ ಮರದಿಂದ ಕಳಿಮಾಗಿದ ಒಂದು

ಮಾವಿನ ಹಣ್ಣು ಕೆಳಕ್ಕೆ ಬಿತ್ತು. ಮುನಿ ಆ ಹಣ್ಣನ್ನು ಅಭಿಮಂತ್ರಿಸಿ, ಬೃಹದ್ರಥನಿಗೆ ಕೊಟ್ಟು, ಆತನ ರಾಣಿಗೆ ಕೊಡುವುದಾಗಿ ಹೇಳಿ ಕಳುಹಿದ. ಬೃಹದ್ರಥ ಆ ಹಣ್ಣನ್ನು ತಂದು ಎರಡು ಹೋಳು ಮಾಡಿ, ತನ್ನ ಇಬ್ಬರು ಪತ್ನಿಯರಿಗೂ ಕೊಟ್ಟ ಇಬ್ಬರೂ ಗರ್ಭಧಾರಣಮಾಡಿ ಶಿಶುವಿನ ಎರಡು ಸೀಳುಗಳನ್ನು ಹೆತ್ತರು. ಈ ವಿಕಾರ ಶಿಶುವನ್ನು ಕಂಡು ಅವರಿಬ್ಬರೂ ತಮ್ಮ ದಾದಿಯರ ಮೂಲಕ ಆ ತುಂಡುಗಳನ್ನು ತಿಪ್ಪೆಯಲ್ಲಿ ಬಿಸಾಡಿದರು ಬಳಿಕ ಜರೆಯೆಂಬ ರಾಕ್ಷಸಿ ಆ ಎರಡು ಸೀಳುಗಳನ್ನೂ ಸಂಧಿಸಿ(ಜೋಡಿಸಿ)ದ್ದರಿಂದ ಜನಿಸಿದವನಾದ ಕಾರಣ ಜರಾಸಂಧನೆಂಬ ಹೆಸರು ಬಂತು. ನೋಡು—ಜರಾ [ಭಾರ -ಸಭಾ ೧೭ ಭಾಗ.-೯, ೨೨] ಜರಾಸಂಧನು ಪ್ರಾಪ್ತವಯಸ್ಕನಾದ ಕೂಡಲೇ ಬೃಹದ್ರಥನು ಜರಾಸಂಧನಿಗೆ ಪಟ್ಟಗಟ್ಟಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದ ಜರಾಸಂಧನು ದಿಗ್ವಿಜಯಮಾಡಿ ಶತ್ರುಗಳನ್ನೆಲ್ಲ ಗೆದ್ದು, ಅನೇಕ ಮಂದಿ ರಾಜಪುತ್ರರನ್ನು ಸೆರೆಯಲ್ಲಿರಿಸಿ, ನಿರ್ಭೀತನಾಗಿದ್ದ ಮಗಧ ದೇಶದಲ್ಲಿರುವ ಗಿರಿವ್ರಜ ಇವನ ರಾಜಧಾನಿಯಾಗಿತ್ತು. ಈ ಕಾರಣದಿಂದಲೇ ಇವನಿಗೆ ಮಾಗಧನೆಂದು ಹೆಸರು. ನೋಡು—ಗಿರಿವ್ರಜ [ಸಭಾ. ೨೧, ೨೫]. ಇವನಿಗೆ ಅಸ್ತಿ, ಪ್ರಾಪ್ತಿಯರೆಂಬ ಇಬ್ಬರು ಪುತ್ರಿಯರಿದ್ದರು. ಇವರಿಬ್ಬರನ್ನೂ ಕಂಸನಿಗೆ ಕೊಟ್ಟು ಮದುವೆಮಾಡಿದ್ದ ಶ್ರೀ ಕೃಷ್ಣ ಕಂಸನನ್ನು ಕೊಂದಕಾರಣ ಇವನು ಕೃಷ್ಣನನ್ನು ದ್ವೇಷಿಸತೊಡಗಿದ [ಸಭಾ. ೨೩]. ಇವನು ವಿಪ್ರಚಿತ್ತಿಯೆಂಬ ರಾಕ್ಷಸನ ಅಂಶದಿಂದ ಜನಿಸಿದವನು [ಆದಿ. ೬೮]. ಇವನ ಶೌರ್ಯವರ್ಣನೆ [ಸಭಾ. ೧೪. ದ್ರೋ. ೧೮೨] ಇವನು ಭೈರವೋಪಾಸಕನಾಗಿದ್ದುದರಿಂದ ಭೈರವ ಪ್ರೀತಿಗಾಗಿ ಪುರುಷಮೇಧವನ್ನು ಮಾಡಬೇಕೆಂಬ ಉದ್ದೇಶದಿಂದ ಎಂಬತ್ತಾರು ಸಾವಿರ ಮಂದಿ ರಾಜಪುತ್ರರನ್ನು ಒಟ್ಟುಗೂಡಿಸಿ, ಸೆರೆಯಲ್ಲಿಟ್ಟಿದ್ದ [ಸಭಾ ೧೫] ಜರಾಸಂಧನ ರಾಜ್ಯಾಭಿಷೇಕ [ಸಭಾ ೧೯] ಈ ರಾಜಪುತ್ರರೆಲ್ಲರೂ ರಹಸ್ಯವಾಗಿ ಶ್ರೀ ಕೃಷ್ಣನಿಗೆ ಹೇಳಿಕಳುಹಿಸಿ ತಮ್ಮ ಪ್ರಾಣವನ್ನು ಉಳಿಸಬೇಕೆಂಬುದಾಗಿ ಬೇಡಿಕೊಳ್ಳಲಾಗಿ ಕೃಷ್ಣ ಭೀಮಸೇನನಿಂದ ಇವನನ್ನು ಕೊಲ್ಲಿಸಿದ ನೋಡು—ಕೃಷ್ಣ, ಗೋಮಂತಕ [ಭಾರ -ಸಭಾ. ೨೪, ೨೫. ಭಾಗ -೧-೭೨]. ಇವನ ತರುವಾಯ ಕೃಷ್ಣನು ಇವನ ಮಗನಾದ ಸಹದೇವನಿಗೆ ರಾಜ್ಯದಲ್ಲಿ ಪಟ್ಟಗಟ್ಟಿದ [ಸಭಾ. ೨೫. ಭಾಗ.-೧೦, ೭೩]. ಈ ಸಹದೇವನು ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನಾಲ್ಕನೆಯ ದಿವಸದ ಯುದ್ಧದಲ್ಲಿ ದ್ರೋಣನಿಂದ ಹತನಾದ [ದ್ರೋ ೧೨೫]. ಈ ಸಹದೇವನ ಮಗನಾದ ಮೇಘಸಂಧಿ ಪಾಂಡವರ ಅಶ್ವಮೇಧ ಸಮಯದಲ್ಲಿ ಒತ್ತಾಸೆ ಮಾಡಿದ [ಅಶ್ವ. ೮೨]. ಜರಾಸಂಧನ ಪುತ್ರಿಯರಲ್ಲಿ ಒಬ್ಬಳು ಪಾಂಡು ಪುತ್ರನಾದ ಸಹದೇವನನ್ನು ಮದುವೆಯಾಗಿದ್ದಂತೆ ತೋರುತ್ತದೆ [ಆಶ್ರಮ ೧]. ಜರಾಸಂಧನಿಗೂ

ಕರ್ಣನಿಗೂ ಯುದ್ಧ [ಶಾಂತಿ ೫]. ಜರಾಸಂಧನ ವಂಶ ವರ್ಣನೆ [ಭಾಗ.-೯-೨೨ ಗರುಡ ೧೪೦] ಜರಾಸಂಧವಧ ಪರ್ವ [ಸಭಾ. ೨೦-೨೫]

**ಜರಿತಾ.**—ಒಂದು ಹೆಣ್ಣು ಹಕ್ಕಿ ಮಂದಪಾಲನೆಂಬ ಮುನಿ ಪಕ್ಷಿ ರೂಪ ದಿಂದಿದ್ದಾಗ ಜರಿತಾರಿ, ಸಾರಿಸೃಕ್ವ, ದ್ರೋಣ, ಸ್ತಂಬಮಿತ್ರರೆಂಬ ನಾಲ್ವರು ಪುತ್ರ ರನ್ನು ಈ ಹಕ್ಕಿಯಲ್ಲಿ ಪಡೆದ [ಆದಿ ೨೫೫]

**ಜರಿತಾರಿ**—ನೋಡು—ಜರಿತಾ [ಆದಿ ೨೫೮. ಅನು. ೫೩]

**ಜಲ**—ನೀರು ಪಂಚಭೂತಗಳಲ್ಲಿ ಎರಡನೆಯದು ಅದರ ಗುಣವರ್ಣನೆ [ವನ ೨೧೫ ಭೀ ೫ ಶಾಂತಿ ೨೫೬, ೨೫೮]

**ಜಲದಾನ ಪ್ರಶಂಸೆ**—[ಅನು ೧೦೦, ೧೦೨, ೧೦೩ ಅಶ್ವ. ೧೦೧]

**ಜಲಕ್ರೀಡಾ**—ಕೃಷ್ಣಾರ್ಜುನರು ತಮ್ಮ ಸ್ತ್ರೀ ಪರಿವಾರದೊಂದಿಗೆ ಯಮುನೆ ಯಲ್ಲಿ ಕ್ರೀಡಿಸಿದ್ದು ನೋಡು—ಚಿತ್ರರಥ, ಅಂಗಾರಪರ್ಣ [ಆದಿ. ೨೪೮].

**ಜಲನ್ಧರ**—ಒಬ್ಬ ಘೋರ ರಾಕ್ಷಸ. ಶಿವನು ಇಂದ್ರನ ಮೇಲೆ ಬಿಡಬೇಕೆಂದು ಧರಿಸಿದ್ದ ಕ್ರೋಧಾಗ್ನಿಯನ್ನು ಬೃಹಸ್ಪತಿಯು ಬೇಡಿಕೆಯಂತೆ ಲವಣ ಸಮುದ್ರದಲ್ಲಿ ಬಿಟ್ಟ ನೋಡು—ಜೀವ ಆ ಅಗ್ನಿಕಣ ಒಡನೆಯೇ ಒಂದು ಶಿಶು ರೂಪವನ್ನು ತಾಳಿ, ಗಟ್ಟಿಯಾಗಿ ಅಳತೊಡಗಿತು ದೇವತೆಗಳೆಲ್ಲರೂ ಇದೇನು ಚೋದ್ಯವೆಂದು ಭಯ ವಿಸ್ಮಯಭರಿತರಾಗಿ ಒಡನೆಯೇ ಆ ಮಗು ಅತ್ತ ಸ್ಥಳಕ್ಕೆ ಹೋಗಿ ನೋಡುವಲ್ಲಿ, ಸಾಗರನು ಈ ಶಿಶುವನ್ನು ತನ್ನ ಮಗನೆಂದು ಭಾವಿಸಿ ಅಕ್ಕರೆ ಯಿಂದ ಎತ್ತಿಕೊಂಡ ದೇವತೆಗಳೆಲ್ಲರೂ ಆ ಶಿಶುವಿನ ರೂಪವನ್ನು ಕಂಡು ಹೆದರಿ ಬ್ರಹ್ಮನಿಗೆ ತಿಳಿಸಿದರು. ಚತುರ್ಮುಖನು ಆ ಶಿಶುವನ್ನು ನೋಡುವುದಕ್ಕಾಗಿ ಸಮುದ್ರ ರಾಜನಲ್ಲಿಗೆ ಬಂದ ಸಮುದ್ರ ರಾಜ ತನ್ನ ಮಗನನ್ನು ಚತುರ್ಮುಖನಿಗೆ ತೋರಿಸಿ, ಅವನ ಜನ್ಮಕಾಲದ ಫಲವನ್ನು ತಿಳುಹಬೇಕೆಂದು ಬೇಡಿದ. ಆಗ ಚತು ರ್ಮುಖನು "ಅಯ್ಯಾ, ಇವನು ದೀರ್ಘ ಕಾಲ ಬದುಕತಕ್ಕವನಲ್ಲ. ಇವನಿಗೆ ಶಿವ ನಿಂದಲೇ ಮರಣವಲ್ಲದೆ ಬೇರೆ ಯಾರಿಂದಲೂ ಇವನು ಸಾಯನು" ಎಂದು ಹೇಳಿ ತೆರಳಿದ ಜಲಂಧರನು ಪ್ರಾಪ್ತವಯಸ್ಕನಾದ ಕೂಡಲೇ ಸಮುದ್ರ ರಾಜ ಕಾಲನೇಮಿ ಯೆಂಬ ರಕ್ಕಸನ ಮಗಳಾದ ವೃಂದೆಯೆಂಬ ಕನ್ಯೆಯನ್ನು ತಂದು ತನ್ನ ಮಗನಿಗೆ ಮದುವೆ ಮಾಡಿದ. ಒಮ್ಮೆ ಜಲಂಧರನು ರಾಕ್ಷಸ ಪರಿವಾರದೊಂದಿಗೆ ಒಡ್ಡೋಲಗ ದಲ್ಲಿರುವಾಗ, ರಾಕ್ಷಸ ಗುರುವಾದ ಶುಕ್ರಾಚಾರ್ಯರು ಅಲ್ಲಿಗೆ ಬಂದುದನ್ನು ಕಂಡು, ಜಲಂಧರನು ಅವರನ್ನು ತಕ್ಕ ರೀತಿಯಿಂದ ಮನ್ನಿಸಿ, ಅವರ ಬರುವಿಕೆಗೆ ಕಾರಣ ವೇನೆಂದು ಕೇಳಲಾಗಿ, ಶುಕ್ರಾಚಾರ್ಯರು "ಅಯ್ಯಾ, ಏನು ಹೇಳಲಿ ? ನೀನೊಬ್ಬ ಕುಲಗೇಡಿ. ನಿಮ್ಮ ತಂದೆಯಲ್ಲಿದ್ದ ರತ್ನಗಳನ್ನೆಲ್ಲ ಇಂದ್ರನು ಅಪಹರಿಸಿದ" ಎಂದು

ಪುಂತಾಗಿ ಒಕ್ಕಣಿಸಿದರು. ಜಲಂಧರ ಕೂಡಲೇ ಅವುಗಳನ್ನೆಲ್ಲ ತನಗೆ ಒಪ್ಪಿಸ ಬೇಕೆಂದು ಇಂದ್ರನಿಗೆ ಹೇಳಿಕಳುಹಿದ ಇಂದ್ರ ಸಮ್ಮತಿಸಲಿಲ್ಲ. ದೇವ ದಾನವರು ಯುದ್ಧಮಾಡತೊಡಗಿದರು. ಆಗ ದೇವತೆಗಳು ಸೋಲುವ ಸ್ಥಿತಿ ಬರುವಹಾಗಿತ್ತು. ಆಗ ವಿಷ್ಣು ಒಂದು ಯುಕ್ತಿಯನ್ನು ಮಾಡಿ, ಅವನ ಶಕ್ತಿ ಸಾಹಸಗಳಿಗೆ ಮೆಚ್ಚಿ ದವನಂತೆ ನಟಿಸಿ, ಅವನ ಪ್ರಾರ್ಥನಾನುಸಾರ ಜಲಂಧರನ ಅರಮನೆಯಲ್ಲಿ ಲಕ್ಷ್ಮಿ ಯೊಂದಿಗೆ ವಾಸಮಾಡುತ್ತಿದ್ದ ಆಗ್ಗ ಯುದ್ಧ ನಿಂತಿತು

ಮತ್ತೊಮ್ಮೆ ನಾರದ ಜಲಂಧರನಲ್ಲಿಗೆ ಬಂದ ಜಲಂಧರನು ಆತನನ್ನು ಗೌರವಿಸಿದ ಲೋಕಾಭಿರಾಮವಾಗಿ ಮಾತನಾಡುವಾಗ ನಾರದ ಜಲಂಧರನನ್ನು ಕಂಡು "ಅಯ್ಯಾ, ಎಲ್ಲವೂ ಅಂತಿರಲಿ. ನಿನ್ನ ಐಶ್ವರ್ಯಕ್ಕೆ ಎಣೆಯಿಲ್ಲ ದಿರುವುದು ದಿಟ ಆದರೆ ಮಾತ್ರ ಪಾರ್ವತಿಯಂತಹ ಮಡದಿಯಿಲ್ಲದ ಮೇಲೆ ನಿನ್ನ ಐಶ್ವರ್ಯ ಎಷ್ಟಿದ್ದರೇನು?" ಎಂದು ಮುಂತಾಗಿ ಪ್ರೋತ್ಸಾಹಿಸಿದ ಇದನ್ನು ಕೇಳಿ, ಜಲಂಧರ "ಪಾರ್ವತಿಯನ್ನು ಕೂಡಲೇ ತನಗೆ ಸಮರ್ಪಿಸಬೇಕು" ಎಂಬುದಾಗಿ ಶಿವನಿಗೆ ಹೇಳಿ ಕಳುಹಿದ ಶಿವನಿಗೆ ಸಿಟ್ಟು ಬಂದು, ಜಲಂಧರ ಯುದ್ಧದಲ್ಲಿ ಶಿವನಿಂದ ಹತನಾದ [ಶಿವ -ಶತರುದ್ರ ೩೦]

**ಜಲನ್ಧರಾ**—ಕಾಶಿ ರಾಜನ ಮಗಳು. ಪಾಂಡು ಪುತ್ರನಾದ ಭೀಮಸೇನನನ್ನು ಮದುವೆಯಾಗಿ ಶರ್ವತ್ರಾತನೆಂಬ ಮಗನನ್ನು ಪಡೆದಳು [ಆದಿ ೬೩]

**ಜಲಸನ್ಧ**—(i) ಒಬ್ಬ ಕ್ಷತ್ರಿಯ ಮಗಧ ದೇಶದ ಅರಸು ರಥವರನು [ಆದಿ ೬೦೧ ಉದ್ಯೋ ೧೬೭] ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನಾಲ್ಕನೆಯ ದಿವಸ ಸಾತ್ಯಕಿಯಿಂದ ಹತನಾದ [ದ್ರೋ ೧೧೫]

(ii) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ ಭೀಮನಿಂದ ಹತನಾದ [ಆದಿ ೬೮, ೧೩೧ ಭೀ ೬೪ ಕರ್ಣ ೮೮]

**ಜಲಸ್ತಮ್ಭನ**—ದುರ್ಯೋಧನನು ನೀರಿನಲ್ಲಿ ಮುಳುಗಿಕೊಂಡಿದ್ದುದು [ಉ. ೬೧. ಶಲ್ಯ ೩೦].

**ಜಹ್ನು**—(i) ಚಂದ್ರ ವಂಶದ ಭರತನ ಸಂತತಿಯಲ್ಲಿ ಜನಿಸಿದ ಮಿಥಿಲ ರಾಜನ ಮಗ. ಈತನ ಮಗ ಸಿಂಧುದ್ವೀಪ ರಾಜ ನೋಡು—ಸಿಂಧುದ್ವೀಪ [ಅನು. ೭].

(ii) ಒಬ್ಬ ಅರಸು ಚಂದ್ರ ವಂಶದ ಸುಹೋತ್ರ ರಾಜನ ಮಗನಾದ ಅಜ ಮಿಾಢ ರಾಜನಿಂದ ಕೇಶಿನಿಯೆಂಬವಳಲ್ಲಿ ಜನಿಸಿದವನು. ಈತನು ಕುಶಿಕನ ವಂಶಕ್ಕೆ ಮೂಲ ಪುರುಷ [ಆದಿ. ೧೦೧]. ಭಗೀರಥನ ಹಿಂದೆ ಬರುತ್ತಿದ್ದ ಗಂಗೆ ಈತನ ಯಜ್ಞಶಾಲೆಯನ್ನು ಕೊಚ್ಚಿಕೊಂಡು ಹೋಯಿತು. ಕ್ರುದ್ಧನಾದ ಜಹ್ನು ಆ ಗಂಗೆ ಯನ್ನು ಕುಡಿದು, ಭಗೀರಥನ ಸ್ತೋತ್ರದಿಂದ ಸಂತುಷ್ಟನಾಗಿ ಮರಳಿ ಗಂಗೆಯನ್ನು

ತನ್ನ ಕಿವಿಯಿಂದ ಬಿಟ್ಟ. ಈ ಕಾರಣದಿಂದಲೇ ಗಂಗೆಗೆ ಜಾಹ್ನವಿಯೆಂದು ಹೆಸರು. ನೋಡು—ಗಂಗಾ [ರಾಮಾ.-ಬಾಲ ೪೩ ಭಾರ -ಶಾಂತಿ. ೪೯ ವಾಯು -೯೧]

**ಜಾಜಲಿ.**—ಒಬ್ಬ ಮಹರ್ಷಿ. ನೋಡು—ತುಲಾಧರ.

**ಜಾನಕಿ.**—ನೋಡು—ಸೀತೆ, ಜನಕ.

**ಜಾನಪದಿ.**—ಒಬ್ಬ ಅಪ್ಸರಸಿ. ಶರದ್ವಂತ ಮುನಿ ತಪೋನಿರತನಾಗಿದ್ದಾಗ ಆತನ ನಿಯಮವನ್ನು ಭಂಗಗೊಳಿಸುವುದಕ್ಕಾಗಿ ಇಂದ್ರನಿಂದ ಪ್ರೇರಿತಳಾಗಿದ್ದಳು. ಈಕೆಯ ದರ್ಶನಮಾತ್ರದಿಂದಲೇ ಎದೆಗುಂದಿದ ಶರದ್ವಂತನು ಆ ಸ್ಥಳವನ್ನು ಬಿಟ್ಟು ಎದ್ದು ಹೋದ. ನೋಡು—ಕೃಪ, ಕೃಪೀ [ಆದಿ ೧೪೦ ಭಾಗ.-೯, ೨೧].

**ಜಾಬಾಲಿ** —(I) ವಿಶ್ವಾಮಿತ್ರನ ಮಕ್ಕಳಲ್ಲಿ ಒಬ್ಬ. ತುಲಾಧಾರನೆಂಬುದಾಗಿ ಪ್ರಸಿದ್ಧಿಪಡೆದ ಕಾಶೀಕ್ಷೇತ್ರವಾಸಿಯಾದ ಒಬ್ಬ ವರ್ತಕನ ಮೂಲಕ ಜ್ಞಾನೋಪದೇಶವನ್ನು ಪಡೆದ [ಶಾಂತಿ ೨೬೭, ೨೭೦]

(II) ಒಬ್ಬ ಮಹರ್ಷಿ. ದಶರಥನ ಆಸ್ಥಾನದಲ್ಲಿದ್ದ ಅಷ್ಟಪ್ರಧಾನ ಋತ್ವಿಜರಲ್ಲಿ ಒಬ್ಬ. ಶ್ರೀ ರಾಮನು ಸೀತಾ ಲಕ್ಷ್ಮಣರೊಂದಿಗೆ ಚಿತ್ರಕೂಟದಲ್ಲಿ ವಾಸ ಮಾಡುತ್ತಿದ್ದಾಗ, ಆತನನ್ನು ಮರಳಿ ಅಯೋಧ್ಯೆಗೆ ಕರೆತರುವ ಉದ್ದೇಶದಿಂದ ಚಿತ್ರಕೂಟಕ್ಕೆ ಹೋಗಿದ್ದ ಭರತನ ಸಂಗಡ ಈತನೂ ಹೋಗಿದ್ದ. ಭರತನ ಪ್ರಾರ್ಥನೆಯನ್ನು ಕೇಳಿ ಶ್ರೀ ರಾಮನು, ತಾನು ಪಿತೃವಾಕ್ಯವನ್ನು ಸಂಪೂರ್ಣವಾಗಿ ಹದಿನಾಲ್ಕು ವರ್ಷಗಳವರೆಗೆ ನೆರವೇರಿಸಿದಲ್ಲದೆ, ಅಯೋಧ್ಯೆಗೆ ಹಿಂದಿರುಗಲಾರೆನೆಂಬುದಾಗಿ ಹೇಳಿದ. ಆಗ ಜಾಬಾಲಿ ಹೇಗಾದರೂ ರಾಮನನ್ನು ಹಿಂದಕ್ಕೆ ಕರೆದುಕೊಂಡು ಹೋಗಲೇಬೇಕೆಂಬ ದೃಢವಾದ ಅಭಿಸಂಧಿಯಿಂದ "ಸತ್ತವನೂ, ಕಾಮುಕನೂ, ವೃದ್ಧನೂ ಎನಿಸಿದ ದಶರಥನ ಮಾತಿಗೆ ಬೆಲೆ ಕೊಡಲಾಗದು. ಮತ್ತು ಪರಲೋಕವೆಂದರೇನು ? ಪುಣ್ಯ ಪಾಪಗಳೆಲ್ಲಿವೆ ?" ಎಂದು ಮುಂತಾಗಿ ನಾಸ್ತಿಕವಾದ ಮಾಡಿ, ಶ್ರೀ ರಾಮನಿಂದ ಧಿಕ್ಕೃತನಾದ. ಬಳಿಕ ವಸಿಷ್ಠ ಮುನಿ ಜಾಬಾಲಿಯ ಆಶಯ ಅಂತಲ್ಲವೆಂಬುದನ್ನು ರಾಮನಿಗೆ ವಿವರಿಸಿ, ರಾಮನ ಅಭಿಪ್ರಾಯವೇ ನ್ಯಾಯವೂ, ಧರ್ಮವೂ, ಶ್ಲಾಘ್ಯವೂ ಆಹುದೆಂಬುದಾಗಿ ಹೇಳಿದ [ರಾಮಾ.-ಅಯೋ. ೧೦೮, ೧೦೯].

**ಜಾಮದಗ್ನ್ಯ.**—ಜಮದಗ್ನಿ ಮಹರ್ಷಿಯ ಮಗನು ಪರಶುರಾಮ. ನೋಡು—ಪರಶುರಾಮ.

**ಜಾಮಾತೃ** —ಅಳಿಯ. ಅತ್ತೆಗೆ ಅಳಿಯನ ವಿಷಯದಲ್ಲಿ ಮಮತೆ ಅತಿಶಯವಾದುದೆಂಬ ವಿಷಯ [ಆದಿ. ೧೩೦].

**ಜಾಮ್ಬವತಿ.**—ಋಕ್ಷ ರಾಜನಾದ ಜಾಂಬವಂತನ ಮಗಳು [ಭಾರ -ಸಭಾ. ೫೭]. ಜಾಂಬವತೀ ಕೃಷ್ಣರ ವಿವಾಹ [ಭಾಗ -೧೦ ೫೬ ವಿಷ್ಣು -೪-೧೩]. ಈಕೆಯಲ್ಲಿ ಜನಿಸಿದ ಮಗ ಸಾಂಬ [ಭಾಗ -೧೦-೬೧] ಶ್ರೀ ಕೃಷ್ಣ ನಿರ್ಯಾಣಾನಂತರ ಈಕೆ ಅಗ್ನಿಪ್ರವೇಶಮಾಡಿದ್ದು [ಮೌಸ. ೮].

**ಜಾಮ್ಬವನ್ತ.**—ಬ್ರಹ್ಮನು ಆಕಳಿಸಿದಾಗ ಆತನ ಬಾಯಿಂದ ಹೊರಬಂದವನು ಮಹಾ ಪರಾಕ್ರಮಸಂಪನ್ನ ಭಲ್ಲೂಕಗಳಿಗೆ ಅರಸು. ಪ್ರತಿಭಾಶಾಲಿಗಳಲ್ಲಿ ಅಗ್ರ ಗಣ್ಯ ದೇವ ದಾನವರು ಪಾಲ್ಗಡಲನ್ನು ಕಡೆಯುವುದಕ್ಕಿಂತಲೂ ಮೊದಲೇ ಜನಿಸಿ ದವನಾದುದರಿಂದ, ಎಷ್ಟೋ ಬಾರಿ ದೇವ ದಾನವ ಯುದ್ಧವನ್ನು ಕಣ್ಣಾರೆ ನೋಡಿದ. ಅಮೃತಮಥನ ಕಾಲದಲ್ಲಿ ದೇವತೆಗಳಿಗೆ ಒತ್ತಾಸೆ ಮಾಡಿ ಅಮೃತವನ್ನು ಸವಿದವ ನಾದುದರಿಂದ ಮಹಾ ಬಲಶಾಲಿಯಾಗಿದ್ದ ಬಲಿ ಚಕ್ರವರ್ತಿಯ ಯಜ್ಞದಲ್ಲಿ ಒಷಧಿಗಳ ಮೇಲ್ವಿಚಾರಣೆ ಈತನದಾಗಿದ್ದಿತು ಪ್ರಾಯದಲ್ಲಿ ಎಷ್ಟೋ ಬಾರಿ ಭೂ ಪ್ರದಕ್ಷಿಣವನ್ನು ಮಾಡಿದವ ಒಂದು ದಿನವಾದರೂ ಕೈಲಾಸಕ್ಕೆ ಹೋಗದೆ ಶಿವನನ್ನು ಸಂದರ್ಶಿಸದೆ ಇದ್ದವನಲ್ಲ ವಾಲಿ ಕಪಿ ರಾಜನಾದ ಬಳಿಕ ಆತನ ಸೇನಾಪತಿಗಳ ಮೇಲೆ ನಾಯಕನಾಗಿದ್ದು, ವಾಲಿಯ ತರುವಾಯ ಸುಗ್ರೀವನಲ್ಲಿಯೂ ಗೌರವ ಪಾತ್ರನಾಗಿದ್ದ ಹನೂಮದಾದಿಗಳು ಸೀತಾನ್ವೇಷಣಕ್ಕಾಗಿ ತೆಂಕಣ ದಿಕ್ಕಿಗೆ ಹೊರ ಟಾಗ ಈತನೂ ಅವರ ಸಂಗಡ ಹೋಗಿದ್ದ ಸಮುದ್ರವನ್ನು ದಾಟಲಾರದೆ ಕಪಿ ನಾಯಕರೆಲ್ಲರೂ ಸಮುದ್ರ ತೀರದಲ್ಲಿ ಪ್ರಾಯೋಪವೇಶ ಮಾಡಿದಾಗ ಈತ ಅವರನ್ನೆಲ್ಲ ಪ್ರೋತ್ಸಾಹಗೊಳಿಸಿ ತಾನು ತೊಂಬತ್ತು ಯೋಜನಗಳನ್ನು ದಾಟಬಲ್ಲೆನೆಂದ [ಕಿಷ್ಕಿ ೬೬] ಹನೂಮಂತನೊಬ್ಬನೇ ಸಮುದ್ರವನ್ನು ದಾಟಿ ಹಿಂದಿರುಗಿ ಬರತಕ್ಕವ ನೆಂಬುದಾಗಿ, ಹನೂಮಂತನ ಬಾಲ್ಯ ವೃತ್ತಾಂತವನ್ನೆಲ್ಲ ವಿವರಿಸಿ ಅವನನ್ನು ಹುರಿ ದುಂಬಿದ [ಕಿಷ್ಕಿ ೬೩] ರಾಮಾಯಣ ಯುದ್ಧದಲ್ಲಿ ಬಹಳವಾಗಿ ಹೋರಾಡಿ ಸಹಾಯಮಾಡಿದ [ಯುದ್ಧ. ೩೯] ರಾಮ ಲಕ್ಷ್ಮಣರು ನಾಗಪಾಶದಿಂದ ಬದ್ಧ ರಾಗಿರುವಾಗಲೂ, ಲಕ್ಷ್ಮಣನು ಅಷ್ಟಘಂಟಾಶಕ್ತಿಯಿಂದ ಮೂರ್ಛಿತನಾಗಿದ್ದಾಗಲೂ ತನ್ನ ಪ್ರತಿಭೆಯಿಂದ ಹೆಚ್ಚು ಮೆಚ್ಚುಗೆಯನ್ನು ಪಡೆದ. ದ್ವಾಪರ ಯುಗದಲ್ಲಿ ಶ್ರೀ ಕೃಷ್ಣನು ಪ್ರಸೇನನೊಂದಿಗೆ ಬೇಟೆಗೆ ಹೋಗಿದ್ದಾಗ ಒಂದು ಸಿಂಹ ಪ್ರಸೇನನನ್ನು ಕೊಂದು ಅವನ ಕೊರಳಲ್ಲಿದ್ದ ಸ್ಯಮಂತಕ ಮಣಿಯನ್ನು ಅಪಹರಿಸುತ್ತಿತ್ತು. ಜಾಂಬವಂತ ಆ ಸಿಂಹವನ್ನು ಕೊಂದು ಅದರ ವಶದಲ್ಲಿದ್ದ ರತ್ನವನ್ನು ತಾನು ಕೊಂಡುಯ್ದು ತನ್ನ ಗುಹೆಯಲ್ಲಿ ಮಗುವಿನ ತೊಟ್ಟಿಲಿಗೆ ಕಟ್ಟಿದ್ದ. ಇತ್ತ ಕೃಷ್ಣ ದ್ವಾರಕೆಗೆ ಒಬ್ಬನೇ ಹೋದ. ರತ್ನದ ಮೇಲಣ ಆಸೆಯಿಂದ ಕೃಷ್ಣನೇ ಪ್ರಸೇನ ನನ್ನು ಕೊಂದು ರತ್ನವನ್ನು ಅಪಹರಿಸಿದ್ದಾನೆಂಬುದಾಗಿ ಜನಾಪವಾದ ಹರಡಿತು,

ಕೃಷ್ಣ ಪ್ರಸೇನನನ್ನು ಹುಡುಕುತ್ತ ಬಂದು ಕ್ರಮವಾಗಿ ಪ್ರಸೇನನ ಶವವನ್ನೂ ಸಿಂಹದ ಹಜ್ಜೆಗಳನ್ನೂ, ಸತ್ತ ಸಿಂಹವನ್ನೂ, ಕರಡಿಯ ಹಜ್ಜೆಗಳನ್ನೂ ಗುರುತಿಸುತ್ತ ಒಂದು ಗವಿಯ ಬಳಿಗೆ ಬಂದು, ಅಲ್ಲಿಯೇ ನಿಂತು ಶಂಖವನ್ನೂದಿದ ಕೂಡಲೇ ರೋಷಾವೇಶಭರಿತನಾದ ಜಾಂಬವಂತ ಹೊರಬಂದ ಇಬ್ಬರೂ ಬಾಹುಯುದ್ಧ ಮಾಡಿದರು. ಕಡೆಗೆ ಜಾಂಬವಂತ ದಣಿದು ಕೃಷ್ಣನನ್ನು ಮರೆಹೊಕ್ಕು ಆ ರತ್ನವನ್ನೂ, ತನ್ನ ಪುತ್ರಿಕಾರತ್ನವಾದ ಜಾಂಬವತಿಯನ್ನೂ ಕೃಷ್ಣನಿಗೆ ಕೊಟ್ಟು ಕಳುಹಿದ [ಭಾಗ -೧೦, ೫೬, ೫೭] ಜಾಂಬವಂತನನ್ನು ಕುರಿತ ಕಥೆ [ಭಾಗ.-೧೦, ೫೬. ವಿಷ್ಣು -೪, ೧೩].

**ಜಿಕವತಿ** —ಉಶೀನರನ ಮಗಳು ಅಷ್ಟವಸುಗಳಲ್ಲಿ ಒಬ್ಬನಾದ ದ್ಯು ಎಂಬ ವಸುವಿನ ಹೆಂಡತಿಯ ಪ್ರಿಯಸಖಿ ವಸುಗಳು ಈಕೆಯ ಸಲುವಾಗಿಯೇ ವಸಿಷ್ಠನ ನಂದಿನೀ ಧೇನುವನ್ನು ಅಪಹರಿಸಹೋಗಿ, ಮಿಕ್ಕ ಏಳು ಮಂದಿ ವಸುಗಳೊಡನೆ ಭೂಲೋಕದಲ್ಲಿ ಜನಿಸುವ ಹಾಗೆ ಶಾಪವನ್ನು ಪಡೆದು, ಶಂತನು ಚಕ್ರವರ್ತಿಯಿಂದ ಗಂಗೆಯಲ್ಲಿ ಮಕ್ಕಳಾಗಿ ಜನಿಸಿದರು [ಆದಿ ೧೨೬] ನೋಡು—ಆಪ, ಅಷ್ಟವಸು.

**ಜಿಷ್ಣು** —(I) ಇಂದ್ರ (II) ಅರ್ಜುನನ ಹತ್ತು ಹೆಸರುಗಳಲ್ಲಿ ಒಂದು. ಎಲ್ಲೆಲ್ಲಿಯೂ ಜಯಶಾಲಿಯಾದ್ದರಿಂದ ಈ ಹೆಸರು ಆ ತಂದೆ ಮಕ್ಕಳಿಬ್ಬರಿಗೂ ಸಲ್ಲುತ್ತದೆ [ವಿರಾ ೪೩]

**ಜೀಮೂತ.**—(I) ವಿರಾಟನ ಆಸ್ಥಾನದಲ್ಲಿದ್ದ ಒಬ್ಬ ಜಟ್ಟಿ ಪಾಂಡವರ ಅಜ್ಞಾತವಾಸ ಸಮಯದಲ್ಲಿ ವಲಲ(ಭೀಮಸೇನ)ನಿಂದ ಹತನಾದ [ವಿರಾ ೧೫]

(II) ಉಶೀರಬೀಜವೆಂಬ ಕ್ಷೇತ್ರದಲ್ಲಿ ವಾಸಮಾಡುತ್ತಿದ್ದ ಒಬ್ಬ ಮಹರ್ಷಿ [ಉದ್ಯೋ ೧೧].

**ಜೀವ** —(I) ಜೀವಸ್ವರೂಪ ವರ್ಣನೆ [ಶಾಂತಿ. ೧೮೪] ಜೀವನಿಗಿರುವ ಪರತಂತ್ರತೆ [ಸ್ಕಾಂ ಮಾಹೇ ೪೯-೫೧ ಅನು ೧] ಜೀವನು ಗರ್ಭದಲ್ಲಿ ವಾಸಮಾಡುವ ವಿಧಾನ [ಆದಿ ೮೪ ಸ್ತ್ರೀ. ೪ ಅನು. ೧೭೩. ಅಶ್ವ. ೧೯ ಭಾಗ -೩-೩೧]. ಜೀವನು ದೇಹಕ್ಕಿಂತಲೂ ಭಿನ್ನನಾದವ [ಶಾಂತಿ ೧೮೫] ಜೀವನಿಗೂ ದೇಹಕ್ಕೂ ಇರುವ ಸಂಬಂಧ [ಶಾಂತಿ ३೦೯, ३೧೦]

(II) ದೇವತೆಗಳ ಗುರುವಾದ ಬೃಹಸ್ಪತ್ಯಾಚಾರ್ಯರ ನಾಮಾಂತರ. ಒಮ್ಮೆ ಇಂದ್ರನೂ ಬೃಹಸ್ಪತಿಯೂ ಪರಮೇಶ್ವರನನ್ನು ಸಂದರ್ಶಿಸುವ ಉದ್ದೇಶದಿಂದ ಕೈಲಾಸಕ್ಕೆ ಹೊರಟರು. ಶಿವ ಇಂದ್ರನ ಕೆಚ್ಚನ್ನು ಮುರಿಯುವ ಉದ್ದೇಶದಿಂದ ಅವಧೂತ ರೂಪವನ್ನು ಧರಿಸಿ, ದಾರಿಯಲ್ಲಿ ಅಡ್ಡಲಾಗಿ ನಿಂತಿದ್ದ. ಇಂದ್ರ ಈತನನ್ನು ಕಂಡು "ಏನಯ್ಯಾ, ನೀನು ಯಾರು? ಹೀಗೇಕೆ ದಾರಿಯಲ್ಲಿ ಅಡ್ಡಲಾಗಿ

ನಿಂತಿದ್ದೀಯೆ ? ಪರಮೇಶ್ವರ ಕೈಲಾಸದಲ್ಲಿಯೇ ಇದ್ದಾನೆಯೇ ? ಅಥವಾ ಮತ್ತೆಲ್ಲಿಗಾದರೂ ಬಿಜಮಾಡಿದ್ದಾನೆಯೇ ? " ಎಂದು ಮುಂತಾಗಿ ನಾಲ್ಕಾರು ಬಾರಿ ಪ್ರಶ್ನೆ ಮಾಡಿದ ಆ ಅವಧೂತ ಉತ್ತರ ಕೊಡಲಿಲ್ಲ. ಇಂದ್ರನಿಗೆ ಸಿಟ್ಟು ತಲೆಗೇರಿತು ನಾನು ಇಷ್ಟು ವಿಧದಿಂದ ಪ್ರಶ್ನೆಮಾಡಿದರೂ ನಿನಗೆ ಲಕ್ಷ್ಯವಿಲ್ಲವೇ ? ಇತ್ತ ನೋಡು. ನಾನೀಗಲೇ ನಿನ್ನನ್ನು ಕೊಲ್ಲುತ್ತೇನೆ. ನಿನ್ನನ್ನು ಯಾವನು ಬಂದು ಬಿಡಿಸುತ್ತಾನೆಯೋ ನೋಡುವೆನು—ಎನ್ನುತ್ತ ವಜ್ರಾಯುಧವನ್ನು ಮೇಲಕ್ಕೆ ಎತ್ತಿದ ಇಂದ್ರನ ತೋಳು ಎತ್ತಿದ್ದ ಹಾಗೆಯೇ ಕಟ್ಟಿಹೋಯಿತು ಶಿವನ ಫಾಲನೇತ್ರದಿಂದ ಕ್ರೋಧಾಗ್ನಿ ಹೊರಹೊಮ್ಮಿತು ಆಗ ಸಮೀಪದಲ್ಲಿದ್ದ ಬೃಹಸ್ಪತಿ " ಮಹಾಪ್ರಭೋ, ನಿನ್ನ ಭಕ್ತನ ವಿಷಯವಾಗಿ ಇಷ್ಟೊಂದು ಆಗ್ರಹವೇ ? ಮರೆಹೊಕ್ಕ ಇಂದ್ರನನ್ನು ಹೇಗಾದರೂ ಕಾಪಾಡಲೇಬೇಕು ಭಕ್ತವತ್ಸಲನೆಂಬ ಬಿರುದನ್ನು ಸ್ಥಿರಪಡಿಸಿಕೊಳ್ಳು " ಎಂದು ಮುಂತಾಗಿ ವಿನಯದಿಂದ ಕೈಕಟ್ಟಿಕೊಂಡು ಹೊಗಳಿದ. ಆಗ ಶಿವನು ಶಾಂತಿಯನ್ನು ವಹಿಸಿ—

ಇತ್ಯುಕ್ತೋ ಗುರುಣಾ ರುದ್ರೋ ಭಕ್ತವತ್ಸಲನಾಮಭಾಕ್ ।
ಪ್ರತ್ಯುವಾಚ ಪ್ರಸನ್ನಾತ್ಮಾ ಸುರೇಜ್ಯಂ ಪ್ರಣತಾರ್ತಿಹಾ ॥

ರುದ್ರ ಉವಾಚ —

ಪ್ರೀತಸ್ತೇಽಹಂ ಸುರಾಚಾರ್ಯ ! ದದಾಮಿ ವರಮುತ್ತಮಂ ।
ಇಂದ್ರಸ್ಯ ಜೀವದಾನೇನ " ಜೀವೇ "ತಿತ್ವಂ ಪ್ರಥಾಂ ವ್ರಜ ॥
ಸಮುದ್ಭೂತೋಽನಲೋ ಯೋಽಯಂ ಫಾಲನೇತ್ರಾತ್ಸುರಾ ಸಹಃ ।
ಏನಂ ತ್ಯಕ್ಷ್ಯಾಮ್ಯಹಂ ದೂರೇ ಯಥೇನ್ದ್ರಂ ನೈವ ಪೀಡಯೇತ್ ॥

ನಂದೀಶ್ವರ ಉವಾಚ.—

ಇತ್ಯುಕ್ತ್ವಾಥ ಕರೇ ಧೃತ್ವಾ ಸ್ವತೇಜೋಽನಲಮುದ್ಭುತಂ ।
ಫಾಲನೇತ್ರಸಮುದ್ಭೂತಂ ಪ್ರಾಕ್ಷಿಪಲ್ಲವಣಾಂಭಸಿ ॥
ಅಥೋ ಶಿವಸ್ಯ ತತ್ತೇಜೋ ಫಾಲನೇತ್ರಸಮುದ್ಭವಂ ।
ಕ್ಷಿಪ್ತಂ ಚ ಲವಣಾಂಭೋಧೌ ಸದ್ಯೋ ಬಾಲೋ ಬಭೂವ ಹ ॥
ಸ ಜಲಂಧರನಾಮಾಭೂತ್ ಸಿಂಧುಪುತ್ರೋಽಸುರೇಶ್ವರಃ ।
ತಂ ಜಘಾನ ಮಹೇಶಾನೋ ದೇವಪ್ರಾರ್ಥನಯಾ ಪ್ರಭುಃ ॥

[ಶಿವ.-ಶತರುದ್ರ ಖಂಡ, ೩೦].

ನೋಡು—ಜಲಂಧರ ಆಗ ಶಿವ ಬೃಹಸ್ಪತಿಯ ಮೊರೆಯನ್ನು ಲಾಲಿಸಿ, ಆತನನ್ನು ಕುರಿತು ಅಯ್ಯಾ, ಸುರಾಚಾರ್ಯನೇ ಕೇದಪಬೇಡ ನಿನಗೆ ನಾನು ವರವನ್ನು ಕೊಡುತ್ತೇನೆ. ಇಂತು ನೀನು ಇಂದ್ರನಿಗೆ ಜೀವದಾನ ಮಾಡಿದೆಯಾದುದರಿಂದ

ಇಂದು ಮೊದಲು ನೀನು "ಜೀನ"ನೆಂದು ಪ್ರಖ್ಯಾತಿಪಡೆಯುವೆ. ಮತ್ತು ನನ್ನ ಫಾಲನೇತ್ರದಿಂದ ಜನಿಸಿದ ಈ ಕ್ರೋಧಾಗ್ನಿಯನ್ನು ಇಂದ್ರನಿಗೆ ತೊಂದರೆಯಾಗದ ಹಾಗೆ ದೂರದಲ್ಲಿ ಬಿಡುತ್ತೇನೆಂದು ಹೇಳಿ ಆ ಕೋಪಾಗ್ನಿ ಕಣವನ್ನು ಕೈಯಲ್ಲಿ ಧರಿಸಿ ದೂರವಾಗಿ ಬಿಸುಟ ಅದು ಸಮುದ್ರದಲ್ಲಿ ಬಿದ್ದು ಜಲಂಧರನೆಂಬ ಹೆಸರಿನ ಒಂದು ರಾಕ್ಷಸ ಶಿಶುವಾಯಿತು [ಶಿವ-ಶತರುದ್ರ ೩೦].

**ಜೀವಲ.**—ಅಯೋಧ್ಯಾಧಿಪತಿಯಾಗಿದ್ದ ಋತುಪರ್ಣ ಮಹಾರಾಜನ ಸಾರಥಿ ನಳ ಬಾಹುಕನೆಂಬ ಹೆಸರಿನಿಂದ ಋತುಪರ್ಣನಲ್ಲಿ ಅಶ್ವಪಾಲನಾಗಿದ್ದಾಗ ಒಂದು ದಿನ ತನ್ನ ಮಡದಿ ಮಕ್ಕಳನ್ನೂ, ಪೂರ್ವಸ್ಥಿತಿಯನ್ನೂ ಸ್ಮರಿಸಿಕೊಂಡು ಗೋಳಾಡುತ್ತಿದ್ದುದನ್ನು ಕಂಡು, ಜೀವಲನು ನಳನ ಪೂರ್ವೋತ್ತರಗಳನ್ನು ವಿಚಾರಿಸಿ, ಮನ ಮರುಗಿ, ಸಮಯೋಚಿತವಾದ ಮಾತುಗಳಿಂದ ಆತನನ್ನು ಸಂತಯಿಸಿದ [ಭಾರ.-ವನ ೬೪].

**ಜೈಗೀಷವ್ಯ**—ಬಹಳ ಪುರಾತನ ಕಾಲದ ಒಬ್ಬ ಮಹರ್ಷಿ ಈತನು ಪಾರ್ವತಿಯ ಸಹೋದರಿಯಾದ ಏಕಪಾಟಲೆಯೆಂಬ ಕನ್ಯೆಯನ್ನು ಮದುವೆಯಾಗಿದ್ದ [ಹರಿ-೧, ೧೮ ಮತ್ಸ್ಯ-೧೭೯] ಜೈಗೀಷವ್ಯ ಒಮ್ಮೆ ಕಪಿಲ ಮಹರ್ಷಿಯನ್ನು ತನ್ನ ಸಂಗಡ ಕರೆದುಕೊಂಡು ಅಶ್ವಶಿರನೆಂಬ ಮಹಾರಾಜನ ಯಜ್ಞಶಾಲೆಗೆ ಹೋದ. ರಾಜ ಮುನಿವರ್ಯರಿಬ್ಬರನ್ನೂ ಉಚಿತರೀತಿಯಿಂದ ಬರಮಾಡಿಕೊಂಡು ಕುಳ್ಳಿರಿಸಿ, ಮಾತಾಡುತ್ತ "ಸ್ವಾಮಿ, ಭಗವಂತನಾದ ನಾರಾಯಣನನ್ನು ಸಂದರ್ಶಿಸಬೇಕಾದರೆ ಉಪಾಯವೇನು ?" ಎಂಬುದಾಗಿ ಬಹಳ ಕುತೂಹಲಭರಿತನಾಗಿ ಪ್ರಶ್ನೆಮಾಡಿದ ಆಗ ಅವರಿಬ್ಬರೂ ಏಕ ಕಾಲದಲ್ಲಿ ನಾವೇ ವಿಷ್ಣುಮೂರ್ತಿಗಳೆಂದರು ರಾಜನಿಗೆ ಇವರ ಮಾತಿನಲ್ಲಿ ನಂಬುಗೆ ಹುಟ್ಟಲಿಲ್ಲ. ಸ್ವಲ್ಪವಾಗಿ ಕೋಪವೂ ಬಂತು ಆ ಕೋಪವನ್ನು ನುಂಗಿಕೊಂಡು "ವಿಷ್ಣು ಶಂಖ, ಚಕ್ರ, ಗದಾ, ಶಾರ್ಙ್ಗ, ವನಮಾಲಾದಿಗಳಿಂದ ಶೋಭಿಸತಕ್ಕವ. ಗರುಡನ ಮೇಲೆ ಸಂಚರಿಸತಕ್ಕವ. ನಿಮ್ಮಲ್ಲಿ ಅಂತಹ ಚಿಹ್ನೆಗಳಲ್ಲಿ ಒಂದೂ ಕಾಣಬರುವುದಿಲ್ಲವಲ್ಲಾ" ಎಂದ. ಒಡನೆಯೇ ಕಪಿಲ ಮುನಿ ವಿಷ್ಣುವಾದ ಜೈಗೀಷವ್ಯ ಗರುಡನಾದ. ಆಗ ರಾಜ "ವಿಷ್ಣುವಿನ ನಾಭಿಕಮಲದಲ್ಲಿ ಬ್ರಹ್ಮನು ಇರುವನು" ಎಂದ. ಜೈಗೀಷವ್ಯನು ಕೂಡಲೇ ಚತುರ್ಮುಖನಾದ. ಅಲ್ಲಿಗೂ ಅಶ್ವಶಿರಸಿಗೆ ನಂಬಿಕೆ ಹುಟ್ಟಲಿಲ್ಲ. ಬಳಿಕ ಆ ಮುನಿಗಳಿಬ್ಬರೂ ಇದ್ದ ಕಡೆಯಲ್ಲಿಯೇ ಕಣ್ಮರೆಯಾದರು ಅಶ್ವಶಿರನ ಯಜ್ಞಶಾಲೆಯಲ್ಲಿ ಎಲ್ಲಿ ನೋಡಿದರೂ ಕ್ರೂರ ಮೃಗಗಳು ತುಂಬಿದುವು ಅರಸ ಭಯಭ್ರಾಂತನಾಗಿ ಬಗೆಬಗೆಯಿಂದ ಬೇಡಿಕೊಳ್ಳಲಾಗಿ, ಕಪಿಲ, ಜೈಗೀಷವ್ಯರಿಬ್ಬರೂ ಮರಳಿ ಮೈದೋರಿ "ಅಯ್ಯಾ, ಭಗವಂತ ಸರ್ವಾಂತರ್ಯಾಮಿ, ಆತನು ಇಂತಹ ಸ್ಥಳ

ದಲ್ಲಿಯೇ ಇಂತಹ ರೂಪದಿಂದಲೇ ಇರುತ್ತಾನೆಂದು ಹೇಳಲಾಗುವುದಿಲ್ಲ. ನೀನು ಸರ್ವಸವು ದೃಷ್ಟಿಯಿಂದ ನೋಡುವುದಾದರೆ ಭಗವಂತನಾದ ನಾರಾಯಣನು ನಿನ್ನ ವಶನಾಗುವನು" ಎಂಬುದಾಗಿ ಉಪದೇಶಿಸಿದನು [ಸಭಾ.-೧೧. ಅನು. ೪೯]. ಇಂತೆಯೇ ಜೈಗೀಷವ್ಯ ಮುನಿ ಮತ್ತೊಮ್ಮೆ ದೇವಲ ಮುನಿಗೆ ತನ್ನ ಯೋಗಪ್ರಭಾವ ವನ್ನು ತೋರಿದ [ಶಲ್ಯ. ೫೧]. ಅಸಿತ ಮುನಿಯೊಂದಿಗೆ ಬ್ರಾಹ್ಮಣನ ಧರ್ಮಗಳಾವು ವೆಂಬ ವಿಷಯದಲ್ಲಿ ಸಂವಾದ ಮಾಡಿದ [ಶಾಂತಿ ೨೩೬]

(ii) ಪರಾಶಕ್ತಿಯನ್ನು ಉಪಾಸನೆಮಾಡಿದ ಮಹಾಮಹಿಮನಾದ ಒಬ್ಬ ಮಹರ್ಷಿ [ದೇ.ಭಾಗ.-೯, ೪]

**ಜೈತ್ರ.**—ಶ್ರೀಕೃಷ್ಣನ ಭೃತ್ಯರಲ್ಲಿ ಒಬ್ಬ. ಜರಾಸಂಧನಲ್ಲಿ ಬಂದಿಗಳಾಗಿದ್ದ ರಾಜ ಪುತ್ರರು ತಮ್ಮ ದುರವಸ್ಥೆಯನ್ನು ಈತನ ಮೂಲಕ ಶ್ರೀಕೃಷ್ಣನಿಗೆ ತಿಳುಹಿ, ಹೇಗಾದರೂ ಸಾಹಸಮಾಡಿ ತಮ್ಮನ್ನು ಬದುಕಿಸಬೇಕೆಂಬುದಾಗಿ ಬೇಡಿಕೊಂಡರು [ಭಾಗ.-೧೦, ೭೧]

**ಜೈಮಿನಿ.**—ಒಬ್ಬ ಮಹರ್ಷಿ ಕೃಷ್ಣದ್ವೈಪಾಯನ ಮಹರ್ಷಿಯ ನಾಲ್ವರು ಪ್ರಧಾನ ಶಿಷ್ಯರಲ್ಲಿ ಒಬ್ಬ. ವ್ಯಾಸ ಮಹರ್ಷಿಯಲ್ಲಿ ಸಾಮ ವೇದವನ್ನು ಸಾಂಗೋ ಪಾಂಗವಾಗಿ ಅಧ್ಯಯನ ಮಾಡಿದ. ತನ್ನ ಸಹಪಾಠಿಗಳಲ್ಲಿ ಋಗ್ವೇದಾಧ್ಯಯನ ಸಂಪನ್ನನಾದ ಪೈಲ ಮುನಿ, ಯಜುರ್ವೇದಾಧ್ಯಾಯಿಯಾದ ವೈಶಂಪಾಯನ, ಅಥರ್ವವೇದ ನಿಷ್ಣಾತನಾದ ಸುಮಂತು ಇವರೊಂದಿಗೆ ಸೇರಿ ನಾಲ್ಕು ವೇದಗಳಿಗೂ ಸೂತ್ರಗಳನ್ನು ಬರೆದ ಕರ್ಮಕಾಂಡ ಪ್ರತಿಪಾದಕವಾದ ಪೂರ್ವಮೀಮಾಂಸಾ ಶಾಸ್ತ್ರವನ್ನು ರಚಿಸಿದ ನ್ಯಾಯಮಾಲಾವಿಸ್ತರ ಮುಂತಾದ ಇನ್ನೂ ಅನೇಕ ಗ್ರಂಥ ಗಳನ್ನು ಬರೆದ [ಭಾರ -ಆದಿ. ೬೪]. ಈತನು ಕುತ್ಸ ಮಹರ್ಷಿಯ ವಂಶದವನು ಜನಮೇಜಯನ ಸರ್ಪಸತ್ರದಲ್ಲಿ ಉದ್ಗಾತೃವಾಗಿದ್ದ (ಸಾಮಮಂತ್ರಗಳನ್ನು ಹೇಳ ತಕ್ಕವ) [ಆದಿ ೫೩ ಸಭಾ ೪ ಶಾಂತಿ ೪೭] ವ್ಯಾಸ ಮಹರ್ಷಿಯಿಂದ ಪ್ರಣೀತ ವಾದ ಜ್ಞಾನಕಾಂಡ ಸೂತ್ರಗಳನ್ನು ನೋಡಿ ಆವೆರಡು ಕಾಂಡಗಳಲ್ಲಿ ಕರ್ಮಕಾಂಡವೇ ಶ್ರೇಷ್ಠವೆಂಬುದಾಗಿ ವ್ಯಾಸ ಮುನಿಯೊಂದಿಗೆ ವಾದಮಾಡಿದ. ಈತನೂ ಒಂದು ಭಾರತವನ್ನು ರಚಿಸಿದ. ಅದರಲ್ಲಿ ಅಶ್ವಮೇಧಿಕ ಪರ್ವ ಮಾತ್ರ ಈಗ ದೊರೆ ಯುತ್ತದೆ.

**ಜ್ಞಾನ**—ಕರ್ಮಕ್ಕಿಂತಲೂ ಶ್ರೇಷ್ಠವೆನಿಸಿ, ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷಸಾಧನೆಗೆ ಮುಖ್ಯವಾದುದು [ಶಾಂತಿ ೧೯೯, ೨೪೨, ೨೪೪, ೨೪೫, ೨೫೪. ಅನು. ೨೨೭ ಅಶ್ವ. ೪೪]. ಜ್ಞಾನವನ್ನು ಸಂಪಾದಿಸುವ ಉಪಾಯಗಳು [ಅನು. ೭೪೩].

**ಜ್ಯೇಷ್ಠಾ** —(1) ಅಲಕ್ಷ್ಮಿ [ಆದಿ ೧೮] ಈಕೆಯ ಮಗ ಅಧರ್ಮ [ಆದಿ ೬೭]

(ii) ದಕ್ಷಬ್ರಹ್ಮನ ಮಗಳು. ಚಂದ್ರನ ಹೆಂಡತಿ [ಆದಿ ೬೭] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು

**ಜ್ಯೋತಿಷ್ಮಂತ** —ಪ್ರಿಯವ್ರತ ರಾಜನ ಮಗ ಇವನಿಗೆ ಹಿರಣ್ಯರೇತನೆಂಬುದು ನಾಮಾಂತರ. ಈತ ಕುಶದ್ವೀಪದ ಅರಸು [ಭಾಗ -೫, ೧]

**ಜ್ಯೋತಾಸ್ನಕಾಲೀ** —ಚಂದ್ರನ ಮಗಳು ವರುಣ ಪುತ್ರನಾದ ಪುಷ್ಕರನ ಹೆಂಡತಿ [ಉದ್ಯೋ ೯೮]

**ಜ್ವರ** —ರೋಗ ವಿಶೇಷ ಅದರ ಉತ್ಪತ್ತಿ [ಶಾಂತಿ ೨೮೯] ಶ್ರೀ ಕೃಷ್ಣನಿಗೂ ಜ್ವರಾಭಿಮಾನಿ ದೇವತೆಗೂ ಯುದ್ಧ [ಹರಿ -೨-೧೨೨, ೧೨೩]

**ಜ್ವಲನಾ** —ತಕ್ಷಕನ ಮಗಳು ಚಂದ್ರ ವಂಶದ ಋಚನೆಂಬ ಅರಸನಿಂದ ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಜನಿಸಿದ ಋಕ್ಷನೆಂಬನನನ್ನು ಮದುವೆಯಾಗಿ ಅಂತಿನಾರನೆಂಬ ಮಗನನ್ನು ಪಡೆದಳು [ಆದಿ ೬೩]

## ಡ

**ಡಮ್ಭ** —ಒಬ್ಬ ಅರಸು ಅವನ ಕಥೆ [ವಿರಾ ೫೩ ಉದ್ಯೋ ೯೬]

**ಡಿಬಿಕ (ಡಿಮ್ಭಕ)** —ಜರಾಸಂಧನ ಪ್ರಧಾನ ಮಂತ್ರಿಗಳಲ್ಲಿ ಒಬ್ಬ ಹಂಸ ಡಿಂಭಕರು ಸಹೋದರರು ಕರೂಶ ದೇಶದ ಅರಸರಾಗಿದ್ದರು ಇವರಿಬ್ಬರೂ ಶಸ್ತ್ರದಿಂದ ಹತರಾಗದಂತೆ ವರವನ್ನು ಪಡೆದಿದ್ದರು ಇವರ ಪರಾಕ್ರಮಕ್ಕೆ ಮೆಚ್ಚಿ ಜರಾಸಂಧ ಇವರಿಬ್ಬರನ್ನೂ ತನ್ನ ಪ್ರಧಾನರಾಗಿ ನಿಯಮಿಸಿದ್ದ ಒಮ್ಮೆ ಬಲರಾಮ ಕೃಷ್ಣರೊಂದಿಗೆ ಜರಾಸಂಧ ಯುದ್ಧಕ್ಕೆ ಹೋಗಿದ್ದಾಗ ಇವರಿಬ್ಬರೂ ಆತನ ಸಂಗಡ ಹೋಗಿದ್ದರು ಹಂಸ ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿರಲಾಗಿ ಅವನು ಸತ್ತು ಹೋದನೆಂಬ ಭ್ರಾಂತಿಯಿಂದ ಡಿಂಭಕ ಯಮುನೆಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿದ. ಈ ವರ್ತಮಾನವನ್ನು ಕೇಳಿ ಎಚ್ಚತ್ತ ಹಂಸನೂ ಯಮುನೆಯಲ್ಲಿ ದುಮ್ಮಿಕ್ಕಿ ದೇಹವನ್ನು ತೊರೆದ [ಸಭಾ ೧೪]

**ಡುಣ್ಡುಭಚರಿತ್ರ** —[ಆದಿ ೧೧]. ನೋಡು—ಖಗಮುಖ ಸಹಸ್ರಪಾದನೆಂಬ ಬ್ರಾಹ್ಮಣ ಮಿತ್ರಶಾಪದಿಂದ ಕೆರೆಯ ಹಾವಾಗಿದ್ದಾಗ (ಒಳ್ಳೆ) ಈ ಹೆಸರು ಒಮ್ಮೆ ರುರುವೆಂಬ ಮುನಿ ಇವನನ್ನು ಹೊಡೆಯುವುದಕ್ಕಾಗಿ ಕೋಲನ್ನು ಮೇಲಕ್ಕೆ ಎತ್ತಿದ ಕೂಡಲೇ ಡುಂಡುಭ ಮುನಿ ರೂಪವನ್ನು ತಾಳಿ "ಅಯ್ಯಾ, ನನ್ನನ್ನು ಏಕೆ ಹೊಡೆಯುವೆ ? ನಾನು ನಿನಗೆ ಮಾಡಿದ ಅಪಕಾರವೇನು ?" ಎಂದು ಪ್ರಶ್ನೆ ಮಾಡಿತು. ಆಗ ರುರು "ನನ್ನ ಹೆಂಡತಿ ಸರ್ಪದಂಶದಿಂದ ಮೃತಳಾದಳು, ಈ

ಕಾರಣದಿಂದ ನಾನು ಕಂಡ ಹಾವುಗಳನ್ನೆಲ್ಲ ಕೊಲ್ಲುತ್ತಿದ್ದೇನೆ ನೀನಾರು ? ನಾನು ಹೊಡೆಯಬಂದೊಡನೆಯೇ ಸರ್ಪರೂಪವನ್ನು ಬಿಟ್ಟು ಮುನಿ ರೂಪವನ್ನು ತಳೆದೆಯಲ್ಲವೇ ? ಇದಕ್ಕೇನು ಕಾರಣ ?'' ಎಂದು ಪ್ರಶ್ನೆಮಾಡಿದ. ಮುನಿ '' ನಾನು ಸಹಸ್ರಪಾದನೆಂಬವನು, ಸ್ನೇಹಿತನನ್ನು ತೃಣಸರ್ಪದಿಂದ ಹೆದರಿಸಿ ಆತನ ಶಾಪದಿಂದ ಕೆರೆಯ ಹಾವಾಗಿದ್ದು ಈಗ ನಿನ್ನ ಮೂಲಕ ಪೂರ್ವರೂಪವನ್ನು ಪಡೆದೆನು ಬ್ರಾಹ್ಮಣನಿಗೆ ಅಹಿಂಸೆ ಮುಖ್ಯವಾದ ಧರ್ಮ. ಇನ್ನುಮೇಲಾದರೂ ನೀನು ಹಾವುಗಳನ್ನು ಕೊಲ್ಲಬಾರದು '' ಎಂದು ಹೇಳಿ ಅಲ್ಲಿಂದ ತೆರಳಿದ [ಆದಿ ೧೧]

## ತ

**ತಕ್ಷ.**—ಶ್ರೀ ರಾಮನ ತಮ್ಮನಾದ ಭರತನಿಂದ ಮಾಂಡವಿಯಲ್ಲಿ ಜನಿಸಿದ ಇಬ್ಬರು ಪುತ್ರರಲ್ಲಿ ಹಿರಿಯವ. ಇವನಿಗೆ ಕಾಳಿಕಾ, ಚಪಲಾ ಎಂಬುದಾಗಿ ಇಬ್ಬರು ಮಡದಿಯರು. ಇವನು ತಕ್ಷಶಿಲಾ (Taxila) ನಗರಿಯನ್ನು ನಿರ್ಮಿಸಿದ [ರಾಮಾ.-೭-೧೦೧ ಭಾರ.-ಆದಿ. ೩]

**ತಕ್ಷಕ.**—ಕಶ್ಯಪ ಮುನಿಯಿಂದ ಕದ್ರುವಿನಲ್ಲಿ ಜನಿಸಿದ ಸರ್ಪ ರಾಜ [ಆದಿ ೩೫. ಸ. ೯. ಉದ್ಯೋ. ೧೦೩]. ಉತ್ತಂಕ ಮಹರ್ಷಿ ಗುರುದಕ್ಷಿಣಾರ್ಥವಾಗಿ ಪೌಷ್ಯ ಮಹಾರಾಜನ ರಾಣಿಯನ್ನು ಬೇಡಿ, ಆಕೆಯ ಕುಂಡಲಗಳನ್ನು ತೆಗೆದುಕೊಂಡು ಬರುತ್ತಿದ್ದಾಗ, ತಕ್ಷಕನು ಕ್ಷಪಣಕ ವೇಷದಿಂದ ಬಂದು ಅವುಗಳನ್ನು ಅಪಹರಿಸಿದ [ಆದಿ ೩] ನೋಡು—ಉತ್ತಂಕ. ಇವನಿಗೆ ಅಶ್ವಸೇನ, ಶತ್ರುಸೇನರೆಂಬ ಇಬ್ಬರು ಮಕ್ಕಳಿದ್ದರು ನೋಡು—ಅಶ್ವಸೇನ [ಆದಿ ೩]. ಪರೀಕ್ಷಿತನು ಸರ್ಪದಷ್ಟನಾಗಿ ಸಾಯುವನೆಂಬುದನ್ನು ತಿಳಿದು ಅವನನ್ನು ಬದುಕಿಸುವ ಉದ್ದೇಶದಿಂದ ಹೊರಟಿದ್ದ ಕಶ್ಯಪ ಮುನಿಯನ್ನು ದಾರಿಯಲ್ಲಿ ಸಂಧಿಸಿ, ಆತನನ್ನು ಹಿಂದಕ್ಕೆ ಕಳುಹಿದ ನೋಡು—ಕಶ್ಯಪ [ಆದಿ. ೪೨, ೫೦]. ತಕ್ಷಕನು ಆಲದ ಮರದಮೇಲೆ ವಿಷವನ್ನು ಕಾರಿ ಅದನ್ನು ಸುಟ್ಟದ್ದು [ಆದಿ. ೪೩]. ಪರೀಕ್ಷಿತನನ್ನು ಕಚ್ಚಿ ಕೊಂದದ್ದು [ಆದಿ. ೪೭, ೫೦. ಭಾಗ -೧೨-೬. ದೇ. ಭಾಗ.-೨-೧೦] ಜನಮೇಜಯನ ಸರ್ಪಯಾಗ ಸಮಯದಲ್ಲಿ ತಕ್ಷಕ ಇಂದ್ರನನ್ನು ಮರೆಹೊಕ್ಕ. ಆಗ ಋತ್ವಿಜರು ಇಂದ್ರನೂ ತಕ್ಷಕನೂ ಇಬ್ಬರೂ ಸೇರಿ, ಅಗ್ನಿಕುಂಡದಲ್ಲಿ ಬಿದ್ದು ಆಹುತಿಯಾಗುವಂತೆ ಮಂತ್ರವನ್ನು ಉಚ್ಚರಿಸಿದರು. ತಕ್ಷಕನೊಂದಿಗೆ ಇಂದ್ರನೂ ಆಹುತಿಯಾಗಬೇಕಾಗಿ ಬಂತು. ಅಷ್ಟರಲ್ಲಿ ಆಸ್ತೀಕನು ಸರ್ಪಯಾಗವನ್ನು ನಿಲ್ಲಿಸಿದ ನೋಡು—ಆಸ್ತೀಕ [ಆದಿ ೫೩] ಇವನು ಖಾಂಡವವನದಲ್ಲಿ ವಾಸಮಾಡುತ್ತಿದ್ದ ಖಾಂಡವವನ ದಹನ ಸಮಯದಲ್ಲಿ ಇವನ ಹೆಂಡತಿ ತಲೆತಪ್ಪಿಸಿಕೊಂಡು ಹೋಗಬೇಕೆಂಬ ಉದ್ದೇಶ

ದಿಂದ ಹಾರಿ ಹೊರಟುಹೋಗುತ್ತಿದ್ದಳು ಆಗ ಅರ್ಜುನ ಅವಳ ತಲೆಯನ್ನು ಕತ್ತರಿಸಿದ [ಆದಿ. ೨೫೩] ಆಗ ತಕ್ಷಕ ಕುರುಕ್ಷೇತ್ರದಲ್ಲಿದ್ದ [ಆದಿ ೨೫೪]. ಈತನು ನಾಗ ಕುಲದಲ್ಲಿ ೨೭ ನಾಗ ವಂಶಗಳಿಗೆ ಯಜಮಾನನಾಗಿದ್ದ ಸರ್ಪಯಾಗ ದಲ್ಲಿ ೧೮ ಕುಲಗಳು ದಗ್ಧಗಳಾದುವು [ನೋಡು—ಆಸ್ತೀಕ ]

(11) ಒಬ್ಬ ಅರಸು ಸೂರ್ಯ ವಂಶದ ಪ್ರಸೇನಜಿತನೆಂಬ ರಾಜರ್ಷಿಯ ಮಗ. ಇವನ ಮಗನಾದ ಬೃಹದ್ಬಲ ಭಾರತ ಯುದ್ಧದಲ್ಲಿ ದುರ್ಯೋಧನನ ಪರ ವಾಗಿ ಹೋರಾಡಿ, ಹದಿಮೂರನೆಯ ದಿನದ ಯುದ್ಧದಲ್ಲಿ ಅಭಿಮನ್ಯುವಿನಿಂದ ಹತ ನಾದ [ದ್ರೋಣ ४೭]

**ತಕ್ಷಶಿಲಾ** —ಒಂದು ಪಟ್ಟಣ. ಕೇಕಯಿಾ ಪುತ್ರನಾದ ಭರತನ ಹಿರಿಯ ಮಗ ನಾದ ತಕ್ಷನು ಸ್ಥಾಪಿಸಿದ್ದು ಇದು ಸಿಂಧು, ವಿತಸ್ತಾ ನದಿಗಳ ನಡುವೆ ಅಭಿಸಾರಿ ದೇಶಕ್ಕೆ ದಕ್ಷಿಣದಲ್ಲಿದೆ [ಆದಿ ३ ರಾಮಾ -ಉತ್ತ ೧೦೧]. ಪಾಂಡವರ ಕಾಲದಲ್ಲಿ ಇದು ಗಾಂಧಾರ ದೇಶದ ರಾಜಧಾನಿಯಾಗಿತ್ತು

**ತಟಾಕಾದಿ ಪ್ರತಿಷ್ಠೆ ಮತ್ತು ಅದರ ಫಲ** —[ಅನು ೯३]

**ತಟಾತಕಾ** —ಮಲಯಧ್ವಜ ರಾಜನಿಂದ ಕಾಂಚನಮಾಲೆಯೆಂಬ ರಾಣಿಯಲ್ಲಿ ಜನಿಸಿದವಳು. ಪಾರ್ವತಿಯ ಅವತಾರ ಈಕೆ ಬಾಲ್ಯಾನಂತರ ತಂದೆಯೊಡನೆ ರಣ ರಂಗಕ್ಕೆ ಹೋಗಿ, ಹಗೆಗಳನ್ನು ಕೊಲ್ಲುತ್ತ, ಕ್ರಮವಾಗಿ ಪಾಂಡ್ಯ ದೇಶಕ್ಕೆ ಬಂದಾಗ ಸೋಮಸುಂದರನನ್ನು ಕಂಡು ಮೋಹಭರಿತೆಯಾಗಿ ಆತನನ್ನು ಮದುವೆಯಾಗಿ, ಉಗ್ರಪಾಂಡ್ಯನೆಂಬ ಮಗನನ್ನು ಪಡೆದು, ಆತನು ಪ್ರಾಪ್ತವಯಸ್ಕನಾದ ಬಳಿಕ ಆತನಿಗೆ ಪಟ್ಟಗಟ್ಟಿ ತಾನು ಸೋಮಸುಂದರ ಮಂದಿರದಲ್ಲಿ ಅದೃಶ್ಯೆಯಾದಳು [ಸ್ಕಾಂ-ಹಾಲಾ ೯೬]

**ತಣ್ಡಿ** —ಒಬ್ಬ ಬ್ರಾಹ್ಮಣ ಶಿವಭಕ್ತಾಗ್ರೇಸರ [ಶಾಂ ೨೫೦ ಅನು ४೭. ಲಿಂ.-೬೫].

**ತತ್ತ್ವವಿಭಾಗ** —[ಶಾಂತಿ ३೨೬-३೨೮ ಅನು ३೮ ೨४೫]

**ತತ್ವಗಳ ಸೃಷ್ಟಿ** —[ಅನು ೧೬೫, ೨४೫] ಅವುಗಳ ತಾರತಮ್ಯ [ಅನು. ೧೫೮]

**ತನು** —ಒಬ್ಬ ಮಹರ್ಷಿ ಋಷಭಕೂಟ ಪರ್ವತದಲ್ಲಿ ವಾಸವಾಗಿದ್ದ ಋಷಭ ನೆಂಬ ಮುನಿಯೊಂದಿಗೆ "ಆಸೆ ಆಕಾಶಕ್ಕಿಂತಲೂ ದೊಡ್ಡದು" ಎಂಬ ವಿಷಯ ವಾಗಿ ವಿವಾದಮಾಡಿದವ ಮಹಾಜ್ಞಾನಿ [ಶಾಂತಿ ೧೨೭].

**ತನ್ತ್ರೀಪಾಲ.**—ಅಜ್ಞಾತವಾಸ ಕಾಲದಲ್ಲಿ ವಿರಾಟನ ಗೋವುಗಳನ್ನು ಕಾಯು ತ್ತಿದ್ದ ಸಹದೇವನ ಹೆಸರು [ವಿರಾ ४]

**ತಪತಿ.**—ಸೂರ್ಯನಿಂದ ಛಾಯಾದೇವಿಯಲ್ಲಿ ಜನಿಸಿದವಳು. ನೋಡು—ಛಾಯಾ. ಶನೈಶ್ಚರನೂ, ಸಾವರ್ಣಿಯೂ ಈಕೆಯ ಒಡಹುಟ್ಟಿದವರು. ಈಕೆ

ಚಂದ್ರವಂಶದ ಸಂವರಣ ರಾಜನ ಹೆಂಡತಿ. ಕುರು ರಾಜನು ಈಕೆಯ ಮಗ [ಆದಿ. ೬೩ ಭಾಗ.-೬-೬] ಈಕೆಗೆ ಸಾವಿತ್ರಿಯೆಂಬ ಒಬ್ಬ ಅಕ್ಕ ಇದ್ದಳು [ಆದಿ ೧೭೮]. ತಪತಿ ಸಂವರಣನನ್ನು ಮದುವೆಯಾದದ್ದು [ಆದಿ ೧೭೯] ಈಕೆಯ ಕಥೆಯನ್ನು ಅರ್ಜುನನು ಗಂಧರ್ವನ ಮೂಲಕ ಕೇಳಿ ತಿಳಿದದ್ದು [ಆದಿ. ೧೭೭, ೧೭೯]

**ತಪನ.**—(i) ಸೂರ್ಯ

(ii) ಅಮೃತವನ್ನು ಕಾಪಾಡುವ ಒಬ್ಬ ದೇವ [ಆದಿ ೩೨]

(iii) ಪಾಂಚಾಲ ದೇಶದ ಅರಸು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನೇಳನೆಯ ದಿನದಲ್ಲಿ ಕರ್ಣನಿಂದ ಹತನಾದ [ಕರ್ಣ ೪೩].

(iv) ಒಬ್ಬ ರಾಕ್ಷಸ ರಾಮಾಯಣ ಯುದ್ಧದಲ್ಲಿ ಸುಗ್ರೀವನ ಸೇನಾಪತಿಯಾದ ಗಜನೆಂಬ ವಾನರನಿಂದ ಹತನಾದ [ರಾಮಾ.-೪೩]

**ತಪಸ್**—(i) ಇದರ ಪ್ರಭೇದಗಳು [ಶಾಂತಿ ೨೨೮]. ಇದರ ಮಹಿಮೆ [ಶಾಂತಿ ೩೦೧]

(ii) ಮಾಘಮಾಸದ ನಾಮಾಂತರ [ಭಾಗ -೧೨, ೧೧]

**ತಪಸ್ಯ**—ಫಾಲ್ಗುನ ಮಾಸ ಇದರ ದೇವತಾದಿಗಳ ವಿವರ [ಭಾಗ -೧೨, ೧೧]

**ತಪ್ತಸೂರ್ಮಿ**—ಒಂದು ನರಕ ಅಗಮ್ಯಾಗಮನ ಮಾಡಿದವರು ಈ ನರಕದಲ್ಲಿ ನರಳುತ್ತಾರೆ [ಭಾಗ -೫-೨೬ ಶಿವ -ಉಮಾ ೭, ೮]

**ತಮ**—(i) ಒಬ್ಬ ಋಷಿ ಶ್ರವನೆಂಬ ಮಹರ್ಷಿಯ ಇಬ್ಬರು ಮಕ್ಕಳಲ್ಲಿ ಕಿರಿಯವ ಇವನ ಮಗ ಪ್ರಕಾಶನೆಂಬ ಮುನಿ ನೋಡು—ವೀತಹವ್ಯ [ಭಾರ.-ಅನು. ೮].

(ii) ಬ್ರಹ್ಮನ ತಿಂಗಳಿನ ಹನ್ನೊಂದನೆಯ ದಿನದ ಸಂಜ್ಞೆ

(iii) ತಮೋಗುಣ ಅದರ ಕಾರ್ಯಗಳು [ಶಾಂತಿ ३೧೮ ಅಶ್ವ ३೭].

**ತಮಸಾ**—ಒಂದು ನದಿ. ಸರಯೂ ಗೋಮತೀ ನದಿಗಳ ನಡುವೆ ಹರಿದು ಕೋಸಲ ದೇಶದ ಮಾರ್ಗವಾಗಿ ಬಂದು, ಗಂಗೆಗೆ ಸೇರುತ್ತದೆ ವಾಲ್ಮೀಕಿ ಮಹರ್ಷಿ ಇದರ ತೀರದಲ್ಲಿಯೇ ಆಶ್ರಮವನ್ನು ಕಲ್ಪಿಸಿಕೊಂಡಿದ್ದ [ಭೀ. ೯. ರಾಮಾ.-ಬಾಲ ೧].

**ತರನ್ತುಕ**—ಒಂದು ತೀರ್ಥ [ಶಲ್ಯ ೫೪] ನೋಡು—ಕುರುಕ್ಷೇತ್ರ.

**ತಂಸು.**—ಒಬ್ಬ ಅರಸು. ಚಂದ್ರ ವಂಶದ ಮತಿನಾರನ ಮಗ ಈತನ ಮಗ ಈಲಿನನೆಂಬವ ತ್ರಸುವೆಂಬುದು ತಂಸುವಿನ ನಾಮಾಂತರ [ಆದಿ ೬೩, ೮೮].

**ತಾಟಕಾ**—ಒಬ್ಬ ರಾಕ್ಷಸಿ. ಸುಕೇತುವೆಂಬ ಯಕ್ಷನ ಮಗಳು. ಸುಕೇತುವಿಗೆ ಸಂತಾನವಿರಲಿಲ್ಲವಾಗಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಸಾವಿರ ಆನೆಗಳ ಬಲವುಳ್ಳ ಒಬ್ಬ ಮಗಳನ್ನು ಪಡೆದ. ಇವಳು ತಾಟಕೆಯೆಂಬ ಹೆಸರಿನಿಂದ ಬೆಳೆದು

ಜರ್ಝರನೆಂಬ ಯಕ್ಷನ ಮಗನಾದ ಸುಂದನೆಂಬವನನ್ನು ಮದುವೆಯಾಗಿ ಮಾರೀಚ, ಸುಬಾಹುಗಳೆಂಬ ಪುತ್ರರನ್ನು ಪಡೆದಳು [ಭಾರ -ಸಭಾ. ೫೦]. ಕೆಲವು ಕಾಲದ ಬಳಿಕ ಸುಂದನು ಲೋಕಾಂತರವನ್ನೈದಿದ ತಾಟಕೆ ತನ್ನ ಮಕ್ಕಳನ್ನು ಕರೆದು ಕೊಂಡು, ಮಲದ ಕರೂಶ ದೇಶಗಳ ನಡುವೆ ವನದಲ್ಲಿ ವಾಸಮಾಡಿಕೊಂಡಿದ್ದಳು. ಒಮ್ಮೆ ತಾಟಕೆ ಕಾಮಪೀಡಿತೆಯಾಗಿ, ಮನೋಹರವಾಗಿ ಗಾನಮಾಡುತ್ತ ಮೈಮೇಲೆ ಪ್ರಜ್ಞೆಯಿಲ್ಲದೆ ಮಗನ ಸಂಗಡ ಸಂಚರಿಸುತ್ತಿರುವಲ್ಲಿ, ಅಗಸ್ತ್ಯ ಮುನೀಶ್ವರನು ಅವಳ ಲಾವಣ್ಯಭರಿತವಾದ ರೂಪವನ್ನು ಕಂಡು ಕೋಪಭರಿತನಾಗಿ "ನಿನ್ನ ಈ ಮೋಹಕ ರೂಪವು ತರುಣರಾದ ಕಾಮುಕರಿಗೆ ಭಯಂಕರವಾಗಿ ತೋರಲಿ, ನಿನ್ನ ಮಕ್ಕಳಿಬ್ಬರೂ ರಾಕ್ಷಸರಾಗಲಿ" ಎಂದು ಶಾಪವಿತ್ತ. ಬಳಿಕ ಇವಳಿಬ್ಬರ ಮಕ್ಕಳೂ ಇವಳೂ ಸೇರಿ ಅಲ್ಲಿದ್ದ ಮುನಿಗಳನ್ನು ಪೀಡಿಸತೊಡಗಿದರು ಮಲದ ಕರೂಶ ದೇಶ ಗಳೂ ಇವರ ಹಾವಳಿಯಿಂದ ಹಾಳುಬಿದ್ದುವು ಇವಳು ವಾಸಮಾಡುತ್ತಿದ್ದ ಪ್ರದೇಶಕ್ಕೆ ಸ್ವಲ್ಪ ದೂರದಲ್ಲಿಯೇ ವಿಶ್ವಾಮಿತ್ರ ಮಹರ್ಷಿಯ ಆಶ್ರಮವಿತ್ತು. ಆತನು ಯಾಗಮಾಡತೊಡಗಿದಾಗೆಲ್ಲ ಇವರು ಆತನ ಯಜ್ಞಕ್ಕೆ ವಿಘ್ನವನ್ನುಂಟು ಮಾಡುತ್ತಿದ್ದರು ಬಳಿಕ ವಿಶ್ವಾಮಿತ್ರನು ಅಯೋಧ್ಯೆಗೆ ಅರಸನಾದ ದಶರಥನ ಮಕ್ಕಳಾದ ರಾಮ ಲಕ್ಷ್ಮಣರನ್ನು ಸಂಗಡ ಕರೆದುಕೊಂಡು, ಸಿದ್ಧಾಶ್ರಮಕ್ಕೆ ಬರು ವಾಗ ದಾರಿಯಲ್ಲಿ ನಿರ್ಜನವಾಗಿದ್ದ ಮಲದ ಕರೂಶ ದೇಶಗಳನ್ನು ಕಂಡು ಕುತೂಹಲಭರಿತರಾದ ರಾಮ ಲಕ್ಷ್ಮಣರು ಇದೇನೆಂದು ಕೇಳಲಾಗಿ, ಅವುಗಳ ವೃತ್ತಾಂತವನ್ನು ಸಮಗ್ರವಾಗಿ ತಿಳುಹಿ, ಶ್ರೀ ರಾಮನ ಮೂಲಕ ತಾಟಕೆಯನ್ನು ಕೊಲ್ಲಿಸಿದ [ರಾಮಾ -ಬಾಲ. ೨೪, ೨೫].

**ತಾಮಸ** —ಪ್ರಿಯವ್ರತ ರಾಜನ ಎರಡನೆಯ ಹೆಂಡತಿಯಲ್ಲಿ ಜನಿಸಿದ ಮೂವರು ಮಕ್ಕಳಲ್ಲಿ ಮಧ್ಯಮ ಉತ್ತಮ, ರೈವತರೆಂಬವರು ಇವನ ಅಣ್ಣತಮ್ಮಂದಿರು ಈತ ಈಗ ನಡೆಯುತ್ತಿರುವ ಶ್ವೇತವರಾಹ ಕಲ್ಪದಲ್ಲಿ ನಾಲ್ಕನೆಯ ಮನುವಾಗಿ ರಾಜ್ಯಭಾರಮಾಡಿದ ಈತನ ರಾಜ್ಯಭಾರ ಸಮಯದಲ್ಲಿ ಸ್ವರ್ಗದಲ್ಲಿ ತ್ರಿಶಿಖನೆಂಬ ಇಂದ್ರನು ರಾಜ್ಯಭಾರಮಾಡುತ್ತಿದ್ದ ಈತನಿಗೆ ಅಕಲ್ಮಷ, ಧನ್ವಿ, ತಪೋಮೂಲ, ತಪೋಧನ, ತಪೋರತಿ, ತಪಸ್ಯ, ತಪೋದ್ಯುತಿ, ಪರಂತಪ, ತಪೋಭೋಗಿ, ತಪೋ ಯೋಗಿ ಎಂಬ ಹತ್ತು ಮಂದಿ ಪುತ್ರರಿದ್ದರು. ಕವಿ, ಪೃಥು, ಅಗ್ನಿ, ಅಕಪಿ, ಕಪಿ, ಜಲ್ಪ, ಧೀಮಂತರೆಂಬ ಏಳು ಮಂದಿ ಮುನಿಗಳು ಸಪ್ತರ್ಷಿಗಳೆನಿಸಿಕೊಂಡಿ ದ್ದರು. ಹರಿಮೇಧನೆಂಬ ಬ್ರಾಹ್ಮಣನ ಪತ್ನಿಯಾದ ಹರಿಣಿಯೆಂಬಾಕೆಯಲ್ಲಿ ಜನಿಸಿದ ಹರಿಯೆಂಬಾತನು ಇಂದ್ರನಿಗೆ ಸಹಾಯಾರ್ಥವಾಗಿ ವಿಷ್ಣುವಾಗಿದ್ದ. ಗಜೇಂದ್ರ ಮೋಕ್ಷವು ಇದೇ ತಾಮಸ ಮನ್ವಂತರದಲ್ಲಿ ನಡೆಯಿತು [ಭಾಗ.-೮-೧. ಮತ್ಸ್ಯ.-೯].

ದೃಢಧನ್ವನ ಮಗಳಾದ ಉತ್ಪಲಾವತಿಯು ಶಾಪದಿಂದ ಹೆಣ್ಣುಜಿಂಕೆಯಾಗಿ ಹುಟ್ಟಿ, ಸುರಾಷ್ಟ್ರನೆಂಬ ರಾಜನ ಸ್ಪರ್ಶಮಾತ್ರದಿಂದಲೇ ಗರ್ಭಧಾರಣಮಾಡಿ, ಲೋಕವನ್ನೆಲ್ಲ ಕತ್ತಲೆ ಕವಿದಿರುವಾಗ ಜನಿಸಿದವನಾದುದರಿಂದ ತಾಮಸನೆಂದು ಹೆಸರು. ತಾಮಸನು ಸುರಾಷ್ಟ್ರನಲ್ಲಿಯೇ ಬೆಳೆದು ಆತನ ಸಂಗಡಲೇ ಇರುತ್ತಿದ್ದ ಒಮ್ಮೆ ಸುರಾಷ್ಟ್ರನ ಮೂಲಕವಾಗಿಯೇ ಆತನು ಕಾಡಿನಲ್ಲಿ ವಾಸಮಾಡಲು ಕಾರಣವೇನೆಂಬುದನ್ನು ಪ್ರಶ್ನೆಮಾಡಿ, ಶತ್ರುಗಳು ರಾಜ್ಯವನ್ನು ಕಿತ್ತುಕೊಂಡ ಕಾರಣ ಕಾಡುಪಾಲಾದನೆಂಬುದನ್ನು ತಿಳಿದು, ಆತನ ಅಪ್ಪಣೆಯುಮೇರೆ ಜೈತ್ರಯಾತ್ರೆಗೆ ಹೊರಟು, ಶತ್ರುಗಳನ್ನೆಲ್ಲ ಸೋಲಿಸಿ, ತನ್ನ ತಂದೆಯ ರಾಜ್ಯವನ್ನೆಲ್ಲ ಮರಳಿ ಸಂಪಾದಿಸಿದ. ಈತ ಕಡೆಗೆ ಮನುವಾದ ಈತನ ಕಾಲದಲ್ಲಿ ಶಿಬಿ ಇಂದ್ರನಾಗಿದ್ದ ಜ್ಯೋತಿರ್ಧಾಮ, ಪೃಥು ಮೊದಲಾದವರು ಸಪ್ತರ್ಷಿಗಳಾಗಿದ್ದರು [ಮಾರ್ಕ -೯, ೭೧]

**ತಾಮಿಸ್ರ** —ಒಂದು ನರಕ ಪರದ್ರವ್ಯವನ್ನು ಅಪಹರಿಸಿದವರು ಇಲ್ಲಿ ತಮ್ಮ ಪಾಪಫಲವನ್ನು ಅನುಭವಿಸುತ್ತಾರೆ ಈ ನರಕದಲ್ಲಿ ಗಾಢವಾದ ಅಂಧಕಾರ ಕವಿದುಕೊಂಡಿರುವ ಕಾರಣ ಇದನ್ನು ತಾಮಿಸ್ರವೆನ್ನುತ್ತಾರೆ [ಭಾಗ -೫-೩೬. ಶಿವ.-ಉಮಾ ೭-೮. ದೇ ಭಾ -೯, ೩೩-೩೭]

**ತಾಮ್ರ.**—ಒಬ್ಬ ರಾಕ್ಷಸ ಮಹಿಷಾಸುರನ ಕೋಶಾಧಿಕಾರಿ [ದೇ ಭಾಗ -೫-೬. ಮತ್ಸ್ಯ -೧೫೧]

(II) ಮುರಾಸುರನ ಏಳು ಮಂದಿ ಮಕ್ಕಳಲ್ಲಿ ಒಬ್ಬ. ಇವನು ನರಕಾಸುರನ ಆಸರೆಯಲ್ಲಿದ್ದವ [ಭಾಗ -೧೦-೫೯]

(III) ಒಂದು ದ್ವೀಪ ರಾಜಸೂಯಯಾಗ ಸಮಯದಲ್ಲಿ ಸಹದೇವ ಈ ದ್ವೀಪವನ್ನು ಗೆದ್ದ [ಸಭಾ ೩೨]

**ತಾಮ್ರಧ್ವಜ** —ಮಣಿಪುರದ ಅರಸನಾದ ಮಯೂರಧ್ವಜನ ಮಗ ಈತ ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಕಟ್ಟಿಹಾಕಿ, ಅರ್ಜುನನೊಂದಿಗೆ ಯುದ್ಧಮಾಡಿ, ಆತನನ್ನು ಸೋಲಿಸಿ, ಯಜ್ಞಾಶ್ವವನ್ನು ಒಯ್ಯಲಾಗಿ, ಕೃಷ್ಣಾರ್ಜುನರು ಬ್ರಾಹ್ಮಣವೇಷದಿಂದ ಮಯೂರಧ್ವಜನಲ್ಲಿಗೆ ಹೋಗಿ, ಅವನ ಶರೀರವನ್ನು ಇಬ್ಬರಿಗೂ ಭಾಗಮಾಡಿ ಕೊಡುವಂತೆ ಕೇಳಿದರು ತಾಮ್ರಧ್ವಜನು ಅಂತೆಯೇ ಮಯೂರಧ್ವಜನ ತಲೆಯಮೇಲೆ ಗರಗಸವನ್ನಿಕ್ಕಿ ಕುಯ್ಯುತ್ತಿರಲಾಗಿ, ಕೃಷ್ಣ ಇವನ ಮನಸ್ಥೈರ್ಯಕ್ಕೆ ಮೆಚ್ಚಿ, ನಿಜರೂಪವನ್ನು ತೋರಿ, ಅನುಗ್ರಹಿಸಿ, ತಮ್ಮ ಕುದುರೆಯನ್ನು ಮರಳಿ ಪಡೆದುಬಂದ [ಜೈ ಭಾ -೧-೪೬]

**ತಾಮ್ರಪರ್ಣಿ.**—(I) ಒಂದು ನದಿ. ದಕ್ಷಿಣ ಹಿಂದೂಸ್ಥಾನದಲ್ಲಿ ತಿನ್ನವೆಲ್ಲಿ ಜಿಲ್ಲೆಯಲ್ಲಿ ಹರಿಯುತ್ತದೆ ಹಿಂದೆ ದೇವತೆಗಳು ಈ ನದಿಯ ತೀರದಲ್ಲಿ ತಪಸ್ಸು

ಮಾಡಿದರು. ಇದರಲ್ಲಿ ಮುತ್ತಿನ ಚಿಪ್ಪುಗಳು ದೊರೆಯುತ್ತವೆ [ಸಭಾ. ೩೩. ವನ. ೮೬] ಇದು ಮಹೇಂದ್ರ ಪರ್ವತದಿಂದ ಹುಟ್ಟುತ್ತದೆ [ಮತ್ಸ್ಯ.-೧೧೩].

(ii) ಪಶ್ಚಿಮ ದಿಕ್ಕಿನಲ್ಲಿರುವ ಅಂಜನವೆಂಬ ದಿಗ್ಗಜದ ಹೆಣ್ಣಾನೆ.

**ತಾಮ್ರಲಿಪ್ತ** —(i) ಒಬ್ಬ ಅರಸು [ಭಾರ.-ಆದಿ. ೨೦೧. ಸಭಾ ೩೧].

(ii) ಒಂದು ದೇಶ. ಇದಕ್ಕೆ ದಾಮಲಿಪ್ತವೆಂಬ ಹೆಸರೂ ಸಲ್ಲುತ್ತದೆ [ಭಾರ -ಭೀ ೯] ಇದು ಹುಗ್ಲಿ ನದಿಯ ಸಂಗಮಕ್ಕೆ ಸಮೀಪದಲ್ಲಿದೆ

**ತಾಮ್ರಾ**.—ದಕ್ಷಬ್ರಹ್ಮನ ಮಗಳು ಕಶ್ಯಪನ ಹದಿಮೂರು ಮಂದಿ ಪತ್ನಿಯರಲ್ಲಿ ಒಬ್ಬಳು. ಈಕೆ ಕಾಕೀ, ಶ್ಯೇನೀ, ಭಾಸೀ, ಧೃತರಾಷ್ಟ್ರೀ, ಶುಕೀ ಎಂಬುದಾಗಿ ಐವರು ಪುತ್ರಿಯರನ್ನು ಹೆತ್ತಳು ಪಕ್ಷಿಜಾತಿಗಳಿಗೆಲ್ಲ ಈಕೆಯೇ ಜನನಿ [ಭಾರ.- ಆದಿ ೬೭].

(ii) ವಸುದೇವನ ಹೆಂಡತಿಯರಲ್ಲಿ ಒಬ್ಬಳು ಶ್ರೀಕೃಷ್ಣನ ಬಲತಾಯಿ. ಈಕೆ ಸಹದೇವನೆಂಬ ಪುತ್ರನನ್ನು ಹೆತ್ತಳು [ಭಾಗ -೧೦-೮೪]

**ತಾರ** —(i) ಮಹಿಷಾಸುರನ ಅನುಚರ [ಮತ್ಸ್ಯ -೧೭೭]

(ii) ಸುಗ್ರೀವನ ಮಾವ, ರುಮೆಯ ತಂದೆ [ಭಾರ.-ವನ. ೨೮೫]

**ತಾರಕ**.—ಒಬ್ಬ ರಾಕ್ಷಸ ಈತನಿಗೆ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಯೆಂಬ ಮೂವರು ಮಕ್ಕಳು ಈ ಮೂವರೂ ಬ್ರಹ್ಮದೇವನನ್ನು ಕುರಿತು ಉಗ್ರವಾದ ತಪಸ್ಸುಮಾಡಿ, ಅನೇಕ ವರಗಳನ್ನು ಪಡೆದು ತ್ರಿಪುರರೆನಿಸಿಕೊಂಡರು. ಇವರಲ್ಲಿ ತಾರಾಕ್ಷನದು ಚಿನ್ನದ ನಗರ, ಕಮಲಾಕ್ಷನದು ಬೆಳ್ಳಿಯ ಪಟ್ಟಣ, ವಿದ್ಯುನ್ಮಾಲಿಯದು ಕಬ್ಬಿಣದ ಪಟ್ಟಣ [ಭಾರ -ಕರ್ಣ ೨೪]. ಇವನು ಸ್ಕಂದನಿಂದ ಹತನಾದ [ಭಾರ -ಶಲ್ಯ ೪೭ ಅನು ೧೩೩. ಸ್ಕಾಂ.-ಮಾಹೇ. ೩೨]. ವಜ್ರಾಂಗನೆಂಬ ರಾಕ್ಷಸನಿಂದ ವರಾಂಗಿಯೆಂಬವಳಲ್ಲಿ ಜನಿಸಿದವನು. ಈತನು ಪಾರಿಯಾತ್ರ ಪರ್ವತದಲ್ಲಿ ತಪಸ್ಸುಮಾಡಿ, ಬ್ರಹ್ಮನ ಮೂಲಕ ಅಂದಿನವರೆಗೆ ಅವತರಿಸಿದ್ದ ದೇವತೆಗಳಲ್ಲಿ ಯಾರಿಂದಲೂ (ಅಂದರೆ ೧, ೨, ೩, ೪, ೫ ಮುಖಗಳುಳ್ಳವರಲ್ಲಿ ಯಾರಿಂದಲೂ) ತನಗೆ ಸಾವು ಬಾರದಿರುವ ಹಾಗೆ ವರವನ್ನು ಪಡೆದು, ಜಂಭ, ಕುಂಭಜ, ಮಹಿಷಾಸುರ, ಕುಂಜರ, ಮೇಘ, ಕಾಲನೇಮಿ, ನಿಮಿ, ಮಥನ, ಜಂಭಕ, ಶುಂಭ, ನಿಶುಂಭ ಮುಂತಾದವರನ್ನು ತನ್ನ ಪ್ರಧಾನ ಸೇನಾನಾಯಕರನ್ನಾಗಿ ಏರ್ಪಡಿಸಿಕೊಂಡು ಮೂಲೋಕವನ್ನೂ ಪೀಡಿಸತೊಡಗಿದ ಇವನ ಸೇನಾಪತಿಗಳಲ್ಲೆಲ್ಲ ಶುಂಭನೇ ಮುಖ್ಯನಾಯಕ. ಆಗ ಷಣ್ಮುಖ ಅವತರಿಸಿ, ಹುಟ್ಟಿದ ಏಳನೆಯ ದಿನ ಇವನೊಡನೆ ಯುದ್ಧಮಾಡಿ, ಈವನನ್ನು ಕೊಂದ [ಮತ್ಸ್ಯ.-೧೪೭ ೧೫೯. ಸ್ಕಾಂ.- ಮಾಹೇ. ೧೫].

**ತಾರಾ** —(I) ಬೃಹಸ್ಪತ್ಯಾಚಾರ್ಯನ ಹೆಂಡತಿ ಈಕೆ ಬೃಹಸ್ಪತ್ಯಾಚಾರ್ಯ ನಿಂದ ಶಂಯು, ನಿಶ್ಚ್ಯವನ, ವಿಶ್ವಜಿತ್, ವಿಶ್ವಭುಕ್, ಬಡಬಾಗ್ನಿ, ಸ್ವಿಷ್ಟಕೃತ್ ಎಂಬ ಆರು ಮಂದಿ ಪುತ್ರರನ್ನೂ, ಸ್ವಾಹಾಯೆಂಬ ಕನ್ಯೆಯನ್ನೂ ಪಡೆದಳು [ಭಾರ.-ವನ ೨೨೧] ಈಕೆ ಚಂದ್ರನಿಂದ ಬುಧನನ್ನು ಪಡೆದಳು ನೋಡು—ಚಂದ್ರ [ಭಾಗ -೯-೧೪]

(II) ಹರಿಶ್ಚಂದ್ರನ ಹಿರಿಯ ಹೆಂಡತಿ ತಾರಾಮತಿಯೆಂಬುದು ನಾಮಾಂತರ ಇವಳನ್ನೇ ಚಂದ್ರಮತಿಯೆನ್ನುತ್ತಾರೆ [ಭಾರ.-ಸಭಾ ೧೨. ದೇ ಭಾ--೭. ೧೪].

(III) ಸುಷೇಣನೆಂಬ ವಾನರನ ಮಗಳು ವಾಲಿಯ ಹೆಂಡತಿ. ಅಂಗದ ಕುಮಾರನನ್ನು ಹೆತ್ತವಳು ವಾಲಿ ಸುಗ್ರೀವನ ಮೇಲೆ ಯುದ್ಧಕ್ಕೆ ಹೊರಟಾಗ, ತನ್ನ ಗಂಡನನ್ನು ಅಡ್ಡಗಿಸಿ, ಅನೇಕ ವಿಧದಿಂದ ನೀತಿಯನ್ನು ಬೋಧಿಸಿದಳು [ರಾಮಾ - ಕಿಷ್ಕಿಂ ೧೫] ವಾಲಿ ವಧಾನಂತರ ತಾರೆ ಹಂಬಲಿಸಿದ್ದು [ಕಿಷ್ಕಿಂ ೧೯, ೨೦, ೨೨]. ಹನೂಮಂತನು ತಾರೆಯನ್ನು ಸಂತಯಿಸಿದ್ದು [ಕಿಷ್ಕಿಂ ೨೧] ಶ್ರೀರಾಮ ತಾರೆಯನ್ನು ಸಂತಯಿಸಿದ್ದು [ಕಿಷ್ಕಿ ೨೪] ಸುಗ್ರೀವ ಸ್ತ್ರೀಲೋಲನಾಗಿದ್ದು ರಾಮನಿಗೆ ಮಾತು ಕೊಟ್ಟ ಮೇರೆಗೆ ಸೀತೆಯನ್ನು ಹುಡುಕುವುದಕ್ಕಾಗಿ ಪ್ರಯತ್ನಮಾಡದಿದ್ದುದನ್ನು ಕಂಡು, ಸೌಮಿತ್ರಿ ಕ್ರೋಧಾಂಧನಾಗಿ ಕಿಷ್ಕಿಂಧೆಯನ್ನು ಹೊಕ್ಕಾಗ ತಾರೆ ಲಕ್ಷ್ಮಣ ನನ್ನು ಸಮಾಧಾನಪಡಿಸಿದ್ದು ಮುಂತಾಗಿ [ಕಿಷ್ಕಿಂ ೩೫]. ವಾಲಿ ವಧಾನಂತರ ಸುಗ್ರೀವ ನನ್ನು ಸೇರಿ ಅವನೊಂದಿಗೆ ಇದ್ದಳು ರಾವಣನ ವಧೆಯ ತರುವಾಯ ತಾರೆ ತನ್ನ ಪರಿವಾರದೊಂದಿಗೆ ಉಚಿತರೀತಿಯಿಂದ ಶ್ರೀರಾಮನ ಪಟ್ಟಾಭಿಷೇಕ ಮಹೋತ್ಸ ವಕ್ಕೆ ಅಯೋಧ್ಯೆಗೆ ಹೋಗಿದ್ದಳು [ಯುದ್ಧ ೧೨೬]

**ತಾರಾಕ್ಷ** —ತಾರಕಾಸುರನ ಮಗ ನೋಡು—ತಾರಕ

**ತಾರ್ಕ್ಷ್ಯ** — (I) ಗರುಡನ ನಾಮಾಂತರ ನೋಡು—ಗರುಡ

(II) ಒಬ್ಬ ಮಹರ್ಷಿ ಸರಸ್ವತಿಯೊಂದಿಗೆ ವಾದಮಾಡಿದವನು ಹೈಹಯ ದೇಶಾಧಿಪತಿಯಾದ ದುಂಧುಮಾರನು ಬೇಟೆಗೆ ಹೋಗಿದ್ದಾಗ ಅಜಾಗರೂಕತೆಯಿಂದ ಈತನ ಮಗನನ್ನು ಕೊಂದನು ಒಡನೆಯೇ ದುಂಧುಮಾರನು ತಾರ್ಕ್ಷ್ಯ ಮುನಿಯ ಆಶ್ರಮಕ್ಕೆ ಹೋಗಿ, ತಾನು ಮಾಡಿದ ಅಪರಾಧವನ್ನು ಬಿನ್ನವಿಸಿದನು ಮುನಿ ಸ್ವಲ್ಪವೂ ಸಿಟ್ಟಾಗಲಿಲ್ಲ "ಎಲೆ ಅರಸೆ, ನನ್ನ ಆಶ್ರಮದಲ್ಲಿ ಸಾವಿನ ಸುಳಿವೇ ಇಲ್ಲ" ಎಂದು ಹೇಳಿ, ತನ್ನ ಮಗನನ್ನು ಕರೆದ. ಸತ್ತುಬಿದ್ದಿದ್ದ ಮುನಿಪುತ್ರನು ಕೂಡಲೇ ಎದ್ದುಬಂದ ಇದನ್ನು ಕಂಡು ಆಶ್ಚರ್ಯಭರಿತನಾದ ಧುಂಧುಮಾರನು "ಇಂತಹ ಮಹಿಮೆ ತಮಗೆ ಎತ್ತಣದು?" ಎಂದು ಪ್ರಶ್ನಮಾಡಲಾಗಿ, ಮುನಿ ಸದ್ವರ್ತನವೇ ಎಲ್ಲಕ್ಕೂ ಮುಖ್ಯ ಕಾರಣವೆಂದನು [ಭಾರ.-ವನ. ೧೮೯].

**ತಾರ್ಕ್ಷೀ** —ಒಬ್ಬ ಅಪ್ಸರಸಿ ದುರ್ವಾಸ ಮುನಿಯ ತಪಸ್ಸಿಗೆ ಭಂಗವನ್ನುಂಟು ಮಾಡಿ ಪಕ್ಷಿಯಾಗಿದ್ದಳು ಖಾಂಡವವನ ದಹನ ಸಮಯದಲ್ಲಿ ಹಾರಾಡುವಾಗ ಅರ್ಜುನನ ಅಸ್ತ್ರ ಸೋಕಿದುದರಿಂದ ಪಕ್ಷಿಜನ್ಮವನ್ನು ನೀಗಿ, ತನ್ನ ನಿಜರೂಪವನ್ನು ಪಡೆದಳು ಸಾಯುವಾಗ ಗರ್ಭಧಾರಣಮಾಡಿದ್ದರಿಂದ, ಇದರ ಹೊಟ್ಟೆಯಿಂದ ಹೊರಬಿದ್ದ ಮೊಟ್ಟೆಗಳನ್ನು ಶಮೀಕ ಮುನಿ ಕಾಪಾಡಿದ ನೋಡು—ಧರ್ಮಪಕ್ಷಿ

**ತಾಲಕೇತು** —(1) ಭೀಷ್ಮಾಚಾರ್ಯನು ತನ್ನ ರಥದ ಧ್ವಜದಲ್ಲಿ ತಾಲವೃಕ್ಷ ವನ್ನು ಚಿತ್ರಿಸಿದ್ದನಾದುದರಿಂದ ಈ ಹೆಸರು ಬಂತು [ಭಾರ-ಉ ೧೫೦. ಭೀ. ೪೭]

(II) ಒಬ್ಬ ರಾಕ್ಷಸ ಪಾತಾಳಕೇತುವೆಂಬ ರಾಕ್ಷಸನ ತಮ್ಮ ಕುವಲಾಶ್ವನು ಪಾತಾಳಕೇತುವನ್ನು ಕೊಂದ ಕಾರಣ ಆತನ ಮೇಲಣ ಹಗೆಯನ್ನು ತೀರಿಸಿಕೊಳ್ಳ ಬೇಕೆಂದು ಹೊಂಚುಹಾಕುತ್ತಿದ್ದು, ಒಮ್ಮೆ ಕುವಲಾಶ್ವನು ಅಶ್ವಾರೂಢನಾಗಿ ಸಂಚರಿಸುತ್ತಿದ್ದಾಗ ಮುನಿವೇಷದಿಂದ ಆತನಲ್ಲಿಗೆ ಹೋಗಿ, ತಾನು ಮಾಡಬೇಕೆಂ ದಿರುವ ಯಜ್ಞಕ್ಕೆ ಸಹಾಯಮಾಡಬೇಕೆಂದು ಬೇಡಿ, ಆತನಿಂದ ಕಂಠಮಾಲೆಯನ್ನು ಪಡೆದ ನೋಡು—ಕುವಲಾಶ್ವ

**ತಾಲಜಙ್ಘ** —ಕಾರ್ತವೀರ್ಯಾರ್ಜುನನ ಮಗನಾದ ಜಯಧ್ವಜನ ಮಗ. ಇವನಿಗೆ ನೂರು ಮಂದಿ ಮಕ್ಕಳಿದ್ದರು ಇವರೆಲ್ಲರೂ ಬಡಬಾಗ್ನಿಯಿಂದ ದಗ್ಧ ರಾದರು ನೋಡು—ಕಾರ್ತವೀರ್ಯ.

**ತಿತ್ತಿರಿ**—(1) ಒಬ್ಬ ಮಹರ್ಷಿ

(II) ಯಾಜ್ಞವಲ್ಕ್ಯ ಮುನಿ ವ್ಯಾಸ ಶಿಷ್ಯನಾದ ವೈಶಂಪಾಯನ ಮುನಿಯಲ್ಲಿ ಯಜುರ್ವೇದವನ್ನು ಸಂಪೂರ್ಣನಾಗಿ ಅಧ್ಯಯನಮಾಡಿದ ಒಮ್ಮೆ ಗುರುವಾದ ವೈಶಂಪಾಯನನನ್ನು ತಿರಸ್ಕರಿಸಿದ ಕಾರಣ ಆತನ ಕೋಪಕ್ಕೆ ಗುರಿಯಾದ ವೈಶಂ ಪಾಯನನು ತನ್ನಲ್ಲಿ ಕಲಿತ ವಿದ್ಯೆಯನ್ನೆಲ್ಲ ತನಗೇ ಕೊಟ್ಟುಹೋಗುವಂತೆ ಹೇಳ ಲಾಗಿ, ಯಾಜ್ಞವಲ್ಕ್ಯನು ಅದನ್ನೆಲ್ಲ ಕಾರಿಬಿಟ್ಟ ಆಗ ಯಜುರ್ವೇದ ಶಾಖಾಧಿ ದೇವತೆಗಳು ತಿತ್ತಿರಿ ಪಕ್ಷಿಯ ರೂಪದಿಂದ ಬಂದು ಅದನ್ನೆಲ್ಲ ಸ್ವೀಕರಿಸಿದುವು. ಬಳಿಕ ವೈಶಂಪಾಯನ ಮುನಿ ಅಂಗಿರಸ ಕುಲೋತ್ಪನ್ನನಾದ ತಿತ್ತಿರಿಯೆಂಬ ಋಷಿಯ ಮೂಲಕ ಯಜುರ್ವೇದವನ್ನು ಸಮಗ್ರನಾಗಿ ಪ್ರಚಾರಗೊಳಿಸಿದ ಹೀಗಾಗಿ ಈ ತಿತ್ತಿರಿ ಮುನಿಯ ಮೂಲಕ ಪ್ರಚಾರಕ್ಕೆ ಬಂದ ಯಜುರ್ವೇದ ಭಾಗಕ್ಕೆ ತೈತ್ತಿರೀಯ ವೆಂದು ಹೆಸರಾಯಿತು [ಭಾರ-ಸಭಾ ೪]

**ತಿತಿಕ್ಷಾ**.—(1) ತಾಳ್ಮೆ ಅದರ ಪ್ರಶಂಸೆ [ಶಾಂತಿ. ೧೧೪].

(11) ಸ್ವಾಯಂಭುವ ಮನ್ವಂತರದಲ್ಲಿ ದಕ್ಷನ ಮಗಳು ಧರ್ಮನೆಂಬ ಪ್ರಜಾಪತಿಯ ಹದಿಮೂರು ಮಂದಿ ಪತ್ನಿಯರಲ್ಲಿ ಒಬ್ಬಳು. ಈಕೆ ಕ್ಷೇಮನೆಂಬ ಮಗನನ್ನು ಪಡೆದಳು [ಭಾಗ.-೪-೧೦ ದೇ ಭಾ -೪-೧೬]

**ತಿಮಿಂಗಿಲ** —ಒಬ್ಬ ಅರಸು ಪಾಂಡವರ ಕಾಲದಲ್ಲಿ ಈತನು ರಾಮಕ ಪರ್ವತದ ಬಳಿ ರಾಜ್ಯಭಾರಮಾಡುತ್ತಿದ್ದ [ಭಾರ -ಸಭಾ. ೩೧]

**ತಿಮಿಧ್ವಜ** —ಒಬ್ಬ ಅರಸು ದಂಡಕಾರಣ್ಯದ ಬಳಿ ವೈಜಯಂತವೆಂಬ ಪಟ್ಟಣ ದಲ್ಲಿ ರಾಜ್ಯಭಾರಮಾಡುತ್ತಿದ್ದ. ಇವನಿಗೆ ಶಂಬರನೆಂಬುದು ನಾಮಾಂತರ ಒಮ್ಮೆ ಇವನಿಗೂ ಇಂದ್ರನಿಗೂ ಯುದ್ಧ ಒದಗಿತು ಆಗ ಇಂದ್ರನು ಇವನನ್ನು ಜಯಿಸ ಲಾರದೆ ತನ್ನ ಸಹಾಯಕ್ಕಾಗಿ ದಶರಥನನ್ನು ಕರೆದ ದಶರಥನ ಸಂಗಡ ಕೈಕಯಿಯೂ ಹೋಗಿದ್ದಳು ತಿಮಿಧ್ವಜನೊಂದಿಗೆ ಯುದ್ಧಮಾಡತಕ್ಕ ಸಂದರ್ಭದಲ್ಲಿ ರಾಕ್ಷಸರು ಚೆದರಿಹೋಗುತ್ತಿದ್ದುದನ್ನು ಕಂಡು ಹೆದರಿದ ತಿಮಿಧ್ವಜನು ರೋಷಾವೇಶ ದಿಂದ ಭಯಂಕರವಾದ ಒಂದು ಬಾಣವನ್ನು ದಶರಥನ ಮೇಲೆ ಎಸೆದ ದಶರಥನು ಮೃತಪ್ರಾಯನಾಗಿ ಬಿದ್ದ. ಆಗ ಕೈಕಯಿ ತುಂಬ ಚಮತ್ಕಾರದಿಂದ ದಶರಥನ ರಥ ವನ್ನು ಬೇರೊಂದು ಕಡಗೆ ನಡೆಯಿಸಿಕೊಂಡು ಹೋಗಿ, ದಶರಥನನ್ನು ಉಪಚರಿ ಸಿದಳು. ಎಚ್ಚತ್ತ ದಶರಥನು ವಿಷಯವನ್ನೆಲ್ಲ ತಿಳಿದು, ಸಂತೋಷಭರಿತನಾಗಿ ಕೈಕಯಿಗೆ ಎರಡು ವರಗಳನ್ನು ಕೊಟ್ಟ [ರಾಮಾ -ಅಯೋ ೯] ನೋಡು— ಕೈಕಯಿ, ದಶರಥ.

**ತಿರ್ಯಗ್ಯೋನಿ ಜನನ ಕಾರಣ.**—[ಅನು. ೧೭೩]

**ತಿಲ** —ಎಳ್ಳು, ಆದರ ಪರಿಶುದ್ಧತೆ, ಉತ್ಪತ್ತಿಕ್ರಮ ಮುಂತಾದ್ದು [ಶಾಂತಿ. ೩೫೫] ತಿಲದಾನ ಫಲ [ಅನು ೬೩೬ ಅಶ್ವ ೧೦೬]. ಅದನ್ನು ಗಾಣಕ್ಕೆ ಹಾಕ ಬಾರದು [ಅಶ್ವ ೧೦೯].

**ತಿಲೋತ್ತಮೆ** —ಕಶ್ಯಪನಿಂದ ಪ್ರಾಧೆಯೆಂಬವಳಲ್ಲಿ ಜನಿಸಿದ ಅಪ್ಸರಸಿಯರಲ್ಲಿ ಒಬ್ಬಳು [ಆದಿ ೬೬, ೧೩೬ ಅನು ೬೭೧] ಸುಂದೋಪಸುಂದರೆಂಬ ಅಣ್ಣತಮ್ಮಂದಿ ರಾದ ಇಬ್ಬರು ರಾಕ್ಷಸರು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ಅವರಿಬ್ಬರಿಗೂ ತಮ್ಮಿಂದಲ್ಲದೆ ಮತ್ತಾರಿಂದಲೂ ಸಾವು ಬಾರದಹಾಗೆ ವರವನ್ನು ಬೇಡಿದರು. ಬ್ರಹ್ಮ "ತಥಾಸ್ತು" ಎಂದು ಕಣ್ಮರೆಯಾದ. ವರದರ್ಪದಿಂದ ಮತ್ತರಾದ ರಕ್ಕಸರು ದೇವತೆಗಳನ್ನು ಪೀಡಿಸತೊಡಗಿದರು ಇವರನ್ನು ಕೊಲ್ಲಿಸುವ ಉದ್ದೇಶ ದಿಂದ ವಿಶ್ವಕರ್ಮನು ಅರಿಷ್ಟೆಯಲ್ಲಿ ಈಕೆಯನ್ನು ಸೃಷ್ಟಿಸಿದನು ಮಿಕ್ಕ ಅಪ್ಸರಸಿಯ ರೆಲ್ಲರಿಗಿಂತಲೂ ಇವಳು ಒಂದು ಎಳ್ಳಷ್ಟಾದರೂ ಹೆಚ್ಚು ಸೌಂದರ್ಯವತಿಯಾ ಗಿದ್ದುದರಿಂದ ಇವಳಿಗೆ ತಿಲೋತ್ತಮೆಯೆಂದು ಹೆಸರು [ಆದಿ. ೬೩೧]. ಸುಂದೋಪ

ಸುಂದರರು ತಿಲೋತ್ತಮೆಯನ್ನು ಕಂಡು ಕಾಮಮೋಹಿತರಾದರು. ಇಬ್ಬರೂ ಅವಳ ಬಳಿ ಹೋಗಿ ತಮ್ಮ ಅಭಿಪ್ರಾಯವನ್ನು ಹೊರಪಡಿಸಿದರು ತಿಲೋತ್ತಮೆ" ನಿಮ್ಮಿಬ್ಬ ರಲ್ಲಿ ಯಾವನು ಶೂರನೋ ಅವನನ್ನು ನಾನು ಮದುವೆಯಾಗುವೆನು" ಎಂದಳು. ಆಗ ಅವರಿಬ್ಬರೂ ಒಬ್ಬರಿಗೊಬ್ಬರು ಪ್ರತಿಸ್ಪರ್ಧಿಗಳಾಗಿ ನಿಂತು ಹೋರಾಡಿ ಸತ್ತರು [ಆದಿ ೨೩೨]. ಒಮ್ಮೆ ತಿಲೋತ್ತಮೆ ಚಂದ್ರನ ಬಳಿಗೆ ಹೋಗುತ್ತಿದ್ದಾಗ ಸಾಹ ಸಿಕನೆಂಬವನು ಆಕೆಯನ್ನು ಬಲಾತ್ಕಾರದಿಂದ ತಡೆದು ಆಕೆಯೊಡನೆ ಕ್ರೀಡಿಸು ತ್ತಿದ್ದ ಇದರಿಂದ ದುರ್ವಾಸ ಮುನಿಯ ತಪಸ್ಸಿಗೆ ಭಂಗವಾಯಿತು. ಕ್ರುದ್ಧನಾದ ಮುನಿ ಅವರಿಬ್ಬರನ್ನೂ ರಾಕ್ಷಸರಾಗುವಂತೆ ಶಪಿಸಿದ ತಿಲೋತ್ತಮೆ ಬಾಣಾಸುರನ ಮಂತ್ರಿಯಾದ ಕುಂಭಾಂಡನಿಗೆ ಮಗಳಾಗಿ ಚಿತ್ರರೇಖೆಯೆಂಬ ಹೆಸರಿನಿಂದ ಜನಿಸಿ, ಬಾಣಾಸುರನ ಪುತ್ರಿಯಾದ ಉಷೆಯನ್ನು ಅನಿರುದ್ಧನೊಂದಿಗೆ ಸೇರಿಸಿ, ಅವರ ವಿವಾಹಾನಂತರ ರಾಕ್ಷಸ ಜನ್ಮವನ್ನು ತೊರೆದಳು ನೋಡು—ಅನಿರುದ್ಧ, ಉಷಾ, ಚಿತ್ರಲೇಖಾ [ಹರಿ -ವಿಷ್ಣು ೧೧೮]

**ತಿಷ್ಯ.**—(1) ಕಲಿಯುಗದ ನಾಮಾಂತರ ನೋಡು—ಕಲಿ.

(ii) ಪುಷ್ಯ ನಕ್ಷತ್ರ ಮತ್ತು ಮಾಸದ ನಾಮಾಂತರ

**ತೀರ್ಥಕ್ಷೇತ್ರ ಮಹಿಮೆ** —[ಆದಿ ೨೩೪-೨೩೮ ವನ ೭೯-೮೩ ಶಲ್ಯ. ೪೨. ಅನು ೬೪, ೧೭೦ ಪದ್ಮ -೧-೧೩ ಭಾಗ -೧೦-೭೯].

**ತೀರ್ಥಯಾತ್ರಾ ಪರ್ವ**—ವನವಾಸ ಸಮಯದಲ್ಲಿ ಪಾಂಡವರು ತೀರ್ಥಯಾತ್ರೆ ಮಾಡಿದ ವಿವರ [ವನ ೭೮-೧೫೭]

**ತುಮ್ಬುರು.**—ಕಶ್ಯಪ ಮುನಿಯಿಂದ ಅರಿಷ್ಟೆಯೆಂಬ ಪತ್ನಿಯಲ್ಲಿ ಜನಿಸಿದ ದೇವ ಗಂಧರ್ವರಲ್ಲಿ ಒಬ್ಬ [ಆದಿ ೬೬, ೧೧೦ ಸ. ೭, ೧೦ ಉದ್ಯೋ ೧೧೭] ಒಮ್ಮೆ ರಂಭೆ ಸ್ವರ್ಗಲೋಕದಿಂದ ಕುಬೇರನ ಬಳಿಗೆ ಹೋಗುತ್ತಿದ್ದಾಗ, ತುಂಬುರು ನಡು ದಾರಿಯಲ್ಲಿ ಆಕೆಯನ್ನು ತಡೆದು ಬಲಾತ್ಕಾರದಿಂದ ಮೇಲೆಬಿದ್ದು ಮಾನಭಂಗ ಮಾಡಿದ ಬಳಿಕ ರಂಭೆ ಕುಬೇರನ ಬಳಿಗೆ ಹೋಗಲಾಗಿ, ಕುಬೇರನು ರಂಭೆಯನ್ನು ದಿಟ್ಟಿಸಿ, ಸಂಶಯಗ್ರಸ್ತನಾಗಿ, ಆಕೆಯ ಮೂಲಕ ನಡೆದ ಸಮಾಚಾರವನ್ನೆಲ್ಲ ತಿಳಿದು, ಕೋಪದಿಂದ ತುಂಬುರುವನ್ನು ಕರೆದು "ನೀನು ರಂಭೆಯನ್ನು ಅಡ್ಡಗಟ್ಟಿ ಮಾರ್ಗ ಮಧ್ಯದಲ್ಲಿ ಧರ್ಮವಿರುದ್ಧವಾಗಿ ಲಜ್ಜೆಯಿಲ್ಲದೆ ಮಾನಭಂಗಮಾಡಿರುವೆಯಾದುದ ರಿಂದ ರಾಕ್ಷಸಯೋನಿಯಲ್ಲಿ ಜನಿಸು" ಎಂಬುದಾಗಿ ಶಾಪವಿತ್ತ. ಬಳಿಕ ತುಂಬುರು ಕಂಗೆಟ್ಟು ಬೇಡಿಕೊಳ್ಳಲಾಗಿ, ಕುಬೇರ ಮರುಕಗೊಂಡವನಾಗಿ "ರಾಮ ಲಕ್ಷ್ಮಣರು ಸೀತಾಸಮೇತರಾಗಿ ಅರಣ್ಯಕ್ಕೆ ಬಂದಾಗ ಅವರನ್ನು ಅಡ್ಡಗಟ್ಟಿ, ಸೀತೆಯನ್ನು ಅಪ

ಹರಿಸಿ, ರಾಮನಿಂದ ಹತನಾಗಿ ನಿನ್ನ ಮೊದಲಿನ ರೂಪವನ್ನು ಹೊಂದುವೆ'' ಎಂದು ಅನುಗ್ರಹಿಸಿದ ನೋಡು—ವಿರಾಧ [ರಾಮಾ -ಅರಣ್ಯ. ೩-೪]

**ತುರ**—ಒಬ್ಬ ಮಹರ್ಷಿ. ಈತನು ಕವಷೆಯೆಂಬವಳ ಮಗನಾದುದರಿಂದ ಈತನಿಗೆ ಕಾವಷೇಯನೆಂಬ ಹೆಸರೂ ಸಲ್ಲುತ್ತದೆ ಈತನು ಜನಮೇಜಯನ ಸರ್ಪ ಯಾಗದಲ್ಲಿ ಪ್ರಧಾನ ಋತ್ವಿಜನಾಗಿದ್ದ. ನೋಡು—ಜನಮೇಜಯ

**ತುರ್ವಸು**—ಚಂದ್ರವಂಶದ ಯಾಯಾತಿ ರಾಜನಿಂದ ಶುಕ್ರಾಚಾರ್ಯನ ಮಗ ಳಾದ ದೇವಯಾನಿಯಲ್ಲಿ ಜನಿಸಿದ ಇಬ್ಬರು ಮಕ್ಕಳಲ್ಲಿ ಕಿರಿಯವ. ಯದುವೆಂಬವನು ಇವನ ಅಣ್ಣ ಯಯಾತಿ ತನ್ನ ಮುದಿತನವನ್ನು ತೆಗೆದುಕೊಂಡು, ಇವರ ಯೌವನವನ್ನು ತನಗೆ ಕೊಡುವುದಾಗಿ ಕೇಳಿದ ಇವರಿಬ್ಬರೂ ಅದಕ್ಕೆ ಸಮ್ಮತಿಸ ಲಿಲ್ಲ ಕುಪಿತನಾದ ಯಯಾತಿ, ಇವರಿಬ್ಬರೂ ತನ್ನ ರಾಜ್ಯಕ್ಕೆ ಅರ್ಹರಲ್ಲವೆಂಬು ದಾಗಿ ಶಾಪವಿತ್ತ ಹೀಗೆ ಯದು, ತುರ್ವಸುಗಳಿಬ್ಬರೂ ರಾಜ್ಯಾಧಿಕಾರವನ್ನು ಹೋಗಲಾಡಿಸಿಕೊಂಡ ಕಾರಣ, ಯದು ವಂಶದವನಾದ ಶ್ರೀ ಕೃಷ್ಣನು ಕಂಸನನ್ನು ಕೊಂದ ತರುವಾಯ, ತಾನೇ ರಾಜನಾಗದೆ ಕಂಸನ ತಂದೆಯಾದ ಉಗ್ರಸೇನನಿಗೆ ಪಟ್ಟಗಟ್ಟಿದ [ಭಾಗ -೯, ೧೮ ಹರಿ -೧-೩೦ ಬ್ರಹ್ಮ -೧೨ ಆದಿ ೭೩, ೭೯. ವನ. ೧೨. ಮತ್ಸ್ಯ -೨೪-೪೨ ರಾಮಾ -ಉತ್ತ ೫೮, ೫೯ ವಿಷ್ಣು -೪-೧೦] ಇವನ ವಂಶ ವರ್ಣನೆ [ಭಾಗ -೯-೨೩]

**ತುಲಜಾಪುರ**—ಪ್ರಸಿದ್ಧವಾದ ಒಂದು ಶಕ್ತಿ ಕ್ಷೇತ್ರ [ದೇ ಭಾ -೭-೩೮].

**ತುಲಸೀ**.—ಹಂಸಧ್ವಜನ ಮಗನಾದ ಧರ್ಮಧ್ವಜನಿಂದ ಮಾಧವಿಯೆಂಬವಳಲ್ಲಿ ಲಕ್ಷ್ಮಿಯ ಅಂಶದಿಂದ ಜನಿಸಿದವಳು ಈಕೆ ಬಾಲ್ಯದಲ್ಲಿಯೇ ಬದರಿಕಾಶ್ರಮಕ್ಕೆ ಹೋಗಿ ಬ್ರಹ್ಮನನ್ನು ಕುರಿತು "ವಿಷ್ಣು ತನಗೆ ಪತಿಯಾಗಬೇಕು" ಎಂಬುದಾಗಿ ತಪಸ್ಸುಮಾಡಿದಳು ಬ್ರಹ್ಮ ಪ್ರತ್ಯಕ್ಷನಾಗಿ "ನಿನ್ನ ಕೋರಿಕೆಯಂತೆಯೇ ನಡೆಯು ತ್ತದೆ ಆದರೆ ನೀನು ಗಿಡವಾಗುವೆ" ಎಂದು ಹೇಳಿ ಕಣ್ಮರೆಯಾದ. ಇಷ್ಟರಲ್ಲಿ ದಂಭಾಸುರನ ಮಗನಾದ ಶಂಖಚೂಡನು ಜೈಗೀಷವ್ಯ ಮಹರ್ಷಿಯಿಂದ ವಿಷ್ಣು ಮಂತ್ರೋಪದೇಶವನ್ನು ಪಡೆದು, ಪುಷ್ಕರ ಕ್ಷೇತ್ರದಲ್ಲಿ ತಪಸ್ಸುಮಾಡಿ, ಸಿದ್ಧಿಯನ್ನು ಹೊಂದಿದ ಇವರಿಬ್ಬರೂ ಆಕಸ್ಮಾತ್ತಾಗಿ ಸಂಧಿಸಿ ಮಾತನಾಡುತ್ತಿರುವಲ್ಲಿ ನಾರದ ಮುನಿ ಅಲ್ಲಿಗೆ ಬಂದು, ತುಲಸಿಯನ್ನು ಕಂಡು "ನಿನಗೆ ಶಂಖಚೂಡನೇ ಪತಿ ಯಾಗಲು ತಕ್ಕ ವರನು. ಅವನಿಗೆ ನೀನೇ ಅನುರೂಪಳಾದ ವಧು" ಎಂದನು. ಅವರಿಬ್ಬರೂ ಮದುವೆಯಾದರು. ಶಂಖಚೂಡ ದೇವತೆಗಳೊಡನೆ ಯುದ್ಧಮಾಡಿ ಹತನಾದ. ಆಗ ವಿಷ್ಣು ಶಂಖಚೂಡನ ರೂಪವನ್ನು ಧರಿಸಿ, ತುಲಸಿಯ ಬಳಿ ಸಾರ್ದು "ನಾನು ದೇವತೆಗಳನ್ನೆಲ್ಲಾ ಗೆದ್ದುಬಂದೆ"-ಎನಲು, ತುಲಸಿ ತನ್ನ

ಗಂಡನು ಗೆದ್ದು ಬಂದನೆಂಬ ಸಂತೋಷದಿಂದ ಬಹಳವಾಗಿ ಉಪಚರಿಸಿ, ಆತನೊಡಗೂಡಿ, ಕೆಲವು ಕುರುಹುಗಳಿಂದ ತಾನು ಮೋಸಹೋದೆನೆಂದು ತಿಳಿದು ದೂರವಾಗಿ ಸರಿದು ನಿಂತಳು ಬಳಿಕ ವಿಷ್ಣು ನಿಜರೂಪವನ್ನು ತೋರಿ, ತಾನೇ ಶಂಖಚೂಡನೆಂತಲೂ, ತುಲಸಿಯನ್ನು ಮದುವೆಯಾಗುವುದಕ್ಕಾಗಿಯೇ ತಪಸ್ಸುಮಾಡಿದಂತೆಯೂ ಹೇಳಿದ ತುಲಸಿ ಶಂಖಚೂಡ ಹತನಾದನೆಂಬ ಸುದ್ದಿಯನ್ನು ಕೇಳಿ ತಾನೂ ಗಿಡನಾದಳು [ದೇ. ಭಾಗ.-೯, ೧೭, ೨೫]

**ತುಲಾಧಾರ**—ಕಾಶೀ ಕ್ಷೇತ್ರದಲ್ಲಿದ್ದ ಮಹಾಜ್ಞಾನಿಯಾದ ಒಬ್ಬ ವೈಶ್ಯ. ಎಂದಿಗೂ ಧರ್ಮವಿರುದ್ಧವಾಗಿ ನಡೆಯತಕ್ಕವನಲ್ಲ ಅತಿಯಾಗಿ ಆಸೆಪಡದೆ ನ್ಯಾಯರೀತಿಯಿಂದ ವ್ಯಾಪಾರಮಾಡುತ್ತಿದ್ದ. ಒಮ್ಮೆ ತನ್ನಲ್ಲಿಗೆ ಜ್ಞಾನಾರ್ಜನೆಗಾಗಿ ಬಂದ ಜಾಜಲಿ ಮಹರ್ಷಿಗೆ ಅನೇಕ ಧರ್ಮರಹಸ್ಯಗಳನ್ನು ಉಪದೇಶಮಾಡಿದ ಇದರಿಂದ ಜಾಜಲಿ ಮಹರ್ಷಿಯು ಅಭಿಮಾನ ನಷ್ಟವಾಯಿತು [ಶಾಂತಿ ೨೬೨-೨೬೮]

**ತುಷಿತ.**—ದೇವತೆಗಳು ಸ್ವಾಯಂಭುವ ಮನ್ವಂತರದಲ್ಲಿ ಯಜ್ಞಪುರುಷನಿಂದ ದಕ್ಷಿಣಾದೇವಿಯಲ್ಲಿ ಜನಿಸಿದವರು ತೋಷ, ಪ್ರತೋಷ, ಸಂತೋಷ, ಭದ್ರ, ಶಾಂತಿ, ಇಡಸ್ಪತಿ, ಇಧ್ಮ, ಕವಿ, ವಿಭು, ಸ್ವಹ್ನ, ಸುದೇವ, ರೋಚನ ಎಂಬುದಾಗಿ ಇವರು ಹನ್ನೆರಡು ಮಂದಿ ಸ್ವಾಯಂಭುವ ಮನ್ವಂತರದ ದೇವತೆಗಳಿಗೆ ಈ ಹೆಸರು ಸಲ್ಲುತ್ತದೆ.

'' ತುಷಿತಾ ನಾಮ ತೇ ದೇವಾ ಆಸ೯ ಸ್ವಾಯಂಭುವೇಽಂತರೇ ''

[ಭಾಗ -೮-೧೩].

**ತುಷಿತಾ.**– ಸ್ವಾರೋಚಿಷ ಮನ್ವಂತರದ ವೇದಶಿರ ಮಹರ್ಷಿಯ ಹೆಂಡತಿ ಈ ಮನ್ವಂತರದಲ್ಲಿ ವಿಷ್ಣುಪದವಿಯನ್ನು ಪಡೆದ ವಿಭುವೆಂಬಾತನು ಇಂದ್ರನಿಗೆ ಸಹಾಯಾರ್ಥವಾಗಿ ತುಷಿತೆಯ ಮಗನಾಗಿ ಜನಿಸಿದ ನೋಡು—ಸ್ವಾರೋಚಿಷ [ಭಾಗ - ೮-೧೩].

**ತುಷ್ಟ.**—ಚಂಪಕಾವತೀ ನಗರಿಯ ಅರಸನಾದ ಹಂಸಧ್ವಜನ ಮಂತ್ರಿ. ನೋಡು—ಹಂಸಧ್ವಜ [ಜೈ. ಅಶ್ವ. ೧೭-೨೧]

**ತುಷ್ಟಿ.**—ಸ್ವಾಯಂಭುವ ಮನ್ವಂತರದಲ್ಲಿ ದಕ್ಷಬ್ರಹ್ಮನ ಮಗಳು. ಈಕೆ ಬ್ರಹ್ಮಪುತ್ರನಾದ ಧರ್ಮಮಹರ್ಷಿಯನ್ನು ಮದುವೆಯಾಗಿ ಸಂತೋಷ ಅಥವಾ ಹರ್ಷ ಎಂಬ ಮಗನನ್ನು ಪಡೆದಳು. **ನೋಡು**—ಧರ್ಮ [ಭಾಗ.-೪-೧೦ ದೇ ಭಾ -೪, ., ೬].

**ತುಷ್ಟಿಮನ್ತ.**—ಉಗ್ರಸೇನ ರಾಜನ ಒಂಬತ್ತು ಮಂದಿ ಪುತ್ರರಲ್ಲಿ ಕಡೆಯವನು ಕಂಸ, ಸುನಾಮ, ನ್ಯಗ್ರೋಧ, ಕಂಕ, ಶಂಕು, ಸುಹು, ರಾಷ್ಟ್ರಪಾಲ, ಸೃಷ್ಟಿ ಎಂಬವರು ಇವನ ಅಣ್ಣಂದಿರು ಕಂಸಾ, ಕಂಸಾವತಿ, ಕಂಕಾ, ಶರಭೂ, ರಾಷ್ಟ್ರಪಾಲಿಕಾ ಎಂಬ ಐದು ಮಂದಿ ಸಹೋದರಿಯರು [ಭಾಗ -೧೦-೪೫]

**ತೃಣಬಿನ್ದು.**—(1) ಒಬ್ಬ ಮಹರ್ಷಿ ಮೇರುಪರ್ವತದ ತಪ್ಪಲಲ್ಲಿ ಆಶ್ರಮವನ್ನು ಕಲ್ಪಿಸಿಕೊಂಡು ತಪಸ್ಸುಮಾಡುತ್ತಿದ್ದ ಬ್ರಹ್ಮಪುತ್ರನಾದ ಪುಲಸ್ತ್ಯಮುನಿ ತೃಣಬಿಂದುವಿನ ಆಶ್ರಮಕ್ಕೆ ಹೋಗಿ, ಆತನಿಂದ ಸತ್ಕೃತನಾಗಿ ಆತನ ಆಶ್ರಮದ ಬಳಿಯಲ್ಲಿಯೇ ತಾನೂ ಪರ್ಣಶಾಲೆಯನ್ನು ಕಲ್ಪಿಸಿಕೊಂಡು, ತಪಸ್ಸುಮಾಡುತ್ತಿದ್ದ. ಸುತ್ತಮುತ್ತಣ ಋಷಿಕನ್ಯೆಯರೂ, ಗಂಧರ್ವ, ನಾಗಕನ್ಯೆಯರೂ ಅಲ್ಲಿಗೆ ಬಂದು ನೃತ್ತ, ಗೀತ, ಪರಿಹಾಸಾದಿಗಳಿಂದ ಈತನ ಚಿತ್ತಸ್ಥೈರ್ಯಕ್ಕೆ ಭಂಗವನ್ನುಂಟುಮಾಡುತ್ತಿದ್ದರು ಇದರಿಂದ ಕೋಪಾವಿಷ್ಟನಾದ ಪುಲಸ್ತ್ಯನು "ಇನ್ನು ಮುಂದೆ ನಿಮ್ಮಲ್ಲಿ ಯಾರಾದರೂ ಇಲ್ಲಿಗೆ ಬಂದು ನನ್ನ ಕಣ್ಣಿಗೆ ಕಂಡುಬಂದರೆ ಗರ್ಭವತಿಯರಾಗುವಿರಿ" ಎಂಬುದಾಗಿ ಶಾಪವಿತ್ತ ಅಂದಿನಿಂದ ಕನ್ಯೆಯರು ಆತನ ಆಶ್ರಮವನ್ನು ಮರೆತುಬಿಟ್ಟರು ಇಂತಿರಲು ತೃಣಬಿಂದುವಿನ ಮಗಳಾದ ಗೋ ಎಂಬ ಕನ್ಯೆ ಒಂದು ದಿನ ನಿಯಮದಲ್ಲಿದ್ದ ಪುಲಸ್ತ್ಯನ ಆಶ್ರಮಕ್ಕೆ ಹೋಗಿ, ಆತನ ಬಳಿಯಲ್ಲಿಯೇ ಸ್ವಲ್ಪ ಹೊತ್ತು ನಿಂತಿರಲು, ಒಡನೆಯೇ ಆಕೆಯ ದೇಹದಲ್ಲಿ ಕೆಲವು ವೈಲಕ್ಷಣ್ಯಗಳುಂಟಾಗಲು, ಹೆದರಿ ತಂದೆಯ ಬಳಿಗೆ ಬಂದಳು ತಂದೆ ಮಗಳ ಮುಖವನ್ನು ನೋಡಿ ಸಂದೇಹಪಟ್ಟು, ಇಂತಹ ಮಾರ್ಪುಗಳಿಗೆ ಕಾರಣವೇನೆಂದು ಪ್ರಶ್ನೆಮಾಡಲಾಗಿ, ಆ ಕನ್ಯೆ ತಾನು ಪುಲಸ್ತ್ಯನ ಆಶ್ರಮವನ್ನು ಹೊಕ್ಕ ಮಾತ್ರದಿಂದಲೇ ಇಂತಹ ಸ್ಥಿತಿಗೆ ಬಂದೆನೆಂದಳು ತೃಣಬಿಂದು ದಿವ್ಯದೃಷ್ಟಿಯಿಂದ ನಡೆದ ಸಮಾಚಾರವನ್ನು ಅರಿತು, ಮಗಳೊಂದಿಗೆ ಪುಲಸ್ತ್ಯನ ಬಳಿಗೆ ಬಂದು "ಅಯ್ಯಾ, ಪುಲಸ್ತ್ಯ ಮುನೀಶ್ವರನೆ, ಚಿರಕಾಲ ತಪಸ್ಸಿನಿಂದ ನಿನ್ನ ದೇಹ ಕೃಶವಾಗಿದೆ ನಿನ್ನ ಶುಶ್ರೂಷೆಗೂ ಇಲ್ಲಿ ಯಾರೊಬ್ಬರೂ ಇಲ್ಲ, ಆದ್ದರಿಂದ ಈಕೆಯನ್ನು ನಿನ್ನ ಶುಶ್ರೂಷೆಗಾಗಿ ಪರಿಗ್ರಹಿಸು" ಎಂದು ಹೇಳಿ ತನ್ನ ಮಗಳನ್ನು ಪುಲಸ್ತ್ಯನಿಗೆ ಕೊಟ್ಟು ಮದುವೆಮಾಡಿದ [ರಾಮಾ -ಉತ್ತ ೨. ಭಾರ ವನ -೨೮೫]

(11) ಇಪ್ಪತ್ತನಾಲ್ಕನೆಯ ಚತುರ್ಯುಗದ ದ್ವಾಪರಾಂತ್ಯದಲ್ಲಿ ಈತನು ವ್ಯಾಸನಾಗಿದ್ದ [ದೇ ಭಾ -೧-೪]

(111) ಸೂರ್ಯವಂಶದ ಅರಸು. ಈತ ಅಲಂಬುಸೆಯೆಂಬ ಅಪ್ಸರಸಿಯಲ್ಲಿ ವಿಶಾಲ, ಶೂನ್ಯಬಂಧು, ಧೂಮ್ರಕೇತು ಎಂಬ ಮೂವರು ಪುತ್ರರನ್ನು ಪಡೆದ. ಈತ

ಒಂದು ತೀರ್ಥವನ್ನು ನಿರ್ಮಿಸಿದ. ಆ ತೀರ್ಥ ಈತನ ಹೆಸರಿನಿಂದಲೇ ಪ್ರಖ್ಯಾತ ವಾಗಿದೆ [ಭಾರ.-ವನ. ೨೫೯].

**ತೃಣಬಿನ್ದುಸರೋವರ.**—ಒಂದು ತೀರ್ಥ. ನೋಡು—ತೃಣಬಿನ್ದು.

**ತೃಣಾವರ್ತ.**—ಒಬ್ಬ ರಾಕ್ಷಸ. ಕಂಸನ ಅನುಚರರಲ್ಲಿ ಒಬ್ಬ ಕಂಸನ ಪ್ರೇರಣೆ ಯಂತೆ ಬಲರಾಮ ಕೃಷ್ಣರನ್ನು ಕೊಲ್ಲುವುದಕ್ಕಾಗಿ ಬಿರುಗಾಳಿಯ ರೂಪದಿಂದ ಬಂದು, ಬಲರಾಮ ಕೃಷ್ಣರನ್ನು ಹೊಡೆದುಕೊಂಡು ಹೋಗುತ್ತಿರುವಲ್ಲಿ ಶ್ರೀ ಕೃಷ್ಣ, ಗರಿಮಾ ಸಿದ್ಧಿಯಿಂದ ತನ್ನ ದೇಹವನ್ನು ಭಾರವಾಗಿ ಮಾಡಿ, ಅವನ ಕುತ್ತಿಗೆಯಲ್ಲಿ ಬಲವಾಗಿ ಒಂದು ಸಲ ಗುದ್ದಿದನು. ಒಡನೆಯೇ ತೃಣಾವರ್ತನು ಸತ್ತುಬಿದ್ದ [ಭಾಗ.-೧೦-೭].

**ತೃಷ್ಣಾ.**—ಆಸೆ ಇದರ ನಿಂದೆ [ಆದಿ ೬೯, ೭೯, ೧೨೪ ಉದ್ಯೋ. ಶ೯, ೪೦, ೬೪ ಶಾಂತಿ ೧೨೫-೧೨೮ ೧೭೩, ೧೭೬, ೨೮೨]

**ತೇಜಶ್ಶ್ರವಾ**—ಗಾಂಧಾರಿಯ ಸಹೋದರಿ ಈಕೆಯೂ ಧೃತರಾಷ್ಟ್ರನನ್ನೇ ಮದುವೆಯಾಗಿದ್ದಳು [ಆದಿ. ೧೧೯]

**ತೇಜೇಯು**—ಒಬ್ಬ ಅರಸು ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಚಂದ್ರ ವಂಶದ ಪೂರು ಪುತ್ರನಾದ ರೌದ್ರಾಶ್ವನಿಂದ ಜನಿಸಿದ ಹತ್ತು ಮಂದಿ ಪುತ್ರರಲ್ಲಿ ಒಬ್ಬ [ಆದಿ ೮೮]

**ತೈತ್ತಿರಿ**—ತಿತ್ತಿರಿ ಮುನಿಯ ಮಗ ಕೃಷ್ಣದ್ವೈಪಾಯನ ಶಿಷ್ಯನಾದ ವೈಶಂ ಪಾಯನನ ಮೂಲಪುರುಷ. ನೋಡು—ತಿತ್ತಿರಿ

**ತೈತ್ತಿರೀಯ**—ಕೃಷ್ಣ ಯಜುರ್ವೇದದ ನಾಮಾಂತರ ನೋಡು—ತಿತ್ತಿರಿ

**ತೋಶಲಕ**—ಕಂಸನ ಆಸ್ಥಾನದಲ್ಲಿದ್ದ ಒಬ್ಬ ಜಟ್ಟಿ ಬಲರಾಮ ಕೃಷ್ಣರು ಧನುರ್ಯಾಗಾರ್ಥವಾಗಿ ಮಥುರೆಗೆ ಬಂದಿದ್ದಾಗ, ಮುಷ್ಟಿಕ, ಚಾಣೂರರೆಂಬ ಜಟ್ಟಿ ಗಳನ್ನು ಸಂಹರಿಸಿದ ತರುವಾಯ ಇವನ ತಲೆಯ ಮೇಲೆ ಬಲವಾಗಿ ಒದ್ದು ಕೃಷ್ಣನು ಇವನನ್ನು ಕೊಂದ [ಭಾಗ -೧೦-೪೪]

**ತ್ರಯ್ಯಾರುಣ**—ಈಗ ನಡೆಯುತ್ತಿರುವ ವೈವಸ್ವತಮನ್ವಂತರದ ಹದಿನೈದ ನೆಯ ದ್ವಾಪರ ಯುಗದಲ್ಲಿ ಈತ ವ್ಯಾಸನಾಗಿದ್ದ [ದೇ ಬಾ -೧-೪]

**ತ್ರಯ್ಯಾರುಣಿ**—ಒಬ್ಬ ಅರಸು. ಪೂರು ವಂಶದ ದುರಿತಕ್ಷಯನೆಂಬ ಅರಸನ ಮೂವರು ಪುತ್ರರಲ್ಲಿ ಹಿರಿಯವ. ಈತ ತಪೋಮಹಿಮೆಯಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿದ [ಭಾಗ.-೯-೨೦ ಹರಿ.-೧-೩೧ ವಿಷ್ಣು - ೪-೧೯].

**ತ್ರಸದ(ದ್ದ)ಸ್ಯು.**—ಒಬ್ಬ ಅರಸು ಸೂರ್ಯ ವಂಶದ ಮಾಂಧಾತೃ ಚಕ್ರ ವರ್ತಿಯ ಮಗನಾದ ಪುರುಕುತ್ಸ ಚಕ್ರವರ್ತಿಯ ಇಬ್ಬರು ಮಕ್ಕಳಲ್ಲಿ ಕಿರಿಯವ.

ಇವನಿಗೆ ಪೌರುಕುತ್ಸ್ಯನೆಂಬ ಹೆಸರೂ ರೂಢಿಯಲ್ಲಿದೆ [ಭಾಗ.-೯-೭] ಅಗಸ್ತ್ಯ ಮಹರ್ಷಿ ಒಮ್ಮೆ ಈತನಲ್ಲಿಗೆ ದ್ರವ್ಯಾಪೇಕ್ಷೆಯಿಂದ ಬಂದ ಆದರೆ ಆ ಸಮಯದಲ್ಲಿ ತ್ರಸದಸ್ಯುವಿನ ಕೋಶದಲ್ಲಿ ಹಣವಿರಲಿಲ್ಲ ಪ್ರಜೆಗಳನ್ನು ಪೀಡಿಸುವುದಕ್ಕೂ ಅರಸನು ಸಮ್ಮತಿಸಲಿಲ್ಲ ಮುನಿಯನ್ನು ಬರಿಯ ಕೈಯಲ್ಲಿ ಕಳುಹಿಸುವುದೂ ಯುಕ್ತವೆಂದು ತೋರಲಿಲ್ಲ ಈ ಕಾರಣದಿಂದ ತ್ರಸದಸ್ಯು ಅಗಸ್ತ್ಯನನ್ನು ಶ್ರುತರ್ವ, ಮತ್ತು ಬ್ರಧ್ನಾಶ್ವರೆಂಬ ಅರಸರಲ್ಲಿಗೆ ಕರೆದುಕೊಂಡು ಹೋದ ಅಲ್ಲಿಯೂ ಹಣ ಒದಗಲಿಲ್ಲವಾದುದರಿಂದ ಈ ನಾಲ್ವರೂ ಸೇರಿ ಯೋಚಿಸಿ, ಆ ಕಾಲದಲ್ಲಿ ಮಹಾ ಧನಿಕನಾಗಿದ್ದ ಇಲ್ವಲನಲ್ಲಿಗೆ ಹೋದರು ನೋಡು—ಇಲ್ವಲ ಬಳಿಕ ಅಗಸ್ತ್ಯ ಇಲ್ವಲನ ಸೊಕ್ಕನ್ನು ಮುರಿದು ಆತನಿಂದ ಹೇರಳವಾಗಿ ಹಣವನ್ನು ಪಡೆದು, ತ್ರಸದಸ್ಯು ಮುಂತಾದವರು ಮೂವರನ್ನೂ ಬೀಳ್ಕೊಂಡು ತನ್ನ ಆಶ್ರಮಕ್ಕೆ ಹೋದ [ಭಾರ.-ವನ. ೯೬]

**ತ್ರಸ್ನು**.—ಒಬ್ಬ ಅರಸು ಚಂದ್ರ ವಂಶದ ಅಂತ್ಯನಾರನೆಂಬ ರಾಜನಿಂದ ಸರಸ್ವತೀ ನದಿಯಲ್ಲಿ ಜನಿಸಿದವ ಈತ ಕಾಳಿಂದಿಯನ್ನು ಮದುವೆಯಾಗಿ ಇಲಿಲನೆಂಬ ಮಗನನ್ನು ಪಡೆದ ನೋಡು—ಇಲಿಲ [ಆದಿ ೬೩]

**ತ್ರಿಕೂಟ** —ಲಂಕೆಯಲ್ಲಿನ ಒಂದು ಪರ್ವತ [ರಾಮಾ -ಸುಂ. ೧]

**ತ್ರಿಗರ್ತ** —ಒಂದು ದೇಶ ಬಾಹ್ಲೀಕ ದೇಶಕ್ಕೆ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ವಿಪಾಶಾ ನದಿಯ ಸಮೀಪದಲ್ಲಿದೆ [ಭಾರ -ಭೀ ೯] ಈ ದೇಶ ಈಗ ಲಾಹೋರು ಜಿಲ್ಲೆಯಲ್ಲಿ ಒಂದು ಭಾಗವಾಗಿ ಜಲಂಧರವೆಂದು ಪ್ರಖ್ಯಾತವಾಗಿದೆ

**ತ್ರಿಜಟ** —ಗರ್ಗ ವಂಶದ ಒಬ್ಬ ಬ್ರಾಹ್ಮಣ ಈತ ಅರಣ್ಯದಲ್ಲಿ ವ್ಯವಸಾಯ ಮಾಡಿಕೊಂಡು ಜೀವಿಸುತ್ತಿದ್ದ ಮನೆತುಂಬ ಮಕ್ಕಳಿದ್ದರು ಶ್ರೀ ರಾಮನು ವನವಾಸಕ್ಕೆ ಹೊರಡುವ ಸಮಯದಲ್ಲಿ ತನ್ನ ವಸ್ತ್ರಾಭರಣಾದಿಗಳನ್ನು ದಾನಮಾಡುತ್ತಿದ್ದಾನೆಂಬ ಸುದ್ದಿಯನ್ನು ಕೇಳಿದ ಈತ ಗೃಹಿಣಿಯ ಬಲಾತ್ಕಾರದಿಂದ ರಾಮನಲ್ಲಿಗೆ ಬಂದು "ಪ್ರಭೋ, ಇಂದಿನವರೆಗೆ ಅಯಾಚಿತವ್ರತದಿಂದಲೇ ಜೀವನ ಮಾಡಿದೆನು. ಈಗ ಬಹಳ ವೃದ್ಧನಾಗಿದ್ದೇನೆ ದೇಹದಲ್ಲಿ ತ್ರಾಣವಿಲ್ಲವಾಗಿ ಪಾಡು ಪಡಲಾರೆ" ಎಂದ. ಶ್ರೀ ರಾಮ ಈತನ ಸ್ಥಿತಿಯನ್ನು ನೋಡಿ ವಿನೋದಾರ್ಥವಾಗಿ "ಎಲೈ ಭೂ ಸುರೋತ್ತಮ, ನಿನ್ನ ಕೈಯಲ್ಲಿರುವ ಈ ಕೋಲನ್ನು ಬಿಸುಟರೆ, ಅದು ಎಷ್ಟು ದೂರ ಹೋಗಿ ಬೀಳುತ್ತದೆಯೋ ಅಲ್ಲಿನವರೆಗೆ ನಿಂತಿರುವ ಗೋವುಗಳನ್ನೆಲ್ಲ ನಿನಗೆ ಕೊಡುತ್ತೇನೆ" ಎಂದ ಬ್ರಾಹ್ಮಣ ಸಂತೋಷದಿಂದ ನಡುಕಟ್ಟು ಬಿಗಿದು ತನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿ, ಕೈಯಲ್ಲಿದ್ದ ದಂಡವನ್ನು ವೇಗವಾಗಿ ಎಸೆದ. ಅದು ಸರಯೂ ನದಿಯನ್ನು ದಾಟಿ ಆಕಳ ಮಂದೆಯ ಪಕ್ಕದಲ್ಲಿದ್ದ ಗೂಳಿ

ಗಳ ಹತ್ತಿರ ಬಿತ್ತು. ಬ್ರಾಹ್ಮಣ "ಅನ್ಯಾಯವಾಗಿ ದಂಡವನ್ನು ಹಾಳುಮಾಡಿಕೊಂಡೆನಲ್ಲಾ" ಎಂಬುದಾಗಿ ಹಂಬಲಿಸುತ್ತಿದ್ದ. ಆಗ ರಾಮ ಆತನನ್ನು ಸಂತಯಿಸಿ, ಆ ದಂಡವನ್ನು ತರಿಸಿಕೊಟ್ಟು, "ಎಲೈ ಮುನೀಶ್ವರ, ನೀನು ಏನು ಕೇಳಿದರೂ ಕೊಡುತ್ತೇನೆ. ಸಂಕೋಚಪಡಬೇಡ ನನ್ನ ದ್ರವ್ಯ ನಿನ್ನಂತಹವರನ್ನು ಸೇರಿದರೆ ಸಾರ್ಥಕವಾಗುವುದು" ಎಂದು ಹೇಳಿದ. ಬಳಿಕ ತ್ರಿಜಟ ಶ್ರೀ ರಾಮನನ್ನು ಬೇಡಿ ಬೇಕಾದಷ್ಟು ಹಣವನ್ನೂ ಆ ಆಕಳು ಮಂದೆಯನ್ನೂ ಸಹ ಪರಿಗ್ರಹಿಸಿ, ಶ್ರೀ ರಾಮನನ್ನು ಮನಃಪೂರ್ವಕವಾಗಿ ಆಶೀರ್ವದಿಸಿ ಸಂತೋಷದಿಂದ ಹೊರಟುಹೋದ. ಬಳಿಕ ತ್ರಿಜಟ ತಾನು ಗಳಿಸಿ ತಂದ ಗೋ ಧನವನ್ನೂ ಸಂಪತ್ತನ್ನೂ ತನ್ನ ಬಂಧು ಬಳಗದವರಿಗೂ ಆಶ್ರಿತರಿಗೂ ಹಂಚಿಕೊಟ್ಟು, ನಿತ್ಯಾನಂದಭರಿತನಾಗಿದ್ದ [ರಾಮಾ -ಅಯೋ. ೩೨].

**ತ್ರಿಜಟಾ.**—ಲಂಕೆಯಲ್ಲಿದ್ದ ಒಬ್ಬ ಮುದಿ ರಕ್ಕಸಿ. ರಾವಣ ಸೀತೆಯನ್ನು ಪಂಚವಟಿಯಿಂದ ಅಪಹರಿಸಿಕೊಂಡು ಹೋದ ತರುವಾಯ, ಅಶೋಕವನದಲ್ಲಿಟ್ಟು ಆಕೆಯ ಸುತ್ತಲೂ ಅನೇಕ ಮಂದಿ ರಕ್ಕಸಿಯರನ್ನು ಕಾವಲಿರಿಸಿ, ಇವಳನ್ನು ಅವರ ಮೇಲ್ವಿಚಾರಣೆಯಲ್ಲಿಟ್ಟ [ಭಾರ -ವನ. ೨೮೧]. ಮಿಕ್ಕ ರಕ್ಕಸಿಯರೆಲ್ಲರೂ ಸೀತೆಯನ್ನು ಬಹಳವಾಗಿ ಪೀಡಿಸಿ, ರಾವಣನನ್ನು ವರಿಸುವಹಾಗೆ ಬಲಾತ್ಕರಿಸಿ, ಚುಚ್ಚುಮಾತುಗಳಿಂದ ಆಕೆಯನ್ನು ನೋಯಿಸುತ್ತಿರುವಲ್ಲಿ, ತ್ರಿಜಟೆ "ಎಲೌ ದುಷ್ಟೆಯರಿರಾ, ಸೀತೆಯ ಗೋಜಿಗೆ ಹೋಗಬೇಡಿರಿ. ಈಗ ನಾನೊಂದು ಕನಸನ್ನು ಕಂಡೆ. ಅದರಲ್ಲಿ ಶ್ರೀ ರಾಮ ಜಯಶೀಲನಾಗಿದ್ದ ರಾವಣ ಅಧೋಗತಿಯನ್ನು ಹೊಂದಿದ ಇದನ್ನು ಪರ್ಯಾಲೋಚಿಸಲಾಗಿ, ರಾಮ ಬೇಗನೆ ಬಂದು ರಾವಣನನ್ನು ಕೊಂದು ಸೀತೆಯನ್ನು ಕರೆದುಕೊಂಡು ಹೋಗುವುದು ದಿಟವೆಂಬುದಾಗಿ ಹೇಳಿ, ತಾನು ಕಂಡ ಕನಸನ್ನು ಅವರಿಗೆ ವಿವರಿಸಿದಳು [ರಾಮಾ.-ಸುಂದ. ೨೭]

**ತ್ರಿತ.**—ಗೌತಮ ಮುನಿಯ ಮೂವರು ಮಕ್ಕಳಲ್ಲಿ ಕಡೆಯವ ಇವರು ಮೂವರೂ ಒಳ್ಳೆಯ ವಿದ್ಯಾವಂತರಾಗಿದ್ದ ಕಾರಣ ಮೂವರೂ ಒಂದು ಯಜ್ಞಶಾಲೆಗೆ ಹೋದರು ಅಲ್ಲಿ ತ್ರಿತನು ತನ್ನ ವಿದ್ವತ್ತೆಯನ್ನು ವಿಶೇಷವಾಗಿ ಪ್ರಕಾಶಗೊಳಿಸಿದ ಇದರಿಂದ ಸಂತುಷ್ಟನಾದ ಯಜಮಾನನು ಈತನಿಗೆ ವಿಪುಲವಾದ ಧನವನ್ನೂ ಅನೇಕ ಗೋವುಗಳನ್ನೂ ಕೊಟ್ಟ. ಇಬ್ಬರು ಅಣ್ಣಂದಿರಿಗಿಂತಲೂ ಈತನಿಗೇ ಹೆಚ್ಚು ಲಾಭವಾಯಿತು. ಬಳಿಕ ಮೂವರೂ ನಡೆದುಬರುತ್ತಿರುವಲ್ಲಿ ತ್ರಿತನು ಒಂದು ಬಾವಿಯಲ್ಲಿ ಕಾಲುಜಾರಿ ಬೀಳಲಾಗಿ, ಮತ್ಸರಗ್ರಸ್ತರಾದ ಇವನ ಅಣ್ಣಂದಿರು ಏಕತ, ದ್ವಿತ ಇವರಿಬ್ಬರೂ ಈತನನ್ನು ಮೇಲಕ್ಕೆ ಎತ್ತದೆಯೇ ಈತನು ಗಳಿಸಿದ್ದ ಹಣವನ್ನೆಲ್ಲಾ ಹೊತ್ತುಕೊಂಡು ಹೋದರು [ಭಾರ.-ಸಭಾ. ೭].

ತ್ರಿತನು ಅದೇ ಬಾವಿಯಲ್ಲಿಯೇ ಇದ್ದ. ಆಗ ಅಲ್ಲಿ ಒಂದು ಬಳ್ಳಿ ಆತನ ಕಣ್ಣಿಗೆ ಕಾಣಿಸಿತು. ತ್ರಿತನು ಅದನ್ನೇ ಸೋಮಲತೆಯಾಗಿ ಭಾವಿಸಿ, ಸಕಲ ದೇವತೆಗಳನ್ನೂ ಆವಾಹನಮಾಡಿದ. ದೇವತೆಗಳೆಲ್ಲರೂ ಬಂದು ಸೋಮಪಾನಮಾಡಿದರು. ಬಳಿಕ ಆ ಭಾವಿಯಿಂದ ನೀರು ಉಕ್ಕಿ ಹರಿಯತೊಡಗಿತು. ಆಗ ತ್ರಿತನು "ಇಂದು ಮೊದಲು ಇದರಲ್ಲಿ ಯಾರು ಸ್ನಾನಮಾಡುತ್ತಾರೆಯೋ ಅವರಿಗೆ ಸೋಮಪಾನ ಮಾಡಿದ ಫಲ ಬರುವಂತೆ ದಯಪಾಲಿಸಬೇಕು" ಎಂಬುದಾಗಿ ದೇವತೆಗಳನ್ನು ಬೇಡಿಕೊಂಡ ದೇವತೆಗಳು ಅಂತೆಯೇ ಅನುಗ್ರಹಿಸಿದರು. ಬಳಿಕ ತ್ರಿತನು ಹೊರಬಂದ [ಭಾರ.-ಶಲ್ಯ. ೩೭].

**ತ್ರಿತಕೂಪ.**—ಮೇಲೆ ಹೇಳಿದ ತ್ರಿತನು ಕಲ್ಪಿಸಿದ ಒಂದು ತೀರ್ಥ. ಬಲರಾಮ ತೀರ್ಥಯಾತ್ರೆ ಹೊರಟಿದ್ದಾಗ ಇಲ್ಲಿಗೂ ಹೋಗಿದ್ದ [ಭಾಗ -೧೦-೭೮]

**ತ್ರಿದಿವಾ.**—ಮಹೇಂದ್ರಪರ್ವತದಿಂದ ಹುಟ್ಟಿ ಹರಿಯುವ ಒಂದು ನದಿ [ಮತ್ಸ್ಯ -೧೧೩. ಭೀ. ೯].

**ತ್ರಿಧಾಮ**—ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಹತ್ತನೆಯ ದ್ವಾಪರ ಯುಗದಲ್ಲಿ ಈತನು ವ್ಯಾಸನಾಗಿದ್ದ [ದೇ ಭಾ.-೧-೪]

**ತ್ರಿನೇತ್ರ.**—ಮಹಿಷಾಸುರನ ಪರಿವಾರದವನು ನೋಡು—ಮಹಿಷಾಸುರ [ದೇ.ಭಾ -೫, ೬ ಮತ್ಸ್ಯ -೧೫೧]

**ತ್ರಿಪಥಗಾ.**—ಗಂಗೆಯ ನಾಮಾಂತರ [ಭೀಷ್ಮ ೬]

**ತ್ರಿಪುರ.**—ತಾರಕಾಸುರನ ಮಕ್ಕಳು ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಯೆಂಬುದಾಗಿ ಮೂವರು [ಕರ್ಣ ೨೪] ತಾರಕಾಸುರ ಸಂಹಾರಾನಂತರ ಮಯನು ತಾರಾಕ್ಷ, ವಿದ್ಯುನ್ಮಾಲಿಗಳೊಡನೆ ಬ್ರಹ್ಮನನ್ನು ಕುರಿತು ತಪಸ್ಸುಮಾಡಿದ. ಬ್ರಹ್ಮ ಪ್ರತ್ಯಕ್ಷನಾಗಲು ಮಯ ಆತನನ್ನು ಕುರಿತು ತಮಗೆ ಅಮರತ್ವವನ್ನೂ, ಯಾವ ದೇವತೆಗಳಿಂದಲೂ ಭೇದಿಸುವುದಕ್ಕೆ ಅಸಾಧ್ಯವಾದ ಮೂರು ಪುರಗಳನ್ನು ನಿರ್ಮಿಸುವ ಸಾಮರ್ಥ್ಯವನ್ನೂ ದಯೆಪಾಲಿಸುವಂತೆ ವರವನ್ನು ಬೇಡಿದ ಬ್ರಹ್ಮ "ನಿನಗೆ ಅಮರತ್ವವನ್ನು ಕೊಡಲು ಸಾಧ್ಯವಿಲ್ಲ ಪಟ್ಟಣಗಳನ್ನು ಕಲ್ಪಿಸಿಕೊಳ್ಳುವ ಶಕ್ತಿ ಯನ್ನು ನಿನಗೆ ಅನುಗ್ರಹಿಸಿರುವೆನು" ಎಂದು ಹೇಳಿ ಕಣ್ಮರೆಯಾದ. ಬಳಿಕ ಮಯನು ಪುಷ್ಯನಕ್ಷತ್ರದಲ್ಲಿ ಲೋಹಗಳನ್ನು ತಂದು ಕ್ರಮವಾಗಿ ಭೂಮಿಯ ಮೇಲೆ ಕಬ್ಬಿಣದ ಪುರವನ್ನೂ, ಅಂತರಿಕ್ಷದಲ್ಲಿ ಬೆಳ್ಳಿಯ ನಗರವನ್ನೂ ಅದರ ಮೇಲ್ಭಾಗದಲ್ಲಿ ಸುವರ್ಣಪುರವನ್ನೂ ನಿರ್ಮಿಸಿದ ಬಳಿಕ ತಾರಾಕ್ಷನು ಸುವರ್ಣಪುರವನ್ನೂ, ಕಮ ಲಾಕ್ಷನು ರಜತಪುರವನ್ನೂ ವಿದ್ಯುನ್ಮಾಲಿ ಆಯಸಪುರವನ್ನೂ ಹೊಕ್ಕು ತಮ್ಮ ತಮ್ಮ ಇಷ್ಟಮಿತ್ರ, ಬಂಧು, ಪರಿವಾರದೊಂದಿಗೆ ಅನೇಕ ಭೋಗಗಳನ್ನನುಭವಿ

ಸುತ್ತ ಸ್ವರ್ಗಸುಖಕ್ಕಿಂತಲೂ ಮಿಗಿಲಾದ ಸುಖದಿಂದಿದ್ದರು [ಭಾರ.-ಕರ್ಣ. ೩೪]. ಬಳಿಕ ಮಯನು ಅವರನ್ನು ಕರೆದು, "ಇನ್ನು ಮೇಲೆ ನೀವು ದೇವತೆಗಳ ಗೋಜಿಗೆ ಹೋಗಬೇಡಿರಿ. ಅವರು ತಿರುಗಾಡುವ ದಾರಿಯಲ್ಲಿಯೇ ಸುಳಿಯಬೇಡಿರಿ. ಉನ್ಮತ್ತ ರಾಗಿ ದೈವಭಕ್ತಿಯನ್ನು ದೂರಮಾಡಿ, ಆಚಾರಹೀನರಾಗಿರಬೇಡಿರಿ. ಪರಮೇಶ್ವರನ ಪೂಜೆಯಲ್ಲಿ ಅಸಡ್ಡೆಮಾಡಬೇಡಿರಿ. ಇಂತು ನೀವು ನಡೆದಿರಾದರೆ ಅನುಗಾಲವೂ ಸುಖ ವಾಗಿರುವಿರಿ" ಎಂದು ಕಟ್ಟುಮಾಡಿದ. ಬಹಳ ಕಾಲದವರೆಗೂ ರಕ್ಕಸರೆಲ್ಲರೂ ಮಯನ ಕಟ್ಟಳೆಯನ್ನು ಮೀರದೆ ಸುಖವಾಗಿದ್ದರು. ಆದರೆ ವಿಧಿವಿಲಾಸದಿಂದ ರಾಕ್ಷಸರು ಸ್ವಲ್ಪಸ್ವಲ್ಪವಾಗಿ ತಮ್ಮ ಕಟ್ಟುಪಾಡುಗಳನ್ನು ಮೀರಿ ನಡೆಯತೊಡ ಗಿದರು. ಇವರ ಹಾವಳಿಯನ್ನು ತಡೆಯಲಾರದೆ ದೇವತೆಗಳೆಲ್ಲರೂ ಪರಮೇಶ್ವರನನ್ನು ಮರೆಹೊಕ್ಕರು. ಆಗ ಶಿವನು ಭೂಮಿಯನ್ನೇ ರಥವನ್ನಾಗಿ ಕಲ್ಪಿಸಿ, ನಾಲ್ಕು ವೇದಗಳನ್ನೂ ನಾಲ್ಕು ಕುದುರೆಗಳಾಗಿ ಮಾಡಿ, ಆ ರಥಕ್ಕೆ ಹೂಡಿ, ಬ್ರಹ್ಮನನ್ನು ಸಾರಥಿಯಾಗಿಟ್ಟುಕೊಂಡು, ಮಂದರಪರ್ವತವನ್ನೇ ಬಿಲ್ಲನ್ನಾಗಿರಿಸಿ, ಸಮುದ್ರವನ್ನು ಬತ್ತಳಿಕೆಯಾಗಿ ಮಾಡಿಕೊಂಡು ಆದಿಶೇಷನನ್ನು ಹೆದೆಯಾಗಿ ಬಿಗಿದು, ವಿಷ್ಣು ವನ್ನೇ ಬಾಣವಾಗಿ ಕಲ್ಪಿಸಿಕೊಂಡು, ಪುಷ್ಯನಕ್ಷತ್ರ ಯೋಗದಲ್ಲಿ ಆ ಮೂರು ಪುರ ಗಳೂ ಒಂದು ಕಡೆ ಸೇರಿದ್ದ ಸಂಧಿಯನ್ನು ಕಂಡು, ಒಂದೇ ಬಾಣದಿಂದಲೇ ಒಂದೇ ಇರಿತದಿಂದಲೇ ಸುಟ್ಟು ಹಾಳುಮಾಡಿದ [ದ್ರೋ. ೨೦೨. ಕರ್ಣ ೩೭. ಅನು. ೨೬೫ ಭಾಗ.-೭-೧೦. ಮತ್ಸ್ಯ -೧೩೦-೧೩೭]. ತಾರಕನು ಆಯಸಪುರವನ್ನೂ, ವಿದ್ಯು ನ್ಮಾಲಿ ರಜತಪುರವನ್ನೂ, ಮಯನು ಸುವರ್ಣಪುರವನ್ನೂ ಪ್ರವೇಶಿಸಿ, ವಾಸ ವಾಗಿದ್ದರು (ಇದರಲ್ಲಿ ಕಮಲಾಕ್ಷನ ಹೆಸರೇ ಇಲ್ಲ) [ಮತ್ಸ್ಯ -೧೩೦].

ಸೋಹಂ ತಪಃಪ್ರಭಾವೇನ ತವ ಭಕ್ತ್ಯಾ ತಥೈವ ಚ ।
ಇಚ್ಛಾಮಿ ಕರ್ತುಂ ತದ್ದುರ್ಗಂ ಯದ್ದೇವೈರಪಿ ದುಸ್ತರಂ ॥
ತಸ್ಮಿಂಶ್ಚ ತ್ರಿಪುರೇ ದುರ್ಗೇ ಮತ್ಕೃತೇ ಕೃತಿನಾಂ ವರ ।
ಭೌಮ್ಯಾನಾಂ ಜಲಜಾನಾಂ ಚ ಶಾಪಾನಾಂ ಮುನಿತೇಜಸಾಂ ॥
ದೇವಪ್ರಹರಣಾನಾಂ ಚ ದೇವನಾಂ ಚ ಪ್ರಜಾಪತೇಃ ।
ಅಲಂಘನೀಯಂ ಭವತು ತ್ರಿಪುರಂ ಯದಿ ತೇ ಪ್ರಿಯಂ ॥
ವಿಶ್ವಕರ್ಮಾ ಇತೀವೋಕ್ತಸ್ಸತದಾ ವಿಶ್ವಕರ್ಮಣಾ ।
ಉವಾಚ ಪ್ರಹಸ್ರ ವಾಕ್ಯಂ ಮಯಂ ದೈತ್ಯಗಣಾಧಿಪಂ ॥
ಸರ್ವಾಮರತ್ವಂ ನೈವಾಸ್ತಿ ಅಸದ್ವೃತ್ತಸ್ಯ ದಾನವ ।
ತಸ್ಮಾದ್ದುರ್ಗವಿಧಾನಂ ಹಿ ಕ್ಷಣಾದಪಿ ವಿಧೀಯತಾಂ ॥
ಪಿತಾಮಹವಚಃ ಶ್ರುತ್ವಾ ತದೈವಂ ದಾನವೋ ಮಯಃ ।

ಪ್ರಾಂಜಲಿಃ ಪುನರಪ್ಯಾಹ ಬ್ರಹ್ಮಾಣಂ ಪದ್ಮಸಂಭವಂ ॥
ಯಸ್ತದೇ ಕೇಷುಣಾ ದುರ್ಗಂ ಸಕೃನ್ಮುಕ್ತೇನ ನಿರ್ದಹೇತ್ ।
ಸಮಂ ಸ ಸಂಯುಗೇ ಹನ್ಯಾದವಧ್ಯಂ ಶೇಷತೋ ಭವೇತ್ ॥
ಏವಮಸ್ತ್ವಿತಿ ಚಾಪ್ಯುಕ್ತ್ವಾ ಮಯಂ ದೇವಃ ಪಿತಾಮಹಃ ।
ಸ್ವಪ್ನೇ ಲಬ್ಧೋ ಯಥಾರ್ಥೋ ವೈ ತತ್ರೈವಾಂತರಧೀಯತ ॥
* * * * [ಮತ್ಸ್ಯ.-೧೨೯].

ಕಾರ್ಷ್ಣಾಯಸ ಸಮಂ ಯತ್ತು ಮಯೇನ ವಿಹಿತಂ ಪುರಂ ।
ತಾರಕಾಖ್ಯೋಧಿಪಸ್ತತ್ರ ಕೃತಸ್ಥಾನಾಧಿಪೋಽಭವತ್ ॥
ಯತ್ತು ಪೂರ್ಣೇಂದು ಸಂಕಾಶಂ ರಾಜತಂ ನಿರ್ಮಿತಂ ಪುರಂ ।
ವಿದ್ಯುನ್ಮಾಲೀ ಪ್ರಭುಸ್ತತ್ರ ವಿದ್ಯುನ್ಮಾಲೀ ತ್ವಿವಾಂಬುದಃ ॥
ಸುವರ್ಣಾಧಿ ಕೃತಂ ಯಚ್ಚ ಮಯೇನ ವಿಹಿತಂ ಪುರಂ ।
ಸ್ವಯಮೇವಗತಸ್ತತ್ರ ಮಯಸ್ತದಧಿಪಃ ಪ್ರಭುಃ ॥ [ಮತ್ಸ್ಯ.-೧೪೦].

ಈ ಮೇಲೆ ಉದಾಹರಿಸಿದ ಶ್ಲೋಕಗಳ ಪ್ರಕಾರ ಪರ್ಯಾಲೋಚಿಸಿದಲ್ಲಿ, ಈ ಮೂವರೂ ಒಂದು ಕಡೆ ಸೇರಬಾರದೆಂತಲೂ, ಅಧರ್ಮಕ್ಕೆ ಎಡೆಗುಡಬಾರದೆಂತಲೂ, ಮೂವರೂ ಒಂದು ಕಡೆ ಸೇರಿದಾಗ ಒಬ್ಬನೇ ಮೂವರನ್ನೂ ಒಂದೇ ಬಾಣದಿಂದ ಏಕಕಾಲದಲ್ಲಿಯೇ ಕೊಲ್ಲಬಹುದೆಂತಲೂ ಬ್ರಹ್ಮನು ಇವರಿಗೆ ವರವಿತ್ತದ್ದಂತೆ ತಿಳಿಯ ಬರುತ್ತದೆ [ಮತ್ಸ್ಯ -೧೨೯, ೧೩೦]

**ತ್ರಿವಕ್ರಾ.**—ಕಂಸನಿಗೆ ಚಂದನವನ್ನು ಅರೆದು ತಂದುಕೊಡುತ್ತಿದ್ದ ದಾಸಿ. ಇವಳು ರಾಮಾವತಾರದಲ್ಲಿ ಶೂರ್ಪಣಖೆಯಾಗಿದ್ದು ರಾಮನ ಅಂಗಸಂಗವನ್ನು ಬಯಸಿ, ಕಿವಿ ಮೂಗುಗಳನ್ನು ಕುಯ್ಸಿಕೊಂಡಿದ್ದಳು ಈಗ ಕೃಷ್ಣಾವತಾರದಲ್ಲಿ ಶೂರ್ಪಣಖೆ(ತ್ರಿವಕ್ರೆ) ಯಾಗಿ ಜನಿಸಿ, ಶ್ರೀ ಕೃಷ್ಣನ ಅನುಗ್ರಹಕ್ಕೆ ಪಾತ್ರಳಾದಳು. ನೋಡು—ಕುಬ್ಜಾ.

**ತ್ರಿವರ್ಗ.**—ಧರ್ಮ, ಅರ್ಥ, ಕಾಮಗಳೆಂಬ ಮೊದಲಿನ ಮೂರು ಪುರುಷಾರ್ಥಗಳಿಗೆ ತ್ರಿವರ್ಗವೆಂದು ರೂಢಿ. ಅವುಗಳ ಸ್ವರೂಪ ನಿರೂಪಣ [ಅನು. ೨೧೬]

**ತ್ರಿವಿಕ್ರಮಾವತಾರ.**—ವಿಷ್ಣು ಬಲಿನಿಗ್ರಹಾರ್ಥವಾಗಿ ಅದಿತಿ, ಕಶ್ಯಪರಲ್ಲಿ ವಾಮನರೂಪದಿಂದ ಇಂದ್ರನಿಗೆ ತಮ್ಮನಾಗಿ ಜನಿಸಿ, ಬಲಿಯನ್ನು ಮೂರು ಹಜ್ಜೆಯಷ್ಟು ಭೂಮಿಯನ್ನು ಬೇಡಿ, ಭೂಮ್ಯಾಕಾಶಗಳಲ್ಲಿ ಎರಡು ಪಾದಗಳಿಟ್ಟು ಮತ್ತೊಂದು ಪಾದವನ್ನು ಬಲಿಯ ತಲೆಯಮೇಲಿರಿಸಿ, ಮೂರು ಪಾದವಿನ್ಯಾಸಗಳಿಂದಲೇ ಜಗತ್ತೆಲ್ಲವನ್ನೂ ಆವರಿಸಿಕೊಂಡವನಾದುದರಿಂದ ಈ ಹೆಸರು ಬಂದಿತು. ನೋಡು—ವಾಮನ [ಸಭಾ. ೪೭. ವನ. ೨೭೩. ಭಾಗ.-೮, ೧೩, ಪದ್ಮ.೪-೧, ೬, ೨೬೭].

**ತ್ರಿವೃಷ.**—ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ಹನ್ನೊಂದನೆಯ ವ್ಯಾಸ [ದೇ ಭಾ -೧-೪].

**ತ್ರಿಶಙ್ಕು.**—ಒಬ್ಬ ಅರಸು. ಸೂರ್ಯವಂಶದ ಇಕ್ಷ್ವಾಕು ರಾಜನ ಸಂತತಿಯಲ್ಲಿ ಜನಿಸಿದವ [ಭಾರ -ಸಭಾ. ೧೨]. ಸತ್ಯಸಂಧರಲ್ಲಿ ಅಗ್ರೇಸರನೆಂದು ಪ್ರಖ್ಯಾತಿಗೊಂಡ ಹರಿಶ್ಚಂದ್ರನು ಈತನ ಮಗ [ವನ. ೭೭] ಈತನಿಗೆ ಸತ್ಯವ್ರತನೆಂಬುದು ತಂದೆಯಿಟ್ಟ ಹೆಸರು ಹೆಂಡತಿ ಸತ್ಯವ್ರತೆ [ಭಾಗ.-೯-೭]. ಇವನು ಸೂರ್ಯವಂಶದ ನಿಬಂಧನನೆಂಬ ಆರಸನ ಮಗ ನಿಬಂಧನನಿಗೆ ತ್ರಿಬಂಧನ, ತ್ರಿಧನ್ವ ಎಂಬುವು ನಾಮಾಂತರಗಳು ಒಮ್ಮೆ ತ್ರಿಶಂಕು (ಸತ್ಯವ್ರತ) ಮದುವೆಯಾಗಿದ್ದ ಒಬ್ಬ ಹುಡುಗಿಯನ್ನು ಅಪಹರಿಸಿದ ಈ ದೂರು ರಾಜನ ಕಿವಿಗೆ ಬಿತ್ತು ತ್ರಿಬಂಧನನು "ಶ್ವಪಾಕರೊಂದಿಗೆ ಕಲೆತುಹೋಗು" ಎಂಬುದಾಗಿ ಮಗನಿಗೆ ಶಾಪವಿತ್ತ. ಬಳಿಕ ಸತ್ಯವ್ರತನು ತನ್ನ ತಂದೆಯ ರಾಜ್ಯದಲ್ಲಿಯೇ ಅಲ್ಲಲ್ಲಿ ತಿರುಗಾಡುತ್ತ ಕೆಲವು ವರ್ಷಗಳ ವರೆಗೆ ಕಾಲಹರಣಮಾಡಿದ ತ್ರಿಧನ್ವನು ತನ್ನ ಮಗನು ಈ ರೀತಿ ಭ್ರಷ್ಟನಾದುದನ್ನು ಕಂಡು ತನ್ನ ಅನಂತರ ರಾಜ್ಯಕ್ಕೆ ತಕ್ಕ ಮಗನನ್ನು ಪಡೆಯುವುದಕ್ಕಾಗಿ ರಾಜ್ಯವನ್ನು ಮಂತ್ರಿಗಳ ಸ್ವಾಧೀನಮಾಡಿ ತಪಸ್ಸಿಗಾಗಿ ಕಾಡಿಗೆ ಹೋದ. ಇಂತಾಗಲು ಅಯೋಧ್ಯೆ ಅರಾಜಕವಾಗಿ ಪ್ರಜೆಗಳಲ್ಲಿ ನೀತಿ ನೆಲೆಗೆಟ್ಟಿತು. ಅಧರ್ಮ ಬೇರೂರಿತು ಒಂಬತ್ತು ವರ್ಷಗಳವರೆಗೆ ರಾಜ್ಯದಲ್ಲಿ ಮಳೆಯೇ ಬೀಳಲಿಲ್ಲ. ಜನಗಳು ಜೀವಿಸಿಕೊಂಡಿರುವುದು ದುಸ್ತರವಾಯಿತು ವಿಶ್ವಾಮಿತ್ರನ ಕುಟುಂಬದವರು ಆ ಕ್ಷಾಮಕಾಲದಲ್ಲಿ ಜೀವಿಸುವುದಕ್ಕೆ ದಾರಿಗಾಣದೆ ಹಿಂಸೆಪಡುತ್ತಿರುವುದನ್ನು ಕಂಡು, ಸತ್ಯವ್ರತನು ತನ್ನ ಗುರುವಾದ ವಸಿಷ್ಠನಿಗೆ ವೈರಿಯಾದ ವಿಶ್ವಾಮಿತ್ರನ ಕುಟುಂಬವನ್ನು ಸಂರಕ್ಷಿಸುವ ಭಾರವನ್ನು ತಾನೇ ವಹಿಸಿಕೊಂಡ. ತಂದೆಯಾದ ತ್ರಿಧನ್ವನು ತನ್ನನ್ನು ಅರಮನೆಯಿಂದ ಹೊರಡಿಸಿದಾಗ ವಸಿಷ್ಠನು ತನ್ನ ಪರವಾಗಿ ಮಾತನಾಡಲಿಲ್ಲವೆಂಬ ಕಾರಣದಿಂದ ಸತ್ಯವ್ರತನಿಗೆ ವಸಿಷ್ಠನ ಮೇಲೆ ಕೋಪವಿತ್ತು. ಆ ರೋಷವನ್ನು ಈ ರೀತಿಯಿಂದ ತೀರಿಸಿಕೊಂಡ ಕೆಲವು ಕಾಲದ ತರುವಾಯ ವಸಿಷ್ಠನ ಆಕಳನ್ನು ಕೊಂದು, ಅದರ ಮಾಂಸವನ್ನು ಪ್ರೋಕ್ಷಣಾದಿಗಳಿಂದ ಸಂಸ್ಕಾರಮಾಡದೆ ತಿಂದುಬಿಟ್ಟ ಈ ಸಮಾಚಾರವನ್ನು ಕೇಳಿ ವಸಿಷ್ಠನು "ತಂದೆಗೆ ಅಸಮ್ಮತವಾದ ಕಾರ್ಯವನ್ನು ಮಾಡಿದುದೊಂದು, ಗುರುವಿನ ಹೋಮಧೇನುವನ್ನು ಕೊಂದುದು ಎರಡು, ಆ ಮಾಂಸವನ್ನು ಸಂಸ್ಕಾರಮಾಡದೆ ತಿಂದುದು ಮೂರು—ಈ ರೀತಿಯಾಗಿ ಮೂರು ಶಂಕು(ಪಾಪ)ಗಳುಳ್ಳವನಾದುದರಿಂದ ನೀನು ಪತಿತನಾದೆ" ಎಂಬುದಾಗಿ ಹೇಳಿದ. ಈ ಕಾರಣದಿಂದ ಸತ್ಯವ್ರತನಿಗೆ ಅಂದಿನಿಂದಲೂ ತ್ರಿಶಂಕುವೆಂದು ಹೆಸರಾಯಿತು [ಬ್ರಹ್ಮ-೮]. ಇವನು ಮನುಷ್ಯ

ದೇಹದೊಂದಿಗೆ ಸ್ವರ್ಗವನ್ನು ಸೇರಬೇಕೆಂಬ ಅಭಿಲಾಷೆಯಿಂದ ಯಜ್ಞವನ್ನು ಮಾಡಬೇಕೆಂದು ಉದ್ದೇಶಿಸಿ ತನ್ನ ಕುಲಗುರುವಾದ ವಸಿಷ್ಠನ ಬಳಿಗೆ ಹೋದ. ಆತನು ಅದು ಅಸಾಧ್ಯವೆನಲಾಗಿ ಆತನನ್ನು ಧಿಕ್ಕರಿಸಿ, ಆತನ ಮಕ್ಕಳನ್ನು ಕೇಳಿ ಅವರಿಂದಲೂ ಧಿಕ್ಕೃತನಾಗಿ, ಚಂಡಾಲನಾಗುವಂತೆ ಶಾಪವನ್ನು ಪಡೆದು, ವಿಶ್ವಾಮಿತ್ರನ ಬಳಿಗೆ ಹೋಗಿ, ತನ್ನ ಸಮಾಚಾರವನ್ನೆಲ್ಲ ವಿವರಿಸಿದ. ವಿಶ್ವಾಮಿತ್ರ ಮೊದಲು ಬಾರಿ ಸಾಧ್ಯವಿಲ್ಲವೆಂದು ಹೇಳಿದನಾದರೂ, ವಸಿಷ್ಠನಮೇಲಣ ಸೇಡನ್ನು ತೀರಿಸಿಕೊಳ್ಳಬೇಕೆಂಬ ಅಭಿಪ್ರಾಯದಿಂದ ಸಮ್ಮತಿಸಿ, ತನ್ನ ಶಿಷ್ಯರ ಮೂಲಕ ಸಕಲ ಮುನಿಗಳನ್ನೂ ಬರಮಾಡಿಕೊಂಡು ಯಜ್ಞವನ್ನು ಉಪಕ್ರಮಿಸಿ, ಹವಿರ್ಭಾಗವನ್ನು ಕೈಕೊಳ್ಳಲು ದೇವತೆಗಳನ್ನು ಆಮಂತ್ರಿಸಿದಾಗ, ಅವರು ಬಾರದಿರಲು, ರೋಷಭರಿತನಾಗಿ ತಾನು ಕೈಯಲ್ಲಿ ಹಿಡಿದಿದ್ದ ಸ್ರುವವನ್ನು ಬಿಸುಟು, ತ್ರಿಶಂಕುವನ್ನು ಕುರಿತು, "ಅಯ್ಯಾ, ನನ್ನ ತಪಸ್ಸಿನ ಮಹಿಮೆಯನ್ನಾದರೂ ನೋಡು. ನಿನ್ನನ್ನು ಇದೇ ಶರೀರದಿಂದಲೇ ಸ್ವರ್ಗಕ್ಕೆ ಕಳುಹಿಸದಿರುವುದಿಲ್ಲ ನೀನು ಯಾರಿಗೂ ಸಾಧ್ಯವಲ್ಲದ ಸ್ವರ್ಗಲೋಕವನ್ನು ಇದೇ ಶರೀರದಿಂದಲೇ ಪ್ರವೇಶಿಸು, ಹೋಗು" ಎಂದ. ತ್ರಿಶಂಕು ಸ್ವರ್ಗಕ್ಕೆ ಹತ್ತುತ್ತಿರಲಾಗಿ, ಇಂದ್ರ "ಎಲೈ ತ್ರಿಶಂಕು ರಾಜನೆ, ನೀನು ಗುರುಶಾಪದಿಂದ ಪತಿತನಾಗಿರುವೆಯಾದುದರಿಂದ ಸ್ವರ್ಗವನ್ನು ಏರುವುದಕ್ಕೆ ನಿನಗೆ ಯೋಗ್ಯತೆಯಿಲ್ಲ ತಲೆಕೆಳಗಾಗಿ ನೆಲದಮೇಲೆ ಬೀಳುಹೋಗು" ಎಂದ. ತ್ರಿಶಂಕು ಗಟ್ಟಿಯಾಗಿ ಮೊರೆಯಿಡುತ್ತ ತಲೆಕೆಳಗಾಗಿ ಬೀಳುತ್ತಿರುವಲ್ಲಿ ವಿಶ್ವಾಮಿತ್ರ ಆ ಋಷಿಸಮುದಾಯದಲ್ಲಿಯೇ ಇದ್ದುಕೊಂಡು "ತ್ರಿಶಂಕು ರಾಜನೇ, ನಿಲ್ಲು. ಅಲ್ಲಿಯೇ ನಿಲ್ಲು ಹೆದರಬೇಡ" ಎಂಬುದಾಗಿ ಧೈರ್ಯ ಹೇಳಿ, ತನ್ನ ತಪೋಮಹಿಮೆಯಿಂದ ಮತ್ತೊಂದು ಸ್ವರ್ಗವನ್ನು ಸೃಷ್ಟಿಸತೊಡಗಿದ ಆಗ ಇಂದ್ರಾದಿಗಳು ಹೆದರಿದವರಾಗಿ ವಿಶ್ವಾಮಿತ್ರನಲ್ಲಿಗೆ ಬಂದು "ಈತನು ಪತಿತನಾದುದರಿಂದ ಸ್ವರ್ಗಲೋಕಬಾಹಿರನು" ಎನಲು, ವಿಶ್ವಾಮಿತ್ರನು "ನಾನು ಈತನನ್ನು ಶರೀರದೊಂದಿಗೆ ಸ್ವರ್ಗಕ್ಕೆ ಕಳುಹಿಸುವೆನೆಂದು ಪ್ರತಿಜ್ಞೆಮಾಡಿರುವೆನು. ಅದಕ್ಕೆ ಭಂಗ ಬರಬಾರದು ಅದರಿಂದ ಆಕಾಶದಲ್ಲಿ ಧ್ರುವನಕ್ಷತ್ರವಿರುವವರೆಗೆ ಈತನೂ ಸಶರೀರನಾಗಿ ಅಲ್ಲಿಯೇ ನಿಲ್ಲಲಿ. ನೀವು ಇದನ್ನು ಮಾತ್ರ ದಯೆಮಾಡಿ ಒಪ್ಪಿಕೊಳ್ಳಿರಿ" ಎಂದ. ಆಗ ದೇವತೆಗಳು, ಅಂತೆಯೇ ಆಗಲಿ, ಎಂದರು. ತ್ರಿಶಂಕು ಅಂದಿನಿಂದ ಯಜ್ಞಪುರುಷನು ಸಂಚರಿಸುವ ಮಾರ್ಗಕ್ಕೆ ಹೊರಭಾಗದಲ್ಲಿ ನಿಂತ ಆತನ ಸುತ್ತಲೂ ಅನೇಕ ನಕ್ಷತ್ರಗಳು ಸಂಚರಿಸತೊಡಗಿದುವು. ಇಂತು ತ್ರಿಶಂಕು ಸ್ವರ್ಗದಲ್ಲಿಯೂ ನಿಲ್ಲದೆ ಭೂಮಿಯಲ್ಲಿಯೂ ನಿಲ್ಲದೆ ಅಂತರಾಳದಲ್ಲಿ ನಿಂತನಾದ್ದರಿಂದ, "ಉಭಯಭ್ರಷ್ಟರಾದವರಿಗೆ ತ್ರಿಶಂಕುಸ್ವರ್ಗವೇ ಗತಿ" ಎಂಬ ನಾಣ್ಣುಡಿ

ಲೋಕದಲ್ಲಿ ಹರಡಿತು [ರಾಮಾ.-ಬಾಲ. ೫೭, ೬೦ ಭಾಗ -೭, ೧೦, ೧೪. ಬ್ರಹ್ಮ-೮. ಹರಿ.-೧, ೧೩. ವಾಯು.-೮೮. ದೇ ಭಾ.-೭, ೧೦, ೧೨].

**ತ್ರಿಶಿಖ** —ಚತುರ್ಮುಖನ ಒಂದು ಹಗಲಿನಲ್ಲಿ ಬೆಳಗಾದುದು ಮೊದಲು ಸಂಜೆಯ ವರೆಗೆ ಸ್ವರ್ಗಲೋಕದಲ್ಲಿ ಹದಿನಾಲ್ಕು ಮಂದಿ ಇಂದ್ರಪದವಿಯಲ್ಲಿ ಅಧಿಕಾರ ಮಾಡುತ್ತಾರೆ ಇಂದ್ರನೆಂಬುದು ಅಧಿಕಾರದ ಹೆಸರಲ್ಲದೆ ವ್ಯಕ್ತಿಬೋಧಕವಾದ ಹೆಸರಲ್ಲ ತ್ರಿಶಿಖನೆಂಬವನು ನಾಲ್ಕನೆಯ ಪರ್ಯಾಯದಲ್ಲಿ ಇಂದ್ರನಾಗಿದ್ದ ಈಗ ಇರತಕ್ಕವನು ಏಳನೆಯ ಪರ್ಯಾಯದವ ಈತನ ಹೆಸರು ಪುರಂದರ. ಭೂಲೋಕದಲ್ಲಿ ಮನುಗಳು ಹೇಗೆಯೋ ಸ್ವರ್ಗಲೋಕದಲ್ಲಿ ಇಂದ್ರರೂ ಅಂತೆಯೇ ಕ್ಲುಪ್ತಕಾಲದ ವರೆಗೆ ಅಧಿಕಾರಮಾಡಿ ತರುವಾಯ ನಿವೃತ್ತರಾಗುತ್ತಾರೆ [ಭಾಗ -೮, ೧೩. ವಿಷ್ಣು -೧, ೩ ಮತ್ಸ್ಯ -೯]

**ತ್ರಿಶಿರಸ್** —(I) ತ್ವಷ್ಟನೆಂಬ ಬ್ರಹ್ಮನ ಮಗ. ವಿಶ್ವರೂಪನೆಂಬುದು ಮೊದಲಿನ ಹೆಸರು. ಈತನಿಗೆ ಮೂರು ತಲೆಗಳಿದ್ದವು ಈ ಕಾರಣದಿಂದ ಈತನಿಗೆ ತ್ರಿಶಿರನೆಂಬ ಹೆಸರೇ ರೂಢವಾಯಿತು ಇವನು ತ್ವಷ್ಟನಿಂದ ಪ್ರಹ್ಲಾದನ ಮಗಳಾದ ವಿರೋಚನೆಯಲ್ಲಿ ಜನಿಸಿದವನಾದುದರಿಂದ ಇವನಲ್ಲಿ ದೇವತೆಗಳ ಗುಣಸಂಪತ್ತಿಯೂ ದಾನವ ಗುಣಸಂಪತ್ತಿಯೂ ಮಿಶ್ರವಾಗಿದ್ದವು ಈತನು ತನ್ನ ಮೂರು ಮುಖಗಳಲ್ಲಿ ಒಂದರಿಂದ ವೇದಾಧ್ಯಯನ ಮಾಡುತ್ತ, ಮತ್ತೊಂದರಿಂದ ಸೋಮಪಾನ ಮಾಡಿ, ಇನ್ನೊಂದರಿಂದ ಸುರಾಪಾನಮಾಡುತ್ತಿದ್ದ ನೋಡು—ವಿಶ್ವರೂಪ [ಭಾರ.-ಉ ೯ ಶಾಂತಿ. ೨೦೭].

(II) ಒಬ್ಬ ರಾಕ್ಷಸ ನೋಡು—ಖರ.

**ತ್ರೇತಾ** —(I) ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಭಾಗವಾದ ವೈದಿಕಾಗ್ನಿಗೆ ಈ ಹೆಸರು ಸಲ್ಲುತ್ತದೆ

(II) ನಾಲ್ಕು ಯುಗಗಳಲ್ಲಿ ಎರಡನೆಯದು , ಮತ್ತು ಆ ಯುಗದ ಅಭಿಮಾನ ದೇವತೆ. ಈ ಯುಗಕ್ಕೆ ಮನುಷ್ಯಮಾನ ಪ್ರಕಾರ ೧೨,೯೬,೦೦೦ ವರ್ಷಗಳು. ಇದರ ಸಂಧಿ ಸಂಧ್ಯಂಶಗಳನ್ನು ಸೇರಿಸಿದರೆ ದೇವಮಾನ ಪ್ರಕಾರ ೬೦೦ ವರ್ಷಗಳಾಗುತ್ತವೆ [ಮತ್ಸ್ಯ -೧೬೪]. ಈ ಯುಗದ ನಡೆವಳಿಗಳು ಮತ್ತು ಧರ್ಮಗಳು [ವನ. ೧೫೧, ಶಾಂ. ೬೯].

**ತ್ವಷ್ಟ್ರ** —(I) ಶುಕ್ರಾಚಾರ್ಯನ ಮಗ [ಆದಿ. ೬೬]

(II) ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ [ಆದಿ. ೬೬, ೧೩೨. ಶಾಂತಿ ೨೦೭. ಅನು. ೨೫೫]. ಈತನ ಮಗ ವಿಶ್ವರೂಪಾಚಾರ್ಯ. ನೋಡು—ತ್ರಿಶಿರ [ಉ. ೯. ಶಾಂತಿ. ೨೦೭]. ಈತನ ಮಗಳು ಸಂಜ್ಞಾದೇವಿ. ಸೂರ್ಯನ ಪತ್ನಿಯರಲ್ಲಿ

ಹಿರಿಯಳು. ನೋಡು—ಛಾಯಾ [ಆದಿ. ೬೭]. ಈತನ ಹೆಂಡತಿ ವಿರೋಚನನ ತಂಗಿಯಾದ ರಚನಾ ಅಥವಾ ವಿರೋಚನಾ ಎಂಬವಳು. ವಿಶ್ವರೂಪಾಚಾರ್ಯ ಈಕೆಯಲ್ಲಿ ಜನಿಸಿದವ [ಭಾಗ.-೬-೬]. ಈತನಿಗೆ ವಿಶ್ವಕರ್ಮನೆಂಬುದು ನಾಮಾಂತರ [ಭಾಗ.-೮, ೧೩]

**ತ್ವಾಷ್ಟ್ರೀ** —ಸೂರ್ಯನ ಹೆಂಡತಿಯಾದ ಸಂಜ್ಞಾದೇವಿ ತ್ವಷ್ಟೃವಿನ ಮಗಳಾದುದರಿಂದ ಈ ಹೆಸರು ಈಕೆಯಲ್ಲಿ ಸೂರ್ಯನಿಂದ ಅಶ್ವಿನೀಕುಮಾರರು ಜನಿಸಿದರು. ನೋಡು—ಛಾಯಾ, ಅಶ್ವಿನೀಕುಮಾರ [ಆದಿ. ೬೭].

## ದ

**ದಕ್ಷ**.—ಒಬ್ಬ ಪ್ರಜಾಪತಿ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಬಲಗೈ ಹೆಬ್ಬೆಟ್ಟಿನಿಂದ ಹುಟ್ಟಿದವ [ಆದಿ. ೬೨, ೬೭]. ಈತನ ಹೆಂಡತಿ ಚತುರ್ಮುಖನ ಎಡಗೈ ಹೆಬ್ಬೆಟ್ಟಿನಿಂದ ಜನಿಸಿದವಳು [ಆದಿ ೧, ೬೭ ಸ. ೧೧] ದಕ್ಷನು ಹತ್ತು ಮಂದಿ ಪ್ರಚೇತಸರಿಂದ ಮಾರಿಷೆಯಲ್ಲಿ ಜನಿಸಿದವನು. ಈ ಮಾರಿಷೆ ಕಂಡು ಮುನಿಯಿಂದ ಪ್ರಮ್ಲೋಚನೆಯೆಂಬ ಅಪ್ಸರಸಿಯಲ್ಲಿ ಜನಿಸಿದವಳು. ಈಕೆಗೆ ವಾರ್ಕ್ಷಿಯೆಂಬ ಹೆಸರೂ ಸಲ್ಲುತ್ತದೆ ನೋಡು—ಕಣ್ವ [ಶಾಂ ೨೯೦ ಆದಿ ೬೯. ಗರು.-೫. ಭಾಗ -೪-೩೦, ೬-೪ ಬ್ರಹ್ಮ-೨ ವಿಷ್ಣು -೧, ೧೫ ಹರಿ -೧, ೨]. ಈತನು ಪಂಚಜನ ಅಥವಾ ವೀರಣನ ಮಗಳಾದ ಅಸಿಕ್ನೀ ಅಥವಾ ವೀರಿಣಿಯೆಂಬಾಕೆಯನ್ನು ಮದುವೆಯಾದ [ಆದಿ. ೬೯] ದಕ್ಷನ ಪ್ರಜಾವರ್ಣನೆ [ವಾಯು.-೧೦. ಆದಿ ೬೬, ೬೭, ೬೯ ವಿಷ್ಣು -೧-೬ ೧-೧೫ ಹರಿ.-೧-೩. ಭಾಗ -೬-೬. ವಿಷ್ಣು -೧-೬ ೧೫] ಈತನಿಗೆ ಐವತ್ತು ಮಂದಿ ಪುತ್ರಿಯರು [ಆದಿ. ೬೭, ೬೯]. ಚಂದ್ರನಿಗೆ ಕ್ಷಯರೋಗ ಬರುವಂತೆ ಶಾಪವಿತ್ತ [ಶಲ್ಯ. ೩೬] ನೋಡು—ಚಂದ್ರ. ಈತನ ಮಕ್ಕಳು ಹರ್ಯಶ್ವ, ಶಬಲಾಶ್ವ ಮುಂತಾದವರು [ಭಾಗ -೬-೫. ಹರಿ ೧-೩ ವಿಷ್ಣು -೧-೧೫]. ದಕ್ಷನು ತನ್ನ ಹೆಣ್ಣುಮಕ್ಕಳಲ್ಲಿ ಸತೀದೇವಿಯೆಂಬವಳನ್ನು ಶಿವನಿಗೆ ಮದುವೆಮಾಡಿಕೊಟ್ಟಿದ್ದ. ದೇವಸಭೆಯಲ್ಲಿ ಅಳಿಯನು ತನಗೆ ಮರ್ಯಾದೆ ಮಾಡಲಿಲ್ಲವೆಂಬ ಆಗ್ರಹದಿಂದ ದಕ್ಷನು ಶಿವನನ್ನು ಅಲಕ್ಷ್ಯಮಾಡಿ ನಿರೀಶ್ವರಯಾಗ ಮಾಡತೊಡಗಿದ. ಸತಿ ತನಗೆ ಆಮಂತ್ರಣವಿಲ್ಲದಿದ್ದರೂ ಯಾಗಶಾಲೆಗೆ ಹೋಗಿ, ಅಲ್ಲಿ ಅಪಮಾನ, ತಿರಸ್ಕಾರಗಳಿಗೆ ಗುರಿಯಾಗಿ ಯೋಗಾಗ್ನಿಯಲ್ಲಿ ದೇಹತ್ಯಾಗ ಮಾಡಿದಳು. ಶಿವನು ಈ ಸಮಾಚಾರವನ್ನು ಕೇಳಿ ವೀರಭದ್ರನ ಮೂಲಕ ದಕ್ಷನ ಯಜ್ಞವನ್ನು ಧ್ವಂಸಮಾಡಿಸಿದ [ಶಾಂತಿ. ೨೮೦ ಅನು ೨೬೫ ಭಾಗ.-೪-೨. ವಾಯು -೩೦]. ವೀರಭದ್ರನು ಯಜ್ಞವಿಧ್ವಂಸನಮಾಡಿದ ಕಾಲದಲ್ಲಿ ದಕ್ಷನ ಕುತ್ತಿಗೆ

ಯನ್ನು ಕತ್ತರಿಸಿ, ಯಜ್ಞಕುಂಡದಲ್ಲಿ ಬಿಸುಟು ಸುಟ್ಟುಬಿಟ್ಟ. ಬಳಿಕ ಕರುಣಾಳು ವಾದ ಶಿವನು ದೇವತೆಗಳ ಪ್ರಾರ್ಥನೆಯ ಮೇರೆಗೆ ಒಂದು ಟಗರಿನ ಕುತ್ತಿಗೆಯನ್ನು ತರಿಸಿ, ದಕ್ಷನ ಮುಂಡಕ್ಕೆ ಜೋಡಿಸಿ, ಅವನನ್ನು ಬದುಕಿಸಿದ [ಶಿವ -೪, ೫].

**ಇಲ್ಲಿ ವಿವೇಚಿಸಬೇಕಾದ ವಿಷಯಗಳು.—**

ದಕ್ಷರು ಇಬ್ಬರು ಒಬ್ಬನು ಮೊತ್ತಮೊದಲನೆಯದಾದ ಸ್ವಾಯಂಭುವ ಮನ್ವಂತರದವ ಎರಡನೆಯವನು ಆರನೆಯದಾದ ಚಾಕ್ಷುಷಮನ್ವಂತರದವ. ಸ್ವಾಯಂಭುವ ಮನ್ವಂತರದ ದಕ್ಷನು ಸ್ವಾಯಂಭುವಮನುವಿನ ಮಗಳಾದ ಪ್ರಸೂತಿಯೆಂಬಾಕೆಯನ್ನು ಮದುವೆಯಾಗಿ ೨೪ ಮಂದಿ ಪುತ್ರಿಯರನ್ನು ಪಡೆದ ಇವರಲ್ಲಿ ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪುಸ್, ಶಾಂತಿ, ಸಿದ್ಧಿ, ಕೀರ್ತಿ ಎಂಬ ಹದಿಮೂರು ಮಂದಿ ಧರ್ಮ ಋಷಿಯ ಪತ್ನಿಯರು, ಹದಿನಾಲ್ಕನೆಯವಳಾದ ಖ್ಯಾತಿ ಭೃಗುಮಹರ್ಷಿಯ ಪತ್ನಿ, ಸತೀದೇವಿ ಪರಮೇಶ್ವರನನ್ನೇ ಮದುವೆಯಾದಳು. ಸಂಭೂತಿಯೆಂಬಾಕೆ ಮರೀಚಿ ಮಹರ್ಷಿಯನ್ನೂ, ಸ್ಮೃತಿಯೆಂಬವಳು ಅಂಗಿರಸ ಮುನಿಯನ್ನೂ, ಪ್ರೀತಿ ಯೆಂಬವಳು ಪುಲಸ್ತ್ಯನನ್ನೂ, ಕ್ಷಮಾದೇವಿ ಪುಲಹ ಮಹರ್ಷಿಯನ್ನೂ, ಸನ್ನತಿ ಯೆಂಬವಳು ಕ್ರತು ಮುನಿಯನ್ನೂ, ಅನಸೂಯಾದೇವಿ ಅತ್ರಿ ಋಷಿಯನ್ನೂ, ಊರ್ಜಾದೇವಿ ವಸಿಷ್ಠ ಮುನೀಶ್ವರನನ್ನೂ, ಸ್ವಾಹಾದೇವಿ ಅಗ್ನಿಪುರುಷನನ್ನೂ, ಸ್ವಧಾದೇವಿ ಪಿತೃದೇವತೆಗಳನ್ನೂ ಮದುವೆಯಾದರು ಇಂತು ಸ್ವಾಯಂಭುವ ಮನ್ವಂತರದ ದಕ್ಷನಿಗೆ ಇಪ್ಪತ್ತನಾಲ್ಕು ಮಂದಿ ಪುತ್ರಿಯರು [ಭಾಗ -೪-೧. ವಿಷ್ಣು -೧-೬]. ಈ ದಕ್ಷನೇ ತನ್ನ ಅಳಿಯನಾದ ಶಿವನಿಗೆ ಅಪಮಾನಮಾಡ ಲೆಳಸಿದವ [ಭಾಗ -೪, ೩೦] ಎರಡನೆಯವನಾದ ದಕ್ಷನು ಚಾಕ್ಷುಷಮನ್ವಂತರ ದಲ್ಲಿ ಹತ್ತು ಮಂದಿ ಪ್ರಚೇತಸರಿಂದ ವೃಕ್ಷಕನ್ಯೆಯಾದ ಮಾರಿಷೆಯೆಂಬವಳಲ್ಲಿ ಜನಿಸಿದವ. ಈತನು ವೀರಣನೆಂಬ ಪ್ರಜಾಪತಿಯ ಮಗಳಾದ ವೀರಿಣಿ ಅಥವಾ ಅಸಿಕ್ನಿಯೆಂಬವಳನ್ನು ಮದುವೆಯಾಗಿದ್ದ ವೀರಣನಿಗೆ ಪಂಚಜನನೆಂಬುದು ನಾಮಾಂತರ ಈತನು ಚತುರ್ಮುಖನಿಂದ ಸೃಷ್ಟಿಕಾರ್ಯದಲ್ಲಿ ನಿಯುಕ್ತನಾಗಿ ತನ್ನ ಮನಸ್ಸಂಕಲ್ಪಮಾತ್ರದಿಂದಲೇ ಭೂತಗಳನ್ನು ಸೃಷ್ಟಿಸಿ, ದೇವತೆಗಳು, ಋಷಿಗಳು, ಗಂಧರ್ವರು, ಅಸುರರು, ಸರ್ಪಗಳನ್ನು ನಿರ್ಮಿಸಿದ ಈ ವಿಷಯದಲ್ಲಿ—

ಪ್ರಜಾಃ ಸೃಜೇತಿ ವ್ಯಾದಿಷ್ಟಃ ದಕ್ಷಃ ಪೂರ್ವಂ ಸ್ವಯಂಭುವಾ ।
ಯಥಾ ಸಸರ್ಜ ಭೂತಾನಿ ತಥಾ ಶ್ರುಣು ಮಹಾಮತೇ ॥
ಮನಸಾ ತ್ವೇವ ಭೂತಾನಿ ಪೂರ್ವಂ ದಕ್ಷೋಽಸೃಜತ್ತದಾ ।
ದೇವಾರ್ನ ಋಷೀನ್ ಸ ಗಂಧರ್ವಾನ್ ಅಸುರಾನ್ ಪನ್ನಗಾಂಸ್ತಥಾ ॥

ಯದಾಸ್ಯ ಸೃಜಮಾನಸ್ಯ ನ ವ್ಯವರ್ಧಂತ ತಾಃ ಪ್ರಜಾಃ ।
ತತಸ್ಸಂಚಿಂತ್ಯ ಸ ಮುನಿಃ ಸೃಷ್ಟಿಹೇತೋಃ ಪ್ರಜಾಪತಿಃ ॥

ಎಂಬ ವಿಷ್ಣುಪುರಾಣ (ಅಂಶ. ೧, ಅಧ್ಯಾಯ ೧೫, ಶ್ಲೋ. ೮೬,-೮೮) ವಚನಗಳನ್ನು ಪ್ರಮಾಣವಾಗಿ ತಿಳಿಯಬೇಕು.

ಇಂತು ದಕ್ಷನು ಸೃಷ್ಟಿಸಿದ ಪ್ರಜೆಗಳು ಏಳಿಗೆ ಹೊಂದದಿರುವುದನ್ನು ಕಂಡು, ಜ್ಞಾನದೃಷ್ಟಿಯಿಂದ ಪರ್ಯಾಲೋಚಿಸಿ ಮೈಥುನ ಧರ್ಮದಿಂದ (ಸ್ತ್ರೀ ಪುರುಷ ಸಮಾಗಮದಿಂದ) ಪ್ರಜೆಗಳನ್ನು ವೃದ್ಧಿಗೊಳಿಸಬೇಕೆಂದು ನಿಶ್ಚಯಿಸಿ ಅಸಿಕ್ನಿಯನ್ನು ಮದುವೆಯಾದ ಇದಕ್ಕೆ ಮೊದಲು ಸ್ತ್ರೀ ಪುರುಷ ಮಿಥುನ ಸಮಾಗಮದಿಂದ ಮಕ್ಕಳಾಗುವ ವಾಡಿಕೆಯಿರಲಿಲ್ಲ ದಕ್ಷನೇ ಇದನ್ನು ಏರ್ಪಡಿಸಿದವ.

ತತಃ ಪ್ರಭೃತಿ ಮೈತ್ರೇಯ ಪ್ರಜಾ ಮೈಥುನಸಂಭವಾಃ ।
ಸಂಕಲ್ಪಾತ್ ದರ್ಶನಾತ್ ಸ್ಪರ್ಶಾತ್ ಪೂರ್ವೇಷಾಮಭವನ್ ಪ್ರಜಾಃ ।
ತಪೋವಿಶೇಷೈಸ್ಸಿದ್ಧಾನಾಂ ತದಾತ್ಯಂತತಪಸ್ವಿನಾಂ ॥

[ವಿಷ್ಣು -೧-೧೫, ಶ್ಲೋ ೭೯, ೮೦.]

ಬಳಿಕ ದಕ್ಷನು ಅಸಿಕ್ನಿಯಲ್ಲಿ ಮೊದಲು ಬಾರಿ ಹರ್ಯಶ್ವರೆಂಬ ಐದು ಸಾವಿರ ಮಂದಿ ಪುತ್ರರನ್ನು ಪಡೆದು, ಅವರನ್ನು ಸೃಷ್ಟಿಕಾರ್ಯದಲ್ಲಿ ಪ್ರೇರಿಸಿದ ಆಗ ನಾರದ ಅವರಲ್ಲಿಗೆ ಬಂದು " ಎಲಾ, ಹುಚ್ಚರಿರಾ, ! ಇದೇನು ? ಸೃಷ್ಟಿಯೇ ಪರಮಪುರುಷಾರ್ಥವೆಂದು ಭಾವಿಸಿದಿರಾ ? ಈ ಭೂಮಂಡಲ ಎಲ್ಲಿಂದ ಹೇಗೆ ಬಂತು ? ಇದರ ಒಳಗಡೆ ಏನಿದೆ ? ಮೇಲೆ ಇರುವುದಾದರೂ ಯಾವುದು ?... ಜನ್ಮರಾಹಿತ್ಯವನ್ನು ಪಡೆಯುವುದಕ್ಕೆ ಪ್ರಯತ್ನಪಡಿರಿ " ಎಂದು ಬೋಧಿಸಿ, ಅವರನ್ನೆಲ್ಲಾ ದಿಕ್ಕುಪಾಲು ಮಾಡಿದ. ತರುವಾಯ ದಕ್ಷನು ಖಿನ್ನನಾಗಿ ಮರಳಿ ಶಬಲಾಶ್ವರೆಂಬ ಸಾವಿರ ಮಂದಿ ಪುತ್ರರನ್ನು ಸೃಷ್ಟಿಸಿದ. ಇವರೂ ನಾರದನ ಉಪದೇಶದಿಂದ ತಮ್ಮ ಅಣ್ಣಂದಿರ ದಾರಿಯನ್ನೇ ಹಿಡಿದರು. ದಕ್ಷನು ಇದರಿಂದ ಮತ್ತಷ್ಟು ಖಿನ್ನನಾಗಿ ನಾರದನಿಗೆ ಶಾಪ ಕೊಟ್ಟು, ಮರಳಿ ಅರುವತ್ತು ಮಂದಿ ಪುತ್ರಿಯರನ್ನು ಪಡೆದ ಈ ಅರುವತ್ತು ಮಂದಿಯಲ್ಲಿ ಹತ್ತು ಮಂದಿಯನ್ನು ಧರ್ಮ ಮಹರ್ಷಿಗೂ, ಹದಿಮೂರು ಮಂದಿಯನ್ನು ಕಾಶ್ಯಪ ಮಹರ್ಷಿಗೂ, ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನೂ, ಅರಿಷ್ಟನೇಮಿಗೆ ನಾಲ್ವರನ್ನೂ, ಬಹುಪುತ್ರ ಅಥವಾ ಭೂತ ಮಹರ್ಷಿಗೆ ಇಬ್ಬರನ್ನೂ, ಅಂಗಿರಸನಿಗೆ ಇಬ್ಬರನ್ನೂ ಭೃಶಾಶ್ವ ಅಥವಾ ಕೃಶಾಶ್ವನಿಗೆ ಇಬ್ಬರನ್ನೂ ಕೊಟ್ಟು ಮದುವೆಮಾಡಿದ. [ಭಾಗ.-೬-೫, ೬. ವಿಷ್ಣು -೧-೧೫]. ದಕ್ಷನು ಸತೀದೇವಿಯಿಂದ ಶಪ್ತನಾಗಿ ಹತ್ತು ಮಂದಿ ಪ್ರಚೇತಸರಿಗೂ ಒಬ್ಬನೇ ಮಗನಾಗಿ ಹುಟ್ಟಿದ್ದು [ಮತ್ಸ್ಯ.-೧೩]. ದಕ್ಷನೇ ದಂಪತಿಗಳ ಮೂಲಕ ಸೃಷ್ಟಿಯನ್ನು ಮೊದಲು ಮಾಡಿದವನು.

ಸಂಕಲ್ಪಾದ್ದರ್ಶನಾತ್ ಸ್ಪರ್ಶಾತ್ ಪೂರ್ವೇಷಾಂ ಸೃಷ್ಟಿರುಚ್ಯತೇ।
ದಕ್ಷಾತ್ಪ್ರಾಚೇತಸಾದೂರ್ಧ್ವಂ ಸೃಷ್ಟಿರ್ಮೈಥುನ ಸಂಭವಾ ॥

ನೋಡು—ದಾಕ್ಷಾಯಣಿ [ಮತ್ಸ್ಯ -೫].

**ದಕ್ಷಸಾವರ್ಣಿ.**—ಈತ ಹದಿನಾಲ್ಕು ಮಂದಿ ಮನುಗಳಲ್ಲಿ ಒಂಬತ್ತನೆಯವ. ಈತನಿಗೆ ದಶಸಾವರ್ಣಿಯೆಂಬುದು ನಾಮಾಂತರ. ಈತನು ವರುಣನ ಮಗ. ಈತನ ರಾಜ್ಯಭಾರ ಸಮಯದಲ್ಲಿ ಸ್ವರ್ಗಲೋಕದಲ್ಲಿ ಅದ್ಭುತನೆಂಬ ಇಂದ್ರನು ದೇವ ಲೋಕದ ಅಧಿಪತಿಯಾಗಿದ್ದ ಇಂದ್ರನಿಗೆ ಸಹಾಯಾರ್ಥವಾಗಿ ಆಯುಷ್ಮಂತನೆಂಬ ಋಷಿಯಿಂದ ಅಂಬುಧಾರಾಯೆಂಬವಳಲ್ಲಿ ಜನಿಸಿದ ಋಷಭನೆಂಬ ವಿಷ್ಣುವೂ, ದ್ಯುತಿಮಂತನೇ ಮೊದಲಾದ ಸಪ್ತರ್ಷಿಗಳೂ ಇದ್ದರು [ಭಾಗ -೮, ೧೩]

**ದಕ್ಷಿಣ ಗೋಗ್ರಹಣ** —[ವಿರಾ ೩೭]

**ದಕ್ಷಿಣದಿಗ್ವರ್ಣನೆ** —[ಉದ್ಯೋ ೧೦೯ ರಾಮಾ - ಕಿಷ್ಕಿಂ. ೪೧].

**ದಕ್ಷಿಣಾ** —ಈಕೆ ರುಚಿಯೆಂಬ ಋಷಿಯಿಂದ ಸ್ವಾಯಂಭುವ ಮನುವಿನ ಹಿರಿಯ ಮಗಳಾದ ಆಕೂತಿಯೆಂಬವಳಲ್ಲಿ ಜನಿಸಿದವಳು ಈಕೆ ತನ್ನ ಸೋದರನಾದ ಯಜ್ಞನನ್ನೇ ಮದುವೆಯಾದಳು ಈ ದಂಪತಿಗಳೇ ಇಂದ್ರಪದವಿಯನ್ನು ಪಡೆದವರಲ್ಲಿ ಮೊದಲನೆಯವರು [ಭಾಗ -೩, ೧೭]

**ದಗ್ಧರಥ** —ಚಿತ್ರರಥನೆಂಬ ಗಂಧರ್ವನ ನಾಮಾಂತರ ನೋಡು—ಅಂಗಾರ ಪರ್ಣ, ಚಿತ್ರರಥ

**ದಣ್ಡ** —(i) ಮಗಧ ದೇಶದ ಅರಸು [ಆದಿ. ೭೦೧]. ರಾಜಸೂಯ ಸಂದರ್ಭ ದಲ್ಲಿ ಭೀಮನಿಂದ ಸೋತನು [ಭಾರ.-ಸ ೩೧] ಇವನೂ ಇವನ ತಮ್ಮನಾದ ದಂಡಧಾರನೆಂಬವನೂ ದುರ್ಯೋಧನನ ಪರವಾಗಿ ಹೋರಾಡಿ ಹದಿನೇಳನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಮಡಿದರು [ಕರ್ಣ. ೫೪].

(ii) ನಾಲ್ಕನೆಯ ಉಪಾಯ ಅದರ ವರ್ಣನೆ [ಶಾಂ ೧೫, ೧೭೨]

**ದಣ್ಡಕ.**—ಸೂರ್ಯ ವಂಶದ ಅರಸು ಇಕ್ಷ್ವಾಕು ಮಹಾರಾಜನ ನೂರು ಮಂದಿ ಮಕ್ಕಳಲ್ಲಿ ಒಬ್ಬ ಇವನು ಮಹಾ ಮೂರ್ಖನಾಗಿದ್ದುದರಿಂದಲೂ ಇವನಿಗೆ ಶಾಪ ದಂಡ ಪ್ರಾಪ್ತವಾಗದಿರದೆಂಬ ಶಂಕೆಯಿಂದಲೂ ದಂಡಕನೆಂದು ಇವನಿಗೆ ನಾಮ ಕರಣಮಾಡಿದ್ದರು ಇಕ್ಷ್ವಾಕು ಇವನ ಘೋರಕೃತ್ಯಗಳನ್ನು ಕಂಡು, ಸಹಿಸಲಾಗದೆ ವಿಂಧ್ಯ, ಶೈವಲ ಎಂಬ ಪರ್ವತಗಳ ನಡುವೆ ರಾಜ್ಯವನ್ನು ಕಲ್ಪಿಸಿ, ದಂಡಕನನ್ನು ಪ್ರತ್ಯೇಕವಾಗಿರಿಸಿದ ದಂಡಕ ಅಲ್ಲಿಯೇ ಮಧುಮಂತವೆಂಬ ನಗರಿಯನ್ನು ನಿರ್ಮಾಣ ಮಾಡಿಸಿ, ಶುಕ್ರಾಚಾರ್ಯರನ್ನು ತನ್ನ ಪುರೋಹಿತರನ್ನಾಗಿ ಏರ್ಪಡಿಸಿಕೊಂಡು, ಸ್ವರ್ಗ ಸೌಖ್ಯಕ್ಕಿಂತಲೂ ಅತಿಶಯವೆನಿಸಿದ ಭೋಗಗಳಿಂದ ಅನೇಕ ವರ್ಷಗಳವರೆಗೆ ರಾಜ್ಯ

ಭಾರವಮಾಡುತ್ತಿದ್ದ. ಒಮ್ಮೆ ದಂಡಕ ಶುಕ್ರಾಚಾರ್ಯರ ಆಶ್ರಮಕ್ಕೆ ಹೋದ. ಆಚಾರ್ಯರು ಆಶ್ರಮದಲ್ಲಿರಲಿಲ್ಲ. ಅವರ ಹಿರಿಯ ಮಗಳಾದ ಅರಜೆಯೆಂಬ ತರುಣಿ ಇವನ ಕಣ್ಣಿಗೆ ಬಿದ್ದಳು. ಇವನು ಆಕೆಯನ್ನು ಕೆಣಕಿದ. "ನಾನು ಗುರುಪುತ್ರಿ' ನನ್ನನ್ನು ನೀನು ವರಿಸುವುದು ಶ್ರೇಯಸ್ಕರವಲ್ಲ" ಎಂದು ಮುಂತಾಗಿ ಅರಜೆ ಎಷ್ಟು ಬಗೆಯಿಂದ ತಿಳಿಯಹೇಳಿದರೂ ಕೇಳದೆ, ಬಲಾತ್ಕಾರದಿಂದ ಆಕೆಯನ್ನು ಮಾನಭಂಗಪಡಿಸಿ ತನ್ನ ಪಟ್ಟಣಕ್ಕೆ ಹೋದ ತರುವಾಯ ಶುಕ್ರಾಚಾರ್ಯನು ಆಶ್ರಮಕ್ಕೆ ಬಂದು ಸಮಾಚಾರವನ್ನೆಲ್ಲ ತಿಳಿದು, ಕ್ರೋಧಾವಿಷ್ಟನಾಗಿ "ಆಹಾ! ದಂಡಕ ಎಷ್ಟು ಕೊಬ್ಬಿದ್ದಾನೆ—ಇರಲಿ. ಏಳು ರಾತ್ರಿಗಳೊಳಗಾಗಿ ದಂಡಕ, ಭೃತ್ಯ, ಪರಿವಾರದೊಂದಿಗೆ ನಾಶವಾಗಿಹೋಗಲಿ. ಅವನ ರಾಜ್ಯದ ಸುತ್ತಲೂ ಮೂರು ಯೋಜನಗಳ ಅಗಲವುಳ್ಳ ಪ್ರದೇಶವೂ ಹಾಳಾಗಲಿ. ಈ ದೇಶದಲ್ಲಿರುವ ಸಕಲ ಜೀವಜಂತುಗಳೂ ಮಾಯವಾಗಲಿ" ಎಂಬುದಾಗಿ ಶಪಿಸಿ, ತನ್ನ ಮಗಳನ್ನು ಕರೆದು, "ಎಲೌ, ಭ್ರಷ್ಟಚಾರಿತ್ರಳೆ! ನೀನಿರುವ ಪ್ರದೇಶದ ಸುತ್ತಲೂ ಒಂದು ಯೋಜನದವರೆಗೆ ಗಿಡಮರಬಳ್ಳಿಗಳು ಹೇರಳವಾಗಿ ಬೆಳೆದು ಮನೋಹರವಾಗಿರಲಿ ನೀನು ಇವುಗಳಲ್ಲಿನ ಫಲಮೂಲಾದಿಗಳಿಂದಲೇ ಜೀವಿಸಿಕೊಂಡಿರು. ನಿನ್ನ ಸುತ್ತಲೂ ಒಂದು ಯೋಜನದವರೆಗೆ ವಾಸಮಾಡುವ ಮೃಗಗಳೆಲ್ಲವೂ ನಿನ್ನ ಹತ್ತಿರದಲ್ಲಿಯೇ ಬಂದು ಸೇರಲಿ. ನೀನು ವಾಸಮಾಡುವ ಪ್ರದೇಶವು ಸುಭಿಕ್ಷವಾಗಿರಲಿ" ಎಂದು ಹೇಳಿ, ತನ್ನ ಆಶ್ರಮದಲ್ಲಿದ್ದವರನ್ನೆಲ್ಲ ಒಡನೆಯೇ ಆ ರಾಜ್ಯದ ಎಲ್ಲೆಯನ್ನು ಬಿಟ್ಟು ಹೋಗುವಂತೆ ಹೇಳಿದ ಅಂತೆಯೇ ಏಳು ದಿನಗಳವರೆಗೆ ಎಡೆಬಿಡದೆ ಧೂಳಿನ ಮಳೆ ಸುರಿದು ದಂಡಕನೂ ಅವನ ಪರಿವಾರವೂ ರಾಷ್ಟ್ರವೂ ಭಸ್ಮವಾಗಿ, ಆ ಪ್ರದೇಶವೆಲ್ಲವೂ ಅರಣ್ಯವಾಯಿತು ಇದಕ್ಕೆ ಜನಸ್ಥಾನವೆಂದೂ, ದಂಡಕಾರಣ್ಯವೆಂದೂ ಹೆಸರು [ರಾಮಾ.-ಉತ್ತ. ೭೯-೮೧].

**ದಣ್ಡಕಾರಣ್ಯ** —ನೋಡು—ದಂಡಕ [ಭಾರ -ವನ. ೮೫, ೬೭೮].

**ದಣ್ಡಧಾರ**.—(1) ಒಬ್ಬ ಅರಸು ದುರ್ಯೋಧನನ ಪರವಾಗಿ ಹೋರಾಡಿ, ಹದಿನಾರನೆಯ ದಿವಸದ ಯುದ್ಧದಲ್ಲಿ ಅರ್ಜುನನಿಂದ ಹತನಾದ [ಕರ್ಣ. ೧೮].

(ii) ಪಾಂಡವರ ಪಕ್ಷದ ಒಬ್ಬ ಅರಸು ಹನ್ನೆರಡನೆಯ ದಿವಸದ ಯುದ್ಧದಲ್ಲಿ ದ್ರೋಣನಿಂದ ಹತನಾದ. ಇವನು ಚೇದಿದೇಶದ ಅರಸು [ದ್ರೋ ೬೩].

(iii) ಪಾಂಚಾಲ ರಾಜಕುಮಾರರಲ್ಲಿ ಒಬ್ಬ. ಯುಧಿಷ್ಠಿರನ ಚಕ್ರರಕ್ಷಕನಾಗಿದ್ದು, ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಕರ್ಣ. ೪೪].

(iv) ಮಗಧದೇಶದ ಅರಸು [ಆದಿ. ೬೮, ೬೦೧]. ಏಕರಥ [ಉದ್ಯೋ. ೧೬೬]. ರಾಜಸೂಯಯಾಗ ಸಮಯದಲ್ಲಿ ಭೀಮನಿಂದ ಸೋತ [ಸಭಾ. ೩೧],

ಭಾರತ ಯುದ್ಧದಲ್ಲಿ ಇವನೂ ಇವನ ಅಣ್ಣನಾದ ದಂಡನೆಂಬವನೂ ದುರ್ಯೋಧನನ ಪರವಾಗಿ ಹೋರಾಡಿ ಹದಿನೇಳನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಹತರಾದರು. ನೋಡು—ದಂಡ [ಕರ್ಣ ೫೪].

**ದತ್ತ.**—ಸ್ವಾಯಂಭುವ ಮನ್ವಂತರದಲ್ಲಿ ಅತ್ರಿ ಮಹರ್ಷಿಯ ಪತ್ನಿಯಾದ ಅನಸೂಯೆಯಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಒಬ್ಬ. ಈತನು ಸ್ವಾರೋಚಿಷ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬನಾಗಿದ್ದ. ನಿಮಿಋಷಿ ಈತನ ಮಗ [ಸಭಾ. ೪೮. ಅನು. ೧೩೮, ೨೫೭]. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿ ಮುನಿ ಸಂತಾನಾರ್ಥವಾಗಿ ತಪಸ್ಸು ಮಾಡಲಾಗಿ, ಪ್ರಸನ್ನರಾಗಿ ಪ್ರೈದೋರಿದ ತ್ರಿಮೂರ್ತಿಗಳು ತಮ್ಮ ಒಬ್ಬೊಬ್ಬರ ಅಂಶದಿಂದಲೂ ಒಬ್ಬೊಬ್ಬ ಮಗ ಹುಟ್ಟುವನೆಂದು ಅನುಗ್ರಹಿಸಿದರು ಅಂತೆಯೇ ಬ್ರಹ್ಮನ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ, ಶಿವನ ಅಂಶದಿಂದ ದೂರ್ವಾಸ ಮುನಿಯೂ ಜನಿಸಿದರು. ಈತನು ಬ್ರಹ್ಮಚರ್ಯನಿರತನಾಗಿದ್ದು, ಅಲರ್ಕ, ಪ್ರಹ್ಲಾದ, ಯದು, ಕಾರ್ತವೀರ್ಯ ಮುಂತಾದವರಿಗೆ ಜ್ಞಾನೋಪದೇಶಮಾಡಿದ. ದತ್ತಾವತಾರ ಕಥೆ [ಭಾಗ -೪-೧ ಮಾರ್ಕ -೧೬ ದೇ.ಭಾ.-೪, ೧೬. ಮತ್ಸ್ಯ. -೪೭]. ರಾಕ್ಷಸರ ಹಾವಳಿಯನ್ನು ತಡೆಯಲಾರದೆ ದೇವತೆಗಳು ದತ್ತಾತ್ರೇಯನಲ್ಲಿ ಮೊರೆಯಿಟ್ಟರು ದತ್ತಾತ್ರೇಯನು ಅವರನ್ನೆಲ್ಲ ತನ್ನ ಆಶ್ರಮದ ಬಳಿಗೆ ಬರಮಾಡಿಕೊಂಡ. ರಕ್ಕಸರು ಹೊಂಚುಹಾಕಿಕೊಂಡಿದ್ದು ಈತನ ಆಶ್ರಮದಲ್ಲಿದ್ದ ಲಕ್ಷ್ಮಿಯನ್ನು ಅಪಹರಿಸಿಕೊಂಡು ಹೋಗುತ್ತಿರುವಲ್ಲಿ, ಈತನ ತಪೋಮಹಿಮೆಯಿಂದ ತಮ್ಮಷ್ಟಕ್ಕೆ ತಾವೇ ಸತ್ತುಬಿದ್ದರು [ಮಾರ್ಕ.-೧೬]

**ದತ್ತಾತ್ರೇಯ** —ನೋಡು—ದತ್ತ.

**ದಧಿಮುಖ** — (1) ಒಬ್ಬ ಕಪಿಶ್ರೇಷ್ಠ ಕಿಷ್ಕಿಂಧೆಯ ಸಮೀಪದಲ್ಲಿ ಸುಗ್ರೀವನ ಮಧುವನವನ್ನು ಕಾಪಾಡಿಕೊಂಡಿದ್ದವ. ಹನೂಮಂತನೇ ಮುಂತಾದವರು ಸೀತೆಯನ್ನು ಹುಡುಕಿ ಹಿಂದಿರುಗಿ ಬರುವಾಗ ಕಿಷ್ಕಿಂಧೆಯ ಸಮೀಪಕ್ಕೆ ಬರುತ್ತಲೇ ಮಧುಪಾನ ಮಾಡಬೇಕೆಂದು ಆಸೆಪಟ್ಟು ಅಂಗದನ ಅಪ್ಪಣೆಯಮೇರೆಗೆ ಮಧುವನವನ್ನು ಹೊಕ್ಕು ಯಥೇಷ್ಟವಾಗಿ ಮಧುಪಾನ ಮಾಡುತ್ತಿದ್ದರು. ದಧಿಮುಖ ಅವರನ್ನು ಅಡ್ಡಗಿಸಲು ಹೋಗಿ, ಆ ಕಪಿಗಳಿಂದ ಭಂಗಪಟ್ಟು, ಸುಗ್ರೀವನಲ್ಲಿಗೆ ಹೋಗಿ ಸಮಾಚಾರವನ್ನೆಲ್ಲ ತಿಳಿಸಿದ ಸುಗ್ರೀವನು ಅವನನ್ನು ಸಮಾಧಾನಗೊಳಿಸಿ, ಆ ಕಪಿಪುಂಗವರನ್ನೆಲ್ಲ ತನ್ನಲ್ಲಿಗೆ ಕಳುಹಿಸುವಂತೆ ಹೇಳಲಾಗಿ, ದಧಿಮುಖನು ಮಧುವನಕ್ಕೆ ತಿರುಗಿ ಬಂದು ಅಂಗದಾದಿಗಳನ್ನು ಸುಗ್ರೀವನಲ್ಲಿಗೆ ಕಳುಹಿದ [ರಾಮಾ.-ಸುಂದರ. ೬೧, ೬೨. ಭಾರ.-ವನ. ೨೮೪]. ಈತನು ಚಂದ್ರನ ಮಗ. ಸುಮುಖ,

ದುರ್ಮ್ಮುಖ, ವೇಗದರ್ಶಿಗಳೆಂಬವರು ಇವನ ಒಡಹುಟ್ಟಿದವರು ಇವರು ರಾಮಾಯಣ ಯುದ್ಧದಲ್ಲಿ ಹೋರಾಡಿದವರು [ರಾಮಾ -ಯುದ್ಧ. ೩೧].

(11) ಒಂದು ಸರ್ಪ [ಆದಿ. ೩೫ ಉದ್ಯೋ. ೧೦೩].

**ದಧೀಚ(ಚಿ).**—(1) ಮೊತ್ತಮೊದಲನೆಯದಾದ ಸ್ವಾಯಂಭುವಮನ್ವಂತರದಲ್ಲಿ ಬ್ರಹ್ಮಮಾನಸಪುತ್ರನಾದ ಅಥರ್ವಣ ಮಹರ್ಷಿಯಿಂದ ಕರ್ದಮ ಪುತ್ರಿಯಾದ ಶಾಂತಿ ಅಥವಾ ಚಿತ್ತಿಯೆಂಬವಳಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಒಬ್ಬ. ಧೃತವ್ರತ, ಅಥರ್ವಶಿರರೆಂಬವರು ಈತನ ಅಣ್ಣತಮ್ಮಂದಿರು [ಭಾಗ.-೪-೧]. ಇಂದ್ರನು ಈತನಿಗೆ ಮಧು(ಬ್ರಹ್ಮ) ವಿದ್ಯೆಯನ್ನೂ ಪ್ರವರ್ಗವಿದ್ಯೆಯನ್ನೂ ಉಪದೇಶಿಸಿ, ಆ ವಿದ್ಯೆಗಳನ್ನು ಯಾರಿಗಾದರೂ ಉಪದೇಶಿಸಿದಲ್ಲಿ ಅವನ ತಲೆ ಉರುಳಿ ಬೀಳುವುದೆಂದು ಹೇಳಿದ್ದ. ಕೆಲವು ಕಾಲದ ಬಳಿಕ ಅಶ್ವಿನೀದೇವತೆಗಳು ಈತನ ಬಳಿಗೆ ಬಂದು ತಮಗೆ ಮಧುವಿದ್ಯೆಯನ್ನು ಉಪದೇಶಿಸಬೇಕೆಂದು ಬೇಡಿಕೊಂಡರು. ದಧೀಚನು ಇಂದ್ರನ ಶಾಸನವನ್ನು ಅವರಿಗೆ ತಿಳುಹಿದ. ಆಗ ಅಶ್ವಿನೀದೇವತೆಗಳು ಅವನ ತಲೆಯನ್ನು ತೆಗೆದಿಟ್ಟು ಕುದುರೆಯ ತಲೆಯನ್ನು ಜೋಡಿಸಿ, ಆತನಿಂದ ಬ್ರಹ್ಮ (ಮಧು) ವಿದ್ಯೆಯನ್ನು ಕಲಿತರು ಈ ಸಮಾಚಾರವನ್ನು ತಿಳಿದು ಇಂದ್ರ ದಧೀಚನ ತಲೆಯನ್ನು ತರಿದ ಬಳಿಕ ಅಶ್ವಿನೀದೇವತೆಗಳು ಆತನ ರುಂಡವನ್ನೇ ಆ ಮುಂಡಕ್ಕೆ ಸೇರಿಸಿದರು. ಇಂತು ದಧೀಚನು ಇಂದ್ರನ ಶಿಷ್ಯನೂ, ಅಶ್ವಿನೀದೇವತೆಗಳಿಗೆ ಗುರುವೂ ಆಗಿದ್ದನು [ಭಾರ -ವನ ೧೦೦, ಭಾಗ -೬,೧೦ ದೇ ಭಾಗ -೭, ೩೬]. ಈತ ಭೃಗುಮಹರ್ಷಿಯ ಮಗ ಸರಸ್ವತೀ ನದೀ ತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಇಂದ್ರನು ಈತನ ತಪಸ್ಸನ್ನು ಭಂಗಗೊಳಿಸುವ ಸಲುವಾಗಿ ಅಲಂಬುಸೆಯೆಂಬ ಅಪ್ಸರಸಿಯನ್ನು ಕಳುಹಿಸಿಕೊಟ್ಟ ಈಕೆಯ ದರ್ಶನದಿಂದ ಕ್ಷೋಭೆಗೊಂಡ ದಧೀಚನು ಸಾರಸ್ವತನೆಂಬ ಮಗನನ್ನು ಪಡೆದ ಈ ಸಾರಸ್ವತ ಮುನಿ ವಾಸವಾಗಿರುವ ಪ್ರದೇಶದಲ್ಲಿ ಅನಾವೃಷ್ಟಿಯು ಭಯವಿಲ್ಲವೆಂಬುದಾಗಿ ದಧೀಚನು ಅನುಗ್ರಹಿಸಿದ [ಶಲ್ಯ. ೫೨]. ದೇವತೆಗಳು ಒಮ್ಮೆ ಈತನಲ್ಲಿಗೆ ಬಂದು ತಮ್ಮ ಅಸ್ತ್ರಗಳನ್ನು ನ್ಯಾಸವಾಗಿಟ್ಟು ಹೋದರು. ಕಾಲಕ್ರಮದಲ್ಲಿ ಅವು ತುಕ್ಕುಹಿಡಿಯ ಬಂದುವು. ಎಷ್ಟು ಕಾಲವಾದರೂ ಅವರು ಹಿಂದಿರುಗಿ ಬಂದು ಅವುಗಳನ್ನು ಕೊಂಡು ಹೋಗಲಿಲ್ಲ. ಈ ಕಾರಣದಿಂದ ದಧೀಚಿ ಆ ಅಸ್ತ್ರಗಳನ್ನೆಲ್ಲ ಜಲದಲ್ಲಿ ಅಭಿಮಂತ್ರಿಸಿ ಪಾನಮಾಡಿಬಿಟ್ಟ ಕೆಲಕಾಲದ ಮೇಲೆ ದೇವತೆಗಳು ಬಂದು ಅಸ್ತ್ರಗಳನ್ನು ಕೇಳಿದರು. ದಧೀಚಿ ನಡೆದ ಸಮಾಚಾರವನ್ನು ಹೇಳಿದ ದೇವತೆಗಳು ನಿರ್ಬಂಧಪಡಿಸತೊಡಗಿದರು. ಆಗ ದಧೀಚಿ '' ನಿಮ್ಮ ಅಸ್ತ್ರಗಳೆಲ್ಲವೂ ನನ್ನ ಬೆನ್ನುಮೂಳೆಯಲ್ಲಿ ಬೆರೆತು ಹೋಗಿವೆ. ನಾನು ಯೋಗಬಲದಿಂದ ದೇಹತ್ಯಾಗಮಾಡುತ್ತೇನೆ. ನೀವು ನನ್ನ

ಬೆನ್ನುಮೂಳೆಗಳನ್ನು ತೆಗೆದುಕೊಂಡು ನಿಮಗೆ ಬೇಕಾದ ಅಸ್ತ್ರಗಳನ್ನು ಮಾಡಿಸಿ ಕೊಳ್ಳಿರಿ '' ಎಂದು ಹೇಳಿ, ದೇಹತ್ಯಾಗ ಮಾಡಿದ. ಬಳಿಕ ದೇವತೆಗಳು ದಧೀಚಿಯ ಮೂಳೆಗಳನ್ನು ಸಂಗ್ರಹಿಸಿ, ವಿಶ್ವಕರ್ಮನ ಮೂಲಕ ತಮತಮಗೆ ಬೇಕಾದ ಆಯುಧ ಗಳನ್ನು ಮಾಡಿಸಿಕೊಂಡರು [ಭಾರ -ವನ ೯೯ ಭಾಗ -೬, ೧೦] ದಧೀಚನು ಪ್ರಾತಿಥ್ಯೇಯಿಯೆಂಬವಳನ್ನು ಮದುವೆಯಾಗಿದ್ದ ಇವನು ದೇಹತ್ಯಾಗ ಮಾಡು ವಾಗ್ಗೆ ಆಕೆ ಗರ್ಭವತಿಯಾಗಿದ್ದು, ಕಾಲಾಂತರದಲ್ಲಿ ಪಿಪ್ಪಲಾದನೆಂಬ ಮಗನನ್ನು ಪಡೆದಳು [ಬ್ರಹ್ಮ-೧೧೦ ಶಿವ.-ಶತರುದ್ರ. ೨೪]. ಈತನ ಹೆಂಡತಿ ಸುವರ್ಚೆ ಯೆಂಬವಳು. ಈಕೆ ದಧೀಚನು ಸಾಯುವಾಗ್ಗೆ ಗರ್ಭಿಣಿಯಾಗಿದ್ದು ಅನಂತರ ಪಿಪ್ಪಲಾದನನ್ನು ಹೆತ್ತಳು [ಸ್ಕಾಂದ.-ಕೇದಾರ. ೧೭]

**ದನಾಯು** —ದಕ್ಷನಿಂದ ವೀರಿಣಿಯಲ್ಲಿ ಜನಿಸಿದವಳು ಈಕೆ ಕಶ್ಯಪನನ್ನು ಮದುವೆಯಾಗಿ ವಿಕ್ಷರ, ಬಲ, ವೀರ, ವೃತ್ರರೆಂಬ ನಾಲ್ವರು ಪುತ್ರರನ್ನು ಪಡೆದಳು [ಭಾರ.-ಆದಿ. ೬೬].

**ದನು** —ದಕ್ಷಬ್ರಹ್ಮನಿಂದ ಧರಣಿಯಲ್ಲಿ ಜನಿಸಿದವಳು ಈಕೆ ಕಶ್ಯಪನನ್ನು ಮದುವೆಯಾಗಿ ವಿಪ್ರಚಿತ್ತಿ, ಏಕಚಕ್ರ, ನಮುಚಿ, ನಿಕುಂಭ, ನರಕ, ಬಾಣ, ವಾತಾಪಿ, ಶಂಬರ, ಹಿರಣ್ಯಕಶಿಪು ಮುಂತಾದ ನಲವತ್ತು ಮಂದಿ ಪುತ್ರರನ್ನು ಪಡೆದಳು [ಭಾರ -ಆದಿ ೬೬ ಮತ್ಸ್ಯ.-೬]

**ದನ್ತವಕ್ರ(ಕ್ರ)** —ಕರೂಶ ದೇಶಾಧಿಪತಿಯಾದ ವೃದ್ಧಶರ್ಮನಿಂದ ವಸುದೇವನ ಸೋದರಿಯರಲ್ಲಿ ಒಬ್ಬಳಾದ ಶ್ರುತದೇವಿಯೆಂಬವಳಲ್ಲಿ ಜನಿಸಿದವನು ಪಾಂಡವರ ರಾಜಸೂಯ ಯಾಗ ಸಮಯದಲ್ಲಿ ಸಹದೇವನೊಂದಿಗೆ ಯುದ್ಧಮಾಡಿ ಸೋತ [ಸಭಾ ३२ ಭಾಗ -೯, ३४] ದಂತವಕ್ರನು ಶಿಶುಪಾಲನಿಗೂ, ಸಾಲ್ವನಿಗೂ, ಪೌಂಡ್ರಕವಾಸುದೇವನಿಗೂ ಆಪ್ತಮಿತ್ರನಾಗಿದ್ದ ರಾಜಸೂಯ ಯಾಗದ ಅವ ಭೃಥಸ್ನಾನ ಸಮಯದಲ್ಲಿ ಪಾಂಡವರು ಭೀಷ್ಮನ ಸೂಚನೆಯ ಮೇರೆಗೆ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದರು. ಆ ಸಮಯದಲ್ಲಿ ಶಿಶುಪಾಲನು ಅನೇಕ ವಿಧವಾಗಿ ಕೃಷ್ಣನನ್ನು ದೂಷಿಸಿ, ಕಡೆಗೆ ಆತನ ಚಕ್ರಕ್ಕೆ ಆಹುತಿಯಾದ ಈ ವರ್ತಮಾನ ವನ್ನು ಕೇಳಿ ಸಾಳ್ವನೂ, ದಂತವಕ್ರನೂ ದ್ವಾರಕೆಯ ಮೇಲೆ ದಂಡೆತ್ತಿ ಬಂದರು ಕೃಷ್ಣನು ರಾಜಸೂಯ ಯಾಗಕ್ಕೆ ಹೋಗಿದ್ದವನು ಇನ್ನೂ ಹಿಂದಿರುಗಿರಲಿಲ್ಲ. ಸಾಳ್ವಾದಿಗಳೊಂದಿಗೆ ಪ್ರದ್ಯುಮ್ನ ಯುದ್ಧ ಮಾಡುತ್ತಿದ್ದ. ಅಷ್ಟರಲ್ಲಿ ಶ್ರೀ ಕೃಷ್ಣನೂ ಬಂದು ಸೇರಿದ. ಸಾಳ್ವನೂ ಹತನಾದನು ಇದನ್ನು ಕಂಡು ದಂತವಕ್ರನು ಪೌರುಷವನ್ನು ಕೊಚ್ಚಿಕೊಳ್ಳುತ್ತ ಶ್ರೀ ಕೃಷ್ಣನನ್ನು ಎದುರಿಸಿ, ಆತನ ಕೌಮೋದಕಿ

ಯೆಂಬ ಗದೆಗೆ ಪ್ರಾಣಗಳನ್ನು ಅರ್ಪಿಸಿ, ಶ್ರೀ ಕೃಷ್ಣನಲ್ಲಿಯೇ ಐಕ್ಯವಾದ [ಭಾಗ - ೧೦, ೭೮]. ನೋಡು— ಜಯ.

**ದಮ.**—(i) ಇಂದ್ರಿಯ ನಿಗ್ರಹ. ಆದರ ಪ್ರಶಂಸೆ [ಉದ್ಯೋ ೬೩. ಶಾಂತಿ. ೧೬೫].

(ii) ವಿದರ್ಭ ದೇಶಾಧಿಪತಿಯಾದ ಭೀಮ ರಾಜನ ಹಿರಿಯ ಮಗ. ದಮ ಯಂತಿಯ ಅಣ್ಣ. ನೋಡು—ದಮಯಂತಿ [ವನ. ೫೦].

(iii) ಒಬ್ಬ ಋಷಿ. ಈತನ ಮೂಲಕ ವರವನ್ನು ಪಡೆದು ಭೀಮ ರಾಜ ಪುತ್ರವಂತನಾದ. ನೋಡು—ದಮಯಂತೀ.

**ದಮಘೋಷ.**—ಚಂದ್ರ ವಂಶದ ಅರಸು ಯದುಕುಲೋತ್ಪನ್ನನಾದ ಚೇದಿ ರಾಜನ ಮಗ ಶ್ರೀ ಕೃಷ್ಣನ ಸೋದರತ್ತೆಯಾದ ಶ್ರುತಶ್ರವೆ ಈತನನ್ನು ಮದುವೆ ಯಾಗಿ ಶಿಶುಪಾಲನನ್ನು ಪಡೆದಳು [ಭಾರ -ವನ ೧೪] ಈತನ ವಂಶವರ್ಣನೆ [ ಹರಿ -೧-೩೧. ೨-೯೩ ಭಾಗ -೯-೨೪]

**ದಮನ** —(i) ಒಬ್ಬ ಮಹರ್ಷಿ. ನೋಡು--ದಮ [ಭಾರ -ವನ ೫೦].

(ii) ದಮಯಂತಿಯ ಸಹೋದರರಲ್ಲಿ ಒಬ್ಬ ನೋಡು—ದಮಯಂತಿ

(iii) ಒಬ್ಬ ಅರಸು ಪೌರವ ರಾಜನ ಮಗ. ಭಾರತ ಯುದ್ಧದಲ್ಲಿ ಕೌರವರ ಪಕ್ಷವನ್ನು ಹಿಡಿದು ಹೋರಾಡಿದ [ಭೀ ೬೧]

**ದಮಯನ್ತೀ** —ವಿದರ್ಭರಾಜನಾದ ಭೀಮಭೂಪಾಲನು ದಮನೆಂಬ ಮುನಿಯ ವರಪ್ರಸಾದದಿಂದ ಪಡೆದ ಮಗಳು ಈಕೆ ನಿಷಧ ದೇಶಾಧೀಶ್ವರನಾದ ನಳ ಮಹಾರಾಜನನ್ನು ಮದುವೆಯಾಗಿ ಇಂದ್ರಸೇನನೆಂಬ ಮಗನನ್ನು ಪಡೆದಳು. ದಮ, ದಮನ, ದಾಂತರೆಂಬವರು ಈಕೆಯ ಒಡಹುಟ್ಟಿದವರು [ವನ ೫೦] ದಮ ಯಂತಿಯ ಸ್ವಯಂವರ [ವನ ೫೪] ಕಾಡಿನಲ್ಲಿ ಹಾವು ಅಡ್ಡಗಿಸಿದ್ದು [ವನ ೬೦]. ಚೇದಿಪುರವನ್ನು ಹೊಕ್ಕದ್ದು [ವನ ೬೨] ದಮಯಂತಿ ವರ್ತಕರ ಗುಂಪನ್ನು ಸಂಧಿಸಿದ್ದು [ವನ. ೬೧] ದಮಯಂತಿಯ ಎರಡನೆಯಬಾರಿ ಸ್ವಯಂವರವನ್ನು ಡಂಗುರ ಹೊಡಿಸಿದ್ದು [ವನ ೬೮] ಈಕೆ ಹಿಂದಣ ಜನ್ಮದಲ್ಲಿ ಬೇಡಿತಿ ಸತೀಪತಿ ಗಳಿಬ್ಬರೂ ಅತಿಥಿಸತ್ಕಾರದಲ್ಲಿ ಅತ್ಯಂತವಾಗಿ ಆಸಕ್ತಿಯುಳ್ಳವರು ಒಮ್ಮೆ ಬೇಡನು ಎಲ್ಲಿಯೋ ಸಂಚಾರ ಹೋಗಿದ್ದಾಗ ಪರಮೇಶ್ವರ ಇವರ ಭಕ್ತಿಯನ್ನು ಪರೀಕ್ಷಿಸ ಬೇಕೆಂದು ಯತಿವೇಷದಿಂದ ಇವರ ಮನೆಗೆ ಬಂದ ಬೇಡಿತಿ ಅಕ್ಕರೆಯಿಂದ ಸತ್ಕರಿಸಿದಳು. ಸಂಜೆಗೆ ಸರಿಯಾಗಿ ಬೇಡನೂ ಮನೆಗೆ ಬಂದ ಮನೆ ಬಹಳ ಚಿಕ್ಕದಾಗಿದ್ದುದರಿಂದ ಬೇಡಿತಿ ಯತಿ ಬಂದಿರುವ ಸಮಾಚಾರವನ್ನು ತಿಳಿಸಲಾಗಿ ಬೇಡ ಅಂಗಳದಲ್ಲಿಯೇ ಉಳಿದ. ಅವನ ಊಟವೂ ಅಲ್ಲಿಯೇ ಆಯಿತು. ರಾತ್ರಿ

ಮಲಗುವಾಗ ಯತಿ ತಾನು ಅಂಗಳದಲ್ಲಿ ಮಲಗುವುದಕ್ಕೆ ಸಮ್ಮತಿಸಲಿಲ್ಲ. ಬೇಡಿತಿ ಅಂಗಳದಲ್ಲಿ ಮಲಗುವೆನೆಂದರೆ ತಾನೊಬ್ಬನೇ ಒಳಗಡೆ ಇರುವುದಕ್ಕೂ ಯತಿ ಇಷ್ಟಪಡಲಿಲ್ಲ. ಹೀಗಾಗಿ ಬೇಡನೊಬ್ಬನೇ ಅಂಗಳದಲ್ಲಿ ಮಲಗಬೇಕಾಯಿತು. ನಡುರಾತ್ರಿಯಲ್ಲಿ ಹುಲಿ ಬಂದು ಬೇಡನನ್ನು ತಿಂದುಹೋಯಿತು ಬೆಳಗಾಗುತ್ತಲೇ ಯತಿ ಎದ್ದು ಬೇಡನ ಸಂಗತಿಯನ್ನು ತಿಳಿದು ಬಹಳವಾಗಿ ದುಃಖಿಸತೊಡಗಿದ. ಆಗ ಬೇಡಿತಿ ಯತಿಯನ್ನು ಸಂತವಿಸಿ, ತನ್ನ ಪತಿಯ ಅವಶಿಷ್ಟದೇಹದೊಂದಿಗೆ ಸಹಗಮನಮಾಡತೊಡಗಿದಾಗ ಯತಿ ತನ್ನ ನಿಜರೂಪವನ್ನು ತೋರಿ, ಅನೇಕ ವರಗಳನ್ನು ದಯಪಾಲಿಸಿದ ಬಳಿಕ ಬೇಡಿತಿ ಮರುಜನ್ಮದಲ್ಲಿ ದಮಯಂತಿಯಾಗಿ ಜನಿಸಿದಳು [ಶಿವ -ಶತರುದ್ರಖಂ. ೨೮]

**ದಮ್ಭೋದ್ಭವ**—ಒಬ್ಬ ಅರಸು ಹೆಮ್ಮೆಯ ಗಣಿ. ಈತ ಪ್ರತಿನಿತ್ಯವೂ ತನ್ನ ಸಭೆಗೆ ಬಂದವರನ್ನೆಲ್ಲ "ನನಗೆ ಸಮಾನವಾದ ಬಲಶಾಲಿಯೂ ಪರಾಕ್ರಮಶಾಲಿಯೂ ಯಾವನಿದ್ದಾನೆ?" ಎಂಬುದಾಗಿ ಪ್ರಶ್ನೆಮಾಡುತ್ತಿದ್ದ. ಅದಕ್ಕೆ ಯಾರೊಬ್ಬರೂ ಉತ್ತರಕೊಡದೆ ಮೌನದಿಂದಿರುತ್ತಿದ್ದರು. ಇಂತಿರಲು ಒಂದು ದಿನ ಒಬ್ಬ ಬ್ರಾಹ್ಮಣನು ಸಭೆಗೆ ಬರಲಾಗಿ, ರಾಜನು ಎಂದಿನಂತೆಯೇ ಪ್ರಶ್ನೆಮಾಡಿದ. ಅದಕ್ಕೆ ಬ್ರಾಹ್ಮಣನು "ಅಯ್ಯಾ, ಗಂಧಮಾದನ ಪರ್ವತದ ಶಿಖರದಲ್ಲಿ ನರನಾರಾಯಣರಿದ್ದಾರೆ ಅವರು ನಿನಗಿಂತಲೂ ಬಲಾಧಿಕರು ನಿನ್ನೊಂದಿಗೆ ಹೋರಾಡಲು ಅವರೇ ತಕ್ಕವರು" ಎಂದ ರಾಜ ಒಡನೆಯೇ ತನ್ನ ಸೇನೆಯನ್ನೆಲ್ಲ ಹೊರಡಿಸಿಕೊಂಡು ನರನಾರಾಯಣರ ಆಶ್ರಮವನ್ನು ಸೇರಿದ. ನರನಾರಾಯಣರು ಅರಸನನ್ನು ಆದರದಿಂದ ಬರಮಾಡಿಕೊಂಡು, ಬಂದ ಕಾರಣವೇನೆಂದು ಪ್ರಶ್ನೆಮಾಡಲಾಗಿ, ರಾಜ ತನ್ನ ಅಭಿಪ್ರಾಯವನ್ನು ಹೊರಪಡಿಸಿದ ಆಗ ನರನಾರಾಯಣರು "ನಮ್ಮಲ್ಲಿ ಕ್ರೋಧದ ಸುಳಿವೇ ಇಲ್ಲವಲ್ಲಾ! ಇಂತಿರಲು ಯುದ್ಧ ಮಾಡುವುದೆಂದರೇನು?" ಎಂದು ಹೇಳಿ, ಒಂದು ಹಿಡಿಯಷ್ಟು ದರ್ಭೆಯನ್ನು ಇವನ ಸೇನೆಯ ಮೇಲೆ ಎರಚಿದರು ಅದರಿಂದ ಸೈನ್ಯದಲ್ಲಿದ್ದವರಿಗೆಲ್ಲ ಕಿವಿ ಮೂಗು ಕಣ್ಣುಗಳು ಇಲ್ಲದಂತಾದುವು ಆಗ ದಂಭೋದ್ಭವ ಖಿನ್ನನಾಗಿ, ನರನಾರಾಯಣರನ್ನು ಮರೆಹೊಕ್ಕು "ಸ್ವಾಮಿ, ನನ್ನ ಅಭಿಮಾನ ಶೂನ್ಯವಾಯಿತು. ದಯಮಾಡಿ ಕ್ಷಮಿಸಿ" ಎಂದು ಬೇಡಿಕೊಂಡ ಬಳಿಕ ನರನಾರಾಯಣರು ಅವನ ಅಪರಾಧವನ್ನು ಮನ್ನಿಸಿ, ಆತನಿಗೆ ನೀತಿಯನ್ನೂ ವಿವೇಕವನ್ನೂ ಹೇಳಿ ಕಳುಹಿದರು. ದಂಭೋದ್ಭವನು ನರನಾರಾಯಣರ ಅದ್ಭುತಶಕ್ತಿಗೆ ತಲೆದೂಗಿ, ಅಭಿಮಾನವನ್ನು ತೊರೆದು, ತನ್ನ ರಾಜ್ಯವನ್ನು ಸೇರಿ, ನೀತಿಯಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದ [ಭಾರ.-ಉದ್ಯೋ. ೯೬].

**ದಯಾ.**—ಕರುಣೆಯೆಂಬ ಗುಣ. ಅದರ ಪ್ರಶಂಸೆ [ಅನು. ೧೭೮].

**ದರದ.**—ಒಂದು ದೇಶ ಸಿಂಧು ನದಿಯ ಆಚೆಯ ದಡದಲ್ಲಿ, ಕಾಶ್ಮೀರಕ್ಕೆ ಉತ್ತರದಲ್ಲಿದೆ ಇದನ್ನು ಈಗ ದರ್ದಿಸ್ತಾನ (Dardistan) ಎಂದು ಕರೆಯು ತ್ತಾರೆ [ಸಭಾ. ೭೮ ಭೀ ೯].

**ದಭಿ೯.**—ಒಬ್ಬ ಬ್ರಹ್ಮರ್ಷಿ. ಈತನು ಸಪ್ತಸಮುದ್ರಗಳ ಮಹಿಮೆಯನ್ನೊಳ ಗೊಂಡ ಒಂದು ತೀರ್ಥವನ್ನು ನಿರ್ಮಾಣಗೊಳಿಸಿ, ಅರ್ಧಕೀಲವೆಂದು ಹೆಸರಿಟ್ಟ [ಭಾರ -ವನ. ೮೩]

**ದರ್ದುರ.**—ಒಂದು ಪರ್ವತ ಪೂರ್ವಘಟ್ಟಗಳ ದಕ್ಷಿಣಭಾಗದ ಬೆಟ್ಟಗಳ ಸಾಲಿಗೆ ಈ ಹೆಸರು ಸಲ್ಲುತ್ತದೆ [ರಾಮಾ -ಕಿಷ್ಕಿ. ೪೩. ಸಭಾ ೧೦, ೭೮ ವನ ೨೮೩ ಅನು ೨೭೧]

**ದಲ.**—ಸೂರ್ಯ ವಂಶದ ಪರೀಕ್ಷಿದ್ರಾಜನಿಂದ ಮಂಡೂಕ ಕನ್ಯೆಯಾದ ಸುಶೋ ಭನೆಯೆಂಬವಳಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಮಧ್ಯಮ ಇವನ ಅಣ್ಣನಾದ ಶಲನು ಒಮ್ಮೆ ಬೇಟೆಗೆ ಹೋಗಿದ್ದಾಗ ಅವನ ಕುದುರೆ ಬಳಲಿದ್ದ ಕಾರಣ, ಅರಣ್ಯ ದಲ್ಲಿ ಅಲ್ಲಿಯೇ ಸಮೀಪವಾಗಿ ತಪಸ್ಸುಮಾಡುತ್ತಿದ್ದ ವಾಮದೇವನೆಂಬ ಮುನಿಯ ಬಳಿಗೆ ಹೋಗಿ, ಆತನನ್ನು ಬೇಡಿ, ದಿವ್ಯಾಶ್ವಗಳನ್ನು ಪಡೆದು, ಬೇಟೆ ಮುಗಿ ದೊಡನೆಯೇ ಆ ಕುದುರೆಗಳನ್ನು ಮುನಿಗೆ ಹಿಂದಕ್ಕೆ ಕೊಡುವುದಾಗಿ ಹೇಳಿ ಬಂದ ಆದರೆ ಬೇಟೆ ಮುಗಿದ ತರುವಾಯ ಆ ಕುದುರೆಗಳನ್ನು ಹಿಂದಿರುಗಿ ಕೊಡಲೊಲ್ಲದೆ ತನ್ನ ನಗರಕ್ಕೇ ತಂದ ವಾಮದೇವ ತನ್ನ ಕುದುರೆಗಳನ್ನು ಹಿಂದಕ್ಕೆ ಕೊಡ ಬೇಕೆಂದು ತನ್ನ ಶಿಷ್ಯನ ಮೂಲಕ ಹೇಳಿಕಳುಹಿದ ಆಗ ಶಲನು "ಕಾಡಿನಲ್ಲಿ ಮೂಗು ಹಿಡಿದುಕೊಂಡು ಕೂತಿರುವ ಬ್ರಾಹ್ಮಣನಿಗೇಕೆ ಕುದುರೆಗಳು ? ಬೇಕಾ ಗಿದ್ದಲ್ಲಿ ಎರಡು ಎತ್ತುಗಳನ್ನು ಕೊಡುತ್ತೇನೆ ಕೊಂಡುಹೋಗು" ಎಂದ ಈ ಮಾತು ವಾಮದೇವನಿಗೆ ನ್ಯಾಯವಾಗಿ ತೋರಲಿಲ್ಲ ಶಲನನ್ನು ಮತ್ತಷ್ಟು ಬಲಾತ್ಕರಿಸತೊಡಗಿದ. ಶಲನು ಉದ್ಧತತನದಿಂದ ವಾಮದೇವನನ್ನು ಶಿಕ್ಷಿಸ ಬೇಕೆಂದೆಣಿಸಿ, ಆತನ ಮೇಲೆ ಕಯ್ಮಾಡಿದ ಆದರೆ ವಾಮದೇವನಿಂದ ನಿರ್ಮಿತನಾದ ರಾಕ್ಷಸ ಶಲನನ್ನು ಕೊಂದ ಶಲನ ತರುವಾಯ ದಲನು ರಾಜ್ಯಕ್ಕೆ ಬಂದ ಇವನೂ ಕುದುರೆಗಳನ್ನು ವಾಮದೇವನಿಗೆ ಒಪ್ಪಿಸಲು ಸಮ್ಮತಿಸಲಿಲ್ಲ ವಾಮದೇವ ನನ್ನೇ ಕೊಲ್ಲಲೆಳಸಿದ ಎತ್ತಿದ್ದ ಕೈ ಎತ್ತಿದ್ದ ಹಾಗೆಯೇ ಕಟ್ಟಿಹೋಯಿತು ದಲನ ಮಕ್ಕಳೆಲ್ಲರೂ ಮೃತರಾದರು. ಆಗ ಪ್ರಜೆಗಳು, ದಲನಿಂದ ಕುದುರೆಗಳನ್ನು ವಾಮದೇವನಿಗೆ ಕೊಡಿಸಿ, ದಲನನ್ನು ಮರೆಹುಗಿಸಿ ಕಾಪಾಡಿಕೊಂಡರು [ವನ. ೧೯೫]

**ದಶಕಂಠ(ಗ್ರೀವ).**—ನೋಡು— ರಾವಣ.

**ದಶಜ್ಯೋತಿಸ್.**—(i) ಒಬ್ಬ ಋಷಿ. ಸುಭ್ರಾಜನ ಮಗ [ಆದಿ. ೫೭].

(ii) ಅಗ್ನಿಯ ಹತ್ತು ಕಲೆಗಳು

ಧೂಮ್ರಾರ್ಚಿರೂಷ್ಮಾ ಜ್ವಲಿನೀ ಜ್ವಾಲಿನೀ ವಿಸ್ಫುಲಿಂಗಿನೀ ।
ಸುಶ್ರೀ ಸ್ಸುರೂಪಾ ಕಪಿಲಾ ಹವ್ಯ ಕವ್ಯವಹಾ ದಶ ॥ [ಭಾರ.-ಆದಿ. ೧].

**ದಶರಥ.**—ಸೂರ್ಯ ವಂಶದ ಇಕ್ಷ್ವಾಕು ಸಂತತಿಯವನಾದ ಅಜ ಮಹಾರಾಜನ ಮಗ. ಆಗ್ನೇಯ ಕೋಸಲವನ್ನು ಪಾಲಿಸುತ್ತ, ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದ. ಈತನ ಆಸ್ಥಾನದಲ್ಲಿ ಧೃಷ್ಟಿ, ಜಯಂತ, ವಿಜಯ, ಸುರಾಷ್ಟ್ರ, ರಾಷ್ಟ್ರವರ್ಧನ, ಅಶೋಕ (ಅಕೋಪನೆಂಬುದು ನಾಮಾಂತರ), ಮಂತ್ರಪಾಲ, ಸುಮಂತ್ರರೆಂಬ ಎಂಟು ಮಂದಿ ಪ್ರಧಾನರಿದ್ದರು. ಅವರಲ್ಲೆಲ್ಲಾ ಸುಮಂತ್ರನೇ ಮುಖ್ಯ. ಈತ ಆಗಾಗ್ಗೆ ಸಾರಥ್ಯವನ್ನೂ ಮಾಡುತ್ತಿದ್ದ. ವಸಿಷ್ಠ, ವಾಮದೇವ, ಜಾಬಾಲಿ, ಕಶ್ಯಪ, ಗೌತಮ, ಮಾರ್ಕಂಡೇಯ, ಕಾತ್ಯಾಯನರೆಂಬ ಏಳು ಮಂದಿ ಪುರೋಹಿತರಿದ್ದರು ಇವರಲ್ಲೆಲ್ಲಾ ವಸಿಷ್ಠನೇ ಪ್ರಮುಖ. ಈತ ಕೋಸಲದೇಶಾಧಿಪತಿಯಾದ ಭಾನುಮಂತ ರಾಜನ ಮಗಳಾದ ಕೌಸಲ್ಯೆಯನ್ನೂ, ಮಗಧ ದೇಶಾಧಿಪತಿಯಾದ ಶೂರಸೇನ ರಾಜನ ಮಗಳಾದ ಸುಮಿತ್ರೆಯನ್ನೂ, ಕೇಕಯ ದೇಶಾಧಿಪತಿಯಾದ ಅಶ್ವಪತಿ ರಾಜನ ಮಗಳಾದ ಕೈಕಯಿಯನ್ನೂ ಮದುವೆಯಾಗಿದ್ದ. ಈತನಿಗೆ ಶಾಂತೆಯೆಂಬ ಕುವರಿಯಿದ್ದಳು ಆಕೆಯನ್ನು ಅಂಗ ದೇಶಾಧಿಪತಿಯಾದ ರೋಮಪಾದ ರಾಜನಿಗೆ ಸಾಕು ಕೊಟ್ಟ. ಬಳಿಕ ಈತನಿಗೆ ಬಹಳ ಕಾಲದವರೆಗೂ ಸಂತಾನವಿರಲಿಲ್ಲವಾಗಿ ವಸಿಷ್ಠನ ಅನುಮತಿಯಿಂದ ಶಾಂತಾದೇವಿಯ ಪತಿಯಾದ ಋಷ್ಯಶೃಂಗನನ್ನು ಬರಮಾಡಿಸಿ, ಪುತ್ರಕಾಮೇಷ್ಟಿಯಾಗವನ್ನು ಮಾಡಲಾಗಿ, ಯಜ್ಞಮಧ್ಯದಲ್ಲಿ ಪ್ರಾಜಾಪತ್ಯಪುರುಷನು ಚರುವಿನಿಂದ ಕೂಡಿದ ಒಂದು ಪಾತ್ರೆಯನ್ನು ಹಿಡಿದು ಅಗ್ನಿಕುಂಡದಿಂದೆದ್ದು ಬಂದು ದಶರಥನಿಗೆ ಕೊಟ್ಟ ಆ ಚರುವನ್ನು ಪ್ರಾಶನಮಾಡಿ ಮೂವರು ಪತ್ನಿಯರೂ ಗರ್ಭವತಿಯರಾಗಿ, ಸಕಾಲದಲ್ಲಿ ಕೌಸಲ್ಯೆ ರಾಮನನ್ನೂ, ಸುಮಿತ್ರೆ ಲಕ್ಷ್ಮಣ, ಶತ್ರುಘ್ನರನ್ನೂ, ಕೈಕಯಿ ಭರತನನ್ನೂ ಹೆತ್ತರು. ಬಳಿಕ ಈ ನಾಲ್ವರು ಮಕ್ಕಳೂ ಕ್ರಮವಾಗಿ ವೃದ್ಧಿಯನ್ನೈದಿದರು. ದಶರಥನು ಇವರಿಗೆ ಉಪನಯನವನ್ನು ಮಾಡಿ, ವಸಿಷ್ಠನಲ್ಲಿ ವಿದ್ಯಾಭ್ಯಾಸಮಾಡಿಸುತ್ತಿದ್ದ [ರಾಮಾ.-ಬಾಲ ೭-೧೬]. ಇಂತಿರಲು ಒಮ್ಮೆ ವಿಶ್ವಾಮಿತ್ರ ಮಹರ್ಷಿ ಈತನಲ್ಲಿಗೆ ಬಂದು ದಶರಥನಿಂದ ಸತ್ಕೃತನಾಗಿ, "ರಾಜೇಂದ್ರಾ, ನಾನೊಂದು ಯಜ್ಞದೀಕ್ಷೆಯನ್ನು ಕೈಕೊಂಡಿರುವೆನು. ಅದಕ್ಕೆ ತಾಟಕಾಪುತ್ರರಾದ ಮಾರೀಚ ಸುಬಾಹುಗಳೆಂಬ ರಕ್ಕಸರು ವಿಘ್ನವನ್ನುಂಟುಮಾಡುತ್ತಿದ್ದಾರೆ. ಅವರನ್ನು ನಿಗ್ರಹಿಸಬೇಕಾದರೆ ನಿನ್ನ ಮಗನಾದ ರಾಮನೊಬ್ಬನಲ್ಲದೆ ಮತ್ತಾರೂ ಶಕ್ತರಲ್ಲ. ಆದುದರಿಂದ ಕೆಲವು

ದಿನಗಳವರೆಗೆ ರಾಮನನ್ನು ನನ್ನ ಸಂಗಡ ಕಳುಹು'' ಎಂದ. ದಶರಥನು ಮೊದಲು ಇದಕ್ಕೆ ಸಮ್ಮತಿಸಲಿಲ್ಲವಾದರೂ, ವಿಶ್ವಾಮಿತ್ರನು ಶಾಪಕೊಡುವನೆಂಬ ಭೀತಿಯಿಂದಲೂ ವಸಿಷ್ಠನ ಅನುಮತಿಯಿಂದಲೂ ರಾಮ ಲಕ್ಷ್ಮಣರನ್ನು ವಿಶ್ವಾಮಿತ್ರನ ಸಂಗಡ ಕಳುಹಿದ [ಬಾಲ. ೧೭-೨೧]. ವಿಶ್ವಾಮಿತ್ರನನ್ನು ಹಿಂಬಾಲಿಸಿದ ರಾಮ ಲಕ್ಷ್ಮಣರು, ವಿಶ್ವಾಮಿತ್ರನ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸಿದ ಬಳಿಕ, ವಿಶ್ವಾಮಿತ್ರ ಅವರಿಬ್ಬರನ್ನೂ ಕರೆದುಕೊಂಡು ಜನಕನ ಮಗಳಾದ ಸೀತೆಯ ಸ್ವಯಂವರಕ್ಕಾಗಿ ಮಿಥಿಲಾನಗರಿಯನ್ನು ಸೇರಿದ. ರಾಮ ಅಲ್ಲಿ ಪಣವಾಗಿಟ್ಟಿದ್ದ ಶಿವಧನುಸ್ಸನ್ನು ಮುರಿಯಲಾಗಿ, ಜನಕ ಸೀತೆಯನ್ನು ರಾಮನಿಗೆ ಕೊಡುವುದಾಗಿ ದಶರಥನಿಗೆ ಲಗ್ನ ಪತ್ರಿಕೆಯನ್ನು ಬರೆದು ಕಳುಹಿದ. ದಶರಥ ಪತ್ನೀಪರಿವಾರ ಸಮೇತನಾಗಿ ಭರತ ಶತ್ರುಘ್ನರೊಂದಿಗೆ ಮಿಥಿಲೆಗೆ ಬಂದ [೨೨, ೬೬-೬೯]. ಸುಮುಹೂರ್ತದಲ್ಲಿ ನಾಲ್ವರು ಮಕ್ಕಳಿಗೂ ಅಲ್ಲಿಯೇ ಮದುವೆಯಾಗಲು ಕೆಲಕಾಲ ಅಲ್ಲಿಯೇ ಇದ್ದು ಮಕ್ಕಳನ್ನೂ ಸೊಸೆಯರನ್ನೂ ಸಂಗಡ ಕರೆದುಕೊಂಡು ಅಯೋಧ್ಯೆಗೆ ಹೊರಟ. ನಡುದಾರಿಯಲ್ಲಿ ಇದಿರಿಸಿದ ಪರಶುರಾಮನನ್ನು ಶ್ರೀ ರಾಮನು ನಿಗ್ರಹಿಸಲಾಗಿ ಸಂತುಷ್ಟನಾದ ದಶರಥ ಅಯೋಧ್ಯೆಯನ್ನು ಸೇರಿ ಸುಖದಿಂದಿದ್ದ. ಇಷ್ಟರಲ್ಲಿ ಭರತನ ಸೋದರಮಾವನಾದ ಯುಧಾಜಿತು ಬಂದು ಭರತನನ್ನು ತಮ್ಮಲ್ಲಿಗೆ ಕಳುಹಬೇಕೆಂದು ಕೇಳಲಾಗಿ, ದಶರಥ ಭರತ ಶತ್ರುಘ್ನರನ್ನು ಕೇಕಯ ರಾಜ್ಯಕ್ಕೆ ಕಳುಹಿಸಿದ [ಬಾಲಕಾಂ. ೭೦-೭೭]. ಅಷ್ಟರಲ್ಲಿ ದಶರಥ ಶ್ರೀ ರಾಮನಿಗೆ ಯುವರಾಜ ಪದವಿಯಲ್ಲಿ ಪಟ್ಟಗಟ್ಟಬೇಕೆಂದು ಸಂಕಲ್ಪಿಸಿ, ಮಂತ್ರಿ, ಪರಿವಾರದವರನ್ನೂ ಪ್ರಜೆಗಳನ್ನೂ ಕೇಳಿ, ಅವರ ಸಮ್ಮತಿಯಿಂದ ಯೌವರಾಜ್ಯಾಭಿಷೇಕಕ್ಕೆ ಬೇಕಾಗುವ ಸಂಭಾರಗಳನ್ನೆಲ್ಲ ಅಣಿಮಾಡಿಸಿ, ಪಟ್ಟಣವನ್ನೆಲ್ಲ ಅಲಂಕಾರಮಾಡಹೇಳಿ, ತನ್ನ ಮೋಹದ ರಾಣಿಯಾದ ಕೈಕಯಿಯ ಮನೆಗೆ ಹೊರಟ. ಅಷ್ಟರಲ್ಲಿ ಕೈಕಯಿ ತನ್ನ ದಾಸಿಯಾದ ಮಂಥರೆಯ ದುರ್ಬೋಧೆಯಿಂದ ಕ್ರೋಧಾಗಾರವನ್ನು ಹೊಕ್ಕಿದ್ದಳು [ಅಯೋ. ೧-೯]. ದಶರಥನು ಕೈಕಯಿ ಕ್ರೋಧದಿಂದ ಮಲಗಿದ್ದ ಕೋಣೆಯನ್ನು ಹೊಕ್ಕು, ಆಕೆಯನ್ನು ಸಂತವಿಸಲು ಎಷ್ಟೋ ಬಗೆಯ ಸವಿಮಾತುಗಳನ್ನಾಡಿ ಕೋಪಕ್ಕೆ ಕಾರಣವೇನೆಂದು ಪ್ರಶ್ನೆಮಾಡಿದ. ಕೈಕಯಿ ತನಗೆ ದಶರಥನು ಹಿಂದೆ ವಾಗ್ದಾನಮಾಡಿದ್ದ (ನೋಡು—ತಿಮಿಧ್ವಜ) ಎರಡು ವರಗಳಲ್ಲಿ ಒಂದರಿಂದ ರಾಮ ಹದಿನಾಲ್ಕು ವರ್ಷಗಳ ಕಾಲ ವನವಾಸಕ್ಕೆ ಹೋಗಬೇಕೆಂತಲೂ, ಎರಡನೆಯದರಿಂದ ಭರತ ಯುವರಾಜ ಪದವಿಯನ್ನು ಹೊಂದಬೇಕೆಂತಲೂ ಬೇಡಿದಳು. ದಶರಥ ಎಷ್ಟೋ ವಿಧವಾದ ನಯುಭಯೋಕ್ತಿಗಳಿಂದ ತಿಳಿಯಹೇಳಿದರೂ ಕೈಕಯಿ ಸಮ್ಮತಿಸದಿರಲು ದಶರಥ ಮೂರ್ಛಾಕ್ರಾಂತನಾಗಿ, ಅಷ್ಟರಲ್ಲಿಯೇ ಮರಳಿ ಎಚ್ಚತ್ತು, ಕೈಕಯಿಯನ್ನು ದೂಷಿಸಿ, ಪ್ರಲಾಪಿಸುತ್ತಿದ್ದ

[ಅಯೋ. ೧೦-೧೩]. ಬೆಳಕುಹರಿಯುತ್ತಲೇ ವಂದಿಮಾಗಧರು ಎಂದಿನಂತೆ ಮಂಗಳ ಗಾಯನಾದಿಗಳನ್ನು ಉಪಕ್ರಮಿಸಲಾಗಿ, ಅವರ ಉತ್ಸಾಹವನ್ನು ಅಲ್ಲಿಗೇ ಸಾಕು ಮಾಡಿ, ಶ್ರೀ ರಾಮನನ್ನು ತನ್ನಲ್ಲಿಗೆ ಬರಮಾಡಿಕೊಂಡ [ಅಯೋ. ೧೪]. ಕೈಕೆಯಿ ಶ್ರೀ ರಾಮನನ್ನು ವನವಾಸಕ್ಕೆ ಹೋಗಹೇಳಿದಳು [ಅಯೋ. ೧೮] ಶ್ರೀ ರಾಮ ದಶ ರಥನನ್ನು ವನವಾಸಕ್ಕೆ ಅಪ್ಪಣೆ ಬೇಡಿದ [೩೩]. ದಶರಥನ ಪ್ರಲಾಪ [ಅಯೋ ೩೪]. ರಾಮನು ದಶರಥನನ್ನು ಸಂತವಿಸಿದ್ದು [ಅಯೋ. ೩೮]. ಕೌಸಲ್ಯೆಯು ಅಂತಃ ಪುರವನ್ನು ಸೇರಿ ದಶರಥ ಗೋಳಾಡಿದ್ದು [ಅಯೋ. ೪೨, ೪೩]. ಸೀತಾ ರಾಮ ಲಕ್ಷ್ಮಣರನ್ನು ವನದಲ್ಲಿ ಬಿಟ್ಟು, ಸುಮಂತ್ರ ಹಿಂದಿರುಗಿಬಂದನೆಂಬುದನ್ನು ಕೇಳಿ ದಶರಥ ಮೂರ್ಛೆಹೋದದ್ದು [ಅಯೋ ೫೮] ಸುಮಂತ್ರನಿಂದ ರಾಮಾದಿಗಳ ವೃತ್ತಾಂತವನ್ನು ಕೇಳಿ ಪ್ರಲಾಪಿಸಿದ್ದು [ಅಯೋ. ೫೯-೬೦]. ಕೌಸಲ್ಯಾ ದಶರಥರ ಸಂವಾದ, ಕೌಸಲ್ಯೆ ದಶರಥನನ್ನು ಸಮಾಧಾನಪಡಿಸಿದ್ದು [೬೨-೬೩]. ದಶರಥ ವಯಸ್ಸಿನಲ್ಲಿದ್ದಾಗ ರಾತ್ರಿಯ ವೇಳೆ ಬೇಟೆಗೆ ಹೋಗಿದ್ದು, ಕೊಳದಲ್ಲಿ ನೀರು ತುಂಬಿ ಕೊಳ್ಳುತ್ತಿದ್ದ ಯಜ್ಞದತ್ತನೆಂಬ ವೈಶ್ಯ ತಾಪಸನನ್ನು ಗಜಭ್ರಾಂತಿಯಿಂದ ಕೊಂದು, ಆ ಸಮಾಚಾರವನ್ನು ವೃದ್ಧರೂ ಅಂಧರೂ ಆಗಿದ್ದ ಆ ಮುನಿಯ ಜನನೀ ಜನಕರಿಗೆ ತಿಳುಹಿ, ಮರೆಹೊಕ್ಕು, ದುಃಖಪೀಡಿತರಾದ ಆ ದಂಪತಿಗಳಿಂದ "ನೀನು ನಮ್ಮಂ ತೆಯೇ ಪುತ್ರಶೋಕದಿಂದ ಸಾಯುವೆ" ಎಂಬುದಾಗಿ ಶಾಪವನ್ನು ಪಡೆದ ಕಥೆ ಯನ್ನು ಕೌಸಲ್ಯೆಗೆ ಹೇಳಿ ದೇಹತ್ಯಾಗಮಾಡಿದ [ಅಯೋ. ೬೪-೬೫]. ದಶರಥನಿ ಗಾಗಿ ರಾಣಿಯರು ಶೋಕಿಸಿದ್ದು [ಅಯೋ ೬೬] ದಶರಥನಿಗಾಗಿ ಪುರಜನರ ಪ್ರಲಾಪ [ಅಯೋ ೬೭]. ದಶರಥನ ಮರಣವಾರ್ತೆಯನ್ನು ಭರತನು ಜನನಿಯ ಮೂಲಕ ಕೇಳಿ ತಿಳಿದದ್ದು ಆತನಿಗೆ ಅಗ್ನಿಸಂಸ್ಕಾರ [ಅಯೋ ೭೪, ೭೭] ದಶರಥ ನಿಗೆ ರಾಮ ಲಕ್ಷ್ಮಣರು ತಿಲೋದಕಪಿಂಡಗಳನ್ನು ಕೊಟ್ಟದ್ದು [ಅಯೋ. ೧೦೩]. ದಶರಥನ ವಂಶಪರಂಪರೆ [ಬಾಲ. ೭೦ ಅಯೋ. ೧೧೧].

**ದಶಾರ್ಣ**.—ದಕ್ಷಿಣ ಕೋಸಲದಲ್ಲಿರುವ ಒಂದು ದೇಶ [ಭೀಷ್ಮ ೯]. ಪಾಂಡವರ ಕಾಲದಲ್ಲಿ ಸುಧರ್ಮ, ಹಿರಣ್ಯವರ್ಮರೆಂಬವರು ಇದನ್ನು ಆಳುತ್ತಿದ್ದರು [ಸಭಾ ೩೦]. ಈ ಹಿರಣ್ಯವರ್ಮನು ದ್ರುಪದ ರಾಜನ ಹಿರಿಯ ಮಗನಾದ ಶಿಖಂಡಿಗೆ ಹೆಣ್ಣುಕೊಟ್ಟ ಮಾವ [ಭಾರ.-ಉ ೧೮೯]. ಈ ದೇಶ ಈಗಣ ಚತ್ತೀಸ್‌ಘರ್ (Chhatisgarh) ಜಿಲ್ಲೆಯ ಒಂದು ಭಾಗವಾಗಿದೆ.

**ದಶಾರ್ಣಾ**.—ಗಾಂಧಾರ ರಾಜನಾದ ಸುಬಲನ ಮಗಳು. ಗಾಂಧಾರಿಯ ಒಡ ಹುಟ್ಟಿದವಳು [ಆದಿ ೧೧೯] ನೋಡು—ಗಾಂಧಾರಿ.

**ದಶಾರ್ಹ.**—ಯದು ವಂಶದ ವಿದೂರಥ ರಾಜನ ಮಗ. ಶ್ರೀ ಕೃಷ್ಣನ ಮೂಲ ಪುರುಷ. ಈತನ ಅನಂತರದ ಯಾದವರಿಗೆಲ್ಲ ದಾಶಾರ್ಹರೆಂಬ ಹೆಸರು ಈತನ ಹೆಸರಿನಿಂದಲೇ ರೂಢಿಯಲ್ಲಿ ಬಂತು [ಆದಿ. ೨೨೪].

**ದಶಾಶ್ವ.**—ಸೂರ್ಯ ವಂಶದ ಇಕ್ಷ್ವಾಕು ರಾಜನ ಹತ್ತನೆಯ ಮಗ. ಈತ ಮಾಹಿಷ್ಮತೀ ನಗರಿಯಲ್ಲಿ ರಾಜ್ಯಭಾರ ಮಾಡುತ್ತಿದ್ದ. ಈತನ ಮಗ ಮದಿರಾಶ್ವ [ಭಾ.-ಅನು. ೨].

**ದಾಕ್ಷಾಯಣಿ.**—ದಕ್ಷ ಬ್ರಹ್ಮನಿಂದ ಸ್ವಾಯಂಭುವಮನು ಪುತ್ರಿಯಾದ ಪ್ರಸೂತಿಯಲ್ಲಿ ಜನಿಸಿದವಳು. ಈಕೆ ಶಿವನನ್ನು ಮದುವೆಯಾಗಿದ್ದಳು [ಭಾಗ.-೪-೧]. ಒಮ್ಮೆ ದೇವಲೋಕದಲ್ಲಿ ಒಂದು ಯಜ್ಞ ನಡೆಯಲಾಗಿ ಸಮಸ್ತ ದೇವತೆಗಳೂ ಋಷಿಗಳೂ ನೆರೆದಿದ್ದರು. ದಕ್ಷ ಅಲ್ಲಿಗೆ ಬಂದಕೂಡಲೇ ಎಲ್ಲರೂ ಎದ್ದು ನಿಂತು ಗೌರವಿಸಿದರು. ಚತುರ್ಮುಖನೂ, ಪರಮೇಶ್ವರನೂ ಮಾತ್ರ ತಮ್ಮ ಪೀಠಗಳಿಂದ ಎದ್ದು ನಿಂತು ದಕ್ಷನನ್ನು ಗೌರವಿಸಲಿಲ್ಲ. ಇದರಿಂದ ದಕ್ಷನಿಗೆ ಸಿಟ್ಟು ತಲೆಗೇರಿತು. ದೇವತೆಗಳನ್ನೂ ಮುನಿಗಳನ್ನೂ ಕುರಿತು "ಇತ್ತ ಕೇಳಿ. ಈ ಕಪಿಲೋಚನನು ನನ್ನ ಮಗಳನ್ನು ಮದುವೆಯಾಗಿರುವುದರಿಂದ ಇವನು ನನಗೆ ಶಿಷ್ಯನಂತಲ್ಲವೆ ? ಮಾತಿನಿಂದಲಾದರೂ ಗೌರವಿಸದೆ ಹೋದನಲ್ಲಾ, ಇಂತಹ ಮರುಳರ ಒಡೆಯನಿಗೆ ಬ್ರಹ್ಮನ ಮಾತನ್ನು ಕೇಳಿ, ತ್ರಿಲೋಕಮೋಹಿನಿಯಾದ ಮಗಳನ್ನು ಕೊಟ್ಟೆನಲ್ಲಾ" ಎಂದು ಮುಂತಾಗಿ ಶಿವನನ್ನು ಹಳಿದು, ಇಂದು ಮೊದಲ್ಗೊಂಡು ದೇವಗಣಾಧಮನಾದ ಇವನು ದೇವತೆಗಳೊಂದಿಗೆ ಹವಿರ್ಭಾಗವನ್ನು ಹೊಂದಲು ಯೋಗ್ಯನಲ್ಲ" ಎಂಬುದಾಗಿ ಹೇಳಿದ. ಯಾರು ಎಷ್ಟು ವಿಧದಿಂದ ಅಡ್ಡಗಿಸಿದರೂ ನಿಲ್ಲದೆ ಒಡನೆಯೇ ತನ್ನ ಮನೆಗೆ ಬಂದುಬಿಟ್ಟ. ಇಂತು ಶಿವನಿಗೆ ಶಾಪವನ್ನು ಕೊಟ್ಟುದನ್ನು ಕೇಳಿ ಕೋಪಾವಿಷ್ಟನಾದ ನಂದಿ "ಈ ಮೂಢ ಇಂತು ನನ್ನ ಪ್ರಭುವಿಗೆ ಶಾಪಕೊಟ್ಟಿರುವುದರಿಂದ, ಇವನು ಅನುಗಾಲವೂ ಕರ್ಮಪರಾಯಣನಾಗಿ, ಗ್ರಾಮ್ಯ ಸುಖದಲ್ಲಿ ಮುಳುಗಿ, ತಾನು ಯಾರೆಂಬುದನ್ನು ಮರೆತು, ಪಶುವೃತ್ತಿಯನ್ನು ಅವಲಂಬಿಸಿ, ಬೇಗನೆ ಕುರಿಮುಖವುಳ್ಳವನಾಗಿ, ಈ ಸಂಸಾರದಲ್ಲಿಯೇ ತೊಳಲುತ್ತಿರಲಿ. ಇವನ ಅನುಯಾಯಿಗಳೂ ಕೂಡ ಇವನಂತೆಯೇ ಪಾರಮಾರ್ಥಿಕ ದೃಷ್ಟಿಹೀನರೆನಿಸಿ, ಅವಿದ್ಯಾಪರಾಯಣರಾಗಿ, ಯಾಚಕವೃತ್ತಿಯಿಂದ ಬದುಕಲಿ" ಎಂಬುದಾಗಿ ಪ್ರತಿಶಾಪವಿತ್ತ. ಬಳಿಕ ಅಲ್ಲಿ ನೆರೆದಿದ್ದವರೆಲ್ಲರೂ ಗಂಗೆಯಲ್ಲಿ ಮಿಂದು ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡರು. ಇಂತೆಯೇ ಬಹಳ ಕಾಲ ಕಳೆದು ಹೋಗಲಾಗಿ, ಚತುರ್ಮುಖನು ದಕ್ಷನನ್ನು ಸೃಷ್ಟಿಕರ್ತರಿಗೆಲ್ಲ ಮುಖಂಡನನ್ನಾಗಿಸಿದ. ಆಗ ದಕ್ಷ ವಾಜಪೇಯ ಯಾಗವನ್ನು ಮಾಡಿ ಬ್ರಹ್ಮಣ್ಯರನ್ನೆಲ್ಲ ಅದರಲ್ಲಿ

ಕರೆಯದಂತೆ ಅನಾದರಮಾಡಿ ಬೃಹಸ್ಪತಿಸವವೆಂಬ ಒಂದು ಯಜ್ಞವನ್ನು ಆರಂಭಿಸಿದ್ದ. ಆಗ್ಗೆ ಬ್ರಹ್ಮರ್ಷಿಗಳೂ ದೇವತೆಗಳೂ, ಪಿತೃದೇವತೆಗಳೂ, ಆಹೂತರಾಗಿ ಪತ್ನೀ ಪುತ್ರ ಪರಿವಾರಸಮೇತರಾಗಿ ಬಂದು ನೆರೆದರು. ಅಂತರಿಕ್ಷದಲ್ಲಿ ಗುಂಪುಗುಂಪಾಗಿ ಹೋಗುತ್ತಿದ್ದ ದೇವತೆಗಳ ಮೂಲಕ ತನ್ನ ತಂದೆ ಯಜ್ಞಮಾಡುತ್ತಿದ್ದಾನೆಂಬುದನ್ನು ಕೇಳಿದ ಸತಿ ಉತ್ಸಾಹದಿಂದ ತನ್ನ ಪತಿಯ ಬಳಿಗೆ ಬಂದು "ನಮ್ಮ ತಂದೆ ಯಜ್ಞವನ್ನು ಆರಂಭಿಸಿರುವನಂತೆ ಅದಕ್ಕಾಗಿ ನನ್ನ ಸೋದರಿಯರೆಲ್ಲರೂ ದಿವ್ಯಾಲಂಕಾರಭೂಷಿತೆಯರಾಗಿ ತಮ್ಮ ತಮ್ಮ ಪತಿಗಳೊಂದಿಗೆ ಹೋಗುತ್ತಿದ್ದಾರೆ. ನಾನೂ ಕೂಡ ನಿನ್ನೊಂದಿಗೆ ಅಲ್ಲಿಗೆ ಹೋಗಿ, ತಂದೆ ಅಕ್ಕರೆಯಿಂದ ಕೊಡುವ ಉಡುಗೊರೆಯನ್ನು ಹೊಂದಬೇಕೆಂದು ಆಸೆಯಾಗುತ್ತದೆ ತವರ್ಮನೆಯ ಉಡುಗೊರೆಯನ್ನು ತೆಗೆದುಕೊಳ್ಳುವುದಕ್ಕೆ ಯಾರಿಗೆತಾನೇ ಆಸೆಯುಂಟಾಗಲಾರದು ? ದಯಮಾಡಿ ನನ್ನ ಬಯಕೆಯನ್ನು ಈಡೇರಿಸು" ಎಂದು ಬೇಡಿಕೊಂಡಳು. ಆಗ ಪರಮೇಶ್ವರನು "ಎಲೌ ಮಂಗಳಾಂಗೀ, ನೀನು ಹೇಳಿದುದೆಲ್ಲವೂ ದಿಟ. ಆದರೆ ಇದೆಲ್ಲವೂ ಇಬ್ಬರ ಮನಸ್ಸುಗಳೂ ಹೊಂದಿಕೊಂಡಿದ್ದರೆ ಮಾತ್ರವೇ ಇಂತಹ ಸಮಯಗಳಲ್ಲಿ ಅವರು ಕರೆಯದಿದ್ದರೂ ನಾವು ಹೋಗಬಹುದು ತಮ್ಮ ಯೋಗ್ಯತೆ ಎಷ್ಟರದೆಂದು ತಿಳಿಯದೆ, ತಮ್ಮ ಬುದ್ಧಿಯನ್ನೇ ತಮ್ಮ ಸ್ವಾಧೀನದಲ್ಲಿ ಇರಿಸಿಕೊಳ್ಳಲಾರದ ಇಂತಹವರ ಮನೆಗೆ ಮಾತ್ರ ಹೋಗಬಾರದು ಹಣವೂ, ನಂಟತನವೂ, ವಯಸ್ಸೂ, ಕರ್ಮರತನವೂ, ವಿದ್ಯೆಯೂ ಗೌರವನೀಯವಾದುವು ಅವುಗಳಲ್ಲಿ ಒಂದಕ್ಕಿಂತಲೂ ಒಂದು ಕ್ರಮವಾಗಿ ಮಿಗಿಲೆನಿಸಿದುವು ಬಂಧುಗಳ ಚುಚ್ಚುಮಾತುಗಳಿಗಿಂತಲೂ ಹಗೆಯ ಹರಿತವಾದ ಅಂಬುಗಳು ಎಷ್ಟೋ ಸುಖಕರಗಳಾಗಿರುತ್ತವೆ ನೀನು ಉತ್ಕೃಷ್ಟವಾದ ಸಕಲ ಸಂಪತ್ತುಗಳಿಂದೊಪ್ಪುವ ಬ್ರಹ್ಮನ ಮಗಳೇ ದಿಟ. ನಿನ್ನನ್ನು ಕಂಡರೆ ನಿಮ್ಮ ತಂದೆಗೂ ಎಷ್ಟೋ ಅಕ್ಕರೆ ಆದರೆ ಮಾಡುವುದೇನು ? ನನ್ನ ಮೂಲಕ ನಿಮ್ಮ ತಂದೆಯ ಮನೆಯಲ್ಲಿ ನಿನಗೂ ಗೌರವಪುರಸ್ಕಾರಗಳಿಲ್ಲವಾದವು. ಈಗ ನೀನು ಅಲ್ಲಿಗೆ ಹೋಗುವುದು ಯುಕ್ತವಲ್ಲ ಒಂದು ವೇಳೆ ನನ್ನ ಮಾತನ್ನು ಅಲ್ಲಗಳೆದು ಹೋದಲ್ಲಿ ಅದು ಮಂಗಳಕರವಾಗಿ ಪರಿಣಮಿಸಲಾರದು. ಸಂಭಾವಿತನಾದವನಿಗೆ ಸ್ವಜನರ ಮೂಲಕವಾದ ಪರಾಭವ ಮರಣಕ್ಕಿಂತಲೂ ಮಿಗಿಲಾದುದು" ಎಂದ ಬಂಧುಬಳಗದವರನ್ನೂ ಗೆಳತಿಯರನ್ನೂ ನೋಡಬೇಕೆಂದು ತವಕಗೊಂಡಿದ್ದ ಸತಿ ಕಂಬನಿಗರೆಯುತ್ತ ಕೋಪದಿಂದ ಮೂಲೋಕವನ್ನೂ ಸುಡುವಳೋ ಎಂಬಂತೆ ನಡುಗುತ್ತ, ಬಿಸುಸುಯ್ದು, ತನಗೆ ಅರ್ಧಾಂಗವನ್ನೇ ಸೂರೆಗೊಟ್ಟ ಪ್ರಿಯನನ್ನು ಬಿಟ್ಟು, ಪ್ರೀತಿಭರದಿಂದ ಕೂಡಿದವಳಾಗಿ ತಂದೆಯ ಮನೆಗೆ ಹೊರಟುಹೋದಳು. ಇಂತು ಸತಿ ಒಂಟಿಯಾಗಿ ಹೊರಟುದನ್ನು ಕಂಡು ನಂದಿ

ಮೊದಲಾದವರು ಸಾವಿರಗಟ್ಟಲೆಯಾಗಿ ಆಕೆಯನ್ನು ಹಿಂಬಾಲಿಸಿದರು. ಸತಿ ಎಷ್ಟೋ ಅಕ್ಕರೆಯಿಂದ ಯಜ್ಞಶಾಲೆಯನ್ನು ಹೊಕ್ಕಳು. ಯಜಮಾನನಾದ ದಕ್ಷನ ಹೆದರಿಕೆಯಿಂದ ಯಾರೊಬ್ಬರೂ ಆಕೆಯನ್ನು ಆದರಿಸಲಿಲ್ಲ. ಜನನಿಯೂ ಸೋದರಿಯರೂ ಮಾತ್ರವೇ ಕುಶಲಪ್ರಶ್ನಾದಿಗಳಿಂದ ಸಂತೋಷಗೊಳಿಸಿದರು. ತಂದೆ ಅನಾದರವನ್ನು ತೋರಿದ ಕಾರಣ ಆಕೆಗೆ ಅವರ ಪುರಸ್ಕಾರವೂ ಹಿತವೆನಿಸಲಿಲ್ಲ. ಶಿವನಿಗೆ ಹವಿರ್ಭಾಗವನ್ನೇ ಕೊಡಬಾರದೆಂಬ ಭಾವನೆಯಿಂದಲೇ ನಡೆಯುತ್ತಿರುವ ಆ ಯಜ್ಞದ ವೈಖರಿಯನ್ನು ಕಂಡು, ಶಿವದ್ವೇಷಿಯಾದ ತನ್ನ ತಂದೆಯನ್ನು ಕುರಿತು "ಲೋಕಮಂಗಳಕರಗಳೆನಿಸಿದ ಆತನ ಹೆಸರಿನ ಎರಡು ಅಕ್ಷರಗಳ ಮಹಿಮೆಯನ್ನಾದರೂ ಬಲ್ಲೆಯಾ ? ಸಕಲ ಲೋಕೈಕನಾಯಕನಾದ ಆತನಿಗೆ ಹವಿರ್ಭಾಗವನ್ನು ಕೊಡದಲ್ಲಿ ನಿನ್ನ ಯಜ್ಞವಾದರೂ ಸಾದ್ಗುಣ್ಯವನ್ನು ಪಡೆಯುವುದೇ ? ಶಿವದ್ವೇಷಿಯಾದ ನಿನ್ನ ಮೂಲಕ ಉಂಟಾದ ಈ ಕಳೇಬರವನ್ನು ನಾನು ಹೊತ್ತಿರಲೊಲ್ಲೆನು. ಈ ಹಾಳುಜನ್ಮವನ್ನು ಸುಡಬೇಕು. ಈ ದೇಹವನ್ನು ಬಿಟ್ಟಲ್ಲದೆ ಸುಖವಿಲ್ಲ" ಎಂದು ಹೇಳಿ, ಸ್ನಾನಮಾಡಿ, ಪರಿಶುದ್ಧವಾದ ಪೀತಾಂಬರವನ್ನುಟ್ಟು, ಆಚಮನ ಮಾಡಿ, ಕಣ್ಣುಮುಚ್ಚಿಕೊಂಡು ಮೌನವನ್ನವಲಂಬಿಸಿ ಊರ್ಧ್ವಚಾರಿಯಾದ ಪ್ರಾಣವಾಯುವನ್ನೂ ಅಧಶ್ಚಾರಿಯಾದ ಅಪಾನವೆಂಬ ವಾಯುವನ್ನೂ ನಾಭಿಚಕ್ರದಲ್ಲಿ ಸಮಾನವಾಯುವಿನೊಡನೆ ನೆಲೆಗೊಳಿಸಿ, ಉದಾನವಾಯುವನ್ನು ಹೃದಯದಲ್ಲಿ ಸ್ಥಿರಪಡಿಸಿಕೊಂಡು ಮೆಲ್ಲಗೆ ಕಂಠಮಾರ್ಗವಾಗಿ ಭ್ರೂಮಧ್ಯದಲ್ಲಿ ನಿಲ್ಲಿಸಿ, ತನ್ನ ಪ್ರಾಣಕಾಂತನೂ ಜಗದೀಶ್ವರನೂ ಎನಿಸಿದ ಪರಮೇಶ್ವರನ ಪಾದಾರವಿಂದಗಳನ್ನು ಧ್ಯಾನಮಾಡುತ್ತ ಮುಂದಣ ಜನ್ಮದಲ್ಲಿಯೂ ತನಗೆ ಪರಶಿವನೇ ಪತಿಯಾಗಬೇಕೆಂದು ಪ್ರಾರ್ಥಿಸುತ್ತ ಸಮಾಧಿಜನ್ಯವಾದ ಯೋಗಾಗ್ನಿಯಿಂದ ಸುಟ್ಟು ಹೋದಳು. ನೆರೆದಿದ್ದ ದೇವತೆಗಳಲ್ಲಿ ಹಾಹಾಕಾರ ಮೊದಲಿಟ್ಟಿತು. ಕೆಲವರು ಯಜ್ಞಶಾಲೆಯಿಂದ ಓಡಿಹೋದರು. ಸತಿಯನ್ನು ಹಿಂಬಾಲಿಸಿ ಬಂದಿದ್ದ ಪ್ರಮಥಗಣ ಪರಿವಾರ ದಿಕ್ಕುಪಾಲಾಯಿತು. ಈ ಸಮಾಚಾರವನ್ನು ನಾರದರ ಮೂಲಕ ಕೇಳಿದ ಶಿವನು ಕ್ರೋಧಾಂಧನಾಗಿ ತನ್ನ ಜಟಾಜೂಟದಿಂದ ಒಂದು ಹಿಡಿ ಕೂದಲನ್ನು ಕಿತ್ತು ನೆಲದಮೇಲೆ ಎಸೆದ. ಕೂಡಲೇ ಭಯಂಕರಾಕಾರದಿಂದೊಪ್ಪುವ ಕರಾಳ ಪುರುಷನೊಬ್ಬ ಹೊರಬಂದ ಇವನೇ ವೀರಭದ್ರ. ಬಳಿಕ ವೀರಭದ್ರ ಎದ್ದು ನಿಂತು "ಮಹಾ ಪ್ರಭೋ, ಅಪ್ಪಣೆಯಾಗಲಿ" ಎಂದು ಕೇಳಲಾಗಿ, ಶಿವ "ದಕ್ಷನನ್ನೂ ಅವನ ಯಜ್ಞವನ್ನೂ ಧ್ವಂಸಮಾಡಿ ಬಾ" ಎಂದು ಆಣತಿಯಿತ್ತ. ಒಡನೆಯೇ ವೀರಭದ್ರ ಪರಿವಾರದೊಂದಿಗೆ ಹೊರಟು ಯಜ್ಞಶಾಲೆಯನ್ನು ಹುಗುವಷ್ಟರಲ್ಲಿ ಅಲ್ಲಿ ನೆರೆದಿದ್ದವರೆಲ್ಲರೂ ದಕ್ಷನನ್ನು ನಾನಾ ಪರಿಯಿಂದ ನಿಂದಿಸತೊಡಗಿದರು.

ಶಿವನ ಪರಿವಾರದವರು ಭಗನ ಕಣ್ಣನ್ನು ಕಿತ್ತು, ಸೂರ್ಯನ ಹಲ್ಲುಗಳನ್ನು ಮುರಿದು, ಭೃಗುಮಹರ್ಷಿಯ ಗಡ್ಡಮೀಸೆಗಳನ್ನು ಸುಟ್ಟು, ಸಿಕ್ಕಿದವರನ್ನೆಲ್ಲ ಸದೆ ಬಡಿದು, ಹೆಂಗಸರನ್ನು ಹೆದರಿಸಿ, ಅಗ್ನಿಕುಂಡಗಳನ್ನೆಲ್ಲ ಹೊಲಸುಮಾಡಿ, ಯಾಗ ಶಾಲೆಯನ್ನೂ, ಪತ್ನೀಶಾಲೆಯನ್ನೂ, ಯಜಮಾನನ ಶಾಲೆಯನ್ನೂ ಕೆಡಹಿದರು. ಬಳಿಕ ವೀರಭದ್ರ ದಕ್ಷನ ಮೇಲೆಬಿದ್ದು, ಅವನ ತಲೆಯನ್ನು ಉರುಳಿಸಿ, ಆ ರುಂಡವನ್ನು ಅಲ್ಲಿಯೇ ದಕ್ಷಿಣಾಗ್ನಿಯೆಂಬ ಅಗ್ನಿಯಲ್ಲಿ ಬಿಸುಟು ಶಿವನ ಬಳಿಗೆ ತೆರಳಿದ.

ಬಳಿಕ ಯಜ್ಞಶಾಲೆಯಲ್ಲಿ ಉಳಿದಿದ್ದವರೆಲ್ಲರೂ, ಕೈಕಾಲುಗಳನ್ನು ಮುರಿದು ಕೊಂಡವರಾಗಿ, ಮೆಲ್ಲಗೆ ಬ್ರಹ್ಮನಲ್ಲಿಗೆ ಹೋಗಿ ಈ ವಿಷಯವನ್ನು ಬಿನ್ನವಿಸಿದರು. ದಕ್ಷನ ಯಜ್ಞ ಈ ರೀತಿಯಲ್ಲಿ ಪರಿಣಮಿಸುವುದೆಂಬುದನ್ನು ಮುಂಚಿತವಾಗಿಯೇ ಅರಿತಿದ್ದ ಚತುರ್ಮುಖನೂ, ವಿಷ್ಣುವೂ ಈ ಯಜ್ಞಕ್ಕೆ ಬಂದಿರಲಿಲ್ಲ. ಬಳಿಕ ಮರುಕ ಗೊಂಡ ಚತುರ್ಮುಖನು ಅವರನ್ನೆಲ್ಲ ಕರೆದುಕೊಂಡು ಕೈಲಾಸಕ್ಕೆ ಹೋಗಿ, ಅಲ್ಲಿ ತನ್ನ ಆಪ್ತಮಿತ್ರನಾದ ಕುಬೇರನಿಂದ ಸೇವೆಗೊಳ್ಳುತ್ತಿರುವ ಚಂದ್ರಮೌಳಿಯನ್ನು ಕಂಡು ಭಯಭಕ್ತಿಭರಿತನಾಗಿ ಸಾಷ್ಟಾಂಗವೆರಗಿ, ನಾನಾ ಪರಿಯಿಂದ ಹೊಗಳಿ ಭಗರ್ವ, ದಕ್ಷನನ್ನು ಬದುಕಿಸಬೇಕು ಭಗನ ಕಣ್ಣುಗಳು ನೆಟ್ಟಗಾಗಬೇಕು. ಸೂರ್ಯನ ಹಲ್ಲು ಮೊಳೆಯಬೇಕು. ಭೃಗುವಿನ ಮೀಸೆ ಬೆಳೆಯಬೇಕು. ದೇವತೆ ಗಳ ಮುರಿದ ಅಂಗಗಳು ಎಂದಿನಂತೆ ಇರಬೇಕು '' ಎಂಬುದಾಗಿ ಬೇಡಿದ. ಆಗ ಪರಮಕಾರುಣಿಕನಾದ ಮಹೇಶ್ವರ ನಗುತ್ತ '' ನಾನು ಇಂತಹ ಹುಡುಗಾಟ ಗಳನ್ನು ಲೆಕ್ಕಿಸುವವನಲ್ಲ. ದಕ್ಷನ ಮುಖ ಕುರಿಯ ಮುಖವಾಗಲಿ. ಮಿಕ್ಕವ ರೆಲ್ಲರೂ ಸುಖವಾಗಿರಲಿ. ಈ ಭೃಗುವಿನ ಗಡ್ಡ ಮೀಸೆಗಳು ಹೋತನ ಗಡ್ಡದಂತಿರಲಿ'' ಎಂದು ಅನುಗ್ರಹಿಸಿದನು ದಕ್ಷ ಎಚ್ಚತ್ತವನಂತೆ ಎದ್ದುನಿಂತು, ಮಗಳು ಸತ್ತುದನ್ನು ನೆನಪಿಗೆ ತಂದು ದುಃಖಿತನಾಗಿ, ಪರಮೇಶ್ವರನನ್ನು ಹೊಗಳಿ ತಾನು ಕೈಕೊಂಡಿದ್ದ ಯಜ್ಞವನ್ನು ಪೂರ್ತಿಗೊಳಿಸಿ, ಪರಮೇಶ್ವರನಿಗೂ ಹವಿರ್ಭಾಗವನ್ನು ಕೊಟ್ಟು ಎಲ್ಲರನ್ನೂ ಸತ್ಕರಿಸಿ ಬೀಳ್ಕೊಟ್ಟ [ಭಾಗ.-೪. ಸ್ಕಾಂ ೨-೭]. ಸತಿ ಯಾಗ ಶಾಲೆಯನ್ನು ಹೊಕ್ಕು ತನ್ನ ಪತಿಯನ್ನು ಏತಕ್ಕೆ ಕರೆಕಳುಹಲಿಲ್ಲವೆಂದು ದಕ್ಷನನ್ನು ಕೇಳಲಾಗಿ, ಶೂಲಪಾಣಿ ಈ ಯಜ್ಞಕ್ಕೆ ಬರಲು ಯೋಗ್ಯಸಲ್ಲವೆಂಬುದಾಗಿ ದಕ್ಷನು ಪ್ರತ್ಯುತ್ತರವಿತ್ತ ಸತಿ ಒಡನೆಯೇ ದೇಹತ್ಯಾಗಮಾಡುವುದಾಗಿ ಹೇಳಿ '' ನೀನು ಹತ್ತು ಮಂದಿ ತಂದೆಯರಿಗೆ ಒಬ್ಬನೇ ಮಗನಾಗು. ಪರಮೇಶ್ವರನಿಂದಲೇ ನೀನು ಹಾಳಾಗುವೆ '' ಎಂದು ಯೋಗಾಗ್ನಿಯಿಂದ ದೇಹತ್ಯಾಗಮಾಡಿದಳು [ಮತ್ಸ್ಯ.-೧೩]. ಇದಕ್ಕೆ ಅನುಸಾರವಾಗಿಯೇ ಚಾಕ್ಷುಷಮನ್ವಂತರದಲ್ಲಿ ದಕ್ಷನು ಹತ್ತು ಮಂದಿ ಪ್ರಚೇತಸರಿಂದಲೂ ಮಾರಿಷೆಯಲ್ಲಿ ಜನಿಸಿದನು [ವಿಷ್ಣು -೧-೧೫. ಭಾರ.-ಶಾಂತಿ.

೨೯೦. ಗರುಡ.-೫ ಭಾಗ.-೪-೩೦. ೬-೪. ಬ್ರಹ್ಮ ೨]. ಬಳಿಕ ದಕ್ಷ ಕಂಗೆಟ್ಟು, ಸಾಷ್ಟಾಂಗವೆರಗಿ, ಸತಿಯನ್ನು ನಾನಾ ಪರಿಯಿಂದ ಹೊಗಳಿದ. ಆಗ ದೇವಿ ಪ್ರಸನ್ನೆಯಾಗಿ, " ಚಿಂತಿಸಬೇಡ. ನೀನು ಹತ್ತು ಮಂದಿಗೆ ಮಗನಾದರೂ ಸೃಷ್ಟಿಕರ್ತರಲ್ಲಿ ಅಗ್ರಗಣ್ಯನಾಗುವೆ. ನನ್ನ ಅಂಶದಿಂದಲೇ ನಿನಗೆ ಅರುವತ್ತು ಮಂದಿ ಪುತ್ರಿಯರು ಜನಿಸುವರು. ನೀನು ನನ್ನ ಸನ್ನಿಧಿಯಲ್ಲಿಯೇ ತಪಸ್ಸುಮಾಡಿ, ಸಿದ್ಧಿಯನ್ನು ಪಡೆಯುವೆ " ಎಂಬುದಾಗಿ ಹೇಳಿ ಕಣ್ಮರೆಯಾಗಿ, ಹಿಮವಂತನಿಂದ ಮೇನಕೆಯಲ್ಲಿ ಅಪರ್ಣೆಯೆಂಬ ಹೆಸರಿನಿಂದ ಜನಿಸಿ, ಪರಮೇಶ್ವರನ ಅರ್ಧಾಂಗವನ್ನು ಸೂರೆಗೊಂಡಳು [ಮತ್ಸ್ಯ -೧೩]. ಮೊದಲು ಪರಮೇಶ್ವರನು ಅರ್ಧನಾರೀಶ್ವರನಾಗಿದ್ದ. ಬ್ರಹ್ಮನು ಶಿವನಲ್ಲಿಗೆ ಬಂದು, ಮಹಾಪ್ರಭೋ, ನಿನ್ನ ಶಿವ ಶಕ್ತಿರೂಪಗಳನ್ನು ಬೇರ್ಪಡಿಸು. ಅನೇಕ ಕಾರ್ಯಗಳು ಈ ಮೂಲಕ ನಡೆಯಬೇಕಾಗಿವೆ " ಎಂಬುದಾಗಿ ಬೇಡಿಕೊಂಡ. ಆಗ ಶಿವ ತನ್ನ ಎಡಭಾಗದಿಂದ ಸರ್ವ ವಿಧದಿಂದಲೂ ತನಗೆ ಅನುರೂಪೆಯಾದ ಸತಿಯನ್ನು ಹೊರಗೆಡಹಿದ ಈಕೆ ಸತಿಯೆಂಬ ಹೆಸರಿನಿಂದ ದಕ್ಷನಿಗೆ ಮಗಳಾಗಿ ಜನಿಸಿ, ದಕ್ಷನು ತನ್ನ ಪತಿಯನ್ನು ನಿಂದಿಸಿದ ಕಾರಣ, ಆತನನ್ನು ನಿಂದಿಸಿ, ದೇಹತ್ಯಾಗಮಾಡಿ, ಹಿಮವಂತನಿಂದ ಮೇನೆಯಲ್ಲಿ ಜನಿಸಿದಳು [ಲಿಂಗ -೯೯]. ಶಿವನಿಂದ ಪ್ರೇರಿತನಾದ ವೀರಭದ್ರನು ಯಾಗಶಾಲೆಯನ್ನು ಹೊಕ್ಕು, ಭಗನ ಕಣ್ಣುಗಳನ್ನು ಕಿತ್ತು, ಸೂರ್ಯನ ಹಲ್ಲುಗಳನ್ನು ಉದುರಿಸಿ, ಚಂದ್ರನನ್ನು ಅಂಗಾಲಿನಿಂದ ಪುಡಿಮಾಡಿ, ಇಂದ್ರನ ತಲೆಯನ್ನು ಕೆಡಹಿ, ಅಗ್ನಿಯ ಎರಡು ಕೈಗಳನ್ನು ಕತ್ತರಿಸಿ, ನಾಲಿಗೆಯನ್ನು ಕಿತ್ತು, ಯಮನ ದಂಡಾಯುಧವನ್ನು ಮುರಿದು, ಮೂರು ಸಾವಿರದ ಮುನ್ನೂರು ಮಂದಿ ದೇವತೆಗಳನ್ನು ನಿರಾಯಾಸವಾಗಿ ಕೊಂದ. ಬಳಿಕ ವಿಷ್ಣು ಅವನೊಡನೆ ಯುದ್ಧಕ್ಕೆ ಬರಲಾಗಿ ಆತನ ಬಿಲ್ಲನ್ನು ಮುರಿದು, ಗದೆಯಿಂದ ಆತನ ರುಂಡವನ್ನು ಬೇರ್ಪಡಿಸಿ, ಓಡಿಹೋಗುತ್ತಿದ್ದ ಯಜ್ಞಪುರುಷನ ತಲೆಯನ್ನು ಕತ್ತರಿಸಿ, ಕಾಶ್ಯಪ, ಆಂಗಿರಸ ಮುಂತಾದ ಮುನಿಪುಂಗವರನ್ನು ಎಡಗಾಲಿನಿಂದ ಮೆಟ್ಟಿ, ದಕ್ಷನ ಶಿರವನ್ನು ತರಿದು ಬೆಂಕಿಯಲ್ಲಿ ಹಾಕಿದ ಆಗ ಚತುರ್ಮುಖನು ಬೇಡಿಕೊಳ್ಳಲಾಗಿ, ಎಲ್ಲರೂ ಬದುಕಿದರು [ಲಿಂಗ.-೧೦೦]

**ದಾನಧರ್ಮಪರ್ವ** —ಭೀಷ್ಮನು ಯುಧಿಷ್ಠಿರನಿಗೆ ಸಕಲ ವಿಧವಾದ ದಾನ ಧರ್ಮಗಳನ್ನೂ ಅವುಗಳ ಸ್ವರೂಪವನ್ನೂ ಅವುಗಳನ್ನು ಆಚರಿಸುವ ವಿಧಾನವನ್ನೂ, ಅದರಿಂದುಂಟಾಗುವ ಫಲವನ್ನೂ ವಿವರಿಸಿದ್ದು [ಅನು. ೧-೨೭೧].

**ದಾನಪತಿ.**—ಈ ಹೆಸರು ಕಂಸನ ಮಂತ್ರಿಯಾದ ಅಕ್ರೂರನಿಗೆ ಸಲ್ಲುತ್ತದೆ. ನೋಡು—ಅಕ್ರೂರ.

**ದಾನಪಾತ್ರಗಳು**.—ದಾನವನ್ನು ಪಡೆಯಲು ಯೋಗ್ಯರಾದವರು [ಅನು. ೬೦, ೬೨. ಅಶ್ವ. ೯೮].

**ದಾನಫಲ**.— [ವನ ೨೬೦, ೨೦೩. ಶಾಂತಿ. ೨೪೦ ಅನು. ೧೦೧, ೧೦೪, ೧೮೨, ೨೦೦, ೨೩೪-೨೩೬. ಅಶ್ವ. ೧೦೩].

**ದಾನವರ ಅಂಶದಿಂದ ಜನಿಸಿದ ಅರಸರು**.—[ಆದಿ. ೬೮].

**ದಾನ್ತ**.—ವಿದರ್ಭ ದೇಶಾಧಿಪತಿಯಾದ ಭೀಮ ರಾಜನ ಎರಡನೆಯ ಮಗ. ದಮಯಂತಿಯ ಸಹೋದರ [ವನ. ೫೦].

**ದಾಮಗ್ರನ್ಥಿ** —ಅಜ್ಞಾತವಾಸ ಸಮಯದಲ್ಲಿ ವಿರಾಟನ ಅಶ್ವಶಾಲಾಧ್ಯಕ್ಷನಾಗಿದ್ದ ನಕುಲನ ಹೆಸರು [ವಿರಾ ೪]

**ದಾಮೋದರ**.—ವಿಷ್ಣುವಿನ ಹೆಸರುಗಳಲ್ಲಿ ಒಂದು [ಉದ್ಯೋ. ೬೯].

**ದಾಯಭಾಗ ಪ್ರಕಾರ**.—[ಅನು. ೮೨].

**ದಾರಿದ್ರ್ಯಪ್ರಶಂಸೆ** —ಬಡತನವೇ ಲೇಸು [ಶಾಂತಿ. ೧೭೫].

**ದಾರುಕ**.—(1) ಶ್ರೀ ಕೃಷ್ಣನ ಸಾರಥಿ ಈತನಿಗೆ ಕಾಶ್ಯಪೇಯನೆಂಬ ನಾಮಾಂತರವೂ ಸಲ್ಲುತ್ತದೆ [ವನ. ೨೨ ದ್ರೋ ೭೯, ೧೪೫] ಯಾದವರು ಪ್ರಭಾಸಕ್ಷೇತ್ರದಲ್ಲಿ ಸ್ವಯೂಥ ಕಲಹದಿಂದ ಮಡಿದಾಗ ಶ್ರೀ ಕೃಷ್ಣ ಈ ಸಮಾಚಾರವನ್ನು ಹೇಳಿ, ಅರ್ಜುನನನ್ನು ಕರೆತರುವುದಕ್ಕಾಗಿ ಈತನನ್ನು ಹಸ್ತಿನಾವತಿಗೆ ಕಳುಹಿಸಿದ [ಮೌಸ. ೫].

(II) ಮಹಿಷಾಸುರನ ಸಾರಥಿ [ದೇ ಭಾ.-೫].

**ದಾರುಕಿ**.—ಮೇಲೆ ಹೇಳಿದ ದಾರುಕನ ಮಗ ಶ್ರೀ ಕೃಷ್ಣನ ಮಗನಾದ ಪ್ರದ್ಯುಮ್ನನ ಸಾರಥಿಯಾಗಿದ್ದ [ವನ. ೧೮].

**ದಾಲ್ಭ್ಯ**.—ಒಬ್ಬ ಮಹರ್ಷಿ ನೋಡು—ಬಕ ದಾಲ್ಭ್ಯ.

**ದಾಶರಾಜ**.—(1) ಬೆಸ್ತರ ಅರಸು ಸತ್ಯವತಿಯ ಸಾಕು ತಂದೆ ಒಮ್ಮೆ ಬೆಸ್ತರು ಮೀನು ಹಿಡಿಯುವಾಗ ಒಂದು ಹೆಂಗೂಸು ಸಿಕ್ಕಿತು. ಬೆಸ್ತರು ಆ ಕೂಸನ್ನು ತಂದು ತಮ್ಮ ಅರಸನಿಗೆ ಒಪ್ಪಿಸಿದರು ರಾಜ ಅವಳನ್ನು ಅಕ್ಕರೆಯಿಂದ ಸಾಕುತ್ತಿದ್ದ. ಒಮ್ಮೆ ಪರಾಶರ ಮುನಿ ತೀರ್ಥಯಾತ್ರೆಗೆ ಹೋಗಿದ್ದಾಗ ಯಮುನಾ ನದಿಯನ್ನು ದಾಟಬೇಕಾಗಿಬಂದುದರಿಂದ ದಾಶರಾಜನಲ್ಲಿಗೆ ಹೋಗಿ ದೋಣಿಯನ್ನು ನಡೆಯಿಸಬೇಕೆಂದು ಕೇಳಿದ. ದಾಶರಾಜ ಭೋಜನಮಾಡುತ್ತಿದ್ದ ಕಾರಣ, ಸಾವಕಾಶವಾದರೆ ಮುನಿ ಶಾಪಕೊಡುವನೆಂಬ ಭಯದಿಂದ ತನ್ನ ಮಗಳನ್ನು ಕಳುಹಿದ. ಸತ್ಯವತಿ ದೋಣಿಯನ್ನು ನಡೆಯಿಸುವಾಗ ಪರಾಶರ ಆಕೆಯನ್ನು ಮೋಹಿಸಿ, ವ್ಯಾಸ ಮುನಿಯನ್ನು ಪಡೆದ. ನೋಡು—ಕೃಷ್ಣದ್ವೈಪಾಯನ, ವ್ಯಾಸ, ಸತ್ಯವತಿ. ಬಳಿಕ

ಒಂದು ದಿನ ಸತ್ಯವತಿಯನ್ನು ಶಂತನು ಚಕ್ರವರ್ತಿ ಮೋಹಿಸಿ, ಆಕೆಯನ್ನು ತನಗೆ ಕೊಡಬೇಕೆಂಬುದಾಗಿ ಕೇಳಲಾಗಿ, ದಾಶರಾಜನು ಶಂತನು ಚಕ್ರವರ್ತಿಯನ್ನು ಕುರಿತು " ತನ್ನ ಮಗಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ರಾಜ್ಯವನ್ನು ಕೊಡುವುದಾದರೆ ತಾನು ಸತ್ಯವತಿಯನ್ನು ಕೊಡುವೆನು" ಎಂದ. ಶಂತನುವಿಗೆ ಭೀಷ್ಮ ಹಿರಿಯ ಮಗನಾದುದರಿಂದ, ಸಕಲಗುಣ ಪರಿಪೂರ್ಣನೂ ಹಿರಿಯವನೂ ಆದ ಭೀಷ್ಮನಿಗೆ ಸಲ್ಲತಕ್ಕ ರಾಜ್ಯವನ್ನು ಹೆರರಿಗೆ ಕೊಡಲು ಮನಸ್ಸು ಒಡಂಬಡಲಿಲ್ಲವಾಗಿ, ಸುಮ್ಮನೆ ಮನೆಗೆ ಹಿಂದಿರುಗಿದ. ಶಂತನುವಿನ ದೇಹ ದಿನದಿನಕ್ಕೂ ಸವೆಯುತ್ತ ಬಂದು ಶೋಚನೀಯವಾದ ಸ್ಥಿತಿಯಲ್ಲಿರಲಾಗಿ ಭೀಷ್ಮ ಈ ವಿಚಾರವನ್ನು ತಿಳಿದು ದಾಶರಾಜನಲ್ಲಿಗೆ ಬಂದು ತಾನು ರಾಜ್ಯವನ್ನು ಬಯಸುವುದಿಲ್ಲವೆಂತಲೂ, ಯಾವಜ್ಜೀವವೂ ಬ್ರಹ್ಮಚರ್ಯದಲ್ಲಿಯೇ ಇರುವುದಾಗಿಯೂ ಪ್ರತಿಜ್ಞೆಮಾಡಿದ ಬಳಿಕ ದಾಶರಾಜನು ಸತ್ಯವತಿಯನ್ನು ಶಂತನುವಿಗೆ ಕೊಡಲು ಸಮ್ಮತಿಸಿದ. ಈತನಿಗೆ ಉಚ್ಚೈಃಶ್ರವಸ್ಸೆಂಬುದು ನಾಮಾಂತರ [ಭಾರ -ಆದಿ ೧೦೭].

(III) ಸರಯೂ ನದಿಯ ತೀರದಲ್ಲಿದ್ದ ಬೆಸ್ತರ ಅರಸನೂ ಶ್ರೀ ರಾಮನ ಆಪ್ತಮಿತ್ರನೂ ಆದ ಗುಹನಿಗೂ ಈ ಹೆಸರು ಸಲ್ಲುತ್ತದೆ. ನೋಡು—ಗುಹ.

**ದಾಶಾರ್ಹ.**— ಚಂದ್ರ ವಂಶದ ಅರಸು. ನೋಡು—ಕಲಾವತಿ

**ದಾಶಾರ್ಹೀ.**—ಚಂದ್ರ ವಂಶದ ದಶಾರ್ಹ ರಾಜನ ಮಗಳು. ದಾಶಾರ್ಹನ ತಂಗಿ ಈಕೆಗೆ ಶುಭಾಂಗಿಯೆಂಬುದು ನಿಜವಾದ ಹೆಸರು ಈಕೆ ಚಂದ್ರ ವಂಶದ ಸಂವರಣನ ಮಗನಾದ ಕುರು ರಾಜನನ್ನು ಮದುವೆಯಾಗಿ ವಿದೂರಥನೆಂಬ ಮಗನನ್ನು ಹೆತ್ತಳು [ಆದಿ. ೬೩].

**ದಿಗ್ದೇವತಾ.**—ರಾತ್ರಿಯ ಅಭಿಮಾನದೇವತೆ ಉಪಶ್ರುತಿಯೆಂಬುದು ನಾಮಾಂತರ. ಈಕೆ ಸ್ತ್ರೀಯರ ಗುಣದೋಷಸ್ವಭಾವಗಳ ವಿಷಯವಾಗಿ ಅಷ್ಟಾವಕ್ರ ಮುನಿಯೊಂದಿಗೆ ವಾದಮಾಡಿದಳು [ಅನು ೫೦-೫೭].

**ದಿಗ್ವಿಜಯ ಪರ್ವ.**—ಪಾಂಡವರ ರಾಜಸೂಯ ಯಾಗಕ್ಕೆ ಮೊದಲು ಭೀಮಾರ್ಜುನ, ನಕುಲ, ಸಹದೇವರು ದಿಗ್ವಿಜಯಮಾಡಿದ ವಿವರ [ಸಭಾ. ೨೬-೩೫].

**ದಿತಿ.**—ದಕ್ಷಬ್ರಹ್ಮನಿಂದ ಧರಣಿಯಲ್ಲಿ ಜನಿಸಿದವಳು ಕಶ್ಯಪನ ಹೆಂಡತಿ [ಭಾರ.-ಆದಿ. ೬೬. ಸಭಾ. ೧೧]. ಹಿರಣ್ಯಕಶಿಪು ಈಕೆಯ ಮಗ [ಆದಿ. ೬೬]. ಹಿರಣ್ಯಾಕ್ಷ, ಹಿರಣ್ಯಕಶಿಪು, ಮುಂತಾದ ರಾಕ್ಷಸರೂ, ನಲವತ್ತೊಂಬತ್ತು ಮಂದಿ ಮರುತ್ತುಗಳೂ ಈಕೆಯ ಮಕ್ಕಳು [ಭಾಗ.-೬-೧೮. ಹರಿ.-೧-೩]. ದಿತಿ ಕಶ್ಯಪನಿಂದ ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ಇಬ್ಬರು ಪುತ್ರರನ್ನೂ ಸಿಂಹಿಕೆಯೆಂಬ ಮಗಳನ್ನೂ ಹೆತ್ತಳು. ಸಿಂಹಿಕೆ ವಿಪ್ರಚಿತ್ತಿಯೆಂಬ ದಾನವನನ್ನು ಮದುವೆಯಾದಳು

[ವಿಷ್ಣು.-೧-೧೫]. ಸಮುದ್ರಮಥನ ಸಮಯದಲ್ಲಿ ದಿತಿಯ ಮಕ್ಕಳೆಲ್ಲರೂ ಹತ ರಾದರು. ಖಿನ್ನೆಯಾದ ದಿತಿ ತನ್ನ ಪತಿಯಾದ ಕಶ್ಯಪನ ಬಳಿಸಾರ್ದು ಸ್ವಾಮಿ, ನಿನ್ನ ಮಕ್ಕಳಾದ ದೇವತೆಗಳು ಮಹಾಬಲಿಷ್ಠರೆನಿಸಿ ನನ್ನ ಮಕ್ಕಳನ್ನೆಲ್ಲ ಕೊಂದು ಬಿಟ್ಟರು. ದೇವೇಂದ್ರನನ್ನು ಕೊಲ್ಲತಕ್ಕಂತಹ ಪರಾಕ್ರಮಶಾಲಿಯೂ, ಬಲಾಢ್ಯನೂ, ದೀರ್ಘಾಯುಷ್ಯವುಳ್ಳವನೂ ಎನಿಸಿದ ಒಬ್ಬ ಮಗನನ್ನು ನನಗೆ ದಯಪಾಲಿಸು'' ಎಂಬುದಾಗಿ ಬೇಡಿಕೊಂಡಳು. ಕಾಶ್ಯಪ ''ಹಾಗೆಯೇ ಆಗಲಿ ಆದರೆ ನೀನು ಮಹಾಪರಿಶುದ್ಧಳಾಗಿರಬೇಕು ನಿನಗೆ ಶ್ರೇಯಸ್ಸಾಗಲಿ. ಪುತ್ರಪ್ರಾಪ್ತಿಗಾಗಿ ತಪಸ್ಸನ್ನು ಮಾಡಹೋಗು'' ಎಂದ ದಿತಿ ಕುಶಪ್ಲವವೆಂಬ ಕ್ಷೇತ್ರದಲ್ಲಿ ತೀವ್ರ ವಾದ ತಪಸ್ಸನ್ನು ಮಾಡತೊಡಗಿದಳು. ಇಂದ್ರ ಈಕೆಯ ಉದ್ದೇಶವನ್ನು ಅರಿತು ಆಕೆಯ ಬಳಿಗೆ ಬಂದು, ಅನುಗಾಲವೂ ಸೇವೆಮಾಡುತ್ತಿದ್ದ. ಆಗ ದಿತಿ ಒಮ್ಮೆ ಇಂದ್ರನನ್ನು ಕುರಿತು ''ಮಗೂ, ನಿನಗೆ ಒತ್ತಾಸೆಗೆ ಸರಿಯಾದವ ರೊಬ್ಬರೂ ಇಲ್ಲ ಇದಕ್ಕಾಗಿಯೇ ನಾನು ತಪಸ್ಸುಮಾಡುತ್ತಿದ್ದೇನೆ ಇನ್ನು ಕೆಲವು ದಿನಗಳಲ್ಲಿಯೇ ನನ್ನ ತಪಸ್ಸು ಮುಗಿಯುವುದು ಆ ಬಳಿಕ ನಿನ್ನಂ ತೆಯೇ ಪರಾಕ್ರಮಶಾಲಿಯಾದ ಒಬ್ಬ ತಮ್ಮನು ನಿನಗೆ ಜನಿಸುವನು'' ಎಂದಳು. ಇವಳ ಅಂತರಂಗವನ್ನು ಅರಿತಿದ್ದ ಇಂದ್ರ ಅವಳನ್ನು ಬಹಳ ಜಾಗರೂಕತೆಯಿಂದ ಶುಶ್ರೂಷೆಮಾಡುತ್ತ ಹೊಂಚುಹಾಕಿಕೊಂಡಿದ್ದ ಇಂತಿರಲು ಒಂದು ದಿನ ಹಗಲು ಹೊತ್ತಿನಲ್ಲಿ ದಿತಿ ಬೇಸತ್ತು, ತಲೆದಿಂಬಿನ ಮೇಲೆ ಕಾಲುಚಾಚಿಕೊಂಡು ಮಲಗಿ ನಿದ್ರಿಸುತ್ತಿದ್ದಳು ಇಂತು ಶಾಸ್ತ್ರವಿರುದ್ಧವಾಗಿ ಮಲಗಿರುವುದನ್ನು ಕಂಡು, ಇಂದ್ರ ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳುವುದಕ್ಕೆ ಅದೇ ತಕ್ಕ ಸಮಯವೆಂದು ನಿಶ್ಚಯಿಸಿ, ಆಕೆಯ ಗರ್ಭವನ್ನು ಹೊಕ್ಕು, ವಜ್ರಾಯುಧದಿಂದ ಆ ಪಿಂಡವನ್ನು ಏಳು ತುಂಡುಗಳಾಗಿ ಕತ್ತರಿಸಿ, ಒಡನೆಯೇ ಹೊರಬಂದು ಕಯ್ಮುಗಿದು ನಿಂತು ''ಎಲೌ ತಾಯೆ, ಇಂದು ನೀನು ಅಶುಚಿಯಾಗಿ ನಿದ್ದೆಮಾಡುತ್ತಿದ್ದೆ. ಇಂದಿನವರೆಗೂ ನೀನು ನನ್ನ ಜನಕನ ಅಪ್ಪಣೆಯಮೇರೆಗೆ ನಿಯಮದಿಂದಿದ್ದುದರಿಂದ ನನಗೆ ಅವಕಾಶ ದೊರೆಯಲಿಲ್ಲ ಯುದ್ಧದಲ್ಲಿ ನನ್ನನ್ನು ಕೊಲ್ಲುವುದಕ್ಕೆ ಯೋಗ್ಯವಾಗಿದ್ದ ಗರ್ಭ ವನ್ನು ಏಳು ಭಾಗವಾಗಿ ಕತ್ತರಿಸಿದ್ದೇನೆ ನಿನ್ನ ಅಂತರಂಗವನ್ನು ನಾನು ಬಲ್ಲೆ ನಾದರೂ ಸಮಯನಿರೀಕ್ಷಣೆಯಿಂದ ಇಂದಿನವರೆಗೆ ಕಾದುಕೊಂಡಿದ್ದೆ ನನ್ನ ಅಪ ರಾಧವನ್ನು ಮನ್ನಿಸು'' ಎಂದ. ದಿತಿ ಇಂದ್ರನನ್ನು ಕುರಿತು, ''ಈ ಗರ್ಭ ನನ್ನ ಅಜಾಗರೂಕತೆಯಿಂದಲೇ ಏಳು ಭಾಗವಾಗಿ ವ್ಯರ್ಥವಾಯಿತು. ಈ ಏಳು ಭಾಗ ಗಳಲ್ಲಿ ಒಂದು ಬ್ರಹ್ಮಲೋಕದಲ್ಲಿಯೂ, ಎರಡನೆಯದು ಇಂದ್ರಲೋಕದಲ್ಲಿಯೂ, ಮೂರನೆಯದು ದೇವವಾಯುವೆಂದು ಪ್ರಖ್ಯಾತಿಪಡೆದು ದೇವಲೋಕದಲ್ಲಿ ಸಂಚರಿ

ಸಲಿ. ಮಿಕ್ಕ ನಾಲ್ಕು ನಾಲ್ಕು ದಿಕ್ಕುಗಳಲ್ಲಿಯೂ ಸಂಚರಿಸಲಿ. ಈ ಏಳ ಮಂದಿಯೂ ಮಹಾಬಲಸಂಪನ್ನರೆನಿಸಿ ದಿವ್ಯಸ್ವರೂಪವುಳ್ಳವರಾಗಲಿ'' ಎಂದಳು. ಆಗ ಆ ಗರ್ಭದ ತುಂಡುಗಳು ಘೋರವಾಗಿ ಅಳುತ್ತಿರುವುದನ್ನು ಕಂಡು ಇಂದ್ರ ಅಳಬೇಡವೆಂದು '' ಮಾರೋದೀಃ '' ಎಂದು ಹೇಳಿದ. ಇದನ್ನು ಕೇಳಿ ದಿತಿ '' ಎಲೆ ಇಂದ್ರನೇ, ಇವುಗಳು ಮಾರುತಗಳೆಂದು ಪ್ರಸಿದ್ಧಿಯನ್ನು ಪಡೆಯಲಿ ' ಎಂದಳು. ಈ ಏಳು ತುಂಡುಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಏಳು ಚೂರುಗಳಾದುವು. ಈ ಕಾರಣದಿಂದ ಮರುತ್ತುಗಳು ನಲವತ್ತೊಂಬತ್ತು ಪ್ರಭೇದಗಳುಳ್ಳವಾದುವು [ರಾಮಾ -ಬಾಲ. ೪೬-೪೭].

**ದಿಲೀಪ.**—ಸೂರ್ಯ ವಂಶದ ಸಗರ ಚಕ್ರವರ್ತಿಯ ಮೊಮ್ಮಗನಾದ ಅಂಶುಮಂತನ ಮಗ. ಈತ ಸಂತಾನಾರ್ಥವಾಗಿ ವಸಿಷ್ಠನ ಹೋಮಧೇನುವಾದ ನಂದಿನಿಯನ್ನು ಸೇವೆಮಾಡಿ ರಘುವೆಂಬ ತನಯನನ್ನು ಪಡೆದ. ಹೆಂಡತಿ ಸುದಕ್ಷಿಣೆ [ಮತ್ಸ್ಯ -೧೨. ಪದ್ಮ ೧೯೭]. ನೋಡು—ಖಟ್ವಾಂಗ ದಿಲೀಪನ ಚರಿತ್ರೆ [ಸಭಾ. ೮. ವನ. ೧೦೭. ವಿರಾ. ೫೩. ದ್ರೋ. ೬೧ ಶಾಂ ೨೮]

**ದಿವೋದಾಸ** —(i) ಕಾಶೀ ರಾಜನಾದ ಭೀಮಸೇನನೆಂಬ ಅರಸನ ಮಗ ಈತ ಯಯಾತಿ ರಾಜನ ಮಗಳಾದ ಮಾಧವಿಯಲ್ಲಿ ಪ್ರತರ್ದನನೆಂಬ ಮಗನನ್ನು ಪಡೆದ [ಭಾರ.-ಸಭಾ ೮. ಉ ೧೧೭. ಅನು ೨೭೧]. ನೋಡು—ಗಾಲವ, ಕುಂಭ. ವೀತಹವ್ಯನೆಂಬ ಹೈಹಯ ರಾಜ ದಿವೋದಾಸನ ತಂದೆಯಾದ ಭೀಮಸೇನನನ್ನು ಕೊಲ್ಲಲಾಗಿ ದಿವೋದಾಸನು ಭಾರದ್ವಾಜನೆಂಬ ಮಹರ್ಷಿಯನ್ನು ಮರೆಹೊಕ್ಕು, ಪುತ್ರಕಾಮೇಷ್ಟಿ ಯಾಗವನ್ನು ಮಾಡಿ, ವೀತಹವ್ಯನನ್ನು ಕೊಲ್ಲತಕ್ಕ ಸಾಮರ್ಥ್ಯವುಳ್ಳ ಪ್ರತರ್ದನನನ್ನು ಪಡೆದ. ಈ ಪ್ರತರ್ದನ ಹೈಹಯ ರಾಜನನ್ನು ಯುದ್ಧದಲ್ಲಿ ಸೋಲಿಸಿದ [ಭಾರ -ಅನು. ೮].

(ii) ಭರ್ಮ್ಯಾಶ್ವನೆಂಬ ಅರಸನ ಮಗನು ಗೌತಮ ಮುನಿಯ ಪತ್ನಿಯೂ ಶತಾನಂದ ಮಹರ್ಷಿಯ ಜನನಿಯೂ ಆದ ಅಹಲ್ಯೆ ಈತನ ಸೋದರಿ ಸೋಮ ರಾಜ ಈತನ ವಂಶದಲ್ಲಿ ಜನಿಸಿದವ [ಭಾಗ -೯-೨೧] ವೃಧ್ಯಶ್ವನಿಂದ ಮೇನಕೆಯಲ್ಲಿ ಜನಿಸಿದವ. ಅಹಲ್ಯೆ ಈತನ ಒಡಹುಟ್ಟಿದವಳು [ಹರಿ.-೧-೩೨] ಕಾಶೀ ದೇಶಾಧೀಶ್ವರನಾದ ಧನ್ವಂತರಿ ರಾಜನ ಮಗನಾದ ಕೇತುಮಂತನಿಂದ ಜನಿಸಿದವ ಈತನಿಗೆ ಭೀಮರಥನೆಂಬ ನಾಮಾಂತರವೂ ಉಂಟು [ವಾಯು. ೯೨]

**ದೀಪದಾನ ಫಲ** —[ಅನು ೧೫೫].

**ದೀರ್ಘ.**—ಮಗಧ ದೇಶದ ಅರಸು. ಮಾದ್ರಿಯ ವಿವಾಹಕ್ಕೆ ಮೊದಲು ಪಾಂಡು ರಾಜನಿಂದ ಹತನಾದ [ಆದಿ. ೧೨೨].

**ದೀರ್ಘತಮಸ್.**—ಒಬ್ಬ ಬ್ರಹ್ಮರ್ಷಿ. ಅಂಗಿರಸ ಮಹರ್ಷಿಯ ಮಗನಾದ ಉಚಥ್ಯ ಮಹರ್ಷಿಯ ಮಗ ಈತನ ಜನನಿಯಾದ ಮಮತೆಯೆಂಬವಳು ಈತನನ್ನು ಗರ್ಭದಲ್ಲಿ ಧರಿಸಿದ್ದ ಕಾಲದಲ್ಲಿ ಉಚಥ್ಯನ ತಮ್ಮನಾದ ಬೃಹಸ್ಪತಿ ಮಮತೆಯನ್ನು ಬಲಾತ್ಕಾರದಿಂದ ಮಾನಭಂಗಗೊಳಿಸಿದ ಆಗ ಗರ್ಭದಲ್ಲಿದ್ದ ಶಿಶು ಬೃಹಸ್ಪತಿಯನ್ನು ಗದ್ದರಿಸಲಾಗಿ, ಕ್ರುದ್ಧನಾದ ಬೃಹಸ್ಪತಿ, ಶಿಶುವನ್ನು ಜಾತ್ಯಂಧನಾಗಿ ಜನಿಸುವಂತೆ ಶಾಪವಿತ್ತ. ಆ ಶಿಶು ಅಂತೆಯೇ ದೀರ್ಘತಮನೆಂಬ ಹೆಸರಿನಿಂದ ಜಾತ್ಯಂಧನಾಗಿ ಹುಟ್ಟಿತು ಬಳಿಕ ಉಚಥ್ಯನ ಅನುಗ್ರಹಬಲದಿಂದ ಸರ್ವಜ್ಞತ್ವವನ್ನು ಪಡೆದ ಈತ ಪ್ರದ್ವೇಷಿಣಿಯೆಂಬವಳನ್ನು ಮದುವೆಯಾಗಿ, ಗೌತಮನೇ ಮೊದಲಾದ ಅನೇಕ ಮಂದಿ ಪುತ್ರರನ್ನು ಪಡೆದ. ಪ್ರದ್ವೇಷಿಣಿ ಅನುಗಾಲವೂ ಗಂಡನಮೇಲೆ ಸಿಡಿಮಿಡಿಗುಟ್ಟುತ್ತಿದ್ದಳು ಒಂದು ದಿನ ದೀರ್ಘತಮನು ಪ್ರದ್ವೇಷಿಣಿಯನ್ನು ಕುರಿತು "ನೀನು ಪುತ್ರವತಿಯಾದ ಮೇಲೆಯೂ ನನ್ನ ಮೇಲೆ ಹೀಗೆ ಆಗ್ರಹಮಾಡುವುದು ಯುಕ್ತವಲ್ಲ" ಎಂದ ಆಗ ಪ್ರದ್ವೇಷಿಣಿ "ಹೆಂಡತಿಯನ್ನೂ ಮಕ್ಕಳನ್ನೂ ಕಾಪಾಡುವ ಭಾರ ಗಂಡನದು ಆದರೆ ಈಗ ನಿನ್ನನ್ನೂ ನಿನ್ನ ಪುತ್ರರನ್ನೂ ಕಾಪಾಡುವ ಭಾರ ನನ್ನನ್ನೇ ಹೊಂದಿಕೊಂಡಿದೆ" ಎಂದು ಮುಂತಾಗಿ ಹೀಯಾಳಿಸಿ, ತನ್ನ ಮಕ್ಕಳ ಮೂಲಕ ದೀರ್ಘತಮನನ್ನು ಗಂಗೆಯಲ್ಲಿ ತಳ್ಳಿಸಿದಳು. ದೀರ್ಘತಮನು ಪ್ರವಾಹದಲ್ಲಿ ಕೊಚ್ಚಿಕೊಂಡುಹೋಗುತ್ತಿರುವಲ್ಲಿ, ಸ್ನಾನಮಾಡುತ್ತಿದ್ದ ಚಂದ್ರ ವಂಶದ ಅನುಕುಲೋತ್ಪನ್ನನಾದ ಬಲಿಯೆಂಬ ರಾಜನು, ಈತನನ್ನು ಮೇಲಕ್ಕೆ ಎತ್ತಿ, ಹುಟ್ಟುಕುರುಡನೆಂಬ ಸಂಗತಿಯನ್ನು ತಿಳಿದು ಕನಿಕರಪಟ್ಟು, ತನ್ನ ಅರಮನೆಗೆ ಕರೆತಂದು ಆರೈಕೆಮಾಡಿದ ಬಲಿ ರಾಜನಿಗೆ ಮಕ್ಕಳಿರಲಿಲ್ಲವಾಗಿ ಆತನ ಪಟ್ಟದರಸಿಯಾದ ಸುದೇಷ್ಣೆ ದೀರ್ಘತಮನ ಮೂಲಕ ಅಂಗ, ವಂಗ, ಕಲಿಂಗ, ಸುಹ್ಮ, ಪುಂಡ್ರ, ಅಂಧ್ರರೆಂಬ ಮಕ್ಕಳನ್ನು ಪಡೆದಳು. ಸುದೇಷ್ಣೆಯ ದಾಸಿ ಕಕ್ಷೀವನ್ತ ಮೊದಲಾದ ಹನ್ನೊಂದು ಮಂದಿ ಪುತ್ರರನ್ನು ಪಡೆದಳು [ಭಾರ - ಆದಿ ೧೧೩. ಸ. ೭ ಶಾಂತಿ ೩೫೦ ಅನು ೬೭೧] ಸುಪ್ರಸಿದ್ಧನಾದ ಭರದ್ವಾಜ ಮುನಿ ಈತನ ತಮ್ಮ ಈ ಭರದ್ವಾಜ ಮಮತೆಯಲ್ಲಿ ಬೃಹಸ್ಪತಿಯ ವೀರ್ಯದಿಂದ ಜನಿಸಿದವ [ಭಾಗ.-೯-೨೦. ವಿಷ್ಣು -೪-೧೯. ಮತ್ಸ್ಯ -೪೯]

**ದೀರ್ಘಾಯು** —ಒಬ್ಬ ಅರಸು ಕಳಿಂಗ ದೇಶದ ಅರಸನಾದ ಶ್ರುತಾಯುವಿನ ಮಗ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಹತನಾದ [ದ್ರೋ ೯೩].

**ದುಸ್ದುಭೀ.**—(1) ಒಬ್ಬ ಗಂಧರ್ವನ ಹೆಂಡತಿ ಬ್ರಹ್ಮನ ಶಾಪದಿಂದ ಕುಬ್ಜ ರೂಪವನ್ನು ತಳೆದು ಮಂಥರೆಯೆಂಬ ಹೆಸರಿನಿಂದ ಜನಿಸಿ, ಕೇಕಯ ರಾಜನಾಗಿದ್ದ

ಅಶ್ವಪತಿಯಲ್ಲಿ ದಾಸಿಯಾಗಿದ್ದು, ದಶರಥನು ಕೈಕಯಿಯನ್ನು ಮದುವೆಯಾದ ಆಕೆಯ ಬಳುವಳಿಯಾಗಿ, ಅವಳೊಂದಿಗೆ ಅಯೋಧ್ಯೆಯನ್ನು ಸೇರಿದಳು ರಾಮನ ಯೌವರಾಜ್ಯಾಭಿಷೇಕಕ್ಕೆ ಭಂಗವನ್ನುಂಟುಮಾಡಿ ಅಪಕೀರ್ತಿಗೆ ಗುರಿಯ ದಳು [ಭಾರ -ವನ. ೨೭೬]. ನೋಡು—ಕುಬ್ಜಾ.

(ii) ಮಯಾಸುರನಿಂದ ಹೇಮೆಯೆಂಬ ಅಪ್ಸರಸಿಯಲ್ಲಿ ಜನಿಸಿದ ಮಾಯಾವಿಯೆಂಬ ರಾಕ್ಷಸನೂ ರಾವಣನ ಮಡದಿ ಮಂಡೋದರಿಯೂ ಈತ ಒಡಹುಟ್ಟಿದವರು [ರಾಮಾ.-ಉತ್ತ. ೧೨]. ದುಂದುಭಿ ಅನೇಕ ವರಗಳನ ಪಡೆದು ಮದೋನ್ಮತ್ತನಾಗಿ ಸಮುದ್ರ ರಾಜನಲ್ಲಿಗೆ ಹೋಗಿ ತನ್ನೊಂದಿಗೆ ಯು ಮಾಡ ಕರೆದ ಸಮುದ್ರ ರಾಜ ನಾನು ನಿನ್ನೊಂದಿಗೆ ಯುದ್ಧಮಾಡಲಾರೆ. ಹಿ ವಂತನು ನಿನ್ನ ಸಂಗಡ ಯುದ್ಧಮಾಡಲು ಸಮರ್ಥನು ಎಂದ. ದುಂದು ಕೂಡಲೇ ಹಿಮವಂತನಲ್ಲಿಗೆ ಹೋದ. ಅದ್ರಿರಾಜ "ಅಯ್ಯಾ, ನನಗೇಕೆ ಯುದ್ಧ ನಾನು ತಾಪಸರಿಗೆ ಆಶ್ರಯಭೂತನಾಗಿದ್ದೇನಲ್ಲದೆ ನಿನ್ನ ಸಂಗಡ ಯುದ್ಧಮಾಡು ಸಾಮರ್ಥ್ಯ ನನಗೆತ್ತಣದು ? ಕಿಷ್ಕಿಂಧಾಧಿಪತಿಯಾದ ವಾಲಿ ನಿನಗೆ ತಕ್ಕ ಎದ ರಾಳು" ಎಂದ. ದುಂದುಭಿ ಹಿಮವಂತನನ್ನು ಹೀಯಾಳಿಸಿ, ಮಹಾ ಭಯಂಕ ವಾದ ಕೋಣನ ರೂಪವನ್ನು ಧರಿಸಿ, ಕಿಷ್ಕಿಂಧೆಯ ಹೆಬ್ಬಾಗಿಲನ್ನು ಅಡ್ಡಗಟ್ಟಿ ಭಯಂಕರವಾಗಿ ಗರ್ಜಿಸಿದ ವಾಲಿ ಇವನನ್ನು ಕೊಂದು ಇವನ ದೇಹವನ್ನು ಎಸೆಯ ಲಾಗಿ ಆ ಶರೀರ ಮತಂಗ ಮುನಿಯ ಆಶ್ರಮದ ಬಳಿಯಲ್ಲಿ ಬಿತ್ತು. ನೋಡು— ಮತಂಗ, ವಾಲಿ [ರಾಮಾ -ಕಿಷ್ಕಿಂ. ೧೧, ೧೨]

**ದುಃಖ** —ದುಃಖಸ್ವರೂಪ ನಿರೂಪಣ [ವನ ೧೯೬] ಅದು ಪಾಪಮೂಲಕ ವಾದದ್ದು [ವನ ೨೧೩]

**ದುರ್ಗ** —ಕೋಟೆಗಳು. ಆರು ಬಗೆ [ಶಾಂತಿ ೮೬].

**ದುರ್ಗಮ**.—ನೋಡು—ದುರ್ದಮ

**ದುರ್ಗಾ**.—ತಮೋಗುಣಾಭಿಮಾನಿನಿಯಾದ ಲಕ್ಷ್ಮಿಯ ರೂಪಾಂತರ. ಈಕೆ ಯನ್ನೇ ಆದಿಶಕ್ತಿಯೆನ್ನುವರು ದುರ್ಗಮನೆಂಬ ಅಸುರನನ್ನು ಕೊಂದ ಕಾರಣ ದುರ್ಗೆಯೆಂದು ಹೆಸರು [ದೇ.ಭಾ -೭-೨೮]. ಅಜ್ಞಾತವಾಸಕ್ಕೆ ಹೊರಡುವಾಗ ಯುಧಿಷ್ಠಿರ ಈಕೆಯನ್ನು ಹೊಗಳಿದ್ದು [ವಿರಾ ೮] ಭಾರತ ಯುದ್ಧಾರಂಭದಲ್ಲಿ ಅರ್ಜುನನು ಈಕೆಯನ್ನು ಸ್ತುತಿಸಿದ್ದು [ಭೀ ೨೩]

**ದುರ್ಗಾಸ್ತೋತ್ರ**—[ಹರಿ.-೨-೩, ೨-೧೨೦, ೨-೧೦೭]

**ದುರ್ಗಾತಿತರಣೋಪಾಯ**.—ಕಷ್ಟಗಳನ್ನು ಕಡೆಹಾಯುವ ರೀತಿಗಳು [ಶಾಂ. ೧೧೦].

**ದುರ್ಜಯ.**—(i) ಒಬ್ಬ ಅರಸು. ಇಕ್ಷ್ವಾಕು ವಂಶದ ಸುವೀರ ರಾಜನ ಮಗ. ಈತನಿಗೆ ದುರ್ಯೋಧನನೆಂಬ ಮಗನು ಜನಿಸಿದ [ಅನು ೨].

(ii) ಪಾಂಚಾಲ ದೇಶದ ಅರಸು. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಹತನಾದ [ಕರ್ಣ. ೫೧].

(iii) ಒಬ್ಬ ಅರಸು ಸುಪ್ರತೀಕನೆಂಬವನಿಂದ ವಿದ್ಯುತ್ಪ್ರಭೆಯೆಂಬವಳಲ್ಲಿ ಜನಿಸಿದವ. ಮಹಾ ಪರಾಕ್ರಮಶಾಲಿ ಈತ ತನ್ನ ತಮ್ಮನಾದ ಸುದ್ಯುಮ್ನನ ಸಹಾಯದಿಂದ ಸಕಲ ರಾಜರನ್ನೂ ಗೆದ್ದು, ಇಂದ್ರನನ್ನೂ ಸೋಲಿಸಿ, ಆತನಿಂದಲೂ ಕಪ್ಪಕಾಣಿಕೆಗಳನ್ನು ಪಡೆದು ಏಕಚ್ಛತ್ರಾಧಿಪತಿಯಾಗಿದ್ದ. ವಿದ್ಯುತ್, ವಿಷಜಿಹ್ವ, ಖಡ್ಗಹಸ್ತ ಮುಂತಾದ ರಾಕ್ಷಸರು ಈತನ ಅಡಿಯಾಳುಗಳಾಗಿದ್ದು ಈತನಿಂದ ಕೆಲ ಕೆಲ ದೇಶಗಳನ್ನು ಸಂಪಾದಿಸಿ, ಈತನ ಕೈಕೆಳಗೆ ಸಾಮಂತರಾಜರಾಗಿದ್ದರು. ಈತ ಒಮ್ಮೆ ಕುಬೇರನ ಚೈತ್ರರಥವೆಂಬ ಉದ್ಯಾನದಲ್ಲಿ ಸಂಚರಿಸುತ್ತಿದ್ದಾಗ ಆ ವನದಲ್ಲಿ ವಿಹರಿಸುತ್ತಿದ್ದ ಸುಕೇಶಿ, ಮಿಶ್ರಕೇಶಿಯರೆಂಬ ಇಬ್ಬರು ತರುಣಿಯರನ್ನು ಕಂಡು ಮೋಹಪರವಶನಾಗಿ ಅವರ ಜನನೀ ಜನಕರ ಅನುಮತಿಯಿಂದ ಅವರಿಬ್ಬರನ್ನೂ ಮದುವೆಯಾದ ಸುಕೇಶಿಯಲ್ಲಿ ಸುಪ್ರಭನೆಂಬ ಮಗನೂ ಮಿಶ್ರಕೇಶಿಯಲ್ಲಿ ಸುದರ್ಶನನೆಂಬ ತನಯನೂ ಜನಿಸಿದರು ದುರ್ಜಯನು ರಾಜ್ಯಭಾರವನ್ನು ತನ್ನ ತಮ್ಮನಾದ ಸುದ್ಯುಮ್ನನಿಗೆ ಒಪ್ಪಿಸಿ, ತಾನು ಯಾವಾಗಲೂ ಸ್ತ್ರೀಲೋಲನಾಗಿದ್ದ ಒಂದು ದಿನ ಈತನು ಬೇಟೆಗೆ ಹೋಗಿದ್ದಾಗ ಗೌರಮುಖನೆಂಬ ಮುನಿಯ ಆತಿಥ್ಯವನ್ನು ಕೈಕೊಂಡು, ಆತನಲ್ಲಿದ್ದ ಮಣಿಯ ಮಹಿಮೆಗೆ ಮನಸೋತು, ಆ ರತ್ನದ ನಿಮಿತ್ತದಿಂದಲೇ ಹತನಾದ. ನೋಡು—ಗೌರಮುಖ

(iv) ಜನಸ್ಥಾನದಲ್ಲಿ ವಾಸಮಾಡುತ್ತಿದ್ದು ರಾಮನಿಂದ ಹತನಾದ ಖರನೆಂಬ ರಾಕ್ಷಸನ ಹನ್ನೆರಡು ಮಂದಿ ಮಂತ್ರಿಗಳಲ್ಲಿ ಒಬ್ಬ ನೋಡು—ಖರ

**ದುರ್ಜಯಾ.**—ಒಂದು ಪಟ್ಟಣ ಇದಕ್ಕೆ ಮಣಿಮತಿಯೆಂಬುದು ನಾಮಾಂತರ ವಾತಾಪಿಯೆಂಬ ರಾಕ್ಷಸನ ರಾಜಧಾನಿಯಾಗಿತ್ತು [ಭಾರ -ವನ ೯೪].

**ದುರ್ಧಮ.**—ಒಬ್ಬ ಅರಸು. ಒಮ್ಮೆ ಈತ ಪ್ರಮುಖನೆಂಬ ಮುನಿಯ ಆಶ್ರಮಕ್ಕೆ ಹೋದ. ಮುನಿ ಅಲ್ಲಿ ಕಾಣಲಿಲ್ಲ. ಆತನ ಮಗಳಾದ ರೇವತಿ ಅಲ್ಲಿದ್ದಳು ಅರಸನು ಆ ಹುಡುಗಿಯನ್ನು ಕಂಡು "ಪ್ರಿಯೆ, ಮುನಿವರ್ಯನು ಎಲ್ಲಿ?" ಎಂಬುದಾಗಿ ಪ್ರಶ್ನೆಮಾಡಿದ. ಈತನ ಧ್ವನಿಯನ್ನು ಕೇಳಿದೊಡನೆಯೇ ಒಳಗಿದ್ದ ಮುನಿ ಹೊರಬಂದು "ಅಯ್ಯಾ ಅರಸೆ, ನನ್ನ ಮಗಳನ್ನು ನಾನು ನಿನಗೆ ಕೊಟ್ಟು ಮದುವೆಮಾಡಬೇಕೆಂದಿದ್ದೆ ಈಗ ಅದಕ್ಕೆ ತಕ್ಕಂತೆಯೇ ನೀನೂ ನನ್ನ ಮಗಳನ್ನು

ಸಂಬೋಧಿಸಿರುವೆ" ಎಂದು ಹೇಳಿ, ಮಗಳನ್ನು ಮದುವೆಮಾಡಿಕೊಟ್ಟ. ಆಗ ದುರ್ದಮನು "ಸ್ವಾಮಿ, ನನಗೆ ಮನ್ವಂತರಾಧಿಪತಿಯಾಗತಕ್ಕ ಮಗನು ಹುಟ್ಟುವಂತೆ ಅನುಗ್ರಹಿಸಬೇಕು" ಎನಲು, ಮುನಿ "ತಥಾಸ್ತು" ಎಂದ ಬಳಿಕ ರೇವತಿ ಸಕಲ ಲಕ್ಷಣಭರಿತನಾದ ಮಗನನ್ನು ಹೆತ್ತಳು. ಈತನೇ ರೈವತಮನು [ಮಾರ್ಕಂ.-೭೨].

**ದುರ್ಧರ.**—(i) ಒಬ್ಬ ರಾಕ್ಷಸ. ಮಹಿಷಾಸುರನ ಅನುಯಾಯಿಗಳಲ್ಲಿ ಒಬ್ಬ. ಮಹಿಷಾಸುರನ ಹಿಂದೆ ಯುದ್ಧಮಾಡುವುದಕ್ಕೆ ಹೋಗಿ ಮಹಾಲಕ್ಷ್ಮಿಯಿಂದ ಹತನಾದ ನೋಡು—ಮಹಿಷಾಸುರ [ದೇ ಭಾಗ -೫-೬ ಮತ್ಸ್ಯ.-೧೫೧]

(ii) ರಾವಣನ ಪ್ರಧಾನರಲ್ಲಿ ಒಬ್ಬ [ರಾಮಾ.-ಸುಂ. ೪೯]

(iii) ಸುಗ್ರೀವನ ಕಪಿನಾಯಕರಲ್ಲಿ ಒಬ್ಬ [ರಾಮಾ -ಯು ೩೦].

**ದುರ್ಧರ್ಷ**—(i) ರಾವಣನ ಸೇನಾಪತಿಗಳಲ್ಲಿ ಒಬ್ಬ ಅಶೋಕವನವನ್ನು ಹಾಳುಗೆಡವಿದನೆಂಬ ಕೋಪದಿಂದ ಹನೂಮಂತನನ್ನು ಇದಿರಿಸಿ, ಆತನಿಂದ ಹತನಾದ [ರಾಮಾ -ಸುಂ. ೪೬]

(ii) ರಾವಣನ ಪರಿವಾರದ ಮತ್ತೊಬ್ಬ ರಾಕ್ಷಸ ರಾಮಾಯಣ ಯುದ್ಧದಲ್ಲಿ ಶ್ರೀ ರಾಮನಿಂದ ಮಡಿದ [ರಾಮಾ.-ಯು. ೯]

**ದುರ್ಯೋಧನ.**—ಒಬ್ಬ ಅರಸು ಸೂರ್ಯವಂಶದ ಇಕ್ಷ್ವಾಕು ರಾಜನ ಸಂತತಿಯಲ್ಲಿ ಜನಿಸಿದ ದುರ್ಜಯನೆಂಬ ರಾಜನ ಮಗಳು ನರ್ಮದೆ ಈತನ ರೂಪಕ್ಕೆ ಮರುಳಾಗಿ ಈತನಲ್ಲಿ ಸಂಸಾರಮಾಡಿಕೊಂಡಿದ್ದು ಸುದರ್ಶನೆಯೆಂಬ ಕನ್ಯೆಯನ್ನು ಹೆತ್ತಳು. ಸುದರ್ಶನೆ ತಕ್ಕ ವಯಸ್ಸನ್ನು ಹೊಂದಿದ ತರುವಾಯ ತನ್ನ ತಂದೆಯು ಅಗ್ನಿ ಗೃಹದಲ್ಲಿ ಆತನಿಗೆ ಬೇಕಾದ ಸಲಕರಣೆಗಳನ್ನು ಅಣಿಮಾಡುತ್ತಿದ್ದಾಗ ಅಗ್ನಿ ದೇವನು, ಈಕೆಯ ರೂಪದಿಂದ ಮರುಳಾಗಿ, ಬ್ರಾಹ್ಮಣರೂಪದಿಂದ ಬಂದು ತನ್ನ ಅಭಿಲಾಷೆಯನ್ನು ವ್ಯಕ್ತಗೊಳಿಸಿದ ಆಗ ಸುದರ್ಶನೆ "ನಾನು ಸ್ವತಂತ್ರಳಲ್ಲ. ನಮ್ಮ ತಂದೆಯನ್ನು ಒಪ್ಪಿಸಿದಲ್ಲಿ ನಾನು ಮದುವೆಯಾಗಲು ಅಭ್ಯಂತರವಿಲ್ಲ" ಎಂದಳು. ಅಗ್ನಿ ದುರ್ಯೋಧನನನ್ನು ಒಪ್ಪಿಸಿ ಸುದರ್ಶನೆಯನ್ನು ಮದುವೆಯಾದ [ಭಾರ.-ಅನು. ೨].

(ii) ಚಂದ್ರವಂಶದ ಧೃತರಾಷ್ಟ್ರ ರಾಜನಿಂದ ಗಾಂಧಾರಿಯಲ್ಲಿ ಜನಿಸಿದ ನೂರು ಮಂದಿ ಪುತ್ರರಲ್ಲಿ ಹಿರಿಯವ [ಭಾರ -ಆದಿ. ೬೩, ೬೪]. ಈತ ಕಲಿಪುರುಷನ ಅಂಶದಿಂದ ಜನಿಸಿದವ [ಆದಿ ೬೮]. ಪಾಂಡುರಾಜನ ಮರಣಾನಂತರ ಯುಧಿಷ್ಠಿರಾದಿಗಳು ಧೃತರಾಷ್ಟ್ರನಲ್ಲಿಯೇ ಬಂದು ನಿಂತರು ಇವನೂ ಇವನ ತಮ್ಮಂದಿರು ತೊಂಬತ್ತೊಂಬತ್ತು ಮಂದಿಯೂ ಐವರು ಪಾಂಡವರೂ ಒಟ್ಟುಗೂಡಿ ಆಟವಾಡುವಾಗ ಭೀಮನ ಹಾವಳಿಯನ್ನು ತಟ್ಟಿಕೊಳ್ಳಲಾರದೆ ದುರ್ಯೋಧನನಿಗೆ ಭೀಮನ ಮೇಲೆ

ದ್ವೇಷ ಅಂಕುರಿಸಿತು. ಹೇಗಾದರೂ ಭೀಮನನ್ನು ಕೊಂದಲ್ಲದೆ ತಮಗೆ ಉಳಿಗಾಲವಿಲ್ಲವೆಂಬ ಚಿಂತೆಯಿಂದ ಮರುಗುತ್ತಿದ್ದ ದುರ್ಯೋಧನ ಗಂಗಾ ತೀರದಲ್ಲಿ ವನಭೋಜನದ ನೆವದಿಂದ ಪಾಂಡವರನ್ನೂ ತನ್ನ ಸಂಗಡ ಕರೆದುಕೊಂಡು ಹೋಗಿ, ಭೀಮನಿಗೆ ವಿಷ ಮಿಶ್ರವಾದ ಆಹಾರವನ್ನು ತಿನ್ನಿಸಿ, ಹಾವುಗಳಿಂದ ಕಚ್ಚಿಸಿ, ಹಗ್ಗಗಳಿಂದ ಬಿಗಿದು, ಗಂಗೆಯಲ್ಲಿ ತಳ್ಳಿಸಿದ ಭೀಮ ಅಲ್ಲಿಗೂ ಸಾಯದಿರಲು ಮತ್ತೊಮ್ಮೆ ಅಂತೆಯೇ ವಿಷಾನ್ನವನ್ನು ತಿನ್ನಿಸಿ, ಗಂಗೆಯಲ್ಲಿ ಶೂಲಗಳನ್ನು ನೆಡಿಸಿ, ಭೀಮನ ಕೈಕಾಲುಗಳನ್ನು ಕಟ್ಟಿ, ನೀರಿನಲ್ಲಿ ತಳ್ಳಿಸಿದ [ಆದಿ. ೧೩೭, ೧೩೮]. ಕೌರವರೂ ಪಾಂಡವರೂ ಕೃಪಾಚಾರ್ಯನಲ್ಲಿ ಅಸ್ತ್ರವಿದ್ಯಾಭ್ಯಾಸಕ್ಕೆ ಮೊದಲುಮಾಡಿದ್ದು [ಆದಿ. ೧೩೯] ಬಳಿಕ ದ್ರೋಣಾಚಾರ್ಯರಲ್ಲಿ ಧನುರ್ವಿದ್ಯಾಭ್ಯಾಸಕ್ಕೆ ಮೊದಲುಮಾಡಿದ್ದು ದ್ರೋಣ ಶಿಷ್ಯರನ್ನು ಪರೀಕ್ಷಿಸಿದ್ದು [ಆದಿ. ೧೪೧-೧೪೨] ದ್ರೋಣನು ಕುಮಾರರ ಅಸ್ತ್ರವಿದ್ಯಾ ಪರೀಕ್ಷೆಗಾಗಿ ರಂಗವನ್ನು ಕಲ್ಪಿಸಿದ್ದು ಭೀಮ ದುರ್ಯೋಧನರ ಗದಾಯುದ್ಧ ಪರೀಕ್ಷೆ. ಭೀಮ ತೇರ್ಗಡೆಯಾದದ್ದು. ದುರ್ಯೋಧನನ ಪರಿತಾಪ [ಆದಿ ೧೪೪]. ಇದೇ ಸಮಯದಲ್ಲಿ ಕರ್ಣ ಆ ರಂಗಸ್ಥಳಕ್ಕೆ ಬಂದುದನ್ನುಕಂಡು ದುರ್ಯೋಧನ ಹಿಗ್ಗಿ ಆತನನ್ನು ತನ್ನ ಪಕ್ಷಕ್ಕೆ ಸೇರಿಸಿಕೊಂಡು ಅರ್ಜುನನೊಂದಿಗೆ ಯುದ್ಧಮಾಡುವಂತೆ ಕರ್ಣನನ್ನು ಪ್ರೋತ್ಸಾಹಗೊಳಿಸಿದ್ದು ಅರ್ಜುನ ರಾಜಪುತ್ರನಾದ್ದರಿಂದ ಆತನೊಂದಿಗೆ ಯುದ್ಧ ಮಾಡಲು ಕರ್ಣನಿಗೆ ಯೋಗ್ಯತೆಯಿಲ್ಲವೆಂದು ಕೃಪಾಚಾರ್ಯ ಕರ್ಣನನ್ನು ಹೀಯಾಳಿಸಿದ್ದು ಆ ಮಾತನ್ನು ಕೇಳಿ ದುರ್ಯೋಧನ ಕರ್ಣನಿಗೆ ಅಂಗರಾಜ್ಯದಲ್ಲಿ ಪಟ್ಟಗಟ್ಟಿದ್ದು [ಆದಿ ೧೪೬] ಕುಮಾರರ ಅಸ್ತ್ರವಿದ್ಯಾಭ್ಯಾಸ ಮುಗಿದ ತರುವಾಯ ದ್ರುಪದನು, ತನಗೆ ಅವಮಾನಮಾಡಿರುವ ಕಾರಣ ಆತನನ್ನು ಹಿಂಗಟ್ಟು ಬಿಗಿದು ತಂದು ತನಗೆ ಒಪ್ಪಿಸುವ ಹಾಗೆ ದ್ರೋಣನು ಕುರು ಪಾಂಡವರಿಗೆ ಆಜ್ಞೆಯಿತ್ತದ್ದು. ದುರ್ಯೋಧನಾದಿಗಳು ಸೋತುಹೋದದ್ದು [ಆದಿ ೧೪೮] ದುರ್ಯೋಧನ ಬಲರಾಮನಿಂದ ಗದಾವಿದ್ಯೆಯನ್ನು ಕಲಿತದ್ದು [ವಿಷ್ಣು - ೪-೧೩ ಭಾಗ - ೧೦-೫೭] ಧೃತರಾಷ್ಟ್ರ ಯುಧಿಷ್ಠಿರನನ್ನು ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಪ್ರತಿಷ್ಠೆಗೊಳಿಸಬೇಕೆಂದು ಯತ್ನಿಸಿದಾಗ ಕಣಿಕನೆಂಬ ಮಂತ್ರಿಯು ದುರ್ಯೋಧನನಿಂದ ಪ್ರೇರಿತನಾದ ದುರ್ಯೋಧನ ತನ್ನ ತಂದೆಯೊಂದಿಗೆ ವಿವಾದಮಾಡಿದ್ದು [ಆದಿ ೧೫೨]. ಪಾಂಡವರನ್ನು ಕೊಲ್ಲಿಸಬೇಕೆಂಬ ಉದ್ದೇಶದಿಂದ ಅರಗಿನ ಮನೆಯನ್ನು ಕಟ್ಟಿಸಲು ನಿಶ್ಚಯಿಸಿದ್ದು. ಪ್ರಜೆಗಳನ್ನು ವಶಪಡಿಸಿಕೊಳ್ಳುವುದಕ್ಕಾಗಿ, ಬೊಕ್ಕಸದಿಂದ ಹೇರಳವಾಗಿ ಹಣವನ್ನು ವೆಚ್ಚಮಾಡಿದ್ದು. ವಾರಣಾವತದಲ್ಲಿ ಪುರೋಚನನ ಮೂಲಕ ಜತುಗೃಹವನ್ನು ನಿರ್ಮಿಸಿ, ಪಾಂಡವರನ್ನು ಅಲ್ಲಿಗೆ ಕಳುಹಿಸಿದ್ದು [ಆದಿ. ೧೫೪-೧೫೮]. ಪಾಂಡವರು ಅರಗಿನ ಮನೆಯಲ್ಲಿ ಸುಟ್ಟು ಹೋದರೆಂಬುದನ್ನು ಕೇಳಿ ಧೃತರಾಷ್ಟ್ರಾದಿಗಳು ಮನಮರುಗಿ ಕುಂತಿಯೊಂದಿಗೆ ಸೇರಿ

ಪಾಂಡವರಿಗೆ ತಿಲೋದಕವನ್ನು ಕೊಟ್ಟದ್ದು. ಅದನ್ನು ಕೇಳಿ ದುರ್ಯೋಧನ ದುಃಖವನ್ನು ನಟಿಸಿದ್ದು [ಆದಿ. ೧೬೨]. ದ್ರೌಪದೀ ಸ್ವಯಂವರ ಸಮಯದಲ್ಲಿ ಪಾಂಡವರ ಮೇಲೆ ಯುದ್ಧಮಾಡಹೋಗಿ ಯುಧಿಷ್ಠಿರನಿಂದ ಸೋತದ್ದು [ಆದಿ. ೨೦೫]. ಗೂಢಚಾರರ ಮೂಲಕ ಪಾಂಡವರು ದ್ರುಪದ ನಗರಿಯಲ್ಲಿ ದ್ರೌಪದಿಯನ್ನು ಮದುವೆಯಾಗಿ ಸುಖವಾಗಿರುವರೆಂಬ ಸುದ್ದಿಯನ್ನು ಕೇಳಿ ದುರ್ಯೋಧನನು ಅವರ ಮೇಲ್ಮೈಗಾಗಿ ಮರುಗಿದ್ದು. ಅಲ್ಲಿ ನೆರೆದಿದ್ದ ಅರಸುಮಕ್ಕಳೆಲ್ಲರೂ ಭೀಷ್ಮನನ್ನೂ ಧೃತರಾಷ್ಟ್ರನನ್ನೂ ನಿಂದಿಸಿದ್ದು. ದುರ್ಯೋಧನನು ಪಾಂಡವರನ್ನು ನಿರ್ಮೂಲಗೊಳಿಸುವುದಕ್ಕೆ ಉಪಾಯವನ್ನು ಕೇಳಿದ್ದು. ಹೇಗಾದರೂ ಪಾಂಡವರು ಹತರಾದಲ್ಲದೆ ದುರ್ಯೋಧನನಿಗೆ ಸುಖವಿಲ್ಲವೆಂದು ಶಕುನಿ ಹೇಳಿದ್ದು. '' ಪಾಂಡವರನ್ನು ಕೊಲ್ಲುವುದು ಶಕ್ಯವಲ್ಲ ಅವರೊಂದಿಗೆ ಸಂಧಿಮಾಡಿಕೊಳ್ಳುವುದೇ ಲೇಸು '' ಎಂಬುದಾಗಿ ಭೂರಿಶ್ರವ ಸಲಹೆ ಕೊಟ್ಟ ಪಾಂಡವರನ್ನು ಕೊಲ್ಲಲೇಬೇಕೆಂದು ಕರ್ಣನು ಹಠದಿಂದ ನುಡಿದ. ದುರ್ಯೋಧನ ಶಕುನಿ, ಕರ್ಣರ ಅಭಿಪ್ರಾಯ ಏಕರೀತಿಯಾಗಿರುವುದರಿಂದ ಪಾಂಡವರನ್ನು ಕೊಲ್ಲಬೇಕೆಂಬ ಅಭಿಪ್ರಾಯದಿಂದ ಸೈನ್ಯವನ್ನು ತೆಗೆದುಕೊಂಡು ದ್ರುಪದನ ಮೇಲೆ ಯುದ್ಧಕ್ಕೆ ಹೊರಟ ಆ ಯುದ್ಧದಲ್ಲಿ ಭೀಮನ ಮೂಲಕ ದುರ್ಯೋಧನ ಸೋತ. ಎಲ್ಲರೂ ಹಿಂದಿರುಗಿ ಹಸ್ತಿನಾವತಿಗೆ ಬಂದರು ಧೃತರಾಷ್ಟ್ರ ವಿದುರನ ಮೂಲಕ ಪಾಂಡವರ ವೃತ್ತಾಂತವನ್ನೆಲ್ಲ ಕೇಳಿ ತಿಳಿದು, ಪಾಂಡವರನ್ನೂ ದ್ರೌಪದಿಯನ್ನೂ ಕರೆತರಿಸಿ, ಅವರಿಗೆ ಅರ್ಧರಾಜ್ಯವನ್ನು ಕೊಡಬೇಕೆಂಬುದಾಗಿ ದ್ರೋಣ ಭೀಷ್ಮಾದಿಗಳೊಂದಿಗೆ ಯೋಚಿಸಿದ್ದು ಕರ್ಣ ದುರ್ಯೋಧನರು ಧೃತರಾಷ್ಟ್ರನೊಂದಿಗೆ ವಾಗ್ವಾದ ಮಾಡಿದ್ದು [ಆದಿ ೨೧೭-೨೨೪]. ಕಾಶೀ ರಾಜನ ಮಗಳನ್ನು ತಂದು ದುರ್ಯೋಧನನಿಗೆ ಮದುವೆ [ಆದಿ. ೧೩೧-೨೨೭] ಕಳಿಂಗ ದೇಶಾಧಿಪನಾದ ಚಿತ್ರಾಂಗದನು ದುರ್ಯೋಧನನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿದ್ದು [ಶಾಂತಿ ೪]. ಈತನ ಮಗಳಾದ ಲಕ್ಷ್ಮಣೆಯೆಂಬವಳನ್ನು ಜಾಂಬವತೀ ಪುತ್ರನಾದ ಸಾಂಬನಿಗೆ ಕೊಟ್ಟು ಮದುವೆಮಾಡಿದ್ದು [ಭಾಗ ೧೦-೬೮]. ಪಾಂಡವರು ರಾಜಸೂಯಯಾಗ ಮಾಡಿದಾಗ ದುರ್ಯೋಧನ ತನ್ನ ಮಾವನೊಂದಿಗೂ ಒಡಹುಟ್ಟಿದವರೊಂದಿಗೂ ಅಲ್ಲಿಗೆ ಹೋಗಿದ್ದ. ಮಯನ ಶಿಲ್ಪಚಾತುರ್ಯದಿಂದ ನಿರ್ಮಿತವಾದ ಆ ಸಭೆಯ ವೈಭವವನ್ನು ಕಂಡು ಮನಮರುಗಿದ ದುರ್ಯೋಧನನು ಸಭೆಯ ಸೊಬಗನ್ನು ನೋಡುವುದಕ್ಕೆ ಹೊರಟು ನಿರ್ಜಲಪ್ರದೇಶದಲ್ಲಿ ಜಲವಿರುವುದೆಂಬ ಭ್ರಾಂತಿಯಿಂದ ಉಟ್ಟಬಟ್ಟೆಯನ್ನು ಮೇಲಕ್ಕೆ ಎತ್ತಿಹಿಡಿದು ನಡೆದು, ಅಂತೆಯೇ ಜಲವಿರುವ ಎಡೆಯಲ್ಲಿ ಜಲವಿಲ್ಲವೆಂಬ ಭ್ರಾಂತಿಯಿಂದ ಅಜಾಗರೂಕನಾಗಿ ನಡೆದು ಮುಗ್ಗರಿಸಿದ. ಭೀಮಾದಿಗಳು ದುರ್ಯೋಧನನನ್ನು ಹಾಸ್ಯಮಾಡಿದರು. ದುರ್ಯೋಧನ ಖಿನ್ನನಾಗಿ ತನ್ನ ದುರವಸ್ಥೆಯನ್ನು ಶಕುನಿಯೊಂದಿಗೆ

ಹೇಳಿಕೊಂಡ [ಸಭಾ. ೭೪]. ಪಾಂಡವರನ್ನು ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ. ಆದಷ್ಟು ಬೇಗನೆ ಯಾವುದಾದರೊಂದು ತಂತ್ರದಿಂದ ಅವರನ್ನು ಗೆದ್ದು ನಿನಗೆ ನಿಷ್ಕಂಟಕವಾದ ರಾಜ್ಯವನ್ನು ಪಾಲಿಸುವ ಸೌಕರ್ಯವನ್ನುಂಟುಮಾಡಿಕೊಡುವೆ ನೆಂದು ಶಕುನಿ ದುರ್ಯೋಧನನನ್ನು ಸಂತವಿಸಿದ. ದುರ್ಯೋಧನ ದಿನದಿನಕ್ಕೂ ಚಿಂತೆಯಿಂದ ಕೃಶನಾದ. ಈ ಸಂಗತಿಯನ್ನು ಶಕುನಿ ಧೃತರಾಷ್ಟ್ರನಿಗೆ ತಿಳುಹಿದ. ಧೃತರಾಷ್ಟ್ರನು ಮಗನನ್ನು ಕರೆಯಿಸಿ ವಿಚಾರಿಸಿದ. ದುರ್ಯೋಧನನು ದ್ಯೂತ ಸಭೆಯನ್ನು ಏರ್ಪಡಿಸುವಂತೆ ತನ್ನ ತಂದೆಯನ್ನು ಬೇಡಿದ. ಧೃತರಾಷ್ಟ್ರ ಅದಕ್ಕೆ ಸಮ್ಮತಿಸಿದ. ಧೃತರಾಷ್ಟ್ರ ವಿದುರನ ಮೂಲಕ ಪಾಂಡವರನ್ನು ಕರೆತರಿಸಿದ. ದುರ್ಯೋಧನ ಧೃತರಾಷ್ಟ್ರನಲ್ಲಿ ತನಗೆ ರಾಜಸೂಯ ಸಭೆಯಲ್ಲಿ ಉಂಟಾದ ತಿರಸ್ಕಾರ ವನ್ನೂ ಪಾಂಡವರ ವೈಭವವನ್ನೂ ಭೀಮಾದಿಗಳು ತನ್ನನ್ನು ಪರಿಹಾಸಮಾಡಿದು ದನ್ನೂ ತಿಳಿಸಿದ [ಸಭಾ. ೭೬-೭೭] ರಾಜಸೂಯ ಸಭೆಯಲ್ಲಿ ದೇಶ ದೇಶದ ಅರಸರೆಲ್ಲರೂ ಕಪ್ಪಕಾಣಿಕೆಗಳನ್ನು ತಂದು ಯುಧಿಷ್ಠಿರನಿಗೆ ಒಪ್ಪಿಸಿದುದನ್ನು ದುರ್ಯೋಧನ ತಂದೆಗೆ ವಿವರಿಸಿದ್ದು ರಾಜಸೂಯದ ವೈಖರಿಯನ್ನು ಬಣ್ಣಿಸಿದ್ದು ಧೃತರಾಷ್ಟ್ರ ಪಾಂಡವರನ್ನು ದ್ವೇಷಿಸುವುದು ಯುಕ್ತವೂ ಹಿತವೂ ಅಲ್ಲವೆಂಬುದಾಗಿ ದುರ್ಯೋಧನನಿಗೆ ಬೋಧಿಸಿದ. ದುರ್ಯೋಧನ ತಂದೆಯ ಮಾತನ್ನು ಅಲ್ಲಗಳೆದು ಮಾತನಾಡಿದ್ದು [ಸಭಾ ೭೮-೮೧]. ಶಕುನಿ ದುರ್ಯೋಧನನನ್ನು ದ್ಯೂತಕ್ಕಾಗಿ ಪ್ರೋತ್ಸಾಹಿಸಿದ್ದು ಪಾಂಡವರು ದ್ಯೂತಸಭೆಗೆ ಬಂದದ್ದು ಮುಂತಾಗಿ [ಸಭಾ. ೮೨-೮೫] ವಿದುರ ದ್ಯೂತಸಭೆಯಲ್ಲಿ ದುರ್ಯೋಧನನನ್ನು ನಿಂದಿಸಿ, ದ್ಯೂತವನ್ನು ನಿಲ್ಲಿಸು ವಂತೆ ಧೃತರಾಷ್ಟ್ರನಿಗೆ ಹೇಳಿದ್ದು ದುರ್ಯೋಧನ ವಿದುರನನ್ನು ನಿಂದಿಸಿದ್ದು [ಸಭಾ ೮೬-೮೭] ದುರ್ಯೋಧನನು ದುಶ್ಶಾಸನ ಮೂಲಕ ದ್ರೌಪದಿಯನ್ನು ದ್ಯೂತ ಸಭೆಗೆ ಹಿಡಿತರಿಸಿದ್ದು ದುರ್ಯೋಧನನು ದ್ರೌಪದಿಯನ್ನು ಬಗೆಬಗೆಯಿಂದ ಪ್ರಲೋಭ ಗೊಳಿಸಿ, ತನ್ನ ತೊಡೆಯಮೇಲೆ ಕುಳಿತುಕೊಳ್ಳುವಂತೆ ಪ್ರೋತ್ಸಾಹಿಸಿದ. ದುರ್ಯೋ ಧನನ ತೊಡೆಯನ್ನು ಮುರಿದು ಕೊಲ್ಲುವುದಾಗಿ ಭೀಮ ಪ್ರತಿಜ್ಞೆ ಮಾಡಿದ್ದು. ದ್ರೌಪದಿ ದುರ್ಯೋಧನಾದಿಗಳನ್ನು ಶಪಿಸಿದ್ದು [ಸಭಾ ೮೮-೯೨] ದುರ್ಯೋಧನ ಧೃತರಾಷ್ಟ್ರನಲ್ಲಿ ಪಾಂಡವರ ಪರಾಕ್ರಮವನ್ನು ಬಣ್ಣಿಸಿದ್ದು ದುರ್ಯೋಧನ ತನ್ನ ತಂದೆಗೆ ಕಾರ್ತ್ತವೀರ್ಯಾರ್ಜುನನ ಕಥೆಯನ್ನು ಹೇಳಿದ್ದು [ಸಭಾ. ೯೬] ದುರ್ಯೋಧನ ಪಾಂಡವರೊಂದಿಗೆ ಮತ್ತೊಮ್ಮೆ ಜೂಜಾಡುವುದಕ್ಕೆ ಧೃತರಾಷ್ಟ್ರನ ಅನುಮತಿಯನ್ನು ಬೇಡಿ, ಆತನನ್ನು ಒಪ್ಪಿಸಿದ್ದು [ಸಭಾ. ೯೭]. ಪಾಂಡವರು ಸೋತು, ತಮ್ಮ ಪಣಕ್ಕೆ ಅನುಸಾರವಾಗಿ ಕಾಡಿಗೆ ಹೊರಟಾಗ ದ್ರೋಣ ದುರ್ಯೋಧನನಿಗೆ ನೀತಿಯನ್ನು ಉಪದೇಶಿಸಿದ್ದು [ಸಭಾ. ೧೦೨]. ಪಾಂಡವರೊಡನೆ ಸಂಧಿಮಾಡಿಕೊಂಡು, ಮರಳಿ

ಅವರನ್ನು ಬರಮಾಡಿಸಿ, ಅವರಿಗೆ ಸಲ್ಲತಕ್ಕ ಅರ್ಧರಾಜ್ಯವನ್ನು ಕೊಡಬೇಕೆಂಬುದಾಗಿ ವ್ಯಾಸಮುನಿ ದುರ್ಯೋಧನನಿಗೆ ಉಪದೇಶಮಾಡುವ ಸಲುವಾಗಿ ಮೈತ್ರೇಯ ಮುನಿಯನ್ನು ದುರ್ಯೋಧನನಲ್ಲಿಗೆ ಕಳುಹಿದ್ದು. ಮೈತ್ರೇಯನ ಉಪದೇಶವನ್ನು ಅಲ್ಲಗಳೆದು ದುರ್ಯೋಧನ ಹೆಮ್ಮೆಯಿಂದ ತೊಡೆತಟ್ಟಿಕೊಳ್ಳಲಾಗಿ "ಭೀಮನ ಗದೆಯಿಂದ ನಿನ್ನ ತೊಡೆ ತುಂಡಾಗಲಿ" ಎಂದು ಮೈತ್ರೇಯ ಶಾಪಕೊಟ್ಟದ್ದು [ವನ. ೧೦] ದುರ್ಯೋಧನಾದಿಗಳನ್ನು ಕೊಲ್ಲುವುದಾಗಿ ಪಾಂಡವರು ಪ್ರತಿಜ್ಞೆ ಮಾಡಿರುವುದಾಗಿಯೂ, ಶ್ರೀ ಕೃಷ್ಣ ಅವರಿಗೆ ಸರ್ವ ವಿಧದಲ್ಲಿಯೂ ಒತ್ತಾಸೆ ಮಾಡುವೆನೆಂದು ಮಾತು ಕೊಟ್ಟಿರುವುದಾಗಿಯೂ, ಚಾರರ ಮೂಲಕ ತಿಳಿದ ಸಂಜಯನ ಮಾತನ್ನು ಕೇಳಿ ಧೃತರಾಷ್ಟ್ರ ದುರ್ಯೋಧನನಲ್ಲಿ ಮೊರೆಯಿಟ್ಟದ್ದು [ವನ ೪೮] ಸಾತ್ಯಕಿ ದುರ್ಯೋಧನಾದಿಗಳನ್ನು ತಾನೇ ಕೊಂದು ಪಾಂಡವರನ್ನು ರಾಜ್ಯದಲ್ಲಿ ಪ್ರತಿಷ್ಠಿಸಲು ಯತ್ನಿಸಿದ್ದು. ಕೃಷ್ಣ ಸಾತ್ಯಕಿಯನ್ನು ಸಂತವಿಸಿದ್ದು [ವನ. ೧೨೧] ಕರ್ಣನೂ ಶಕುನಿಯೂ ಘೋಷಯಾತ್ರಾ ವ್ಯಾಜದಿಂದ ಪಾಂಡವರಲ್ಲಿಗೆ ದುರ್ಯೋಧನನನ್ನು ಕರೆದುಯ್ದು, ದ್ವೈತವನದಲ್ಲಿ ಪಾಂಡವರ ಇದಿರಲ್ಲಿ ಆತನ ವೈಭವವನ್ನು ಪಾಂಡವರಿಗೆ ಕಾಣಿಸಿ, ಅವರನ್ನು ಸಂಕಟಪಡಿಸಬೇಕೆಂದು ನಿಶ್ಚಯಿಸಿ, ದುರ್ಯೋಧನನನ್ನು ಆ ಕಾರ್ಯದಲ್ಲಿ ಪ್ರೇರಿಸಿದ್ದು. ದುರ್ಯೋಧನ ತನ್ನ ಸಕಲ ಪರಿವಾರ ದೊಂದಿಗೆ ಘೋಷಯಾತ್ರೆಯ ನೆವದಿಂದ ದ್ವೈತವನವನ್ನು ಹೊಕ್ಕದ್ದು [ವನ. ೨೩೮-೨೪೦]. ಅಲ್ಲಿ ಮೊದಲೇ ನೆಲಸಿದ್ದ ಗಂಧರ್ವರಿಗೂ ದುರ್ಯೋಧನನ ಪರಿವಾರಕ್ಕೂ ಹೋರಾಟ. ಕುರುಸೇನೆಯೊಂದಿಗೆ ಗಂಧರ್ವರು ಯುದ್ಧಮಾಡಿ ಸೋಲಿಸಿದ್ದು ಚಿತ್ರಸೇನನೆಂಬ ಗಂಧರ್ವರಾಜನು ದುರ್ಯೋಧನನನ್ನು ಹಿಂಗಟ್ಟುಬಿಗಿದು ಎತ್ತಿಕೊಂಡು ಹೋದದ್ದು ದುರ್ಯೋಧನನ ಮಂತ್ರಿಗಳು ಯುಧಿಷ್ಠಿರನಲ್ಲಿ ಮೊರೆಯಿಟ್ಟದ್ದು ಭೀಮ ಅದಕ್ಕೆ ಸಂತೋಷಪಟ್ಟು, ಅವನನ್ನು ಬಿಡಿಸಬಾರದೆಂದು ಹಠ ಹಿಡಿದದ್ದು. ಅರ್ಜುನ ಗಂಧರ್ವರನ್ನು ಸೋಲಿಸಿ, ದುರ್ಯೋಧನಾದಿಗಳನ್ನು ಬಿಡಿಸಿದ್ದು ಯುಧಿಷ್ಠಿ ರನ ಅಪ್ಪಣೆಯ ಮೇರೆಗೆ ಗಂಧರ್ವರು ದುರ್ಯೋಧನನ ಕಟ್ಟುಗಳನ್ನು ಬಿಚ್ಚಿದ್ದು. ದುರ್ಯೋಧನ ಹಸ್ತಿನಾವತಿಗೆ ಹಿಂದಿರುಗಿದ್ದು [ವನ ೨೪೧-೨೪೭] ಗಂಧರ್ವರಿಂದ ಸೋತು ಓಡಿಹೋಗಿದ್ದ ಕರ್ಣನನ್ನು ನಡುದಾರಿಯಲ್ಲಿ ಸಂಧಿಸಿ, ತನ್ನ ದುರವಸ್ಥೆಯನ್ನು ಹೇಳಿಕೊಂಡು, ರಾಜ್ಯಭಾರವನ್ನು ದುಶ್ಶಾಸನನಿಗೆ ಒಪ್ಪಿಸಿ, ಪ್ರಾಯೋಪವೇಶ ಮಾಡಿದ್ದು. ಕರ್ಣ ಎಷ್ಟು ವಿಧದಿಂದ ಹೇಳಿದರೂ ಕೇಳದೆ ದುರ್ಯೋಧನ ಪ್ರಾಯೋಪ ವೇಶಮಾಡಿರಲಾಗಿ ಪಾತಾಳವಾಸಿಗಳಾದ ದೈತ್ಯರು ದುರ್ದೇವತೆಯನ್ನು ಸೃಷ್ಟಿಮಾಡಿ, ದುರ್ಯೋಧನನನ್ನು ಪಾತಾಳಕ್ಕೆ ಬರಮಾಡಿಕೊಂಡದ್ದು. ದುರ್ಯೋಧನನಿಗೆ ಅಲ್ಲಿದ್ದ ದೈತ್ಯ ರೆಲ್ಲರೂ ಅನೇಕ ಕಾರಣಗಳನ್ನು ಹೇಳಿ, ಅವನನ್ನು ಮರಳಿ ಮುಂಚಿನಲ್ಲಿಗೆ ಕಳುಹಿದ್ದು.

ದುರ್ಯೋಧನ ಹಸ್ತಿನಾವತಿಗೆ ಬಂದದ್ದು [ವನ. ೨೪೮-೨೫೩]. ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವ ಹಾಗೆ ದುರ್ಯೋಧನನಿಗೆ ಬೋಧಿಸಿದ್ದು ಕರ್ಣನನ್ನು ದಿಗ್ವಿಜಯಕ್ಕೆ ಕಳುಹಿ, ಸಕಲ ರಾಜರನ್ನು ವಶಮಾಡಿಕೊಂಡದ್ದು [ವನ ೨೫೪-೨೫೫]. ದುರ್ಯೋಧನ ರಾಜಸೂಯಯಾಗಕ್ಕೆ ಸಂಕಲ್ಪಿಸಿದ್ದು. ಋತ್ವಿಜರು ರಾಜಸೂಯವನ್ನು ಮಾಡ ಬೇಡವೆಂದು ಹೇಳಿ, ಆತನ ಮೂಲಕ ವೈಷ್ಣವಯಾಗವನ್ನು ಮಾಡಿಸಿದ್ದು [ವನ ೨೫೬-೨೫೭] ಒಮ್ಮೆ ದುರ್ವಾಸ ಮುನಿ ತನ್ನ ಶಿಷ್ಯರೊಂದಿಗೆ ದುರ್ಯೋಧನನಲ್ಲಿಗೆ ಬಂದದ್ದು ದುರ್ಯೋಧನ ಆತನನ್ನು ಶುಶ್ರೂಷೆಯಿಂದ ವಶಪಡಿಸಿಕೊಂಡು, '' ದ್ರೌಪದಿಯ ಭೋಜನಾನಂತರ ಪಾಂಡವರಲ್ಲಿಗೆ ಹೋಗಿ, ಭೋಜನವನ್ನು ಬೇಡಿ, ಅವರಿಗೆ ಶಾಪಕೊಟ್ಟು ಬರಬೇಕು '' ಎಂಬುದಾಗಿ ದುರ್ವಾಸನನ್ನು ಬೇಡಿ, ಆತನಿಂದ ಅಭಯವನ್ನು ಪಡೆದದ್ದು [ವನ ೨೬೪-೨೬೫]. ಪಾಂಡವರು ಅಜ್ಞಾತವಾಸ ಮಾಡುತ್ತಿದ್ದಾಗ ಅವರನ್ನು ಕಂಡುಹಿಡಿದು, ಮರಳಿ ಅವರನ್ನು ಕಾಡುಪಾಲು ಮಾಡಬೇಕೆಂಬ ದುರುದ್ದೇಶದಿಂದ ದುರ್ಯೋಧನ ಚಾರರನ್ನು ಕಳುಹಿದ್ದು ಚಾರರು ಹಿಂದಿರುಗಿ ಬಂದು, ಪಾಂಡವರ ಸುಳಿವೇ ಇಲ್ಲವೆಂದು ಹೇಳಿ, ಕೀಚಕವಧೆಯ ವೃತ್ತಾಂತವನ್ನು ತಿಳುಹಿದ್ದು ದುರ್ಯೋಧನ ಪಾಂಡವರನ್ನು ಕಂಡುಹಿಡಿಯಲು ಯೋಚಿಸಿದ್ದು ಭೀಷ್ಮದ್ರೋಣರು ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವುದಾಗಿ ದುರ್ಯೋಧನನಿಗೆ ಬೋಧಿಸಿದ್ದು [ವಿರಾ. ೨೯-೩೧]. ಕೀಚಕವಧೆ ಭೀಮನ ಕೆಲಸವೆಂದು ಊಹಿಸಿ, ಭೀಷ್ಮಾದಿಗಳ ಅನುಮತಿಯಿಂದ ತ್ರಿಗರ್ತದೇಶಾಧಿಪನಾದ ಸುಶರ್ಮನನ್ನು ವಿರಾಟನ ಮೇಲೆ ಯುದ್ಧಕ್ಕೆ ಕಳುಹಿದ್ದು [ವಿರಾ. ೩೨] ದುರ್ಯೋಧನ ಭೀಷ್ಮಾದಿ ಗಳೊಡನೆ ಹೊರಟು ವಿರಾಟ ನಗರಿಯ ಉತ್ತರ ಭಾಗದಲ್ಲಿ ಗೋವುಗಳನ್ನು ತಡೆದದ್ದು [ವಿರಾ. ೩೭] ಅಶ್ವತ್ಥಾಮ ದುರ್ಯೋಧನನನ್ನು ನಿಂದಿಸಿದ್ದು [ವಿರಾ. ೫೦]. ಭೀಷ್ಮ ಪಾಂಡವರ ಅಜ್ಞಾತವಾಸದ ಗಡು ಮೀರಿಹೋಯಿತೆಂಬುದಾಗಿ ದುರ್ಯೋಧನನಿಗೆ ವಿವರಿಸಿ, ವಿರಾಟನ ಗೋವುಗಳನ್ನು ಹೊಡೆದುಕೊಂಡುಹೋಗುವಂತೆ ದುರ್ಯೋಧನನಿಗೆ ಹೇಳಿಕಳುಹಿ, ತಾನು ಸೇನಾಸಮೇತನಾಗಿ ಯುದ್ಧಕ್ಕೆ ನಿಂತದ್ದು. ದುರ್ಯೋಧನ ಗೋವುಗಳೊಂದಿಗೆ ಹಸ್ತಿನಾವತಿಗೆ ಹೊರಟದ್ದು [ವಿರಾ. ೫೨] ದುರ್ಯೋಧನ ಸೈನ್ಯದಲ್ಲಿ ಕಾಣಲಿಲ್ಲವಾಗಿ ಅರ್ಜುನ, ಅವನನ್ನು ಇದಿರಿಸಿ ಹಿಂದಿರುಗಿಸಿದ್ದು [ವಿರಾ. ೫೫, ೬೭] ದುರ್ಯೋಧನ ಅರ್ಜುನನಿಂದ ಸೋತದ್ದು [ವಿರಾ. ೬೬] ಭೀಷ್ಮಾದಿಗಳು ದುರ್ಯೋಧನನನ್ನು ಮುತ್ತಿಕೊಂಡು ಕಾಪಾಡಿದ್ದು [ವಿರಾ ೬೭] ದುರ್ಯೋಧನಾದಿಗಳು ಅರ್ಜುನನ ಸಮ್ಮೋಹನಾಸ್ತ್ರದಿಂದ ಮೈಮರೆತು ಬಿದ್ದಿದ್ದಾಗ ಉತ್ತರಕುಮಾರ ಅವರ ವಸ್ತ್ರಗಳನ್ನೆಲ್ಲ ಕಸುಗೊಂಡದ್ದು [ವಿರಾ. ೬೭]. '' ಪಾಂಡವರು ತಮ್ಮ ಗಡು ಮುಗಿಯು ವುದರೊಳಗಾಗಿಯೇ ತಮ್ಮ ಕಣ್ಣಿಗೆ ಬಿದ್ದ ಕಾರಣ ಮರಳಿ ಹದಿಮೂರು ವರ್ಷ ವನವಾಸ

ವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡಬೇಕು " ಎಂಬುದಾಗಿ ದುರ್ಯೋಧನ ಯುಧಿಷ್ಠಿರನಿಗೆ ಹೇಳಿಕಳುಹಿದ್ದು [ವಿರಾ. ೭೭]. ದುರ್ಯೋಧನ ತನಗೆ ಯುದ್ಧದಲ್ಲಿ ಸಹಾಯಮಾಡಬೇಕೆಂದು ಕೇಳುವುದಕ್ಕಾಗಿ ಕೃಷ್ಣನಲ್ಲಿಗೆ ಹೋಗಿದ್ದ. ಅದೇ ಕಾಲದಲ್ಲಿ ಅರ್ಜುನನೂ ಅಲ್ಲಿಗೆ ಬಂದ. ಇಬ್ಬರೂ ಏಕಕಾಲದಲ್ಲಿ ಕೃಷ್ಣನ ಮನೆಯನ್ನು ಹೊಕ್ಕರು. ಕೃಷ್ಣ ಮೊದಲು ಅರ್ಜುನನನ್ನು ಕೇಳಿದ. ಅರ್ಜುನ ಕೃಷ್ಣನನ್ನು ವರಿಸಿದ. ದುರ್ಯೋಧನ ಯಾದವಸೇನೆಯನ್ನು ತೆಗೆದುಕೊಂಡು ಕೃತವರ್ಮನೊಂದಿಗೆ ಹಸ್ತಿನಾವತಿಗೆ ಬಂದ [ಉದ್ಯೋ ೭]. ಪಾಂಡವರ ಸಹಾಯಾರ್ಥವಾಗಿ ಬರುತ್ತಿದ್ದ ಶಲ್ಯನಿಗೆ ದುರ್ಯೋಧನ, ದಾರಿಯಲ್ಲಿ ರಹಸ್ಯವಾಗಿ ಸೈನ್ಯದ ಆಹಾರಾದಿಗಳಿಗೆ ಒತ್ತಾಸೆಮಾಡಿ, ಶಲ್ಯನನ್ನು ತನ್ನ ಪಕ್ಷಕ್ಕೆ ಸೇರಿಸಿಕೊಂಡದ್ದು [ಉ ೮] ದುರ್ಯೋಧನ ಸಂಜಯನ ಮೂಲಕ ಪಾಂಡವರ ಅಭಿಪ್ರಾಯವನ್ನು ತಿಳಿದದ್ದು [ಉ ೩೧-೩೨]. ದುರ್ಯೋಧನ ಬೇಗನೆ ಪದಚ್ಯುತನಾಗುವನೆಂದು ವಿದುರ ಹೇಳಿದ್ದು [ಉ ೩೮]. ಕೃಷ್ಣಾರ್ಜುನರು ನಾರಾಯಣ ನರಾಂಶಸಂಭೂತರೆಂದು ಭೀಷ್ಮ ದುರ್ಯೋಧನನಿಗೆ ತಿಳಿಸಿದ್ದು [ಉದ್ಯೋ. ೪೯]. ದುರ್ಯೋಧನ ತನ್ನ ಮತ್ತು ಪಾಂಡವರ ಸಾಮರ್ಥ್ಯವನ್ನು ಹೋಲಿಸಿ, ತಾನೇ ಬಲಾಧಿಕನೆಂದು ಹೇಳಿ ಧೃತರಾಷ್ಟ್ರನನ್ನು ಸಮಾಧಾನಪಡಿಸಿದ್ದು. ಸಂಜಯನ ಮೂಲಕ ಪಾಂಡವರ ಸಾಮರ್ಥ್ಯವನ್ನು ತಿಳಿದು, ತನ್ನ ಪಕ್ಷದವರ ಶಕ್ತಿಸಾಮರ್ಥ್ಯಗಳನ್ನು ವಿವರಿಸಿದ್ದು [ಉದ್ಯೋ ೫೫-೫೭] ಭೀಷ್ಮಾದಿಗಳ ಸಹಾಯವಿಲ್ಲದೆಯೇ ಕರ್ಣ, ದುಶ್ಶಾಸನರ ಸಹಾಯದಿಂದಲೇ ಪಾಂಡವರನ್ನು ಕೊಲ್ಲುವುದಾಗಿ ದುರ್ಯೋಧನ ಪ್ರತಿಜ್ಞೆ ಮಾಡಿದ್ದು ಧೃತರಾಷ್ಟ್ರನನ್ನು ಅವನು ನಿಂದಿಸಿದ್ದು [ಉದ್ಯೋ. ೫೮-೬೩] " ಪಾಂಡವರು ದೇವಾಂಶಸಂಭೂತರು. ಅವರಿಗೆ ದೈವಬಲವಿದೆ. ಅವರೊಡನೆ ದ್ವೇಷ ತಕ್ಕುದಲ್ಲ " ಎಂದು ಹೇಳಿದ ಧೃತರಾಷ್ಟ್ರನ ಮಾತನ್ನು ಅಲ್ಲಗಳೆದು " ಪಾಂಡವರು ದೈವಬಲಸಂಪನ್ನರಾಗಿದ್ದುದೇ ನಿಜವಾದರೆ ಇಂದಿನವರೆಗೆ ಯಾವ ದೇವರೂ ಏಕೆ ಅವರಿಗೆ ಸಹಾಯಮಾಡಲಿಲ್ಲ ? " ಎಂದು ಮುಂತಾಗಿ ಹೀಯಾಳಿಸಿ ಮಾತನಾಡಿ, ತಾನು ಜಲಸ್ತಂಭನ ಮುಂತಾದ ಮಹಿಮೆಯುಳ್ಳವನೆಂದು ದುರ್ಯೋಧನ ಕೊಚ್ಚಿಕೊಂಡದ್ದು [ಉದ್ಯೋ ೬೦, ೬೧] ಅರ್ಜುನ ಕೃಷ್ಣನ ಪ್ರೇಮಪಾತ್ರನಾದುದರಿಂದ ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವುದೇ ಯುಕ್ತವೆಂಬುದಾಗಿ ಧೃತರಾಷ್ಟ್ರ ದುರ್ಯೋಧನನಿಗೆ ತಿಳಿಯಹೇಳಿದ್ದು [ಉದ್ಯೋ. ೬೫] ಧೃತರಾಷ್ಟ್ರನ ಮಾತನ್ನು ಕೇಳಿ ಬೇಸರಪಟ್ಟು ದುರ್ಯೋಧನನು ರಾಜಸಭೆಯಿಂದ ಎದ್ದುಹೋದದ್ದು [ಉದ್ಯೋ ೬೬]. ದುರ್ಯೋಧನನು ದಂಡಕ್ಕೆ ಯೋಗ್ಯನೇ ಹೊರತು, ಸಂಧಿಗೆ ತಕ್ಕವನಲ್ಲವೆಂಬುದಾಗಿ ಕೃಷ್ಣನು ಹೇಳಿದ್ದು [ಉದ್ಯೋ. ೭೮]. ಶ್ರೀ ಕೃಷ್ಣ ಬರುವ ಸುದ್ದಿಯನ್ನು ಕೇಳಿ ಸಂತುಷ್ಟನಾದ ಧೃತರಾಷ್ಟ್ರನ ಅಪ್ಪಣೆ ಮೇರೆಗೆ ದುರ್ಯೋಧನ ದಾರಿ

ಯುದ್ಧಕ್ಕೂ ಅಲ್ಲಲ್ಲಿ ಸಭೆಗಳನ್ನು ಏರ್ಪಡಿಸಿದ್ದು [ಉ. ೮೬]. ಧೃತರಾಷ್ಟ್ರ ಕೃಷ್ಣನಿಗೆ ಆನೆ, ಕುದುರೆ ಮುಂತಾದ ಕಾಣಿಕೆಗಳನ್ನು ಅರ್ಪಿಸಬೇಕೆಂದು ವಿದುರನ ಮೂಲಕ ದುರ್ಯೋಧನನಿಗೆ ಹೇಳಿಕಳುಹಿದ್ದು. ದುರ್ಯೋಧನ ಅದಕ್ಕೆ ಸಮ್ಮತಿಸದೆ, ಕೃಷ್ಣನನ್ನು ಕಟ್ಟಿಹಾಕಬೇಕೆಂದು ಯೋಚಿಸಿದ್ದು. ಆ ಮಾತನ್ನು ಕೇಳಿ ಭೀಷ್ಮ ದುರ್ಯೋಧನನನ್ನು ನಿಂದಿಸಿ ಸಭೆಯಿಂದ ಎದ್ದುಹೋದದ್ದು [ಉದ್ಯೋ ೮೮]. ಕೃಷ್ಣ ದುರ್ಯೋಧನನ ಮನೆಗೆ ಬಂದದ್ದು ದುರ್ಯೋಧನ ಆತನನ್ನು ಸತ್ಕರಿಸಿ ಭೋಜನಕ್ಕೆ ಕರೆದದ್ದು ಕೃಷ್ಣ ಅದಕ್ಕೆ ಸಮ್ಮತಿಸದಿರಲಾಗಿ, ಅಂತಹ ಅನಾದರಣೆಗೆ ಕಾರಣವೇನೆಂದು ದುರ್ಯೋಧನ ಕೃಷ್ಣನನ್ನು ಪ್ರಶ್ನೆಮಾಡಿ ತಿಳಿದದ್ದು ಕೃಷ್ಣನ ಪ್ರತ್ಯುತ್ತರ [ಉದ್ಯೋ. ೯೧]. ಶಕುನಿ ದುರ್ಯೋಧನರು ಮಾತನಾಡಿಕೊಂಡು ಕೃಷ್ಣನನ್ನು ಸಭೆಗೆ ಬರಮಾಡಿಕೊಂಡದ್ದು [ಉದ್ಯೋ ೯೪]. ದುರ್ಯೋಧನನ ಕೆಚ್ಚನ್ನು ಇಳಿಸುವುದಕ್ಕಾಗಿ ಮಾತಲಿಯ ವೃತ್ತಾಂತವನ್ನು ಹೇಳಿದ್ದು [ಉದ್ಯೋ ೯೭]. ನಾರದ ಪಾಂಡವರೊಂದಿಗೆ ಸಂಧಿ ಮಾಡಿಕೊಳ್ಳುವಂತೆ ದುರ್ಯೋಧನನಿಗೆ ತಿಳಿಯಹೇಳಿದ್ದು [ಉದ್ಯೋ ೧೨೩] ದುರ್ಯೋಧನನಿಗೆ ಬುದ್ಧಿಹೇಳುವಹಾಗೆ ಧೃತರಾಷ್ಟ್ರ ಕೃಷ್ಣನನ್ನು ಪ್ರಾರ್ಥಿಸಿದ್ದು. ಕೃಷ್ಣ ದುರ್ಯೋಧನನಿಗೆ ವಿವೇಕ ಹೇಳಿದ್ದು ಭೀಷ್ಮಾದಿಗಳು ಕೃಷ್ಣನ ಮಾತನ್ನು ಅನುಮೋದಿಸಿ, ದುರ್ಯೋಧನನನ್ನು ಪ್ರೋತ್ಸಾಹಗೊಳಿಸಿದ್ದು [ಉ ೧೨೪-೧೨೬]. ದುರ್ಯೋಧನ ತಾನು ನಿರಪರಾಧಿಯೆಂತಲೂ, ತಾನು ಬದುಕಿರುವವರೆಗೂ ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನಾದರೂ ಕೊಡಲಾರೆನೆಂದೂ ಹೇಳಿದ್ದು [ಉ. ೧೨೭] ದುರ್ಯೋಧನ ಮಾಡಿದ ದುರ್ನೀತಿಗಳನ್ನೆಲ್ಲ ಕೃಷ್ಣನು ಎತ್ತಿ ಆಡಿದ್ದು. ದುರ್ಯೋಧನ ಸಿಟ್ಟಿನಿಂದ ಸಭೆಯನ್ನು ಬಿಟ್ಟುಹೋದದ್ದು. '' ಕುಲವನ್ನು ಕಾಪಾಡಿಕೊಳ್ಳಬೇಕಾದರೆ ದುರ್ಯೋಧನನನ್ನು ಬಿಡುವುದೇ ಲೇಸು '' ಎಂಬುದಾಗಿ ಕೃಷ್ಣ ಧೃತರಾಷ್ಟ್ರನಿಗೆ ತಿಳಿಸಿದ್ದು ಗಾಂಧಾರಿ ದುರ್ಯೋಧನನನ್ನು ಮರಳಿ ಸಭೆಗೆ ಕರೆತಂದು, ನೀತಿಯನ್ನು ಹೇಳಿ ಪಾಂಡವರೊಂದಿಗೆ ಸಂಧಿಮಾಡಿಕೊಳ್ಳ ಹೇಳಿದ್ದು [ಉ. ೧೨೮-೧೨೯]. ದುರ್ಯೋಧನ ಜನನಿಯ ಮಾತನ್ನೂ ಲೆಕ್ಕಿಸದೆ, ಕರ್ಣ, ಶಕುನಿಗಳೊಂದಿಗೆ ಯೋಚಿಸಿ, ಕೃಷ್ಣನನ್ನು ಕಟ್ಟಿಹಾಕುವ ಯೋಚನೆ ಮಾಡಿದ್ದು. ಅದನ್ನು ತಿಳಿದು ಧೃತರಾಷ್ಟ್ರ ಮರಳಿ ದುರ್ಯೋಧನನಿಗೆ ತಿಳಿಯಹೇಳಿದ್ದು. ವಿಶ್ವರೂಪಪ್ರದರ್ಶನ [ಉ ೧೩೦-೧೩೧]. ಭೀಷ್ಮದ್ರೋಣರು ಮರಳಿ ದುರ್ಯೋಧನನ ಬಳಿಗೆ ಬಂದು ಪಾಂಡವರೊಂದಿಗೆ ಸಂಧಿಮಾಡಿಕೊಳ್ಳಹೇಳಿದ್ದು [ಉ. ೧೩೮]. ದುರ್ಯೋಧನ ಆಗಲೂ ತನ್ನ ಹಠವನ್ನು ಬಿಡದಿದ್ದುದಕ್ಕಾಗಿ, ಭೀಷ್ಮ ದ್ರೋಣರು ತಾವು ಅರ್ಜುನನೊಂದಿಗೆ ಯುದ್ಧಮಾಡಬೇಕಾಗಿ ಬಂದುದನ್ನು ಕುರಿತು ಚಿಂತಿಸಿದ್ದು. ದ್ರೋಣ ಮತ್ತೊಮ್ಮೆ ದುರ್ಯೋಧನನಿಗೆ ಶಾಂತಿಯನ್ನು ವಿವರಿಸಿದ್ದು

[ಉ. ೧೩೯]. ದುರ್ಯೋಧನನ ಮಾತನ್ನು ಕೃಷ್ಣನು ಪಾಂಡವರಿಗೆ ಹೇಳಿದ್ದು ಉ. ೧೫೦]. ಕರ್ಣಾದಿಗಳ ಮೂಲಕ ಯುದ್ಧಸಾಮಗ್ರಿಗಳನ್ನು ಅಣಿಮಾಡಿಸಿದ್ದು [ಉ. ೧೫೩]. ದುರ್ಯೋಧನ ತನ್ನ ಸೇನೆಯನ್ನು ಮೂರು ಭಾಗವಾಗಿ ವಿಂಗಡಿಸಿದ್ದು. ಕೃಪಾದಿಗಳನ್ನು ತನ್ನ ಹನ್ನೊಂದು ಅಕ್ಷೌಹಿಣೀ ಸೇನೆಗೂ ಬೇರೆಬೇರೆಯಾಗಿ ಸೇನಾ ಪತಿಗಳನ್ನಾಗಿ ನಿಯಮಿಸಿದ್ದು [ಉ. ೧೫೫] ದುರ್ಯೋಧನ ಭೀಷ್ಮಾಚಾರ್ಯರನ್ನು ಬೇಡಿ ಆತನಿಗೆ ಸಕಲ ಸೇನಾಧಿಪತ್ಯದಲ್ಲಿ ಪಟ್ಟಗಟ್ಟಿದ್ದು [ಉ ೧೫೭] ದುರ್ಯೋಧನ ಉಲೂಕನನ್ನು ಪಾಂಡವರಲ್ಲಿಗೆ ರಾಯಭಾರಿಯಾಗಿ ಕಳುಹಿದ್ದು. ದುರ್ಯೋಧನನ ಅಪ್ಪಣೆ ಮೇರೆಗೆ ಕರ್ಣ ಯುದ್ಧವಾರ್ತೆಯನ್ನು ಡಂಗುರ ಹೊಡಿಸಿದ್ದು [ಉ ೧೬೦-೧೬೩] ದುರ್ಯೋಧನ ತನ್ನ ಸೇನೆಯಲ್ಲಿ ರಥಾತಿರಥರನ್ನು ಲೆಕ್ಕಿಸಿದ್ದು ಭೀಷ್ಮ ಕರ್ಣನನ್ನು ಅರ್ಧರಥನನ್ನಾಗಿ ಲೆಕ್ಕಿಸಲು ಕರ್ಣ ಕೋಪಿಸಿ, ಭೀಷ್ಮನನ್ನು ನಿಂದಿಸಿದ್ದು. ದುರ್ಯೋಧನ ಆತನನ್ನು ಬೇಡಿಕೊಂಡು, ಪಾಂಡವಸೇನೆಯಲ್ಲಿ ರಥಾತಿರಥರನ್ನು ಲೆಕ್ಕಿಸುವಂತೆ ಹೇಳಿದ್ದು [ಉ. ೧೬೬-೧೭೧]. ದುರ್ಯೋಧನ ಭೀಷ್ಮನ ಮೂಲಕ ಶಿಖಂಡಿಯ ವೃತ್ತಾಂತವನ್ನು ತಿಳಿದದ್ದು [ಉ. ೧೭೭] "ಯಾರು ಯಾರು ಎಷ್ಟು ಎಷ್ಟು ದಿನಗಳಲ್ಲಿ ಪಾಂಡವ ಸೇನೆಯನ್ನು ನಿರ್ಮೂಲಗೊಳಿಸಬಲ್ಲರು ?" ಎಂಬುದಾಗಿ ದುರ್ಯೋಧನ ಭೀಷ್ಮಾದಿಗಳನ್ನು ಪ್ರಶ್ನೆಮಾಡಿ ತಿಳಿದದ್ದು [ಉ. ೧೯೩]. ದುರ್ಯೋಧನ ಭೀಷ್ಮನ ಮೂಲಕ ಶ್ರೀ ಕೃಷ್ಣನ ಮಹಿಮೆಯನ್ನು ಕೇಳಿದ್ದು ಪಾಂಡವರು ಕೃಷ್ಣನನ್ನು ಆಶ್ರಯಿಸಿರುವರಾಗಿ ಅವರಿಗೇ ಜಯ ದಿಟವೆಂಬುದಾಗಿ ಭೀಷ್ಮ ದುರ್ಯೋಧನನಿಗೆ ಹೇಳಿದ್ದು ಭೀಷ್ಮ ಕೃಷ್ಣನ ಮಹಿಮೆಯನ್ನು ವಿವರಿಸಿ, ಪಾಂಡವರ ಸಂಗಡ ಸಂಧಿಮಾಡಿಕೊಳ್ಳುವಂತೆ ದುರ್ಯೋಧನನಿಗೆ ಹೇಳಿದ್ದು [ಭೀ. ೬೮]. ತನ್ನ ಸೈನ್ಯವೆಲ್ಲವೂ ಕ್ರಮವಾಗಿ ಕ್ಷೀಣವಾಗುತ್ತ ಬಂದು, ಪಾಂಡವರಿಗೇ ಜಯವಾಗುತ್ತಿರುವುದನ್ನು ಕಂಡು ದುರ್ಯೋಧನ ಭೀಷ್ಮನಲ್ಲಿ ಮೊರೆಯಿಟ್ಟದ್ದು. ಭೀಷ್ಮ ಆತನನ್ನು ಸಂತವಿಸಿದ್ದು [ಭೀ ೮೦, ೮೧] ದುರ್ಯೋಧನ ಘಟೋತ್ಕಚನೊಂದಿಗೆ ಯುದ್ಧಮಾಡಿದ್ದು [ಭೀ. ೯೧, ೯೩]. ಭೀಷ್ಮ ಶಸ್ತ್ರತ್ಯಾಗಮಾಡಿದಲ್ಲಿ ತಾನು ಪಾಂಡವರನ್ನು ಗೆಲ್ಲುವೆನೆಂಬ ಕರ್ಣನ ಮಾತನ್ನು ಕೇಳಿ, ದುರ್ಯೋಧನ ಎಂಟನೆಯ ರಾತ್ರಿ ಭೀಷ್ಮನಲ್ಲಿಗೆ ಹೋಗಿ, ಕರ್ಣನಿಗೆ ಸೇನಾಧಿಕಾರವನ್ನು ಒಪ್ಪಿಸುವಂತೆ ಹೇಳಿದ್ದು. ಭೀಷ್ಮ ದುರ್ಯೋಧನನನ್ನು ಸಂತವಿಸಿದ್ದು [ಭೀ. ೯೭, ೯೮] ಭೀಷ್ಮ ದುರ್ಯೋಧನರ ಸಂವಾದ [ಭೀ. ೧೧೯]. ಭೀಷ್ಮ ದುರ್ಯೋಧನನಿಗೆ ಅರ್ಜುನನ ಪರಾಕ್ರಮವನ್ನು ಬಣ್ಣಿಸಿ ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವಂತೆ ದುರ್ಯೋಧನನಿಗೆ ತಿಳಿಯಹೇಳಿದ್ದು [ಭೀ. ೧೨೧]. ಕರ್ಣ ದುರ್ಯೋಧನನಿಗೆ ಪಾಂಡವರನ್ನು ಕೊಲ್ಲುವುದಾಗಿ ಭಾಷೆಯಿತ್ತು ಯುದ್ಧಕ್ಕೆ ಹೊರಟದ್ದು [ದ್ರೋ. ೩]. ದುರ್ಯೋಧನ ಕರ್ಣನ ಅನುಮತಿಯಿಂದ ದ್ರೋಣನಿಗೆ

ಸೇನಾಧಿಕಾರದಲ್ಲಿ ಪಟ್ಟಗಟ್ಟಿದ್ದು [ದ್ರೋ. ೫-೭] ಯುಧಿಷ್ಠಿರನನ್ನು ತನಗೆ ಜೀವದೊಂದಿಗೆ ಹಿಡಿತಂದುಕೊಡಬೇಕೆಂಬುದಾಗಿ ದುರ್ಯೋಧನ ದ್ರೋಣನನ್ನು ಬೇಡಿದ್ದು ದ್ರೋಣ ಅಂತೆಯೇ ಆಗಲೆಂದು ಅಭಯವಿತ್ತದ್ದು. ದುರ್ಯೋಧನ ಆ ವಾರ್ತೆಯನ್ನು ಪ್ರಕಟಗೊಳಿಸಿದ್ದು [ದ್ರೋ ೧೭]. ಯುಧಿಷ್ಠಿರನನ್ನು ಹಿಡಿಯಲು ಪ್ರಯತ್ನಿಸಿದ ದ್ರೋಣನ ಸಾಹಸ ವ್ಯರ್ಥವಾದದ್ದು ದುರ್ಯೋಧನ ದ್ರೋಣನಲ್ಲಿಗೆ ಹೋಗಿ ಗೋಳಾಡಿದ್ದು. ಅದಕ್ಕೆ ಪ್ರತಿಯಾಗಿ ಪಾಂಡವ ಸೇನೆಯಲ್ಲಿ ಯಾವ ನಾದರೊಬ್ಬ ಮಹಾರಥನನ್ನು ಕೊಲ್ಲುವೆನೆಂದು ದ್ರೋಣನು ಪ್ರತಿಜ್ಞೆಮಾಡಿದ್ದು [ದ್ರೋ. ೩೩]. ಅರ್ಜುನನ ಪ್ರತಿಜ್ಞೆಯನ್ನು ಕೇಳಿ ಹೆದರಿ, ಓಡಿಹೋಗಬೇಕೆಂದಿದ್ದ ಜಯದ್ರಥನನ್ನು ದುರ್ಯೋಧನ ಸಮಾಧಾನಪಡಿಸಿದ್ದು [ದ್ರೋ ೭೪] ಜಯದ್ರಥನನ್ನು ಕೊಲ್ಲುವೆನೆಂಬ ಅರ್ಜುನನ ಪ್ರತಿಜ್ಞೆಯಿಂದ ಹೆದರಿದ ದುರ್ಯೋಧನ ದ್ರೋಣನಲ್ಲಿಗೆ ಹೋಗಿ, ಆತನನ್ನು ನಾನಾಪರಿಯಿಂದ ಚುಚ್ಚುಮಾತುಗಳನ್ನಾಡಿ ನೋಯಿಸಿದ್ದು. ದ್ರೋಣ ದುರ್ಯೋಧನನಿಗೆ ಮಂತ್ರಕವಚವನ್ನು ಕೊಟ್ಟು ಅರ್ಜುನನೊಂದಿಗೆ ಯುದ್ಧಕ್ಕೆ ಕಳುಹಿಸಿದ್ದು [ದ್ರೋ ೯೪] ಅರ್ಜುನ ದುರ್ಯೋಧನರ ವೀರ ವಾದ ಮತ್ತು ಯುದ್ಧ ದುರ್ಯೋಧನ ಸೋತದ್ದು [ದ್ರೋ. ೧೦೩] ದುರ್ಯೋಧನ ಸಾತ್ಯಕಿಯಿಂದ ಸೋತದ್ದು [ದ್ರೋ. ೧೧೫] ದ್ರೋಣ ದುರ್ಯೋಧನರ ಸಂವಾದ [ದ್ರೋ. ೧೩೦]. ಕರ್ಣ ದುರ್ಯೋಧನರ ಸಂವಾದ [ದ್ರೋ ೧೪೬] ಸೈಂಧವ ವಧೆಯಿಂದ ದುಃಖಿತನಾದ ದುರ್ಯೋಧನ ದ್ರೋಣನಲ್ಲಿ ಗೋಳಾಡಿದ್ದು [ದ್ರೋ. ೧೫೭]. ದ್ರೋಣ ಪಾಂಡವಪಕ್ಷಪಾತಿಯಾದುದರಿಂದ ಸೈಂಧವ ವಧೆಯನ್ನು ಮನಃಪೂರ್ವಕ ವಾಗಿಯೇ ಉಪೇಕ್ಷಿಸಿದನೆಂಬುದಾಗಿ ದುರ್ಯೋಧನ ಕರ್ಣನಲ್ಲಿ ದೂರಿದ್ದು [ದ್ರೋ. ೧೫೩] ದುರ್ಯೋಧನ ಯುಧಿಷ್ಠಿರನೊಂದಿಗೆ ಯುದ್ಧಮಾಡಿ ಸೋತದ್ದು [ದ್ರೋ. ೧೫೪] ಕರ್ಣನಿಗೂ ಕೃಪನಿಗೂ ವಾಕ್ಕಲಹವುಂಟಾಗಿ, ಅದು ವಿಪರ್ಯಾಸಕ್ಕೆ ಬಂದುದನ್ನು ಕಂಡು ದುರ್ಯೋಧನ ಅವರಿಬ್ಬರನ್ನೂ ಶಾಂತಗೊಳಿಸಿ, ಅಶ್ವತ್ಥಾಮನನ್ನು ಸಮಾಧಾನ ಪಡಿಸಿದ್ದು [ದ್ರೋ ೧೬೦] ಹದಿನಾಲ್ಕನೆಯ ದಿನ ರಾತ್ರಿ ಯುದ್ಧದಲ್ಲಿ ಘಟೋತ್ಕಚ ವಧೆಯ ತರುವಾಯ ದುರ್ಯೋಧನ ದ್ರೋಣನ ಬಳಿಗೆ ಹೋಗಿ ಆತನನ್ನು ಹೀಯಾಳಿಸಿದ್ದು. ದ್ರೋಣ ದುರ್ಯೋಧನನನ್ನು ಅಲ್ಲಗಳೆದದ್ದು [ದ್ರೋ ೧೮೬]. ದುರ್ಯೋಧನ ನಕುಲನೊಂದಿಗೆ ಯುದ್ಧಮಾಡಿ ಸೋತದ್ದು [ದ್ರೋ. ೧೮೮]. ದುರ್ಯೋಧನ ದ್ರೋಣವಧೆಯನ್ನು ಕೃಪನ ಮೂಲಕ ಅಶ್ವತ್ಥಾಮನಿಗೆ ತಿಳಿಸಿದ್ದು [ದ್ರೋ ೧೯೪]. ದ್ರೋಣವಧಾನಂತರ ಅಶ್ವತ್ಥಾಮನ ಮಾತಿನಂತೆಯೇ ಕರ್ಣನಿಗೆ ಸೇನಾಪತ್ಯದಲ್ಲಿ ಪಟ್ಟಗಟ್ಟಿದ್ದು [ಕರ್ಣ. ೭] ದುರ್ಯೋಧನ ಯುಧಿಷ್ಠಿರನಿಂದ ಸೋತದ್ದು [ಕರ್ಣ. ೨೦]. ದುರ್ಯೋಧನ ಶಲ್ಯನನ್ನು ಕರ್ಣನಿಗೆ ಸಾರಥಿಯಾಗುವಂತೆ

ಬೇಡಿದ್ದು. ತ್ರಿಪುರದಹನ ಕಥೆಯನ್ನು ವರ್ಣಿಸಿದ್ದು [ಕರ್ಣ. ೨೭-೨೯]. ಕರ್ಣನಿಗೂ ಶಲ್ಯನಿಗೂ ವಾಕ್ಕಲಹ ಬಂದಾಗ ದುರ್ಯೋಧನ ಅವರಿಬ್ಬರನ್ನೂ ಬೇಡಿ, ಸಂತವಿಸಿದ್ದು [ಕರ್ಣ ೩೮]. ಅಶ್ವತ್ಥಾಮ ದುರ್ಯೋಧನನಿಗೆ ತಿಳಿಯಹೇಳಿದ್ದು. ದುರ್ಯೋಧನ ಅದನ್ನು ಲೆಕ್ಕಿಸದೆ ಯುದ್ಧಕ್ಕೆ ಹೊರಟದ್ದು [ಕರ್ಣ. ೬೪]. ಕರ್ಣವಧೆಯಿಂದ ದುಃಖಿತನಾದ ದುರ್ಯೋಧನನನ್ನು ಶಲ್ಯ ಸಂತವಿಸಿದ್ದು [ಕರ್ಣ. ೯೯] ದುರ್ಯೋಧನ ದುಃಖಭರದಿಂದ ಸೇನೆಯನ್ನು ಹಿಂದಕ್ಕೆ ತಿರುಗಿಸಿ, ಶಿಬಿರವನ್ನು ಹೊಕ್ಕದ್ದು [ಕರ್ಣ ೯೯, ೧೦೧]. ಕರ್ಣ ವಧಾನಂತರ ಸೇನಾಧಿಪತ್ಯದಲ್ಲಿ ಶಲ್ಯನಿಗೆ ಪಟ್ಟಗಟ್ಟಿ, ಆತನನ್ನು ಯುದ್ಧಕ್ಕೆ ಪ್ರೋತ್ಸಾಹಗೊಳಿಸಿ ಕಳುಹಿದ್ದು [ಶಲ್ಯ. ೧, ೬]. ಕೃಪಾಚಾರ್ಯ ದುರ್ಯೋಧನನಲ್ಲಿಗೆ ಹೋಗಿ, ತಮ್ಮ ಪಕ್ಷ ದುರ್ಬಲವೆಂಬುದನ್ನು ವಿವರಿಸಿ ಪಾಂಡವರೊಡನೆ ಸಂಧಿ ಮಾಡಿಕೊಳ್ಳಹೇಳಿದ್ದು ದುರ್ಯೋಧನ ಕಾರಣವನ್ನು ವಿವರಿಸಿ, ಸಂಧಿಗೆ ಒಪ್ಪದೆ ಹೋದದ್ದು [ಶಲ್ಯ ೪-೫] ದುರ್ಯೋಧನನನ್ನು ಅರ್ಜುನನು ಹೀಯಾಳಿಸಿದ್ದು [ಶಲ್ಯ ೨೩] ಧೃಷ್ಟದ್ಯುಮ್ನನಿಂದ ಸೋತ ದುರ್ಯೋಧನ ಕುದುರೆಯನ್ನು ಏರಿ ಓಡಿ ಹೋದದ್ದು ಅಶ್ವತ್ಥಾಮಾದಿಗಳು ಅವನನ್ನು ಹುಡುಕಿ ಕರೆತಂದದ್ದು [ಶಲ್ಯ. ೨೪-೨೫]. ಸೈನ್ಯವೆಲ್ಲವೂ ಹತವಾಗಲು ದುರ್ಯೋಧನ ಓಡಿಹೋಗಲು ನಿಶ್ಚಯಿಸಿದ್ದು ಗದೆಯನ್ನು ಹಿಡಿದುಕೊಂಡು ಮಡುವಿನಲ್ಲಿ ಅವಿತುಕೊಂಡದ್ದು ದುರ್ಯೋಧನ ಕೃಪ, ಕೃತವರ್ಮ ಅಶ್ವತ್ಥಾಮರೊಂದಿಗೆ ಮಾತನಾಡುತ್ತಿದ್ದದ್ದು. ಆ ವಿಷಯವನ್ನು ಬೇಡರು ಪಾಂಡವರಿಗೆ ತಿಳುಹಿದ್ದು ದುರ್ಯೋಧನ ಮರಳಿ ಮಡುವಿನೊಳಗೆ ಜಲಸ್ತಂಭನಮಾಡಿ ಕುಳಿತದ್ದು [ಶಲ್ಯ ೨೮-೩೦]. ಯುಧಿಷ್ಠಿರ ದುರ್ಯೋಧನನನ್ನು ಮೂದಲಿಸಿದ್ದು. ದುರ್ಯೋಧನ ಯುಧಿಷ್ಠಿರರ ಸಂವಾದ. ದುರ್ಯೋಧನ ಗದೆಯನ್ನು ಹಿಡಿದು ಮಡುವಿನಿಂದ ಹೊರಬಂದದ್ದು ಭೀಮ ದುರ್ಯೋಧನರಿಗೆ ಗದಾಯುದ್ಧಕ್ಕೆ ಪ್ರಾರಂಭ [ಶಲ್ಯ. ೩೧-೩೩] ಭೀಮ ದುರ್ಯೋಧನರ ಗದಾಯುದ್ಧ ವರ್ಣನೆ [ಶಲ್ಯ ೫೬-೫೮] ಭೀಮ ದುರ್ಯೋಧನನ ತೊಡೆಯನ್ನು ಮುರಿದದ್ದು [ಶಲ್ಯ ೫೯]. ಭೀಮ ದುರ್ಯೋಧನನ ದುಷ್ಕೃತ್ಯಗಳನ್ನೆಲ್ಲ ಎತ್ತಿಹಾಕಿ, ಅವನ ತಲೆಯಮೇಲೆ ಎಡಗಾಲಿನಿಂದ ತುಳಿದದ್ದು. ಯುಧಿಷ್ಠಿರ ದುರ್ಯೋಧನನನ್ನು ಸಮಾಧಾನಪಡಿಸಿದ್ದು [ಶಲ್ಯ. ೬೦]. ಕೃಷ್ಣ ದುರ್ಯೋಧನರು ಬಯ್ದಾಡಿದ್ದು. ದುರ್ಯೋಧನ ತನ್ನನ್ನು ಹೊಗಳಿಕೊಂಡದ್ದು ಅವನ ತಲೆಯಮೇಲೆ ಗಂಧರ್ವರು ಪೂ ಮಳೆಗರೆದದ್ದು. ಪಾಂಡವರು ದುರ್ಯೋಧನನ ಶಿಬಿರವನ್ನು ಪ್ರವೇಶಿಸಿದ್ದು [ಶಲ್ಯ. ೬೨, ೬೩]. ದುರ್ಯೋಧನನ ಪ್ರಲಾಪ [ಶಲ್ಯ. ೬೫]. ನೆಲದಮೇಲೆ ಬಿದ್ದಿದ್ದ ದುರ್ಯೋಧನನಲ್ಲಿಗೆ ಅಶ್ವತ್ಥಾಮ, ಕೃಪ, ಕೃತವರ್ಮರು ಬಂದು ಆತನನ್ನು ಕಂಡು ಮರುಗಿ, ಮಾತನಾಡಿಸಿದ್ದು. ದುರ್ಯೋಧನ ಕೃಪಾಚಾರ್ಯನ ಮೂಲಕ ಅಶ್ವತ್ಥಾಮನಿಗೆ ಸೇನಾಪತಿತ್ವದಲ್ಲಿ ಪಟ್ಟಗಟ್ಟಿಸಿದ್ದು [ಶಲ್ಯ. ೬೫, ೬೬]. ಅಶ್ವತ್ಥಾಮ

ಮರಳಿ ದುರ್ಯೋಧನನಲ್ಲಿಗೆ ಬಂದು, ತಾನು ಮಾಡಿದ ಸಾಹಸಕಾರ್ಯವನ್ನು ವಿವರಿಸಿದ್ದು ದುರ್ಯೋಧನನ ಪ್ರಾಣತ್ಯಾಗ [ಸೌಪ್ತಿ. ೯] ಇವನ ಮಗ ಲಕ್ಷ್ಮಣನೆಂಬವನು ಭಾರತಯುದ್ಧದಲ್ಲಿ ಅಭಿಮನ್ಯುವಿನಿಂದ ಹತನಾದ [ಭಾರ -ದ್ರೋ. ೪೬]

**ದುರ್ವಾಸಸ್.**—ಒಬ್ಬ ಮಹರ್ಷಿ ಅತ್ರಿ ಮಹರ್ಷಿಯಿಂದ ಅನಸೂಯೆಯಲ್ಲಿ ಶಂಕರನ ಅಂಶದಿಂದ ಜನಿಸಿದವ ದತ್ತಾತ್ರೇಯನೂ ಚಂದ್ರನೂ ಈತನ ಒಡಹುಟ್ಟಿದವರು ಈತ ಸ್ವಾಯಂಭುವ ಮನ್ವಂತರದವ [ಭಾಗ. ೪-೧. ವಿಷ್ಣು. ೧-೯] ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿ ಮಹರ್ಷಿಯಿಂದ ಅನಸೂಯೆಯಲ್ಲಿ ಜನಿಸಿದ ನಾಲ್ವರು ಪುತ್ರರಲ್ಲಿ ಎರಡನೆಯವ ಚಂದ್ರ, ದತ್ತಾತ್ರೇಯ, ಆರ್ಯಮ ಎಂಬವರು ಈತನ ಒಡಹುಟ್ಟಿದವರು. ಈತ ಕಾಲಾಗ್ನಿರುದ್ರನ ಅಂಶದಿಂದ ಜನಿಸಿದವ [ಭಾರ.-ಶಾಂತಿ ೨೦೭] ಒಮ್ಮೆ ಈತ ಸಂಚಾರವಶದಿಂದ ದೇವಲೋಕಕ್ಕೆ ಹೋಗಿ ಬರುವಾಗ ಒಬ್ಬ ವಿದ್ಯಾಧರಿಯ ಕೈಯಲ್ಲಿದ್ದ ಕಲ್ಪವೃಕ್ಷದ ಪೂಮಾಲೆಯನ್ನು ಕಂಡು, ಅದರ ಪರಿಮಳದಿಂದ ಮೋಹಭರಿತನಾಗಿ ಆಕೆಯನ್ನು ಬೇಡಿ ಆ ಮಾಲೆಯನ್ನು ತೆಗೆದುಕೊಂಡು ಹುಚ್ಚನ ಹಾಗೆ ಆ ಮಾಲೆಯನ್ನು ತಲೆಗೆ ಸುತ್ತಿಕೊಂಡು ಬರುತ್ತಿದ್ದ ಇಷ್ಟರಲ್ಲಿ ಐರಾವತದ ಮೇಲೆ ಕುಳಿತು ಶಚಿಯೊಂದಿಗೆ ಬರುತ್ತಿದ್ದ ಇಂದ್ರನನ್ನು ಕಂಡು, ಆ ಮಾಲೆಯನ್ನು ತೆಗೆದು ಇಂದ್ರನಮೇಲೆ ಎಸೆದ ಇಂದ್ರ ಆ ಮಾಲೆಯನ್ನು ತೆಗೆದು ಐರಾವತದ ಕುಂಭಸ್ಥಳದ ಮೇಲೆ ಹಾಕಿದ ಐರಾವತ ಅದರ ಪರಿಮಳದಿಂದ ಮತ್ತನಾಗಿ ಆ ಮಾಲಿಕೆಯನ್ನು ತೆಗೆದು ನೆಲದಮೇಲೆ ಹಾಕಿಬಿಟ್ಟಿತು ಇದರಿಂದ ಕ್ರೋಧಾಂಧನಾದ ದುರ್ವಾಸ "ಎಲೆ ದುಷ್ಟನೆ, ನಾನಿತ್ತ ಪೂಮಾಲೆಯನ್ನು ನೀನು ಈ ರೀತಿ ತಿರಸ್ಕರಿಸಿರುವೆಯಾಗಿ ನಿನ್ನ ಮೂಲೋಕದ ಸಂಪತ್ತೂ ನಾಶವಾಗಲಿ" ಎಂಬುದಾಗಿ ಶಾಪವಿತ್ತ [ಬ್ರ ವೈ ಪ್ರಕೃ ೩೬ ವಿಷ್ಣು - ೧-೯] ಈತ ಒಮ್ಮೆ ಕುಂತಿಭೋಜನ ಮನೆಗೆ ಹೋದ ಕುಂತಿಭೋಜ ತನ್ನ ಮಗಳಾದ ಕುಂತಿ(ಪೃಥೆ)ಯನ್ನು ಈತನ ಪರಿಚರ್ಯೆಗಾಗಿ ನಿಯಮಿಸಿದ ಕುಂತಿಯ ಶುಶ್ರೂಷೆಯಿಂದ ಸಂತುಷ್ಟನಾದ ದುರ್ವಾಸ ಯಾವ ದೇವತೆಯನ್ನಾದರೂ ವಶಪಡಿಸಿಕೊಳ್ಳಬಹುದಾದ ಮಹಿಮೆಯುಳ್ಳ ಮಂತ್ರವನ್ನು ಆಕೆಗೆ ಉಪದೇಶಮಾಡಿದ ಈ ಮಂತ್ರಮಹಿಮೆಯಿಂದಲೇ ಕುಂತಿ ಯುಧಿಷ್ಠಿರ, ಭೀಮಾರ್ಜುನರನ್ನೂ, ಮಾದ್ರಿ ನಕುಲ, ಸಹದೇವರನ್ನೂ ಪಡೆದರು [ಆದಿ. ೬೮, ೧೨೦, ೧೨೮. ವನ. ೩೦೫. ಸಭಾ. ೭, ೧೧]. ದುರ್ಯೋಧನ ಈತನನ್ನು ಶುಶ್ರೂಷೆಮಾಡಿ, ಈತನ ಅನುಗ್ರಹಕ್ಕೆ ಪಾತ್ರನಾಗಿ, ದ್ರೌಪದಿಯ ಭೋಜನ ಮುಗಿದ ತರುವಾಯ ಪಾಂಡವರಲ್ಲಿಗೆ ಹೋಗಿ, ಅನ್ನವನ್ನು ಬೇಡಿ, ಅವರಿಗೆ ಶಾಪಕೊಡುವುದಾಗಿ ಹೇಳಿಕಳುಹಿದ. ಆದರೆ ಶ್ರೀಕೃಷ್ಣನ ಮಹಿಮೆಯಿಂದ ತೇಗುತ್ತಾ ತನ್ನ ಶಿಷ್ಯರೊಂದಿಗೆ ಓಡಿಹೋದ [ಭಾರ.-ವನ,

೨೬೪. ಶಿವ.-ಶತರುದ್ರ. ೩೭]. ನೋಡು—ಕೃಷ್ಣ, ದುರ್ಯೋಧನ. ಒಮ್ಮೆ ಅಂಬರೀಷ ನಲ್ಲಿಗೆ ಹೋಗಿ, ಆತನನ್ನು ಕೊಲ್ಲುವುದಕ್ಕಾಗಿ ದುರ್ದೇವತೆಯನ್ನು ಕಲ್ಪಿಸಿದ. ಅಂಬರೀಷ ವಿಷ್ಣುಚಕ್ರವನ್ನು ಪ್ರಾರ್ಥಿಸಲಾಗಿ, ಆ ಚಕ್ರದ ಭಯದಿಂದ ಓಡಿಹೋಗಿ, ಅಂಬರೀಷನನ್ನೇ ಮರೆಹೊಕ್ಕು, ಬದುಕಿಕೊಂಡ ನೋಡು—ಅಂಬರೀಷ [ಭಾಗ - ೯-೪] ಒಮ್ಮೆ ಶ್ರೀ ಕೃಷ್ಣನಲ್ಲಿಗೆ ಹೋಗಿ, ರುಕ್ಮಿಣೀ ಕೃಷ್ಣರನ್ನು ಬಲವಾಗಿ ಪೀಡಿಸಿ, ಅನೇಕ ಬಗೆಯಿಂದ ಪರೀಕ್ಷಿಸಿ, ಕಡೆಗೂ ಕೃಷ್ಣನಿಗೆ ಅಂಗಾಲಿನಲ್ಲಿಯೇ ಕೇಡು ಸಂಭವಿ ಸುವುದೆಂಬುದಾಗಿ ಶಾಪವಿತ್ತ ನೋಡು—ಕೃಷ್ಣ [ಭಾಗ -೧೧-೩೧. ಭಾರ.-ಅನು. ೨೬೪] ಕುಶಿಕ ರಾಜನನ್ನು ಪರೀಕ್ಷಿಸುವ ಸಲುವಾಗಿ, ಆತನಲ್ಲಿಗೆ ಹೋಗಿ, ರಾಜ ದಂಪತಿಗಳನ್ನು ಬಲುವಾಗಿ ಪೀಡಿಸಿ, ಅವರ ಶುಶ್ರೂಷೆಯಿಂದ ಸಂತುಷ್ಟನಾಗಿ, ಅವನ ವಂಶ ಭೃಗುವಂಶದೊಂದಿಗೆ ಬೆರೆಯುವಂತೆಯೂ ಕುಶಿಕನ ವಂಶದಲ್ಲಿ ಬ್ರಹ್ಮರ್ಷಿಯೊಬ್ಬನು ಹುಟ್ಟುವಂತೆಯೂ ವರವಿತ್ತ ನೋಡು—ಕುಶಿಕ [ಅನು. ೮೭]. ಶ್ವೇತಕಿಯೆಂಬ ಅರಸನಿಂದ ಅನೇಕ ಯಜ್ಞಗಳನ್ನು ಮಾಡಿಸಿದ [ಆದಿ. ೨೪೯]. ಕುರು ಕ್ಷೇತ್ರದಲ್ಲಿ ವಾಸಮಾಡುವ ಮುದ್ಗಲ ಅಥವಾ ವ್ರೀಹಿದ್ರೋಣ ನೆಂಬ ಮಹರ್ಷಿಯನ್ನು ಪರೀಕ್ಷಿಸಿ ಅನುಗ್ರಹಿಸಿದ ನೋಡು—ಮುದ್ಗಲ [ಭಾರ - ವನ. ೨೬೧] ಶ್ರೀ ರಾಮ ತನ್ನ ಅವತಾರವನ್ನು ಪೂರೈಸಿ, ವೈಕುಂಠಕ್ಕೆ ತೆರಳುವ ಮೊದಲು ಯಮನೊಂದಿಗೆ ರಹಸ್ಯವಾಗಿ ಮಾತನಾಡುತ್ತಿರುವಲ್ಲಿ, ರಾಮ ಲಕ್ಷ್ಮಣ ನನ್ನು ಬಾಗಿಲಲ್ಲಿ ಕಾವಲಿಟ್ಟು "ಯಾರೊಬ್ಬರನ್ನೂ ಒಳಗೆ ಬಿಡಲಾಗದು ಯಾರಾ ದರೂ ನನ್ನಲ್ಲಿಗೆ ಬಂದುದಾದರೆ ಅವರಿಗೆ ಪ್ರಾಣಾಂತಿಕವಾದ ದಂಡ ತಪ್ಪಿದ್ದಲ್ಲ ಬಾಗಿಲಲ್ಲಿರುವ ದೂತರನ್ನು ದೂರ ಕಳುಹಿ ನೀನೇ ಎಚ್ಚರದಿಂದಿರು" ಎಂಬುದಾಗಿ ಆಜ್ಞಾಪಿಸಿದ್ದ ರಾಮ ಯಮನೊಂದಿಗೆ ಮಾತನಾಡುತ್ತಿದ್ದಾಗ ತ್ರಿಕಾಲಜ್ಞ ನಾದ ದುರ್ವಾಸ ಅಲ್ಲಿಗೆ ಬಂದು "ಈ ನಿಮಿಷದಲ್ಲಿಯೇ ನಾನು ಬಂದಿರುವ ವಾರ್ತೆ ಯನ್ನು ರಾಮನಿಗೆ ತಿಳಿಸು. ಇಲ್ಲವಾದರೆ ಈ ದೇಶವನ್ನೂ, ಅಯೋಧ್ಯೆಯನ್ನೂ ರಾಮ ನನ್ನೂ ಶಪಿಸಿ, ನಿಮ್ಮ ವಂಶವನ್ನೇ ದಹಿಸುವೆನು" ಎಂದ. ಲಕ್ಷ್ಮಣ ಮುನಿಯ ಮಾತನ್ನು ಕೇಳಿ, ರಾಮನ ಕಟ್ಟಾಜ್ಞೆಯನ್ನೂ ನೆನಪಿಗೆ ತಂದುಕೊಂಡು ' ನಾನೊಬ್ಬ ಸತ್ತರೂ ಚಿಂತೆಯಿಲ್ಲ ಮಿಕ್ಕವರಾದರೂ ಸುಖವಾಗಿದ್ದರೆ ಸಾಕು" ಎಂಬುದಾಗಿ ಭಾವಿಸಿ, ಒಡನೆಯೇ ರಾಮನಲ್ಲಿಗೆ ಹೋಗಿ ದುರ್ವಾಸ ಬಂದಿರುವ ಸುದ್ದಿಯನ್ನು ತಿಳುಹಿಸಿದ. ರಾಮ ಒಡನೆಯೇ ಯಮನನ್ನು ಬೀಳ್ಕೊಟ್ಟು ದುರ್ವಾಸನಲ್ಲಿಗೆ ಬಂದು, ಸತ್ಕರಿಸಿ, ಬಂದ ಕಾರಣವೇನೆಂದು ಪ್ರಶ್ನೆಮಾಡಲಾಗಿ, ದುರ್ವಾಸ "ಅಯ್ಯಾ, ನಾನು ಬಹಳ ದಿನಗಳಿಂದಲೂ ನಿಯಮದಲ್ಲಿದ್ದೆ. ಇಂದು ಪಾರಣೆಗಾಗಿ ನಿನ್ನಲ್ಲಿಗೆ ಬಂದಿ ದ್ದೇನೆ" ಎಂದ. ರಾಮ ಅತ್ಯಂತ ಸಂತೋಷದಿಂದ ಆತನಿಗೆ ಮೃಷ್ಟಾನ್ನ ಭೋಜನ

ವನ್ನಿಕ್ಕಿಸಿ, ತೃಪ್ತಿಗೊಳಿಸಲಾಗಿ, ದುರ್ವಾಸ ತನ್ನ ಆಶ್ರಮಕ್ಕೆ ಹೋದ. ಈ ರೀತಿ ಯಿಂದ ದುರ್ವಾಸ ಲಕ್ಷ್ಮಣನನ್ನು ಶಿರಚ್ಛೇದ ಶಿಕ್ಷೆಗೆ ಗುರಿಮಾಡಿ, ಆತನ ಅವತಾರ ಸಮಾಪ್ತಿಗೆ ಕಾರಣನಾದ [ರಾಮಾ.-ಉತ್ತ ೧೦೩, ೧೦೪]

**ದುಶ್ಶಲಾ.**—ಧೃತರಾಷ್ಟ್ರನಿಂದ ಗಾಂಧಾರಿಯಲ್ಲಿ ಜನಿಸಿದವಳು ನೂರು ಮಂದಿ ಮಕ್ಕಳಿಗಿಂತಲೂ ಕಿರಿಯವಳು. ಸಿಂಧು ದೇಶಾಧಿಪನಾದ ವೃದ್ಧಕ್ಷತ್ರನ ಮಗ ನಾದ ಜಯದ್ರಥನನ್ನು ಮದುವೆಯಾಗಿದ್ದಳು [ಭಾರ.-ಆದಿ ೬೮, ೧೩೦] ಈಕೆಗೆ ಇಬ್ಬರು ಪುತ್ರರು. ಅವರಲ್ಲಿ ಒಬ್ಬ ದ್ರೌಪದೀಸ್ವಯಂವರ ಸಮಯದಲ್ಲಿ ಅರ್ಜುನ ನಿಂದ ಹತನಾದ [ಆದಿ. ೨೧೮] ಮತ್ತೊಬ್ಬ ಪಾಂಡವರ ಅಶ್ವಮೇಧ ಯಾಗಕ್ಕೆ ವೇಳೆದಲು, ಅರ್ಜುನ ದಿಗ್ವಿಜಯಕ್ಕೆ ಬಂದಿರುವನೆಂಬ ಸುದ್ದಿಯನ್ನು ಕೇಳಿದ ಕೂಡಲೇ ದೇಹತ್ಯಾಗಮಾಡಿದ. ಆಗ ದುಶ್ಶಲೆ ತನ್ನ ಮಗನ ಹೆಣವನ್ನು ಅರ್ಜುನನಲ್ಲಿಗೆ ತೆಗೆಸಿಕೊಂಡು ಹೋಗಿ, ಅರ್ಜುನನ ಮೂಲಕ ತನ್ನ ಮೊಮ್ಮಕ್ಕಳ ಪ್ರಾಣವನ್ನು ಉಳಿಸಿಕೊಂಡಳು [ಅಶ್ವ. ೭೮].

**ದುಶ್ಶಾಸನ**—ಧೃತರಾಷ್ಟ್ರನಿಂದ ಗಾಂಧಾರಿಯಲ್ಲಿ ಜನಿಸಿದ ಎರಡನೆಯ ಮಗ ದುರ್ಯೋಧನನಂತೆಯೇ ಪರಾಕ್ರಮಿಯೂ, ಶೂರನೂ ಎನಿಸಿದ್ದ [ಆದಿ ೬೩, ೨೦೧]. ಕಪಟದ್ಯೂತದಲ್ಲಿ ಪಾಂಡವರು ಸೋತ ತರುವಾಯ ದುಶ್ಶಾಸನ ತನ್ನ ಅಣ್ಣನ ಮಾತಿನ ಮೇರೆಗೆ ದ್ರೌಪದಿಯನ್ನು ರಾಜಸಭೆಗೆ ಎಳೆತಂದ [ಸಭಾ ೯೦] ಉತ್ತರ ಗೋಗ್ರಹಣ ಸಮಯದಲ್ಲಿ ಅರ್ಜುನನಿಂದ ಸೋತ [ವಿರಾ ೬೫] ಇವನು ರಥೋದಾರ [ಉದ್ಯೋ ೧೬೫] ಹತ್ತನೆಯ ದಿವಸದ ಯುದ್ಧದಲ್ಲಿ ಅರ್ಜುನನನ್ನು ಸಂಧಿಸಿ ಯುದ್ಧಮಾಡಿ ಸೋತ [ಭೀ ೧೧೦] ಹದಿಮೂರನೆಯ ದಿನದಲ್ಲಿ ಅಭಿಮನ್ಯುವಿನ ಕಣ್ಣಿಗೆ ಬಿದ್ದು ಹೋರಾಡಿ ಪಾಡುಪಟ್ಟ [ದ್ರೋ ೩೯]. ಹದಿನಾಲ್ಕನೆಯ ದಿನದಲ್ಲಿ ಅರ್ಜುನನೊಂದಿಗೆ ಯುದ್ಧಮಾಡಿ ಸೋತ [ದ್ರೋ. ೯೦] ಹದಿನಾಲ್ಕನೆಯ ದಿನದಲ್ಲಿ ಸಾತ್ಯಕಿಯನ್ನು ಕಂಡು ಹೆದರಿ ಓಡಿಹೋಗುತ್ತಿದ್ದ ದುಶ್ಶಾಸನನನ್ನು ದ್ರೋಣನು ಹೀಯಾಳಿಸಿದ್ದು [ದ್ರೋ. ೧೨೨]. ಇವನ ಮಗ ಅಭಿಮನ್ಯುವನ್ನು ಕೊಂದದ್ದು [ದ್ರೋ. ೪೯] ಸಾತ್ಯಕಿ ದುಶ್ಶಾಸನನನ್ನು ಅಡ್ಡಗಟ್ಟಿ ಯುದ್ಧಮಾಡಿ ಸೋಲಿಸಿದ್ದು [ದ್ರೋ. ೧೨೩] ದ್ರೌಪದೀ ಪುತ್ರ ಇವನ ಮಗನನ್ನು ಕೊಂದದ್ದು [ಕ ೨] ಭೀಮ ಅರಸರ ಇದಿ ರಾಗಿಯೇ ದುಶ್ಶಾಸನನ ತೋಳನ್ನು ಮುರಿದು, ಅವನನ್ನು ನೆಲಕ್ಕೆ ಕೆಡಹಿ, ಎದೆಯನ್ನು ಸೀಳಿ, ರಕ್ತಪಾನಮಾಡಿದ್ದು [ಕರ್ಣ. ೮೭] ದುಶ್ಶಾಸನನ ಪ್ರಾಣತ್ಯಾಗ [ಕರ್ಣ ೮೮] ಗಾಂಧಾರಿ ದುಶ್ಶಾಸನನ ಶವವನ್ನು ಬಣ್ಣಿಸಿದ್ದು [ಸ್ತ್ರೀ ೧೮].

**ದುಷ್ಟಬುದ್ಧಿ**—ಕುಂತಲ ದೇಶದ ರಾಜನ ಮಂತ್ರಿ ವಿಷಯೆಯ ತಂದೆ. ನೋಡು—ಚಂದ್ರಹಾಸ.

**ದುಷ್ಯಂತ.**—(i) ಚಂದ್ರ ವಂಶದ ಇಲಿಲ ರಾಜನ ಮಗ. ಶೂರ, ಭೀಮ, ವಸು, ಪ್ರವಸು ಎಂಬವರು ಇವನ ಒಡಹುಟ್ಟಿದವರು. ಈತ ಲಾಕ್ಷ್ಣಿಯೆಂಬ ರಾಜಪುತ್ರಿಯನ್ನು ಮದುವೆಯಾಗಿ ಜನಮೇಜಯನೆಂಬ ಮಗನನ್ನು ಪಡೆದ ಈ ಲಾಕ್ಷ್ಣಿಗೆ ಲಕ್ಷ್ಮಣೆಯೆಂಬುದು ನಾಮಾಂತರ. ಶಕುಂತಲೆ ಎರಡನೆಯ ಹೆಂಡತಿ ಭರತ ಶಕುಂತಲೆಯ ಮಗ [ಭಾರ.-ಆದಿ. ೬೩, ೮೮] ದುಷ್ಯಂತ ಬೇಟೆಗೆ ಹೋದದ್ದು [ಆದಿ. ೯೦]. ಕಣ್ವಾಶ್ರಮಕ್ಕೆ ಹೋದದ್ದು [ಆದಿ ೯೧] ಶಕುಂತಲೆಗೂ ದುಷ್ಯಂತನಿಗೂ ಸಂಭಾಷಣೆ [ಆದಿ ೯೨] ಶಕುಂತಲೆಯ ಉತ್ಪತ್ತಿ ಕಥೆ [ಆದಿ. ೯೩]. ಶಕುಂತಲೆಯನ್ನು ಮದುವೆಯಾದದ್ದು [ಆದಿ ೯೪] ಶಕುಂತಲೆ ದುಷ್ಯಂತನಿಂದ ಗರ್ಭಧಾರಣೆ ಮಾಡಿದ ತರುವಾಯ ದುಷ್ಯಂತ ತನ್ನ ಅರಮನೆಯನ್ನು ಸೇರಿದ. ಇತ್ತ ಶಕುಂತಲೆ ಗಂಡುಶಿಶುವನ್ನೇ ಹೆತ್ತಳು ಕಣ್ವ ಆ ಬಾಲಕನಿಗೆ ಸರ್ವದಮನನೆಂದು ನಾಮಕರಣ ಮಾಡಿದ [ಆದಿ. ೯೫] ಸರ್ವದಮನ ಐದು ವರ್ಷದ ವಯಸ್ಸಿನವನಾದಾಗ್ಯೂ ದುಷ್ಯಂತ ಮರಳಿ ಇಲ್ಲಿಗೆ ಬಾರದಿದ್ದು, ಅವರನ್ನು ಕರೆಯಿಸಿಕೊಳ್ಳದಿರಲು ಕಣ್ವ ತಾನಾಗಿಯೇ ಶಕುಂತಲೆಯನ್ನೂ ಸರ್ವದಮನನನ್ನೂ ದುಷ್ಯಂತನಲ್ಲಿಗೆ ಕಳುಹಿಸಿದ್ದು [ಆದಿ ೯೬]. ದುಷ್ಯಂತ ಶಕುಂತಲೆಯರ ವಿವಾದ [ಆದಿ. ೯೭, ೯೮] ಶಕುಂತಲೆ, ರಾಜನು ತನ್ನನ್ನು ಮದುವೆಯಾದದ್ದು ದಿಟವೆಂದು ಹೇಳುವುದಕ್ಕಾಗಿ, ತಾನು ಮೇನಕೆಯೆಂಬ ಅಪ್ಸರಸಿಯಲ್ಲಿ ಜನಿಸಿದವಳೆಂದು ಹೇಳಲಾಗಿ, ದುಷ್ಯಂತ ಆಕೆಯನ್ನು ಪರಿಹಾಸಮಾಡಿದ್ದು [ಆದಿ. ೯೮]. ದುಷ್ಯಂತ ಹಿಂದು ಮುಂದು ತೋರದೆ ಯೋಚಿಸುತ್ತಿರುವಲ್ಲಿ " ಅಯ್ಯಾ ಅರಸ, ಈಕೆಯನ್ನು ನೀನು ಮದುವೆಯಾದದ್ದು ದಿಟ. ಈ ಕುಮಾರನೂ ನಿನ್ನ ಮಗನೇ ಸರಿ ಇವರಿಬ್ಬರನ್ನೂ ಪರಿಗ್ರಹಿಸು" ಎಂಬುದಾಗಿ ಆಕಾಶವಾಣಿ ನುಡಿದದ್ದು ದುಷ್ಯಂತ ಅವರಿಬ್ಬರನ್ನೂ ಪರಿಗ್ರಹಿಸಿ, ಮಗನಿಗೆ ಭರತನೆಂಬುದಾಗಿ ನಾಮಕರಣ ಮಾಡಿದ್ದು ಭರತನ ರಾಜ್ಯಾಭಿಷೇಕ [ಆದಿ ೧೦೦].

(ii) ಒಬ್ಬ ಅರಸು ಚಂದ್ರ ವಂಶದ ಅಜಮೀಢ ರಾಜನಿಂದ ನೀಲಿಯೆಂಬ ರಾಣಿಯಲ್ಲಿ ಜನಿಸಿದ ಹಿರಿಯ ಮಗ. ಪರಮೇಷ್ಠಿಯೆಂಬವನು ಇವನ ತಮ್ಮ [ಆದಿ. ೧೦೧].

**ದೂಷಣ.**—ಒಬ್ಬ ರಾಕ್ಷಸ. ರಾವಣನ ಚಿಕ್ಕತಾಯ ಮಗ. ಖರಾಸುರನ ತಮ್ಮ. ಇವನು ಖರನೊಂದಿಗೆ ಜನಸ್ಥಾನದಲ್ಲಿ ವಾಸವಾಗಿದ್ದು, ಖರಸಂಹಾರ ಸಮಯದಲ್ಲಿ ರಾಮನಿಂದ ಹತನಾದ [ಭಾರ.-ವನ. ೨೭೯]. ನೋಡು—ಖರ.

**ದೃಢಸ್ಯು (ದೃಢಾಸ್ಯ).**—ಅಗಸ್ತ್ಯ ಮುನಿಯಿಂದ ಲೋಪಾಮುದ್ರೆಯಲ್ಲಿ ಜನಿಸಿದವ, ಇವನು ಲೋಪಾಮುದ್ರೆಯ ಗರ್ಭದಲ್ಲಿ ಏಳು ವರ್ಷಗಳ ಕಾಲವಿದ್ದ.

ಈತ ಬಾಲ್ಯದಲ್ಲಿಯೇ ವೇದ, ವೇದಾಂಗಗಳಲ್ಲಿ ಪಾರಂಗತನೆನಿಸಿ ಮಹಾ ತಪಸ್ವಿಯೂ ಗಿದ್ದ. ಹುಡುಗರೊಂದಿಗೆ ಇಧ್ಮಗಳನ್ನು ತರುವುದಕ್ಕಾಗಿ ಅರಣ್ಯಕ್ಕೆ ಹೋದಾಗ ಇವನು ಸಾವಿರ ಮಂದಿ ಹೊರುವಷ್ಟು ಇಧ್ಮಗಳನ್ನು ಒಬ್ಬನೇ ಹೊತ್ತು ತರುತ್ತಿದ್ದನಾದ ಕಾರಣ ಅಗಸ್ತ್ಯ ಮುನಿ ಈತನನ್ನು ಇಧ್ಮವಾಹನೆಂದು ಕರೆಯಲಾಗಿ, ಅಂದಿನಿಂದಲೂ ಈತನಿಗೆ ಇಧ್ಮವಾಹನೆಂಬ ಹೆಸರೇ ರೂಢಿಯಲ್ಲಿ ಬಂತು. ಬ್ರಹ್ಮಮಾನಸಪುತ್ರನಾದ ಕ್ರತು ಮಹರ್ಷಿಯ ಮಕ್ಕಳೆಲ್ಲರೂ ಶಿವನ ಶಾಪದಿಂದ ನಷ್ಟರಾಗಲು, ಕ್ರತು ಮುನಿ ಈತನನ್ನು ಸ್ವೀಕಾರಮಾಡಿದ [ಭಾರ -ವನ. ೯೭. ಮತ್ಸ್ಯ -೩೦೧]:

**ಧೃಷ್ಟಾಯು.**—ಚಂದ್ರ ವಂಶದ ಐಲನ ಮಗನಾದ ಪುರೂರವನಿಂದ ಊರ್ವಶಿ ಯಲ್ಲಿ ಜನಿಸಿದವ ಆಯು, ಧೀಮಂತ, ವನಾಯು, ಅಮಾವಸು, ಶತಾಯು ಎಂಬವರು ಇವನ ಒಡಹುಟ್ಟಿದವರು [ಆದಿ. ೬೯]

**ದೃಢಾಶ್ವ**—ಚಂದ್ರ ವಂಶದ ಕುವಲಾಶ್ವ ರಾಜನ ಮಗ ನೋಡು—ಕುವ ಲಾಶ್ವ [ವನ ೨೦೭] ಈತನ ಮಗ ಹರ್ಯಶ್ವ [ಭಾಗ -೯-೬].

**ದೃಢಾಸ್ಯ**—ನೋಡು—ದೃಢಸ್ಯ

**ದೃಷದ್ವತಿ**—ಭಾರತ ವರ್ಷದ ಒಂದು ನದಿ ಪಾಂಡವರ ಕಾಲದಲ್ಲಿ ಈ ನದಿ ಈಗಣ ಅಂಬಾಲಾ ಜಿಲ್ಲೆಯಲ್ಲಿ ಹರಿಯುತ್ತಿತ್ತು ಈಗ ರಾಜಪುಟಾಣದ ಮರಳಿ ನಲ್ಲಿ ಹೂತುಹೋಗಿದೆ [ಭಾರ.-ವನ ೮೧, ೮೮ ಭೀ ೯. ಶಾಂತಿ ೫೭]

**ದೇವ**—ಬ್ರಹ್ಮನ ಮೊದಲು ನಾಗಗಳವರೆಗೆ ಈ ಶಬ್ದ ಅನ್ವಯಿಸುತ್ತದೆ [ಭಾರ.-ಅನು. ೨೭೧]

**ದೇವ ದಾನವರ ಯುದ್ಧ.**—[ಆದಿ ೧೯ ಸಭಾ ೫೨].

**ದೇವ ಗರುಡ ಯುದ್ಧ**—[ಆದಿ. ೩೨]

**ದೇವಾಂಶ ಸಂಭೂತರಾದ ಅರಸರು.**—[ಆದಿ. ೬೮]

ದೇವತೆಗಳಲ್ಲಿಯೂ ಚಾತುರ್ವರ್ಣ್ಯವಿಭಾಗ [ಶಾಂತಿ ೨೦೭] ನೈಮಿಶಾರಣ್ಯ ದಲ್ಲಿ ದೇವತೆಗಳು ಯಜ್ಞಮಾಡಿದ್ದು [ಆದಿ. ೨೧೪ ಸೌಪ್ತ. ೧೮] ಅವರು ಮನುಷ್ಯನ ಅಂತರಂಗವನ್ನು ತಿಳಿಯುವ ಸಾಮರ್ಥ್ಯವುಳ್ಳವರು [ಅನು ೨೩೭]

**ದೇವಕ.**—ಯದು ವಂಶದ ಆಹುಕ ರಾಜನ ಹಿರಿಯ ಮಗ. ಹಿಂದಣ ಜನ್ಮ ದಲ್ಲಿ ಗಂಧರ್ವ ರಾಜ. ಉಗ್ರಸೇನನೂ ಈತನೂ ಒಡಹುಟ್ಟಿದವರು. ಈತನಿಗೆ ದೇವವಂತ, ಉಪದೇವ, ಸುದೇವ, ದೇವವರ್ಧನರೆಂಬ ನಾಲ್ವರು ಪುತ್ರರೂ ಧೃತ ದೇವಾ, ಶಾಂತಿದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ, ದೇವಕೀ ಎಂಬ ಏಳು ಮಂದಿ ಪುತ್ರಿಯರೂ ಜನಿಸಿದರು. ಈ ಏಳು ಮಂದಿಯನ್ನೂ ವಸುದೇವನೇ ಮದುವೆಯಾಗಿದ್ದ [ಭಾರ.-ಆದಿ. ೬೮. ಭಾಗ.-೯-೨೪. ವಿಷ್ಣು.-೪-೧೪].

**ದೇವಕೀ.**—(i) ವಸುದೇವನ ಏಳು ಮಂದಿ ಪತ್ನಿಯರಲ್ಲಿ ಒಬ್ಬಳು. ದೇವಕನ ಮಗಳು. ಈಕೆ ಸ್ವಾಯಂಭುವ ಮನ್ವಂತರದಲ್ಲಿ ಪೃಶ್ನಿಯೆಂಬ ಹೆಸರಿನ ಮಹಾ ಪತಿವ್ರತೆ. ಸುತಪನೆಂಬ ಬ್ರಹ್ಮನ ಹೆಂಡತಿಯಾಗಿದ್ದಳು. ವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಿ, ತನ್ನ ಮಗನಾಗಿ ಜನಿಸಬೇಕೆಂದು ವರವನ್ನು ಬೇಡಿ ಅಂತೆಯೇ ವರ ವನ್ನು ಪಡೆದು ಶ್ರೀ ಕೃಷ್ಣನನ್ನು ಹೆತ್ತಳು. ವಸುದೇವನೊಂದಿಗೆ ವಿವಾಹ [ಭಾಗ - ೧೦-೧. ಸಭಾ ೨೩] ನಾರದನೊಂದಿಗೆ ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳ ಯೋಗದಲ್ಲಿ ಅನ್ನದಾನಮಾಡಿದ ಫಲ ವಿಷಯವಾಗಿ ಸಂವಾದಮಾಡಿದಳು [ಭಾರ.- ಅನು ೯೯] ದೇವಕೀ ವಸುದೇವರು ಸೆರೆಯಲ್ಲಿದ್ದದ್ದು [ಭಾಗ -೧೦-೧]. ಕಂಸ ಇವರನ್ನು ಸೆರೆಯಿಂದ ಬಿಡಿಸಿದ್ದು [ಭಾಗ -೧೦-೧೨] ದೇವಕಿ ಕೃಷ್ಣನಿರ್ಯಾಣಾ ನಂತರ ವಸುದೇವನೊಂದಿಗೆ ಸಹಗಮನಮಾಡಿದ್ದು [ಮೌಸ ೮]

(ii) ಶೈಬ್ಯ ರಾಜನ ಮಗಳು ಯುಧಿಷ್ಠಿರನ ಹೆಂಡತಿ. ಯೌಧೇಯನೆಂಬ ಕುಮಾರನನ್ನು ಪಡೆದಳು [ಆದಿ. ೬೩]

**ದೇವ ಗಂಧರ್ವರು**—ದೇವಲೋಕದ ಗಾಯಕರು ಇವರು ಭೀಮಸೇನ, ಉಗ್ರಸೇನ, ಸುಪರ್ಣ, ವರುಣ, ಗೋಪತಿ, ಧೃತರಾಷ್ಟ್ರ, ಸೂರ್ಯವರ್ಚಸ್, ಸತ್ಯ ವಾಕ್, ಅರ್ಕಪರ್ಣ, ಪ್ರಯುತ, ಭೀಮ, ಚಿತ್ರರಥ, ಶಾಲಿಶಿರಸ್, ಪರ್ಜನ್ಯ, ಕಲಿ, ನಾರದರೆಂಬವರು ಇವರೆಲ್ಲರೂ ಕಶ್ಯಪ ಮುನಿಯಿಂದ ಮುನಿಯೆಂಬವಳಲ್ಲಿ ಜನಿಸಿ ದವರು [ಭಾರ -ಆದಿ ೬೬, ೧೩೨]. ಕಶ್ಯಪನಿಂದ ಪ್ರಾಧೆಯಲ್ಲಿ ಜನಿಸಿದವರು—ಸಿದ್ಧ, ಪೂರ್ಣ, ಬರ್ಹಿಸ್, ಪೂರ್ಣಾಯು, ಬ್ರಹ್ಮಚಾರಿ, ರತಿಗುಣ, ಸುಪರ್ಣ, ವಿಶ್ವಾಯು, ಭಾನು, ಸುಚಂದ್ರ ಎಂಬುದಾಗಿ ಹತ್ತು ಮಂದಿ [ಭಾರ.-ಆದಿ. ೬೬].

**ದೇವದತ್ತ**—(i) ಇಂದ್ರ ಅರ್ಜುನನಿಗೆ ಕೊಟ್ಟ ಶಂಖದ ಹೆಸರು [ಭಾರ.- ವನ ೧೬೮].

(ii) ದೇಹದೊಳಗಣ ಉಪ ವಾಯುಗಳಲ್ಲಿ ಒಂದು ಇದು ಆಕಳಿಕೆಯನ್ನು ಹುಟ್ಟಿಸುತ್ತದೆ.

**ದೇವಭಾಗ.**—ಚಂದ್ರ ವಂಶದ ಶೂರ ರಾಜನಿಂದ ಮಾರಿಷೆಯೆಂಬಾಕೆಯಲ್ಲಿ ಜನಿಸಿದ ಹತ್ತು ಮಂದಿ ಪುತ್ರರಲ್ಲಿ ಎರಡನೆಯವ ವಸುದೇವನ ತಮ್ಮ ಈತ ಕಂಸನ ತಂಗಿಯಾದ ಕಂಸೆಯನ್ನು ಮದುವೆಯಾಗಿ ಚಿತ್ರಕೇತು, ಬೃಹದ್ಬಲ, ಉದ್ಧವರೆಂಬ ಮೂವರು ಪುತ್ರರನ್ನು ಪಡೆದ [ಭಾರ.-ಆದಿ. ೬೮].

**ದೇವಯಾನಿ.**—ಪ್ರಿಯವ್ರತ ರಾಜನ ಮಗಳಾದ ಊರ್ಜಸ್ವತಿಯಲ್ಲಿ ಶುಕ್ರಾ ಚಾರ್ಯನಿಂದ ಜನಿಸಿದವಳು [ಭಾಗ.-೫-೧. ಭಾರ.-ಆದಿ ೬೩, ೬೯]. ಈಗ ನಡೆ ಯುತ್ತಿರುವ ವೈವಸ್ವತಮನ್ವಂತರದಲ್ಲಿ ಸ್ವರ್ಗಾಧಿಪತಿಯಾದ ಪುರಂದರನೆಂಬ ಹೆಸ

ರಿನ ಇಂದ್ರನ ಮಗಳಾದ ಜಯಂತಿಯೆಂಬವಳಲ್ಲಿ ಶುಕ್ರಾಚಾರ್ಯನಿಂದ ಜನಿಸಿದವಳು [ಮತ್ಸ್ಯ-೪೭]. ಇವಳು ಜಾತಿಯಿಂದ ಬ್ರಾಹ್ಮಣಿಯಾಗಿದ್ದರೂ ಕ್ಷತ್ರಿಯನನ್ನೇ ಮದುವೆಯಾಗುವ ಹಾಗೆ ಶಾಪವನ್ನು ಪಡೆದಳು ನೋಡು—ಕಚ. ಒಂದು ದಿನ ರಾಕ್ಷಸ ರಾಜನಾದ ವೃಷಪರ್ವನ ಮಗಳಾದ ಶರ್ಮಿಷ್ಠೆಯೂ, ದೇವಯಾನಿಯೂ ಜಲಕೇಳಿಗೆ ಹೋಗಿ ತಮ್ಮ ವಸ್ತ್ರಗಳನ್ನೆಲ್ಲ ತೆಗೆದಿಟ್ಟು ಜಲಕೇಳಿಯನ್ನು ನಡೆಸುತ್ತಿದ್ದಾಗ ಇಂದ್ರ ಗಾಳಿಯ ರೂಪದಿಂದ ಬಂದು ಇವರ ವಸ್ತ್ರಗಳನ್ನೆಲ್ಲ ಬೆರೆಸಿಬಿಟ್ಟ. ಜಲದಿಂದ ಎದ್ದುಬಂದ ಶರ್ಮಿಷ್ಠೆ ದೇವಯಾನಿಯ ವಸ್ತ್ರವನ್ನು ತೆಗೆದು ಉಟ್ಟುಕೊಂಡಳು. ಆಗ ದೇವಯಾನಿ "ಎಲೌ ರಕ್ಕಸಿ, ನೀನು ನನಗೆ ಶಿಷ್ಯೆಯಾಗಿದ್ದರೂ ನನ್ನ ವಸ್ತ್ರವನ್ನು ಧರಿಸಿದೆಯಲ್ಲಾ! ಇದು ನಿನಗೆ ಒಳ್ಳೆಯದಲ್ಲ" ಎಂದಳು. ರಾಜಪುತ್ರಿಯಾದ ಶರ್ಮಿಷ್ಠೆ ಗರ್ವಿತೆಯಾಗಿ "ನನ್ನ ತಂದೆ ಮಲಗಿರಲಿ, ಕುಳಿತಿರಲಿ, ನಿಮ್ಮ ತಂದೆ ನನ್ನ ತಂದೆಯನ್ನು ನಿಂತುಕೊಂಡು ಕೈಕಟ್ಟಿ ಹೊಗಳುತ್ತಿರುತ್ತಾನೆ. ನೀನು ಬಿಕ್ಕೆ ಬೇಡುವವನ ಮಗಳು. ನಾನು ದಾತಾರನ ಮಗಳು. ನಿಮ್ಮಪ್ಪ ಹೊಗಳಭಟ್ಟ. ನಮ್ಮ ತಂದೆ ಹೊಗಳಿಸಿಕೊಳ್ಳತಕ್ಕವ ನಿಮ್ಮಪ್ಪ ಕೈಚಾಚಿ ದಾನವನ್ನು ತೆಗೆದುಕೊಳ್ಳುವವ. ನನ್ನ ಜನಕ ದಾನಮಾಡುವವ. ನೀನು ಆಯುಧಶೂನ್ಯಳು. ನಾನು ಆಯುಧಸಹಿತಳು ಇಂತಿದ್ದರೂ ಸ್ವಲ್ಪವೂ ಲೆಕ್ಕಿಸದೆ ಗಳಹುತ್ತಿರುವೆಯಲ್ಲಾ, ಎಲೆ ಬಿಕಾರಿಯ ಮಗಳೆ! ತೊಲಗು" ಎಂದು ಗದ್ದರಿಸಿ ಬಾವಿಯಲ್ಲಿ ತಳ್ಳಿ, ಸತ್ತಳೆಂದು ತಿಳಿದು ಮನೆಗೆ ಹೊರಟುಹೋದಳು ಅಷ್ಟರಲ್ಲಿ ನಹುಷ ಪುತ್ರನಾದ ಯಯಾತಿ ಬೇಟೆಯಿಂದ ಬಳಲಿ ಬಾಯಾರಿ ಅಲ್ಲಿಗೆ ಬಂದು ದೇವಯಾನಿಯನ್ನು ಕಂಡು ಮರುಕದಿಂದ ಆಕೆಯನ್ನು ಮೇಲಕ್ಕೆ ಎತ್ತಿ, ನಡೆದ ಸಮಾಚಾರವನ್ನೆಲ್ಲ ಕೇಳಿ ತಿಳಿದು ಬ್ರಾಹ್ಮಣಿಯೆಂದು ಗೌರವಿಸಿ ಹೊರಟುಹೋದ. ಬಳಿಕ ದೇವಯಾನಿ ತನ್ನ ಸಖಿಯಾದ ಘೂರ್ಣಿಕೆಯೆಂಬವಳ ಮೂಲಕ ಸಮಾಚಾರವನ್ನು ತಂದೆಗೆ ಹೇಳಿಕಳುಹಿ, ಆತನನ್ನು ಬರಮಾಡಿಕೊಂಡು ಎಲ್ಲವನ್ನೂ ವಿವರಿಸಿದಳು. ಆಗ ಶುಕ್ರ ಕ್ರೋಧಾಂಧನಾಗಿ "ಶರ್ಮಿಷ್ಠೆ ಹೀಗೆಲ್ಲ ಹೀಯಾಳಿಸಿರುವಳೇ? ನನ್ನ ಸಾಮರ್ಥ್ಯವನ್ನು ವೃಷಪರ್ವನೇ ಬಲ್ಲ ಇಂದ್ರನೂ, ಯಯಾತಿಯೂ ಬಲ್ಲರು. ಇರಲಿ. ಇದೆಲ್ಲವೂ ಇಂದಿನವರೆಗೆ ನಾನು ರಕ್ಕಸರನ್ನು ಉಬ್ಬಿಸಿದುದರ ಫಲ" ಎಂದು ಹೇಳಿ ಕ್ರೋಧಭರಿತನಾಗಿ ವೃಷಪರ್ವನಲ್ಲಿಗೆ ಬಂದು ನಡೆದುದೆಲ್ಲವನ್ನೂ ವಿವರಿಸಿದ. ವೃಷಪರ್ವನೂ ಹೆದರಿದವನಾಗಿ, ಶುಕ್ರನೊಂದಿಗೆ ದೇವಯಾನಿಯಲ್ಲಿಗೆ ಬಂದು ಬೇಡಿಕೊಳ್ಳಲಾಗಿ, ದೇವಯಾನಿ ತಂದೆಯನ್ನು ಕುರಿತು "ಅಪ್ಪಾ, ನಿಜವಾಗಿಯೂ ನೀನು ಅರಸನ ಮೇಲೆ ಪ್ರಭುತ್ವವುಳ್ಳವನಾಗಿದ್ದಲ್ಲಿ ಅರಸನೇ ಆ ಮಾತನ್ನು ತನ್ನ ಬಾಯಿಂದ ಹೇಳಲಿ" ಎಂದಳು. ಆಗ ವೃಷಪರ್ವ "ಎಲೌ ಶುಚಿಸ್ಮಿತೆ, ನಿನ್ನ ಕೋರಿಕೆ ಎಂತಹ ದುರ್ಲಭವೇ ಆಗಿದ್ದರೂ ನಿನ್ನ

ಇಷ್ಟಾರ್ಥವನ್ನು ನಾನು ನೆರವೇರಿಸಿಕೊಡುವೆನು '' ಎಂದ ಆಗ ದೇವಯಾನಿ '' ಶರ್ಮಿಷ್ಠೆ ಸಾವಿರ ಮಂದಿ ದಾಸಿಯರೊಂದಿಗೆ ನನ್ನ ದಾಸಿಯಾಗಿರಬೇಕು. ನಾನು ಯಾರನ್ನು ಮದುವೆಯಾದರೆ ಅಲ್ಲಿಗೆ ನನ್ನ ಸಂಗಡ ಬರಬೇಕು '' ಎಂದಳು ಒಡನೆಯೇ ವೃಷಪರ್ವ ದಾದಿಯ ಮೂಲಕ ಶರ್ಮಿಷ್ಠೆಗೆ ಹೇಳಿಕಳುಹಲಾಗಿ, ವಂಶದ ಅಭಿವೃದ್ಧಿಯನ್ನು ಬಯಸಿದ ಶರ್ಮಿಷ್ಠೆ ಸಾವಿರ ಮಂದಿ ದಾಸಿಯರೊಂದಿಗೆ ಪಲ್ಲಕ್ಕಿಯನ್ನು ತೆಗೆಸಿಕೊಂಡು ದೇವಯಾನಿಯಲ್ಲಿಗೆ ಬಂದು '' ನಾನು ನಿನ್ನ ದಾಸಿಯಾಗಿದ್ದೇನೆ—ನಿನ್ನ ಸಂಗಡಲೇ ಬರುತ್ತೇನೆ '' ಎಂದು ಮುಂತಾಗಿ ಹೇಳಿ ಕೈಕಟ್ಟಿ ನಿಂತುಕೊಂಡಳು ಬಳಿಕ ದೇವ ಯಾನಿ ಶರ್ಮಿಷ್ಠೆಯನ್ನು ಬಗೆಬಗೆಯ ಚುಚ್ಚುಮಾತುಗಳಿಂದ ಹಂಗಿಸಿ, ತಂದೆ ಯೊಂದಿಗೆ ಪಟ್ಟಣವನ್ನು ಪ್ರವೇಶಿಸಿದಳು ಬಳಿಕ ಕೆಲ ಕಾಲದಮೇಲೆ ದೇವಯಾನಿ ವನವಿಹಾರಕ್ಕೆ ಹೋಗಿದ್ದಾಗ ಯಯಾತಿ ಮರಳಿ ಬೇಟೆಗೆ ಬಂದಿರಲಾಗಿ ಆತನನ್ನು ಕಂಡು ಮೋಹಭರಿತೆಯಾಗಿ '' ಎಲೆ ರಾಜಶ್ರೇಷ್ಠನೆ, ಎರಡು ಸಾವಿರ ತೊತ್ತುಗ ಳೊಂದಿಗೆ, ದಾಸಿಯಾದ ಈ ಶರ್ಮಿಷ್ಠೆಯ ಸಹಿತವಾಗಿ ನಾನು ನಿನ್ನ ವಶವರ್ತಿನಿ ಯಾಗಿದ್ದೇನೆ—ನನ್ನನ್ನು ಮದುವೆಯಾಗು '' ಎಂದಳು ಯಯಾತಿ ಬ್ರಾಹ್ಮಣ ಪುತ್ರಿಯಾದ ದೇವಯಾನಿಯನ್ನು ಮದುವೆಯಾಗಲು ಸಮ್ಮತಿಸದಿರಲು ದೇವಯಾನಿ ಅನೇಕ ವಿಧವಾದ ಶಾಸ್ತ್ರೋಕ್ತಿಗಳಿಂದಲೂ ಲೌಕಿಕ ನಡೆವಳಿಗಳಿಂದಲೂ ಆತನನ್ನು ಸಮ್ಮತಿಪಡಿಸಿ, ತನ್ನ ತಂದೆಗೆ ಈ ವರ್ತಮಾನವನ್ನು ಹೇಳಿಕಳುಹಲಾಗಿ, ಶುಕ್ರ ಅಲ್ಲಿಗೆ ಬಂದ ಯಯಾತಿ ವಿನಯದಿಂದ ನಮಸ್ಕರಿಸಲಾಗಿ, ಶುಕ್ರ ಆತನನ್ನು ತಕ್ಕ ರೀತಿಯಿಂದ ಗೌರವಿಸಿದ ಆಗ ದೇವಯಾನಿ '' ಪಿತನೆ, ನಾನು ಬಾವಿಯಲ್ಲಿ ಬಿದ್ದಿದ್ದಾಗ ಈ ಮಹಾನುಭಾವನು ನನ್ನ ಕೈಹಿಡಿದು ಮೇಲಕ್ಕೆ ಎತ್ತಿ, ನನ್ನ ಪ್ರಾಣವನ್ನು ಕಾಪಾಡಿರುವನಾಗಿ ಈತನೇ ನನ್ನ ಪತಿ ನಾನು ಬೇರೊಬ್ಬನನ್ನು ವರಿಸೆ '' ಎಂದಳು. ಬಳಿಕ ಶುಕ್ರ ಯಯಾತಿಯನ್ನು ಕುರಿತು '' ಅಯ್ಯಾ ರಾಜಶ್ರೇಷ್ಠನೆ, ನನ್ನ ಮಗ ಳನ್ನು ನೀನು ಮದುವೆಯಾಗು. ನಿನಗೆ ಪಾಪವಿಲ್ಲದಂತೆ ನಾನು ನೋಡಿಕೊಳ್ಳುತ್ತೇನೆ. ಈ ಹುಡುಗಿ ವೃಷಪರ್ವ ರಾಜನ ಮಗಳು ಈಕೆಯನ್ನೂ ಗೌರವದಿಂದ ಕಾಪಾಡು. ಆದರೆ ದಾಸಿಯೇ ಹೊರತು ಪತ್ನಿಯಾಗಶಕ್ಯವಳಲ್ಲ '' ಎಂದ ಯಯಾತಿ ಶುಕ್ರ ನಿಗೆ ಸಾಷ್ಟಾಂಗವೆರಗಿ, ದೇವಯಾನಿಯೊಂದಿಗೆ ತನ್ನ ಪಟ್ಟಣವನ್ನು ಸೇರಿದ [ಆದಿ. ೬೩, ೬೯, ೭೦-೭೫]. ಬಳಿಕ ಯಯಾತಿ ದೇವಯಾನಿಯನ್ನು ಅಂತಃಪುರದಲ್ಲಿರಿಸಿ, ಶರ್ಮಿಷ್ಠೆಗೆ ಪ್ರತ್ಯೇಕವಾದ ಒಂದು ಸೌಧವನ್ನು ಕಲ್ಪಿಸಿ, ಸಕಲ ವಿಧವಾದ ವಸ್ತ್ರ ಭೂಷಣ ಭೋಗಭಾಗ್ಯಗಳೊಂದಿಗೆ ಆ ಮನೆಯಲ್ಲಿರಿಸಿದ. ದೇವಯಾನಿ ಯಯಾತಿ ಯಿಂದ ಯದುವೆಂಬ ಪುತ್ರನನ್ನು ಪಡೆದಳು ಒಮ್ಮೆ ಯಯಾತಿ ಒಂಟಿಗನಾಗಿ ವನವಿಹಾರಕ್ಕೆ ಹೋಗಿದ್ದಾಗ ಶರ್ಮಿಷ್ಠೆ ಆತನನ್ನು ಮರೆಹೊಕ್ಕು ಗರ್ಭಧಾರಣಮಾಡಿ

ದ್ರುಹುವೆಂಬ ಮಗನನ್ನು ಹೆತ್ತಳು. ಈ ಮಾತನ್ನು ಕೇಳಿ ದೇವಯಾನಿ ಶರ್ಮಿಷ್ಠೆಯಲ್ಲಿಗೆ ಹೋಗಿ " ಎಲೌ, ನೀನು ಇಂತಹ ಅನ್ಯಾಯವನ್ನು ಮಾಡಬಹುದೇ ? " ಎನಲು ಶರ್ಮಿಷ್ಠೆ ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದೊಪ್ಪುವ ಒಬ್ಬ ದ್ವಿಜನಿಂದ ಗರ್ಭಧಾರಣಮಾಡಿದೆನೆಂದು ಹೇಳಲು, ದೇವಯಾನಿ ಆ ಮಾತನ್ನು ನಂಬಿ ಹಿಂದಿರುಗಿದಳು ಬಳಿಕ ದೇವಯಾನಿ ತುರ್ವಸುವೆಂಬ ಪುತ್ರನನ್ನು ಪಡೆದಳು. ಆಗ್ಗೆ ಶರ್ಮಿಷ್ಠೆ ಅನು, ಪೂರು ಎಂಬ ಮತ್ತಿಬ್ಬರು ಪುತ್ರರನ್ನು ಪಡೆದಿದ್ದಳು ಒಂದು ದಿನ ದೇವಯಾನಿ ಯಯಾತಿಯೊಂದಿಗೆ ಉದ್ಯಾನವನಕ್ಕೆ ಬಂದಿರುವಲ್ಲಿ ಅಲ್ಲಿ ಕ್ರೀಡಾಸಕ್ತರಾಗಿದ್ದ ಆ ತರಳರನ್ನು ಕಂಡು, ಅವರನ್ನು ಬರಮಾಡಿ " ಮಕ್ಕಳಿರಾ, ನಿಮ್ಮ ತಂದೆ ಯಾರು ? ಆತನ ಹೆಸರೇನು ? ನೀವು ಯಾವ ಗೋತ್ರದವರು ? ಎಂದು ವಿಚಾರಿಸಲಾಗಿ ಅವರು ಯಯಾತಿಯನ್ನು ಬೆರಳಿನಿಂದ ತೋರಿಸಿಬಿಟ್ಟರು. ಒಡನೆಯೇ ದೇವಯಾನಿ ಶರ್ಮಿಷ್ಠೆಯಲ್ಲಿಗೆ ಬಂದು " ನೀನು ನನಗೆ ಇಂತಹ ಅಪಕಾರವನ್ನು ಮಾಡಬಹುದೇ ? " ಎನಲು, ಶರ್ಮಿಷ್ಠೆ ಸಖಿಯು ಗಂಡನೇ ಆ ಸಖಿಯು ದಾಸಿಗೂ ಗಂಡನಲ್ಲವೇನು ? " ಎಂದು ಹೇಳಿದಳು ಇದನ್ನು ಕೇಳಿದ ಕೂಡಲೇ ದೇವಯಾನಿ ರೋಷಭರಿತೆಯಾಗಿ ಎಲೆ ರಾಜನೆ, ಇನ್ನು ನಾನು ಇಲ್ಲಿರಲಾರೆನೆಂದು ಹೇಳಿ ಹೊರಟುಹೋದಳು. ಯಯಾತಿಯೂ ಆಕೆಯನ್ನು ಹಿಂಬಾಲಿಸಿದನು. ಶುಕ್ರ ಮಗಳ ಮೂಲಕ ನಡೆದ ಸಮಾಚಾರವನ್ನೆಲ್ಲ ಕೇಳಿ, " ಎಲೆ ರಾಜೇಂದ್ರ, ನೀನು ಧರ್ಮಜ್ಞನಾಗಿದ್ದರೂ ಅಧರ್ಮವನ್ನು ಆಚರಿಸಿರುವೆಯಾಗಿ ನೀನು ಮುದುಕನಾಗು " ಎಂದು ಶಾಪವಿತ್ತ. ಯಯಾತಿ ಒಡನೆಯೇ ಮುದುಕನಾಗಿ ವಿನಯದಿಂದ " ಎಲೆ ಮುನೀಶ್ವರ, ನನ್ನ ಮುದಿತನವನ್ನು ತೊಲಗಿಸು " ಎಂದು ಬಹಳವಾಗಿ ಬೇಡಿಕೊಂಡ ಆಗ ಶುಕ್ರ " ನನ್ನ ಮಾತು ಸುಳ್ಳಾಗಲಾರದು ನಿನಗೆ ಯೌವನದಲ್ಲಿ ಅಭಿಲಾಷೆಯಿದ್ದಲ್ಲಿ ನಿನ್ನ ಮುದಿತನವನ್ನು ಯಾರಿಗಾದರೂ ಕೊಟ್ಟು, ಅವನ ತಾರುಣ್ಯವನ್ನು ನೀನು ಪಡೆ. ನಿನಗೆ ನಿನ್ನ ಮಕ್ಕಳಲ್ಲಿ ಯಾವನು ತನ್ನ ಯೌವನವನ್ನು ಕೊಡುತ್ತಾನೆಯೋ ಅವನೇ ರಾಜ್ಯಾಧಿಕಾರಿಯಾಗಲಿ. ನಿನಗೆ ಪಾಪ ಬರಲಾರದು " ಎಂದು ಹೇಳಿ ಕಳುಹಿದ. ಬಳಿಕ ಯಯಾತಿ ತನ್ನ ಪಟ್ಟಣವನ್ನು ಸೇರಿ, ದೇವಯಾನಿಯ ಮಕ್ಕಳಾದ ಯದು, ತುರ್ವಸು ಎಂಬವರನ್ನು ಕರೆದು, ತನ್ನ ಮುದಿತನವನ್ನು ತೆಗೆದುಕೊಂಡು ಅವರ ತಾರುಣ್ಯವನ್ನು ಕೊಡಕೇಳಿದ. ಅವರಿಬ್ಬರೂ ಸಮ್ಮತಿಸಲಿಲ್ಲ. ಅಂತೆಯೇ ಶರ್ಮಿಷ್ಠೆಯ ಮಕ್ಕಳಾದ ಅನು, ದ್ರುಹು ಎಂಬವರೂ ಸಮ್ಮತಿಸದಿರಲು, ಕಡೆಗೆ ಪೂರುವೆಂಬವನು ತನ್ನ ಯೌವನವನ್ನು ಕೊಟ್ಟು ಆತನ ಮುದಿತನವನ್ನು ಕೈಕೊಂಡು ರಾಜ್ಯಾಧಿಕಾರವನ್ನು ಪಡೆದ. ಬಹಳ ಕಾಲದ ತರುವಾಯ ಯಯಾತಿ ತಾರುಣ್ಯದಲ್ಲಿ ಬೇಸರಪಟ್ಟು ವೈರಾಗ್ಯವನ್ನು ತಳೆದು, ತನ್ನ ಮುದಿತನವನ್ನು ತಾನೇ ವಹಿಸಿ, ಪೂರುವಿನ

ಯೌವನವನ್ನು ಆತನಿಗೆ ಕೊಟ್ಟು, ತಾನು ವಾನಪ್ರಸ್ಥನಾದ [ಭಾರ.-ಆದಿ. ೬೩-೭೭. ಭಾಗ.-೯-೧೮. ಮತ್ಸ್ಯ.-೩೪-೩೫].

**ದೇವರಾತ.**—(i) ಸೀತೆಯ ಪಾಲಕ ಪಿತನಾದ ಸೀರಧ್ವಜ ಜನಕನ ಹಿಂದಣ ಆರನೆಯ ತಲೆಯ ಅರಸು. ಪರಮೇಶ್ವರ ದಕ್ಷಯಜ್ಞಸಂಹಾರಾನಂತರ, ತನ್ನ ಬಿಲ್ಲಿಗೆ ಹೆದೆಯನ್ನು ಬಿಗಿದು ದೇವತೆಗಳನ್ನು ಕಂಡು, ಎಲೆ ಮೂಢರಾದ ದೇವತೆಗಳಿರಾ, ನೀವು ದಕ್ಷನು ಮಾಡಿದ ಯಜ್ಞದಲ್ಲಿ ನನಗೆ ಸಲ್ಲಬೇಕಾದ ಭಾಗವನ್ನು ಸಲ್ಲಿಸದೆ ನೀವೇ ತೆಗೆದುಕೊಂಡಿರುವಿರಾಗಿ ನಿಮ್ಮ ತಲೆಗಳನ್ನೆಲ್ಲ ಈ ಬಿಲ್ಲಿನಿಂದ ಉರುಳಿಸುವೆನು '' ಎಂದು ಹೆದರಿಸಿದ ಬಳಿಕ ದೇವತೆಗಳೆಲ್ಲರೂ ಕಂಗೆಟ್ಟು '' ಮಹಾ ಪ್ರಭೋ, ಕರುಣಾನಿಧೇ, ತ್ರಾಹಿ ತ್ರಾಹಿ '' ಎಂದು ಮೊರೆಯಿಟ್ಟು ಆತನನ್ನೇ ಮರೆಹೊಕ್ಕರು. ಆಗ ಪರಮೇಶ್ವರ ಪ್ರಸನ್ನನಾಗಿ, ತನ್ನ ಬಿಲ್ಲನ್ನು ದೇವತೆಗಳ ವಶಕ್ಕೆ ಕೊಟ್ಟ ದೇವತೆಗಳು ಆ ಬಿಲ್ಲನ್ನು ದೇವರಾತನಲ್ಲಿ ನ್ಯಾಸವಾಗಿರಿಸಿದ್ದರು. ದೇವರಾತ ಆ ಬಿಲ್ಲನ್ನು ಮಂತ್ರಿಸಿ ತನ್ನ ಮನೆಯಲ್ಲಿಟ್ಟಿದ್ದ ಸೀತಾ ವಿವಾಹಸಮಯದಲ್ಲಿ ಸೀರಧ್ವಜ ಅದೇ ಬಿಲ್ಲನ್ನೇ ಪಣವಾಗಿಟ್ಟ. ಶ್ರೀ ರಾಮ ಅದನ್ನು ಮುರಿದು ಸೀತೆಯನ್ನು ಮದುವೆಯಾದ [ರಾಮಾ.-ಬಾಲ. ೬೬, ೬೭].

(ii) ಋಚೀಕ ಮುನಿಯ ಮಧ್ಯಮ ಪುತ್ರನಾದ ಶುನಶ್ಶೇಪನ ನಾಮಾಂತರ. ನೋಡು—ಶುನಶ್ಶೇಪ.

**ದೇವಲ.**—ಅಷ್ಟವಸುಗಳಲ್ಲಿ ಒಬ್ಬನಾದ ಪ್ರತ್ಯೂಷನೆಂಬ ವಸುವಿನ ಮಗ. ಬ್ರಹ್ಮರ್ಷಿ [ಭಾರ.-ಆದಿ. ೬೭]. ಕೃಶಾಶ್ವ ಋಷಿಯಿಂದ ಧಿಷಣೆಯೆಂಬವಳಲ್ಲಿ ಜನಿಸಿದ ನಾಲ್ವರು ಪುತ್ರರಲ್ಲಿ ಒಬ್ಬ [ಭಾಗ -೬-೬]. ಪಾಂಡವರ ಪುರೋಹಿತನಾದ ಧೌಮ್ಯ ಮುನಿ ಈತನ ಒಡಹುಟ್ಟಿದವನು [ಆದಿ. ೧೯೯] ಈತ ಜನಮೇಜಯನ ಸರ್ಪಯಾಗದಲ್ಲಿ ಒಬ್ಬ ಸದಸ್ಯನಾಗಿದ್ದ [ಆದಿ. ೫೧-೫೩] ಕಶ್ಯಪ ವಂಶದ ಒಬ್ಬ ಬ್ರಹ್ಮರ್ಷಿ [ಮತ್ಸ್ಯ.-೧೯೮]. ಈತನಿಗೆ ಅಸಿತನೆಂಬುದು ನಾಮಾಂತರ [ಶಾಂತಿ. ೨೮೧] ಈತ ದೇವಲೋಕದಲ್ಲಿ ಪಿತೃದೇವತೆಗಳಿಗೆ ಮಹಾಭಾರತ ಕಥೆಯನ್ನು ವಿವರಿಸಿದ [ಆದಿ. ೧] ಈತ ಜೈಗೀಷವ್ಯ ಮಹರ್ಷಿಯ ಯೋಗಪ್ರಭಾವವನ್ನು ಕಂಡು ಆಶ್ಚರ್ಯಪಟ್ಟ [ಶಲ್ಯ. ೫೧]. ಪ್ರಾಣಿಗಳ ಉತ್ಪತ್ತಿ, ವಿನಾಶ ಮುಂತಾದುವುಗಳ ವಿಷಯವಾಗಿ ನಾರದನೊಂದಿಗೆ ಈತ ಸಂವಾದಮಾಡಿದ್ದು [ಶಾಂತಿ. ೨೮೧]. ಈತ ಹೂಹೂ ಎಂಬ ಗಂಧರ್ವನಿಗೆ ಮೊಸಳೆಯಾಗುವ ಹಾಗೆ ಶಾಪ ಕೊಟ್ಟಿದ್ದು [ಭಾಗ.-೮-೪].

**ದೇವವರ್ಧನ.**—ಯದು ವಂಶದ ಆಹುಕ ರಾಜನ ಹಿರಿಯ ಮಗನಾದ ದೇವಕನ ನಾಲ್ಕನೆಯ ಮಗ. ದೇವಕಿಯ ಸಹೋದರ. ನೋಡು—ದೇವಕ.

**ದೇವವತಿ** —ಗ್ರಾಮಣಿಯೆಂಬ ಗಂಧರ್ವನ ಮಗಳು ವಿದ್ಯುತ್ಕೇಶನ ಮಗನಾದ ಸುಕೇಶನನ್ನು ಮದುವೆಯಾಗಿ ಮಾಲಿ, ಮಾಲ್ಯವಂತ, ಸುಮಾಲಿ ಎಂಬ ಮೂವರು ಪುತ್ರರನ್ನು ಪಡೆದಳು [ರಾಮಾ.-ಉತ್ತ. ೫].

**ದೇವವರ್ಣಿನಿ.**—ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ಭರದ್ವಾಜ ಮುನಿಯ ಮಗಳು. ಈಕೆ ಪುಲಸ್ತ್ಯ ಪುತ್ರನಾದ ವಿಶ್ರವನನ್ನು ಮದುವೆಯಾಗಿ ಕುಬೇರನನ್ನು ಹೆತ್ತಳು [ರಾಮಾ -ಉತ್ತ. ೩. ದೇ ಭಾ -೧೨-೧೦].

**ದೇವವ್ರತ.**—ಭೀಷ್ಮಾಚಾರ್ಯನ ಹೆಸರು [ಆದಿ ೬೬, ೧೦೭]

**ದೇವಶರ್ಮ** —(I) ಒಬ್ಬ ಮಹರ್ಷಿ. ಈತನ ಹೆಂಡತಿಯಾದ ರುಚಿಯೆಂಬಾಕೆ ಮಹಾ ಸೌಂದರ್ಯಭರಿತೆಯಾಗಿದ್ದುದರಿಂದ ಇಂದ್ರ ಈಕೆಯನ್ನು ಹೊಂದುವ ಸಲುವಾಗಿ ಹಲವು ವಿಧದಿಂದ ಪ್ರಯತ್ನಿಸಿ ಕಡೆಗೆ ಭಗ್ನನಾದ [ಭಾರ -ಅನು. ೭೫].

(II) ಒಬ್ಬ ಮಹರ್ಷಿ ಜನಮೇಜಯನ ಸರ್ಪಯಾಗದಲ್ಲಿ ಸದಸ್ಯನಾಗಿದ್ದ [ಭಾರ -ಆದಿ. ೫೩]

**ದೇವಸಾವರ್ಣಿ.**—ಒಬ್ಬ ಮನು. ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದಲ್ಲಿ ಹದಿಮೂರನೆಯ ಮನು ಈತನಿಗೆ ಚಿತ್ರಸೇನ ವಿಚಿತ್ರರೆಂಬ ಇಬ್ಬರು ಪುತ್ರರಿದ್ದರು ಈತನ ಆಳ್ವಿಕೆಯಲ್ಲಿ ಸ್ವರ್ಗಲೋಕದಲ್ಲಿ ದಿವಸ್ಪತಿಯೆಂಬ ಹೆಸರಿನ ಇಂದ್ರ ರಾಜ್ಯಭಾರಮಾಡುತ್ತಿದ್ದ ಆ ಕಾಲದಲ್ಲಿ ಸುಕರ್ಮರೆಂಬ ದೇವತೆಗಳೂ ನಿರ್ಮೋಕ, ತತ್ತ್ವದರ್ಶಿ ಮೊದಲಾದ ಸಪ್ತರ್ಷಿಗಳೂ ಇದ್ದರು. ಈ ದಿವಸ್ಪತಿಯೆಂಬ ಇಂದ್ರನಿಗೆ ಸಹಾಯಾರ್ಥವಾಗಿ ದೇವಹೋತ್ರನಿಂದ ಬೃಹತಿಯೆಂಬಾಕೆಯಲ್ಲಿ ಯೋಗೇಶ್ವರನೆಂಬ ಹೆಸರಿನಿಂದ ವಿಷ್ಣು ಇಂದ್ರನ ತಮ್ಮನಾಗಿ ಜನಿಸಿದ್ದ [ಭಾಗ -೮-೧೩].

**ದೇವಸೇನಾ** —ದಕ್ಷಬ್ರಹ್ಮನ ಮಗಳು ಒಮ್ಮೆ ಈಕೆಯೂ ಈಕೆಯ ತಂಗಿಯಾದ ದೈತ್ಯಸೇನೆಯೂ ಉದ್ಯಾನವನದಲ್ಲಿ ಸಂಚರಿಸುತ್ತಿರುವಲ್ಲಿ ಕೇಶಿಯೆಂಬ ರಾಕ್ಷಸ ಇವರಿಬ್ಬರನ್ನೂ ಅಪಹರಿಸಿದ ಇವರ ಆರ್ತನಾದವನ್ನು ಕೇಳಿ ಇಂದ್ರ ಕೇಶಿಯನ್ನು ಯುದ್ಧದಲ್ಲಿ ಸೋಲಿಸಿ, ಇವರಿಬ್ಬರನ್ನೂ ತನ್ನ ವಶದಲ್ಲಿಯೇ ಇಟ್ಟುಕೊಂಡಿದ್ದ ಷಣ್ಮುಖ ಶೂರಪದ್ಮಾಸುರನೆಂಬ ರಕ್ಕಸನನ್ನು ಕೊಂದ ಬಳಿಕ ಬ್ರಹ್ಮನ ಅಪ್ಪಣೆಯ ಮೇರೆಗೆ ದೇವಸೇನೆಯನ್ನು ಷಣ್ಮುಖನಿಗೆ ಕೊಟ್ಟು ಮದುವೆ ಮಾಡಿದ [ಭಾರ.-ವನ. ೨೨೬-೨೨೯].

**ದೇವಸ್ಥಾನ** —ಒಬ್ಬ ಬ್ರಹ್ಮರ್ಷಿ. ಮಹಾಭಾರತ ಯುದ್ಧಾನಂತರ ಯುಧಿಷ್ಠಿರ ಬಂಧುಹತ್ಯೆಗಾಗಿ ಮರುಗುತ್ತ ಕರ್ತವ್ಯವಿಮುಖನಾಗಿದ್ದಾಗ ಈತ ತನ್ನ ಉಪದೇಶದಿಂದ ಯುಧಿಷ್ಠಿರನ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿದ [ಭಾರ.-ಶಾಂತಿ. ೨೦, ೪೬].

**ದೇವಹೂತಿ**.—ಸ್ವಾಯಂಭುವ ಮನುವಿನ ಮೂವರು ಪುತ್ರಿಯರಲ್ಲಿ ಎರಡನೆಯವಳು. ಕರ್ದಮ ಮಹರ್ಷಿಯನ್ನು ಮದುವೆಯಾಗಿ ಅನಸೂಯೆಯೇ ಮೊದಲಾದ ಒಂಬತ್ತು ಮಂದಿ ಪುತ್ರಿಯರನ್ನೂ, ಮಹಾ ಜ್ಞಾನಸಂಪನ್ನನಾದ ಕಪಿಲ ಮುನಿಯನ್ನೂ ಹೆತ್ತಳು. ಕಪಿಲ ಮುನಿಯಿಂದ ಸಾಂಖ್ಯಶಾಸ್ತ್ರಸಾರವನ್ನು ಗ್ರಹಿಸಿದಳು. ನೋಡು—ಕರ್ದಮ [ಭಾಗ -೩-೩೩].

**ದೇವಹೋತ್ರ**.—ದೇವಸಾವರ್ಣಿ ಮನ್ವಂತರದಲ್ಲಿ ಯೋಗೇಶ್ವರನೆಂಬ ವಿಷ್ಣುವಿನ ತಂದೆ. ನೋಡು—ದೇವಸಾವರ್ಣಿ

**ದೇವಾತಿಥಿ** —ಚಂದ್ರ ವಂಶದ ಜಹ್ನು ರಾಜನ ಸಂತತಿಯವನಾದ ಅಕ್ರೋಧನ ರಾಜನಿಂದ ಕಳಿಂಗ ರಾಜಪುತ್ರಿಯಾದ ಕಂಡೂ ಎಂಬವಳಲ್ಲಿ ಜನಿಸಿದವ. ಈತ ವಿದರ್ಭ ರಾಜಪುತ್ರಿಯಾದ ಮರ್ಯಾದೆಯೆಂಬ ತರುಣಿಯನ್ನು ಮದುವೆಯಾಗಿ ಋಚನೆಂಬ ಮಗನನ್ನು ಪಡೆದ [ಆದಿ ೬೩]

**ದೇವಾನ್ತಕ** —ಒಬ್ಬ ರಾಕ್ಷಸ ರಾಮಾಯಣ ಯುದ್ಧದಲ್ಲಿ ಹನೂಮಂತನಿಂದ ಹತನಾದ [ರಾಮಾ -ಯುದ್ಧ. ೭೦].

**ದೇವಾಪಿ** —(I) ಚಂದ್ರ ವಂಶದ ಪ್ರತೀಪ ರಾಜನಿಂದ ಸುನಂದೆಯೆಂಬವಳಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಹಿರಿಯವ ಶಂತನು, ಬಾಹ್ಲೀಕ ಎಂಬವರು ಇವನ ತಮ್ಮಂದಿರು. ಪ್ರತೀಪನ ತರುವಾಯ ಈತನೇ ರಾಜ್ಯಕ್ಕೆ ಬಂದ ಆದರೆ ಈತನಿಗೆ ಕುಷ್ಠರೋಗ ತಲೆದೋರಿದ ಕಾರಣ ಪ್ರಜೆಗಳು, ರಾಜ್ಯಾಧಿಕಾರವನ್ನು ಶಂತನುವಿಗೆ ಕೊಟ್ಟರು ಈ ಕಾರಣದಿಂದ ದೇವಾಪಿ ವೈರಾಗ್ಯವನ್ನು ತಳೆದು ಸನ್ಯಾಸಾಶ್ರಮವನ್ನು ಸ್ವೀಕರಿಸಿದ [ಭಾರ.-ಆದಿ ೬೩, ೧೦೧]. ಶಂತನು ರಾಜ್ಯಾಧಿಕಾರವನ್ನು ಹೊಂದಿದ ಬಳಿಕ, ರಾಜ್ಯದಲ್ಲಿ ಅನಾವೃಷ್ಟಿಯಿಂದ ಪ್ರಜೆಗಳೆಲ್ಲರೂ ಬಹಳ ಕಷ್ಟಕ್ಕೆ ಗುರಿಯಾದರು ಆಗ ಶಂತನು ತನ್ನ ಅಣ್ಣನಾದ ದೇವಾಪಿಯ ಬಳಿ ಹೋಗಿ ತನ್ನ ಅಪರಾಧವನ್ನು ಮನ್ನಿಸ ಬೇಡಿದ ಬಳಿಕ ದೇಶದಲ್ಲಿ ಸುವೃಷ್ಟಿಯಾಯಿತು [ಶಲ್ಯ. ೪೧]. ಈತ ಕಲಾಪವೆಂಬ ಗ್ರಾಮದಲ್ಲಿ ವಾಸವಾಗಿದ್ದು ಯೋಗವಿದ್ಯೆಯನ್ನು ಅಭ್ಯಾಸಮಾಡಿದ ಈತ ಮುಂದಣ ಕೃತಯುಗದಲ್ಲಿ ಚಂದ್ರವಂಶವನ್ನು ಅಭಿವೃದ್ಧಿಗೊಳಿಸುತ್ತಾನೆ [ಭಾಗ -೯-೨೨. ೧೨-೨೨].

(II) ಒಬ್ಬ ಕ್ಷತ್ರಿಯ ಪ್ರಥೂದಕವೆಂಬ ತೀರ್ಥದಲ್ಲಿ ತಪಸ್ಸುಮಾಡಿ, ಬ್ರಾಹ್ಮಣ್ಯವನ್ನು ಪಡೆದ ನೋಡು—ಆರ್ಷ್ಟಿಷೇಣ [ಶಲ್ಯ ೪೧].

(III) ಚೇದಿ ದೇಶದ ಅರಸು. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿವಸದ ಯುದ್ಧದಲ್ಲಿ ಕರ್ಣನಿಂದ ಹತನಾದ [ಭಾರ.-ಕರ್ಣ ೫೧].

**ದೇವಾವೃಥ** —(i) ಯದು ವಂಶದ ಸಾತ್ವತ ರಾಜನ ಏಳು ಮಂದಿ ಪುತ್ರರಲ್ಲಿ ಐದನೆಯವ. ಭಜಿ, ಭಜಮಾನ, ದಿವ್ಯ, ವೃಷ್ಣಿ, ಅಂಧಕ, ಭೋಜ ಎಂಬವರು ಇವನ ಒಡಹುಟ್ಟಿದವರು. ಈ ದೇವಾವೃಧನು ಬಭ್ರುವೆಂಬ ಮಗನನ್ನು ಪಡೆದ. ದೇವಾವೃಧನೂ ಬಭ್ರುವೂ ಮಹಾ ಜ್ಞಾನಿಗಳಾಗಿದ್ದುದರಿಂದ, ಅನೇಕ ಮಂದಿ ಇವರಿಂದ ತತ್ತ್ವೋಪದೇಶವನ್ನು ಪಡೆದು ಮೋಕ್ಷವನ್ನೈದಿದರು

ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೈವೈರ್ದೇವಾವೃಧಸ್ಸುತಃ।
ಪುರುಷಾಃ ಪಂಚಷಷ್ಟಿಶ್ಚ ಷಟ್ಸಹಸ್ರಾಣಿ ಚಾಷ್ಟ ಚ॥
ಯೇಽಮೃತತ್ವ ಮನುಪ್ರಾಪ್ತಾಃ ಬಭ್ರೋರ್ದೇವಾವೃಧಾದಪಿ ॥

[ಶಾಂ ೨೪೦ ಅನು ೨೦೦. ಭಾಗ.-೯-೨೪].

(ii) ಒಬ್ಬ ಅರಸು ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನೇಳನೆಯ ದಿನದ ಯುದ್ಧದಲ್ಲಿ ದ್ರೌಪದೀ ನಕುಲರ ಪುತ್ರನಾದ ಶತಾನೀಕನಿಂದ ಹತನಾದ [ಕರ್ಣ ೮೫]

**ದೇವಿಕಾ** —(i) ಭಾರತ ವರ್ಷದ ಒಂದು ನದಿ ಹಿಮವತ್ಪರ್ವತದಿಂದ ಹರಿಯುತ್ತದೆ [ಭೀಷ್ಮ ೯].

(ii) ಯುಧಿಷ್ಠಿರನ ಪತ್ನಿಯಾದ ದೇವಕಿಯ ನಾಮಾಂತರ. ನೋಡು—ದೇವಕೀ ಯೌಧೇಯ.

**ದೇವೀ.**—ಪಶ್ಚಿಮ ದಿಕ್ಪಾಲಕನಾದ ವರುಣನ ಹೆಂಡತಿ ಈಕೆ ವರುಣನಿಂದ ಬಲನೆಂಬ ಪುತ್ರನನ್ನೂ, ಮದ್ಯಾಭಿಮಾನಿದೇವತೆಯಾದ ಸುರೆಯೆಂಬ ಕನ್ಯೆಯನ್ನೂ ಹೆತ್ತಳು [ಭಾರ.-ಆದಿ ೬೭]

**ದೇಶಗಳು** —[ಭಾರ.-ಭೀ ೯. ಮತ್ಸ್ಯ -೧೧೪].

**ದೈತ್ಯ** —ದಿತಿಯ ಮಕ್ಕಳು ಇವರ ಹೆಸರುಗಳು, ವಂಶವರ್ಣನೆ ಮುಂತಾಗಿ [ಭಾರ -ಆದಿ ೬೬ ಶಾಂತಿ. ೨೩೪ ಭಾಗ -೬-೧೮. ವಿಷ್ಣು. ೧-೨೧] ಇವರು ರಾಜವಂಶದಲ್ಲಿ ಜನಿಸಿದ್ದು [ಭಾರ.-ಆದಿ. ೬೫] ಇವರ ಯುದ್ಧ [ಭಾರ.-ಆದಿ ೧೯ ಭಾಗ -೮-೧೦]

**ದೈತ್ಯಸೇನಾ.**—ದಕ್ಷಬ್ರಹ್ಮನ ಮಗಳು. ನೋಡು—ದೇವಸೇನಾ [ಭಾರ.-ವನ. ೨೨೬].

**ದೈವ.**—ಅದೃಷ್ಟ. ಇದರ ಉತ್ತಮತ್ವ [ಉದ್ಯೋ. ೭೯ ದ್ರೋ. ೨೪. ಶಲ್ಯ. ೬೪] ದೈವ ಪುರುಷಕಾರಗಳೆರಡೂ ಸೇರಿದಲ್ಲದೆ ಯಾವ ಕಾರ್ಯವೂ ಸಾಧ್ಯವಾಗಲಾರದು [ಸೌಪ್ತಿ. ೨ ಅನು. ೯].

**ದೌಹಿತ್ರಪ್ರಶಂಸೆ.**—[ಆದಿ. ೮೭].

**ದ್ಯು.**—ಅಷ್ಟವಸುಗಳಲ್ಲಿ ಒಬ್ಬ. ವಸಿಷ್ಠ ಮುನಿಯ ಧೇನುವನ್ನು ಅಪಹರಿಸಲು ಪ್ರಯತ್ನಪಟ್ಟು ಮನುಷ್ಯನಾಗಿ ಜನಿಸುವಂತೆ ಶಾಪವನ್ನು ಪಡೆದು, ಭೀಷ್ಮಾಚಾರ್ಯನಾಗಿ ಹುಟ್ಟಿದ [ಭಾರ.-ಆದಿ. ೧೦೬].

**ದ್ಯುತಿಮನ್ತ.**—(i) ಇಕ್ಷ್ವಾಕು ವಂಶದ ಮದಿರಾಶ್ವ ರಾಜನ ಮಗ ಈತನ ಮಗ ಸುವೀರ [ಭಾರ.-ಅನು ೨]

(ii) ಸಾಳ್ವ ದೇಶದ ಅರಸು. ಈತ ತನ್ನ ರಾಜ್ಯವನ್ನೆಲ್ಲ ಋಚೀಕ ಮಹರ್ಷಿಗೆ ದಾನಮಾಡಿದ [ಭಾರ.-ಶಾಂತಿ. ೨೪೦. ಅನು. ೨೦೦]

**ದ್ಯುಮತ್ಸೇನ**—(i) ಪುರಾತನ ಕಾಲದ ಅರಸು ಸಾಳ್ವ ದೇಶವನ್ನು ಪಾಲಿಸುತ್ತಿದ್ದ ಈತನಿಗೆ ಸತ್ಯವಂತನೆಂಬ ಮಗನಿದ್ದ. ಈ ಸತ್ಯವಂತ ಸಾವಿತ್ರಿಯನ್ನು ಮದುವೆಯಾದ ದ್ಯುಮತ್ಸೇನ ಕುರುಡನಾಗಿ ರಾಜ್ಯವನ್ನು ನೀಗಿಕೊಂಡು ಕಾಡಿಗೆ ಹೋದದ್ದು [ಭಾರ -ವನ ೨೯೫] ಸಾವಿತ್ರಿಯ ಮಹಿಮೆಯಿಂದ ಮರಳಿ ಕಣ್ಣು ಬಂದದ್ದು [ವನ ೨೯೯]. ಈತ ಮರಳಿ ರಾಜ್ಯವನ್ನು ಪಡೆದದ್ದು [ವನ. ೩೦೦]. ಸತ್ಯವಂತನೊಂದಿಗೆ ಧರ್ಮ ವಿಷಯವಾಗಿ ಸಂವಾದ [ಶಾಂತಿ. ೨೬೩]

(ii) ಸಾಳ್ವ ದೇಶದ ಅರಸು ಪಾಂಡವರ ಕಾಲದವ ರಾಜಸೂಯ ದಿಗ್ವಿಜಯ ಸಮಯದಲ್ಲಿ ಅರ್ಜುನನಿಂದ ಸೋತು, ಕಪ್ಪವನ್ನು ಕೊಟ್ಟ [ಭಾರ.-ಸ ೨೭].

(iii) ಮತ್ತೊಬ್ಬ ಅರಸು ಜರಾಸಂಧನ ವಂಶದವ ಶ್ರೀ ಕೃಷ್ಣನಿಂದ ಹತನಾದ [ಸ ೬೧]

**ದ್ಯೂತ**—ಜೂಜು. ಯುಧಿಷ್ಠಿರ ಶಕುನಿ ದುರ್ಯೋಧನರೊಂದಿಗೆ ಜೂಜಾಡಿದ್ದು [ಭಾರ -ಸಭಾ ೬೩-೯೫]. ನಳ ಮಹಾರಾಜನು ಪುಷ್ಕರನೊಂದಿಗೆ ಜೂಜಾಡಿದ್ದು [ಭಾರ.-ವನ. ೫೬] ಯುಧಿಷ್ಠಿರ ವಿರಾಟನೊಂದಿಗೆ ಜೂಜಾಡಿದ್ದು [ವಿರಾ. ೭೦].

**ದ್ರಮಿಡ (ದ್ರವಿಡ)**—ದಕ್ಷಿಣ ಹಿಂದೂಸ್ಥಾನದಲ್ಲಿರುವ ಪ್ರಸಿದ್ಧವಾದ ಒಂದು ದೇಶ ಪಾಂಡವರ ಕಾಲದಲ್ಲಿ ಕಾಂಚೀನಗರ ಇದರ ರಾಜಧಾನಿಯಾಗಿತ್ತು [ಭೀ. ೯]

**ದ್ರವಿಣ.**—(i) ಅಷ್ಟವಸುಗಳಲ್ಲಿ ಒಬ್ಬನಾದ ಧರನೆಂಬ ವಸುವಿನ ಮಗ [ಭಾರ.-ಆದಿ. ೬೭].

(ii) ಪೃಥು ಚಕ್ರವರ್ತಿಯಿಂದ ಅರ್ಚಿಯೆಂಬಾಕೆಯಲ್ಲಿ ಜನಿಸಿದ ಐದು ಮಂದಿ ಪುತ್ರರಲ್ಲಿ ನಾಲ್ಕನೆಯವ [ಭಾಗ.-೪-೧೫].

**ದ್ರುತಿ.**—ಋಷಭದೇವ ವಂಶದ ನಕ್ತ ರಾಜನ ಹೆಂಡತಿ ಈಕೆ ಗಯನೆಂಬ ಮಗನನ್ನು ಹೆತ್ತಳು ಈಕೆಗೆ ದ್ಯುತಿಯೆಂಬ ಹೆಸರೂ ಸಲ್ಲುತ್ತದೆ. ನೋಡು—ಗಯ.

**ದ್ರುಪದ** —ಪಾಂಚಾಲ ದೇಶದ ಅರಸು. ಯಜ್ಞಸೇನನೆಂಬುದು ಈತನ ನಾಮಾಂತರ [ಭಾರ.-ಆದಿ ೧೬೦]. ಸೋಮಕ ವಂಶದ ಪೃಷದನೆಂಬ ಅರಸು ತಪೋನಿರತನಾಗಿದ್ದಾಗ ಆತನ ನಿಯಮವನ್ನು ಭಂಗಗೊಳಿಸಲು ಅಲ್ಲಿಗೆ ಬಂದ ಮೇನಕೆಯನ್ನು ಕಂಡು ಪೃಷದ ಎದೆಗುಂದಿದ. ಆಗ ಗಂಡು ಶಿಶು ಜನಿಸಿತು ಪೃಷದ ಆ ಶಿಶುವನ್ನು ಒಂದು ಮರದ ಬುಡದಲ್ಲಿರಿಸಿ, ತಾನು ತಪಸ್ಸಿಗಾಗಿ ಬೇರೊಂದು ಕಡೆಗೆ ಹೋದ. ಅಷ್ಟರಲ್ಲಿ ಭರದ್ವಾಜ ಮುನಿಯ ತಮ್ಮನಾದ ಅಗ್ನಿವೇಶ್ಯಮಹರ್ಷಿ ಈ ಶಿಶುವನ್ನು ಕಂಡು, ಕನಿಕರದಿಂದ ತನ್ನ ಆಶ್ರಮಕ್ಕೆ ತಂದು ಮರದ ಬುಡದಲ್ಲಿ ದೊರೆತವನಾದುದರಿಂದ ದ್ರುಪದನೆಂದು ಹೆಸರಿಟ್ಟು ಕಾಪಾಡಿ, ತನ್ನ ಅಣ್ಣನ ಮಗನಾದ ದ್ರೋಣಾಚಾರ್ಯನ ಸಂಗಡ ಈತನಿಗೂ ಧನುರ್ವಿದ್ಯೆಯನ್ನು ಕಲಿಸಿದ [ಭಾರ.-ಆದಿ ೧೪೦, ೧೫೦, ೧೬೦] ಪೃಷದನ ತರುವಾಯ ದ್ರುಪದ ರಾಜ್ಯಾಭಿಷಿಕ್ತನಾದ ಒಮ್ಮೆ ದ್ರೋಣಾಚಾರ್ಯ ಧನಾಭಿಲಾಷೆಯಿಂದ ಈತನಲ್ಲಿಗೆ ಹೋಗಿ, ತಿರಸ್ಕಾರವನ್ನು ಹೊಂದಿದ [ಆದಿ ೧೪೦]. ರೋಷಭರಿತನಾದ ದ್ರೋಣ ಭೀಷ್ಮಾಚಾರ್ಯರನ್ನು ಆಶ್ರಯಿಸಿ, ಕುರು ಪಾಂಡವರಿಗೆ ಅಸ್ತ್ರಗುರುವಾಗಿದ್ದು, ಅವರ ವಿದ್ಯಾಭ್ಯಾಸ ಮುಗಿದ ತರುವಾಯ ಅರ್ಜುನನ ಮೂಲಕ ದ್ರುಪದನನ್ನು ಭಂಗಿಸಿ ಹಿಡಿತರಿಸಿದ [ಆದಿ. ೧೪೮]. ಈತನ ರಾಜಧಾನಿ ಮಾಕಂದೀನಗರ [ಆದಿ ೧೪೮]. ದ್ರೋಣ ದ್ರುಪದನ ಅರ್ಧ ರಾಜ್ಯವನ್ನು ಕಸುಗೊಂಡದ್ದು [ಆದಿ. ೧೪೮]. ಈತ ಸುತ್ರಾಮನ ಮಗಳಾದ ಕೌಸವಿಯೆಂಬವಳನ್ನು ಮದುವೆಯಾದ [ಭಾರ.-ಆದಿ ೧೪೯]. ಈತ ಸೋಮಕ ರಾಜನ ಮಗನಾದ ಪೃಷದ ರಾಜನ ಮಗ [ಭಾಗ.-೯-೨೨ ಹರಿ ೧-೩೨]. ದ್ರುಪದನ ಉತ್ಪತ್ತಿ ಮತ್ತು ವಂಶವರ್ಣನೆ [ಗರು ೧೪೦] ಪುತ್ರಸಂತಾನಾರ್ಥವಾಗಿ ತಪಸ್ಸು ಮಾಡಿ, ಶಿಖಂಡಿಯೆಂಬ ಮಗನನ್ನು ಪಡೆದದ್ದು [ಉದ್ಯೋ. ೧೮೮]. ಬಳಿಕ ದ್ರುಪದ ದ್ರೋಣನನ್ನು ಸೋಲಿಸತಕ್ಕ ಮಗನನ್ನೂ, ಅರ್ಜುನನನ್ನು ಮದುವೆಯಾಗಲು ತಕ್ಕವಳಾದ ಮಗಳನ್ನೂ ಪಡೆಯುವ ಸಲುವಾಗಿ ಯಜ್ಞಮಾಡಿದ್ದು [ಆದಿ ೧೪೯]. ಯಜ್ಞಕುಂಡದಿಂದ ಧೃಷ್ಟದ್ಯುಮ್ನನೆಂಬ ಮಗನೂ ಕೃಷ್ಣೆಯೆಂಬ ಮಗಳೂ ಜನಿಸಿದರು [ಆದಿ ೧೬೧] ಈತನಿಗೆ ಪತ್ನಿಯಾದ ಕೌಸವಿಯಲ್ಲಿ ಸುಮಿತ್ರ, ಪ್ರಿಯದರ್ಶನ ವೀರಕೇತು, ಸುರಥ, ಶತ್ರುಂಜಯ, ಧ್ವಜಕೇತು ಎಂಬ ಮಕ್ಕಳು ಜನಿಸಿದರು. ದ್ರೌಪದೀ ವಿವಾಹಾನಂತರ ಪಾಂಡವರನ್ನು ಕೊಲ್ಲುವ ಉದ್ದೇಶದಿಂದ ದುರ್ಯೋಧನ ದ್ರುಪದನ ಮೇಲೆ ದಂಡೆತ್ತಿ ಬಂದಾಗ ಸುಮಿತ್ರನೆಂಬವನು ಸಿಂಧುದೇಶಾಧಿಪತಿಯಾದ ಜಯದ್ರಥನಿಂದಲೂ, ಪ್ರಿಯದರ್ಶನನೆಂಬವನು ಕರ್ಣನಿಂದಲೂ ಮಡಿದರು [ಆದಿ. ೨೧೮]. ವೀರಕೇತುವೆಂಬವನು ಭಾರತ ಯುದ್ಧದಲ್ಲಿ ಹದಿನಾಲ್ಕನೆಯ ದಿನ ದ್ರೋಣನಿಂದ ಹತನಾದ [ದ್ರೋಣ. ೧೨೨]. ಶತ್ರುಂಜಯ ಸುರಥರೆಂಬವರು ಹದಿ

ನೈದನೆಯ ದಿನದ ಯುದ್ಧದಲ್ಲಿ ಅಶ್ವತ್ಥಾಮನಿಂದ ಹತರಾದರು [ದ್ರೋ. ೧೫೭]. ಅಭಿಮನ್ಯುವಿನ ವಿವಾಹಾನಂತರ ಪಾಂಡವರು ಉಪಪ್ಲಾವ್ಯ ನಗರದಲ್ಲಿ ವಾಸಮಾಡುತ್ತಿದ್ದಾಗ ದ್ರುಪದ ಕುರು ಪಾಂಡವರ ಸಂಧಿಗಾಗಿ ತನ್ನ ಪುರೋಹಿತನನ್ನು ಧೃತರಾಷ್ಟ್ರನಲ್ಲಿಗೆ ಕಳುಹಿಸಿದ [ಉದ್ಯೋ ೬] ದ್ರುಪದ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನಾಲ್ಕನೆಯ ದಿವಸದ ರಾತ್ರಿ ಯುದ್ಧದಲ್ಲಿ ದ್ರೋಣನಿಂದ ಹತನಾದ [ದ್ರೋಣ ೧೮೭]. ನೋಡು—ಧೃಷ್ಟದ್ಯುಮ್ನ

**ದ್ರುಮ** —(i) ಕೌರವರ ಸಾರಥಿಯಾದ ಅಧಿರಥನ ಮಗ. ಕರ್ಣನ ಬಲತಮ್ಮ. ಭಾರತ ಯುದ್ಧದಲ್ಲಿ ಹದಿನೈದನೆಯ ದಿನ ಭೀಮನಿಂದ ಹತನಾದ [ದ್ರೋಣ. ೧೫೬].

(ii) ಕಿಂಪುರುಷರೆಂಬ ದೇವಯೋನಿ ವಿಶೇಷದವರ ಗುರು [ಭಾರ.-ಸಭಾ. ೧೦, ೬೭]

**ದ್ರುಮಸೇನ** —(i) ದುರ್ಯೋಧನ ಪಕ್ಷದ ಅರಸು ಭಾರತ ಯುದ್ಧದ ಹದಿನೈದನೆಯ ದಿನದಲ್ಲಿ ಧೃಷ್ಟದ್ಯುಮ್ನನಿಂದ ಹತನಾದ [ದ್ರೋಣ ೧೭೧]

(ii) ಶಲ್ಯ ರಾಜನ ಸೇನಾಪತಿ ಭಾರತ ಯುದ್ಧದ ಹದಿನೆಂಟನೆಯ ದಿನ ಯುಧಿಷ್ಠಿರನಿಂದ ಹತನಾದ [ಶಲ್ಯ. ೧೧]

**ದ್ರುಮಿಲ**.—ಒಬ್ಬ ರಾಕ್ಷಸ ಕಂಸನ ತಾಯಿ ವನವಿಹಾರಕ್ಕೆ ಹೋಗಿದ್ದಾಗ ಕಾಮವಿಕಾರಕ್ಕೆ ಎಡೆಯಾದಳು. ಆಗ ದ್ರುಮಿಲ ಉಗ್ರಸೇನನ ರೂಪದಿಂದ ಆಕೆಯೊಡನೆ ಸೇರಲಾಗಿ ಈತನ ಮೂಲಕ ಗರ್ಭಧಾರಣ ಮಾಡಿದ ಕಾರಣ ಕಂಸನು ರಾಕ್ಷಸಗುಣಭರಿತನಾದನು [ಹರಿ ೨-೨೮]

**ದ್ರುಹು** —ಚಂದ್ರ ವಂಶದ ಯಯಾತಿ ರಾಜನಿಂದ ಶರ್ಮಿಷ್ಠೆಯಲ್ಲಿ ಜನಿಸಿದವ. ಅನು, ಪೂರು ಎಂಬವರು ಇವನ ಸಹೋದರರು ಈತನೂ ತನ್ನ ತಂದೆಯ ಮುದಿತನವನ್ನು ಕೈಕೊಂಡು ತನ್ನ ಯೌವನವನ್ನು ಆತನಿಗೆ ಕೊಡಲು ಸಮ್ಮತಿಸಲಿಲ್ಲವಾಗಿ ಈತನಿಗೂ ಈತನ ವಂಶದವರಿಗೂ ರಾಜ್ಯಾಧಿಕಾರವಿಲ್ಲವಾಯಿತು [ಭಾರ -ಆದಿ ೬೩, ೬೯]. ಇವನ ವಂಶವರ್ಣನೆ [ಭಾಗ.-೯-೨೩] ನೋಡು—ದೇವಯಾನಿ, ಯಯಾತಿ, ಶರ್ಮಿಷ್ಠೆ.

**ದ್ರುಹ್ಯ**.—ಚಂದ್ರ ವಂಶದ ಮತಿನಾರನ ಮಗ [ಆದಿ ೮೮].

**ದ್ರೋಣ**.—(i) ಅಷ್ಟವಸುಗಳಲ್ಲಿ ಒಬ್ಬ ಈತನೂ ಈತನ ಪತ್ನಿಯಾದ ಧರೆಯೆಂಬವಳೂ ಗಂಧಮಾದನ ಪರ್ವತದಲ್ಲಿ ಬಹಳ ಕಾಲದವರೆಗೆ ಸಂತಾನಾರ್ಥವಾಗಿ ತಪಸ್ಸು ಮಾಡಿದರು. ಎಷ್ಟು ಕಾಲ ತಪಸ್ಸು ಮಾಡಿದರೂ ಫಲ ದೊರೆಯದಿರಲು ಇವರಿಬ್ಬರೂ ಅಗ್ನಿಪ್ರವೇಶ ಮಾಡಿದರು. ಆಗ " ನೀವು ಚಿಂತಿಸ ಕೆಲಸವಿಲ್ಲ. ಭಗವಂತನೇ ನಿಮ್ಮಲ್ಲಿ ಪುತ್ರಭಾವದಿಂದಿದ್ದು ತನ್ನ ಬಾಲಲೀಲೆಗಳನ್ನು ತೋರಿ, ಅನೇಕ

ವಾದ ಅದ್ಭುತಚರಿತ್ರೆಗಳಿಂದ ನಿಮ್ಮನ್ನು ಸಂತೋಷಪಡಿಸುವನು'' ಎಂಬುದಾಗಿ ಅಶರೀರವಾಣಿ ನುಡಿಯಿತು ಬಳಿಕ ಇವರಿಬ್ಬರೂ ನಂದಗೋಕುಲದಲ್ಲಿ ಯಶೋದಾ, ನಂದರೆಂಬ ಹೆಸರಿನಿಂದ ಜನಿಸಿ, ದೇವಕೀ ವಸುದೇವರಿಗೂ ಲಭ್ಯವಾಗದ ಪರಮಾತ್ಮನ ಅನೇಕ ಬಾಲಲೀಲೆಗಳನ್ನೂ ಅದ್ಭುತಕಾರ್ಯಗಳನ್ನೂ ಕಂಡು ಆನಂದಪರವಶರಾಗಿದ್ದರು [ಭಾಗ -೧೦-೮]

(ii) ಶಾಙ್ರ್ಗಕನೆಂಬ ಹೆಸರಿನ ಒಬ್ಬ ಬ್ರಹ್ಮರ್ಷಿ ಪಕ್ಷಿರೂಪವನ್ನು ಧರಿಸಿದ್ದ ಮಂದಪಾಲನೆಂಬ ಮುನಿಯಿಂದ ಜರಿತೆಯೆಂಬಾಕೆಯಲ್ಲಿ ಜನಿಸಿದವ ಈತ ತಾರ್ಕ್ಷಿಯನ್ನು ಮದುವೆಯಾಗಿ ಪಿಂಗಾಕ್ಷ, ವಿರಾಟ, ವೃತ, ಸುಮುಖರೆಂಬ ತನಯರನ್ನು ಪಡೆದ [ಭಾರ -ಆದಿ ೨೩೩]. ವ್ಯಾಸ ಶಿಷ್ಯನಾದ ಜೈಮಿನಿ ಮಹರ್ಷಿ ಈ ಹಕ್ಕಿಗಳನ್ನು ಪ್ರಶ್ನೆಮಾಡಿ ಅನೇಕ ಧರ್ಮಸಂದೇಹಗಳನ್ನು ನಿವೃತ್ತಿಮಾಡಿಕೊಂಡ. ಈ ಹಕ್ಕಿಗಳಿಗೆ ಧರ್ಮಪಕ್ಷಿಗಳೆಂದು ಹೆಸರು [ಮಾರ್ಕಂ -೪]

(iii) ಭರದ್ವಾಜ ಮಹರ್ಷಿ ತಪಸ್ಸು ಮಾಡುತ್ತಿದ್ದಾಗ ಘೃತಾಚಿಯೆಂಬ ಅಪ್ಸರಸಿಯನ್ನು ಕಂಡು ಎದೆಗುಂದಿದ ಕೂಡಲೇ ಆ ಮುನಿ ತನ್ನ ವೀರ್ಯವನ್ನು ಒಂದು ದ್ರೋಣದಲ್ಲಿ (ದೊನ್ನೆಯಲ್ಲಿ) ಇರಿಸಲಾಗಿ ಅಲ್ಲಿಯೇ ಒಂದು ಗಂಡು ಮಗು ಹುಟ್ಟಿತು ಇವನೇ ದ್ರೋಣಾಚಾರ್ಯ ದ್ರೋಣದಿಂದಲೇ ಜನಿಸಿದವನಾದುದರಿಂದ ದ್ರೋಣನೆಂದು ಹೆಸರು. ತನ್ನ ಚಿಕ್ಕಪ್ಪನಾದ ಅಗ್ನಿವೇಶ್ಯ ಮಹರ್ಷಿಯಲ್ಲಿಯೇ ಧನುರ್ವಿದ್ಯೆಯನ್ನು ಕಲಿತ ದ್ರುಪದ ಈತನ ಸಹಪಾಠಿ [ಆದಿ ೬೪, ೧೪೦, ೧೭೦] ಈತ ಬೃಹಸ್ಪತ್ಯಾಚಾರ್ಯನ ಅಂಶದಿಂದ ಜನಿಸಿದವ [ಆದಿ ೬೮] ಶರದ್ವಂತನ ಮಗಳಾದ ಕೃಪಿಯೆಂಬಾಕೆಯನ್ನು ಮದುವೆಯಾಗಿ ಅಶ್ವತ್ಥಾಮನೆಂಬ ಪುತ್ರನನ್ನು ಪಡೆದ [ಆದಿ ೧೪೦] ಧನಾರ್ಜನೆಗಾಗಿ ತನ್ನ ಬಾಲ್ಯಸ್ನೇಹಿತನಾದ ದ್ರುಪದನಲ್ಲಿಗೆ ಹೋಗಿ ಭಂಗಪಟ್ಟ [ಆದಿ. ೧೪೦-೧೪೧] ಈತ ಪರಶುರಾಮನಲ್ಲಿ ಅಸ್ತ್ರವಿದ್ಯಾ ರಹಸ್ಯಗಳನ್ನು ತಿಳಿದು ಆಚಾರ್ಯಪಟ್ಟವನ್ನು ಪಡೆದ [ಆದಿ ೧೪೦, ೧೭೦] ಬಳಿಕ ಭೀಷ್ಮಾಚಾರ್ಯನಲ್ಲಿಗೆ ಬರುತ್ತ ಹಸ್ತಿನಾಪುರದ ಬಳಿಯಲ್ಲಿ ಕುರು ಪಾಂಡವರು ಆಟವಾಡುತ್ತಿದ್ದಾಗ ಅವರ ಚೆಂಡು ಬಾವಿಯಲ್ಲಿ ಬಿದ್ದಿರಲಾಗಿ, ಆ ಬಾಲಕರು ಪರಿತಪಿಸುತ್ತಿದ್ದಾಗ ಈತ ಆ ಚೆಂಡನ್ನು ತನ್ನ ಅಸ್ತ್ರವಿದ್ಯಾಚಾತುರ್ಯದಿಂದ ಮೇಲಕ್ಕೆ ಎತ್ತಿಕೊಟ್ಟು, ಆ ಕುಮಾರರ ಮೆಚ್ಚುಗೆಗೆ ಪಾತ್ರನಾಗಿ, ಅವರ ಮೂಲಕ ಭೀಷ್ಮನಲ್ಲಿ ಸೇರಿ, ಕುಮಾರರಿಗೆ ಅಸ್ತ್ರವಿದ್ಯೆಯನ್ನು ಕಲಿಸಿ, ಶಿಷ್ಯರನ್ನು ಪರೀಕ್ಷಿಸಿ, ಅರ್ಜುನನೇ ತನ್ನ ಶಿಷ್ಯವರ್ಗದಲ್ಲೆಲ್ಲಾ ಉತ್ತಮನೆಂಬುದನ್ನು ತಿಳಿದು, ಆತನಲ್ಲಿ ಹೆಚ್ಚು ಆದರವನ್ನು ತೋರುತ್ತಿದ್ದ [ಆದಿ. ೧೪೧, ೧೪೨]. ನೋಡು—ಏಕಲವ್ಯ. ಈತನು ಸ್ನಾನಾರ್ಥವಾಗಿ ಗಂಗೆಯಲ್ಲಿ ಇಳಿದಿರುವಾಗ ಒಂದು ಮೊಸಳೆ ಈತನನ್ನು ಹಿಡಿಯಲಾಗಿ, ಅರ್ಜುನ ಆ ಮೊಸಳೆಯನ್ನು

ಕೊಂದು ದ್ರೋಣನನ್ನು ಬಿಡಿಸಿದ [ಆದಿ. ೧೪೩]. ರಾಜಪುತ್ರರ ಅಸ್ತ್ರವಿದ್ಯಾಪರೀಕ್ಷೆ ಗಾಗಿ ರಂಗನಿರ್ಮಾಣ, ಕುಮಾರರ ಪರೀಕ್ಷೆ [ಆದಿ. ೧೪೪-೧೪೭]. ದ್ರುಪದನನ್ನು ಹಿಡಿಯುವ ಸಲುವಾಗಿ ಶಿಷ್ಯರೊಂದಿಗೆ ಪಾಂಚಾಲಪುರಕ್ಕೆ ಹೊರಟದ್ದು. ಅರ್ಜುನ ದ್ರುಪದನನ್ನು ಜೀವದೊಂದಿಗೆ ಸೆರೆಹಿಡಿಯಲಾಗಿ ದ್ರೋಣ ದ್ರುಪದನನ್ನು ಹಂಗಿಸಿ, ಅವನ ಅರ್ಧರಾಜ್ಯವನ್ನು ಕಸುಗೊಂಡದ್ದು [ಆದಿ. ೧೪೮]. ಭಾರತ ಯುದ್ಧದಲ್ಲಿ ಐದು ದಿನಗಳು ಯುದ್ಧಮಾಡಿದ [ಆದಿ. ೨]. ಈತ ದ್ರುಪದನಿಂದ ಕಸುಗೊಂಡ ರಾಜ್ಯಕ್ಕೆ ಅಹಿಚ್ಛತ್ರವೆಂದು ಹೆಸರು [ಆದಿ. ೧೪೮] ಈತ ರಥಯೂಥಯೂಥಪ. ಈತನ ಕುದುರೆಗಳು ಶೋಣವರ್ಣವುಳ್ಳವು ರಥ ಚಿನ್ನದ್ದು [ಉದ್ಯೋ ೧೬೭]. ದ್ರೌಪದೀ ವಿವಾಹಾನಂತರ ಪಾಂಡವರನ್ನು ಹಸ್ತಿನಾವತಿಗೆ ಕರೆಯಿಸಬೇಕೆಂಬುದಾಗಿ ಧೃತ ರಾಷ್ಟ್ರ ಯೋಚಿಸಿದಾಗ, ಅನೇಕರು ವಿರುದ್ಧಾಭಿಪ್ರಾಯಗಳನ್ನು ಹೇಳಿದುದನ್ನು ಕಂಡು, ದ್ರೋಣ ಪಾಂಡವರಿಗೆ ಅವಶ್ಯವಾಗಿಯೂ ಅರ್ಧ ರಾಜ್ಯವನ್ನು ಹಂಚಿಕೊಡಲೇ ಬೇಕೆಂದು ಹಠಹಿಡಿದ [ಆದಿ ೨೨೩]. ಪಾಂಡವರ ರಾಜಸೂಯಕ್ಕೆ ಬಂದಿದ್ದ [ಸಭಾ. ೩೬-೩೮] ಕುರು ಪಾಂಡವರ ದ್ಯೂತಸಭೆಗೆ ದ್ರೋಣ ಭೀಷ್ಮನ ಹಿಂದೆ ಬಂದದ್ದು [ಸಭಾ ೮೫] ಪಾಂಡವರು ಜೂಜಿನಲ್ಲಿ ಸೋತು, ಕಾಡುಪಾಲಾದುದನ್ನು ಕಂಡು ಮರುಗಿದ ದ್ರೋಣ ದುರ್ಯೋಧನನಿಗೆ ನೀತಿಯನ್ನು ಬೋಧಿಸಿದ್ದು [ಸಭಾ ೧೦೨] ಅಜ್ಞಾತವಾಸ ಮಾಡುತ್ತಿದ್ದ ಪಾಂಡವರನ್ನು ಕಂಡುಹಿಡಿಯುವ ಉದ್ದೇಶದಿಂದ, ದುರ್ಯೋಧನ ವಿರಾಟನ ಮೇಲೆ ದಂಡೆತ್ತಿ ಬಂದಾಗ ದ್ರೋಣನೂ ಬಂದಿದ್ದ [ವಿರಾ. ೩೭] ಬೃಹನ್ನಲಾವೇಷದಿಂದ ಬಂದವನೇ ಅರ್ಜುನನೆಂಬುದಾಗಿ ಗುರುತಿಸಿ ದುರ್ಯೋಧನನಿಗೆ ಹೇಳಿದ [ವಿರಾ. ೪೬, ೪೭]. ಭೀಷ್ಮ ದ್ರೋಣಾಚಾರ್ಯನನ್ನು ಹೊಗಳಿದ್ದು [ವಿರಾ. ೫೧] ದ್ರೋಣ ಅರ್ಜುನನ ಅಸ್ತ್ರವಿದ್ಯಾನಿಪುಣತೆಯನ್ನು ಶ್ಲಾಘಿಸಿದ್ದು [ವಿರಾ ೫೪]. ದ್ರೋಣಾರ್ಜುನರ ಯುದ್ಧವರ್ಣನೆ ಅರ್ಜುನನ ಬಾಣದಿಂದ ಗಾಯ ಪಟ್ಟ ದ್ರೋಣ ದಿಕ್ಕುತೋರದೆ ಕಂಗೆಟ್ಟಿರುವಾಗ ಅಶ್ವತ್ಥಾಮ ದ್ರೋಣನನ್ನು ಹಿಂದಿಟ್ಟು ಅರ್ಜುನನನ್ನು ಇದಿರಿಸಲಾಗಿ ಅದೇ ಸಮಯದಲ್ಲಿ ದ್ರೋಣ ಓಡಿಹೋದ [ವಿರಾ ೫೯]. ಅರ್ಜುನ ದುರ್ಯೋಧನನ ಮೇಲೆ ಕಯ್ಯೆತ್ತಿದ್ದಾಗ ದ್ರೋಣ ಆತನ ಅಂಗರಕ್ಷಕನಾಗಿ ನಿಂತದ್ದು [ವಿರಾ. ೬೭]. ಪಾಂಡವರು ಯುದ್ಧಸನ್ನಾಹಮಾಡು ತ್ತಿರುವರೆಂಬುದನ್ನು ತಿಳಿದು ದ್ರೋಣ ಧೃತರಾಷ್ಟ್ರನಿಗೆ ತಿಳಿಯಹೇಳಿದ್ದು [ಉದ್ಯೋ. ೪೯] ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವಂತೆ ದುರ್ಯೋಧನನಿಗೆ ದ್ರೋಣ ಬೋಧಿಸಿದ್ದು [ಉದ್ಯೋ. ೧೨೬]. ದುರ್ಯೋಧನ ಸಂಧಿಗೆ ಸಮ್ಮತಿಸದಿರಲು, ದ್ರೋಣ ಅರ್ಜುನನ ಸಂಗಡ ಯುದ್ಧಮಾಡಬೇಕಾಗಿ ಬಂದ ಪ್ರಸಂಗಕ್ಕಾಗಿ ಬಹಳವಾಗಿ ವ್ಯಥೆ ಪಟ್ಟು, ಮರಳಿ ದುರ್ಯೋಧನನಿಗೆ ಶಾಂತಿಯನ್ನು ಬೋಧಿಸಿದ್ದು [ಉದ್ಯೋ. ೧೩೯].

ಭಾರತಯುದ್ಧದ ಐದನೆಯ ದಿನ ಭೀಮ ದ್ರೋಣರಿಗೆ ಯುದ್ಧ. ದ್ರೋಣ ಪರಾಕ್ರಮ ವರ್ಣನೆ [ಭೀಷ್ಮ ೭೭]. ದ್ರೋಣ ವಿರಾಟನ ಮಗನಾದ ಶಂಖನೆಂಬವನನ್ನು ಆರನೆಯ ದಿನದ ಯುದ್ಧದಲ್ಲಿ ಕೊಂದದ್ದು [ಭೀಷ್ಮ ೮೨]. ಒಂಬತ್ತನೆಯ ದಿನದಲ್ಲಿ ಅರ್ಜುನ ನೊಂದಿಗೆ ದ್ರೋಣ ಯುದ್ಧಮಾಡಿದ್ದು [ಭೀಷ್ಮ ೧೦೨] ದ್ರೋಣ ಅಶ್ವತ್ಥಾಮ ನಿಗೆ ದುಶ್ಶಕುನಗಳನ್ನು ತಿಳುಹಿದ್ದು [ಭೀ ೧೧೨] ದುರ್ಯೋಧನ ದ್ರೋಣನನ್ನು ಸೇನಾಪತಿಯಾಗಲು ಬೇಡಿದ್ದು [ದ್ರೋ ೭] ದ್ರೋಣ ಸೇನಾಪತಿಯಾದದ್ದು ದ್ರೋಣ ಯುದ್ಧ [ದ್ರೋ ೮, ೧೪] ಯುಧಿಷ್ಠಿರನನ್ನು ಸೆರೆಹಿಡಿದುಕೊಡಬೇಕೆಂದು ದುರ್ಯೋಧನ ದ್ರೋಣನನ್ನು ಬೇಡಿದ್ದು ದ್ರೋಣ ಭಾಷೆ ಕೊಟ್ಟದ್ದು [ದ್ರೋ ೧೨] ದ್ರೋಣ ಯುಧಿಷ್ಠಿರನನ್ನು ಹಿಡಿಯತೊಡಗಿ ಅರ್ಜುನನಿಂದ ಭಂಗಪಟ್ಟದ್ದು [ದ್ರೋ ೧೬] ದ್ರೋಣ ಸತ್ಯಜಿತನನ್ನು ಕೊಂದದ್ದು [ದ್ರೋ ೨೧]. ಯುಧಿಷ್ಠಿರನನ್ನು ಹಿಡಿಯದಿದ್ದುದಕ್ಕೆ ದುರ್ಯೋಧನ ಗೋಳಾಡಿದ್ದು ಪಾಂಡವ ಸೇನೆಯಲ್ಲಿ ಯಾವನಾದ ರೊಬ್ಬ ಮಹಾರಥನನ್ನು ಕೊಲ್ಲುವುದಾಗಿ ದ್ರೋಣನ ಪ್ರತಿಜ್ಞೆ [ದ್ರೋ. ೩೩]. ದ್ರೋಣ ಪದ್ಮವ್ಯೂಹವನ್ನು ರಚಿಸಿದ್ದು [ದ್ರೋ ೩೪] ದ್ರೋಣಾದಿಗಳು ಆರು ಮಂದಿ ಒಟ್ಟುಗೂಡಿ ಅಭಿಮನ್ಯುವನ್ನು ರಥಹೀನನನ್ನಾಗಿ ಮಾಡಿದ್ದು [ದ್ರೋ ೪೮]. ಅರ್ಜುನನ ಪ್ರತಿಜ್ಞೆಯನ್ನು ಕೇಳಿ ಹೆದರಿದ ಜಯದ್ರಥನನ್ನು ದ್ರೋಣ ಸಂತವಿಸಿದ್ದು [ದ್ರೋ ೭೪, ೭೫] ದ್ರೋಣ ಶಕಟವ್ಯೂಹವನ್ನು ರಚಿಸಿದ್ದು [ದ್ರೋ. ೮೭]. ಜಯದ್ರಥನ ಕೊಲೆಯಿಂದ ಕುಪಿತನಾದ ದುರ್ಯೋಧನ ದ್ರೋಣನನ್ನು ನಿಂದಿಸಿದ್ದು ದ್ರೋಣ ದುರ್ಯೋಧನನಿಗೆ ಮಂತ್ರಕವಚವನ್ನು ಅನುಗ್ರಹಿಸಿದ್ದು [ದ್ರೋ. ೯೪]. ಭೀಮ ದ್ರೋಣನ ಸಾರಥಿಯನ್ನು ಕೊಂದದ್ದು [ದ್ರೋ ೭೫] ದ್ರೋಣ ಧೃಷ್ಟ ದ್ಯುಮ್ನರ ಯುದ್ಧ [ದ್ರೋ ೯೭, ೧೬೧, ೧೯೩]. ದ್ರೋಣ ಸಾತ್ಯಕಿಗಳ ಯುದ್ಧ [ದ್ರೋ ೯೮, ೧೭೩]. ದ್ರೋಣ ಯುಧಿಷ್ಠಿರರ ಯುದ್ಧ [ದ್ರೋ ೧೦೬] ದ್ರೋಣ ಪರಾಕ್ರಮವರ್ಣನ [ದ್ರೋ. ೧೨೫, ೧೫೫] ಭೀಮ ದ್ರೋಣನ ಎಂಟು ರಥಗಳನ್ನು ಮುರಿದದ್ದು [ದ್ರೋ. ೧೨೭] ದುರ್ಯೋಧನ ದ್ರೋಣರ ಪರಸ್ಪರ ನಿಂದೆ ದ್ರೋಣ ದುರ್ಯೋಧನನನ್ನು ಹೀಯಾಳಿಸಿ, ರಾತ್ರಿ ಯುದ್ಧವನ್ನು ಡಂಗುರ ಹೊಡಿಸಿ, ಯುದ್ಧಕ್ಕೆ ಹೊರಟದ್ದು [ದ್ರೋ ೧೫೧, ೧೫೨] ದ್ರೋಣ ಅರ್ಜುನನನ್ನು ಹೊಗಳಿ, ದುರ್ಯೋ ಧನನನ್ನು ನಿಂದಿಸಿ, ದ್ರುಪದನನ್ನೂ ವಿರಾಟನನ್ನೂ ಕೊಂದದ್ದು [ದ್ರೋ. ౧೮೬, ೧೮೭] ಅಶ್ವತ್ಥಾಮ ಮಡಿದನೆಂಬ ಸುದ್ದಿಯನ್ನು ಕೇಳಿ, ದುಃಖಿತನಾದ ದ್ರೋಣ ನನ್ನು ಕೊಲ್ಲಲು ಧೃಷ್ಟದ್ಯುಮ್ನನ ಪ್ರಯತ್ನ [ದ್ರೋ ೧೯೨]. ದ್ರೋಣ ಭೀಮನ ಚುಚ್ಚುಮಾತುಗಳನ್ನು ಕೇಳಿ ಶಸ್ತ್ರತ್ಯಾಗಮಾಡಿ, ಯೋಗಬಲದಿಂದ ದೇಹತ್ಯಾಗ ಮಾಡಿದ್ದು ಧೃಷ್ಟದ್ಯುಮ್ನ ದ್ರೋಣನ ಕುತ್ತಿಗೆಯನ್ನು ಕತ್ತರಿಸಿದ್ದು [ದ್ರೋ.

೧೯೩]. ದ್ರೋಣವಧೆಯಿಂದ ಧೃತರಾಷ್ಟ್ರ ಮೂರ್ಛೆಹೋದದ್ದು [ದ್ರೋ. ೯, ೧೦]. ದ್ರೋಣವಧೆಯಿಂದ ಅಶ್ವತ್ಥಾಮ ಕೋಪಭರಿತನಾದದ್ದು [ದ್ರೋ. ೧೯೫] ದ್ರೋಣನ ಶವವರ್ಣನೆ [ಸ್ತ್ರೀ ೨೩]. ದ್ರೋಣನಿಗೆ ಉತ್ತರ ಕ್ರಿಯೆಗಳನ್ನು ಮಾಡಿದ್ದು [ಶಾಂ. ೪೧, ಸ್ತ್ರೀ ೨೩]. ದ್ರೋಣ ನಾಲ್ಕು ನೂರು ವರ್ಷಗಳ ಕಾಲ ಬದುಕಿದ್ದ ಈತನ ದೇಹಕಾಂತಿ ಶ್ಯಾಮವರ್ಣದ್ದು. ಪಾಂಡವರಲ್ಲಿಗೆ ಬರುವಾಗಲೇ ಬಹಳ ಮುದುಕನಾಗಿದ್ದ [ಭಾರ -ದ್ರೋ ೧೨೫].

ಆಕರ್ಣಪಲಿತಶ್ಯಾಮಃ ವಯಸಾಽಶೀತಿಪಂಚಕಃ।

ವೃದ್ಧಃ ಪರ್ಯಚರದ್ದ್ರೋಣೋ ರಣೇ ಷೋಡಶ ವರ್ಷವತ್॥ [ದ್ರೋ.೧೨೫].

ಈತ ಪುತ್ರಸಂತಾನಹೀನನಾಗಿ ಬಹಳ ಕಾಲ ಕಳೆದ ತರುವಾಯ ಈಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ವೈದೋರಿದ ಶಿವನಿಂದ—

"ಸ್ವಾಂಶಜಂ ತನಯಂ ದೇಹಿ ಸರ್ವಾಜೇಯಂ ಮಹಾನಘ"

ಯಾರಿಂದಲೂ ಗೆಲ್ಲಲಾಗದ ಶಿವನ ಅಂಶದಿಂದಲೇ ಕೂಡಿದ ಮಗನನ್ನು ಬೇಡಿದ [ಶಿವ -ಶತರುದ್ರಖಂಡ, ೩೬]

(iv) ಭಾರತ ವರ್ಷದ ಒಂದು ಪರ್ವತ [ಶಾಂತಿ ೩೨೫]

**ದ್ರೌಪದೀ**—ದ್ರುಪದ ರಾಜನ ಮಗಳು ಪಾಂಡವರ ಪತ್ನಿ ಕೃಷ್ಣೆಯೆಂಬುದು ಈಕೆಯ ನಾಮಾಂತರ ಈಕೆ ಅಗ್ನಿಕುಂಡದಿಂದ ಜನಿಸಿದವಳು ಧೃಷ್ಟದ್ಯುಮ್ನ ಈಕೆಯ ಸಂಗಡ ಅಗ್ನಿಕುಂಡದಿಂದಲೇ ಜನಿಸಿದವ. ಈಕೆಯ ಉತ್ಪತ್ತಿ [ಭಾರ -ಆದಿ. ೬೪, ೧೪೯, ೧೨೫] ಈಕೆ ಶ್ರೀದೇವಿಯ ಅಂಶದಿಂದ ಜನಿಸಿದವಳು [ಆ ೬೮]. ಈಕೆಯ ಸ್ವಯಂವರ ವಾರ್ತೆಯನ್ನು ಪಾಂಡವರು ಕೇಳಿದ್ದು [ಆದಿ ೧೭೯] ದ್ರೌಪದಿಯ ಸ್ವಯಂವರ [ಆದಿ ೬೧, ೬೩, ೨೦೦] ದ್ರೌಪದೀ ಸ್ವಯಂವರಕ್ಕೆ ಬಂದಿದ್ದ ರಾಜರುಗಳು [ಆದಿ ೨೦೧] ಸ್ವಯಂವರದಲ್ಲಿ ಪಣವಾಗಿರಿಸಿದ್ದ ಮತ್ಸ್ಯಯಂತ್ರವನ್ನು ಅರ್ಜುನ ಭೇದಿಸಿದ್ದು. ದ್ರೌಪದಿ ವರುಣಮಾಲಿಕೆಯನ್ನು ಆತನ ಕೊರಳಿಗೆ ಹಾಕಿದ್ದು [ಆದಿ. ೨೦೩] ದ್ರೌಪದಿ ಐದು ಮಂದಿ ಪಾಂಡವರನ್ನೂ ಮದುವೆಯಾದದ್ದು ಅದಕ್ಕೆ ಕಾರಣವನ್ನು ವ್ಯಾಸ ಮುನಿ ದ್ರುಪದನಿಗೆ ಹೇಳಿದ್ದು [ಆದಿ. ೨೧೦, ೨೧೧]. ಪಾಂಡವರೊಂದಿಗೆ ಮದುವೆ [ಆದಿ ೨೧೫]. ಕುಂತಿ ದ್ರೌಪದಿಯನ್ನು ಹರಸಿದ್ದು [ಆದಿ. ೨೧೬]. ಯುಧಿಷ್ಠಿರನಿಂದ ಪ್ರತಿವಿಂಧ್ಯನೆಂಬ ಮಗನನ್ನೂ, ಭೀಮಸೇನನ ಮೂಲಕ ಶ್ರುತಸೋಮನೆಂಬ ಪುತ್ರನನ್ನೂ, ಅರ್ಜುನನ ಮೂಲಕ ಶ್ರುತಕೀರ್ತಿಯೆಂಬ ತನಯನನ್ನೂ, ನಕುಲನ ಮೂಲಕ ಶತಾನೀಕನೆಂಬ ಸುತನನ್ನೂ, ಸಹದೇವನಿಂದ ಶ್ರುತಸೇನನೆಂಬ ಕುಮಾರನನ್ನೂ ಪಡೆದಳು [ಆದಿ ೬೩, ೬೪, ೬೮, ೨೪೭]. ದ್ರುಪದ ದ್ರೌಪದಿಗೆ ಬಳುವಳಿಯನ್ನು ಕೊಟ್ಟದ್ದು [ಆದಿ ೨೨೬]. ದ್ರೌಪದಿ ನಮಸ್ಕಾರ

ಮಾಡಲಾಗಿ ಆಕೆಯ ರೂಪ ರೇಖಾದಿಗಳನ್ನು ಕಂಡು ಗಾಂಧಾರಿ ದ್ರೌಪದಿಯನ್ನು ತನ್ನ ಮಕ್ಕಳ ಮೃತ್ಯುದೇವತೆಯೆಂದು ಊಹಿಸಿದ್ದು [ಆದಿ ೨೨೭]. ಪಾಂಡವರು ಕ್ರಮವಾಗಿ ದ್ರೌಪದಿಯಲ್ಲಿ ಒಂದೊಂದು ವರ್ಷ ಕಾಲ ಸಂಸಾರಮಾಡಿಕೊಂಡಿರಬೇಕೆಂತಲೂ, ಅಂತಹ ಸಮಯದಲ್ಲಿ ಮತ್ತೊಬ್ಬ ಪಾಂಡವ ಆಕೆಯನ್ನು ನೋಡಿದಲ್ಲಿ ಒಂದು ವರ್ಷಕಾಲ ತೀರ್ಥಯಾತ್ರೆ ಮಾಡಿ, ಆ ಪಾಪವನ್ನು ಕಳೆದುಕೊಳ್ಳಬೇಕೆಂತಲೂ ನಾರದ ಪಾಂಡವರಿಗೆ ಕಟ್ಟುಮಾಡಿ, ಪ್ರತಿಜ್ಞೆಮಾಡಿಸಿದ್ದು [ಆದಿ. ೨೨೯, ೨೩೨]. ರಾಜಸೂಯ ಯಾಗಕ್ಕೆ ಬಂದಿದ್ದ ದುರ್ಯೋಧನ ಮಯನಿರ್ಮಿತವಾದ ಸಭೆಯಲ್ಲಿ ಸಂಚರಿಸುವಾಗ ಅಜಾಗರೂಕತೆಯಿಂದ ನೀರಿರುವ ಸ್ಥಲದಲ್ಲಿ ನಿರ್ಜಲಪ್ರದೇಶವೆಂಬ ಭ್ರಾಂತಿಯಿಂದ ನಡೆತಂದು ಬೀಳಲಾಗಿ ದ್ರೌಪದಿಯೂ ಭೀಮನೂ ಅವನನ್ನು ಕಂಡು, ಪರಿಹಾಸಮಾಡಿದ್ದು [ಸಭಾ ೭೪] ಯುಧಿಷ್ಠಿರ ದ್ರೌಪದಿಯನ್ನು ಪಣವಾಗಿಟ್ಟು ಸೋತದ್ದು [ಸಭಾ. ೮೮]. ದುರ್ಯೋಧನ ದ್ರೌಪದಿಯನ್ನು ದ್ಯೂತಸಭೆಗೆ ಕರೆತರುವಂತೆ ಪ್ರಾತಿಕಾಮಿಯನ್ನು ದ್ರೌಪದಿಯ ಬಳಿಗೆ ಕಳುಹಿದ್ದು ಪ್ರಾತಿಕಾಮಿಯೊಂದಿಗೆ ದ್ರೌಪದಿಯ ಸಂವಾದ ದುಶ್ಶಾಸನ ದ್ರೌಪದಿಯನ್ನು ರಾಜಸಭೆಗೆ ಎಳತಂದದ್ದು ದ್ರೌಪದಿಯ ಸೊಂಟದಿಂದ ವಸ್ತ್ರರಾಶಿ ಹೊರಬಿದ್ದದ್ದು [ಸಭಾ ೮೯,೯೦]. ದ್ರೌಪದಿಯ ಪ್ರಶ್ನೆ ಆ ಪ್ರಶ್ನೆಗೆ ಯುಧಿಷ್ಠಿರನೇ ಉತ್ತರವನ್ನು ಕೊಡಬೇಕೆಂಬುದಾಗಿ ಭೀಷ್ಮ ಹೇಳಿದ್ದು [ಸಭಾ ೯೧] ಸಭೆಯಲ್ಲಿದ್ದವರನ್ನು ದ್ರೌಪದಿ ಪ್ರಶ್ನೆಮಾಡಿದ್ದು [ಸಭಾ ೯೧]. ದುರ್ಯೋಧನ ದ್ರೌಪದಿಯನ್ನು ತನ್ನ ತೊಡೆಯಮೇಲೆ ಕುಳಿತುಕೊಳ್ಳಹೇಳಿ, ತೊಡೆಯನ್ನು ತೋರಿದ್ದು ದ್ರೌಪದಿ ದುರ್ಯೋಧನಾದಿಗಳಿಗೆ ಶಾಪ ಕೊಟ್ಟದ್ದು. ಆಕಾಶದಿಂದ ಪುಷ್ಪವೃಷ್ಟಿಯಾದದ್ದು [ಸಭಾ. ೯೨] ಧೃತರಾಷ್ಟ್ರ ದ್ರೌಪದಿಗೆ ವರ ಕೊಟ್ಟದ್ದು [ಸಭಾ. ೯೩] ವನವಾಸಕ್ಕೆ ಹೊರಟ ದ್ರೌಪದಿಯನ್ನು ಕುರಿತು ಕುಂತಿ ಹೇಳಿದ ಬುದ್ಧಿವಾದ [ಸಭಾ. ೧೦೧] ಪಾಂಡವರು ಕಾಡುಪಾಲಾದರೆಂಬ ಸುದ್ದಿಯನ್ನು ಕೇಳಿ, ಅವರನ್ನು ಸಂತೈಸುವುದಕ್ಕೆ ಬಂದಾಗ ದ್ರೌಪದಿ ಶ್ರೀ ಕೃಷ್ಣನಲ್ಲಿ ತನ್ನ ದುಃಖವನ್ನು ಹೇಳಿಕೊಂಡು ಗೋಳಾಡಿದ್ದು. ಶ್ರೀ ಕೃಷ್ಣ ಆಕೆಯನ್ನು ಸಮಾಧಾನಪಡಿಸಿದ್ದು [ಭಾರ.-ವನ. ೧೨]. ದ್ರೌಪದಿ ಯುಧಿಷ್ಠಿರನಿಗೆ ಕೋಪ, ಶಾಂತಿಗಳ ಕಾಲವನ್ನು ವಿವರಿಸಿದ್ದು [ಭಾರ.-ವನ ೨೭, ೨೮]. ಧರ್ಮಕ್ಕಿಂತಲೂ ವಿಧಿಯೇ ಪ್ರಬಲವೆಂಬುದಾಗಿ ದ್ರೌಪದಿ ಯುಧಿಷ್ಠಿರನಿಗೆ ಹೇಳಿದ್ದು [ವನ. ೩೦]. ದ್ರೌಪದಿ ಯುಧಿಷ್ಠಿರನಿಗೆ ಬೃಹಸ್ಪತಿ ನೀತಿಯನ್ನು ವಿವರಿಸಿದ್ದು [ವನ ೩೧, ೩೨] ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಗೆದ್ದು, ರಾಜ್ಯವನ್ನು ಸಂಪಾದಿಸುವ ಸಲುವಾಗಿ ದ್ರೌಪದಿ ಯುಧಿಷ್ಠಿರನೊಂದಿಗೆ ಹರವಾದ ಮಾಡಿದ್ದು [ವನ ೨೭]. ಪಾಂಡವರು ತೀರ್ಥಯಾತ್ರೆಗೆ ಹೊರಟಾಗ ಗಂಧಮಾದನ ಪರ್ವತದ ದಾರಿಯಲ್ಲಿ ನಡೆಯು

ಲಾರದೆ ದ್ರೌಪದಿ ನೆಲದಮೇಲೆ ಬಿದ್ದು ಮೂರ್ಛೆಹೋದದ್ದು. ಕೆಲದೂರ ಭೀಮನೂ ತರುವಾಯ ಘಟೋತ್ಕಚನೂ ಆಕೆಯನ್ನು ಹೆಗಲಮೇಲೆ ಹೊತ್ತು ತಂದದ್ದು [ವನ. ೧೪೬]. ದ್ರೌಪದಿ ಸೌಗಂಧಿಕ ಪುಷ್ಪವನ್ನು ಕಂಡು, ಅಂತಹ ಅನೇಕ ಪುಷ್ಪ ಗಳನ್ನು ತನಗೆ ತಂದುಕೊಡಬೇಕೆಂಬುದಾಗಿ ಭೀಮನನ್ನು ಬೇಡಿದ್ದು [ವನ. ೧೪೮]. ಬ್ರಾಹ್ಮಣವೇಷದಿಂದ ಬಹಳ ಕಾಲ ಸಂಗಡಲೇ ಇದ್ದ ಜಟಾಸುರ ಭೀಮನಿಲ್ಲದ ಸಮಯದಲ್ಲಿ ಪಾಂಡವರನ್ನೂ ದ್ರೌಪದಿಯನ್ನೂ ಹೊತ್ತುಕೊಂಡು ಹೋದದ್ದು ನಡುದಾರಿಯಲ್ಲಿ ಭೀಮ ಅವನನ್ನು ಇದಿರಿಸಿ ಕೊಂದು, ದ್ರೌಪದಿಯನ್ನು ಸಂತೈಸಿ ಕರೆತಂದದ್ದು [ವನ ೧೫೮] ಸತ್ಯಭಾಮೆ ಪತಿಯನ್ನು ವಶಪಡಿಸಿಕೊಳ್ಳಲು ಉಪಾಯವೇನೆಂದು ದ್ರೌಪದಿಯನ್ನು ಪ್ರಶ್ನೆಮಾಡಿದ್ದು. ಆಕೆಯ ಪ್ರಶ್ನೆಗೆ ಉತ್ತರ ಕೊಡುವ ನೆವದಿಂದ ದ್ರೌಪದಿ ತಾನು ತನ್ನ ಪತಿಗಳ ವಿಷಯದಲ್ಲಿ ನಡೆಯುತ್ತಿರುವ ರೀತಿಯನ್ನು ವಿವರಿಸಿ, ಪತಿವ್ರತಾಧರ್ಮಗಳನ್ನು ಸತ್ಯಭಾಮೆಗೆ ತಿಳಿಸಿದ್ದು [ವನ. ೨೩೪, ೨೩೫]. ದ್ರೌಪದಿಯ ಭೋಜನಾನಂತರ ಪಾಂಡವರ ಆಶ್ರಮಕ್ಕೆ ಬಂದ ದುರ್ವಾಸನು, ದ್ರೌಪದಿಯ ಮಹಿಮೆಯಿಂದ ಹೆದರಿ ಶಿಷ್ಯರೊಂದಿಗೆ ತೇಗುತ್ತ ಓಡಿ ಹೋದದ್ದು [ವನ. ೨೬೩, ೨೬೪] ಪಾಂಡವರು ಬೇಟೆಗೆ ಹೋಗಿದ್ದಾಗ, ಸಾಳ್ವ ರಾಜಪುತ್ರಿಯ ಸ್ವಯಂವರಕ್ಕಾಗಿ ಹೊರಟಿದ್ದ ಜಯದ್ರಥ ನಡುದಾರಿಯಲ್ಲಿ ಪಾಂಡವರ ಆಶ್ರಮದ ಬಳಿ ಬಿಡಾರಮಾಡಿ, ದ್ರೌಪದಿಯನ್ನು ಕಂಡು ಮೋಹಭರಿತ ನಾಗಿ ಕೋಟಿಕಾಸ್ಯನನ್ನು ದ್ರೌಪದಿಯ ಬಳಿಗೆ ಕಳುಹಿದ್ದು. ಜಯದ್ರಥನು ದ್ರೌಪ ದಿಯ ಬಳಿ ಸಾರ್ದು, ಆಕೆಯನ್ನು ಪ್ರಲೋಭಗೊಳಿಸತೊಡಗಿ, ತಿರಸ್ಕೃತನಾಗಿ, ಬಲಾತ್ಕಾರದಿಂದ ಆಕೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋದದ್ದು ಪಾಂಡ ವರು ಸಮಾಚಾರವನ್ನು ತಿಳಿದು ಜಯದ್ರಥನನ್ನು ಹಿಂಬಾಲಿಸಿ, ಹಿಡಿದು, ದ್ರೌಪದಿ ಯನ್ನು ಬಿಡಿಸಿ, ಜಯದ್ರಥನಿಗೆ ಐದು ಶಿಖೆಗಳನ್ನು ಕಲ್ಪಿಸಿ ಕಳುಹಿದ್ದು [ವನ ೨೬೫, ೨೭೩]. ಕೃಷ್ಣನ ಅಷ್ಟಮಹಿಷಿಯರು ತಮ್ಮ ತಮ್ಮ ಮದುವೆಯ ಸಮಾ ಚಾರವನ್ನು ದ್ರೌಪದಿಗೆ ವಿವರಿಸಿದ್ದು [ಭಾಗ -೧೦-೮೩]. ಅಜ್ಞಾತವಾಸಕ್ಕಾಗಿ ವಿರಾಟನಗರಿಗೆ ಹೋಗುವಾಗ ದಾರಿ ನಡೆದು ಬಳಲಿದ ದ್ರೌಪದಿಯನ್ನು ಅರ್ಜುನನು ಹೆಗಲಮೇಲೆ ಕೂಡಿಸಿಕೊಂಡು ನಡೆತಂದದ್ದು [ವಿರಾ ೬]. ಅಜ್ಞಾತವಾಸ ಸಮಯ ದಲ್ಲಿ ಮಾಲಿನಿಯೆಂದು ಹೆಸರಿಟ್ಟುಕೊಂಡಿದ್ದಳು [ವಿರಾ.೧೪]. ದ್ರೌಪದಿಯ ಸೌಂದರ್ಯ ವರ್ಣನೆ [ಆದಿ ೧೪೯. ಸಭಾ ೮೮ ವಿರಾ. ೧೪, ೧೬, ೨೦]. ಸೈರಂಧ್ರಿಯ ವೇಷ ದಿಂದ ವಿರಾಟ ಪತ್ನಿಯಾದ ಸುದೇಷ್ಣೆಯನ್ನು ಸೇರಿ, ಆಕೆಯ ಸೇವೆಯಲ್ಲಿ ನಿಂತದ್ದು [ವಿರಾ. ೧೪]. ದ್ರೌಪದಿ ತನ್ನನ್ನು ಮೋಹಿಸಿದ ಕೀಚಕನನ್ನು ನಿರಾಕರಿಸಿದ್ದು [ವಿರಾ. ೧೬]. ಹೇಗಾದರೂ ದ್ರೌಪದಿಯನ್ನು ತನಗೆ ವಶಮಾಡಿಕೊಡಬೇಕೆಂದು

ಕೀಚಕ ಸುದೇಷ್ಣೆಯನ್ನು ಬೇಡಿದ್ದು. ಸುದೇಷ್ಣೆ ಮದ್ಯಪಾತ್ರವನ್ನು ದ್ರೌಪದಿಯ ಕೈಯಲ್ಲಿ ಕೊಟ್ಟು ಕೀಚಕನ ಮನೆಗೆ ಕಳುಹಿದ್ದು ದ್ರೌಪದಿ ತನ್ನ ಪಾತಿವ್ರತ್ಯ ವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸೂರ್ಯನನ್ನು ಹೊಗಳಿ, ರಹಸ್ಯವಾಗಿ ಹಿಂಬಾಲಿ ಸುವ ದೂತನನ್ನು ಪಡೆದದ್ದು ಕೀಚಕ ದ್ರೌಪದಿಯನ್ನು ವಶಪಡಿಸಿಕೊಳ್ಳಲು ಯತ್ನಿಸಿ, ಆಕೆ ಸಮ್ಮತಿಸದಿರಲು ಆಕೆಯನ್ನು ಪಾದತಾಡನದಿಂದ ದೂಷಿಸಿ, ಗೂಢ ಸೇವಕನಿಂದ ಭಂಗಪಟ್ಟದ್ದು ದ್ರೌಪದಿ ರಾಜಸಭೆಯಲ್ಲಿ ಕೀಚಕನನ್ನು ದೂರಿದ್ದು ಯುಧಿಷ್ಠಿರ ಆಕೆಯನ್ನು ಸಂತೈಸಿದ್ದು [ವಿರಾ ೧೯-೨೦]. ದ್ರೌಪದಿ ನಡುರಾತ್ರಿ ಯಲ್ಲಿ ಭೀಮನಲ್ಲಿ ಮೊರೆಯಿಟ್ಟದ್ದು ದ್ರೌಪದೀ ಭೀಮರ ಸಂವಾದ [ವಿರಾ ೨೪] ಭೀಮನ ಸೂಚನೆಯಂತೆ ದ್ರೌಪದಿ ಕನ್ಯಾಂತಃಪುರದಲ್ಲಿ ಸಂಧಿಸುವುದಾಗಿ ಕೀಚಕ ನಿಗೆ ತಿಳುಹಿದ್ದು [ವಿರಾ ೨೫]. ಉಪಕೀಚಕರು ದ್ರೌಪದಿಯನ್ನು ಕೀಚಕನ ಶವ ದೊಂದಿಗೆ ಬಿಗಿದು ಶ್ಮಶಾನಕ್ಕೆ ಹೊತ್ತುಕೊಂಡು ಹೋದದ್ದು ಭೀಮನು ಪತಿ ವ್ರತಾಧರ್ಮವನ್ನು ತಿಳಿಸಿದ್ದು [ವಿರಾ ೨೭] ವಿರಾಟನ ಅಪ್ಪಣೆಯಂತೆ ಸುದೇಷ್ಣೆ ದ್ರೌಪದಿಯನ್ನು ತಮ್ಮ ನಗರವನ್ನು ಬಿಟ್ಟುಹೋಗಬೇಕೆಂದು ಹೇಳಿದ್ದು. ದ್ರೌಪದಿ ಒಂದು ತಿಂಗಳ ಅವಧಿಯನ್ನು ಬೇಡಿದ್ದು [ವಿರಾ ೨೮]. ಉತ್ತರ ತನಗೆ ಸಾರಥಿ ಯಿಲ್ಲವೆಂದು ಕೊಚ್ಚಿಕೊಳ್ಳುತ್ತಿದ್ದಾಗ ಅರ್ಜುನ ದ್ರೌಪದಿಯ ಮೂಲಕ ತನ್ನ (ಬೃಹನ್ನಳೆಯ) ಕೌಶಲವನ್ನು ಉತ್ತರನಲ್ಲಿ ತಿಳಿಸಿದ್ದು [ವಿರಾ ೩೮]. ಕಂಕ ವಿರಾ ಟರು ಜೂಜಾಡುವಾಗ, ವಿರಾಟ ದಾಳದಿಂದ ಹೊಡೆಯಲಾಗಿ ಕಂಕನ ಹಣೆಯಿಂದ ಸುರಿಯುತ್ತಿದ್ದ ರಕ್ತವನ್ನು ದ್ರೌಪದಿ ತನ್ನ ಸೆರಗಿನಿಂದ ಒರಸಿದ್ದು [ವಿರಾ. ೭೦]. ದ್ರೌಪದಿ ಮಾಲಿನಿಯ ವೇಷವನ್ನು ಬಿಟ್ಟು ನಿಜರೂಪದಿಂದ ಕಾಣಿಸಿಕೊಂಡದ್ದು [ವಿರಾ ೭೪] ಯುಧಿಷ್ಠಿರನ ಸೂಚನೆಯ ಮೇರೆಗೆ ಕೃಷ್ಣ ದುರ್ಯೋಧನನಲ್ಲಿಗೆ ಸಂಧಿಗಾಗಿ ಹೊರಟಾಗ ದ್ರೌಪದಿ ತಾನು ದ್ಯೂತಸಭೆಯಲ್ಲಿ ಅನುಭವಿಸಿದ ದುಸ್ಸಹ ವಾದ ದುಃಖಗಳನ್ನು ಹೇಳಿಕೊಂಡು ಗೋಳಾಡಿದ್ದು ದುರ್ಯೋಧನಾದಿಗಳನ್ನು ಸಂಹರಿಸಿದಲ್ಲದೆ ಸುಮ್ಮನಿರಲಾರೆನೆಂದು ಕೃಷ್ಣ ಪ್ರತಿಜ್ಞೆಮಾಡಿ ಆಕೆಯನ್ನು ಸಮಾಧಾನಪಡಿಸಿದ್ದು [ಉದ್ಯೋ. ೮೧] ಮಹಾಭಾರತ ಯುದ್ಧ ಮುಗಿದ ಬಳಿಕ ಅದೇ ರಾತ್ರಿಯಲ್ಲಿಯೇ ಶಿಬಿರದಲ್ಲಿ ಮಲಗಿದ್ದ ಉಪ ಪಾಂಡವರನ್ನು ಅಶ್ವತ್ಥಾಮ ಕೊಂದ ವಾರ್ತೆಯನ್ನು ಕೇಳಿ ದ್ರೌಪದಿ ಮೂರ್ಛೆಹೋದದ್ದು ಯುಧಿಷ್ಠಿರ ನಕು ಲನ ಮೂಲಕ ದ್ರೌಪದಿಯನ್ನು ಶಿಬಿರಕ್ಕೆ ಬರಮಾಡಿಕೊಂಡದ್ದು ದ್ರೌಪದಿ ಅಶ್ವ ತ್ಥಾಮನನ್ನು ಕೊಲ್ಲುವಂತೆ ಭೀಮನನ್ನು ಪ್ರೇರಿಸಿದ್ದು [ಸೌಪ್ತಿಕ. ೧೦, ೧೧]. ಭೀಮ ಅಶ್ವತ್ಥಾಮನ ಕೊಲೆಗೆ ಪ್ರತಿಯಾಗಿ ಆತನ ತಲೆಯಮೇಲಿದ್ದ ರತ್ನವನ್ನು ತಂದು ದ್ರೌಪದಿಗೆ ಕೊಟ್ಟು, ಆಕೆಯನ್ನು ಸಮಾಧಾನಪಡಿಸಿದ್ದು ದ್ರೌಪದಿ ಆ ರತ್ನ

ವನ್ನು ತಲೆಯಮೇಲೆ ಧರಿಸಿಕೊಳ್ಳುವಂತೆ ಯುಧಿಷ್ಠಿರನನ್ನು ಬೇಡಿದ್ದು [ಸೌಪ್ತಿ. ೧೬]. ಕುಂತಿ, ಗಾಂಧಾರಿಯರಿಬ್ಬರೂ ದ್ರೌಪದಿಯನ್ನು ಸಮಾಧಾನಮಾಡಿದ್ದು [ಸ್ತ್ರೀ ೧೫]. ದ್ರೌಪದಿ ಗಾಂಧಾರಿಯನ್ನು ಶುಶ್ರೂಷೆಮಾಡಿದ್ದು [ಆಶ್ರಮ. ೧]. ಪ್ರಜಾಪಾಲನೆ ಕ್ಷತ್ರಿಯನಿಗೆ ಮುಖ್ಯ ಕರ್ತವ್ಯವೆಂಬುದಾಗಿ ದ್ರೌಪದಿ ಯುಧಿಷ್ಠಿರನಿಗೆ ತಿಳಿಯಹೇಳಿದ್ದು [ಶಾಂತಿ. ೧೪]. ಪಾಂಡವರೊಂದಿಗೆ ಮಹಾಪ್ರಸ್ಥಾನಕ್ಕೆ ಹೊರಟು ದಾರಿಯಲ್ಲಿ ದೇಹತ್ಯಾಗಮಾಡಿದ್ದು [ಮಹಾ.-೨]

**ದ್ವಾಪರ** —ನಾಲ್ಕು ಯುಗಗಳಲ್ಲಿ ಮೂರನೆಯದು ಆ ಯುಗಕ್ಕೆ ಅಭಿಮಾನಿಯಾದ ಒಬ್ಬ ರಕ್ಕಸ [ಮತ್ಸ್ಯ -೧೬೫ ಭಾರ -ವನ ૩, ೫೫, ೮૩, ೧೨೨] ದ್ವಾಪರಯುಗ ಧರ್ಮಗಳು [ವನ ೧೫೧ ಶಾಂತಿ ೬೯] ದ್ವಾಪರ ಕಲಿಯುಗಗಳ ಸಂಧಿಯಲ್ಲಿ ಭಾರತಯುದ್ಧ ನಡೆಯಿತು [ಆದಿ ೨]. ದಮಯಂತೀ ಸ್ವಯಂವರ ಸಮಯದಲ್ಲಿ ದ್ವಾಪರಯುಗದ ಅಭಿಮಾನಿದೇವತೆಯೂ ಬಂದಿದ್ದ [ವನ ೫೫]. ದೇವಮಾನ ಪ್ರಕಾರವಾಗಿ ೨,೪೦೦ ವರ್ಷಗಳು (ಮನುಷ್ಯಮಾನ ಪ್ರಕಾರ ೮,೬೪,೦೦೦ ವರ್ಷಗಳು) ಇದರ ಪರಿಮಾಣ [ಮತ್ಸ್ಯ -೧೬೪]

**ದ್ವಾರಕಾ** —ನೋಡು—ಕುಶಸ್ಥಲೀ ಇದು ಆನರ್ತ ದೇಶಕ್ಕೆ ರಾಜಧಾನಿಯಾಗಿತ್ತು. ಶ್ರೀ ಕೃಷ್ಣ ಯಾದವರೊಂದಿಗೆ ಈ ಪಟ್ಟಣದಲ್ಲಿ ವಾಸವಾಗಿದ್ದ ಜರಾಸಂಧ ಕೃಷ್ಣನ ಮೇಲೆ ಪದೇ ಪದೇ ದಂಡೆತ್ತಿಹೋಗಿ ಪೀಡಿಸುತ್ತಿದ್ದ ಕಾರಣ ಕೃಷ್ಣ ವಿಶ್ವಕರ್ಮನಿಂದ ಈ ಪಟ್ಟಣವನ್ನು ಸಮುದ್ರ ಮಧ್ಯದಲ್ಲಿ ನಿರ್ಮಿಸಿದ [ಹರಿ -೨-೫೮ ಭಾಗ -೧೦-೫೦] ಅರ್ಜುನ ಸುಭದ್ರಾಹರಣ ಸಮಯದಲ್ಲಿ ಯತಿವೇಷದಿಂದ ದ್ವಾರಕೆಗೆ ಹೋದದ್ದು [ಆದಿ ೨೪೧] ದ್ವಾರಕೆಯಲ್ಲಿ ಅಪಶಕುನಗಳು ತಲೆದೋರಿದ್ದು [ಮೌಸ ૩] ಕೃಷ್ಣನಿರ್ಯಾಣಾನಂತರ ಏಳನೆಯ ದಿನ ದ್ವಾರಕೆ ಸಮುದ್ರದಲ್ಲಿ ಮುಳುಗಿಹೋದದ್ದು [ಮೌಸ ೮] ದ್ವಾರಾವತಿಯೆಂಬುದು ಇದರ ನಾಮಾಂತರ

**ದ್ವಿಜಿಹ್ವ**.—ಸರ್ಪಗಳು ಅವುಗಳಿಗೆ ಎರಡು ನಾಲಗೆಗಳು ಬರಲು ಕಾರಣ [ಆದಿ ૩೪]

**ದ್ವಿತ** —ಗೌತಮ ಮುನಿಯ ಮೂವರು ಪುತ್ರರಲ್ಲಿ ಎರಡನೆಯವ ಏಕತ, ತ್ರಿತರು ಇವನ ಅಣ್ಣತಮ್ಮಂದಿರು [ಸಭಾ. ೭] ಇವನ ಕಥೆ ನೋಡು—ತ್ರಿತ [ಶಲ್ಯ. ૩೭].

**ದ್ವಿವಿದ**.—ಸುಗ್ರೀವನ ಸೋದರಮಾವನೂ ಕಪಿ ಸೇನಾಪತಿಗಳಲ್ಲಿ ಒಬ್ಬನೂ ಆದ ಸುಷೇಣನ ಕಿರಿಯ ಮಗ ಅಂಗದನ ಸೋದರಮಾವನೂ ಸುಗ್ರೀವನ ಮಂತ್ರಿಯೂ ಆಗಿದ್ದ ಹತ್ತುಸಾವಿರ ಆನೆಗಳ ಬಲವುಳ್ಳವ. ರಾಮಾಯಣ ಯುದ್ಧದಲ್ಲಿ ಬಹಳವಾಗಿ ಹೋರಾಡಿದ [ರಾಮಾ.-ಯುದ್ಧ ೭೬. ಭಾರ.-ವನ. ೨೯೦].

ದ್ವಿವಿದನೂ ನರಕಾಸುರನೂ ಆಪ್ತಸ್ನೇಹಿತರು. ಕೃಷ್ಣ ನರಕಾಸುರನನ್ನು ಕೊಂದ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ದ್ವಿವಿದ ಅನೇಕ ವಿಧದಿಂದ ಯಾದವರನ್ನೂ, ಋಷ್ಯಾಶ್ರಮಗಳನ್ನೂ ಪೀಡಿಸಿ, ಹಾಳುಮಾಡಿದ ಒಮ್ಮೆ ಬಲರಾಮ ರೈವತಕ ಪರ್ವತದಲ್ಲಿ ಸ್ತ್ರೀ ಪರಿವಾರದೊಂದಿಗೆ ಮದ್ಯಪಾನಮಾಡಿ, ಕ್ರೀಡಾಸಕ್ತನಾಗಿರುವಲ್ಲಿ ದ್ವಿವಿದ ಬಲರಾಮನನ್ನು ಅಣಕಿಸಿ, ಆ ಸ್ತ್ರೀ ಸಮುದಾಯವನ್ನು ಅಪಮಾನಗೊಳಿಸಿ, ಬಲರಾಮನ ಮದ್ಯಪಾತ್ರವನ್ನು ಅಪಹರಿಸಿದ ಕ್ರುದ್ಧನಾದ ಬಲರಾಮ ದ್ವಿವಿದನೊಂದಿಗೆ ಬಹಳವಾಗಿ ಯುದ್ಧಮಾಡಿ, ಕಡೆಗೆ ಅವನನ್ನು ಕೊಂದ [ಭಾಗ - ೧೦-೬೭].

**ದ್ವೀಪಗಳು** —ಜಂಬೂ, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರಗಳೆಂಬುದಾಗಿ ಏಳು ಇವುಗಳ ವರ್ಣನೆ [ವಿಷ್ಣು -೨, ೧-೮ ಭಾರ.-ಭೀ. ೧೧-೧೨. ಭಾಗ -೫-೨೦ ದೇ ಭಾ -೮-೧೨, ೧೩ ಮತ್ಸ್ಯ -೧೨೧-೧೨೩].

**ದ್ವೈತವನ** —(I) ಸರಸ್ವತೀ ನದೀತೀರದಲ್ಲಿ ಮರುಭೂಮಿಯ ಸಮೀಪದಲ್ಲಿರುವ ಒಂದು ಅರಣ್ಯ [ಶಲ್ಯ ೩೭]. ಪಾಂಡವರು ತಮ್ಮ ವನವಾಸದಲ್ಲಿ ಇಲ್ಲಿಯೂ ಕೆಲಕಾಲ ವಾಸಮಾಡಿದರು [ವನ ೨೩೯, ೨೪೭, ೩೧೧ ವಿರಾ. ೫].

(II) ಒಂದು ಸರೋವರ [ವನ ೨೪]

**ದ್ವೈಪಾಯನ** —ವ್ಯಾಸ ಮುನಿಯ ನಾಮಾಂತರ ನೋಡು—ಕೃಷ್ಣದ್ವೈಪಾಯನ, ವ್ಯಾಸ

**ದ್ವೈಪಾಯನ ಹ್ರದ**.—ಒಂದು ತೀರ್ಥ [ಶಲ್ಯ ೩೦, ೫೫ ಅಶ್ವ ೬೦]. ದುರ್ಯೋಧನ ಭೀಮನೊಂದಿಗೆ ಗದಾಯುದ್ಧ ಮಾಡುವ ಮೊದಲು ಈ ಮಡುವಿನಲ್ಲಿ ಅವಿತುಕೊಂಡಿದ್ದ ಭೀಮ ದುರ್ಯೋಧನರ ಗದಾಯುದ್ಧ ಇದರ ತೀರದಲ್ಲಿಯೇ ನಡೆಯಿತು [ಶಲ್ಯ ೨೯].

## ಧ

**ಧನಕ** —ಚಂದ್ರ ವಂಶದ ಭದ್ರಸೇನ ರಾಜನ ಕಿರಿಯ ಮಗ ಇವನಿಗೆ ಕೃತವೀರ್ಯ, ಕೃತಾಗ್ನಿ, ಕೃತವರ್ಮ, ಕೃತೌಜರೆಂಬ ನಾಲ್ವರು ಮಕ್ಕಳು ಜನಿಸಿದರು. ಈ ಕೃತವೀರ್ಯನ ಮಗನೇ ಕಾರ್ತವೀರ್ಯಾರ್ಜುನ [ಭಾರ.-ಸಭಾ ೭].

**ಧನಞ್ಜಯ**.—(I) ಅಗ್ನಿಯ ನಾಮಾಂತರ.

(II) ಒಬ್ಬ ಮಹರ್ಷಿ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೊಂದನೆಯ ಪರ್ಯಾಯದಲ್ಲಿ ವ್ಯಾಸನಾಗಿದ್ದವ [ದೇ.ಭಾ.-೧-೪].

(iii) ದೇಹದಲ್ಲಿರುವ ಉಪ ಪ್ರಾಣವಾಯುಗಳಲ್ಲಿ ಒಂದು. ಈ ವಾಯು ಮುಖ್ಯಪ್ರಾಣವಾಯು ದೇಹವನ್ನು ಬಿಟ್ಟಮೇಲೆಯೂ ಸ್ವಲ್ಪ ಕಾಲದವರೆಗೆ ದೇಹ ದಲ್ಲಿರುತ್ತದೆ

(iv) ಯುಧಿಷ್ಠಿರನ ರಾಜಸೂಯ ಸಮಯದಲ್ಲಿ ವಿಪುಲವಾದ ಧನರಾಶಿ ಯನ್ನು ಅರ್ಜುನ ಸಂಪಾದಿಸಿ ತಂದನಾಗಿ ಈ ಹೆಸರು ಅರ್ಜುನನಿಗೂ ಸಲ್ಲುತ್ತದೆ [ವಿರಾ. ೪೩].

(v) ಕದ್ರುವಿನ ಮಕ್ಕಳಾದ ಸರ್ಪಗಳಲ್ಲಿ ಒಬ್ಬ [ಸಭಾ. ೯ ಉದ್ಯೋ. ೧೦೩]

(vi) ಒಬ್ಬ ಬ್ರಹ್ಮರ್ಷಿ ಈತ ಕುಮಾರಿಯೆಂಬ ತರುಣಿಯನ್ನು ಮದುವೆ ಯಾಗಿದ್ದ [ಭಾರ.-ಉದ್ಯೋ ೧೧೭]

**ಧನದ** —ಕುಬೇರನ ನಾಮಾಂತರ [ಸಭಾ ೧೧]

**ಧನಿಷ್ಠಾ**.—ದಕ್ಷಬ್ರಹ್ಮನ ಮಗಳು. ಚಂದ್ರನ ಇಪ್ಪತ್ತೇಳು ಮಂದಿ ಹೆಂಡಿ ರಲ್ಲಿ ಒಬ್ಬಳು. ನೋಡು—ಚಂದ್ರ.

**ಧನುರ್ವೇದ** —ಯಜುರ್ವೇದದ ಉಪವೇದ. ಚತುರ್ಮುಖನ ದಕ್ಷಿಣದಿಕ್ಕಿನ ಮುಖದಿಂದ ಹೊರಬಂದದ್ದು ನೋಡು—ಉಪವೇದ

**ಧನುಷಾಕ್ಷ** —ಬಾಲಧೀಯೆಂಬ ಬ್ರಹ್ಮರ್ಷಿಗೆ ಒಬ್ಬ ಮಗ ಹುಟ್ಟಿ ಅಲ್ಪಾಯುಸ್ಸಿನಲ್ಲಿಯೇ ಸತ್ತ ಬಳಿಕ ಮುನಿ ದೀರ್ಘಾಯುಷ್ಮಂತನಾದ ಪುತ್ರನನ್ನು ಪಡೆಯುವ ಸಲುವಾಗಿ ತಪಸ್ಸುಮಾಡಿದ ದೇವರು ಪ್ರತ್ಯಕ್ಷವಾದಾಗ ಇದಿರಿಗಿದ್ದ ಪರ್ವತವನ್ನು ತೋರಿ ಈ ಪರ್ವತದಂತೆ ಚಿರಸ್ಥಾಯಿಯಾದ ಮಗನು ತನಗೆ ಹುಟ್ಟ ಬೇಕೆಂದು ಬಾಲಧಿ ಬೇಡಿದ ದೇವರು ತಥಾಸ್ತು ಎಂದು ಕಣ್ಮರೆಯಾದ. ಬಳಿಕ ಬಾಲಧಿಗೆ ಒಬ್ಬ ಮಗ ಹುಟ್ಟಿದ ಆ ಪುತ್ರನಿಗೆ ಮೇಧಾವಿಯೆಂದು ಹೆಸರಿಟ್ಟ. ಮೇಧಾವಿ ದೊಡ್ಡವನಾದ ಬಳಿಕ ತನಗೆ ಸ್ಥಿರಜೀವಿತ್ವವಿರುವುದೆಂಬ ಸಮಾಚಾರ ವನ್ನು ತಿಳಿದು, ಸ್ವೇಚ್ಛಾವರ್ತನದಿಂದ ನಡೆಯತೊಡಗಿ, ಒಮ್ಮೆ ನಿಷ್ಕಾರಣವಾಗಿ ಧನುಷಾಕ್ಷನೆಂಬ ಮುನಿಯನ್ನು ಪೀಡಿಸಿದ ಮುನಿ ಮೇಧಾವಿ ಒಡನೆಯೇ ಸಾಯುವಹಾಗೆ ಶಾಪವಿತ್ತ ಮೇಧಾವಿ ಸಾಯಲಿಲ್ಲ. ಆಗ ಧನುಷಾಕ್ಷನು ತನ್ನ ತಪೋಬಲದಿಂದ ಮೇಧಾವಿ ಸಾಯದಿರಲು ಕಾರಣವನ್ನು ತಿಳಿದು, ತನ್ನ ತಪಶ್ಶಕ್ತಿ ಯಿಂದ ಒಂದು ಮಹಿಷವನ್ನು ಸೃಷ್ಟಿಮಾಡಿ, ಆ ಪರ್ವತದ ಕಲ್ಲುಗಳನ್ನು ಉರುಳಿ ಸಿದ ಒಡನೆಯೇ ಮೇಧಾವಿ ಸತ್ತ [ಭಾರ.-ವನ. ೧೩೭, ಶಾಂತಿ ೩೪೪].

**ಧನ್ಯಾ**.—ಉತ್ತಾನಪಾದ ರಾಜನ ಮಗನಾದ ಧ್ರುವನ ಮೂರನೆಯ ಹೆಂಡತಿ. ಶಿಷ್ಟನೆಂಬ ಮಗನನ್ನು ಹೆತ್ತಳು [ಮತ್ಸ್ಯ.-೪].

**ಧನ್ವನ್ತರಿ**—ದೇವತೆಗಳ ವೈದ್ಯ ಲೋಕದಲ್ಲಿ ಆಯುರ್ವೇದವನ್ನು ಪ್ರಚಾರಕ್ಕೆ ತಂದವ. ದೇವ ದಾನವರು ಕ್ಷೀರಸಮುದ್ರವನ್ನು ಮಥನಮಾಡಿದಾಗ, ಕ್ಷೀರ ಸಮುದ್ರದಿಂದ ಜನಿಸಿದವ [ಭಾರ -ಆದಿ. ೧೮. ಭಾಗ.-೮-೮ ಮತ್ಸ್ಯ.-೨೫೧].

**ಧರ.**—(I) ಅಷ್ಟವಸುಗಳಲ್ಲಿ ಒಬ್ಬ. ಈತನ ಜನನಿ ಧೂಮ್ರೆಯೆಂಬವಳು [ಭಾರ -ಆದಿ. ೬೭ ಅನು ೨೫೫]. ಈತನಿಗೆ ದ್ರವಿಣ, ಹುತಹವ್ಯರೆಂಬುದಾಗಿ ಇಬ್ಬರು ಪುತ್ರರು [ಭಾರ -ಆದಿ. ೬೭].

(II) ಶುಕ್ರಾಚಾರ್ಯನ ಮಗ [ಭಾರ -ಆದಿ ೬೬]

**ಧರಾ.**—ಅಷ್ಟವಸುಗಳಲ್ಲಿ ಒಬ್ಬನಾದ ದ್ರೋಣನೆಂಬ ವಸುವಿನ ಹೆಂಡತಿ. ಈಕೆ ಮರುಜನ್ಮದಲ್ಲಿ ಯಶೋದೆಯಾಗಿ ಜನಿಸಿದಳು. ನೋಡು—ದ್ರೋಣ.

**ಧರಣಿ.**—ಚತುರ್ಮುಖನ ಎಡಗೈ ಹೆಬ್ಬೆಟ್ಟಿನಿಂದ ಜನಿಸಿದವಳು. ದಕ್ಷನ ಹೆಂಡತಿ ದಿತಿ, ಅದಿತಿ, ಸಿಂಹಿಕಾ, ಧೃತಿ ಮೊದಲಾದ ಕನ್ಯೆಯರನ್ನು ಹೆತ್ತಳು [ಭಾರ -ಆದಿ ೬೬].

**ಧರ್ಮ**—(I) ನಾಲ್ಕು ಪುರುಷಾರ್ಥಗಳಲ್ಲಿ ಮೊದಲನೆಯದು ಅದರ ಫಲಾನು ಭವಕ್ಕೂ ಧರ್ಮವೆಂದು ಹೆಸರು [ವನ ೧೮೬] ಧರ್ಮಕಾರ್ಯ ಮಾಡಿದವರು ಹೀನಸ್ಥಿತಿಗೆ ಬರಲಾರರು [ಆದಿ ೧೮೨]. ಧರ್ಮದಿಂದ ಮನುಷ್ಯ ವೃದ್ಧಿಯ ನ್ನೈದುವನು [ವನ ೯೨] ಧರ್ಮದ ಉತ್ಪತ್ತಿ ಪ್ರಕಾರ ವರ್ಣನೆ [ಶಾಂತಿ. ೨೭೧].

(II) ಯಮನಿಗೂ ಯುಧಿಷ್ಠಿರನಿಗೂ ಈ ಹೆಸರು ಸಲ್ಲುತ್ತದೆ

(III) ಒಬ್ಬ ಮಹರ್ಷಿ. ಒಂಬತ್ತು ಮಂದಿ ಬ್ರಹ್ಮರಲ್ಲಿ ಒಬ್ಬ ಚತು ರ್ಮುಖನ ದಕ್ಷಿಣ ಸ್ತನದಿಂದ ಜನಿಸಿದವ ಈತನೇ ಯಮನಾದ [ಭಾರ -ಆದಿ ೬೭]. ಈತ ದಕ್ಷಬ್ರಹ್ಮನ ಪುತ್ರಿಯರಾದ ಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಬುದ್ಧಿ, ಲಜ್ಜಾ, ಮತಿ ಎಂಬ ಹತ್ತು ಮಂದಿಯನ್ನು ಮದುವೆಯಾದ [ಭಾರ.-ಆದಿ ೬೭]. ಈತನಿಗೆ ಅನೇಕ ಮಂದಿ ಪುತ್ರರಿದ್ದರು ಸತ್ಯೆಯೆಂಬ ಮಗಳನ್ನು ಶಂಯುವೆಂಬ ಅಗ್ನಿಗೆ ಕೊಟ್ಟು ಮದುವೆಮಾಡಿದ [ವನ ೨೨೧]. ಈತ ಅನೇಕ ಧರ್ಮಗಳನ್ನು ವಿವರಿಸಿದ್ದು [ಅನು. ೧೮೯]

(IV) ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬ. ದಕ್ಷಬ್ರಹ್ಮನ ಹದಿನಾರು ಮಂದಿ ಪುತ್ರಿಯರಲ್ಲಿ ಶ್ರದ್ಧಾ, ಮೈತ್ರೀ, ದಯಾ, ಶಾಂತಿ, ತುಷ್ಟಿ, ಪುಷ್ಟಿ, ಕ್ರಿಯಾ, ಉನ್ನತಿ, ಬುದ್ಧಿ, ಮೇಧಾ, ತಿತಿಕ್ಷಾ, ಹ್ರೀ, ಮೂರ್ತಿ ಎಂಬ ಹದಿಮೂರು ಮಂದಿಯನ್ನು ಮದುವೆಯಾದ. ಹದಿಮೂರನೆಯವಳಾದ ಮೂರ್ತಿಯೆಂಬವಳು ನರ ನಾರಾಯಣರೆಂಬ ಇಬ್ಬರು ಪುತ್ರರನ್ನು ಪಡೆದಳು. ಮಿಕ್ಕ ಮೊದಲಿನ ಹನ್ನೆರಡು ಮಂದಿಯೂ ಕ್ರಮವಾಗಿ ಶುಭ, ಪ್ರಸಾದ, ಅಭಯ,

ಸುಖ, ಸಂತೋಷ (ಹರ್ಷ), ಗರ್ವ, ಯೋಗ, ಅಭಿಮಾನ, ಅರ್ಥ, ಸ್ಮೃತಿ, ಕ್ಷೇಮ, ಪ್ರಶ್ರಯ ಎಂಬ ಹನ್ನೆರಡು ಮಂದಿ ಪುತ್ರರನ್ನು ಹೆತ್ತರು [ದೇ.ಭಾಗ.-೪-೧೬. ಭಾಗ -೪-೧೦]

(v) ಉತ್ತಮ ಮನ್ವಂತರದಲ್ಲಿ ಒಬ್ಬ ಬ್ರಹ್ಮರ್ಷಿ ಈತ ಸೂನೃತೆಯೆಂಬವಳನ್ನು ಮದುವೆಯಾಗಿ, ಇಂದ್ರನ ಸಹಾಯಾರ್ಥವಾಗಿ ಸತ್ಯಸೇನನೆಂಬ ವಿಷ್ಣುವನ್ನು ಪಡೆದ [ಭಾಗ.-೮-೧. ಮತ್ಸ್ಯ.-೯]

(vi) ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬ ಈತ ಉತ್ತಾನಪಾದ ವಂಶದ ಪ್ರಾಚೇತಸ ದಕ್ಷನ ಅರುವತ್ತು ಮಂದಿ ಕನ್ಯೆಯರಲ್ಲಿ ಅರುಂಧತಿ, ವಸು, ಜಾಮಿ, ಲಂಘಾ, ಭಾನು, ಮರುದ್ವತಿ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾ ಎಂಬ ಹತ್ತು ಮಂದಿ ಕನ್ಯೆಯರನ್ನು ಮದುವೆಯಾಗಿ, ವಿಶ್ವಾಯೆಂಬವಳಲ್ಲಿ ವಿಶ್ವೇದೇವತೆಗಳನ್ನೂ, ಸಾಧ್ಯಾಯೆಂಬವಳಲ್ಲ ಸಾಧ್ಯರೆಂಬ ದೇವತೆಗಳನ್ನೂ, ಮರುದ್ವತಿಯಲ್ಲಿ ಮರುತ್ವಂತರನ್ನೂ, ವಸುಯೆಂಬವಳಲ್ಲ ವಸುಗಳನ್ನೂ, ಮುಹೂರ್ತಾಯೆಂಬವಳಲ್ಲಿ ಮುಹೂರ್ತಾಭಿಮಾನಿದೇವತೆಗಳನ್ನೂ, ಭಾನುಯೆಂಬವಳಲ್ಲಿ ಕಿರಣಗಳನ್ನೂ, ಲಂಘಾಯೆಂಬವಳಲ್ಲಿ ಘೋಷನೆಂಬ ತನಯನನ್ನೂ, ಜಾಮಿಯೆಂಬಾಕೆಯಲ್ಲಿ ನಾಗವೀಧಿಯನ್ನೂ ಪಡೆದ ಮೊದಲನೆಯವಳಾದ ಅರುಂಧತಿಯಲ್ಲಿ ಸಕಲ ವಿಧವಾದ ಚರಾಚರ ಪ್ರಾಣಿವರ್ಗವೂ ಜನಿಸಿತು ಸಂಕಲ್ಪಾಯೆಂಬವಳಲ್ಲಿ ಸಂಕಲ್ಪನೆಂಬ ಕುಮಾರ ಜನಿಸಿದ [ಮತ್ಸ್ಯ -೨೦೩. ವಿಷ್ಣು.-೧-೧೫. ಭಾರ.-ಆದಿ ೬೭].

**ಧರ್ಮಧ್ವಜ.**—(1) ವಿದೇಹ ವಂಶದ ಕುಶಧ್ವಜ ಜನಕನ ಮಗ ಈತನಿಗೆ ಕೃತಧ್ವಜ, ಮಿತಧ್ವಜರೆಂಬ ಇಬ್ಬರು ಗಂಡುಮಕ್ಕಳಿದ್ದರು ಲಕ್ಷ್ಮಣನ ಹೆಂಡತಿಯಾದ ಊರ್ಮಿಳೆ ಈ ಧರ್ಮಧ್ವಜನ ಒಡಹುಟ್ಟಿದವಳು. ನೋಡು—ಕುಶಧ್ವಜ ಈತ ಸುಲಭಾಮೈತ್ರೇಯಿಯೊಂದಿಗೆ ವಿವಾದ ಮಾಡಿದ [ಭಾರ -ಶಾಂತಿ ३२५].

**ಧರ್ಮಪಕ್ಷಿ.**—ಒಮ್ಮೆ ಇಂದ್ರ ಸುಕೃಶನೆಂಬ ಬ್ರಾಹ್ಮಣನಲ್ಲಿಗೆ ಪಕ್ಷಿರೂಪದಿಂದ ಬಂದು ತನಗೆ ಆಹಾರಾರ್ಥವಾಗಿ ನರಮಾಂಸವನ್ನು ಬೇಡಿದ ಸುಕೃಶನು ತನ್ನ ಮಕ್ಕಳನ್ನು ಕರೆದು ಆ ಹಕ್ಕಿಗೆ ಆಹಾರವಾಗುವಂತೆ ಹೇಳಿದ. ಅವರು ಆ ಮಾತಿಗೆ ಸಮ್ಮತಿಸದಿರಲು "ನೀವು ಹಕ್ಕಿಗಳಾಗಿ ಜನಿಸಿ" ಎಂಬುದಾಗಿ ಶಾಪವಿತ್ತ. ಆಗ ಆ ಮುನಿಪುತ್ರರು ತಮ್ಮ ಅಪರಾಧವನ್ನು ಮನ್ನಿಸುವಂತೆ ಬೇಡಿಕೊಂಡರು. ಸುಕೃಶನು "ನೀವು ಹಕ್ಕಿಗಳಾಗಿದ್ದರೂ ನಿಮಗೆ ಸಕಲ ಶಾಸ್ತ್ರಗಳೂ ಗೋಚರಿಸುವುವು ಮನುಷ್ಯರಂತೆ ಮಾತನಾಡುವ ಶಕ್ತಿಯೂ ನಿಮಗೆ ಲಭಿಸುವುದು" ಎಂದು ಅನುಗ್ರಹಿಸಿದ ಆದರಂತೆ ಇವರು ಪಕ್ಷಿಜನ್ಮವನ್ನು ಪಡೆದರು. ಇವು ಶಮೀಕ

ಮುನಿಯಿಂದ ಪೋಷಿತಗಳಾಗಿ, ತಕ್ಕ ವಯಸ್ಸು ಬಂದಕೂಡಲೇ ತಮ್ಮ ವೃತ್ತಾಂತ ವನ್ನು ಆತನಿಗೆ ಅರುಹಿ, ವಿಂಧ್ಯಪರ್ವತಕ್ಕೆ ಹೋಗಿ ತಮ್ಮ ಜನ್ಮವನ್ನು ನೀಗಿ ಕೊಳ್ಳುವ ಸಲುವಾಗಿ ತಪಸ್ಸುಮಾಡಿಕೊಂಡಿದ್ದುವು ಜೈಮಿನಿ ಮಹರ್ಷಿ ಇವುಗ ಳಲ್ಲಿಗೆ ಹೋಗಿ, ಅನೇಕ ಧರ್ಮರಹಸ್ಯಗಳನ್ನು ಕೇಳಿ ತಿಳಿದ [ಮಾರ್ಕಂ -೩, ೪].

**ಧರ್ಮಪಾಲ**—ದಶರಥನ ಎಂಟು ಮಂದಿ ಮಂತ್ರಿಗಳಲ್ಲಿ ಒಬ್ಬ [ರಾಮಾ.- ಬಾಲ. ೭].

**ಧರ್ಮರಾಜ**—ಯಮ, ಯುಧಿಷ್ಠಿರ.

**ಧರ್ಮವರ್ಧನ.**—ಒಂದು ಪಟ್ಟಣ ಅಯೋಧ್ಯೆಯಿಂದ ಕೇಕಯ ದೇಶಕ್ಕೆ ಹೋಗುವ ದಾರಿಯಲ್ಲಿದೆ ದಶರಥ ನಿರ್ಯಾಣಾನಂತರ ಭರತ ಅಯೋಧ್ಯೆಗೆ ಬರು ವಾಗ ಈ ಪಟ್ಟಣದ ಮೂಲಕ ಪ್ರಯಾಣಮಾಡಿದ [ರಾಮಾ.-ಅಯೋ ೭೨]

**ಧರ್ಮವ್ರತ**—ದಂಡಕಾರಣ್ಯದಲ್ಲಿ ವಾಸವಾಗಿದ್ದ ಒಬ್ಬ ಮಹರ್ಷಿ ರಾಮ ಅಗಸ್ತ್ಯಾಶ್ರಮಕ್ಕೆ ಹೋಗುವ ದಾರಿಯಲ್ಲಿ ಜನಶೂನ್ಯವಾದ ಒಂದು ಪ್ರದೇಶದಲ್ಲಿ ದಿವ್ಯ ವಾದ್ಯಧ್ವನಿಯನ್ನೂ ಅಪ್ಸರಸಿಯರ ಗಾಯನವನ್ನೂ ಕೇಳಿ, ಬೆರಗಾಗಿ, ಆ ಮುನಿಯ ಬಳಿ ಸಾರ್ದು, ಇದರ ರಹಸ್ಯವೇನೆಂದು ಪ್ರಶ್ನೆಮಾಡಿ, ಅದು ಪಂಚಾಪ್ಸರ ಸ್ಸರೋವರದಲ್ಲಿ ಮಾಂಡಿಕರ್ಣಿಯೆಂಬ ಮುನೀಶ್ವರ ಅದೃಶ್ಯನಾಗಿ ದೇವವಿಲಾಸಿನಿ ಯರೊಂದಿಗೆ ಕ್ರೀಡಿಸುತ್ತಿದ್ದಾನೆಂಬುದನ್ನು ಕೇಳಿ ತಿಳಿದ [ರಾಮಾ.-ಅರ. ೧೧].

**ಧರ್ಮವ್ಯಾಧ**—ಮಿಥಿಲಾ ನಗರದಲ್ಲಿ ವಾಸವಾಗಿದ್ದ ಒಬ್ಬ ಕಟುಕ. ಹಿಂದಣ ಜನ್ಮದಲ್ಲಿ ಬ್ರಾಹ್ಮಣನಾಗಿದ್ದು, ಅಸ್ತ್ರವಿದ್ಯಾಪಾರಂಗತನಾಗಿದ್ದ. ಒಮ್ಮೆ ರಾಜಪುತ್ರರ ಸಂಗಡ ಬೇಟೆಗೆ ಹೋಗಿ, ದೂರದಲ್ಲಿದ್ದ ಒಬ್ಬ ಮುನಿಯನ್ನು ಜಿಂಕೆಯೆಂಬ ಭ್ರಾಂತಿಯಿಂದ ಕೊಲ್ಲಲಾಗಿ, ಆ ಮುನಿ ಸಾಯುವಾಗ "ನೀನು ಬ್ರಾಹ್ಮಣನಾ ಗಿದ್ದರೂ ಕ್ಷತ್ರಿಯೋಚಿತವಾದ ಬೇಟೆಗೆ ಬಂದು, ಕಟುಕನ ಕೃತ್ಯವನ್ನು ಮಾಡಿರುವೆ ಯಾಗಿ ಕಟುಕನಾಗಿ ಜನಿಸು" ಎಂದು ಶಾಪವಿತ್ತ ಬಳಿಕ ಇವನು ಧರ್ಮವ್ಯಾಧ ನೆಂಬ ಹೆಸರಿನಿಂದ ಜನಿಸಿ, ಮಾತಾಪಿತೃಗಳನ್ನು ಬಹಳ ಭಕ್ತಿಯಿಂದ ಶುಶ್ರೂಷೆ ಮಾಡುತ್ತಿದ್ದ ನೋಡು—ಕೌಶಿಕ. ಈತನಿಗೆ ಅರ್ಜುನನೆಂಬ ಮಗನೂ ಅರ್ಜು ನಿಕೆಯೆಂಬ ಮಗಳೂ ಇದ್ದರು ಈ ಮಗಳಿಗೆ ಸಕಲ ನೀತಿಶಾಸ್ತ್ರವನ್ನೂ ಕಲಿಸಿ, ಮತಂಗ ಮುನಿಯ ಮಗನಾದ ಪ್ರಸನ್ನನೆಂಬವನಿಗೆ ಕೊಟ್ಟು ಮದುವೆಮಾಡಿದ. ಒಂದು ದಿನ ಮತಂಗ ಮುನಿಯ ಪತ್ನಿ "ನೀನು ಎಷ್ಟಾದರೂ ಮಾಂಸವನ್ನು ಮಾರಿ ಜೀವಿಸತಕ್ಕವನ ಮಗಳು" ಎಂದು ಹಳಿಯಲಾಗಿ, ಅರ್ಜುನಿಕೆ ಈ ಮಾತನ್ನು ತನ್ನ ತಂದೆಗೆ ಹೇಳಿದಳು. ಒಂದು ದಿನ ಧರ್ಮವ್ಯಾಧ ಮತಂಗ ಮುನಿಯ ಆಶ್ರಮಕ್ಕೆ ಹೋದ. ಇವನನ್ನು ಭೋಜನಕ್ಕೆ ಬಲಾತ್ಕರಿಸಿದರು. ಆಗ ಧರ್ಮ

ವ್ಯಾಧ "ನೀವು ಇಡುವ ಅನ್ನವಾವುದು?" ಎಂದು ಕೇಳಲಾಗಿ ಮತಂಗಪತ್ನಿ ಗೋಧಿಯನ್ನೂ ತೊಗರಿಯನ್ನೂ ಒಂದು ಮೊರದಲ್ಲಿ ತಂದು ತೋರಿದಳು. ಆಗ ಧರ್ಮವ್ಯಾಧ "ಛೀ, ಛೀ, ನೀವು ಎಂತಹ ಕಟುಕರು! ನಾನು ವಾರಕ್ಕೊಮ್ಮೆ ಒಂದು ಮೃಗವನ್ನು ಕೊಂದು ಅದರ ಮಾಂಸವನ್ನು ವಿಕ್ರಯಮಾಡಿ ಜೀವಿಸುತ್ತೇನೆ. ನೀವು ಅನುದಿನವೂ ಎಷ್ಟೊಂದು ಜೀವಿಗಳನ್ನು ಕೊಲ್ಲುತ್ತೀರಿ! ನಾನು ನಿಮ್ಮ ಮನೆಯಲ್ಲಿ ಊಟಮಾಡಲಾರೆ" ಎಂದು ಹೇಳಿ ಅಲ್ಲಿಂದ ಹೊರಟ. ಆಗ ಮತಂಗಪತ್ನಿ ಆತನನ್ನು ಅಡ್ಡಗಿಸಿ, ಭೋಜನಮಾಡಿಸಿ ತನ್ನ ತಪ್ಪನ್ನು ತಿಳಿದುಕೊಂಡು ಅಂದಿನಿಂದ ಸೊಸೆಯನ್ನು ಹೀಯಾಳಿಸುವುದನ್ನು ಬಿಟ್ಟಳು ಧರ್ಮವ್ಯಾಧ ಅನೇಕ ಧರ್ಮರಹಸ್ಯಗಳನ್ನು ಬಲ್ಲವನಾಗಿದ್ದ [ವನ ೨೧೦] ಈತ ವ್ಯಾಧನಾಗಿ ಜನಿಸಿದ್ದು ಮತ್ತು ಕೌಶಿಕನೆಂಬ ಮುನಿಗೆ ಧರ್ಮಗಳನ್ನು ಉಪದೇಶಿಸಿದ್ದು [ವನ. ೨೧೮].

**ಧರ್ಮಸಾವರ್ಣಿ.**—ಹದಿನಾಲ್ಕು ಮಂದಿ ಮನುಗಳಲ್ಲಿ ಹನ್ನೊಂದನೆಯವ. ಈತನಿಗೆ ಮೇರುಸಾವರ್ಣಿಯೆಂಬ ನಾಮಾಂತರವೂ ಇದೆ. ಈತನಿಗೆ ಹತ್ತು ಮಂದಿ ಪುತ್ರರಿದ್ದರು ಈತನ ರಾಜ್ಯಭಾರ ಕಾಲದಲ್ಲಿ ಸ್ವರ್ಗಲೋಕವನ್ನು ವೈಧೃತಿಯೆಂಬ ಇಂದ್ರ ಪಾಲಿಸುತ್ತಿದ್ದ. ಆ ಕಾಲದಲ್ಲಿ ವಿಹಂಗಮ, ಕಾಮಗಮ, ನಿರ್ವಾಣರುಚಿಯೆಂಬ ಮೂರು ಬಗೆಯ ದೇವತೆಗಳು ಸ್ವರ್ಗದಲ್ಲಿ ವಾಸಮಾಡುತ್ತಿದ್ದರು. ಅರುಣನೇ ಮೊದಲಾದ ಏಳು ಮಂದಿ ಋಷಿಗಳೂ, ಇಂದ್ರನ ಸಹಾಯಾರ್ಥವಾಗಿ ಧರ್ಮಸೇತುವೆಂಬ ಹೆಸರಿನ ವಿಷ್ಣುವೂ ಅವತರಿಸಿದ್ದರು [ಭಾಗ -೮-೧೩]

**ಧರ್ಮ.**—ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಹದಿನಾಲ್ಕನೆಯ ಪರ್ಯಾಯದಲ್ಲಿ ವ್ಯಾಸನಾಗಿದ್ದ ಒಬ್ಬ ಮಹರ್ಷಿ ನೋಡು—ವ್ಯಾಸ [ದೇ. ಭಾ.-೧-೪].

**ಧರ್ಮಾರಣ್ಯ**—(I) ಗಯೆಯ ಸಮೀಪದಲ್ಲಿರುವ ಒಂದು ಕ್ಷೇತ್ರ [ಭಾರ - ವನ. ೮೦. ಅನು. ೬೪] ಇದು ಈಗಣ ಗಯಾ ಜಿಲ್ಲೆಯಲ್ಲಿ ಬುದ್ಧಗಯೆಗೆ ನಾಲ್ಕು ಮೈಲುಗಳ ದೂರದಲ್ಲಿದೆ.

(II) ಒಬ್ಬ ಬ್ರಹ್ಮರ್ಷಿ. ಈತ ಪದ್ಮನಾಭನೆಂಬ ನಾಗರಾಜನ ಮೂಲಕ ಆಧ್ಯಾತ್ಮವಿದ್ಯೆಯನ್ನು ತಿಳಿದು ಕೃತಾರ್ಥನಾದ [ಭಾರ -ಶಾಂತಿ. ೩೭೧].

**ಧರ್ಮೇಯು.**—ಚಂದ್ರ ವಂಶದ ಪುರುಕುಲೋತ್ಪನ್ನನಾದ ರೌದ್ರಾಶ್ವ ರಾಜನ ಹತ್ತು ಮಂದಿ ಮಕ್ಕಳಲ್ಲಿ ಒಬ್ಬ [ಆದಿ. ೮೮].

**ಧಾತೃ.**—(I) ಚತುರ್ಮುಖನ ಹೆಸರು.

(II) ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರನಾದ ಭೃಗು ಮಹರ್ಷಿಯಿಂದ ಖ್ಯಾತಿಯೆಂಬವಳಲ್ಲಿ ಜನಿಸಿದವ [ಭಾರ.-ಆದಿ. ೬೭]. ಈತ

ಮೇರು ಪುತ್ರಿಯಾದ ಆಯತಿಯೆಂಬವಳನ್ನು ಮದುವೆಯಾಗಿ ಮೃಕಂಡು ಮುನಿಯನ್ನು ಪಡೆದ. ಈ ಮೃಕಂಡುವಿನ ಮಗನೇ ಮಾರ್ಕಂಡೇಯ [ಭಾಗ.-೪-೧]

**ಧಾತ್ರೇಯಿ.**—ದ್ರೌಪದಿಯ ದಾಸಿ. ಪಾಂಡವರು ವನವಾಸಮಾಡುತ್ತಿದ್ದಾಗ, ಸಾಳ್ವ ರಾಜಪುತ್ರಿಯ ಸ್ವಯಂವರಕ್ಕಾಗಿ ಹೋಗುತ್ತಿದ್ದ ಜಯದ್ರಥ ದ್ರೌಪದಿಯನ್ನು ಅಪಹರಿಸಿದ ಸುದ್ದಿಯನ್ನು ಈಕೆ ಭೀಮನಿಗೆ ತಿಳುಹಿದಳು. ನೋಡು—ದ್ರೌಪದೀ, ಜಯದ್ರಥ [ಭಾರ -ವನ. ೨೬೯].

**ಧಾನ್ಯಮಾಲಿನೀ**—(I) ರಾವಣನ ಪತ್ನಿಯರಲ್ಲಿ ಒಬ್ಬಳು. ಅತಿಕಾಯ ಈಕೆಯ ಮಗ [ರಾಮಾ.-ಸುಂ. ೨೨].

(II) ಒಬ್ಬ ಅಪ್ಸರಸಿ ಶಾಪದಿಂದ ಮೊಸಳೆಯಾಗಿದ್ದು ಹನೂಮಂತನು ಚಂದ್ರದ್ರೋಣ ಪರ್ವತಕ್ಕೆ ಹೋಗಿದ್ದಾಗ ಕಾಲನೇಮಿಯ ಆಶ್ರಮದ ಬಳಿ ಸರೋವರದಲ್ಲಿದ್ದು, ಹನೂಮಂತನು ನೀರಿನಲ್ಲಿಳಿದಾಗ ಆತನನ್ನು ಹಿಡಿದು, ಆತನ ಮೂಲಕ ತನ್ನ ನಿಜರೂಪವನ್ನು ತಳೆದು, ಕಾಲನೇಮಿಯ ವೃತ್ತಾಂತವನ್ನು ಹನೂಮಂತನಿಗೆ ತಿಳುಹಿ, ತನ್ನ ಲೋಕಕ್ಕೆ ಹೋದಳು ನೋಡು—ಕಾಲನೇಮಿ.

**ಧಾರ್ತರಾಷ್ಟ್ರ.**—ಈ ಪದ ಧೃತರಾಷ್ಟ್ರನ ಮಕ್ಕಳೆಲ್ಲರಿಗೂ ಅನ್ವಯಿಸುತ್ತದೆ.

**ಧಿಷಣ.**—ಬೃಹಸ್ಪತ್ಯಾಚಾರ್ಯನ ನಾಮಾಂತರ.

**ಧೀಮನ್ತ.**—ಚಂದ್ರ ವಂಶದ ಪುರೂರವ ರಾಜನಿಂದ ಊರ್ವಶಿಯಲ್ಲಿ ಜನಿಸಿದವ [ಭಾರ.-ಆದಿ. ೬೯].

**ಧುನ್ಧು**—ಒಬ್ಬ ರಾಕ್ಷಸ ಮಧು ಕೈಟಭರ ಮಗ ನೋಡು—ಕುವಲಾಶ್ವ.

**ಧುನ್ಧುಮಾರ**—ನೋಡು—ಕುವಲಾಶ್ವ[ಬ್ರಹ್ಮ-೭. ಭಾರ -ವನ ೨೦೪, ೨೦೫, ೨೦೭. ಹರಿ.-೧-೧೧. ಭಾಗ.-೯-೬ ವಾಯು ೮೮].

**ಧೂತಪಾಪಾ.**—ಒಂದು ನದಿ. ವೇದಶಿರನೆಂಬ ಮುನಿ ತಪೋನಿರತನಾಗಿದ್ದಾಗ ಅಲ್ಲಿಗೆ ಬಂದ ಅಪ್ಸರಸಿಯ ಸಂದರ್ಶನದಿಂದ ಜನಿಸಿದವಳು. ವೇದಶಿರ ಈಕೆಗೆ ಧೂತಪಾಪಾ ಎಂದು ಹೆಸರಿಟ್ಟ. ಈಕೆ ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ, ಲೋಕದಲ್ಲಿರುವ ಎಲ್ಲಾ ಪದಾರ್ಥಗಳಿಗಿಂತಲೂ ತಾನು ಪವಿತ್ರವಾಗಿರುವಂತೆ ಅನುಗ್ರಹಿಸಬೇಕೆಂದು ಬೇಡಿ ವರವನ್ನು ಪಡೆದಳು ಒಮ್ಮೆ ಧರ್ಮ ಈಕೆಯನ್ನು ಮೋಹಿಸಿ, ತಿರಸ್ಕೃತನಾಗಿ ಮತ್ತೆ ಬಲಾತ್ಕರಿಸಿದ. ಆಗ ಧೂತಪಾಪೆ ರುಷ್ಟೆಯಾಗಿ ಧರ್ಮನನ್ನು ನದಿಯಾಗುವಂತೆ ಶಪಿಸಿದಳು ಧರ್ಮ ಇವಳನ್ನು ಶಿಲೆಯಾಗುವಂತೆ ಶಪಿಸಿದ. ಬಳಿಕ ಧೂತಪಾಪೆ ಚಂದ್ರಕಾಂತ ಶಿಲೆಯಾಗಿ ಚಂದ್ರೋದಯವಾಗುತ್ತಲೇ ಒಸರುತ್ತ ನದೀ ರೂಪದಿಂದಿದ್ದ ಧರ್ಮನನ್ನು ಸೇರಿದಳು [ಭೀ. ೯].

**ಧೂಮಿನೀ.**—ಚಂದ್ರ ವಂಶದ ಅಜಮೀಢ ರಾಜನ ನಾಲ್ವರು ಪತ್ನಿಯರಲ್ಲಿ ಒಬ್ಬಳು. ಋಕ್ಷಕನೆಂಬ ಮಗನನ್ನು ಹೆತ್ತಳು [ಭಾರ.-ಆದಿ. ೨೦೧].

**ಧೂಮೋರ್ಣಾ** —(i) ಮಾರ್ಕಂಡೇಯ ಮಹರ್ಷಿಯ ಹೆಂಡತಿ [ಅನು. ೨೪೮].

(ii) ಯಮನ ಹೆಂಡತಿ [ಭಾರ -ಅನು. ೨೭೧].

**ಧೂಮ್ರಲೋಚನ** —ನೋಡು—ಶುಂಭ, ನಿಶುಂಭ

**ಧೂಮ್ರಾ** —ವಸುವಿನ ಹೆಂಡತಿ ಧರ, ಧ್ರುವರೆಂಬವರು ಈಕೆಯ ಮಕ್ಕಳು [ಭಾರ.-ಆದಿ ೬೭].

**ಧೂಮ್ರಾಕ್ಷ** —ಒಬ್ಬ ರಾಕ್ಷಸ ರಾವಣನ ಮಂತ್ರಿ. ಹನೂಮಂತನಿಂದ ಹತನಾದ [ವನ ೨೭೮ ರಾಮಾ -ಯು ೫೧, ೫೨].

**ಧೃತದೇವಾ** —ದೇವಕನ ಪುತ್ರಿಯರಲ್ಲಿ ಒಬ್ಬಳು ವಸುದೇವನ ಪತ್ನಿ ವಿಪೃಷ್ಠನೆಂಬವ ಈಕೆಯ ಮಗ ನೋಡು—ದೇವಕ, ವಸುದೇವ

**ಧೃತರಾಷ್ಟ್ರ** —(i) ಸರ್ಪರಾಜ ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದನ ಬಭ್ರುವಾಹನನಿಂದ ಅರ್ಜುನನನ್ನು ಬದುಕಿಸುವುದಕ್ಕಾಗಿ, ಚಿತ್ರಾಂಗದೆ ಈತನನ್ನು ಸಂಜೀವಕರತ್ನವನ್ನು ಕೊಡುವುದಾಗಿ ಬೇಡಿದಳು ಧೃತರಾಷ್ಟ್ರ ಸಮ್ಮತಿಸದಿರಲಾಗಿ ಬಭ್ರುವಾಹನ ಈತನನ್ನು ಯುದ್ಧದಲ್ಲಿ ಸೋಲಿಸಿ, ಶರಣಾಗತನಾದ ಧೃತರಾಷ್ಟ್ರನಿಂದ ಸಂಜೀವಕರತ್ನವನ್ನು ಪಡೆದು, ಅದರ ಮೂಲಕ ಅರ್ಜುನನನ್ನು ಬದುಕಿಸಿದ [ಜೈ.-ಅಶ್ವ ೮೧]

(ii) ಪಾಂಚಾಲ ದೇಶದ ಅರಸು ಬಹಳ ಹಳೆಯ ಕಾಲದವ. ಈತನ ದೇಶ ಬಕ ದಾಲ್ಭ್ಯರ ಮೂಲಕ ಹಾಳಾಯಿತು. ನೋಡು—ದಾಲ್ಭ್ಯ, ಬಕ [ಶಲ್ಯ ೪೨]

(iii) ಚಂದ್ರ ವಂಶದ ವಿಚಿತ್ರವೀರ್ಯ ರಾಜನ ಕ್ಷೇತ್ರಜ ಪುತ್ರ ಈತನಿಗೆ ವೈಚಿತ್ರವೀರ್ಯ, ಆಂಬಿಕೇಯ, ಪ್ರಜ್ಞಾಚಕ್ಷು, ಆಜಮೀಢ ಮುಂತಾದ ಹೆಸರುಗಳುಂಟು [ಭಾರ.-ಆದಿ. ೬೩]. ಶಂತನು ಪುತ್ರನೂ ಭೀಷ್ಮನ ಬಲತಾಯ ಮಗನೂ ಆಗಿದ್ದ ವಿಚಿತ್ರವೀರ್ಯ ಸಂತಾನವಿಲ್ಲದೆಯೇ ಸತ್ತುಹೋದ. ಭೀಷ್ಮ ತಾನು ರಾಜ್ಯಾಧಿಕಾರವನ್ನು ಸ್ವೀಕರಿಸಲೂ ಇಲ್ಲ ಮದುವೆಯನ್ನೂ ಮಾಡಿಕೊಳ್ಳಲಿಲ್ಲ. ಹೀಗಾಗಿ ರಾಜ್ಯಕ್ಕೆ ಉತ್ತರಾಧಿಕಾರಿಗಳಿಲ್ಲವಾಯಿತು. ಆಗ ಶಂತನು ಪತ್ನಿಯಾದ ಸತ್ಯವತಿ ಕೃಷ್ಣದ್ವೈಪಾಯನನನ್ನು ಸಂತಾನಕ್ಕಾಗಿ ಪ್ರೇರಿಸಿದಳು ಆಗ ವಿಚಿತ್ರವೀರ್ಯನ ಪತ್ನಿಯಾದ ಅಂಬಿಕೆ ವ್ಯಾಸ ಸಾನ್ನಿಧ್ಯದಿಂದ ಧೃತರಾಷ್ಟ್ರನೆಂಬ ಮಗನನ್ನು ಹೆತ್ತಳು. ಇವನು ಮಾತೃದೋಷದಿಂದ ಕುರುಡನಾಗಿ ಜನಿಸಿದ. ನೋಡು—ಅಂಬಾ, ಅಂಬಿಕಾ, ಕೃಷ್ಣದ್ವೈಪಾಯನ [ಭಾರ.-ಆದಿ. ೬೪]. ಈತ ಗಂಧರ್ವಾಂಶ

ದಿಂದ ಜನಿಸಿದವ [ಆದಿ ೬೪] ಈತ ಗಾಂಧಾರ ದೇಶಾಧಿಪತಿಯಾದ ಸುಬಲ ರಾಜನ ಪುತ್ರಿಯರಾದ ಗಾಂಧಾರೀ, ಸತ್ಯವ್ರತಾ, ಸತ್ಯಸೇನಾ, ಸುದೇಷ್ಣಾ, ಸಂಹಿತಾ, ತೇಜಶ್ಶ್ರವಾ, ಸುಶ್ರವಾ, ನಿಕೃತಿ, ಶುಭಾ, ಶಂಭರಾ, ದಶಾರ್ಣಾ ಎಂಬ ಹನ್ನೊಂದು ಮಂದಿಯನ್ನೂ ಮದುವೆಯಾಗಿದ್ದ. ಇವರಲ್ಲಿ ಗಾಂಧಾರಿಯೇ ಪ್ರಮುಖಳು [ಆದಿ ೧೧೯] ಗಾಂಧಾರಿಯಲ್ಲಿ ಈತ ದುರ್ಯೋಧನನೇ ಮೊದಲಾದ ನೂರು ಮಂದಿ ಪುತ್ರರನ್ನೂ ದುಶ್ಶಲೆಯೆಂಬ ಒಬ್ಬ ಮಗಳನ್ನೂ ಪಡೆದ ನೋಡು—ಗಾಂಧಾರಿ, ಕೃಷ್ಣ ದ್ವೈಪಾಯನ [ಭಾರ -ಆದಿ ೧೨೯, ೧೩೦] ಧೃತರಾಷ್ಟ್ರನ ನೂರು ಮಂದಿ ಮಕ್ಕಳ ಹೆಸರುಗಳು [ಆದಿ ೧೩೧]. ದುಶ್ಶಲೆಯನ್ನು ಸಿಂಧು ದೇಶಾಧಿಪತಿಯಾದ ವೃದ್ಧ ಕ್ಷತ್ರನೆಂಬ ಅರಸನ ಮಗನಾದ ಬೃಹದ್ರಥನಿಗೆ ಕೊಟ್ಟು ಮದುವೆಮಾಡಿದ [ಆದಿ ೧೩೧]. ಪಾಂಡುವಿನ ಮರಣಾನಂತರ ಕುಂತಿ ಪಾಂಡವರನ್ನು ಕರೆದುಕೊಂಡು, ಧೃತರಾಷ್ಟ್ರನಲ್ಲಿಯೇ ಸೇರಿದಳು ಈತ ತನ್ನ ಮಕ್ಕಳೊಂದಿಗೆ ಅವರನ್ನೂ ವಿದ್ಯಾ ವಂತರನ್ನಾಗಿ ಮಾಡಿ, ಯುಧಿಷ್ಠಿರನಿಗೆ ಯುವರಾಜ ಪದವಿಯಲ್ಲಿ ಪಟ್ಟಗಟ್ಟಿದ [ಆದಿ ೧೫೧] ದುರ್ಯೋಧನ ಪಾಂಡವರ ಏಳಿಗೆಯನ್ನು ನೋಡಿ ಸಹಿಸಲಾರದೆ ಅವರನ್ನು ವಾರಣಾವತಕ್ಕೆ ಕಳುಹಿಸುವುದಕ್ಕಾಗಿ ಧೃತರಾಷ್ಟ್ರನೊಂದಿಗೆ ವಾದಮಾಡಿ ಆತನನ್ನು ಒಪ್ಪಿಸಿದ್ದು ಧೃತರಾಷ್ಟ್ರ ಪಾಂಡವರನ್ನು ವಾರಣಾವತಕ್ಕೆ ಹೋಗ ಹೇಳಿದ್ದು [ಆದಿ ೧೫೪, ೧೫೫] ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುಹೋದ ರೆಂಬುದನ್ನು ಕೇಳಿ ಧೃತರಾಷ್ಟ್ರ ಗೋಳಾಡಿದ್ದು. ಕುಂತಿಗೂ ಪಾಂಡವರಿಗೂ ಉತ್ತರ ಕ್ರಿಯೆಗಳನ್ನು ಮಾಡಿದ್ದು [ಆದಿ ೧೬೨]. ದ್ರೌಪದೀ ಸ್ವಯಂವರಾನಂತರ ಪಾಂಡ ವರ ವೃತ್ತಾಂತವನ್ನು ತಿಳಿದ ಅರಸರೆಲ್ಲರೂ ಧೃತರಾಷ್ಟ್ರನನ್ನು ನಿಂದಿಸಿದ್ದು [ಆದಿ ೨೧೭] ಪಾಂಡವರನ್ನೂ ದ್ರೌಪದಿಯನ್ನೂ ಹಸ್ತಿನಾವತಿಗೆ ಕರೆತರುವಂತೆ ಧೃತರಾಷ್ಟ್ರ ಅಪ್ಪಣೆಮಾಡಿದ್ದು ಕರ್ಣ ದುರ್ಯೋಧನರು ಧೃತರಾಷ್ಟ್ರನಲ್ಲಿ ವಾದ ಮಾಡಿದ್ದು [ಆದಿ ೨೧೯]. ಧೃತರಾಷ್ಟ್ರ ಭೀಷ್ಮಾದಿಗಳೊಂದಿಗೆ ಯೋಚಿಸಿದ್ದು [ಆದಿ. ೨೨೧]. ಧೃತರಾಷ್ಟ್ರ ಪಾಂಡವರನ್ನು ಕರೆತರುವುದಕ್ಕಾಗಿ ವಿದುರನನ್ನು ದ್ರುಪದ ರಾಜಧಾನಿಗೆ ಕಳುಹಿಸಿದ್ದು [ಆದಿ. ೨೨೫]. ಧೃತರಾಷ್ಟ್ರ ಪಾಂಡವರಿಗೆ ಅರ್ಧ ರಾಜ್ಯವನ್ನು ಹಂಚಿಕೊಟ್ಟು ಖಾಂಡವ ಪ್ರಸ್ಥಕ್ಕೆ ಕಳುಹಿಸಿದ್ದು [ಆದಿ. ೨೨೭]. ಧೃತರಾಷ್ಟ್ರಾದಿಗಳನ್ನು ರಾಜಸೂಯ ಯಾಗಕ್ಕೆ ಕರೆಯುವುದಕ್ಕಾಗಿ ನಕುಲ ಧೃತ ರಾಷ್ಟ್ರನಲ್ಲಿಗೆ ಬಂದದ್ದು [ಸಭಾ ೩೬]. ರಾಜಸೂಯ ಯಾಗದಿಂದ ಹಿಂದಿರುಗಿದ ದುರ್ಯೋಧನ ಚಿಂತೆಯಿಂದ ದಿನದಿನಕ್ಕೂ ಕೃಶವಾಗುತ್ತಿರುವನೆಂಬುದನ್ನು ಕೇಳಿ ಧೃತರಾಷ್ಟ್ರ ದುರ್ಯೋಧನನನ್ನು ಬರಮಾಡಿಕೊಂಡು, ಆತನ ಚಿಂತೆಗೆ ಕಾರಣ ನೇನೆಂದು ಪ್ರಶ್ನೆಮಾಡಿದ್ದು ದುರ್ಯೋಧನ ಪಾಂಡವರೊಂದಿಗೆ ಜೂಜಾಡುವುದಕ್ಕೆ

ಧೃತರಾಷ್ಟ್ರನ ಅನುಮತಿಯನ್ನು ಕೇಳಿದ್ದು. ಧೃತರಾಷ್ಟ್ರ ದ್ಯೂತ ಸಭೆಯನ್ನು ನಿರ್ಮಿಸಲು ಅನುಜ್ಞೆಯನ್ನಿತ್ತು ಪಾಂಡವರನ್ನು ಕರೆತರಲು ವಿದುರನನ್ನು ಕಳುಹಿದ್ದು [ಸಭಾ. ೭೪-೭೬]. ದುರ್ಯೋಧನ ರಾಜಸೂಯ ಮಂಟಪದಲ್ಲಿ ಭೀಮಾದಿಗಳಿಂದ ತನಗೆ ಉಂಟಾದ ಅಪಮಾನವನ್ನು ಧೃತರಾಷ್ಟ್ರನಲ್ಲಿ ಬಿನ್ನವಿಸಿ, ರಾಜಸೂಯ ಯಾಗ ಸಮಯದಲ್ಲಿ ಸಕಲ ದೇಶದ ರಾಜರೂ ಪಾಂಡವರಿಗೆ ಕಾಣಿಕೆಗಳನ್ನು ಒಪ್ಪಿಸಿದ ಪರಿಯನ್ನು ವಿವರಿಸಿದ್ದು. ಧೃತರಾಷ್ಟ್ರ ಪಾಂಡವರನ್ನು ದ್ವೇಷಿಸಬಾರದೆಂದು ದುರ್ಯೋಧನನಿಗೆ ಬುದ್ಧಿ ಹೇಳಿದ್ದು ದುರ್ಯೋಧನ ಧೃತರಾಷ್ಟ್ರನ ಮಾತಿಗೆ ಪ್ರತಿ ಹೇಳಿದ್ದು [ಸಭಾ. ೭೮-೮೧]. ಜೂಜನ್ನು ನಿಲ್ಲಿಸಬೇಕೆಂದು ವಿದುರನು ಧೃತರಾಷ್ಟ್ರನಿಗೆ ಹೇಳಿದ್ದು [ಸಭಾ. ೮೬] ದ್ರೌಪದಿಯ ಶಾಪವನ್ನು ಕೇಳಿ ಹೆದರಿದ ಧೃತರಾಷ್ಟ್ರ ದ್ರೌಪದಿಗೆ ವರ ಕೊಡುವ ನೆವದಿಂದ ಪಾಂಡವರನ್ನು ದಾಸ್ಯದಿಂದ ಬಿಡುಗಡೆ ಮಾಡಿ, ಅವರ ದೇಶಕ್ಕೆ ಕಳುಹಿದ್ದು [ಸಭಾ ೯೩] ಪಾಂಡವರು ಕಾಡಿಗೆ ಹೋದಾಗ ವಿದುರ ಧೃತರಾಷ್ಟ್ರನಿಗೆ ಪಾಂಡವರ ಅಭಿಪ್ರಾಯವನ್ನು ತಿಳಿಸಿದ್ದು. ಸಂಜಯ, ಧೃತರಾಷ್ಟ್ರರ ಸಂವಾದ [ಸಭಾ ೧೦೨, ೧೦೩]. ಪಾಂಡವರನ್ನು ಹಿಂದಕ್ಕೆ ಕರೆತರಿಸಬೇಕೆಂಬುದಾಗಿ ವಿದುರ ಧೃತರಾಷ್ಟ್ರನಲ್ಲಿ ತಿಳಿಯಹೇಳಿದ್ದು. ಧೃತರಾಷ್ಟ್ರ ವಿದುರನನ್ನು ನಿಂದಿಸಲಾಗಿ ವಿದುರ ಕೋಪದಿಂದ ಪಾಂಡವರಲ್ಲಿಗೆ ಹೋದದ್ದು ಧೃತರಾಷ್ಟ್ರ ಸಂಜಯನ ಮೂಲಕ ಮರಳಿ ವಿದುರನನ್ನು ತನ್ನಲ್ಲಿಗೆ ಬರಮಾಡಿಕೊಂಡದ್ದು [ಅರ ೪-೬] ವ್ಯಾಸ ಮುನಿ ಧೃತರಾಷ್ಟ್ರನಲ್ಲಿಗೆ ಬಂದು ಪಾಂಡವರೊಂದಿಗೆ ಸಂಧಿಮಾಡಿಕೊಳ್ಳ ಹೇಳಿದ್ದು ಧೃತರಾಷ್ಟ್ರ ದುರ್ಯೋಧನನಿಗೆ ವಿವೇಕ ಹೇಳುವಹಾಗೆ ವ್ಯಾಸನನ್ನು ಬೇಡಿದ್ದು [ಅರ ೮-೧೦] ಮೈತ್ರೇಯ ಮುನಿ, ಭೀಮನಿಂದ ಹತನಾದ ಕಿಮ್ಮೀರನ ಕಥೆಯನ್ನು ಧೃತರಾಷ್ಟ್ರನಿಗೆ ತಿಳಿಸಿದ್ದು [ವನ ೧೧]. ಧೃತರಾಷ್ಟ್ರ ತನ್ನ ಮಕ್ಕಳ ದುರ್ವರ್ತನಕ್ಕಾಗಿ ಮರುಗಿದ್ದು ದುರ್ಯೋಧನಾದಿಗಳನ್ನು ಕೊಲ್ಲಲೇಬೇಕೆಂದು ಶ್ರೀ ಕೃಷ್ಣನೂ ಪಾಂಡವರೂ ಪ್ರತಿಜ್ಞೆಮಾಡಿದುದನ್ನು ಕೇಳಿ ಸಂಜಯ ಚಾರರ ಮೂಲಕ, ಧೃತರಾಷ್ಟ್ರನಿಗೆ ತಿಳಿಸಿದ್ದು [ವನ. ೪೭, ೪೮]. ದ್ರುಪದ ಸಂಧಿಗಾಗಿ ಧೃತರಾಷ್ಟ್ರನಲ್ಲಿಗೆ ತನ್ನ ಪುರೋಹಿತನನ್ನು ಕಳುಹಿಸಿದ್ದು [ಉದ್ಯೋ ೬]. ಧೃತರಾಷ್ಟ್ರ ತಾನು ಸಂಜಯನ ಮೂಲಕ ಪಾಂಡವರಿಗೆ ಸಮಾಚಾರವನ್ನು ಹೇಳಿಕಳುಹಿಸುವುದಾಗಿ ಹೇಳಿ ಪುರೋಹಿತನನ್ನು ಹಿಂದಕ್ಕೆ ಕಳುಹಿದ್ದು [ಉದ್ಯೋ. ೨೧] ಧೃತರಾಷ್ಟ್ರ ಪಾಂಡವರಲ್ಲಿಗೆ ಸಂಜಯನನ್ನು ಕಳುಹಿದ್ದು [ಉದ್ಯೋ ೨೨] ಧೃತರಾಷ್ಟ್ರನಿಗೆ ಯುದ್ಧ ಸಮ್ಮತವಲ್ಲವೆಂಬುದನ್ನು ಸಂಜಯ ಯುಧಿಷ್ಠಿರನಿಗೆ ತಿಳುಹಿದ್ದು [ಉದ್ಯೋ. ೨೭]. ಸಂಜಯ ಧೃತರಾಷ್ಟ್ರನಲ್ಲಿಗೆ ಹಿಂದಿರುಗಿ ಬಂದದ್ದು. ಧೃತರಾಷ್ಟ್ರನನ್ನು ಬಹಳವಾಗಿ ನಿಂದಿಸಿ, ಪಾಂಡವರು ಹೇಳಿದ ಸುದ್ದಿಯನ್ನು ಮರುದಿನ ಬೆಳಿಗ್ಗೆ

ಹೇಳುವುದಾಗಿ ಹೇಳಿ ಸಂಜಯು ತನ್ನ ಮನೆಗೆ ಹೋದದ್ದು [ಉದ್ಯೋ ೩೨] ಭೀತನಾದ ಧೃತರಾಷ್ಟ್ರ ರಾತ್ರಿಯಲ್ಲಿ ವಿದುರನನ್ನು ಬರಮಾಡಿಕೊಂಡು, ರಾತ್ರಿಯೆಲ್ಲಾ ಚಿಂತೆಯಿಂದ ಬಳಲಿದ್ದು. ವಿದುರ ಧೃತರಾಷ್ಟ್ರನಿಗೆ ಪಾಂಡವರೊಂದಿಗೆ ಸಂಧಿಮಾಡಿ ಕೊಳ್ಳುವಂತೆ ಹೇಳಿದ್ದು [ಉದ್ಯೋ, ೩೩-೩೪] ವಿದುರ ಧೃತರಾಷ್ಟ್ರನಿಗೆ ಅನೇಕ ಧರ್ಮ ರಹಸ್ಯಗಳನ್ನು ತಿಳುಹಿ ಪಾಂಡವರಲ್ಲಿ ಪುತ್ರವಾತ್ಸಲ್ಯವನ್ನಿರಿಸಬೇಕೆಂದು ಹೇಳಿದ್ದು [ಉದ್ಯೋ ೩೫-೪೧] ವಿದುರ ಧೃತರಾಷ್ಟ್ರನಿಗೆ ಸನತ್ಸುಜಾತೋಪಾಖ್ಯಾನವನ್ನು ತಿಳುಹಿ ತತ್ವೋಪದೇಶಮಾಡಿದ್ದು [ಉದ್ಯೋ ೪೧-೪೬] ಪಾಂಡವರು ಹೇಳಿಕಳು ಹಿರುವ ಸಮಾಚಾರವನ್ನು ಕೇಳುವುದಕ್ಕಾಗಿ ಧೃತರಾಷ್ಟ್ರ ಸಭೆ ಸೇರಿಸಿದ್ದು [ಉದ್ಯೋ ೪೭, ೪೮]. ಧೃತರಾಷ್ಟ್ರನಿಗೆ ಭೀಷ್ಮದ್ರೋಣರು ವಿವೇಕವನ್ನು ತಿಳಿಸಿದ್ದು, ಧೃತರಾಷ್ಟ್ರ ಅವರಿಬ್ಬರ ಮಾತನ್ನೂ ತಿರಸ್ಕಾರಮಾಡಿದ್ದಕ್ಕಾಗಿ, ಸಭೆಯಲ್ಲಿ ನೆರೆದಿದ್ದವರೆಲ್ಲರೂ ಪ್ರಾಣದ ಆಸೆಯನ್ನು ತೊರೆದದ್ದು [ಉದ್ಯೋ. ೪೯] ಪಾಂಡವರನ್ನು ನಾವೇಕೆ ಅನುಸರಿಸಬೇಕೆಂಬುದಾಗಿ ಧೃತರಾಷ್ಟ್ರ ಹೇಳಲಾಗಿ ಸಂಜಯು ಮೂರ್ಛೆಹೋದದ್ದು [ಉದ್ಯೋ ೫೦] ಸಂಜಯು ಪಾಂಡವರ ಪ್ರತಾಪವನ್ನು ಬಣ್ಣಿಸಲಾಗಿ, ಧೃತರಾಷ್ಟ್ರ ಭೀಮನ ಪ್ರತಾಪವನ್ನೂ, ಸಾಮರ್ಥ್ಯವನ್ನೂ, ಸ್ಮರಿಸಿ ಚಿಂತಿಸಿದ್ದು ಧೃತರಾಷ್ಟ್ರ ಅರ್ಜುನನ ಪ್ರತಾಪವನ್ನು ಬಣ್ಣಿಸಿದ್ದು ಪಾಂಡವರಿಗೆ ಸಹಾಯಸಂಪತ್ತು ಪ್ರಬಲ ವಾಗಿರುವುದರಿಂದ ಹೇಗಾದರೂ ಸಂಧಿಗೆ ಪ್ರಯತ್ನಮಾಡುವುದಾಗಿ ಧೃತರಾಷ್ಟ್ರ ಹೇಳಿದ್ದು [ಉದ್ಯೋ ೫೧-೫೩] ದುರ್ಯೋಧನ ಪಾಂಡವರಿಗಿಂತಲೂ ತಾವೇ ಬಲ ಶಾಲಿಗಳೆಂದು ಹೇಳಿ ಧೃತರಾಷ್ಟ್ರನನ್ನು ಸಂತೈಸಿದ್ದು [ಉದ್ಯೋ ೫, ೫] ಭೀಷ್ಮಾದಿ ಗಳು ಯುದ್ಧಕ್ಕೆ ಸಮ್ಮತಿಸುವುದಿಲ್ಲವೆಂಬುದನ್ನು ಧೃತರಾಷ್ಟ್ರ ದುರ್ಯೋಧನನಿಗೆ ತಿಳಿಸಿದ್ದು [ಉದ್ಯೋ ೫೮] ಧೃತರಾಷ್ಟ್ರ ಅರ್ಜುನ ಹೇಳಿಕಳುಹಿದ ಮಾತನ್ನು ನೆನಪಿಗೆ ತಂದುಕೊಂಡು, ಮತ್ತೊಮ್ಮೆ ದುರ್ಯೋಧನನಿಗೆ ನೀತಿ ಹೇಳಿದ್ದು [ಉ ೬೦] ಕರ್ಣ ಧೃತರಾಷ್ಟ್ರನ ಮಾತನ್ನು ಅಲ್ಲಗಳೆದು ಪಾಂಡವರನ್ನು ತಾನೊಬ್ಬನೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದು [ಉದ್ಯೋ ೬೨]. ಧೃತರಾಷ್ಟ್ರ ದುರ್ಯೋ ಧನರ ಸಂವಾದ [ಉದ್ಯೋ. ೬೩-೬೬] ಸಂಜಯು ಧೃತರಾಷ್ಟ್ರನಿಗೆ ಭಗವತ್ಪ್ರಾಪ್ತಿ ಸಾಧನ ಪ್ರಕಾರವನ್ನು ತಿಳುಹಿದ್ದು ಸಂಧಿಗಾಗಿ ಶ್ರೀ ಕೃಷ್ಣನ ಆಗಮನವನ್ನು ತಿಳಿ ಸಿದ್ದು [ಉದ್ಯೋ. ೬೭-೬೯] ಕೃಷ್ಣನ ಆಗಮನವಾರ್ತೆಯನ್ನು ಕೇಳಿ ಸಂತಸ ಗೊಂಡ ಧೃತರಾಷ್ಟ್ರ ತನಗೆ ಕಣ್ಣಿಲ್ಲದುದಕ್ಕಾಗಿ ಪರಿತಪಿಸಿ, ಕಣ್ಣುಳ್ಳವರನ್ನು ಪ್ರಶಂ ಸಿಸಿ, ಶ್ರೀ ಕೃಷ್ಣನ ಗುಣಗಳನ್ನು ವರ್ಣಿಸಿದ್ದು [ಉದ್ಯೋ ೭೦]. ಶ್ರೀ ಕೃಷ್ಣ ಬಿಜ ಮಾಡಿಸುವನೆಂಬ ಸುದ್ದಿಯನ್ನು ಕೇಳಿದ ಧೃತರಾಷ್ಟ್ರ ದುರ್ಯೋಧನನ ಮೂಲಕ, ದಾರಿಯುದ್ದಕ್ಕೂ ಅಲ್ಲಲ್ಲಿ ಸಭೆಗಳನ್ನೂ ಚಪ್ಪರಗಳನ್ನೂ ಕಲ್ಪಿಸಿದ್ದು. ಶ್ರೀ ಕೃಷ್ಣ

ನಿಗೆ ಆನೆ, ಕುದುರೆ, ತೇರುಗಳನ್ನು ಒಪ್ಪಿಸುವುದಾಗಿ ಧೃತರಾಷ್ಟ್ರ ವಿದುರನಲ್ಲಿ ಪ್ರತಿಜ್ಞೆಮಾಡಿದ್ದು ಶ್ರೀ ಕೃಷ್ಣನಿಗೆ ಮರ್ಯಾದೆ ಮಾಡುವುದಕ್ಕೆ ಪ್ರತಿಯಾಗಿ ಆತನನ್ನು ಕಟ್ಟಿಹಾಕಬೇಕೆಂದು ದುರ್ಯೋಧನ ಹೇಳಲಾಗಿ, ಧೃತರಾಷ್ಟ್ರ ಮಗನನ್ನು ನಿಂದಿಸಿದ್ದು [ಉದ್ಯೋ. ೮೫-೮೮]. ಧೃತರಾಷ್ಟ್ರ ಕೃಷ್ಣನನ್ನು ಪೂಜಿಸಿದ್ದು [ಉ ೮೯] ಸಂಧಿಗಾಗಿ ತಾನು ಬಂದಿರುವ ಸುದ್ದಿಯನ್ನು ಕೃಷ್ಣ ಧೃತರಾಷ್ಟ್ರನಿಗೆ ಹೇಳಿದ್ದು [ಉ. ೯೫] ಧೃತರಾಷ್ಟ್ರ ದುರ್ಯೋಧನನಿಗೆ ಬುದ್ಧಿಹೇಳುವಂತೆ ಕೃಷ್ಣನನ್ನು ಪ್ರಾರ್ಥಿಸಿದ್ದು [ಉದ್ಯೋ ೧೨೪] ವಂಶವನ್ನು ಉಳಿಸಿಕೊಳ್ಳಬೇಕಾದರೆ ದುರ್ಯೋಧನನನ್ನು ಪರಿತ್ಯಾಗಮಾಡುವುದೇ ಲೇಸೆಂಬುದಾಗಿ ಕೃಷ್ಣ ಧೃತರಾಷ್ಟ್ರನಿಗೆ ಹೇಳಿದ್ದು [ಉದ್ಯೋ ೧೨೮] ಧೃತರಾಷ್ಟ್ರನ ಕೋರಿಕೆಯಂತೆ ವಿದುರನು ಗಾಂಧಾರಿಯನ್ನು ಸಭೆಗೆ ಕರೆತಂದು, ಆಕೆಯ ಮೂಲಕ ದುರ್ಯೋಧನನಿಗೆ ಹೇಳಿಸಿದ್ದು [ಉದ್ಯೋ. ೧೨೯] ಕೃಷ್ಣನನ್ನು ಕಟ್ಟಿಹಾಕುವುದು ಸಾಧ್ಯವಲ್ಲವೆಂದು ಧೃತರಾಷ್ಟ್ರ ದುರ್ಯೋಧನನಿಗೆ ಹೇಳಿದ್ದು [ಉದ್ಯೋ ೧೩೦]. ಶ್ರೀ ಕೃಷ್ಣ ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿ, ತನ್ನ ದಿವ್ಯರೂಪವನ್ನು ತೋರಿದ್ದು. ಧೃತರಾಷ್ಟ್ರ ತಾನು ಶ್ರೀ ಕೃಷ್ಣನ ದಿವ್ಯರೂಪವನ್ನು ಕಂಡ ಕಣ್ಣಿನಿಂದ ಇತರರನ್ನು ನೋಡಲೊಲ್ಲದೆ ತನ್ನ ದೃಷ್ಟಿ ಮರೆಯಾಗುವಂತೆ ಬೇಡಿದ್ದು [ಉದ್ಯೋ ೧೩೧]. ಭಾರತ ಯುದ್ಧವನ್ನು ನೋಡುವುದಕ್ಕಾಗಿ ವ್ಯಾಸ ಮುನಿ ಧೃತರಾಷ್ಟ್ರನಿಗೆ ಕಣ್ಣನ್ನು ಅನುಗ್ರಹಿಸಿದ್ದು ಧೃತರಾಷ್ಟ್ರ ಯುದ್ಧದ ನಡೆವಳಿಯನ್ನು ಮಾತ್ರ ತನಗೆ ತಿಳಿಸಿದರೆ ಸಾಕೆಂಬುದಾಗಿ ಹೇಳಿದ್ದು [ಭೀ ೨] ವ್ಯಾಸ ಧೃತರಾಷ್ಟ್ರನಿಗೆ ಆ ಕಾಲದಲ್ಲಿ ಉಂಟಾದ ದುಶ್ಶಕುನಗಳನ್ನು ತಿಳಿಸಿದ್ದು [ಭೀ ೩-೪] ಸಂಜಯ ಧೃತರಾಷ್ಟ್ರನಿಗೆ ಭೀಷ್ಮವಧೆಯನ್ನು ತಿಳಿಸಿದ್ದು ಧೃತರಾಷ್ಟ್ರ ಆ ಕಥೆಯನ್ನು ವಿವರವಾಗಿ ಹೇಳಬೇಕೆಂದು ಸಂಜಯನನ್ನು ಪ್ರಶ್ನೆಮಾಡಿದ್ದು [ಭೀ. ೧೩-೧೪] ತನ್ನ ಮಕ್ಕಳಲ್ಲಿ ಕೆಲವರು ಯುದ್ಧದಲ್ಲಿ ಮಡಿದ ಸಮಾಚಾರವನ್ನು ಕೇಳಿ ಧೃತರಾಷ್ಟ್ರ ದುಃಖಿಸಿದ್ದು [ಭೀ. ೭೬, ೮೯] ಭೀಷ್ಮ ಶರತಲ್ಪದಲ್ಲಿ ಪವಡಿಸಿದ ತರುವಾಯ ಕರ್ಣ ದುರ್ಯೋಧನರ ವೃತ್ತಾಂತವನ್ನು ಧೃತರಾಷ್ಟ್ರ ಪ್ರಶ್ನೆಮಾಡಿದ್ದು ದ್ರೋಣನಿಗೆ ಸೇನಾಪತಿತ್ವವನ್ನು ಒಪ್ಪಿಸಿದ ವಾರ್ತೆಯನ್ನೂ, ದ್ರೋಣ ಹತನಾದನೆಂಬುದನ್ನೂ ಕೇಳಿ, ಧೃತರಾಷ್ಟ್ರ ದುಃಖಪಟ್ಟಿದ್ದು [ದ್ರೋ. ೧, ೮, ೧೦]. ಭಕ್ತಿಪರವಶನಾದ ಧೃತರಾಷ್ಟ್ರ ಶ್ರೀ ಕೃಷ್ಣನ ದಿವ್ಯಚರಿತೆಯನ್ನು ವರ್ಣಿಸಿದ್ದು [ದ್ರೋ ೧೧] ಧೃತರಾಷ್ಟ್ರ ತನ್ನ ಮಕ್ಕಳ ಸಾವಿಗಾಗಿ ವ್ಯಥೆಪಟ್ಟು, ಅಭಿಮನ್ಯು ವಧೆಯ ವೃತ್ತಾಂತವನ್ನು ತಿಳಿಸುವಂತೆ ಸಂಜಯನನ್ನು ಪ್ರಶ್ನೆಮಾಡಿದ್ದು. ಸಂಜಯ ಧೃತರಾಷ್ಟ್ರನನ್ನು ನಿಂದಿಸಿ, ಯುದ್ಧರಂಗವಾರ್ತೆಯನ್ನು ತಿಳಿಸತೊಡಗಿದ್ದು [ದ್ರೋ. ೮೫-೮೬] ಕರ್ಣ ಇಂದ್ರನಿಂದ ಪಡೆದಿದ್ದ

ಶಕ್ತ್ಯಾಯುಧವನ್ನು ಅರ್ಜುನನಲ್ಲಿ ಪ್ರಯೋಗಿಸದಿರಲು ಕಾರಣವೇನೆಂದು ಧೃತ ರಾಷ್ಟ್ರ ಸಂಜಯನನ್ನು ಪ್ರಶ್ನೆಮಾಡಿದ್ದು [ದ್ರೋ. ೧೮೩] ದ್ರೋಣ ಮಡಿದ ತರುವಾಯ ಅಶ್ವತ್ಥಾಮ ಏನು ಮಾಡಿದನೆಂಬುದಾಗಿ ಧೃತರಾಷ್ಟ್ರ ಸಂಜಯನನ್ನು ಕೇಳಿದ್ದು [ದ್ರೋ. ೧೯೫]. ಸಂಜಯ ಕರ್ಣವಧೆಯನ್ನು ಧೃತರಾಷ್ಟ್ರನಿಗೆ ತಿಳುಹಿದ್ದು. ಸೈನ್ಯದಲ್ಲಿ ಹತರಾದವರ ಹೆಸರುಗಳನ್ನು ತಿಳುಹಬೇಕೆಂದು ಪ್ರಶ್ನೆಮಾಡಿದ ಧೃತರಾಷ್ಟ್ರನಿಗೆ ಸಂಜಯ ವಿವರವಾಗಿ ತಿಳಿಸಿದ್ದು ಧೃತರಾಷ್ಟ್ರ ಕರ್ಣನ ಗುಣಗಳನ್ನು ಪ್ರಶಂಸೆ ಮಾಡಿದ್ದು. ಧೃತರಾಷ್ಟ್ರ ಮುಂದಣ ನಡೆವಳಿಯನ್ನು ಪ್ರಶ್ನೆಮಾಡಿದ್ದು [ಕರ್ಣ ೧-೬]. ದುರ್ಯೋಧನ ಹತನಾದನೆಂಬ ಸುದ್ದಿಯನ್ನು ಕೇಳಿ, ಧೃತರಾಷ್ಟ್ರ ಮೂರ್ಛೆಹೋದದ್ದು. ವಿದುರ ಅವನನ್ನು ಸಂತವಿಸಿದ್ದು [ಶಲ್ಯ ೧] ಧೃತರಾಷ್ಟ್ರ ದುರ್ಯೋಧನನ ಪ್ರತಿಜ್ಞೆಯನ್ನು ಸ್ಮರಿಸಿ ಪ್ರಲಾಪಿಸಿದ್ದು. ಯುದ್ಧವೃತ್ತಾಂತವನ್ನು ವಿವರವಾಗಿ ತಿಳುಹುವಂತೆ ಪ್ರಶ್ನೆಮಾಡಿದ್ದು ಮುಂತಾಗಿ [ಶಲ್ಯ ೨] ಯುದ್ಧ ಮುಗಿದ ತರುವಾಯ ಪುತ್ರಶೋಕ ಸಂತಪ್ತನಾದ ಧೃತರಾಷ್ಟ್ರನನ್ನು ಕೃಷ್ಣ ಸಂತವಿಸಿದ್ದು [ಶಲ್ಯ ೬೪] ದುರ್ಯೋಧನನ ಪ್ರಲಾಪವನ್ನು ಸಂಜಯ ಧೃತರಾಷ್ಟ್ರನಿಗೆ ವಿವರಿಸಿದ್ದು [ಶಲ್ಯ ೬೫] ಧೃತರಾಷ್ಟ್ರ ಸಂಜಯರ ಸಂವಾದ [ಸೌಪ್ತಿ ೧] ಸಂಜಯ ಧೃತರಾಷ್ಟ್ರನನ್ನು ಸಂತವಿಸಿದ್ದು [ಸ್ತ್ರೀ ೧] ವಿದುರ ಧೃತರಾಷ್ಟ್ರನಿಗೆ ತತ್ತ್ವೋಪದೇಶಮಾಡಿದ್ದು [ಸ್ತ್ರೀ. ೨, ೭] ವ್ಯಾಸ ಧೃತರಾಷ್ಟ್ರನಿಗೆ ಶಾಂತಿಯನ್ನುಂಟುಮಾಡಿದ್ದು. ಸಂಜಯ ವಿದುರರು ಧೃತ ರಾಷ್ಟ್ರನನ್ನು ಸಂತವಿಸಿದ್ದು [ಸ್ತ್ರೀ ೮, ೧೦] ರಣಭೂಮಿಗೆ ಹೊರಟ ಧೃತರಾಷ್ಟ್ರ ನಡುದಾರಿಯಲ್ಲಿ ಕೃಪ, ಕೃತವರ್ಮ, ಅಶ್ವತ್ಥಾಮರನ್ನು ಸಂಧಿಸಿದ್ದು. ಆ ಮೂವರೂ ಧೃತರಾಷ್ಟ್ರನನ್ನು ಸಮಾಧಾನಪಡಿಸಿದ್ದು [ಸ್ತ್ರೀ. ೧೦] ಪಾಂಡವರು ಕೃಷ್ಣನೊಂದಿಗೆ ಬಂದು ಧೃತರಾಷ್ಟ್ರನಿಗೆ ನಮಸ್ಕರಿಸಿದಾಗ ಧೃತರಾಷ್ಟ್ರ ಯುಧಿಷ್ಠಿರನನ್ನು ಮೃದುವಾಗಿ ಅಪ್ಪಿಕೊಂಡದ್ದು ಧೃತರಾಷ್ಟ್ರನ ದುರಭಿಪ್ರಾಯವನ್ನು ತಿಳಿದ ಕೃಷ್ಣ ಮೊದಲೇ ನಿರ್ಮಾಣಮಾಡಿಸಿದ್ದ ಭೀಮನ ಲೋಹಪ್ರತಿಮೆಯನ್ನು ಧೃತರಾಷ್ಟ್ರನ ಮುಂದೆ ಇರಿಸಲಾಗಿ, ಧೃತರಾಷ್ಟ್ರ ಅಪ್ಪಿಕೊಂಡದ್ದರಿಂದ ಭೀಮನ ಲೋಹಪ್ರತಿಮೆ ಪುಡಿಪುಡಿಯಾದದ್ದು ಶ್ರೀ ಕೃಷ್ಣನ ಮಾತಿನ ಮೇರೆಗೆ ಶಾಂತಿಯನ್ನು ಪಡೆದ ಧೃತರಾಷ್ಟ್ರ ಭೀಮಾದಿಗಳನ್ನು ಸಹಜವಾಗಿ ಆಲಿಂಗಿಸಿದ್ದು [ಸ್ತ್ರೀ. ೧೧, ೧೨]. ಧೃತ ರಾಷ್ಟ್ರ ಯುಧಿಷ್ಠಿರನನ್ನು ಮುಂದುಮಾಡಿಕೊಂಡು ಸ್ತ್ರೀ ಪರಿವಾರದೊಂದಿಗೆ ರಣ ಭೂಮಿಯನ್ನು ಪ್ರವೇಶಿಸಿದ್ದು [ಸ್ತ್ರೀ. ೧೬]. ಧೃತರಾಷ್ಟ್ರ ಯುದ್ಧದಲ್ಲಿ ಮಡಿದವರಿಗೆ ತಿಲೋದಕವನ್ನು ಕೊಡುವುದಕ್ಕಾಗಿ ಯುಧಿಷ್ಠಿರನೊಂದಿಗೆ ಗಂಗೆಗೆ ಹೋದದ್ದು [ಸ್ತ್ರೀ. ೨೭] ಮತ್ತು ತಿಲೋದಕವನ್ನು ಕೊಟ್ಟದ್ದು. ಧೃತರಾಷ್ಟ್ರ ಭೀಷ್ಮನಿಂದ ಅನೇಕ ಧರ್ಮರಹಸ್ಯಗಳನ್ನು ಕೇಳಿ, ಭೀಷ್ಮನಿರ್ಯಾಣಾನಂತರ ಆತನ ಶವವನ್ನು ರಾಜ

ವೈಭವದೊಂದಿಗೆ ಯುಧಿಷ್ಠಿರನ ಮೂಲಕ ಸಂಸ್ಕಾರಮಾಡಿಸಿದ್ದು [ಅನು. ೨೭೪]. ಬಂಧುವಧಶೋಕದಿಂದ ಕರ್ತವ್ಯವಿಮುಖನಾಗಿದ್ದ ಯುಧಿಷ್ಠಿರನನ್ನು ಧೃತರಾಷ್ಟ್ರ ಸಮಾಧಾನಪಡಿಸಿದ್ದು [ಆಶ್ರ. ೧]. ಭೀಮಾದಿಗಳು ಯುಧಿಷ್ಠಿರನ ಅಪ್ಪಣೆಯ ಮೇರೆಗೆ ಧೃತರಾಷ್ಟ್ರನನ್ನು ಶುಶ್ರೂಷೆಮಾಡಿಕೊಂಡಿದ್ದದ್ದು [ಆಶ್ರ. ೧, ೨]. ಧೃತರಾಷ್ಟ್ರ ಭೀಮನ ನಿಷ್ಠುರ ಭಾಷಣಗಳಿಂದ ವನವಾಸಕ್ಕೆ ಹೋಗಲು ನಿಶ್ಚಯಿಸಿ, ಯುಧಿಷ್ಠಿರನ ಅನುಮತಿಯನ್ನು ಕೇಳಿದ್ದು, ಯುಧಿಷ್ಠಿರನಿಗೆ ರಾಜನೀತಿಯನ್ನು ಉಪದೇಶಿಸಿದ್ದು [ಆಶ್ರ. ೩-೮] ಪಟ್ಟಣಿಗರನ್ನೆಲ್ಲ ಬರಮಾಡಿಸಿ, ತಾನು ವನವಾಸಕ್ಕೆ ಹೋಗಬೇಕೆಂದಿರುವುದನ್ನು ತಿಳಿಸಿ, ದುರ್ಯೋಧನನ ದುರ್ನೀತಿಗಾಗಿ ಪ್ರಜೆಗಳ ಕ್ಷಮೆಯನ್ನು ಬೇಡಿ, ಯುಧಿಷ್ಠಿರನನ್ನು ಪ್ರಜೆಗಳಿಗೆ ನ್ಯಾಸವಾಗಿ ಅರ್ಪಿಸಿದ್ದು. ಪೌರರು ಕಷ್ಟದಿಂದ ಸಮ್ಮತಿಸಿದ್ದು [ಆಶ್ರ ೯-೧೧] ಧೃತರಾಷ್ಟ್ರ ದುರ್ಯೋಧನಾದಿಗಳ ಶ್ರಾದ್ಧಕ್ಕಾಗಿ ವಿದುರನ ಮೂಲಕ ಯುಧಿಷ್ಠಿರನನ್ನು ದ್ರವ್ಯಕ್ಕಾಗಿ ಯಾಚಿಸಿದ್ದು. ಭೀಮ ಚುಚ್ಚುಮಾತುಗಳಿಂದ ಧೃತರಾಷ್ಟ್ರನನ್ನು ಸಂಕಟಪಡಿಸಿದ್ದು ಯುಧಿಷ್ಠಿರ ತನ್ನ ಸ್ವಂತ ಹಣವನ್ನು ಧೃತರಾಷ್ಟ್ರನಿಗೆ ಕೊಟ್ಟದ್ದು. ಧೃತರಾಷ್ಟ್ರ ಭೀಷ್ಮಾದಿಗಳಿಗೆ ಶ್ರಾದ್ಧಮಾಡಿದ್ದು ಕುಂತೀ ಗಾಂಧಾರಿಗಳ ಸಂಗಡ ವನವಾಸಕ್ಕೆ ಹೊರಟದ್ದು ಯುಧಿಷ್ಠಿರಾದಿಗಳು ಹಿಂಬಾಲಿಸಲಾಗಿ, ಎಲ್ಲರೂ ಆಶ್ರಮವನ್ನು ಸೇರಿದ್ದು ವಿದುರನೂ ಸಂಜಯನೂ ಧೃತರಾಷ್ಟ್ರನ ಸಂಗಡಲೇ ವನವಾಸಕ್ಕೆ ಹೊರಟದ್ದು [ಆಶ್ರ.೧೨-೧೭] ಧೃತರಾಷ್ಟ್ರ ಪಾಂಡವರನ್ನು ಬಲಾತ್ಕಾರದಿಂದ ಪಟ್ಟಣಕ್ಕೆ ಕಳುಹಿ, ಗಂಗಾತೀರದಲ್ಲಿ ರಾತ್ರಿಯನ್ನು ಕಳೆದದ್ದು [ಆಶ್ರ ೧೯] ಧೃತರಾಷ್ಟ್ರ ಗಂಗಾ ತೀರದಲ್ಲಿ ವ್ಯಾಸನ ಅಪ್ಪಣೆಯ ಮೇರೆಗೆ ತೀವ್ರತಪವನ್ನು ಕೈಕೊಂಡದ್ದು [ಆಶ್ರ ೨೦] ಧೃತರಾಷ್ಟ್ರನಿಗಾಗಿ ಪಾಂಡವರು ಚಿಂತಿಸಿದ್ದು [ಆಶ್ರ ೨೩] ಧೃತರಾಷ್ಟ್ರಾದಿಗಳನ್ನು ನೋಡುವ ಕುತೂಹಲದಿಂದ ಯುಧಿಷ್ಠಿರ ಪತ್ನೀ, ಸೋದರ, ಪೌರ, ಪರಿವಾರದೊಂದಿಗೆ ಆಶ್ರಮಕ್ಕೆ ಬಂದದ್ದು. ಧೃತರಾಷ್ಟ್ರನ ಅವಸ್ಥೆಯನ್ನು ಕಂಡು ಎಲ್ಲರೂ ದುಃಖಿಸಿದ್ದು ಧೃತರಾಷ್ಟ್ರ ಯುಧಿಷ್ಠಿರರ ಸಲ್ಲಾಪ ವಿದುರ ದೇಹತ್ಯಾಗಮಾಡಲಾಗಿ ಆತನ ತೇಜಸ್ಸು ಯುಧಿಷ್ಠಿರನನ್ನು ಹೊಕ್ಕದ್ದು ಆ ಅದ್ಭುತವನ್ನು ಧೃತರಾಷ್ಟ್ರ ಕೇಳಿ ತಿಳಿದದ್ದು [ಆಶ್ರ. ೨೩-೨೯]. ಧೃತರಾಷ್ಟ್ರನಲ್ಲಿ ವ್ಯಾಸರ ಆಗಮನ ಪಾಂಡವರು ಒಂದು ತಿಂಗಳವರೆಗೆ ಅಲ್ಲಿಯೇ ವಾಸಮಾಡಿದ್ದು. ನಾರದಾದಿಗಳು ಬಂದು ಸುತ್ತಲೂ ಕುಳಿತಿರುವಲ್ಲಿ ವ್ಯಾಸರು ಕುಂತಿ ಮೊದಲಾದವರನ್ನು ಅವರವರ ಅಭಿಲಾಷೆಗಳೇನೆಂಬುದನ್ನು ಪ್ರಶ್ನೆಮಾಡಿದ್ದು ಧೃತರಾಷ್ಟ್ರಾದಿಗಳು ಯಾವ ಯಾವ ಅಂಶದಿಂದ ಜನಿಸಿದವರೆಂಬುದನ್ನು ವ್ಯಾಸರು ತಿಳಿಸಿದ್ದು. ವ್ಯಾಸರ ಅನುಗ್ರಹದಿಂದ ಧೃತರಾಷ್ಟ್ರ ದೃಷ್ಟಿಯನ್ನು ಪಡೆದು, ಗಂಗೆಯಿಂದ ಎದ್ದುಬಂದ ತನ್ನ ಮಕ್ಕಳು,

ಬಂಧುಗಳೊಂದಿಗೆ ಒಂದು ರಾತ್ರಿಯೆಲ್ಲ ಸುಖವಾಗಿದ್ದದ್ದು [ಆಶ್ರ. ೩೧-೩೩]. ದುರ್ಯೋಧನಾದಿಗಳನ್ನು ನೋಡಿದ ತರುವಾಯ ಧೃತರಾಷ್ಟ್ರ ಯುಧಿಷ್ಠಿರಾದಿಗಳ ಸಂಗಡ ಮರಳಿ ತನ್ನ ಆಶ್ರಮಕ್ಕೆ ಬಂದದ್ದು. ಯುಧಿಷ್ಠಿರಾದಿಗಳು ಧೃತರಾಷ್ಟ್ರನನ್ನು ನಗರಕ್ಕೆ ಬರುವಂತೆ ಬೇಡಿದ್ದು [ಆಶ್ರ. ೩೮]. ಧೃತರಾಷ್ಟ್ರ ಅದಕ್ಕೆ ಒಪ್ಪದಿದ್ದದ್ದು. ನಾರದನ ಮೂಲಕ ಧೃತರಾಷ್ಟ್ರಾದಿಗಳು ಸ್ವರ್ಗಕ್ಕೆ ತೆರಳಿದರೆಂಬ ವಾರ್ತೆಯನ್ನು ಕೇಳಿ, ದುಃಖಭರಿತರಾದ ಪಾಂಡವರು ಆಶ್ರಮಕ್ಕೆ ಬಂದದ್ದು. ಧೃತರಾಷ್ಟ್ರ, ಗಾಂಧಾರೀ ಕುಂತಿಯರ ಸಂಗಡ ಗಂಗೆಯಲ್ಲಿ ಸ್ನಾನಮಾಡಿ ಆಶ್ರಮಕ್ಕೆ ಹಿಂದಿರುಗುವಾಗ ನಡುದಾರಿಯಲ್ಲಿ ಕಾಳ್ಕಿಚ್ಚಿಗೆ ಸಿಲುಕಿ, ಸಂಜಯನನ್ನು ಬೇಡಿಕೊಂಡು ದೂರವಾಗಿ ಕಳುಹಿಸಿ, ಕುಂತೀ ಗಾಂಧಾರಿಯರೊಂದಿಗೆ ಕಾಳ್ಕಿಚ್ಚನ್ನು ಹೊಕ್ಕು, ದೇಹತ್ಯಾಗಮಾಡಿದ್ದು. ನಾರದರ ವಚನಾನುಸಾರ ಖಿನ್ನನಾದ ಯುಧಿಷ್ಠಿರ ಅವರಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು [ಆಶ್ರ ೩೯-೪೧. ಭಾಗ.-೧-೨೩] ಈತ ಕುಬೇರ ಲೋಕವನ್ನು ಸೇರಿದ [ಆಶ್ರ. ೨೨]. ಈತನಿಗೆ ಒಟ್ಟು ನೂರೆರಡು ಮಂದಿ ಮಕ್ಕಳು. ಅವರಲ್ಲಿ ದುರ್ಯೋಧನ, ದುಶ್ಶಾಸನರೇ ಮೊದಲಾದ ನೂರು ಮಂದಿ ಪುತ್ರರೂ ದುಶ್ಶಲೆಯೆಂಬ ಮಗಳೂ ಗಾಂಧಾರಿಯಲ್ಲಿ ಜನಿಸಿದವರು. ಯುಯುತ್ಸುವೆಂಬವ ದಾಸಿಯಲ್ಲಿ ಜನಿಸಿದವ [ಆದಿ. ೬೩, ೬೮, ೧೩೧].

(iii) ಧೃತರಾಷ್ಟ್ರನ ರೂಪವನ್ನು ಧರಿಸಿದ್ದ ಇಂದ್ರ ಗೌತಮ ಮುನಿಯೊಂದಿಗೆ ಪುಣ್ಯ ಪಾಪ ವಿಷಯವಾಗಿ ಸಂವಾದಮಾಡಿದ [ಅನು. ೧೪೯].

(iv) ಒಬ್ಬ ದೇವ ಗಂಧರ್ವ. ಮರುತ್ತರಾಜ ಅಶ್ವಮೇಧಯಾಗ ಮಾಡಿದಾಗ ಇಂದ್ರ ಮರುತ್ತನ ಯಜ್ಞವನ್ನು ವಿನಾಶಮಾಡಲು ಬಯಸಿ, ಈತನನ್ನು ಮರುತ್ತನಲ್ಲಿಗೆ ದೂತನನ್ನಾಗಿ ಕಳುಹಿಸಿದ್ದ [ಭಾರ -ಅಶ್ವ. ೧೦].

**ಧೃತರಾಷ್ಟ್ರೀ.**—ಕಶ್ಯಪ ಮುನಿಯಿಂದ ತಾಮ್ರೆಯೆಂಬ ಪತ್ನಿಯಲ್ಲಿ ಜನಿಸಿದವಳು ಹಂಸಪಕ್ಷಿಗಳನ್ನು ಹೆತ್ತಳು [ಭಾರ.-ಆದಿ ೬೭].

**ಧೃತವರ್ಮ** —ತ್ರಿಗರ್ತ ದೇಶದ ಅರಸನಾದ ಸೂರ್ಯವರ್ಮನ ಸಹೋದರ ಪಾಂಡವರ ಅಶ್ವಮೇಧ ಯಾಗಕ್ಕೆ ಮೊದಲು ಯಜ್ಞೀಯಾಶ್ವವನ್ನು ಹಿಂಬಾಲಿಸಿ ಬಂದ ಅರ್ಜುನನನ್ನು ಇದಿರಿಸಿ ಯುದ್ಧಮಾಡಿ ಸೋತ [ಅಶ್ವ ೭೪].

**ಧೃತಿಮನ್ತ.** —ಕ್ರೌಂಚದ್ವೀಪದೊಳಗಣ ಭೂ ಖಂಡಗಳಲ್ಲಿ ಒಂದು. ನೋಡು—ಕ್ರೌಂಚದ್ವೀಪ [ಭಾರ.-ಭೀ. ೧೨. ಭಾಗ.-೫-೨೦. ದೇ.ಭಾ.-೮-೧೨].

**ಧೃಷ್ಟಕೇತು.**—(i) ಚೇದಿ ದೇಶದ ಅರಸನಾದ ಶಿಶುಪಾಲನ ಮಗ. ಶುಕ್ತಿಮತೀಪುರ ಈತನ ರಾಜಧಾನಿ. ಕೃಷ್ಣ ಶಿಶುಪಾಲನನ್ನು ಕೊಂದ ತರುವಾಯ ಇವನು

ರಾಜ್ಯವನ್ನು ಪಡೆದು ಭಾರತ ಯುದ್ಧದಲ್ಲಿ ಪಾಂಡವರ ಪಕ್ಷವನ್ನು ಸೇರಿದ [ಭಾರ.- ವನ. ೨೨ ಉದ್ಯೋ ೧೭೧]. ಹದಿನಾಲ್ಕನೆಯ ದಿವಸದ ಸಂಕುಲ ಯುದ್ಧದಲ್ಲಿ ದ್ರೋಣನಿಂದ ತನ್ನ ಮಗನೊಂದಿಗೆ ಹತನಾದ [ದ್ರೋ ೧೨೫]. ಇವನ ತಂಗಿ ಯಾದ ರೇಣುಮತಿಯೆಂಬವಳು ಪಾಂಡು ಪುತ್ರನಾದ ನಕುಲನನ್ನು ಮದುವೆ ಯಾಗಿದ್ದಳು [ಆದಿ. ೬೩]. ಧೃಷ್ಟಕೇತುವಿನ ಪರಾಕ್ರಮ ವರ್ಣನೆ [ದ್ರೋ. ೧೦೭]

(11) ಕೇಕಯ ದೇಶದ ಅರಸು ಈತ ಕುಂತಿಯ ತಂಗಿಯಾದ ಶ್ರುತಕೀರ್ತಿ ಯೆಂಬವಳನ್ನು ಮದುವೆಯಾಗಿ ಸಂತರ್ದನನೇ ಮೊದಲಾದ ಐವರು ಪುತ್ರರನ್ನೂ ಭದ್ರೆಯೆಂಬ ಮಗಳನ್ನೂ ಪಡೆದ ಭದ್ರೆ ಶ್ರೀ ಕೃಷ್ಣನನ್ನು ಮದುವೆಯಾದಳು [ವಿಷ್ಣು -೪-೧೪. ಹರಿ.-೧-೩೪. ಭಾಗ.-೯-೨೪].

**ಧೃಷ್ಟದ್ಯುಮ್ನ** —ದ್ರುಪದ ರಾಜನ ಮಗ ಅಯೋನಿಜ ಅಧಿರಥ. ನೋಡು— ದ್ರುಪದ [ಉದ್ಯೋ ೧೭೧]. ಅಗ್ನಿಕುಂಡದಿಂದ ದ್ರೌಪದಿಯ ಸಂಗಡ ಜನಿಸಿದವ [ಆದಿ ೬೪, ೧೪೯, ೧೭೧]. ಈತ ಅಗ್ನಿಯ ಅಂಶದಿಂದ ಹುಟ್ಟಿದವ [ಆದಿ. ೬೮]. ಧೃಷ್ಟದ್ಯುಮ್ನ ಶಬ್ದನಿರ್ವಚನ—

ಧೃಷ್ಟತ್ವಾದತಿಧೃಷ್ಟತ್ವಾದ್ಧ್ಯುಮ್ನಾದ್ಯುತ್ಸಂಭವಾದಪಿ।
ಧೃಷ್ಟದ್ಯುಮ್ನಃ ಕುಮಾರೋಽಯಂ ॥

ತಕ್ಕ ವಯಸ್ಸಿನಿಂದ, ಶಸ್ತ್ರಪೂರಿತನಾದ ರಥದಲ್ಲಿ ಕುಳಿತುಕೊಂಡು, ಪ್ರಗಲ್ಭನೂ ಪ್ರಜಾಪಾಲನಚತುರನೂ ಬಲ, ಕವಚ, ಕುಂಡಲ, ಶಸ್ತ್ರ, ಶೌರ್ಯ, ಉತ್ಸಾಹ ಗಳೊಂದಿಗೆ ಜನಿಸಿದವನೂ ಆದ್ದರಿಂದ ಈತನಿಗೆ ಧೃಷ್ಟದ್ಯುಮ್ನನೆಂದು ಹೆಸರು [ಆದಿ. ೧೪೯, ೧೮೧] ಈತ ದ್ರೋಣಾಚಾರ್ಯನಲ್ಲಿಯೇ ಅಸ್ತ್ರವಿದ್ಯೆಯನ್ನು ಕಲಿತ [ಆದಿ. ೧೮೧] ದ್ರೌಪದೀ ಸ್ವಯಂವರಕ್ಕಾಗಿ ನೆರೆದಿದ್ದ ರಾಜಸಮೂಹದಲ್ಲಿ ದ್ರೌಪದಿಯನ್ನು ಮುಂದಿಟ್ಟುಕೊಂಡು, ಮತ್ಸ್ಯಯಂತ್ರಲಕ್ಷ್ಯವೇಧವನ್ನು ಪಣವಾಗಿರಿಸಿರುವ ಪ್ರಕಾರ ವನ್ನು ಅರಸರಿಗೆ ತಿಳುಹಿದ [ಆದಿ ೨೦೦] ಪಾಂಡವರು ದ್ರೌಪದಿಯನ್ನು ಕರೆದು ಕೊಂಡು ಕುಂಬಾರನ ಮನೆಗೆ ಹೋದ ತರುವಾಯ ಧೃಷ್ಟದ್ಯುಮ್ನ ಅದೇ ಕುಂಬಾ ರನ ಮನೆಗೆ ಹೋಗಿ, ಅವಿತುಕೊಂಡಿದ್ದು, ಅವರು ಪಾಂಡವರೆಂಬುದನ್ನು ತಿಳಿದು ಗೂಢವಾಗಿ ದ್ರುಪದನಿಗೆ ತಿಳುಹಿದ [ಆದಿ ೨೦೭]. ಕೃಷ್ಣನ ಸೂಚನೆಯ ಮೇರೆಗೆ ಯುಧಿಷ್ಠಿರ ಸೇನಾಪತಿತ್ವವನ್ನು ಧೃಷ್ಟದ್ಯುಮ್ನನಿಗೆ ಒಪ್ಪಿಸಿದ್ದು ಧೃಷ್ಟದ್ಯುಮ್ನ ತಮ್ಮ ಪಕ್ಷದ ಅರಸರಿಗೆಲ್ಲ ಬೇರೆ ಬೇರೆ ಬಿಡಾರಗಳನ್ನು ಏರ್ಪಡಿಸಿದ್ದು [ಉದ್ಯೋ. ೧೫೧-೧೫೨]. ಸೇನಾಪತಿತ್ವದಲ್ಲಿ ಧೃಷ್ಟದ್ಯುಮ್ನನಿಗೆ ಪಟ್ಟಗಟ್ಟಿದ್ದು [ಉದ್ಯೋ. ೧೫೭]. ಧೃಷ್ಟದ್ಯುಮ್ನ ಭೀಮಾದಿಗಳನ್ನು ದುರ್ಯೋಧನಾದಿಗಳೊಡನೆ ದ್ವಂದ್ವ ಯುದ್ಧಕ್ಕೆ ಕಳುಹಿದ್ದು [ಉ. ೧೬೪]. ಮೊದಲನೆಯ ದಿವಸದ ಯುದ್ಧದಲ್ಲಿ ಪಾಂಡವ

ಸೇನೆಯನ್ನು ಕ್ರೌಂಚಪಕ್ಷಿಯ ರೂಪದಲ್ಲಿ ಏರ್ಪಡಿಸಿದ್ದ [ಭೀ. ೫೦]. ಬಾಹ್ಲೀಕ ರಾಜನಾದ ಶಲನ ಮಗನನ್ನು ಕೊಂದ [ಭೀ ೬೧] ಆರನೆಯ ದಿನದ ಯುದ್ಧಾರಂಭ ದಲ್ಲಿ ಸೇನೆಯನ್ನು ಮಕರಾಕಾರವಾಗಿ ಏರ್ಪಡಿಸಿದ್ದ [ಭೀ ೭೫]. ಹದಿನಾಲ್ಕನೆಯ ದಿನದಲ್ಲಿ ದ್ರೋಣನೊಂದಿಗೆ ಯುದ್ಧ [ದ್ರೋ. ೯೭]. ಅದೇ ರಾತ್ರಿಯಲ್ಲಿ ಅಶ್ವ ತ್ಥಾಮನೊಂದಿಗೆ ಯುದ್ಧ [ದ್ರೋ ೧೬೧] ಅದೇ ರಾತ್ರಿಯಲ್ಲಿ ಭೀಮ ಧೃಷ್ಟ ದ್ಯುಮ್ನನನ್ನು ನಿಷ್ಠುರಭಾಷಣಗಳಿಂದ ರೇಗಿಸಿ, ಯುದ್ಧಕ್ಕೆ ಕಳುಹಿದ್ದು [ದ್ರೋ ೧೮೭] ದ್ರೋಣ ಹಿಡಿದುಕೊಳ್ಳಲಾಗಿ ಸಾತ್ಯಕಿ ಬಿಡಿಸಿದ್ದು [ದ್ರೋ ೧೯೨] ಹದಿನೈದನೆಯ ದಿನ ದ್ರೋಣನೊಂದಿಗೆ ಯುದ್ಧ ಮತ್ತು ದ್ರೋಣನ ತಲೆಯನ್ನು ಕತ್ತರಿಸಿದ್ದು [ದ್ರೋ ೧೯೩] ದ್ರೋಣನನ್ನು ಕೊಂದದ್ದು ನ್ಯಾಯುವಲ್ಲವೆಂದು ಅರ್ಜುನ ಧೃಷ್ಟದ್ಯುಮ್ನನನ್ನು ಅಲ್ಲಿಗಳೆಯಲಾಗಿ, ಧೃಷ್ಟದ್ಯುಮ್ನ ಸಿಟ್ಟಾಗಿ ಅರ್ಜುನ ನಿಗೆ ಕ್ಷಾತ್ರಧರ್ಮವನ್ನು ವಿವರಿಸಿ, ತಾನು ಮಾಡಿದ್ದು ಧರ್ಮವಿರುದ್ಧವಲ್ಲವೆಂದು ಹೇಳಿದ್ದು [ದ್ರೋ ೧೯೮] ಸಾತ್ಯಕಿ ಧೃಷ್ಟದ್ಯುಮ್ನರ ವಿವಾದ. ಧೃಷ್ಟದ್ಯುಮ್ನ ನನ್ನು ಕೊಲ್ಲುವುದಕ್ಕಾಗಿ ಗದೆಯನ್ನು ಎತ್ತಿದ ಸಾತ್ಯಕಿಯನ್ನು ಕೃಷ್ಣ ಅಡ್ಡಗಿಸಿ ಧೃಷ್ಟದ್ಯುಮ್ನನನ್ನು ಬಿಡಿಸಿದ್ದು [ದ್ರೋ ೧೯೯] ಹದಿನೇಳನೆಯ ದಿನ ಕೃಪಾಚಾರ್ಯ ನೊಂದಿಗೆ ಯುದ್ಧಮಾಡಿ ಸೋತದ್ದು [ಕರ್ಣ. ೧೭]. ಅದೇ ದಿನದಲ್ಲಿ ದುಶ್ಶಾಸನ ನೊಂದಿಗೆ ಯುದ್ಧ [ಕರ್ಣ. ೬೩] ಹದಿನೆಂಟನೆಯ ದಿನ ದುರ್ಯೋಧನನೊಂದಿಗೆ ಯುದ್ಧ ಸೋತುಹೋದ ದುರ್ಯೋಧನ ಕುದುರೆಯನ್ನೇರಿ ಓಡಿಹೋದದ್ದು [ಶಲ್ಯ. ೨೪] ಅಶ್ವತ್ಥಾಮ ಇವನ ತಲೆಯನ್ನು ಕಡಿದದ್ದು [ಸೌ. ೮]. ಇವನ ಮಕ್ಕಳಲ್ಲಿ ಕ್ಷತ್ರಂಜಯ, ಕ್ಷತ್ರದೇವ, ಕ್ಷತ್ರವರ್ಮರೆಂಬ ಮೂವರನ್ನು ದ್ರೋಣ ಹದಿನೈದನೆಯ ದಿನದ ಯುದ್ಧದಲ್ಲಿ ಕೊಂದ [ದ್ರೋ ೧೫೫]. ಕ್ಷತ್ರಧರ್ಮನೆಂಬ ಮತ್ತೊಬ್ಬ ಮಗ ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ದ್ರೋಣನಿಂದಲೇ ಹತನಾದ [ದ್ರೋ ೧೨೫].

**ಧೃಷ್ಟಿ**.—ದಶರಥ ರಾಜನ ಮಂತ್ರಿಗಳಲ್ಲಿ ಒಬ್ಬ [ರಾಮಾ.-ಬಾಲ. ೭].

**ಧೇನುಕ**.—ಒಬ್ಬ ರಾಕ್ಷಸ ಇವ ಕತ್ತೆಯ ರೂಪವನ್ನು ಧರಿಸಿ ತನ್ನ ಪರಿ ವಾರದೊಂದಿಗೆ ಬೃಂದಾವನದ ಸಮೀಪದಲ್ಲಿದ್ದ ತಾಳವನದಲ್ಲಿ ವಾಸಮಾಡುತ್ತಿದ್ದು ಅಲ್ಲಿಗೆ ಬಂದವರನ್ನೆಲ್ಲ ಕೊಂದು ತಿನ್ನುತ್ತಿದ್ದ ಒಂದು ದಿನ ಗೊಲ್ಲಹುಡುಗರು ತಾಳೆಯ ಹಣ್ಣುಗಳನ್ನು ತಿನ್ನಬೇಕೆಂದು ಆಸೆಪಟ್ಟರು. ಬಲರಾಮ ಮರವನ್ನು ಹಿಡಿದು ಅಲ್ಲಾಡಿಸಲಾಗಿ ಅನೇಕ ಫಲಗಳು ಮರದಿಂದ ಉದುರಿಬಿದ್ದುವು. ಗೊಲ್ಲರು ಅವುಗಳನ್ನು ಆಯಿಸಿಕೊಳ್ಳುತ್ತಿದ್ದಾಗ ಧೇನುಕ ಭಯಂಕರವಾದ ಕತ್ತೆಯ ರೂಪ

ದಿಂದ ಬಂದು ಬಲರಾಮನ ಮೇಲೆ ಬಿದ್ದು ಅವನಿಂದ ಹತನಾದ [ಭಾರ.-ಸ. ೫೩. ಉದ್ಯೋ. ೧೩೦. ಭಾಗ.-೧೦-೧೫. ಹರಿ.-೨-೧೩. ವಿಷ್ಣು.-೫-೮].

**ಧೌತಮೂಲಕ.**—ಪೂರ್ವಕಾಲದ ಚೀನಾ ದೇಶದ ಅರಸು. ಕೃಷ್ಣ ರಾಯಭಾರಿಯಾಗಿ ದುರ್ಯೋಧನನಲ್ಲಿಗೆ ಹೋಗಿಬಂದ ತರುವಾಯ ಇವ ದುರ್ಯೋಧನನ ಪಕ್ಷವನ್ನು ಅವಲಂಬಿಸಿದ. ಹಿಂದಣ ಕಾಲದ ದುಷ್ಟರಾದ ಅರಸರಲ್ಲಿ ಇವನೂ ಒಬ್ಬ. ನೋಡು—ಚೀನ.

**ಧೌಮ್ಯ.**—(i) ಒಬ್ಬ ಮಹರ್ಷಿ. ಅಪೋದನೆಂಬುದು ಇವನ ನಾಮಾಂತರ ಈತನಿಗೆ ಉಪಮನ್ಯು, ಆರುಣಿ, ಬೈದ ಎಂಬುದಾಗಿ ಮೂವರು ಶಿಷ್ಯರಿದ್ದರು [ಆದಿ. ೩].

(ii) ಒಬ್ಬ ಮಹರ್ಷಿ. ವ್ಯಾಘ್ರಪಾದನೆಂಬ ಮಹರ್ಷಿಯ ಮಗ ಶಿವಭಕ್ತಾಗ್ರೇಸರನಾದ ಉಪಮನ್ಯು ಮಹರ್ಷಿ ಈತನ ತಮ್ಮ [ಅನು. ೪೫] ಈತ ಮೇಲೆ ಹೇಳಿದ ಧೌಮ್ಯನಾಗಿರಬಹುದು. ಆತನ ಶಿಷ್ಯನೆಂದು ಹೇಳಿದ ಉಪಮನ್ಯುವೇ ಈತನ ತಮ್ಮನಾಗಿರಬಹುದೆಂದು ತೋರುತ್ತದೆ.

(iii) ಪ್ರತ್ಯೂಷನ ಮಗ. ದೇವಲ ಮಹರ್ಷಿಯ ಒಡಹುಟ್ಟಿದವ ಈತನೇ ಪಾಂಡವರ ಪುರೋಹಿತ [ಆದಿ. ೧೯೯. ಸಭಾ ೨. ವನ ೩. ವಿರಾ. ೧ ಆಶ್ರ ೧೬] ಪಾಂಡವರ ವನವಾಸ ಕಾಲದಲ್ಲಿ ಅನೇಕ ತೀರ್ಥಗಳ ಮಹಿಮೆಯನ್ನು ವಿವರಿಸಿದ [ವನ. ೮೪-೮೮]. ಪಾಂಡವರು ಅಜ್ಞಾತವಾಸಕ್ಕೆ ಹೊರಟಾಗ ಅರಮನೆಯಲ್ಲಿ ಸೇವಕರು ವಾಸಮಾಡಬೇಕಾದ ರೀತಿಯನ್ನೂ, ಅವರ ಕರ್ತವ್ಯಗಳನ್ನೂ ಪಾಂಡವರಿಗೆ ತಿಳಿಸಿದ [ವಿರಾ ೫]. ಪಾಂಡವರು ಅಜ್ಞಾತವಾಸ ಮಾಡುತ್ತಿದ್ದಾಗ ಈತ ಅವರ ಅಗ್ನಿಹೋತ್ರಗಳನ್ನು ಕಾಪಾಡಿಕೊಂಡು ಅರಣ್ಯದಲ್ಲಿಯೇ ಇದ್ದ [ವಿರಾ. ೬] ಈತ ಪಾಂಡವರಿಗೆ ಧರ್ಮವನ್ನು ಉಪದೇಶಿಸಿದ್ದು [ಅನು. ೧೯೦].

**ಧ್ರುವ**—(i) ಅಷ್ಟವಸುಗಳಲ್ಲಿ ಒಬ್ಬ ನೋಡು—ಧೂಮ್ರಾ. ಈತನ ಮಗ ಕಾಲ [ಆದಿ. ೬೭].

(ii) ಚಂದ್ರ ವಂಶದ ನಹುಷ ರಾಜನ ಮಗ [ಆದಿ. ೭೯].

(iii) ಸ್ವಾಯಂಭುವ ಮನುವಿನ ಮೊಮ್ಮಗನಾದ ಉತ್ತಾನಪಾದ ರಾಜನ ಮಗ [ಅನು. ೬]. ಉತ್ತಾನಪಾದನ ಹಿರಿಯ ಹೆಂಡತಿಯಾದ ಸುನೀತಿಯ ಮಗ ಈತನು ಹಿಂದಣ ಜನ್ಮದಲ್ಲಿ ಸದಾಚಾರಸಂಪನ್ನನಾದ ಬ್ರಾಹ್ಮಣನಾಗಿದ್ದ ರಾಜ ಮನೆತನದಲ್ಲಿ ವಿಶೇಷ ಸ್ನೇಹವಿದ್ದುದರಿಂದ ಅನುಗಾಲವೂ ಅರಮನೆಗೆ ಹೋಗಿಬರುತ್ತಿದ್ದುದರಿಂದ ಅಲ್ಲಿನ ವೈಭವಗಳನ್ನೆಲ್ಲ ನೋಡಿ ತಾನೂ ಅರಸನಾಗಬೇಕೆಂಬ ಆಸೆ ಪ್ರಬಲವಾಗಿದ್ದುದರಿಂದ ಮರುಜನ್ಮದಲ್ಲಿ ಕ್ಷತ್ರಿಯನಾಗಿ ಜನಿಸಿದ. ಒಮ್ಮೆ ಉತ್ತಾನ

ಪಾದ ತನ್ನ ಕಿರಿಯಹೆಂಡತಿಯ ಮಗನಾದ ಉತ್ತಮನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಲಾಲಿಸುತ್ತಿದ್ದಾಗ ಧ್ರುವನೂ ಅಲ್ಲಿಗೆ ಬಂದು ತನ್ನ ತಂದೆಯ ತೊಡೆಯಮೇಲೆ ಕುಳಿತುಕೊಳ್ಳಲು ಆಸೆಪಟ್ಟ ಆಗ ಸುರುಚಿ "ರಾಜಸಿಂಹಾಸನವನ್ನು ಏರುವ ಭಾಗ್ಯ ನಿನಗೆ ಎಲ್ಲಿಂದ ಬರಬೇಕು? ಅದನ್ನು ಅಪೇಕ್ಷಿಸುವೆಯಾದರೆ ಕಾಡಿಗೆ ಹೋಗಿ ತಪಸ್ಸುಮಾಡಿ, ನನ್ನ ಬಸುರಲ್ಲಿ ಜನಿಸಿದರೆ ಬರುವುದು" ಎಂಬುದಾಗಿ ಗದ್ದರಿಸಿದಳು ಧ್ರುವ ಅಳುತ್ತಾ ತನ್ನ ಜನನಿಯಲ್ಲಿಗೆ ಹೋಗಿ ಈ ವೃತ್ತಾಂತವನ್ನೆಲ್ಲ ತಿಳುಹಿ, ಆಕೆಯ ಅನುಮತಿಯಿಂದ ಯಮುನಾತೀರವನ್ನು ಸೇರಿ, ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಸಪ್ತರ್ಷಿಗಳ ಮೂಲಕ ಮಂತ್ರೋಪದೇಶವನ್ನು ಪಡೆದು ಘೋರತಪವನ್ನಾಚರಿಸಿ, ವಿಷ್ಣುವನ್ನು ಪ್ರತ್ಯಕ್ಷಮಾಡಿಕೊಂಡು ಆತನ ಅನುಗ್ರಹದಿಂದ ಭೂ ಲೋಕದಲ್ಲಿ ಏಕಚ್ಛತ್ರಾಧಿಪತ್ಯವನ್ನೂ ದೀರ್ಘಾಯುಷ್ಯವನ್ನೂ ಪಡೆದು, ಚಿರಕಾಲ ರಾಜ್ಯಭಾರಮಾಡಿ, ಪರಲೋಕದಲ್ಲಿ ತನ್ನ ಹೆಸರಿನಿಂದಲೇ ಪ್ರಸಿದ್ಧವಾದ ಧ್ರುವಮಂಡಲವೆಂಬ ಶಾಶ್ವತಸ್ಥಾನವನ್ನು ಸಂಪಾದಿಸಿದ [ಭಾಗ.-೪, ೮-೧೩ ವಿಷ್ಣು -೧-೧೧. ಮತ್ಸ್ಯ -೪ ಲಿಂಗ -೬೨ ಸ್ಕಾಂ -ಕಾಶೀ ಖಂ ಪೂರ್ವಾರ್ಧ, ೨೦]. ಈತ ಶಿಂಶುಮಾರ ಪ್ರಜಾಪತಿಯ ಮಗಳಾದ ಭ್ರಮಿಯೆಂಬವಳಲ್ಲಿ ಕಲ್ಪ, ವತ್ಸರ ಎಂಬ ಇಬ್ಬರು ಪುತ್ರರನ್ನೂ, ವಾಯುಪುತ್ರಿಯಾದ ಇಳೆಯಲ್ಲಿ ಉತ್ಕಲನೆಂಬ ಮಗನನ್ನೂ, ಧನ್ಯೆಯೆಂಬವಳಲ್ಲಿ ಶಿಷ್ಟನೆಂಬ ಮಗನನ್ನೂ ಶಂಭುವೆಂಬವಳಲ್ಲಿ ಭವ್ಯನೆಂಬ ಮಗನನ್ನೂ ಪಡೆದ [ಮತ್ಸ್ಯ.-೪ ವಿಷ್ಣು ೧-೧೧]. ಧ್ರುವನ ಬಲತಾಯ ಮಗನಾದ ಉತ್ತಮ ಬೇಟೆಯ ಸಲುವಾಗಿ ಹಿಮವತ್ಪರ್ವತಕ್ಕೆ ಹೋಗಿದ್ದಾಗ ಕುಬೇರನ ಅನುಚರರಾದ ಯಕ್ಷರೊಂದಿಗೆ ಜಗಳ ಬಂದು, ಯುದ್ಧದಲ್ಲಿ ಸತ್ತ ಸುರುಚಿ ಈ ಮಾತನ್ನು ಕೇಳಿ ಧ್ರುವನಿಗೆ ಹೇಳದೆಯೇ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿಯೇ ಮೃತಳಾದಳು ಈ ವರ್ತಮಾನವನ್ನೆಲ್ಲ ಕೇಳಿದ ಧ್ರುವ ಕೋಪದಿಂದ ಹಿಮವತ್ಪರ್ವತಕ್ಕೆ ಹೋಗಿ ಯಕ್ಷರೊಂದಿಗೆ ಭಯಂಕರ ರೀತಿಯಿಂದ ಯುದ್ಧಮಾಡಿದ ಸಾವಿರಾರು ಮಂದಿ ಯಕ್ಷರು ಹತರಾಗಲು ಕುಬೇರನಿಗೂ ಧ್ರುವನಿಗೂ ಯುದ್ಧವಾಗಬೇಕಾಯಿತು ಇಬ್ಬರೂ ಎದೆಗುಂದದೆ ಯುದ್ಧಮಾಡುತ್ತಿರುವಲ್ಲಿ ಸ್ವಾಯಂಭುವ ಮನು ಅಲ್ಲಿಗೆ ಬಂದು ಧ್ರುವನಿಗೆ ಶಾಂತಿಯನ್ನು ಉಪದೇಶಿಸಿ, ಆತನನ್ನು ಯುದ್ಧಮಾಡದಂತೆ ನಿಲ್ಲಿಸಿದ. ಇದರಿಂದ ಕುಬೇರ ಸಂತುಷ್ಟನಾಗಿ ಧ್ರುವನೊಂದಿಗೆ ಸ್ನೇಹಮಾಡಿಕೊಂಡ ಬಳಿಕ ಇಬ್ಬರೂ ತಮ್ಮ ತಮ್ಮ ಮನೆಗಳಿಗೆ ಹೋದರು. ಧ್ರುವ ಅನೇಕ ಯಜ್ಞಗಳನ್ನು ಮಾಡಿ, ಮುವ್ವತ್ತಾರು ಸಾವಿರ ವರ್ಷದವರೆಗೆ ರಾಜ್ಯವನ್ನು ಪರಿಪಾಲಿಸಿ, ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿ ತಾನು ತಪಸ್ಸಿಗಾಗಿ ಅರಣ್ಯಕ್ಕೆ ಹೋದ [ಭಾಗ -೪-೧೨. ಮತ್ಸ್ಯ.-೪].

(iv) ವಸುದೇವನಿಂದ ರೋಹಿಣಿಯೆಂಬವಳಲ್ಲಿ ಜನಿಸಿದವ [ಭಾಗ.-೧೦, ೮೪].

(v) ಕಳಿಂಗ ದೇಶದ ಅರಸು ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಭೀಮನಿಂದ ಹತನಾದ [ದ್ರೋ. ೧೫೬]

**ಧ್ರುವಮಂಡಲ.**—ಧ್ರುವ ಈ ಲೋಕವನ್ನು ಬಿಟ್ಟ ತರುವಾಯ ಆಕಾಶದಲ್ಲಿ ಉತ್ತರ ದಿಕ್ಕಿನಲ್ಲಿ ತನ್ನ ಹೆಸರಿನಿಂದಲೇ ಸ್ಥಿರನಾದ ಒಂದು ಪದವಿಯನ್ನು ಹೊಂದಿದ. ಇದರ ವರ್ಣನೆ [ಭಾಗ -೫-೨೩ ಮತ್ಸ್ಯ -೧೨೫ ಲಿಂಗ -೫೪]

## ನ

**ನಕುಲ.**—ಪಾಂಡು ರಾಜನ ಕಿರಿಯ ಪತ್ನಿಯಾದ ಮಾದ್ರಿಯಲ್ಲಿ ಅಶ್ವಿನೀದೇವತೆಗಳಿಂದ ಜನಿಸಿದ ಅವಳಿ ಮಕ್ಕಳಲ್ಲಿ ಒಬ್ಬ ಸಹದೇವ ಇವನ ಒಡಹುಟ್ಟಿದವ ಯುಧಿಷ್ಠಿರ, ಭೀಮಾರ್ಜುನರು ಬಲತಾಯಿ ಮಕ್ಕಳು [ಆದಿ ೬೩, ೧೩೩] ಇವನು ರೂಪದಲ್ಲಿ ಅತಿ ಸುಂದರ [ಆಶ್ರಮ ೨೫]. ಏಕರಥ [ಉದ್ಯೋ ೧೬೯] ಈತ ಶಿಶುಪಾಲನ ಮಗಳೂ ಧೃಷ್ಟಕೇತುವಿನ ಸೋದರಿಯೂ ಆದ ರೇಣುಮತಿಯೆಂಬವಳನ್ನು ಮದುವೆಯಾಗಿ ನಿರಮಿತ್ರನೆಂಬ ಮಗನನ್ನು ಪಡೆದ [ಆದಿ ೬೩] ದ್ರೌಪದಿಯಲ್ಲಿ ಶತಾನೀಕನೆಂಬ ಪುತ್ರ ಜನಿಸಿದ [ಆದಿ ೬೪] ಯುಧಿಷ್ಠಿರ ರಾಜಸೂಯ ಯಾಗ ಮಾಡಿದಾಗ ಈತ ಪಶ್ಚಿಮ ದಿಕ್ಕಿಗೆ ವಿಜಯಪ್ರಯಾಣಮಾಡಿ ವಿಪುಲವಾದ ಧನರಾಶಿಯನ್ನು ತಂದ [ಸಭಾ ೩೫] ಈತ ಎಲ್ಲರಿಗಿಂತಲೂ ಮೊದಲು ದಿಗ್ವಿಜಯಕ್ಕೆ ಹೊರಟು ಕ್ರಮವಾಗಿ ಕುರುಜಾಂಗಲ, ಪಾಂಚಾಲ, ಶೂರಸೇನ, ಯಾಮುನ, ಬ್ರಹ್ಮಾವರ್ತ, ಕುರುಕ್ಷೇತ್ರ, ಮತ್ಸ್ಯ, ಸಾರಸ್ವತ, ಮತ್ತಮಯೂರಕ, ಮರುಧನ್ವ, ದಶಾರ್ಣ, ಮಾಳವ ಮುಂತಾದ ದೇಶಗಳನ್ನು ಗೆದ್ದು ವಿಪುಲವಾದ ಧನರಾಶಿಯನ್ನೂ, ಗೋ ತುರಗಗಳನ್ನೂ ಕಾಣಿಕೆಯಾಗಿ ಪಡೆದು ಯುಧಿಷ್ಠಿರನಿಗೆ ಒಪ್ಪಿಸಿದ [ಭಾಗ -೧-೧೦]. ಅಜ್ಞಾತವಾಸ ಸಮಯದಲ್ಲಿ ಈತ ದಾಮಗ್ರಂಥಿಯೆಂಬ ಹೆಸರಿನಿಂದ ವಿರಾಟನ ಅಶ್ವಪಾಲಕನಾಗಿದ್ದ [ವಿರಾ. ೪, ೧೨]. ವಿರಾಟನಗರದಲ್ಲಿ ವಾಸಮಾಡುವಾಗ ಈತನನ್ನು ಜಯತ್ಸೇನನೆಂಬುದಾಗಿ ಪಾಂಡವರು ತಮ್ಮಲ್ಲಿ ತಾವು ರಹಸ್ಯವಾಗಿ ಕರೆಯುತ್ತಿದ್ದರು [ವಿರಾ. ೭]. ಕೃಷ್ಣ ದುರ್ಯೋಧನನಲ್ಲಿಗೆ ಪಾಂಡವರ ಪರವಾಗಿ ರಾಯಭಾರಕ್ಕೆ ಹೊರಡುವ ಮೊದಲು, ಈತ ಹೇಗಾದರೂ ಸಂಧಿಮಾಡಿಕೊಳ್ಳುವುದೇ ತನಗೆ ಅಭಿಮತವೆಂದು ತಿಳುಹಿದ [ಉದ್ಯೋ. ೭೯]. ಈತನ ಶಂಖದ ಹೆಸರು ಸುಘೋಷ [ಭೀ. ೨೫]. ಈತನ ರಥ ಕಾಂಭೋಜ ದೇಶದ ಕುದುರೆಗಳನ್ನು ಹೂಡಿದ್ದು, ಧ್ವಜ ಭಯಂಕರವಾದ ಶರಭಚಿಹ್ನಯುಕ್ತವಾಗಿತ್ತು. ಇವ ವೈಷ್ಣವ

ಧನುಸ್ಸನ್ನು ಹಿಡಿದು ಯುದ್ಧಮಾಡಿದ [ದ್ರೋ ೨೩]. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ನಕುಲ ಶಕುನಿಯನ್ನು ಯುದ್ಧದಲ್ಲಿ ಸೋಲಿಸಿದ [ದ್ರೋ. ೧೭೦]. ಹದಿನೈದನೆಯ ದಿನದಲ್ಲಿ ದುರ್ಯೋಧನನನ್ನು ಸೋಲಿಸಿದ [ದ್ರೋ ೧೮೮]. ಹದಿನಾರನೆಯ ದಿನದಲ್ಲಿ ಕರ್ಣನಿಂದ ಸೋತ [ಕರ್ಣ ೧೫]. ಕರ್ಣನ ಮಕ್ಕಳಲ್ಲಿ ಸತ್ಯಸೇನ, ಚಿತ್ರಸೇನ, ಸುಶರ್ಮರೆಂಬ ಮೂವರನ್ನೂ ಹದಿನೆಂಟನೆಯ ದಿನದಲ್ಲಿ ಕೊಂದ [ಶಲ್ಯ ೯]. ಯುಧಿಷ್ಠಿರನೊಂದಿಗೆ ಮಹಾಪ್ರಸ್ಥಾನಮಾಡಿ ದೇಹತ್ಯಾಗಮಾಡಿದ[ಮಹಾ ೨].

**ನಕ್ಷತ್ರಕ.**—ವಿಶ್ವಾಮಿತ್ರನ ಶಿಷ್ಯರಲ್ಲಿ ಒಬ್ಬ ಹರಿಶ್ಚಂದ್ರ ವಿಶ್ವಾಮಿತ್ರನಿಗೆ ಕೊಡಬೇಕಾಗಿದ್ದ ದಕ್ಷಿಣಾದ್ರವ್ಯವನ್ನು ಹರಿಶ್ಚಂದ್ರನಿಂದ ಪಡೆಯುವುದಕ್ಕಾಗಿ, ವಿಶ್ವಾಮಿತ್ರ ಇವನನ್ನು ಹರಿಶ್ಚಂದ್ರನ ಸಂಗಡಲೇ ಇರಹೇಳಿದ್ದ ಇವ ಆ ರಾಜ ದಂಪತಿಗಳಿಗೆ ಅನೇಕ ತೊಂದರೆಗಳನ್ನು ಕೊಟ್ಟು, ಹರಿಶ್ಚಂದ್ರ ಕಾಶೀಪಟ್ಟಣವನ್ನು ಸೇರಿ, ತನ್ನನ್ನೂ ಮಡದಿ ಮಕ್ಕಳನ್ನೂ ಮಾರಿ, ವಿಶ್ವಾಮಿತ್ರನಿಗೆ ಸಲ್ಲಬೇಕಾಗಿದ್ದ ಹಣವನ್ನು ಕೊಟ್ಟ ತರುವಾಯ ಈತ ವಿಶ್ವಾಮಿತ್ರನಲ್ಲಿಗೆ ಹೋದ. ನೋಡು—ಹರಿಶ್ಚಂದ್ರ

**ನಗ್ನಜಿತ್**—ಒಬ್ಬ ಅರಸು ಇಷುಪಾದನೆಂಬ ರಾಕ್ಷಸನ ಅಂಶದಿಂದ ಜನಿಸಿದವ [ಭಾರ -ಆದಿ ೬೮] ಕರ್ಣ ದಿಗ್ವಿಜಯಕ್ಕೆ ಹೊರಟಾಗ ಇವನನ್ನು ಸೋಲಿಸಿದ [ವನ. ೨೫೫] ಈತನ ಮಗಳಾದ ಸತ್ಯಾ ಅಥವಾ ನೀಲೆಯೆಂಬವಳನ್ನು ಶ್ರೀ ಕೃಷ್ಣ ಮದುವೆಯಾದ [ಭಾಗ -೧೦-೫೮] ಈತ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿದ

**ನಚಿಕೇತಸ್**—ಆರುಣಿಯೆಂಬ ಉದ್ದಾಲಕ ಮುನಿಯ ಮಗ ಇವನ ತಂದೆಯಾದ ಆರುಣಿ ಯಜ್ಞದಲ್ಲಿ ಮುದಿಗೋವುಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಗೆ ಪ್ರತಿಯಾಗಿ ಕೊಡುತ್ತಿದ್ದುದನ್ನು ಕಂಡು, ಇವನು ತನ್ನ ತಂದೆಯ ಬಳಿಗೆ ಹೋಗಿ "ಅಪ್ಪಾ, ನನ್ನನ್ನು ಯಾರಿಗೆ ಕೊಡುತ್ತೀ ?" ಎಂದು ಪದೇ ಪದೇ ಪ್ರಶ್ನೆ ಮಾಡಿದ. ಸಿಟ್ಟುಗೊಂಡ ಆರುಣಿ "ನಿನ್ನನ್ನು ಮೃತ್ಯುವಿಗೆ ಕೊಡುತ್ತೇನೆ" ಎಂದ. ನಚಿಕೇತ ಕೂಡಲೇ ಯಮನಲ್ಲಿಗೆ ಹೋಗಿ, ಆತ ಎಲ್ಲಿಯೋ ಹೋಗಿದ್ದನಾಗಿ ಬರುವವರೆಗೂ ಕಾದಿದ್ದು, ಆತ ಬಂದ ತರುವಾಯ ಸತ್ಕೃತನಾಗಿ, ತನ್ನ ಪ್ರತಿಭೆಯಿಂದ ಯಮನನ್ನು ಮೆಚ್ಚಿಸಿ, ಯಮನ ಪ್ರಲೋಭಕ್ಕೆ ಒಳಗಾಗದೆ, ಜ್ಞಾನವನ್ನು ಸಂಪಾದಿಸಿ ಮರಳಿ ತಂದೆಯನ್ನು ಸೇರಿದ [ಸಭಾ. ೪. ಅನು. ೧೦೬] ಈತನ ಉಪಾಖ್ಯಾನ ಕಠೋಪನಿಷತ್ತಿನಲ್ಲಿ ಪ್ರಸಿದ್ಧವಾಗಿದೆ.

**ನದಿಗಳು.**—[ಭಾರ.-ಸಭಾ. ೯. ವನ. ೧೯೧, ೨೨೪ ಭೀ. ೯ ಅನು. ೬೪, ೨೪೮, ೨೭೧. ಹರಿ.-೨-೧೦೯. ಪದ್ಮ-೧. ಮತ್ಸ್ಯ.-೧೧೪].

**ನನ್ದ**.—(i) ಗೋಕುಲದಲ್ಲಿದ್ದ ಗೊಲ್ಲರ ಪಾಳೆಯಗಾರ. ವಸುದೇವನ ಆಪ್ತ ಸ್ನೇಹಿತ ಈ ಕಾರಣದಿಂದಲೇ ವಸುದೇವ ಕೃಷ್ಣ ಜನಿಸಿದ ಕೂಡಲೇ ಕೂಸನ್ನು ಈತನ ಮನೆಯಲ್ಲಿರಿಸಿದ ಹಿಂದಣ ಜನ್ಮದಲ್ಲಿ ಇವನು ದ್ರೋಣನೆಂಬ ವಸು. ನೋಡು—ದ್ರೋಣ. ನಂದನ ಹೆಂಡತಿ ಯಶೋದೆ [ಭಾಗ -೧೦-೮]. ಕೃಷ್ಣನ ಬಾಲ ಲೀಲೆಗಳೆಲ್ಲವೂ ನಂದನ ಮನೆಯಲ್ಲಿರುವಾಗಲೇ ನಡೆದವು. ಬಹಳ ಕಾಲದ ಬಳಿಕ ಕೃಷ್ಣ ಒಮ್ಮೆ ಸೂರ್ಯಗ್ರಹಣದಲ್ಲಿ ದೇವಕೀ ವಸುದೇವರನ್ನೂ, ತನ್ನ ಸ್ತ್ರೀಪರಿವಾರವನ್ನೂ ಸಂಗಡ ಕರೆದುಕೊಂಡು ಸಮಸ್ತ ಯಾದವರೊಂದಿಗೆ ಗಂಗಾ ನದಿಯಲ್ಲಿ ಸ್ನಾನಮಾಡು ವುದಕ್ಕಾಗಿ ಸ್ಯಮಂತಪಂಚಕಕ್ಕೆ ಹೊರಟ ನಂದ ಈ ಸಮಾಚಾರವನ್ನು ಕೇಳಿ ಅನೇಕ ಬಂಡಿಗಳಲ್ಲಿ ಬೇಕಾದ ವಸ್ತುಗಳನ್ನು ಹೇರಿಕೊಂಡು ಗೋಪೀ ಗೋಪರನ್ನು ಸಂಗಡ ಕರೆದುಕೊಂಡು, ಸ್ಯಮಂತಪಂಚಕಕ್ಕೆ ಹೋಗಿ, ಬಲರಾಮ ಕೃಷ್ಣರನ್ನು ಕಂಡು ಆನಂದಪರವಶನಾಗಿ, ಕೆಲ ಕಾಲದವರೆಗೆ ಶ್ರೀಕೃಷ್ಣಾದಿಗಳ ಸಂಗಡ ಅಲ್ಲಿಯೇ ಇದ್ದ ಅದೇ ಸಮಯದಲ್ಲಿ ಶ್ರೀಕೃಷ್ಣ ತನ್ನ ಸಾಕುತಾಯಿಯಾದ ಯಶೋದೆಯನ್ನು ಅನೇಕ ವಿಧವಾಗಿ ಗೌರವಿಸಿ, ಗೋಪಿಯರಿಗೆ ಜ್ಞಾನವನ್ನು ಉಪದೇಶಮಾಡಿ, ನಂದಾದಿ ಗಳಿಗೆ ಅನೇಕವಾಗಿ ಉಡುಗೊರೆಗಳನ್ನಿತ್ತು ಸನ್ಮಾನಮಾಡಿ ಕಳುಹಿಸಿಕೊಟ್ಟ [ಭಾಗ.-೧೦-೮೨].

(ii) ವಸುದೇವನಿಂದ ಮದಿರೆಯೆಂಬ ಹೆಂಡತಿಯಲ್ಲಿ ಜನಿಸಿದ ನಾಲ್ವರು ಪುತ್ರರಲ್ಲಿ ಮೊದಲನೆಯವ [ಭಾಗ -೯-೨೪ ಹರಿ -೧-೩೫].

**ನನ್ದಕ** —(i) ವಿಷ್ಣುವಿನ ಖಡ್ಗ.

(ii) ವಸುದೇವನಿಂದ ವೃಕದೇವಿಯೆಂಬಾಕೆಯಲ್ಲಿ ಜನಿಸಿದವ [ಭಾಗ -೯-೨೪ ಹರಿ -೧-೩೫]

**ನನ್ದನ** —ಇಂದ್ರನ ಉದ್ಯಾನ.

**ನನ್ದಾ**.—ಧರ್ಮಪ್ರಜಾಪತಿಯ ಮಗನಾದ ಹರ್ಷನೆಂಬವನ ಹೆಂಡತಿ [ಆದಿ. ೬೭].

(ii) ಋಷಭಕೂಟ ಪರ್ವತದಲ್ಲಿ ಹುಟ್ಟಿ, ಕುಬೇರನ ರಾಜಧಾನಿಯಾದ ಅಲಕಾಪಟ್ಟಣದ ಬಳಿ ಹರಿಯುವ ಒಂದು ನದಿ [ಆದಿ ೨೩೫, ವನ ೧೧೦].

(iii) ಸಾಲಪೋತಕನೆಂಬ ಸರ್ಪರಾಜನ ಮಗಳು. ಸಾಲಪೋತಕ ಒಮ್ಮೆ ಅರಣ್ಯದಲ್ಲಿ ಸಂಚರಿಸುವಾಗ ಬಹುಳೆಯೆಂಬ ಒಬ್ಬ ಸುಂದರಿಯನ್ನು ಕಂಡು ಮೋಹ ಪರವಶನಾಗಿ ಆಕೆಯನ್ನು ಸಂಗಡ ಕರೆತಂದ. ನಂದೆ ಅವಳನ್ನು ನೋಡಿ ತನ್ನ ಜನನಿಗೆ ಸವತಿಯಾಗುವಳೆಂಬ ಹೆದರಿಕೆಯಿಂದ ಬಹುಳೆಯನ್ನು ತಂದೆಗೆ ತಿಳಿಯದ ಹಾಗೆ ಬಚ್ಚಿಟ್ಟಳು. ಸಾಲಪೋತಕ ಎಷ್ಟು ವಿಧವಾಗಿ ಬೇಡಿಕೊಂಡರೂ ಹೇಳಲಿಲ್ಲ. ಸಾಲಪೋತಕ ಕೋಪಾವೇಶದಿಂದ ತನ್ನ ಮಗಳನ್ನು ಮೂಗಿಯಾಗುವಂತೆ ಶಾಪ

ವಿತ್ತು. ಇಷ್ಟರಲ್ಲಿ ಬಹುಳೆಯ ಪತಿಯಾದ ಸುಶರ್ಮ್ಮ ಬಲಾಕನೆಂಬ ರಾಕ್ಷಸನ ಮಾಯಾ ಬಲದಿಂದ ತನ್ನ ಹೆಂಡತಿಯನ್ನು ತನ್ನಲ್ಲಿಗೆ ಬರಮಾಡಿಕೊಂಡ ಬಳಿಕ ಸುಶರ್ಮ್ಮ ನಂದೆಯ ಉಪಕಾರಕ್ಕೆ ಪ್ರತಿಯಾಗಿ ಸಾರಸ್ವತಕ್ರತುವನ್ನು ಮಾಡಿ, ನಂದೆಯ ಮೂಕತ್ವವನ್ನು ಹೋಗಲಾಡಿಸಿದ [ಮಾರ್ಕ. ]

**ನನ್ದಿ ಗ್ರಾಮ.**—ಅಯೋಧ್ಯೆಯ ಸಮೀಪದಲ್ಲಿರುವ ಒಂದು ಚಿಕ್ಕ ಪಟ್ಟಣ [ಆದಿ ೨೩೫ ವನ ೨೯೨]. ಅಯೋಧ್ಯೆಗೆ ಒಂದು ಹರಿದಾರಿ ದೂರದಲ್ಲಿರುವ ಒಂದು ಚಿಕ್ಕ ಪಟ್ಟಣ ಶ್ರೀ ರಾಮನ ವನವಾಸ ಕಾಲದಲ್ಲಿ ಭರತ ತನ್ನ ಅಣ್ಣನ ಪಾದುಕೆಗಳನ್ನು ಸಿಂಹಾಸನದಲ್ಲಿರಿಸಿ, ಅವುಗಳಿಗೆ ಪಟ್ಟಾಭಿಷೇಕಮಾಡಿ, ಹದಿನಾಲ್ಕು ವರ್ಷಗಳ ಕಾಲವೂ ಈ ಗ್ರಾಮದಲ್ಲಿಯೇ ವಾಸವಾಗಿದ್ದ ವನವಾಸ ಮುಗಿದ ತರುವಾಯ ಶ್ರೀ ರಾಮ ಭರತನನ್ನು ಇಲ್ಲಿಯೇ ಸಂಧಿಸಿದ [ರಾಮಾ -ಅಯೋ ೧೧೫ ಯು. ೧೩೦]

**ನನ್ದಿನೀ**—ಕಶ್ಯಪನಿಂದ ಸುರಭಿಯಲ್ಲಿ ಜನಿಸಿದ್ದು. ವಸಿಷ್ಠನ ಹೋಮಧೇನು [ಆದಿ ೧೦೬]. ನೋಡು—ಅಷ್ಟವಸು, ದಿಲೀಪ, ಖಟ್ವಾಂಗ

**ನನ್ದಿ (ಈಶ್ವರ).**—ಈಶ್ವರ ವಾಹನವಾದ ವೃಷಭದ ಹೆಸರು [ಅನು. ೨೫೫]. ನಂದೀಶ್ವರನ ಉತ್ಪತ್ತಿ. ನಂದಿ ಶಿಲಾದ ಮುನಿಯ ಮಗನಾಗಿ ಅವತರಿಸಿದ್ದು. ನಂದೀಶ್ವರನ ಅಭಿಷೇಕ [ಲಿಂಗ. ೪೩-೪೫] ರಾವಣ ಕುಬೇರನನ್ನು ಜಯಿಸಿ, ಅವನ ಪುಷ್ಪಕವಿಮಾನ ದಲ್ಲಿ ಕುಳಿತು ಹೊರಟುಬರುವಾಗ ಷಣ್ಮುಖನ ಉತ್ಪತ್ತಿಸ್ಥಾನವಾದ ಶರವಣ ವೆಂಬ ವನದ ಬಳಿಯಲ್ಲಿ ಪುಷ್ಪಕ ನಿಂತುಬಿಟ್ಟಿತು ಆಗ ನಂದಿ ರಾವಣನ ಹತ್ತಿರಕ್ಕೆ ಬಂದು " ಈ ಕೈಲಾಸ ಪರ್ವತದ ತುದಿಯಲ್ಲಿ ಪರಮೇಶ್ವರ ಪಾರ್ವತಿಯೊಂದಿಗೆ ಕ್ರೀಡಿಸುತ್ತಿದ್ದಾನೆ ಈಗ ಯಾರೂ ಹೋಗಲು ಸಾಧ್ಯವಿಲ್ಲ. ನೀನೀಗ ಅಲ್ಲಿಗೆ ಹೋಗಿ ವ್ಯರ್ಥವಾಗಿ ಹಾಳಾಗಬೇಡ" ಎಂದ ಆಗ ರಾವಣ ನಂದಿಯನ್ನು ಕಂಡು " ನೀನಾರು, ಮಂಗದ ಮೋರೆಯವ ? " ಎಂದು ಪ್ರಶ್ನೆಮಾಡಿದ ನಂದಿ ಕೋಪ ದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು " ಎಲೋ, ದುರುಳಾ, ನಿನ್ನ ಮದ ತಲೆಗೆ ಏರಿದಂತಿದೆ, ನನ್ನನ್ನೂ ಪರಿಹಾಸಮಾಡುತ್ತೀಯಾ ! ಇರಲಿ. ನನಗೆ ಸಮಾನವಾದ ಬಲ ಪರಾಕ್ರಮಗಳಿಂದ ಕೂಡಿದ ವಾನರರಿಂದಲೇ ನಿನ್ನ ವಂಶವೂ ಸಂಪತ್ತೂ ಹಾಳಾಗುವುವು. ನಾನಾಗಿ ನಿನಗೆ ಈಗ ಯಾವ ಶಿಕ್ಷೆಯನ್ನೂ ಮಾಡುವು ದಿಲ್ಲ. ನೀನು ಈ ಮೊದಲು ಮಾಡಿದ ದುಷ್ಕರ್ಮಗಳಿಂದಲೇ ನೀನಾಗಿ ನಾಶವಾಗು ತ್ತೀಯೆ" ಎಂದು ಶಾಪವಿತ್ತ [ರಾಮಾ.-ಉತ್ತ. ೧೬] ನಂದಿ ಕಾಮಧೇನುವಿನ ಮಗ. ಶಿವನ ಪ್ರಮಥಗಣ ಸಮುದಾಯದಲ್ಲಿ ಮುಖ್ಯ. ಈತನ ದೇಹವೆಲ್ಲವೂ ಮನುಷ್ಯ ದೇಹದಂತೆಯೇ ಇದ್ದು, ಮುಖ ಮಾತ್ರ ಕಪಿಯ ಮುಖದಂತಿದ್ದು, ತೋಳುಗಳು

ಗಿದ್ದಾಗಿದ್ದುವು ಈತ ದಕ್ಷಯಜ್ಞವಿನಾಶ ಸಮಯದಲ್ಲಿ ಭಗನೆಂಬ ಋತ್ವಿಜನನ್ನು ಕಟ್ಟಿಹಾಕಿದ [ಭಾಗ ೪-೫].

**ನಭಸ್.**—ಶ್ರಾವಣಮಾಸ. ಈ ತಿಂಗಳ ಹುಣ್ಣಿಮೆಯ ದಿನ ಶ್ರವಣ ನಕ್ಷತ್ರವಿರುತ್ತದೆ ಈ ತಿಂಗಳಲ್ಲಿ ಇಂದ್ರನೆಂಬ ಆದಿತ್ಯ ಸೂರ್ಯಮಂಡಲದಲ್ಲಿದ್ದು ಅಂಗಿರನೆಂಬ ಋಷಿ, ವಿಶ್ವಾವಸುವೆಂಬ ಗಂಧರ್ವ, ಪ್ರಮ್ಲೋಚೆಯೆಂಬ ಅಪ್ಸರೆ, ವರ್ಯನೆಂಬ ರಾಕ್ಷಸ, ಏಲಾಪುತ್ರನೆಂಬ ನಾಗ, ಶ್ರೋತಾರನೆಂಬ ಯಕ್ಷನೊಂದಿಗೆ, ಗ್ರಹಮಂಡಲದಲ್ಲಿ ಸಂಚರಿಸುತ್ತಾನೆ [ಭಾಗ -೧೨-೧೧]

**ನಭಸ್ಯ**—ಭಾದ್ರಪದಮಾಸ ಈ ತಿಂಗಳ ಹುಣ್ಣಿಮೆಯ ದಿನ ಪೂರ್ವಾಭಾದ್ರ ಅಥವಾ ಉತ್ತರಾಭಾದ್ರ ನಕ್ಷತ್ರ ಇರುತ್ತದೆಯಾಗಿ ಭಾದ್ರಪದವೆಂದು ಹೆಸರು ಈ ತಿಂಗಳಲ್ಲಿ ವಿವಸ್ವಂತನೆಂಬ ಸೂರ್ಯನು ಮಂಡಲದಲ್ಲಿದ್ದು ಭೃಗುಮಹರ್ಷಿ, ಉಗ್ರಸೇನ ಗಂಧರ್ವ, ಅಸಾರಣ ಯಕ್ಷ, ಶಂಖಪಾಲನೆಂಬ ನಾಗ, ಅನುಮ್ಲೋಚೆಯೆಂಬ ಅಪ್ಸರೆ, ವ್ಯಾಘ್ರನೆಂಬ ರಾಕ್ಷಸರೊಂದಿಗೆ ಗ್ರಹಮಂಡಲದಲ್ಲಿ ಸಂಚರಿಸುತ್ತಾನೆ [ಭಾಗ -೧೨-೧೧]

**ನಮುಚಿ**—(1) ಕಶ್ಯಪನಿಂದ ದನುವಿನಲ್ಲಿ ಜನಿಸಿದ ಒಬ್ಬ ರಾಕ್ಷಸ [ಆದಿ ೬೬. ಸಭಾ ೫೧] ಇವ ಸ್ವರ್ಭಾನುವಿನ ಮಗಳಾದ ಸುಪ್ರಭೆಯೆಂಬವಳನ್ನು ಮದುವೆಯಾಗಿದ್ದ [ಭಾಗ.-೬-೬] "ಆಪತ್ಕಾಲದಲ್ಲಿ ದುಃಖವನ್ನು ಮರೆತು ಭಗವಂತನನ್ನು ಧ್ಯಾನಮಾಡಿದಲ್ಲಿ ಮನುಷ್ಯ ಶ್ರೇಯಸ್ಸನ್ನು ಪಡೆಯುತ್ತಾನೆ" ಎಂಬ ವಿಷಯವಾಗಿ ಇವ ಇಂದ್ರನೊಂದಿಗೆ ವಿವಾದಮಾಡಿದ್ದು [ಶಾಂತಿ. ೨೩೩]. ಇಂದ್ರ ಇವನನ್ನು ಕೊಂದದ್ದು [ಶಲ್ಯ. ೪೪]

(II) ದಕ್ಷಿಣ ದೇಶದಲ್ಲಿದ್ದ ಒಬ್ಬ ಮಹರ್ಷಿ ಶ್ರೀ ರಾಮ ರಾವಣಸಂಹಾರಾನಂತರ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದನೆಂಬ ಸುದ್ದಿಯನ್ನು ಕೇಳಿ ರಾಮನನ್ನು ಅಭಿನಂದನಮಾಡುವುದಕ್ಕಾಗಿ ಬಂದಿದ್ದ ಅನೇಕ ಮಂದಿ ಮಹರ್ಷಿಗಳಲ್ಲಿ ಈತನೂ ಒಬ್ಬ [ರಾಮಾ.-ಉತ್ತ. ೧]

**ನರ**—ಸ್ವಾಯಂಭುವ ಮನ್ವಂತರದಲ್ಲಿ ಧರ್ಮ ಮುನಿಯ ಇಬ್ಬರು ಪುತ್ರರಲ್ಲಿ ಹಿರಿಯವ. ನಾರಾಯಣ ಈತನ ತಮ್ಮ ನೋಡು—ಧರ್ಮ. ವಿಷ್ಣು ಹಿರಣ್ಯಕಶಿಪುವನ್ನು ಸಂಹರಿಸಿದ ಬಳಿಕ ಆತನ ಸಿಂಹರೂಪ ನಾರಾಯಣನಾಗಲು ಮನುಷ್ಯರೂಪ ನರನೆಂದು ಪ್ರಖ್ಯಾತಿಗೊಂಡಿತು ಈ ನರ ನಾರಾಯಣರಿಬ್ಬರೂ ಬದರಿಕಾಶ್ರಮದಲ್ಲಿ ತಪಸ್ಸು ಮಾಡಿಕೊಂಡಿದ್ದಾಗ ಇಂದ್ರ ಇವರ ತಪೋಭಂಗಕ್ಕಾಗಿ ಅನೇಕ ಮಂದಿ ಅಪ್ಸರಸಿಯರನ್ನು ಕಳುಹಿದ. ಆಗ ನಾರಾಯಣ ಮುನಿ ತನ್ನ ತೊಡೆಯನ್ನು ಕೆರೆಯಲಾಗಿ ಊರ್ವಶಿ ಜನಿಸಿದಳು. ಆಕೆಯನ್ನು ಕಂಡು ವಿಕ್ಕ

ಅಪ್ಸರಸಿಯರೆಲ್ಲರೂ ನಾಚಿಕೆಯಿಂದ ಹಿಂದೆರಳಿದರು ನೋಡು—ಊರ್ವಶೀ [ದೇ ಭಾ -೪-೬ ೧೧-೪] ಒಮ್ಮೆ ಪ್ರಹ್ಲಾದ ಬದರಿಕಾಶ್ರಮಕ್ಕೆ ಹೋದಾಗ ಇವರಿಬ್ಬರನ್ನೂ ನೋಡಿ "ಇವರು ಕಪಟ ತಾಪಸರು ಇವರು ನಿಜವಾದ ಮುನಿಗಳಾಗಿದ್ದಲ್ಲಿ ಇವರಲ್ಲಿ ಆಯುಧಗಳೇಕೆ ಇರಬೇಕು ? ತಪಸ್ವಿಗಳಿಗೆ ಭಯವೇಕೆ ?" ಎಂದು ಮುಂತಾಗಿ ಹೀಯಾಳಿಸಿದ ನರ ನಾರಾಯಣರಿಗೆ ಸಿಟ್ಟು ತಲೆಗೇರಿತು ಪ್ರಹ್ಲಾದನಿಗೂ ಇವರಿಗೂ ಯುದ್ಧವಾಗತೊಡಗಿ, ಅದರಲ್ಲಿ ಪ್ರಹ್ಲಾದ ಸೋತು ಚಿಂತಾಕ್ರಾಂತನಾಗಿ, ತನ್ನ ದುರವಸ್ಥೆಗಾಗಿ ವಿಷ್ಣುವನ್ನು ಬೇಡಿ, ಹೊಗಳಿದ ಆಗ ವಿಷ್ಣು ಪ್ರತ್ಯಕ್ಷನಾಗಿ "ಇವರಿಬ್ಬರೂ ನನ್ನ ಅಂಶವಲ್ಲದೆ ಬೇರೆಯಲ್ಲ. ನೀನು ಇವರಿಂದ ಸೋತುದಕ್ಕಾಗಿ ಮರುಗಬೇಡ" ಎಂದು ಸಂತವಿಸಿದ

ಹಿಂದೆ ಸಹಸ್ರಕವಚನೆಂಬ ರಾಕ್ಷಸ ಲೋಕಕಂಟಕನಾಗಿರಲು ಅವನನ್ನು ಕೊಲ್ಲುವುದಕ್ಕಾಗಿ ನರ ನಾರಾಯಣರು ವಿಷ್ಣ್ವಂಶದಿಂದ ಜನಿಸಿದರು ಸಾವಿರ ವರ್ಷಗಳು ತಪಸ್ಸು ಮಾಡಿದವನಿಂದಲ್ಲದೆ ಬೇರೆ ಯಾರಿಂದಲೂ ಸಾಯದಂತೆ ಸಹಸ್ರಕವಚ ವರವನ್ನು ಪಡೆದಿದ್ದ ಈ ಕಾರಣದಿಂದ ನರ ನಾರಾಯಣರಿಬ್ಬರೂ ಕಲೆತು ತಪಸ್ಸು ಮಾಡುತ್ತಿದ್ದರು ಕೆಲ ಕಾಲದ ಬಳಿಕ ನಾರಾಯಣ ಸಹಸ್ರಕವಚನೊಡನೆ ಯುದ್ಧಮಾಡಹೋದ ಆಗ ನರ ತಪಸ್ಸು ಮಾಡುತ್ತಲೇ ಇದ್ದ ನಾರಾಯಣ ಯುದ್ಧದಲ್ಲಿ ಬಳಲಿದನಾದರೆ ತಪಸ್ಸಿಗೆ ಬರುವ ಆಗ ನರ ಯುದ್ಧಕ್ಕೆ ಹೋಗುವನು ಈ ರೀತಿಯಾಗಿ ಸಹಸ್ರಕವಚನ ೯೯೯ ಕವಚಗಳನ್ನು ನರ ನಾರಾಯಣರಿಬ್ಬರೂ ಸರದಿಯ ಮೇರೆಗೆ ಹರಿದು ಬಿಸುಟರು ಇಷ್ಟರಲ್ಲಿ ಸಹಸ್ರಕವಚ ಕಾಲಗತಿಯನ್ನೈದಿ, ಕರ್ಣನೆಂಬುದಾಗಿ ಒಂದು ಕವಚದೊಂದಿಗೆ ಜನಿಸಿದ ನರ ನಾರಾಯಣರು ಅರ್ಜುನ ಕೃಷ್ಣರಾಗಿ ಜನಿಸಿದರು ಆಗ ಯುದ್ಧ ನರನ ಸರದಿಯಾಗಿದ್ದುದರಿಂದ ನರ (ಅರ್ಜುನ) ಅವನನ್ನು ಕೊಂದ ಪಾಂಡವರು ವನವಾಸ ಕಾಲದಲ್ಲಿ ತೀರ್ಥಯಾತ್ರೆ ಹೊರಟಿದ್ದಾಗ ಈ ಆಶ್ರಮಕ್ಕೆ ಹೋಗಿದ್ದರು [ವನ. ೧೪೭, ೧೫೭].

(11) ಅರ್ಜುನನ ನಾಮಾಂತರ.

**ನರಕ**—ಪಾಪಿಗಳನ್ನು ದಂಡಿಸುವುದಕ್ಕಾಗಿ ಯಮ ಲೋಕದಲ್ಲಿ ಏರ್ಪಟ್ಟಿರುವ ಪ್ರದೇಶ. ಇದರಲ್ಲಿ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕಾಲಸೂತ್ರ, ಅಸಿಪತ್ರವನ, ಸೂಕರಮುಖ, ಅಂಧಕೂಪ, ಕ್ರಿಮಿಭೋಜನ, ತಪ್ತಸೂರ್ಮಿ, ವಜ್ರಕಂಟಕ, ಶಾಲ್ಮಲಿ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾದನ, ಅವೀಚಿ, ಅಯಃಪಾನ, ಕ್ಷಾರಕರ್ದಮ, ಶೂಲಪ್ರೋತ, ದಂದಶೂಕ, ಸೂಚೀಮುಖ ಮೊದಲಾದ ಅನೇಕ ಪ್ರಭೇದಗಳಿವೆ. ಇಂತಿಂತಹ ಪಾಪಮಾಡಿದವರಿಗೆ ಇಂತಿಂತಹ ನರಕವೆಂಬುದಾಗಿ ಕ್ಲುಪ್ತವಾಗಿದೆ [ಭಾಗ.-೫-೨೬].

**ನರಕವರ್ಣನೆ.**—[ಸ್ಕಾಂದ.- ಕೌಮಾರಿ. ೩೯. ಬ್ರ.ವೈ. ೨೯-೩೧. ಶಿವ.-ಉಮಾ. ೩೦. ೭-೮. ಭಾಗ.-೭,೧೬. ಮಾರ್ಕ.-೧೧-೧೨ ವಿಷ್ಣು -೨-೬. ದೇ ಭಾಗ.-೮,೨೧-೨೩. ಲಿಂಗ.-೫೩].

**ನರಕಾಸುರ** —ವಿಷ್ಣು ವರಾಹಾವತಾರವನ್ನು ತಳೆದಿದ್ದಾಗ ಆತನ ದೇಹದಿಂದ ಒಂದು ತೊಟ್ಟು ಬೆವರು ನೆಲದ ಮೇಲೆ ಬೀಳಲಾಗಿ ಭೂದೇವಿಯಲ್ಲಿ ಜನಿಸಿದವ. ಈ ಕಾರಣದಿಂದ ಇವನಿಗೆ ಭೌಮಾಸುರನೆಂಬುದಾಗಿಯೂ ಹೆಸರುಂಟು [ಸಭಾ. ೯, ೧೪, ೫೫]. ಭೂ ದೇವಿ ವಿಷ್ಣುವನ್ನು ಬೇಡಿ ತನ್ನ ಮಗನಿಗೆ ವೈಷ್ಣವಾಸ್ತ್ರವನ್ನು ಸಂಪಾದಿಸಿ ಕೊಟ್ಟಳು ಇದರ ಮಹಿಮೆಯಿಂದ ದುರ್ಜಯನಾದ ನರಕ ಪ್ರಾಗ್ಜ್ಯೋತಿಷ ನಗರದಲ್ಲಿ ರಾಜ್ಯಭಾರಮಾಡುತ್ತಿದ್ದು ಕ್ರಮವಾಗಿ ಲೋಕಕಂಟಕನಾದ ಇಂದ್ರನ ಶ್ವೇತಚ್ಛತ್ರವನ್ನೂ, ಇಂದ್ರನ ಜನನಿಯಾದ ಅದಿತಿಯ ಕರ್ಣಕುಂಡಲಗಳನ್ನೂ, ಇಂದ್ರನ ವಿಹಾರಕ್ಕಾಗಿ ಏರ್ಪಟ್ಟಿದ್ದ ಮೇರು ಪರ್ವತದ ಮಣಿಶಿಖರವನ್ನೂ ಅಪಹರಿಸಿದ ಇವನ ಕೋಟಲೆಯನ್ನು ತಡೆದುಕೊಳ್ಳಲಾರದೆ ಇಂದ್ರ ಶ್ರೀ ಕೃಷ್ಣನಲ್ಲಿಗೆ ಹೋಗಿ ವೃತ್ತಾಂತವನ್ನೆಲ್ಲ ಬಿನ್ನವಿಸಿದ ಆಗ ಕೃಷ್ಣ ಪ್ರಾಗ್ಜ್ಯೋತಿಷ ನಗರಕ್ಕೆ ಹೋಗಿ ಯುದ್ಧಮಾಡತೊಡಗಲು ಕೃಷ್ಣನ ಶಂಖಧ್ವನಿಯನ್ನು ಕೇಳಿ ಜಲದಲ್ಲಿ ಮಲಗಿದ್ದ ಮುರಾಸುರ ಯುದ್ಧಕ್ಕೆ ಬರಲಾಗಿ, ಕೃಷ್ಣ ಅವನನ್ನು ಕೊಂದ ಬಳಿಕ ಮುರಾಸುರನ ಏಳು ಮಂದಿ ಮಕ್ಕಳೂ ಸೇನಾಪತಿಯಾದ ಪೀರಾಸುರನನ್ನು ಸಂಗಡ ಕರೆದುಕೊಂಡು ಯುದ್ಧಕ್ಕೆ ಬಂದರು ಅವರೂ ಹತರಾದ ಬಳಿಕ ನರಕಾಸುರ ಯುದ್ಧಕ್ಕೆ ಬಂದು ಬಹಳವಾಗಿ ಹೋರಾಡಿ ಸತ್ತ. ತರುವಾಯ ಭೂ ದೇವಿ, ಅದಿತಿಯ ಕುಂಡಲಗಳನ್ನೂ, ಇಂದ್ರನ ಛತ್ರವನ್ನೂ, ಮಣಿಪರ್ವತವನ್ನೂ ತೆಗೆದುಕೊಂಡು, ನರಕಾಸುರನ ಮಗನಾದ ಭಗದತ್ತನನ್ನು ಸಂಗಡ ಕರೆತಂದು ಕೃಷ್ಣನಿಗೆ ಅಡ್ಡಬೀಳಿಸಿ, ಆ ವಸ್ತುಗಳನ್ನೆಲ್ಲ ಅರ್ಪಿಸಿ, ಕೃಷ್ಣನಿಂದ ಭಗದತ್ತನಿಗೆ ಅಭಯವನ್ನು ಕೊಡಿಸಿದಳು [ಹರಿ.-೨-೬೩ ಭಾಗ -೧೦-೫೯] ಇದೇ ಸಮಯದಲ್ಲಿಯೇ ಶ್ರೀ ಕೃಷ್ಣ ಪಾರಿಜಾತವನ್ನು ದೇವಲೋಕದಿಂದ ಅಪಹರಿಸಿ ತಂದ ಪಾಂಡವರು ವನವಾಸಮಾಡುತ್ತಿದ್ದಾಗ ಇವನ ದೇಹದ ಎಲುಬುಗಳ ರಾಶಿಯನ್ನು ನೋಡಿದ್ದು [ವನ. ೧೪೪] ನರಕಾಸುರನ ತರುವಾಯ ಅವನಲ್ಲಿದ್ದ ವೈಷ್ಣವಾಸ್ತ್ರ ಅವನ ಮಗನಾದ ಭಗದತ್ತನ ಪಾಲಾಯಿತು [ಭಾರ -ದ್ರೋ ೨೯]

**ನರವಾಹನ.**—ಈ ಹೆಸರು ಕುಬೇರನಿಗೆ ಸಲ್ಲುತ್ತದೆ.

**ನರಸಿಂಹ** —ನೋಡು—ನೃಸಿಂಹ.

**ನರ್ಮದಾ** —ಒಂದು ಜೀವನದಿ [ಭಾರ.-ಸ ೯ ವನ. ೮೭. ಭೀ. ೯]. ಇದು ಅಮರಕಂಟಕ ಪರ್ವತದಿಂದ ಹುಟ್ಟುತ್ತದೆ, ಅಮರಕಂಟಕಕ್ಕೆ ಮೇಕಲಕವೆಂಬುದು

ನಾಮಾಂತರ. ಈ ಕಾರಣದಿಂದಲೇ ನರ್ಮದೆಗೆ ಮೇಕಲ ಕನ್ಯೆಯೆಂದು ಹೆಸರು [ಮತ್ಸ್ಯ.-೧೧೩].

**ನರ್ಮದಾಮಹಿಮೆ.**—[ಭಾರ.-ವನ. ೮೦. ಪದ್ಮ. ೧-೧೩. ಮತ್ಸ್ಯ.-೧೮೯]

(I) ನರ್ಮದಾ ನದಿಯ ಅಭಿಮಾನಿದೇವತೆ. ಇಕ್ಷ್ವಾಕು ವಂಶದ ದುರ್ಯೋಧನನೆಂಬ ಅರಸನಿಗೆ ಹೆಂಡತಿಯಾಗಿದ್ದಳು [ಅನು ೨].

(II) ಒಬ್ಬ ಗಂಧರ್ವ ಸ್ತ್ರೀ. ಈಕೆಗೆ ಸುಂದರಿ, ಕೇತುಮತಿ, ವಸುಧೆ ಎಂಬುದಾಗಿ ಮೂವರು ಪುತ್ರಿಯರಿದ್ದರು. ಈ ಮೂವರೂ ಲೋಕೋತ್ತರ ಸೌಂದರ್ಯವತಿಯರಾಗಿದ್ದರು ನರ್ಮದೆ ಹಿರಿಯವಳಾದ ಸುಂದರಿಯೆಂಬವಳನ್ನು ಮಾಲ್ಯವಂತನಿಗೂ, ಎರಡನೆಯವಳಾದ ಕೇತುಮತಿಯೆಂಬವಳನ್ನು ಮಾಲ್ಯವಂತನ ತಮ್ಮನಾದ ಸುಮಾಲಿಗೂ, ಮೂರನೆಯವಳಾದ ವಸುಧೆಯನ್ನು ಸುಕೇಶನ ಮಗನಾದ ಮಾಲಿಯೆಂಬವನಿಗೂ ಕೊಟ್ಟು ಮದುವೆಮಾಡಿದಳು [ರಾಮಾ.-ಉತ್ತ. ೫].

(III) ಒಬ್ಬ ನಾಗ ಕನ್ಯೆ. ಸೂರ್ಯ ವಂಶದ ಮಾಂಧಾತೃ ಚಕ್ರವರ್ತಿಯ ಹಿರಿಯ ಮಗನಾದ ಪುರುಕುತ್ಸನನ್ನು ಮದುವೆಯಾಗಿದ್ದಳು. ನೋಡು—ಪುರುಕುತ್ಸ, ಅನರಣ್ಯ.

**ನಲ** —(I) ನಿಷಧ ದೇಶಾಧಿಪತಿಯಾದ ವೀರಸೇನ ರಾಜನ ಮಗ ವಿದರ್ಭ ದೇಶಾಧಿಪತಿಯಾದ ಭೀಮ ರಾಜನ ಮಗಳಾದ ದಮಯಂತಿಯನ್ನು ಮದುವೆಯಾದ ನೋಡು—ಋತುಪರ್ಣ ಕರ್ಕೋಟಕ, ದಮಯಂತಿ, ಪುಷ್ಕರ ಇವನಿಗೆ ಇಂದ್ರಸೇನೆಯೆಂಬ ಮಗಳೂ ಇಂದ್ರಸೇನನೆಂಬ ಮಗನೂ ಇದ್ದರು [ಭಾರ -ವನ. ೪೯] ಒಮ್ಮೆ ಉದ್ಯಾನವನದಲ್ಲಿ ವಿಹರಿಸುತ್ತಿದ್ದಾಗ ಚಿನ್ನದ ಗರಿಗಳುಳ್ಳ ಹಂಸಗಳನ್ನು ಕಂಡು ಆಶ್ಚರ್ಯಭರಿತನಾಗಿ ಅವುಗಳ ಮೂಲಕ ದಮಯಂತಿಯ ಸೌಂದರ್ಯಾದಿಗಳನ್ನು ಕೇಳಿ, ಆಕೆಯನ್ನು ಮದುವೆಯಾಗಲು ಸಂಕಲ್ಪಿಸಿದ [ವನ. ೫೦] ಈತ ದಮಯಂತೀ ಸ್ವಯಂವರಕ್ಕೆ ಬರುತ್ತಿದ್ದಾಗ ದಾರಿಯಲ್ಲಿ ಇಂದ್ರಾದಿಗಳು ಇವನನ್ನು ಸಂಧಿಸಿ, ದಮಯಂತಿಯಲ್ಲಿಗೆ ಇವನನ್ನು ದೂತನನ್ನಾಗಿ ಕಳುಹಿಸಿದರು [ವನ. ೫೨] ಇಂದ್ರಾದಿಗಳು ಇವನ ಸದ್ವರ್ತನೆಗೆ ಮೆಚ್ಚಿ ವರಪ್ರದಾನಮಾಡಿ ಅನುಗ್ರಹಿಸಿದ್ದು ದಮಯಂತಿಯೊಂದಿಗೆ ವಿವಾಹವಾದದ್ದು [ವನ. ೫೪]. ಕಲಿ ಈತನ ದೇಹವನ್ನು ಹೊಕ್ಕದ್ದು ನೋಡು—ಕಲಿ [ವನ. ೫೬]. ಪುಷ್ಕರನ ಸಂಗಡ ಜೂಜಾಡಿ ರಾಜ್ಯವನ್ನು ಕಳೆದುಕೊಂಡು, ದಮಯಂತಿಯ ಸಂಗಡ ಕಾಡಿಗೆ ಹೋಗಿ, ಅಲ್ಲಿ ಕಂಡು ಬಂದ ಕೆಲವು ಹಕ್ಕಿಗಳನ್ನು ಹಿಡಿಯುವುದಕ್ಕಾಗಿ ತಾನು ಹೊದ್ದುಕೊಂಡಿದ್ದ ಉತ್ತರೀಯವನ್ನು ಎಸೆಯಲಾಗಿ, ಅವು ಆ ವಸ್ತ್ರವನ್ನು ಎತ್ತಿಕೊಂಡು ಹಾರಿ ಹೋದದ್ದು [ವನ. ೫೩, ೫೮]. ಬಳಿಕ ದಮಯಂತಿ ಉಟ್ಟಿದ್ದ ಸೀರೆಯ ಸೆರಗನ್ನು

ಹರಿದು ಹೊದ್ದುಕೊಂಡು, ರಾತ್ರಿ ಮಲಗಿರುವಾಗ ದಮಯಂತಿಯನ್ನು ಒಬ್ಬಳನ್ನೇ ಬಿಟ್ಟುಹೋದದ್ದು [ವನ ೫೯]. ಕಾಡುಕಿಚ್ಚಿಗೆ ಸಿಕ್ಕಿ ಸಾಯುತ್ತಿದ್ದ ಕರ್ಕೋಟಕನನ್ನು ಬದುಕಿಸಿ, ಅದರಿಂದ ಕಚ್ಚಿಸಿಕೊಂಡು, ವಿಕಾರ ರೂಪವನ್ನು ಧರಿಸಿದ್ದು [ವನ. ೬೩]. ಬಾಹುಕನೆಂದು ಹೆಸರಿಟ್ಟುಕೊಂಡು ಅಯೋಧ್ಯಾಧಿಪತಿಯಾದ ಋತುಪರ್ಣ ರಾಜನಲ್ಲಿ ಸಾರಥಿಯಾಗಿ ನಿಂತದ್ದು [ವನ. ೬೪] ದಮಯಂತಿಯ ಪುನಃಸ್ವಯಂವರಕ್ಕಾಗಿ ಋತುಪರ್ಣ ಹೊರಟಾಗ ದಾರಿಯಲ್ಲಿ ಋತುಪರ್ಣನಿಗೆ ಅಶ್ವವಿದ್ಯೆಯನ್ನು ತಿಳುಹಿ ಅವನಿಂದ ಅಕ್ಷ ರಹಸ್ಯವನ್ನು ಕಲಿತು, ವಿದರ್ಭ ದೇಶಕ್ಕೆ ಬಂದದ್ದು [ವನ ೭೦]. ಋತುಪರ್ಣನ ರಥ ಕುಂಡಿನಪುರವನ್ನು ಹೊಕ್ಕಕೂಡಲೇ ಆ ರಥಘೋಷವನ್ನು ಕೇಳಿದ ಮಾತ್ರದಿಂದಲೇ ನಳನೇ ಆ ರಥವನ್ನು ನಡೆಯಿಸುತ್ತಿರುವನೆಂದು ದಮಯಂತಿ ಊಹಿಸಿ, ಅದನ್ನು ತಿಳಿಯುವುದಕ್ಕಾಗಿ ತನ್ನ ಸಖಿಯಾದ ಕೇಶಿನಿಯನ್ನು ಕಳುಹಿದ್ದು ಕೇಶಿನಿಯ ಮೂಲಕ ಆತನ ಚೇಷ್ಟಾದಿಗಳನ್ನು ಕೇಳಿ ತಿಳಿದು, ಆತನೇ ನಳನೆಂದು ನಿಶ್ಚಯಿಸಿ, ಕೇಶಿನಿಯ ಮೂಲಕ ತನ್ನಲ್ಲಿಗೆ ಬರಮಾಡಿಕೊಂಡದ್ದು [ವನ. ೭೧, ೭೪] ಬಾಹುಕ ದಮಯಂತಿಯರ ಸಂವಾದ ಬಾಹುಕ ತಾನೇ ನಲನೆಂದು ಒಪ್ಪಿಕೊಂಡು, ಕರ್ಕೋಟಕನ ಕಥೆಯನ್ನು ವಿವರಿಸಿದ್ದು ಮರುದಿನ ಭೀಮ ರಾಜ ನಳ ದಮಯಂತಿಯರನ್ನು ಕಂಡದ್ದು ಋತುಪರ್ಣ ನಲನನ್ನು ಕ್ಷಮೆಬೇಡಿ ಆತನಿಂದ ಅಶ್ವವಿದ್ಯೆಯನ್ನು ಗ್ರಹಿಸಿ ಅಯೋಧ್ಯೆಗೆ ಹಿಂದಿರುಗಿದ್ದು ನಳ ತನ್ನ ಪಟ್ಟಣವನ್ನು ಸೇರಿ ಮರಳಿ ಜೂಜಿನಲ್ಲಿ ಪುಷ್ಕರನನ್ನು ಸೋಲಿಸಿ, ತನ್ನ ರಾಜ್ಯಾಧಿಕಾರವನ್ನು ಪಡೆದದ್ದು ಮುಂತಾಗಿ [ವನ ೭೪-೭೭] ಈತನ ನಾಮಸ್ಮರಣೆಯಿಂದ ಕಲಿಯ ಬಾಧೆ ತೊಲಗುವುದು [ವನ ೭೦, ೭೭]

(II) ಸುಗ್ರೀವನ ಕಪಿಸೇನಾ ನಾಯಕರಲ್ಲಿ ಒಬ್ಬ ದಕ್ಷಿಣ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದವ [ವನ ೨೮೪] ದೇವತೆಗಳ ಬಡಗಿಯಾದ ವಿಶ್ವಕರ್ಮನ ಮಗ ಇವ ನೀರಿನಲ್ಲಿ ಹಾಕಿದ ವಸ್ತು ಮುಳುಗದ ಹಾಗೆ ವಿಶ್ವಕರ್ಮ ಇವನಿಗೆ ವರವನ್ನು ಕೊಟ್ಟಿದ್ದ ಸಮುದ್ರದಲ್ಲಿ ಸೇತುವೆಯನ್ನು ಕಟ್ಟುವಾಗ ಇವ ಸಮುದ್ರದ ಮೇಲೆ ನಿಂತಿರುವಲ್ಲಿ ಸಮುದ್ರ ರಾಜ ಇವನನ್ನು ಮುಳುಗದಂತೆ ಹಿಡಿದಿದ್ದ [ರಾಮಾ.-ಯುದ್ಧ ೨೨].

**ನಲಕೂಬರ**.—ಕುಬೇರನ ಕಿರಿಯ ಮಗ ಮಣಿಗ್ರೀವನೆಂಬವ ಇವನ ಅಣ್ಣ [ಭಾರ -ಸ ೧೦. ವನ. ೨೮೧]. ಇವರಿಬ್ಬರೂ ಒಮ್ಮೆ ಕೈಲಾಸ ಪರ್ವತದಲ್ಲಿ ಯಕ್ಷಿಣಿಯರೊಂದಿಗೆ ವಿಹರಿಸುತ್ತ ಮದ್ಯಪಾನಮಾಡಿ, ಮತ್ತರಾಗಿ, ಆ ವಿಲಾಸಿನಿಯರೊಂದಿಗೆ ಗಂಗಾ ಜಲದಲ್ಲಿ ಕೇಳೀಸುಖವನ್ನು ಅನುಭವಿಸುತ್ತಿದ್ದರು ಅಷ್ಟರಲ್ಲಿ ನಾರದ ಮುನಿ ಅಲ್ಲಿಗೆ ಬರುತ್ತಿದ್ದುದನ್ನು ಕಂಡು ಆ ವಿಲಾಸಿನಿಯರು ಮುನಿ ಶಾಪ

ಕೊಲ್ಲುವನೆಂಬ ಭಯದಿಂದ ತಮ್ಮ ತಮ್ಮ ವಸ್ತ್ರಗಳನ್ನು ಉಟ್ಟುಕೊಂಡರು. ಮಧು ಮತ್ತರಾದ ಇವರಿಬ್ಬರೂ ಜಲಕೇಳಿಯಲ್ಲಿಯೇ ಆಸಕ್ತರಾಗಿದ್ದುದನ್ನು ಕಂಡು ಕುಪಿತ ನಾದ ಮುನಿ ಇವರಿಬ್ಬರನ್ನೂ ಮತ್ತಿಯ ಮರಗಳಾಗಿ ಜನಿಸುವಂತೆ ಶಾಪವಿತ್ತ. ನಳಕೂಬರ, ಮಣಿಗ್ರೀವರು ಎಚ್ಚತ್ತು ಆ ಮುನಿಯನ್ನು ಮರೆಹೊಕ್ಕು, ತಮ್ಮ ಅಪರಾಧವನ್ನು ಮನ್ನಿಸುವಂತೆ ಬೇಡಿ '' ನೂರು ವರ್ಷಗಳ ಕಾಲ ಮರಗಳಾಗಿದ್ದು, ಶ್ರೀ ಕೃಷ್ಣನ ಮೂಲಕ ನಿಮ್ಮ ಈಗಣ ಸ್ಥಿತಿಯನ್ನು ಪಡೆಯುವಿರಿ '' ಎಂಬುದಾಗಿ ಅನುಗ್ರಹಪಡೆದರು ಬಳಿಕ ಇವರಿಬ್ಬರೂ ಗೋಕುಲದಲ್ಲಿ ನಂದನ ಅಂಗಳದಲ್ಲಿ ವಿಶಾಲ ವಾದ ಮತ್ತಿಯ ಮರಗಳಾಗಿ ಜನಿಸಿದರು ಒಂದು ದಿನ ಕೃಷ್ಣ ಯಶೋದೆಗೆ ತಿಳಿಯದಂತೆ ಬೆಣ್ಣೆಯ ಮಡಕೆಯನ್ನು ಒಡೆದು ಬೇಕಾದಷ್ಟು ತೆಗೆದುಕೊಂಡು ಬಂದು ಅಂಗಳದಲ್ಲಿದ್ದ ಒಂದು ಒರಳುಕಲ್ಲಿನ ಮೇಲೆ ಕುಳಿತು ಪಕ್ಕದಲ್ಲಿದ್ದ ಮಂಗಕ್ಕೂ ಸ್ವಲ್ಪ ಕೊಟ್ಟು ತಾನೂ ತಿನ್ನುತ್ತಿದ್ದ ಇಷ್ಟರಲ್ಲಿ ಯಶೋದೆ ಬೆಣ್ಣೆಯ ಮಡಕೆ ಒಡೆದಿರುವುದನ್ನು ಕಂಡು ಆ ಕೆಲಸ ಕೃಷ್ಣನಿಂದಲೇ ನಡೆದಿರಬೇಕೆಂದು ನಿಶ್ಚಯಿಸಿ, ಬಹಳ ಪ್ರಯಾಸದಿಂದ ಅವನನ್ನು ಹಿಡಿತಂದು ಅಂಗಳದಲ್ಲಿದ್ದ ಒರಳುಕಲ್ಲಿಗೆ ಕಟ್ಟಿ ಹಾಕಿದಳು. ಕೃಷ್ಣ ಆ ಒರಳನ್ನು ಎಳೆದುಕೊಂಡು ಆ ಎರಡು ಮತ್ತಿಮರಗಳ ನಡುವೆ ನುಗ್ಗಿದ. ಒಡನೆಯೇ ಆ ಮರಗಳೆರಡೂ ಬುಡಮುಟ್ಟ ಉರುಳಿಬಿದ್ದು, ಅವೆರಡು ಮರಗಳಿಂದಲೂ ಇಬ್ಬರು ದಿವ್ಯಪುರುಷರು ಹೊರಬಂದು, ಕೃಷ್ಣನನ್ನು ಹೊಗಳಿ ವಿಮಾನಾರೂಢರಾಗಿ ತಮ್ಮ ಪಟ್ಟಣವಾದ ಅಲಕಾವತಿಗೆ ಹೋದರು. ನಳಕೂಬರ ಯಾವಾಗಲೂ ವಿಲಾಸಪ್ರಿಯ. ದೇವವಿಲಾಸಿನಿಯಾದ ರಂಭೆ ಇವನಿಗೆ ಪ್ರೇಮಾಸ್ಪದಳಾದವಳು [ಭಾಗ -೧೦-೧೦].

**ನವಗ್ರಹಗಳು**.—ಇವರ ಮಂಡಲಗಳು, ಅವುಗಳ ವಿಸ್ತಾರ, ರಥ, ವಾಹನಾದಿ ಗಳ ವರ್ಣನೆ [ಲಿಂಗ.-೫೭, ೫೮].

**ನವನಿಧಿಗಳು** —ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರ ಎಂಬುವು ಈ ಒಂಬತ್ತಕ್ಕೂ ಕುಬೇರ ಅಧಿಪತಿ ನೋಡು— ಕುಬೇರ [ಮಾರ್ಕಂ.-೬೫].

**ನಹುಷ**.—ಚಂದ್ರ ವಂಶದ ಅರಸು. ಊರ್ವಶೀ ಪುರೂರವರ ಮಗನಾದ ಆಯು ರಾಜನಿಂದ ಸ್ವರ್ಭಾನವಿಯಲ್ಲಿ ಜನಿಸಿದವ [ಭಾರ.-ಆದಿ ೭೩, ೭೯. ಸಭಾ. ೮. ವಿರಾ. ೫೩. ಭಾಗ.-೯-೧೭. ಹರಿ.-೧-೧೮. ವಾಯು -೯೩. ಬ್ರಹ್ಮ-೧೧]. ಈತ ಪಿತೃ ದೇವತೆಗಳ ಕನ್ಯೆಯಾದ ವಿರಜೆಯೆಂಬವಳನ್ನು ಮದುವೆಯಾಗಿದ್ದ [ಬ್ರಹ್ಮ.-೧೩. ಹರಿ -೧-೩೦]. ಈತನಿಗೆ ಯತಿ, ಯಯಾತಿ, ಸಂಯಾತಿ, ಆಯತಿ, ಅಯತಿ, ಧ್ರುವ ಎಂಬುದಾಗಿ ಆರು ಮಂದಿ ಮಕ್ಕಳು [ಆದಿ. ೭೯] ಇಂದ್ರ ವೃತ್ರನನ್ನು

ಕೊಂದು ಬ್ರಹ್ಮಹತ್ಯಾಪಾತಕಕ್ಕೆ ಗುರಿಯಾಗಲಾಗಿ, ಆ ಪಾಪವನ್ನು ನಿವೃತ್ತಿ ಮಾಡಿ ಕೊಳ್ಳುವುದಕ್ಕಾಗಿ ಎಲ್ಲಿಯೋ ಹೋದ. ಆಗ ದೇವತೆಗಳೆಲ್ಲರೂ ಬ್ರಹ್ಮನಲ್ಲಿಗೆ ಹೋಗಿ ಸ್ವರ್ಗರಾಜ್ಯಕ್ಕೆ ಅಧಿಪತಿಯಿಲ್ಲವೆಂದು ಹೇಳಿದರು ಆಗ ಚತುರ್ಮುಖ ಭೂ ಲೋಕ ದಲ್ಲಿರುವ ನಹುಷ ಚಕ್ರವರ್ತಿಯನ್ನು ಕರೆತಂದು ಇಂದ್ರಪದವಿಯಲ್ಲಿಟ್ಟುಕೊಳ್ಳುವು ದಾಗಿ ಹೇಳಿದ. ದೇವತೆಗಳು ನಹುಷನಲ್ಲಿಗೆ ಹೋಗಿ ಬೇಡಿದರು ನಹುಷ ಮೊದಲು ಸಮ್ಮತಿಸಲಿಲ್ಲ. ದೇವತೆಗಳ ಬಲಾತ್ಕಾರದಿಂದ ಸಮ್ಮತಿಸಿ ದೇವಲೋಕಾಧಿಪತ್ಯವನ್ನು ಪಡೆದ [ಭಾರ.-ಉ ೧೦. ಅನು ೧೫೬ ಭಾಗ.-೬-೧೩. ದೇ ಭಾ -೬ ಸ್ಕಾಂ -೭, ೮]. ಇಷ್ಟರಲ್ಲಿ ಇಂದ್ರ ವಿಷ್ಣುವಿನ ಸೂಚನೆಯ ಮೇರೆಗೆ ಅಶ್ವಮೇಧವನ್ನು ಮಾಡಿ ಬ್ರಹ್ಮ ಹತ್ಯೆಯನ್ನು ಹೋಗಲಾಡಿಸಿಕೊಂಡು ದೇವರಾಜಪಟ್ಟಕ್ಕೆ ಯೋಗ್ಯನಾದ ಆ ಸಮ ಯಕ್ಕೆ ನಹುಷನ ದುರ್ದೈವದಿಂದ ತಾನು ಇಂದ್ರನ ರಾಣಿಯನ್ನು ಕೂಡಬೇಕೆಂಬ ದುರಭಿಲಾಷೆ ನಹುಷನಿಗೆ ತಲೆದೋರಿತು ಅಂತೆಯೇ ಶಚಿಯಲ್ಲಿಗೆ ದೂತರನ್ನು ಕಳುಹಿದ. ಶಚಿ ಸ್ವಲ್ಪ ಯೋಚಿಸಿ, '' ನೀನು ಅಪೂರ್ವವಾದ ವಾಹನದಲ್ಲಿ ಕುಳಿತು ಕೊಂಡು ಬಂದಲ್ಲಿ ನಾನು ನಿನ್ನ ವಶವರ್ತಿನಿಯಾಗುವೆನು '' ಎಂದು ಹೇಳಿಕಳುಹಿ ದಳು. ನಹುಷ ಅಂತೆಯೇ ಆಗಬಹುದೆಂದು ಹೇಳಿಕಳುಹಿ, ಸಪ್ತರ್ಷಿಗಳನ್ನು ವಾಹನವಾಗಿ ಏರ್ಪಡಿಸಿಕೊಂಡು, ತಾನು ಪಲ್ಲಕ್ಕಿಯಲ್ಲಿ ಕುಳಿತು ಶಚಿಯ ಮನೆಗೆ ಹೊರಟ. ಈ ಸಪ್ತರ್ಷಿಗಳೊಂದಿಗೆ ಅಗಸ್ತ್ಯರೂ ಪಲ್ಲಕ್ಕಿಯನ್ನು ಹೊರುತ್ತಿದ್ದರು. ಶಚಿಯ ಮನೆಗೆ ಬೇಗ ಹೋಗಬೇಕೆಂಬ ಆತುರದಿಂದಿದ್ದ ನಹುಷ '' ಸರ್ಪ, ಸರ್ಪ '' (ಬೇಗ ನಡೆ, ಬೇಗ ನಡೆ) ಎಂದು ಹೇಳುತ್ತ ಅಗಸ್ತ್ಯನ ತಲೆಯಮೇಲೆ ಕಾಲಿನಿಂದ ಒದ್ದ ಕ್ರುದ್ಧನಾದ ಅಗಸ್ತ್ಯ '' ಸರ್ಪೋ ಭವ '' (ಸರ್ಪರೂಪವನ್ನು ಧರಿಸು) ಎಂದು ಶಾಪವಿತ್ತ ಕೂಡಲೇ ನಹುಷ ದೊಡ್ಡ ಸರ್ಪವಾಗಿ ಬಿದ್ದ [ಭಾರ -ವನ ೧೮೦]. ಪಾಂಡವರು ವನವಾಸಮಾಡುತ್ತಿದ್ದಾಗ ಒಂದು ದಿನ ಭೀಮ ಬೇಟೆಗೆ ಹೋಗಿದ್ದಾಗ (ಅಜಗರ) ಹೆಬ್ಬಾವು ರೂಪದಿಂದಿದ್ದ ನಹುಷ ಭೀಮನನ್ನು ತೆಕ್ಕೆಹಾಕಿ ಕೆಲವು ಪ್ರಶ್ನೆ ಗಳನ್ನು ಕೇಳಿದ ಭೀಮನಿಂದ ಸಮರ್ಪಕವಾದ ಉತ್ತರ ದೊರೆಯಲಿಲ್ಲ ಅದರ ತೆಕ್ಕೆಯನ್ನು ಬಿಡಿಸಿಕೊಳ್ಳಲು ಭೀಮನ ಸಾಹಸವೂ ಪ್ರಯತ್ನವೂ ವ್ಯರ್ಥವಾಯಿತು ಇತ್ತ ಪಾಂಡವರ ಆಶ್ರಮದಲ್ಲಿ ಕೆಲ ಅಪಶಕುನಗಳು ಕಾಣಬಂದವು ಯುಧಿಷ್ಠಿರ ಹೆದರಿ ಭೀಮನನ್ನು ಹುಡುಕಿಕೊಂಡು ಹೋಗಿ ನೋಡುವಲ್ಲಿ, ಆ ಹೆಬ್ಬಾವು ಯುಧಿಷ್ಠಿರ ನನ್ನು ಅದೇ ಪ್ರಶ್ನೆಗಳನ್ನೇ ಕೇಳಿತು. ಯುಧಿಷ್ಠಿರ ಆ ಹಾವಿನ ಪ್ರಶ್ನೆಗಳಿಗೆಲ್ಲ ಸಮರ್ಪಕವಾದ ಉತ್ತರವನ್ನು ಹೇಳಲಾಗಿ ಆ ಹಾವು ಭೀಮನನ್ನು ಬಿಟ್ಟು, ತಾನೂ ಆ ಸರ್ಪದೇಹವನ್ನು ತೊರೆದು ನಹುಷದೇಹವನ್ನು ಧರಿಸಿತು ನಹುಷ ಕೂಡಲೇ ಸ್ವರ್ಗಕ್ಕೆ ಹೋದ [ಭಾರ.-ವನ, ೧೮೦, ೧೮೩. ಉ, ೧೭. ಅನು. ೧೫೭]. ಚ್ಯವನ

ಮುನಿ ನೀರಿನಲ್ಲಿ ಮುಳುಗಿ ತಪಸ್ಸುಮಾಡುತ್ತಿದ್ದು ಬೆಸ್ತರ ಬಲೆಗೆ ಸಿಕ್ಕಿದ್ದಾಗ ಆತನನ್ನು ಬಿಡಿಸಿದ ನೋಡು—ಗವಿಜಾತ, ಚ್ಯವನ [ಅನು. ೮೬]. ಈತ ದೇವಶಿಲ್ಪಿಯಾದ ತ್ವಷ್ಟೃವಿನಿಂದ ಒಂದು ಗೋವನ್ನು ಪಡೆದ [ಶಾಂತಿ. ೨೭೪]

**ನಾಕ್ಷತ್ರಮಣ್ಡಲ.**—ನಕ್ಷತ್ರಮಂಡಲ. ಆಕಾಶದಲ್ಲಿ ಕಾಣುವ ತೇಜಸ್ಸಿನ ಸಮುದಾಯ ಅಶ್ವಿನೀ ಮೊದಲಾದ ಇಪ್ಪತ್ತೇಳು ತಾರೆಗಳಿಗಿಂತಲೂ ಇವು ಬೇರೆ ಇವುಗಳೆಲ್ಲವೂ ಸೂರ್ಯನ ಪ್ರಕಾಶದ ಮೂಲಕ ಮಿನುಗುತ್ತವೆ.

"ಏವಂ ಸೂರ್ಯಪ್ರಭಾವೇಣ ನಕ್ಷತ್ರಗ್ರಹ ತಾರಕಾಃ।
ದೃಶ್ಯಂತೇ ದಿವಿ ತಾಸ್ಸರ್ವಾಃ ವಿಶ್ವಂ ಚೇದಂ ಪುನರ್ಜಗತ್ ॥
ನ ಕ್ಷೀಯಂತೇ ಯತಸ್ತಾನಿ ತಸ್ಮಾನ್ನಕ್ಷತ್ರತಾ ಸ್ಮೃತಾ ॥"

[ಲಿಂಗ -೬೦].

**ನಾಗ್ನಜಿತಿ**—ಕೋಸಲ ದೇಶಾಧಿಪತಿಯಾದ ನಗ್ನಜಿತನೆಂಬ ಅರಸನಿಗೆ ಸತ್ಯೆ ಯೆಂಬ ಮಗಳಿದ್ದಳು ಈಕೆಗೆ ನಾಗ್ನಜಿತಿಯೆಂಬುದು ತಂದೆಯ ಮೂಲಕ ಬಂದ ಹೆಸರು. ಆ ರಾಜನಲ್ಲಿ ಕೊಬ್ಬಿದ ಏಳು ಗೂಳಿಗಳೂ ಇದ್ದುವು ಅವುಗಳನ್ನು ನಿಗ್ರಹಿಸುವುದು ಯಾರಿಗೂ ಸಾಧ್ಯವಾಗಿರಲಿಲ್ಲ ನಗ್ನಜಿತ ಆ ಗೂಳಿಗಳನ್ನು ಅಣಗಿಸಿ ದವನಿಗೆ ತನ್ನ ಮಗಳನ್ನು ಕೊಡುವುದಾಗಿ ಪ್ರತಿಜ್ಞೆಮಾಡಿದ್ದ ಇಂತಿರಲು ಈ ಸಮಾಚಾರವನ್ನು ಕೇಳಿದ ಕೃಷ್ಣ ಆತನಲ್ಲಿಗೆ ಹೋಗಿ, ಸತ್ಕೃತನಾಗಿ, ಆ ಗೂಳಿ ಗಳ ಸೊಕ್ಕನ್ನು ಮುರಿದು ನಾಗ್ನಜಿತಿಯನ್ನು ಮದುವೆಯಾದ [ಭಾಗ -೧೦, ೫೮].

**ನಾಚಿಕೇತ**—ನೋಡು—ನಚಿಕೇತ

**ನಾಡೀಜಂಘ (ನಾಲಿಜಂಘ)**—ಒಂದು ಬಕ ಪಕ್ಷಿ. ನೋಡು—ಇಂದ್ರ ದ್ಯುಮ್ನ, ಪ್ರಾವಾರಕರ್ಣ, ಮಾರ್ಕಂಡೇಯ [ಭಾರ -ವನ. ೨೦೨].

**ನಾಭಾಗ**—ಸೂರ್ಯ ವಂಶದ ಅರಸು ವೈವಸ್ವತ ಮನುವಿನ ಮಗ. [ಆದಿ. ೬೯] ವಿಷ್ಣುಭಕ್ತಾಗ್ರೇಸರನಾದ ಅಂಬರೀಷ ಈತನ ಮಗ [ಭಾಗ.-೯-೪] ಈತ ಸ್ವಯಂ ಭೂತೀರ್ಥಯಾತ್ರೆಗಾಗಿ ಹೊರಟಿದ್ದಾಗ ಬ್ರಹ್ಮಸರೋವರದಲ್ಲಿದ್ದ ಒಂದು ತಾವರೆ ಹೂವನ್ನು ಅಗಸ್ತ್ಯ ಮುನಿ ಕುಯ್ದು ಅಗಸ್ತ್ಯ ಮುನಿಯ ಮೂಲಕ ಧರ್ಮಶ್ರವಣಮಾಡಬೇಕೆಂಬ ಅಭಿಲಾಷೆಯಿಂದ ಇಂದ್ರ ಗೋಪ್ಯವಾಗಿ ಆ ಹೂವನ್ನು ಅಪಹರಿಸಿದ ಅಗಸ್ತ್ಯ ಸುತ್ತಮುತ್ತಣ ರಾಜರನ್ನೂ ಮುನಿಗಳನ್ನೂ ಕಳ್ಳರೆಂದು ಶಂಕಿಸುತ್ತಿರುವಲ್ಲಿ ಒಬ್ಬೊಬ್ಬರೂ ತಾನು ಕದಿಯಲಿಲ್ಲವೆಂದು ಪ್ರತಿಜ್ಞೆಮಾಡಿದರು. ಆಗ ನಾಭಾಗನೂ ಆಣೆಯಿಟ್ಟುಕೊಂಡ. ಆಗ ಇಂದ್ರ ಆ ಹೂವನ್ನು ತಾನು ಅಪಹರಿಸಿರುವುದಾಗಿ ಹೇಳಿ, ಅದಕ್ಕೆ ಕಾರಣವನ್ನೂ ತಿಳಿಸಿ ಅಗಸ್ತ್ಯನ ಕ್ಷಮೆಯನ್ನು ಬೇಡಿದ [ಅನು. ೧೪೩].

**ನಾಭಿ.**—ಪ್ರಿಯವ್ರತ ಮಹಾರಾಜನ ಪುತ್ರನಾದ ಆಗ್ನೀಧ್ರನಿಂದ ವಿಪ್ರಚಿತ್ತಿಯೆಂಬ ಅಪ್ಸರಸಿಯಲ್ಲಿ ಜನಿಸಿದ ಒಂಬತ್ತು ಮಂದಿ ಮಕ್ಕಳಲ್ಲಿ ಹಿರಿಯವ. ಮೇರು ಪುತ್ರಿಯಾದ ಮೇರುದೇವಿಯೆಂಬವಳನ್ನು ಮದುವೆಯಾಗಿ ಋಷಭದೇವನೆಂಬ ಮಗನನ್ನು ಪಡೆದ. ಈ ನಾಭಿ ರಾಜ ಕಾಪಾಡಿದ ಭೂ ಭಾಗಕ್ಕೆ ಅಜನಾಭ ಅಥವಾ ಭಾರತವರ್ಷವೆಂದು ಹೆಸರು [ಭಾಗ.-೫, ೧-೩].

**ನಾರದ.**—(i) ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಹತ್ತು ಮಂದಿ ಮಾನಸ ಪುತ್ರರಲ್ಲಿ ಕಡೆಯವ ಈತ ಬ್ರಹ್ಮನ ತೊಡೆಯಿಂದ ಜನಿಸಿದವ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಭೃಗು, ದಕ್ಷ, ವಸಿಷ್ಠರೆಂಬ ಒಂಬತ್ತು ಮಂದಿಯೂ ಇವನ ಅಣ್ಣಂದಿರು ಈತ ಬ್ರಹ್ಮಚಾರಿ

ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ಭೃಗುರ್ವಸಿಷ್ಠೋ ದಕ್ಷಶ್ಚ ದಶಮಸ್ತತ್ರ ನಾರದಃ ॥

[ಭಾಗ -೩-೧೨ ಮತ್ಸ್ಯ -೩]

(ii) ಮೇಲೆ ಹೇಳಿದ ನಾರದ ಪರಮೇಶ್ವರನ ಶಾಪದಿಂದ ದೇಹತ್ಯಾಗ ಮಾಡಿ ಮರಳಿ ಜನಿಸಿದ ಈತ ಪರ್ವತ ಮುನಿಯ ಸೋದರಮಾವ [ಭಾರ -ಸಭಾ ೧೦. ಶಾಂತಿ. ೨೯]

ನಾರದಃ ಪರ್ವತಶ್ಚೈವ ದ್ವಾವೃಷೀ ಲೋಕಸತ್ತಮೌ ।
ಮಾತುಲೋ ಭಾಗಿನೇಯಶ್ಚ ದೇವಲೋಕಾದಿಹಾಗತೌ ॥

[ಭಾರ -ಶಾಂತಿ ೩೦]

ಈತ ದೇವರ್ಷಿ. ಈ ನಾರದ ಸೃಂಜಯ ರಾಜನ ಮಗಳಾದ ದಮಯಂತಿಯನ್ನು ಮದುವೆಯಾಗಿದ್ದ [ಭಾರ -ಶಾಂತಿ ೩೦ ದೇ ಭಾ -೬-೨೭]

(iii) ಒಬ್ಬ ಮಹರ್ಷಿ ಈತನಿಗೆ ಅರುಂಧತಿಯೆಂಬ ತಂಗಿಯಿದ್ದಳು. ನಾರದ ಈಕೆಯನ್ನು ವಸಿಷ್ಠನಿಗೆ ಕೊಟ್ಟು ಮದುವೆಮಾಡಿದ [ಲಿಂಗ -೬೩] ಈತನ ಹೆಂಡತಿಯ ಹೆಸರು ಸತ್ಯವತಿ [ಭಾರ.-ಉ. ೧೧೮]

(iv) ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಕಶ್ಯಪ ಋಷಿಯಿಂದ ಮುನಿಯೆಂಬ ಪತ್ನಿಯಲ್ಲಿ ಜನಿಸಿದ ದೇವ ಗಂಧರ್ವರಲ್ಲಿ ಒಬ್ಬ [ಭಾರ.-ಆದಿ ೬೬].

(v) ವಿಶ್ವಾಮಿತ್ರ ಮಹರ್ಷಿಯ ಮಕ್ಕಳಲ್ಲಿ ಒಬ್ಬ. ಈತ ಜನಮೇಜಯನ ಸರ್ಪಸತ್ರದಲ್ಲಿ ಸದಸ್ಯನಾಗಿದ್ದ [ಅನು. ೭] ಪರ್ವತ ಮುನಿಯ ಸೋದರಮಾವನೆಂಬುದಾಗಿ ಪ್ರಖ್ಯಾತಿವೆತ್ತ ಬ್ರಹ್ಮರ್ಷಿಯೆನಿಸಿದ ನಾರದನೇ ಸಾಮಾನ್ಯವಾಗಿ ಪುರಾಣೇತಿಹಾಸಾದಿಗಳಲ್ಲಿ ವರ್ಣಿತನಾಗಿರುವ ನಾರದನೆಂದು ತಿಳಿದುಬರುತ್ತದೆ.

ಸಾಮಾನ್ಯವಾಗಿ ಆಪತ್ತಿಗೆ ಗುರಿಯಾದವರಿಗೆ ತಕ್ಕ ಪ್ರತೀಕಾರವನ್ನು ತೋರಿ, ಸಹಾಯಮಾಡುವುದರ ಮೂಲಕ ಲೋಕಕ್ಕೆ ಮಂಗಳವನ್ನುಂಟುಮಾಡುವುದೇ ಈತನ ಜನ್ಮವ್ರತವಾಗಿತ್ತು. ಈತ ಅಷ್ಟದಿಕ್ಪಾಲಕರ ಸಭೆಗಳಲ್ಲಿಯೂ ತ್ರಿಮೂರ್ತಿಗಳಲ್ಲಿಯೂ ವಿಶೇಷವಾಗಿ ಹೋಗಿಬರುತ್ತ, ಭೂಲೋಕದಲ್ಲಿಯೂ ಸಂಚರಿಸುತ್ತಿದ್ದ ಈ ಕಾರಣದಿಂದ ಈತನಿಗೆ "ತ್ರಿಲೋಕ ಸಂಚಾರಿ"ಯೆಂದು ಹೆಸರು. ದಕ್ಷನ ಮಕ್ಕಳಾದ ಹರ್ಯಶ್ವ, ಶಬಲಾಶ್ವರೆಂಬ ಎರಡು ಪಂಗಡದವರಿಗೂ ಜ್ಞಾನವನ್ನು ಉಪದೇಶಿಸಿ, ಸೃಷ್ಟಿಕಾರ್ಯವಿಮುಖರನ್ನಾಗಿ ಮಾಡಿ "ನಿನಗೆ ಎಲ್ಲಿಯೂ ನೆಲೆಯಿಲ್ಲದಿರಲಿ. ನೀನು ಕಲಹಪ್ರಿಯನಾಗಿ ಅಲೆಯುತ್ತಿರು" ಎಂಬುದಾಗಿ ದಕ್ಷನಿಂದ ಶಾಪವನ್ನು ಪಡೆದ [ಶಿವ -ಉಮಾ ೩೧ ವಿಷ್ಣು -೧-೧೫] ನಾರದ ತ್ರಿಪುರಾಸುರರಲ್ಲಿಗೆ ಹೋಗಿ, ಶಿವನೊಂದಿಗೆ ಯುದ್ಧಮಾಡುವಂತೆ ಅವರನ್ನು ಪ್ರೋತ್ಸಾಹಿಸಿ, ಶಿವನ ಮೂಲಕ ಯುದ್ಧದಲ್ಲಿ ತ್ರಿಪುರ ನಾಶಮಾಡಿಸಿದ್ದು ಮಯ ನಾರದರ ಸಂವಾದ [ಮತ್ಸ್ಯ -೧೩೪] ನಾರದ ಮಹಾಭಾರತ ಕಥೆಯನ್ನು ದೇವಲೋಕದಲ್ಲಿ ಪ್ರಚಾರಗೊಳಿಸಿದ್ದು [ಭಾರ -ಆದಿ ೧] ಪಾಂಡವರು ದ್ರೌಪದೀ ಸ್ವಯಂವರಾನಂತರ ವಾರಣಾವತದಲ್ಲಿರುವಾಗ ನಾರದ ಅಲ್ಲಿಗೆ ಬಂದು, ಅವರಿಗೆ ಸುಂದೋಪಸುಂದರ ಕಥೆಯನ್ನು ಹೇಳಿ ಪಾಂಡವರೈವರೂ ಕ್ರಮವಾಗಿ ಒಂದೊಂದು ವರ್ಷದ ಪ್ರಕಾರ ದ್ರೌಪದಿಯ ಸಂಗಡ ಸಂಸಾರಮಾಡಿಕೊಂಡಿರುವಂತೆ ಕಟ್ಟುಮಾಡಿ, ಆ ಕಟ್ಟುಪಾಡಿಗೆ ತಪ್ಪಿದಲ್ಲಿ ಒಂದು ವರ್ಷಕಾಲ ತೀರ್ಥಯಾತ್ರೆ ಮಾಡುವಂತೆ ಅವರಿಂದ ಪ್ರತಿಜ್ಞೆಮಾಡಿಸಿದ್ದು ಇದೇ ನಿಯಮವನ್ನನುಸರಿಸಿ ಪಾಂಡವರು ನಡೆಯುತ್ತಿರಲಾಗಿ ಒಮ್ಮೆ ಸರಿಹೊತ್ತಿನಲ್ಲಿ ಒಬ್ಬ ಬ್ರಾಹ್ಮಣನ ಗೋ ಧನವನ್ನು ಚೋರರು ಅಪಹರಿಸಲಾಗಿ, ಬ್ರಾಹ್ಮಣನ ಮೊರೆಯನ್ನು ಕೇಳಿ, ಶಸ್ತ್ರಶಾಲೆಗೆ ಹೋದ ಅರ್ಜುನ ದ್ರೌಪದೀ ಯುಧಿಷ್ಠಿರರನ್ನು ಮಲಗಿರುವಾಗ ಕಂಡು ತೀರ್ಥಯಾತ್ರೆಗೆ ಹೋದ [ಭಾರ.-ಆದಿ. ೨೩೮, ೨೩೯] ಮತ್ತೊಮ್ಮೆ ಪಾಂಡವರು ಮಯನಿರ್ಮಿತವಾದ ಸಭೆಯಲ್ಲಿರುವಾಗ ನಾರದ ಅಲ್ಲಿಗೆ ಬಂದು ಅಷ್ಟದಿಕ್ಪಾಲಕರ ಸಭೆಗಳ ಸೊಬಗನ್ನು ಬಣ್ಣಿಸಿ, ಸ್ವರ್ಗಲೋಕದಲ್ಲಿದ್ದ ಪಾಂಡು ರಾಜನ ಸ್ಥಿತಿಯನ್ನು ತಿಳುಹಿ, ರಾಜಸೂಯಯಾಗ ಮಾಡಿ, ಅದರ ಫಲವನ್ನು ಪಾಂಡು ರಾಜನಿಗೆ ಧಾರೆಯೆರೆದುಕೊಡುವಂತೆ ಯುಧಿಷ್ಠಿರನನ್ನು ಪ್ರೋತ್ಸಾಹಗೊಳಿಸಿದ್ದು [ಸ ೫-೧೨] ಪಾಂಡವರು ಜೂಜಿನಲ್ಲಿ ರಾಜ್ಯವನ್ನು ಸೋತು ಕಾಮ್ಯಕ ವನದಲ್ಲಿ ವಾಸಮಾಡುತ್ತಿದ್ದಾಗ, ಶ್ರೀ ಕೃಷ್ಣ ಸತ್ಯಭಾಮಾದಿಗಳೊಂದಿಗೆ ಪಾಂಡವರಲ್ಲಿಗೆ ಬಂದಿದ್ದಾಗ ನಾರದ ಮಾರ್ಕಂಡೇಯನ ಸಂಗಡ ಯುಧಿಷ್ಠಿರನಲ್ಲಿಗೆ ಬಂದು, ಆತನನ್ನು ಸಂತವಿಸಿದ [ವನ. ೧೮೫]. ಯುಧಿಷ್ಠಿರ ಗಂಗಾತೀರದಲ್ಲಿ ತನ್ನ ಜ್ಞಾತಿ ಬಾಂಧವರಿಗೆಲ್ಲಾ ಉತ್ತರಕ್ರಿಯೆಗಳನ್ನು ಮಾಡಿದ ತರು

ವಾಯು ನಾರದ ಅಲ್ಲಿಗೆ ಬಂದು ಯುಧಿಷ್ಠಿರನ ಕೋರಿಕೆಯ ಮೇರೆಗೆ ಕರ್ಣನ ವೃತ್ತಾಂತವನ್ನು ಆದ್ಯಂತವಾಗಿ ತಿಳಿಸಿದ [ಶಾಂತಿ. ೧]. ನಾರದ ಪರ್ವತರ ಕಲಹ, ಶಾಪಗಳು [ದ್ರೋ ೫೫. ಶಾಂತಿ. ೨೯] ನಾರದ ಯುಧಿಷ್ಠಿರನಿಗೆ ಸ್ವರ್ಣಷ್ಠೀವಿ ಚರಿತ್ರೆಯನ್ನು ಬಣ್ಣಿಸಿದ್ದು [ಶಾಂತಿ. ೩೦] ಶ್ರೀ ಕೃಷ್ಣ ಉಗ್ರಸೇನನಿಗೆ ನಾರದನ ಗುಣವನ್ನು ತಿಳಿಸಿದ್ದು [ಶಾಂತಿ ೨೩೭] ನಾರದ ಬದರೀ ಕ್ಷೇತ್ರದಲ್ಲಿ ನಾರಾಯಣ ನನ್ನು ಸಂದರ್ಶಿಸಿ, ಆತನ ಅಪ್ಪಣೆಯ ಮೇರೆಗೆ ಶ್ವೇತ ದ್ವೀಪಕ್ಕೆ ಹೋದದ್ದು ಅಲ್ಲಿ ಭಗವಂತನನ್ನು ಹೊಗಳಿದ್ದು ಅಲ್ಲಿದ್ದ ವಿಷ್ಣುವಿನ ಮೂಲಕ ನಾರದ ದಶಾವತಾರ ಚರಿತ್ರೆಯನ್ನು ಕೇಳಿ ತಿಳಿದದ್ದು [ಶಾಂತಿ ೩೪೩-೩೪೮] ಅಕಂಪನ ರಾಜನೊಂದಿಗೆ ಸಂವಾದ [ಶಾಂತಿ. ೨೬೨]. ಜ್ಞಾನ ದುಃಖಾದಿಗಳನ್ನು ನಿವೃತ್ತಿಮಾಡುವು ದೆಂಬ ವಿಷಯವಾಗಿ ಸಮಂಗ ಮುನಿಯೊಂದಿಗೆ ಸಂವಾದಮಾಡಿದ್ದು [ಶಾಂ ೨೯೨] ಮುಕ್ತಿಸಾಧನೆಗಳನ್ನು ಬಣ್ಣಿಸಿ ಗಾಲವ ಮುನಿಯೊಂದಿಗೆ ಸಂವಾದ [ಶಾಂ ೨೯೩]. ವ್ಯಾಸ ಪುತ್ರನಾದ ಶುಕ ಮುನಿಗೆ ಮೋಕ್ಷಮಾರ್ಗ ಪ್ರದರ್ಶನಾರ್ಥವಾಗಿ ಹಿತೋಪ ದೇಶಮಾಡಿದ್ದು [ಶಾಂ. ೩೩೮] ಇಂದ್ರಸಾರಥಿಯಾದ ಮಾತಲಿ ತನ್ನ ಮಗಳಾದ ಗುಣಕೇಶಿಯೆಂಬ ಕನ್ಯೆಗೆ ತಕ್ಕ ವರನನ್ನು ಹುಡುಕುವುದಕ್ಕಾಗಿ ಹೊರಟಾಗ, ನಾರದ ಮಾತಲಿಯ ಸಂಗಡ ಪಾತಾಳ, ಸುಪರ್ಣ, ನಾಗ, ವರುಣ ಲೋಕಗಳಿಗೆ ಹೋದದ್ದು [ಉದ್ಯೋ ೯೮-೧೦೪] ಭೂತಸೃಷ್ಟಿಯ ವಿಷಯವಾಗಿ ಸನತ್ಕುಮಾರ ಮುನೀಶ್ವರನೊಂದಿಗೆ ಸಂವಾದ [ಅನು ೩೮] ಸ್ತ್ರೀಯರ ಪಾತಿವ್ರತ್ಯ ವಿಷಯವಾಗಿ ಮಾರ್ಕಂಡೇಯನೊಂದಿಗೆ ಸಂವಾದ [ಅನು. ೫೭] ಚತುರ್ಯುಗಧರ್ಮ ವಿಷಯ ವಾಗಿ ಮಾರ್ಕಂಡೇಯನೊಂದಿಗೆ ಸಂವಾದ [ಅನು ೫೪]. ಕನ್ಯಾದಾನ ಕಾಲಾದಿ ಗಳ ವಿಚಾರವಾಗಿ ಸಂವಾದ [ಅನು ೫೫] ಮನುಷ್ಯರಿಗೆ ಪೂಜನೀಯರುಗಳಾದ ಗುಣ ಗಳಾವುವೆಂಬ ವಿಷಯವಾಗಿ ಶ್ರೀ ಕೃಷ್ಣನೊಂದಿಗೆ ಸಂವಾದ [ಅನು ೬೬] ಸ್ತ್ರೀಯರ ಸ್ವಭಾವ ವಿಷಯವಾಗಿ ಪಂಚಚೂಡೆಯೆಂಬ ಅಪ್ಸರಸಿಯೊಂದಿಗೆ ಸಂವಾದ [ಅನು ೭೩]. ನಾರಾಯಣನೇ ಸರ್ವೋತ್ತಮನೆಂಬ ವಿಚಾರವಾಗಿ ಪುಣ್ಡರೀಕನೊಂದಿಗೆ ಸಂವಾದ [ಅನು ೧೮೩]. ಪುಷ್ಕರಾಸ್ತ್ರೀಯ ಶಪಥ [ಅನು. ೧೪೩]. ಮರುತ್ತ ರಾಜ ಯಜ್ಞಮಾಡತೊಡಗಿದಾಗ, ಮರುತ್ತನ ಯಾಗಕ್ಕೆ ಸಂವರ್ತನೇ ಯೋಗ್ಯನೆಂದು ಹೇಳಿ, ಸಂವರ್ತ ವಾಸಮಾಡುವ ಸ್ಥಳವನ್ನು ಮರುತ್ತನಿಗೆ ತಿಳಿಸಿದ್ದು [ಅಶ್ವ. ೬]. ಸೃಷ್ಟಿ ವಿಚಾರವಾಗಿ ದೇವತನೆಂಬ ಮುನಿಯೊಂದಿಗೆ ಸಂವಾದ [ಅಶ್ವ ೨೫] ಧೃತ ರಾಷ್ಟ್ರ ಆಶ್ರಮದಲ್ಲಿ ವಾಸಮಾಡುತ್ತಿದ್ದಾಗ ನಾರದ ಆತನಲ್ಲಿಗೆ ಬಂದು ಮುಂದಣ ಫಲವನ್ನು ತಿಳಿಸಿದ್ದು [ಆಶ್ರ. ೨೧, ೨೨]. ವಾಲ್ಮೀಕಿ ಮಹರ್ಷಿಗೆ ರಾಮಾಯಣ ಕಥಾಸಾರವನ್ನು ತಿಳುಹಿ, ರಾಮಾಯಣವನ್ನು ರಚಿಸಲು ವಾಲ್ಮೀಕಿಗೆ ಪ್ರೋತ್ಸಾಹ

ಕೊಟ್ಟದ್ದು [ರಾಮಾ -ಬಾ. ೧] ಅಕಾಲ ಮರಣದಿಂದ ಸತ್ತ ಮಗನನ್ನು ಎತ್ತಿ ಕೊಂಡು ಅರಮನೆಯ ಮುಂದೆ ಹಾಕಿ, ರಾಮನನ್ನು ದೂರುತ್ತಿದ್ದ ಬ್ರಾಹ್ಮಣನ ಮಗನ ಸಾವಿಗಾಗಿ ರಾಮ ಚಿಂತಿಸುತ್ತಿರುವಲ್ಲಿ ನಾರದ ಅಲ್ಲಿಗೆ ಬಂದು, ಶ್ರೀ ರಾಮನಿಗೆ ಯುಗಧರ್ಮಗಳನ್ನು ತಿಳುಹಿದ್ದು [ರಾ -ಉತ್ತ ೭೪] ಸಮಸ್ತ ಧರ್ಮ ಗಳಿಗಿಂತಲೂ ಹರಿಕೀರ್ತನವೇ ಶ್ರೇಷ್ಠವೆಂಬುದಾಗಿ ನಾರದ ವ್ಯಾಸನಿಗೆ ಹೇಳಿದ್ದು [ಭಾಗ.-೧-೫] ಕೃಷ್ಣನಾಮ ಸಂಕೀರ್ತನದಿಂದ ನಾರದನಿಗೆ ಲಭಿಸಿದ ಪುಣ್ಯಾತಿಶಯ ವರ್ಣನೆ [ಭಾಗ -೧-೬] ದಕ್ಷ ಪುತ್ರರೆಲ್ಲರೂ ನಾರದನ ಮಾತಿನಿಂದ ವೈರಾಗ್ಯವನ್ನು ತಳೆಯಲು, "ನೀನು ಯಾವಾಗಲೂ ಅಲೆಯುತ್ತಲೇ ಇರು ನಿನಗೆ ಎಲ್ಲಿಯೂ ಸ್ಥಾನವಿಲ್ಲದೇ ಹೋಗಲಿ" ಎಂಬುದಾಗಿ ದಕ್ಷ ನಾರದನಿಗೆ ಶಾಪ ಕೊಟ್ಟದ್ದು [ಭಾಗ -೫-೩]. ಶೂರಸೇನ ದೇಶದ ಅರಸನಾದ ಚಿತ್ರಕೇತು ರಾಜ ಪುತ್ರಶೋಕ ದಿಂದ ಪೀಡಿತನಾಗಿದ್ದಾಗ, ನಾರದ ಆತನಿಗೆ ತತ್ತ್ವೋಪದೇಶಮಾಡಿದ್ದು [ಭಾಗ -೬-೧೫-೧೬] ಪ್ರಹ್ಲಾದ ಗರ್ಭದಲ್ಲಿರುವಾಗಲೇ ನಾರದ ಆತನಿಗೆ ತತ್ತ್ವವನ್ನು ಉಪದೇಶ ಮಾಡಿದ್ದು [ಭಾಗ -೭-೬, ೭]. ಕೃಷ್ಣನ ಮಹಿಮೆಯನ್ನು ತಿಳಿಯಲು ನಾರದ ದ್ವಾರಕೆಯಲ್ಲಿ ಒಂದೊಂದು ಮನೆಯನ್ನೂ ಹೊಕ್ಕಾಗ ಕೃಷ್ಣ ಏಕ ಕಾಲದಲ್ಲಿ ಅನೇಕ ಮಂದಿ ಅರಸಿಯರ ಮನೆಯಲ್ಲಿ ಸಂಸಾರಮಾಡಿಕೊಂಡಿದ್ದು, ಎಲ್ಲಾ ಕಡೆ ಗಳಲ್ಲಿಯೂ ನಾರದನಿಗೆ ದರ್ಶನವನ್ನಿತ್ತು ತನ್ನ ಮಹಿಮೆಯನ್ನು ತೋರ್ಪಡಿಸಿದ್ದು [ಭಾಗ.-೧೦-೬೯] ನಾರಾಯಣನೊಂದಿಗೆ ಸಂವಾದ [ಭಾಗ -೧೦-೮೭] ಮದ್ರ ದೇಶಾಧಿಪನಾದ ಅಶ್ವಪತಿ ರಾಜನ ಮಗಳಾದ ಸಾವಿತ್ರಿ ಸತ್ಯವಂತನನ್ನು ವರಿಸಿದ ಳೆಂಬ ವಾರ್ತೆಯನ್ನು ಕೇಳಿ, ಸತ್ಯವಂತ ಮದುವೆಯಾದ ಒಂದು ವರ್ಷಕ್ಕೆ ಸರಿ ಯಾಗಿ ಸಾಯುವನೆಂದು ತಿಳುಹಿ, ಆ ಮೂಲಕ ಸಾವಿತ್ರಿ ಜಾಗರೂಕಳಾಗಿದ್ದು ತನ್ನ ಪತಿಯನ್ನು ಬದುಕಿಸಿಕೊಳ್ಳುವುದಕ್ಕೆ ತಕ್ಕ ವ್ರತಾದಿಗಳನ್ನು ಆಚರಿಸಲು ಸೌಕರ್ಯ ಮಾಡಿಕೊಟ್ಟ [ಭಾರ -ವನ ೨೯೪ ಮತ್ಸ್ಯ -೨೦೮] ಯುದ್ಧರಂಗದಲ್ಲಿ ಮಡಿದ ತನ್ನ ಮಗನಿಗಾಗಿ ಗೋಳಾಡುತ್ತಿದ್ದ ಅಕಂಪನ ರಾಜನಲ್ಲಿಗೆ ಹೋಗಿ, ಮೃತ್ಯುವಿನ ಮತ್ತು ಸೃಷ್ಟಿಯ ಕಥೆಯನ್ನು ವಿವರಿಸಿ, ಅಕಂಪನನ ಮನಸ್ಸಿಗೆ ಶಾಂತಿಯನ್ನುಂಟು ಮಾಡಿದ್ದು [ದ್ರೋ ೫೨. ಶಾಂತಿ ೨೬೨] ಶೈಬ್ಯ ರಾಜನಾದ ಸೃಂಜಯನೆಂಬ ಅರ ಸನ ಮಗನಾದ ಸುವರ್ಣಷ್ಠೀವಿಯನ್ನು ಕಳ್ಳರು ಅಪಹರಿಸಿರಲಾಗಿ ನಾರದ ಸೃಂಜಯ ನಲ್ಲಿಗೆ ಬಂದು, ಸುವರ್ಣಷ್ಠೀವಿಯನ್ನು ಬದುಕಿಸಿ, ಸೃಂಜಯನಿಗೆ ಷೋಡಶಮಹಾ ರಾಜ ಚರಿತ್ರೆಯನ್ನು ವರ್ಣಿಸಿ, ಸೃಂಜಯನ ಮಗಳಾದ ಸುಕುಮಾರಿಯನ್ನು ಮದುವೆ ಯಾದದ್ದು [ಶಾಂತಿ. ೨೯]. ಯುಧಿಷ್ಠಿರನಿಗೆ ದಿತಿ ವಂಶವರ್ಣನೆಯನ್ನೂ, ವರ್ಣಾ ಶ್ರಮಧರ್ಮಗಳನ್ನೂ, ಮೋಕ್ಷಲಕ್ಷಣವನ್ನೂ ವಿವರಿಸಿ ಹೇಳಿದ್ದು [ಭಾಗ.-೭].

**ನಾರದೀ** —ನಾರದ ಒಮ್ಮೆ ಶ್ವೇತದ್ವೀಪವನ್ನು ನೋಡಹೋದ, ಅಲ್ಲಿ ಮನ್ಮಥನನ್ನೂ ಅಲ್ಲಗಳೆಯುವಂತಹ ನವಸೌಂದರ್ಯಭರಿತರಾದ ಹಲವು ಮಂದಿ ತರುಣರನ್ನು ಕಂಡು ಭ್ರಾಂತನಾಗಿ, ಮಾಯಾಸ್ವರೂಪ ಎಂತಹುದೆಂದು ತಿಳಿಯುವ ಸಲುವಾಗಿ ವಿಷ್ಣುವನ್ನು ಬೇಡಿದ. ವಿಷ್ಣು ನಾರದನನ್ನು ಗರುಡನ ಮೇಲೆ ಕುಳ್ಳಿರಿಸಿಕೊಂಡು ಕನ್ಯಾಕುಬ್ಜದ ಬಳಿಯಲ್ಲಿ ಇಳಿದು, ತಾನು ದಡದಮೇಲೆಯೇ ನಿಂತು, ನಾರದನನ್ನು ಆ ಕೊಳದಲ್ಲಿ ಸ್ನಾನಮಾಡಹೇಳಿದ. ನಾರದ ಆ ಕೊಳದಲ್ಲಿ ಸ್ನಾನಮಾಡಿದ ಕೂಡಲೇ ನವಮೋಹಿನೀ ರೂಪವನ್ನು ತಳೆದು ಲಜ್ಜಾಭರದಿಂದ ವಿಮುಖನಾದ ಆಗ ವಿಷ್ಣು ನಾರದನ ವೀಣಾ ಕಮಂಡಲುಗಳನ್ನು ತೆಗೆದುಕೊಂಡು ಹೊರಟುಹೋದ ಇಷ್ಟರಲ್ಲಿ ಕನ್ಯಾಕುಬ್ಜದ ಅರಸನಾದ ತಾಲಧ್ವಜ ಅಲ್ಲಿಗೆ ಬಂದು ನಾರದಿಯನ್ನು ಕಂಡು, ಅನಾಥೆಯೆಂದು ತಿಳಿದು, ಕರೆದುಯ್ದು ಮದುವೆಯಾದ. ಬಳಿಕ ನಾರದಿ ತಾಲಧ್ವಜನಿಂದ ವೀರವರ್ಮ, ಸುಧನ್ವ ಮೊದಲಾದ ಇಪ್ಪತ್ತು ಮಂದಿ ಪುತ್ರರನ್ನು ಪಡೆಯಲಾಗಿ, ಆ ಮಕ್ಕಳೆಲ್ಲರೂ ಅಭಿವೃದ್ಧಿಯನ್ನೈದಿ ಪುತ್ರಪೌತ್ರಸಂಪನ್ನರಾದರು ಇಂತಿರಲು ಕೆಲವು ಮಂದಿ ಹಗೆಗಳು ತಾಳಧ್ವಜನ ಮೇಲೆ ದಂಡೆತ್ತಿಬಂದರು ಆಗ ತಾಳಧ್ವಜ, ಪುತ್ರಪರಿವಾರದೊಂದಿಗೆ ಯುದ್ಧದಲ್ಲಿ ಮಡಿದ ನಾರದಿ ಆ ವಾರ್ತೆಯನ್ನು ಕೇಳಿ ರಣರಂಗಕ್ಕೆ ಹೋಗಿ, ಸತ್ತುಬಿದ್ದಿದ್ದ ಪತಿ ಪುತ್ರಾದಿಗಳಿಗಾಗಿ ಗೋಳಾಡುತ್ತಿರುವಲ್ಲಿ ವಿಷ್ಣು ಮುದಿಬ್ರಾಹ್ಮಣ ವೇಷದಿಂದ ಅಲ್ಲಿಗೆ ಬಂದು ನಾರದಿಯನ್ನು ಸಂತವಿಸಿ, ತನ್ನ ಪತಿ ಪುತ್ರರಿಗೆ ತಿಲೋದಕವನ್ನು ಕೊಡುವಂತೆ ಪ್ರೇರಿಸಿ, ಕರೆತಂದು ಪುಂತೀರ್ಥದಲ್ಲಿ ಸ್ನಾನಮಾಡಿಸಲಾಗಿ ನಾರದ ತನ್ನ ಸ್ತ್ರೀ ರೂಪವನ್ನು ಬಿಟ್ಟು ತನ್ನ ಪೂರ್ವರೂಪವನ್ನು ಪಡೆದ [ದೇ. ಭಾಗ -೬-೨೮, ೨೯]

**ನಾರಸಿಂಹ** —ನೋಡು—ನೃಸಿಂಹ

**ನಾರಸಿಂಹಕಲ್ಪ** —ನೃಸಿಂಹಾವತಾರ ನಡೆದ ದಿನ ಈಗ ನಡೆಯುತ್ತಿರುವ (ವೈವಸ್ವತ ಮನ್ವಂತರದ) ಚತುರ್ಮುಖನ ತಿಂಗಳಿನ ಹದಿನಾರನೆಯ ದಿನದಲ್ಲಿ ನೃಸಿಂಹಾವತಾರ ನಡೆದುದಾದುದರಿಂದ ಈ ದಿನಕ್ಕೆ ನಾರಸಿಂಹಕಲ್ಪವೆಂದು ಹೆಸರು ಈಗ ಬ್ರಹ್ಮನ ತಿಂಗಳಿನಲ್ಲಿ ಇಪ್ಪತ್ತಾರನೆಯ ದಿನ ನಡೆಯುತ್ತಿದೆ ಈ ದಿನಕ್ಕೆ ವಾರಾಹ(ಶ್ವೇತವಾರಾಹ) ಕಲ್ಪವೆಂದು ಹೆಸರು [ಮತ್ಸ್ಯ.-೨೮೯].

**ನಾರಾಯಣ**.—ಮಹಾ ವಿಷ್ಣು. ಇಂದ್ರನೂ ದೇವತೆಗಳೂ ನಾರಾಯಣನನ್ನು ಭೂ ಲೋಕದಲ್ಲಿ ಅವತರಿಸುವಂತೆ ಬೇಡಿದ್ದು [ಆದಿ. ೬೫]. ನಾರದ ವಿಷ್ಣುವನ್ನು ಹೊಗಳಿದ್ದು [ಶಾಂತಿ. ೨೧೦]. ನಾರಾಯಣ ಶಬ್ದನಿರ್ವಚನ [ಉದ್ಯೋ ೬೯. ಶಾಂತಿ. ೩೫೦]. ನಾರದನೊಂದಿಗೆ ದೇವ ಪಿತೃ ಕರ್ಮಗಳನ್ನು ಅವಶ್ಯವಾಗಿ ಮಾಡಿಯೇ ತೀರಬೇಕೆಂಬ ವಿಷಯದಲ್ಲಿ ಸಂವಾದ [ಶಾಂತಿ. ೩೪೭]. ನಾರಾಯಣನ ಸರ್ವೋ

ತ್ತ್ವಮತ್ವವರ್ಣನ [ಅನು ೧೪೭]. ನಾರಾಯಣಾಸ್ತ್ರಪ್ರಯೋಗ. ನೋಡು—ಅಶ್ವತ್ಥಾಮ [ದ್ರೋ. ೨೦೦].

**ನಾರಾಯಣೀ.**—(1) ಮೋಹಿನೀ ರೂಪವನ್ನು ಧರಿಸಿದ್ದ ವಿಷ್ಣು [ಆದಿ. ೧೮].

(ii) ಮುದ್ಗಲ ಪತ್ನಿಯಾದ ಇಂದ್ರಸೇನೆಯ ನಾಮಾಂತರ. ನೋಡು—ಮುದ್ಗಲ. ಶಕ್ತಿಸ್ವರೂಪಿಣಿಯಾದ ಪಾರ್ವತಿಗೂ ಈ ಹೆಸರು ಸಲ್ಲುತ್ತದೆ.

**ನಾರೀಕವಚ.**—ಒಬ್ಬ ಅರಸು. ಸೂರ್ಯ ವಂಶದ ಇಕ್ಷ್ವಾಕು ಕುಲದಲ್ಲಿ ಜನಿಸಿದ ಅಶ್ಮಕ ರಾಜನ ಮಗ. ಪರಶುರಾಮ ಕ್ಷತ್ರಿಯನಿರ್ಮೂಲನಾರ್ಥವಾಗಿ ಜೈತ್ರ ಯಾತ್ರೆ ಹೊರಟಿದ್ದಾಗ ಈತ ಸ್ತ್ರೀ ವೇಷದಿಂದ ಹೆಂಗಸರ ನಡುವೆ ಅವಿತುಕೊಂಡಿದ್ದ ಕಾರಣ ಈ ಹೆಸರು ಬಂತು ಸೂರ್ಯ ವಂಶದ ಏಳಿಗೆಗೆ ಇವನೇ ಕಾರಣಭೂತ ನಾದುದರಿಂದ ಇವನಿಗೆ ಮೂಲಕನೆಂದು ಹೆಸರು [ಭಾಗ -೯-೯].

**ನಾರೀತೀರ್ಥ**—ಸೌಭದ್ರ, ಪೌಲೋಮ, ಆಗಸ್ತ್ಯ, ಕಾರಂಧಮ, ಭಾರ ಧ್ವಾಜ ಎಂಬುದಾಗಿ ಐದು ಕೊಳಗಳಿಗೂ ಈ ಹೆಸರು ಸಲ್ಲುತ್ತದೆ ಒಮ್ಮೆ ಸಾರ ಭೇಯಿ, ವರ್ನಾ, ಸಮೀಚೀ, ಬುದ್ಬುದಾ, ಲತಾ ಎಂಬ ಐವರು ಅಪ್ಸರಸಿಯರೂ ಒಟ್ಟುಗೂಡಿ ಮಣಿಪುರದ ಸಮೀಪದಲ್ಲಿರುವ ವನದಲ್ಲಿ ಸ್ವೇಚ್ಛೆಯಾಗಿ ಗೀತಾದಿ ಗಳಿಂದ ವಿಹರಿಸುತ್ತಿದ್ದರು. ಅಲ್ಲಿಯೇ ಸ್ವಲ್ಪ ದೂರದಲ್ಲಿ ವೇದಾಧ್ಯಯನ ಮಾಡು ತ್ತಿದ್ದ ಒಬ್ಬ ಮುನಿ ಇವರ ಹಾವಳಿಯಿಂದ ಬೇಸತ್ತು ನೀವು ಐವರೂ ಮೊಸಳೆ ಗಳಾಗಿರಿ ಎಂಬುದಾಗಿ ಶಾಪವಿತ್ತ. ಅಪ್ಸರಸಿಯರು ಹೆದರಿ ಆ ಮುನಿಯನ್ನು ಮರೆಹೊಗಲಾಗಿ ನೂರು ವರ್ಷಗಳ ತರುವಾಯ ಒಬ್ಬ ಮಹಾ ಪುರುಷ ನಿಮ್ಮ ಐದು ಮಂದಿಗೂ ಶಾಪವನ್ನು ಹೋಗಲಾಡಿಸುವನೆಂದು ಅನುಗ್ರಹಿಸಿದ ಪಾಂಡು ಪುತ್ರನಾದ ಅರ್ಜುನ ತೀರ್ಥಯಾತ್ರೆಯ ಸಮಯದಲ್ಲಿ ಮೊತ್ತಮೊದಲು ಸೌಭದ್ರ ತೀರ್ಥದಲ್ಲಿ ಇಳಿಯಲಾಗಿ ಅಲ್ಲಿ ಒಂದು ಮೊಸಳೆ ಆರ್ಜುನನ ಕಾಲನ್ನು ಹಿಡಿದು ಕೊಂಡಿತು ಅರ್ಜುನ ತನ್ನ ಸಾಮರ್ಥ್ಯದಿಂದ ಆ ಮೊಸಳೆಯನ್ನು ಎಳೆದು ದಡದ ಮೇಲೆ ಎಸೆಯಲಾಗಿ, ಆ ಮೊಸಳೆ ದಿವ್ಯಸುಂದರಿಯಾದುದನ್ನು ಕಂಡು, ಅರ್ಜುನ ಆಕೆಯ ಪೂರ್ವೋತ್ತರವನ್ನು ವಿಚಾರಿಸಿ, ತಿಳಿದು ಮಿಕ್ಕ ನಾಲ್ಕು ತೀರ್ಥಗಳಲ್ಲಿಯೂ ಇಳಿದು ಅಂತೆಯೇ ನಾಲ್ಕು ಮೊಸಳೆಗಳನ್ನೂ ಈಚೆಗೆ ತೆಗೆದುಹಾಕಿದ ಬಳಿಕ ಅವರೈವರು ಅಪ್ಸರಸಿಯರೂ ಅರ್ಜುನನನ್ನು ಕೊಂಡಾಡಿ ಕುಬೇರ ಲೋಕಕ್ಕೆ ತೆರಳಿದರು. ಇತ್ತ ಅರ್ಜುನನೂ ಮಣಿಪುರಕ್ಕೆ ಹೋದ [ಆದಿ ೨೩೭. ಸ್ಕಾಂ.-ಕೌಮಾ. ೫].

**ನಾ(ರಾ)ಲಾಯನೀ.**—ಮೌದ್ಗಲ್ಯಮುನಿಯ ಹೆಂಡತಿ. ಈಕೆ ತನ್ನ ಗಂಡನನ್ನು ಅನನ್ಯಭಾವನೆಯಿಂದ ಸೇವಿಸಿ, ಆತನ ಅನುಗ್ರಹವನ್ನು ಪಡೆಯಲಾಗಿ ಮೌದ್ಗಲ್ಯ

ಐದು ದೇಹಗಳನ್ನು ಧರಿಸಿ ನಾಲಾಯನಿಯೊಂದಿಗೆ ಕ್ರೀಡಿಸಿ, ಆಕೆಯನ್ನು ಸಂತೋಷಗೊಳಿಸಿದ. ಈಕೆ ಮರುಜನ್ಮದಲ್ಲಿ ದ್ರೌಪದಿಯಾಗಿ ಜನಿಸಿ ಐವರು ಪತಿಗಳನ್ನು ಮದುವೆಯಾದಳು ದ್ರೌಪದಿಯನ್ನು ಐವರಿಗೆ ಕೊಟ್ಟು ಮದುವೆಮಾಡುವ ವಿಷಯದಲ್ಲಿ ದ್ರುಪದ ಹಿಂಜರಿಯುತ್ತಿದ್ದಾಗ ವ್ಯಾಸ ಈ ಕಥೆಯನ್ನು ದ್ರುಪದನಿಗೆ ಹೇಳಿದ [ಭಾರ.-ಆದಿ ೨೧೨, ೨೧೩].

**ನಾಲಿ(ಲೀ)ಜಙ್ಘ.**—ಒಂದು ಬಕ ಪಕ್ಷಿ ಮಾರ್ಕಂಡೇಯನಿಗಿಂತಲೂ ಹಳೆಯ ಕಾಲದ್ದು. ನೋಡು—ಅಕೂಪಾರ, ಇಂದ್ರದ್ಯುಮ್ನ [ಭಾರ -ವನ. ೨೦೨]

**ನಾಸತ್ಯ.**—ಅಶ್ವಿನೀದೇವತೆಗಳ ನಾಮಾಂತರ

**ನಾಸ್ತಿಕಮತ ಖಂಡನ** —[ಶಾಂತಿ ೨೨೦]

**ನಿರ್ಋತಿ** —(i) ಏಕಾದಶ ರುದ್ರರಲ್ಲಿ ಒಬ್ಬ [ಆದಿ ೬೭].

(ii) ಅಷ್ಟದಿಕ್ಪಾಲಕರಲ್ಲಿ ಒಬ್ಬ ಹೆಂಡತಿ ದೀರ್ಘಾದೇವಿ

(iii) ಅಧರ್ಮನ ಹೆಂಡತಿ. ಭಯ, ಮಹಾಭಯ, ಮೃತ್ಯುಯೆಂಬ ತನಯರನ್ನು ಹೆತ್ತವಳು [ಆದಿ ೬೭]

**ನಿಕುಮ್ಭ** —(i) ಕುಂಭಕರ್ಣನ ಮೂಲಕ ವೃತ್ರಜ್ವಾಲೆಯಲ್ಲಿ ಜನಿಸಿದ ಇಬ್ಬರಲ್ಲಿ ಕಿರಿಯವ ನೋಡು—ಕುಂಭ. ಇವನ ಅಣ್ಣನಾದ ಕುಂಭನನ್ನು ಸುಗ್ರೀವ ಸಂಹರಿಸಲಾಗಿ, ನಿಕುಂಭ ಯುದ್ಧಕ್ಕೆ ಬಂದು ಹನೂಮಂತನಿಂದ ಹತನಾದ. ಯುದ್ಧಕ್ಕೆ ಮೊದಲು ರಾವಣ ಒಡ್ಡೋಲಗವನ್ನು ಕೂಡಿಸಿದ್ದಾಗ ಇವ "ಸೀತೆಯನ್ನು ಹಿಂದಿರುಗಿ ಕೊಡುವುದು ತರವಲ್ಲ ಯುದ್ಧವನ್ನು ಮಾಡಿಯೇತೀರಬೇಕು" ಎಂದು ರಾವಣನಿಗೆ ಹೇಳಿದ ಇವ ಅನೇಕ ಮಾಯೆಗಳನ್ನು ಬಲ್ಲವ [ರಾಮಾ - ಯು. ೭೫].

(ii) ಶಿವನ ಪ್ರಮಥಗಣಗಳಲ್ಲಿ ಒಬ್ಬ

(iii) ದನುಪುತ್ರರಾದ ರಾಕ್ಷಸರಲ್ಲಿ ಒಬ್ಬ [ಆದಿ ೬೬]

(iv) ಪ್ರಹ್ಲಾದನ ಮಗ ಸುಂದೋಪಸುಂದರು ಇವನ ಮಕ್ಕಳು ನೋಡು—ತಾಟಕಾ, ಸುಂದ, ಉಪಸುಂದ [ಭಾರ.-ಆದಿ. ೬೬, ೨೨೯].

**ನಿಕುಮ್ಭಿಲಾ.**—ಲಂಕೆಯಲ್ಲಿ ಒಂದು ಪ್ರದೇಶ. ಇಂದ್ರಜಿತ್ತು ಲಂಕೆಯಲ್ಲಿ ಪಶ್ಚಿಮದ ಒಂದು ಭಾಗದಲ್ಲಿ ಕಾಳೀವಿಗ್ರಹವನ್ನು ಇರಿಸಿ ಆ ದೇವತೆಗೆ ನಿಕುಂಭಿಳೆಯೆಂದು ಹೆಸರಿಟ್ಟು ಪೂಜಿಸುತ್ತಿದ್ದ ಶುಕ್ರಾಚಾರ್ಯನ ಉಪದೇಶಾನುಸಾರವಾಗಿ ಈ ಪ್ರದೇಶದಲ್ಲಿ ಅನೇಕ ಯಜ್ಞಗಳನ್ನೂ ಮಾಡಿದ [ರಾಮಾ.-ಉತ್ತ. ೨೫]. ರಾಮಾಯಣ ಯುದ್ಧದಲ್ಲಿ ಇಂದ್ರಜಿತ್ತು ನಿಕುಂಭಿಳೆಗೆ ಹೋಗಿ ಅಭಿಚಾರಕ್ರಿಯೆಗಳಿಂದ ರಾಮಲಕ್ಷ್ಮಣರನ್ನು ಕೊಲ್ಲಬೇಕೆಂದು ಯಾಗಮಾಡತೊಡಗಿದ. ಇದರ

ಸುಳಿವನ್ನು ತಿಳಿದ ವಿಭೀಷಣ ಕಪಿಸೇನೆಯ ಸಂಗಡ ಲಕ್ಷ್ಮಣನನ್ನು ಅಲ್ಲಿಗೆ ಕರೆದುಯ್ದು, ಕಪಿಗಳ ಮೂಲಕ ಅವನ ಯಾಗವನ್ನು ಹಾಳುಮಾಡಿಸಿ, ಇಂದ್ರಜಿತ್ತಿಗೆ ಸಿಟ್ಟೇರುವಂತೆ ಮಾಡಿ, ಅವನ ಯಜ್ಞವನ್ನು ಹಾಳುಮಾಡಿದ [ರಾ -ಯು. ೮೪, ೮೫].

**ನಿಕೃತಿ**—ಸುಬಲ ರಾಜನ ಮಗಳು ಗಾಂಧಾರಿಯ ಒಡಹುಟ್ಟಿದವಳು. ಧೃತರಾಷ್ಟ್ರನನ್ನೇ ಮದುವೆಯಾಗಿದ್ದಳು. ನೋಡು—ಗಾಂಧಾರಿ.

**ನಿದಾಘ**—ಪುಲಸ್ತ್ಯನ ಮಗ ನೋಡು—ಋಭು.

**ನಿಬನ್ಧನ.**—ವೈರಾಗ್ಯಭರಿತನಾಗಿದ್ದ ಒಬ್ಬ ಮಹರ್ಷಿ ಈತ ತನ್ನ ಜನನಿಯಾದ ಭೋಗವತಿಯ ಸಂಗಡ ಅಧ್ಯಾತ್ಮವಿಚಾರವಾಗಿ ಸಂವಾದಮಾಡಿದ [ಶಾಂತಿ. ೨೦೫].

**ನಿಮಿ.**—(1) ದತ್ತಾತ್ರೇಯ ಮುನಿಯ ಮಗ. ಈತನ ಮಗ ಶ್ರೀಮಂತನೆಂಬ ಮುನಿ ಪಿತೃಪ್ರೀತ್ಯರ್ಥವಾಗಿ ಮಾಡುವ ಶ್ರಾದ್ಧಾದಿಗಳಲ್ಲಿ ಯೋಗ್ಯವಲ್ಲದ ಧಾನ್ಯ, ಶಾಕಾದಿಗಳ ವಿಚಾರವಾಗಿ ಅತ್ರಿ ಮುನಿಯೊಂದಿಗೆ ಸಂವಾದಮಾಡಿದ [ಭಾರ -ಅನು. ೧೩೮].

(ii) ಒಬ್ಬ ಅರಸು ಸೂರ್ಯ ವಂಶದ ಇಕ್ಷ್ವಾಕು ರಾಜನ ಹನ್ನೆರಡನೆಯ ಮಗ ವಿದೇಹ ರಾಜವಂಶದ ಮೂಲಪುರುಷ. ಈತ ಗೌತಮಾಶ್ರಮ ಸಮೀಪದಲ್ಲಿ ವೈಜಯಂತವೆಂಬ ಪಟ್ಟಣವನ್ನು ನಿರ್ಮಿಸಿ, ಅಲ್ಲಿ ರಾಜ್ಯಪಾಲನಮಾಡುತ್ತಿದ್ದ ಒಮ್ಮೆ ಯಾಗವನ್ನು ಮಾಡಬೇಕೆಂಬ ಅಭಿಲಾಷೆಯಿಂದ ತನ್ನ ತಂದೆಯಾದ ಇಕ್ಷ್ವಾಕುವಿನೊಂದಿಗೆ ಯೋಚಿಸಿ ಯಜ್ಞಮಾಡಬೇಕೆಂದು ಸಂಕಲ್ಪಿಸಿ, ತನ್ನ ಕುಲಗುರುವಾದ ವಸಿಷ್ಠನನ್ನು ಕೇಳಿದ ಆಗ ವಸಿಷ್ಠ ತಾನು ಇಂದ್ರನಲ್ಲಿ ಯಜ್ಞಕಾರ್ಯಗಳನ್ನು ನಡೆಯಿಸಲು ಒಪ್ಪಿಕೊಂಡಿರುವ ಕಾರಣ ಅದು ಮುಗಿದ ತರುವಾಯ ಬರುವುದಾಗಿ ಹೇಳಿದ ಬಳಿಕ ನಿಮಿ ಗೌತಮನನ್ನು ಪೌರೋಹಿತ್ಯಕ್ಕೆ ನಿಯಮಿಸಿ ದೀಕ್ಷೆಯನ್ನು ಕೈಕೊಂಡು, ಹಿಮವತ್ಪರ್ವತದ ತಪ್ಪಲಿನಲ್ಲಿ ಶಾಲೆಯನ್ನು ನಿರ್ಮಿಸಿ, ಯಜ್ಞಕ್ಕೆ ಮೊದಲುಮಾಡಿದ ಇಷ್ಟರಲ್ಲಿ ವಸಿಷ್ಠ ಇಂದ್ರನ ಯಾಗವನ್ನು ಪೂರ್ತಿಗೊಳಿಸಿ ಬಂದು ನೋಡುವಲ್ಲಿ, ಗೌತಮನ ಮೂಲಕ ಯಜ್ಞ ನಡೆದು ಮುಗಿಯುವ ಸ್ಥಿತಿಯಲ್ಲಿತ್ತು ಅದೇ ಸಮಯದಲ್ಲಿ ಹಗಲುಹೊತ್ತಿನಲ್ಲಿ ನಿಮಿ ನಿದ್ರಿಸುತ್ತಿದ್ದ ಇವೆರಡು ಕಾರಣಗಳಿಂದ ಕ್ರುದ್ಧನಾದ ವಸಿಷ್ಠ ನಿಮಿ ದೇಹತ್ಯಾಗಮಾಡುವಂತೆ ಶಾಪವಿತ್ತ ನಿದ್ರಿಸುತ್ತಿದ್ದವನನ್ನು ಶಪಿಸಿದುದಕ್ಕಾಗಿ ನಿಮಿ ವಸಿಷ್ಠನಿಗೂ ಅದೇ ಶಾಪವನ್ನೇ ಕೊಟ್ಟ. ನೋಡು—ಜನಕ, ಮಿಥಿ [ರಾಮಾ.-ಉತ್ತ. ೫೫-೫೭].

**ನಿಮಿವಂಶವರ್ಣನೆ.**—[ರಾಮಾ.-ಉತ್ತ. ೫೫ ವಿಷ್ಣು -೪-೫ ಭಾಗ.-೯-೧೩. ವಾಯು.-೮೯].

**ನಿಮ್ನ.**—ಚಂದ್ರವಂಶದ ಯದುಕುಲದಲ್ಲಿ ಜನಿಸಿದ ಅನಮಿತ್ರ ರಾಜನ ಮಧ್ಯಮ ಪುತ್ರ. ಈತನಿಗೆ ಸತ್ರಾಜಿತ, ಪ್ರಸೇನರೆಂಬ ಇಬ್ಬರು ಪುತ್ರರು ಜನಿಸಿದರು. ನೋಡು—ಸ್ಯಮಂತಕ

**ನಿಯುತಾಯು.**—ಕಲಿಂಗ ದೇಶಾಧಿಪತಿಯಾದ ಶ್ರುತಾಯು ರಾಜನ ಮಗ. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಹತನಾದ [ದ್ರೋ ೯೩].

**ನಿರಮಿತ್ರ.**—(I) ಪಾಂಡು ಪುತ್ರನಾದ ನಕುಲನಿಂದ ಶಿಶುಪಾಲನ ಮಗಳಾದ ರೇಣುಮತಿಯಲ್ಲಿ ಜನಿಸಿದವ [ಆದಿ ೬೩].

(II) ತ್ರಿಗರ್ತ ದೇಶಾಧಿಪತಿಯಾದ ವೀರಧನ್ವನೆಂಬ ರಾಜನ ಮಗ ಭಾರತ ಯುದ್ಧದಲ್ಲಿ ದುರ್ಯೋಧನ ಪಕ್ಷದಲ್ಲಿ ಹೋರಾಡಿ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಸಹದೇವನಿಂದ ಮಡಿದ [ದ್ರೋ ೧೦೭]

**ನಿವಾತಕವಚ**—ಪ್ರಹ್ಲಾದನ ತಮ್ಮನಾದ ಸಂಹ್ಲಾದನ ಪುತ್ರರು ಇವರು ಪರಿವಾರದೊಂದಿಗೆ ಇಂದ್ರನನ್ನು ಪೀಡಿಸುತ್ತ, ತಮ್ಮನ್ನು ಯಾರಾದರೂ ಇದಿರಿಸಿದಲ್ಲಿ ತಾವು ಪರಿವಾರದೊಂದಿಗೆ ಸಮುದ್ರದಲ್ಲಿ ಅವಿತುಕೊಳ್ಳುತ್ತಿದ್ದರು ಹೀಗಿರಲು ಅರ್ಜುನ ವನವಾಸ ಸಮಯದಲ್ಲಿ ಇಂದ್ರಕೀಲ ಪರ್ವತಕ್ಕೆ ಹೋಗಿ ತಪಸ್ಸುಮಾಡಿ, ಪಾಶುಪತಾಸ್ತ್ರವನ್ನು ಶಿವನಿಂದ ಪಡೆದ ತರುವಾಯ ಅಲ್ಲಿಗೆ ಬಂದಿದ್ದ ಇಂದ್ರನ ಸಂಗಡ ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿಯೇ ಕೆಲವು ವರ್ಷಗಳವರೆಗೆ ವಾಸಮಾಡಿಕೊಂಡಿದ್ದ. ಆಗ ಇಂದ್ರ, ಇವರ ಹಾವಳಿಯನ್ನು ಅರ್ಜುನನಿಗೆ ತಿಳಿಸಲಾಗಿ ಅರ್ಜುನ ಇವರನ್ನು ಕೊಂದು, ಇಂದ್ರನಿಗೆ ನೆಮ್ಮದಿಯನ್ನುಂಟುಮಾಡಿ, ವಿಶೇಷವಾದ ಮನ್ನಣೆಯನ್ನು ಪಡೆದ [ಭಾರ.-ವನ. ೧೬೬-೧೭೭]

**ನಿವೃತ್ತಿಧರ್ಮಗಳು.**—ಧರ್ಮಗಳಲ್ಲಿ ಪ್ರವೃತ್ತಿಧರ್ಮಗಳೆಂತಲೂ, ನಿವೃತ್ತಿಧರ್ಮಗಳೆಂತಲೂ ಎರಡು ಬಗೆ. ಪ್ರವೃತ್ತಿಧರ್ಮಗಳು ಕಾಮ್ಯಗಳೆನಿಸುವುವು. ನಿವೃತ್ತಿಧರ್ಮಗಳು ಜ್ಞಾನವನ್ನು ಸಂಪಾದಿಸಿಕೊಡುತ್ತವೆ ಇದರ ವರ್ಣನೆ [ಭಾರ -ಅನು. ೨೧೧].

**ನಿಶಾಕರ.**—ದಕ್ಷಿಣ ಸಮುದ್ರತೀರದಲ್ಲಿ ವಾಸವಾಗಿದ್ದ ಒಬ್ಬ ಮಹರ್ಷಿ. ಸಂಪಾತಿ, ಜಟಾಯುಗಳು ತಮ್ಮ ಪರಾಕ್ರಮವನ್ನು ಪರೀಕ್ಷಿಸುವುದಕ್ಕಾಗಿ ಹಾರತೊಡಗಿದಾಗ ಸೂರ್ಯನ ತಾಪವನ್ನು ತಡೆದುಕೊಳ್ಳಲಾರದೆ ರೆಕ್ಕೆಗಳನ್ನು ಸುಟ್ಟುಕೊಂಡ ಸಂಪಾತಿ ಈತನ ಆಶ್ರಮದಲ್ಲಿ ಬಿದ್ದು, ಮೂರು ದಿನಗಳ ತರುವಾಯ ಚೇತರಿಸಿಕೊಂಡು, ಆಹಾರವಿಲ್ಲದೆ ಸೊಕ್ಕಿ ಸೊರಗಿದ್ದಾಗ ಈತ ಸಂಪಾತಿಯನ್ನು ಕಂಡು, ಕನಿಕರದಿಂದ ಆದರಿಸಿ, ಮರಣೋನ್ಮುಖನಾಗಿದ್ದ ಸಂಪಾತಿಗೆ ಧೈರ್ಯಹೇಳಿ, " ಮುಂದೆ ತ್ರೇತಾಯುಗದಲ್ಲಿ

ಕಪಿವೀರರು ಸೀತೆಯನ್ನು ಹುಡುಕುತ್ತ ಬಂದಾಗ ನೀನು ಅವರಿಗೆ ವಾಜ್ಮಾತ್ರದಿಂದ ಒತ್ತಾಸೆಮಾಡಿದೆಯಾದರೆ ನಿನಗೆ ಎಂದಿನಂತೆ ರೆಕ್ಕೆಗಳು ಮೊಳೆಯುವುವು ನೀನೂ ಪರಾಕ್ರಮಶಾಲಿಯಾಗುವೆ'' ಎಂಬುದಾಗಿ ಅನುಗ್ರಹಿಸಿದ. ನೋಡು—ಸಂಪಾತಿ, ಜಟಾಯು [ಅಧ್ಯಾ.-ಕಿಷ್ಕಿಂ. ೮. ವಾಲ್ಮೀ. ರಾಮಾ -ಕಿಷ್ಕಿಂ. ೬೦].

**ನಿಶುಂಭ**—ಒಬ್ಬ ರಾಕ್ಷಸ. ಇವನೂ ಇವನ ಅಣ್ಣನಾದ ಶುಂಭನೂ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ತಮಗೆ ಅಯೋನಿಜೆಯಾದ ಕನ್ಯೆಯಿಂದಲ್ಲದೆ ಮತ್ತಾರಿಂದಲೂ ಸಾವು ಬಾರದಂತೆಯೂ ಇದೇ ವಿಧವಾದ ಇತರ ವರಗಳನ್ನೂ ಪಡೆದು ಲೋಕಕಂಟಕರಾಗಿದ್ದರು ಇಂತಿರಲು ದೇವತೆಗಳು ಆದಿಶಕ್ತಿಯನ್ನು ಹೊಗಳಲಾಗಿ ಆಕೆಯ ದೇಹದಿಂದ ಹೊರಬಂದ ಕೌಶಿಕಿಯೆಂಬ ಸ್ತ್ರೀ ವ್ಯಕ್ತಿ ದೇವತೆಗಳಿಗೆ ಅಭಯವಿತ್ತು, ತಾನು ದಿವ್ಯಸೌಂದರ್ಯಭರಿತವಾದ ಬಾಲೆಯ ರೂಪವನ್ನು ತಳೆದು ಹಿಮವತ್ಪರ್ವತದ ತಪ್ಪಲಿನಲ್ಲಿ ಉಯ್ಯಾಲೆಯಾಡುತ್ತ, ಸಖಿಯರೊಂದಿಗೆ ವಿನೋದವಾಗಿದ್ದಳು ಶುಂಭ ನಿಶುಂಭರ ಸೇನಾಪತಿಗಳಾದ ಚಂಡ, ಮುಂಡರೆಂಬವರು ಈಕೆಯನ್ನು ಕಂಡು ಬೆರಗಾಗಿ ತಮ್ಮ ಪ್ರಭುವಾದ ಶುಂಭನಲ್ಲಿ ಬಿನ್ನವಿಸಿದರು. ಶುಂಭ ಸುಗ್ರೀವನೆಂಬ ರಾಕ್ಷಸನನ್ನು ಈಕೆಯ ಬಳಿಗೆ ದೂತನನ್ನಾಗಿ ಕಳುಹಿ, ತನ್ನನ್ನಾಗಲಿ ಅಥವಾ ತನ್ನ ತಮ್ಮನಾದ ನಿಶುಂಭನನ್ನಾಗಲಿ ಮದುವೆಯಾಗುವಂತೆ ಹೇಳಿಕಳುಹಿದ ದೇವಿ ''ನನ್ನನ್ನು ಯುದ್ಧದಲ್ಲಿ ಸೋಲಿಸಿದವರನ್ನೇ ನಾನು ಮದುವೆಯಾಗುವೆನಲ್ಲದೆ ಇತರರನ್ನು ನಾನು ಮದುವೆಯಾಗಲಾರೆನು ಇದೊಂದು ನನ್ನ ಪ್ರತಿಜ್ಞೆ'' ಎನಲು, ಈ ಮಾತನ್ನು ಕೇಳಿ ತಿಳಿದ ಶುಂಭ ದೇವಿಯನ್ನು ಹಿಡಿತರಲು ದೂತರನ್ನೂ, ಸೇನೆಯನ್ನೂ ಕಳುಹಿ, ಎಲ್ಲವೂ ವ್ಯರ್ಥವಾಗಲು ಕಡೆಗೆ ತಾನೂ ತನ್ನ ತಮ್ಮನೂ ಅಪಾರಸೇನೆಯೊಂದಿಗೆ ದೇವಿಯನ್ನು ಇದಿರಿಸಿ ಯುದ್ಧ ಮಾಡಿದರು. ಮೊದಲು ನಿಶುಂಭ ಹತನಾದ ಬಳಿಕ ಶುಂಭನೂ ಹೋರಾಡಿ ಮಡಿದ ನೋಡು—ಚಂಡ, ರಕ್ತಬೀಜ, ಮುಂಡ, ಶುಂಭ, ಚಾಮುಂಡಾ, ಸಮಾಧಿ, ಸುರಥ [ದೇ ಭಾಗ -೫. ೨೧-೩೧ ಮಾರ್ಕಂ -೮೦-೮೫ ಕಾಲಿಕಾ.-ಉತ್ತ ೬೦]

**ನಿಶ್ಚ್ಯವನ**—ದೇವ ಗುರುವಾದ ಬೃಹಸ್ಪತ್ಯಾಚಾರ್ಯನಿಂದ ಚಂದ್ರ ಪತ್ನಿಯಾದ ತಾರಾದೇವಿಯಲ್ಲಿ ಜನಿಸಿದವ [ವನ. ೨೨೧].

**ನಿಷಧ.**—(I) ಮೇರು ಪರ್ವತದ ಸುತ್ತಲಿರುವ ಒಂದು ಪರ್ವತ. ಸಪ್ತಕುಲ ಪರ್ವತಗಳಲ್ಲಿ ಒಂದು [ಸಭಾ. ೨೯. ಭೀ ೬].

(II) ಭಾರತವರ್ಷದ ಒಂದು ದೇಶ ದಮಯಂತಿಯ ಪತಿಯಾದ ನಳ ಇದರ ಅರಸು [ಭೀ. ೯. ವನ. ೫೦].

(iii) ಜಂಬೂ ದ್ವೀಪದೊಳಗಣ ಒಂದು ಮಹಾಪರ್ವತ. ಇದು ಹರಿವರ್ಷಕ್ಕೆ ಉತ್ತರದಿಕ್ಕಿನಲ್ಲಿ ಪೂರ್ವ ಪಶ್ಚಿಮ ಸಮುದ್ರಗಳನ್ನು ಹೊಕ್ಕಿರುತ್ತದೆ. ಇದರಲ್ಲಿ ವಿಷ್ಣುಪದವೆಂಬ ಸರೋವರವಿದೆ [ಭಾಗ.-೫-೧೬].

**ನೀತಿ** —ಕಣಿಕ ಧೃತರಾಷ್ಟ್ರನಿಗೆ ಹೇಳಿದ್ದು [ಆದಿ ೧೫೩] ನಾರದ ಯುಧಿಷ್ಠಿರನಿಗೆ ಹೇಳಿದ್ದು [ಸಭಾ. ೫]. ಧೌಮ್ಯ ಪಾಂಡವರಿಗೆ ಹೇಳಿದ್ದು [ವಿರಾ ೫]. ವಿದುರ ಧೃತರಾಷ್ಟ್ರನಿಗೆ ಹೇಳಿದ್ದು [ಉದ್ಯೋ ೩೩-೪೦]. ಸಾಮಾನ್ಯ ನೀತಿಕಥನ [ಆದಿ. ೮೧. ಸಭಾ ೮೬ ವನ ೩೨ ಶಾಂತಿ ೮೧, ೧೬೬. ಅನು ೩೫]. ಶ್ರೀರಾಮ ಭರತನಿಗೆ ಹೇಳಿದ್ದು [ರಾಮಾ.-ಅಯೋ. ೧೦೦]

**ನೀಪ** —ಚಂದ್ರ ವಂಶದ ವಿಭ್ರಾಜ ರಾಜನ ಕಿರಿಯ ಮಗ. ಅಣುಹನೆಂಬುದು ಇವನ ನಾಮಾಂತರ ಇವ ವ್ಯಾಸ ಪುತ್ರನಾದ ಶುಕಾಚಾರ್ಯನ ಮಗಳಾದ ಕೃತ್ವಿ ಅಥವಾ ಕೀರ್ತಿಮತಿಯನ್ನು ಮದುವೆಯಾಗಿ ಬ್ರಹ್ಮದತ್ತನೆಂಬ ಮಗನನ್ನು ಪಡೆದ [ಹರಿ -೧-೧೯. ಮತ್ಸ್ಯ.-೨೦, ೨೧].

**ನೀಲ** —(i) ವೈಡೂರ್ಯಮಯವಾದ ಒಂದು ಪರ್ವತ ಇದು ರಮ್ಯಕ ವರ್ಷದ ಉತ್ತರಕ್ಕೆ ಲವಣಸಮುದ್ರದ ಈಚೆಗೆ ಇದೆ [ಸಭಾ. ೨೮ ಭೀ ೬].

(ii) ಕುಬೇರನ ನವನಿಧಿಗಳಲ್ಲಿ ಎಂಟನೆಯದು.

(iii) ಸುಗ್ರೀವನ ಕಪಿನಾಯಕರಲ್ಲಿ ಒಬ್ಬ. ಕುಂಭಕರ್ಣನ ಮಗನಾದ ಕುಂಭನೇ ಮೊದಲಾದವರೊಂದಿಗೆ ಅನೇಕ ಬಾರಿ ಯುದ್ಧಮಾಡಿದ [ರಾಮಾ - ಯು. ೪೩]

(iv) ಒಬ್ಬ ಅರಸು ಅನೂಪ ದೇಶದಲ್ಲಿ ರಾಜ್ಯಭಾರಮಾಡುತ್ತಿದ್ದ. ಕಾರ್ತವೀರ್ಯಾರ್ಜುನನ ವಂಶದವ [ಆದಿ ೨೦೧. ಸಭಾ ೩೨ ಉದ್ಯೋ. ೧೯]. ಏಕರಥ [ಉದ್ಯೋ ೧೬೬] ಇವ ಯುದ್ಧಮಾಡಿದ್ದು [ಭೀ ೯೪]. ಇವ ಪಾಂಡವರ ಪರವಾಗಿ ಹೋರಾಡಿ ಹನ್ನೆರಡನೆಯ ದಿನದ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದ [ದ್ರೋ ೩೧].

(v) ಮಾಹಿಷ್ಮತೀ ನಗರದ ಅರಸು ಪಾಂಡವರ ರಾಜಸೂಯ ಯಾಗಕ್ಕೆ ಮೊದಲು ಸಹದೇವ ಜೈತ್ರಯಾತ್ರೆ ಹೊರಟಾಗ ಅವನನ್ನು ಮರೆಹೊಕ್ಕು ಕಪ್ಪ ಕಾಣಿಕೆಗಳನ್ನು ಒಪ್ಪಿಸಿದ [ಸಭಾ ೩೧]

**ನೀಲಕಣ್ಠ**—ಶಿವನ ನಾಮಾಂತರ ಕ್ಷೀರಸಮುದ್ರವನ್ನು ದೇವ ದಾನವರು ಒಟ್ಟುಗೂಡಿ ಮಥನಮಾಡಿದಾಗ ಅದರಿಂದ ವಿಷ ಹೊರಬಂತು. ಆಗ ಶಿವ ದೇವತೆಗಳ ಪ್ರಾರ್ಥನೆಯ ಮೇರೆಗೆ ಅದನ್ನು ಪಾನಮಾಡಿ. ತನ್ನ ಕೊರಳಿನಲ್ಲಿಯೇ ನಿಲ್ಲಿಸಿಕೊಂಡ. ಅಂದಿನಿಂದ ಶಿವನಿಗೆ ನೀಲಕಂಠನೆಂದು ಹೆಸರು [ಆದಿ. ೧೮. ಭಾಗ.-೮-೭].

**ನೀಲಧ್ವಜ.**—ಒಬ್ಬ ಅರಸು. ನರ್ಮದಾ ನದೀತೀರದಲ್ಲಿ ಮಾಹಿಷ್ಮತೀ ನಗರಿಯನ್ನು ಆಳುತ್ತಿದ್ದ. ಈತನಿಗೆ ಸುನಂದೆಯೆಂಬ ಹೆಂಡತಿಯಲ್ಲಿ ಪ್ರವೀರನೆಂಬ ಮಗ ಜನಿಸಿದ. ಜ್ವಾಲೆಯೆಂಬವಳು ಮತ್ತೊಬ್ಬ ಹೆಂಡತಿ. ಇವಳಲ್ಲಿ ಸ್ವಾಹೆಯೆಂಬ ಮಗಳು ಜನಿಸಿದಳು. ಅಗ್ನಿ ಸ್ವಾಹೆಯನ್ನು ಮದುವೆಯಾಗಿ ಮಾವನ ಮನೆಯಲ್ಲಿಯೇ ಇದ್ದು, ಆತನ ಪಟ್ಟಣವನ್ನು ಕಾಪಾಡುತ್ತಿದ್ದ. ಪಾಂಡವರ ಅಶ್ವಮೇಧದ ಕುದುರೆ ಮಾಹಿಷ್ಮತಿಯ ಬಳಿಯಲ್ಲಿ ನಡೆತಂದಾಗ ನೀಲಧ್ವಜನ ಮಗನಾದ ಪ್ರವೀರ ತನ್ನ ಮಡದಿಯಾದ ಮದನಮಂಜರಿಯೊಂದಿಗೆ ವನವಿಹಾರಮಾಡುತ್ತಿದ್ದು ಯಜ್ಞಾಶ್ವವನ್ನು ಕಂಡು ಅಡ್ಡಗಿಸಿದ. ಕರ್ಣಪುತ್ರನಾದ ವೃಷಕೇತು ಯುದ್ಧಮಾಡಿ ಸೋತುಹೋದ. ಬಳಿಕ ಅನುಸಾಲ್ವ ಯುದ್ಧಕ್ಕೆ ನಿಂತ. ಆಗ ನೀಲಧ್ವಜ ಈ ಸಮಾಚಾರವನ್ನು ಕೇಳಿ ತಾನೇ ಬಂದು ಅರ್ಜುನನೊಂದಿಗೆ ಯುದ್ಧಮಾಡಿ, ಅಗ್ನಿಯ ಒತ್ತಾಸೆಯಿಂದ ಅರ್ಜುನನನ್ನು ಹಿಮ್ಮೆಟ್ಟಿಸಿದ. ಆಗ ಅರ್ಜುನ ಅಗ್ನಿಯನ್ನು ಪ್ರಾರ್ಥಿಸಿ ಒಲಿಸಿಕೊಂಡು, ನಾರಾಯಣಾಸ್ತ್ರದಿಂದ ನೀಲಧ್ವಜನ ಕೆಚ್ಚನ್ನು ಮುರಿದ. ಬಳಿಕ ಅಗ್ನಿ ಅರ್ಜುನನಿಗೂ ನೀಲಧ್ವಜನಿಗೂ ಸ್ನೇಹವನ್ನುಂಟುಮಾಡಲಾಗಿ ನೀಲಧ್ವಜ ಅರ್ಜುನನನ್ನು ಅನೇಕ ವಿಧವಾದ ಕಪ್ಪಕಾಣಿಕೆಗಳಿಂದ ಮನ್ನಿಸಿ, ಪಾಂಡವರ ಅಶ್ವಮೇಧಕ್ಕೆ ನೆರನಾದ (ಈ ಕಥೆ ಕನ್ನಡ ಜೈಮಿನಿ ಭಾರತದಲ್ಲಿ ಸ್ವಲ್ಪ ವ್ಯತ್ಯಸ್ತವಾಗಿದೆ) [ಜೈ ಭಾ.-ಅಶ್ವ ೧೫].

**ನೀಲಲೋಹಿತಕಲ್ಪ** —ಚತುರ್ಮುಖನಿಗೆ ಈಗ ನಡೆಯುತ್ತಿರುವ ತಿಂಗಳಿನ ಎರಡನೆಯ ದಿನದಲ್ಲಿ ಶಿವ ನೀಲಲೋಹಿತನೆಂಬ ಹೆಸರಿನಿಂದ ಅವತರಿಸಿದ ಕಾರಣ ಈ ಕಲ್ಪಕ್ಕೆ ನೀಲಲೋಹಿತಕಲ್ಪವೆಂದು ಹೆಸರು [ಮತ್ಸ್ಯ -೨೮೯].

**ನೀಲಾ** —(I) ಭಾರತವರ್ಷದ ಒಂದು ನದಿ [ಭೀ ೯]

(II) ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು. ನೋಡು—ಕೃಷ್ಣ

**ನೃಗ** —ಸೂರ್ಯವಂಶದ ಅರಸು. ಅನೇಕ ಗೋವುಗಳನ್ನು ದಾನಮಾಡಿದವ. ಒಮ್ಮೆ ಈತ ದಾನಮಾಡಿದ್ದ ಒಂದು ಆಕಳು ಹೇಗೋ ತಪ್ಪಿಸಿಕೊಂಡು ಮರಳಿ ಇವನ ಆಕಳುಗಳ ಮಂದೆಯನ್ನೇ ಸೇರಿತು. ಗುರುತಿಸಲಾರದೆ, ನೃಗ ಆ ಆಕಳನ್ನೇ ಮರಳಿ ಇನ್ನೊಬ್ಬ ಬ್ರಾಹ್ಮಣನಿಗೆ ದಾನ ಕೊಟ್ಟ. ಮೊದಲನೆಯ ಬಾರಿ ಪ್ರತಿಗ್ರಹಿಸಿದವ (ದಾನವನ್ನು ತೆಗೆದುಕೊಂಡವ) ತನ್ನ ಆಕಳನ್ನು ಹುಡುಕುತ್ತ ಬಂದು, ಎರಡನೆಯ ಬಾರಿ ಪ್ರತಿಗ್ರಹಮಾಡಿದವನ ಮನೆಯಲ್ಲಿದ್ದ ತನ್ನ ಆಕಳನ್ನು ಗುರುತಿಸಿ ಕೇಳಲಾಗಿ, ಆತ ತನಗೆ ಅದು ನೃಗನ ಮೂಲಕ ದಾನರೂಪವಾಗಿ ಬಂದಿತೆಂದ. ಇಬ್ಬರೂ ರಾಜನಲ್ಲಿಗೆ ಹೋಗಿ ಬಹಳ ಕಾಲ ಕಾದಿದ್ದರು. ರಾಜನ ದರ್ಶನ ದೊರೆಯಲಿಲ್ಲವಾಗಿ, ರಾಜ ಓತಿಯ ರೂಪ(ಕೃಕಲಾಸ ಜನ್ಮ)ವನ್ನು ಪಡೆಯುವಂತೆ ಶಾಪ

ವಿತ್ತು, ಆ ಆಕಳನ್ನು ಇಬ್ಬರೂ ಸೇರಿ ಮೂರನೆಯವನಿಗೆ ದಾನಮಾಡಿಬಿಟ್ಟರು. ಆಗ ನೃಗ ಬ್ರಾಹ್ಮಣರ ಶಾಪವನ್ನು ಕೇಳಿ ಹೆದರಿ ಮರೆಹೊಕ್ಕು ಶಾಪವಿಮೋಚನೆಗಾಗಿ ಬೇಡಿದ ಆಗ ಅವರಿಬ್ಬರೂ ಕೃಷ್ಣಾವತಾರದಲ್ಲಿ ನಿನಗೆ ಶಾಪವಿಮೋಚನೆಯಾಗುವು ದೆಂದು ಹೇಳಿ ಹೋದರು ಬಳಿಕ ನೃಗ ತನ್ನ ಉದ್ಯಾನವನದಲ್ಲಿ ಒಂದು ಬಿಲವನ್ನು ಕಲ್ಪಿಸಿಕೊಂಡು, ರಾಜ್ಯವನ್ನು ತನ್ನ ಮಗನಾದ ವಸುವೆಂಬವನಿಗೆ ಒಪ್ಪಿಸಿ, ತಾನು ಓತಿಯ ರೂಪವನ್ನು ಧರಿಸಿ ಬಿಲದಲ್ಲಿ ವಾಸಮಾಡಿಕೊಂಡಿದ್ದ ಒಮ್ಮೆ ಕೃಷ್ಣ ಇದರ ಬಳಿಗೆ ಬಂದಕೂಡಲೇ ಆ ಓತಿ ತನ್ನ ಪೂರ್ವಜನ್ಮದ ಕಥೆಯನ್ನೆಲ್ಲ ತಿಳುಹಿ ಶಾಪ ದಿಂದ ವಿಮುಕ್ತಿಯನ್ನು ಪಡೆಯಿತು [ರಾಮಾ.-ಉತ್ತ. ೫೩, ೫೪ ಭಾಗ.-೧೦-೬೪]. ಇವ ಇಕ್ಷ್ವಾಕು ರಾಜನ ಮಗ [ಸಭಾ ೮ ವಿರಾ ೫೩].

**ನೃಸಿಂಹ.**—ವಿಷ್ಣುವಿನ ಹತ್ತು ಅವತಾರಗಳಲ್ಲಿ ನಾಲ್ಕನೆಯದು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ನಾಲ್ಕನೆಯ ಕೃತಯುಗದಲ್ಲಿ ಈ ಅವ ತಾರ ನಡೆಯಿತು. ಸಿಂಹದ ಮೋರೆಯಂತೆ ಮುಖವೂ ಮಿಕ್ಕ ಅಂಗಗಳೆಲ್ಲವೂ ಮನುಷ್ಯನ ಹಾಗೆಯೂ ಇದ್ದುದರಿಂದ ನರಸಿಂಹನೆಂದು ಹೆಸರು. ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನನ್ನು ಬಗೆಬಗೆಯಾಗಿ ಹಿಂಸೆಪಡಿಸುತ್ತಿದ್ದಾಗ ರಾಜಾ ಸ್ಥಾನದ ಕಂಭವನ್ನು ಸೀಳಿ ಹೊರಬಂದ [ಭಾರ-ಸ. ೪೬ ವನ ೨೭೩ ಭಾಗ- ೭-೮. ಪದ್ಮ-೬-೨೬೫. ಮತ್ಸ್ಯ.-೪೭ ಹರಿ-೩-೪೨ ದೇ. ಭಾಗ-೪-೧೬] ನೋಡು— ಪ್ರಹ್ಲಾದ ಶಿವ ಶರಭಾವತಾರವನ್ನು ತಳೆದು ನೃಸಿಂಹನನ್ನು ಅಣಗಿಸಿದ್ದು [ಲಿಂಗ ೯೫] ವೀರಭದ್ರ ನೃಸಿಂಹನನ್ನು ಅಣಗಿಸಿದ್ದು [ಲಿಂಗ ೯೬]

**ನೇಪಾಲ**—ಭರತಖಂಡದ ಒಂದು ದೇಶ ವಿದೇಹ ದೇಶಕ್ಕೆ ಉತ್ತರದಲ್ಲಿ ಹಿಮವತ್ಪರ್ವತದಿಂದ ದಕ್ಷಿಣಕ್ಕೆ ಇದೆ [ಭಾರ-ವನ. ೨೫೫]

**ನೈಮಿಶ(ಷ)**—ಗೋಮತೀ ನದೀತೀರದಲ್ಲಿರುವ ಮಹಾ ಪವಿತ್ರವಾದ ಒಂದು ವನ [ಆದಿ ೧ ವನ ೮೨ ಶಲ್ಯ ೩೭] ಅಯೋಧ್ಯೆ ಮತ್ತು ರೋಹಿಲ್ಲಖಂಡದ ರೈಲ್ವೆ ಮಾರ್ಗದಲ್ಲಿ ಸಾಂಡಿಲ (Sandila) ಎಂಬ ಸ್ಟೇಷನ್ನಿನಿಂದ ೨೪ ಮೈಲುಗಳ ದೂರದಲ್ಲಿಯೂ, ಸೀತಾಪುರದಿಂದ ೨೦ ಮೈಲುಗಳ ದೂರದಲ್ಲಿದೆ ಇದನ್ನು ಈಗ (Nimsar) ನಿಮ್ಸಾರವೆಂದು ಕರೆಯುತ್ತಾರೆ ಹಿಂದೆ ದೇವತೆಗಳೆಲ್ಲರೂ ಇಲ್ಲಿ ಒಟ್ಟುಗೂಡಿ ಒಂದು ದೊಡ್ಡ ಯಜ್ಞವನ್ನು ಮಾಡಿದರು [ಆದಿ. ೨೧೪].

**ನೈಷಧ.**—ನಿಷಧ ದೇಶದ ಅರಸನಾದ ನಲ [ವನ ೫೧].

**ನ್ಯಗ್ರೋಧ.**—ಒಂದು ಆಲದ ಮರ. ಅರಗಿನ ಮನೆಯಿಂದ ಪಾರಾದ ಬಳಿಕ, ಆ ರಾತ್ರಿ ಪಾಂಡವರು ಇದರ ಅಡಿಯಲ್ಲಿ ಕುಳಿತಿದ್ದರು ಇಲ್ಲಿಯೇ ಹಿಡಿಂಬೆ ಭೀಮನನ್ನು ವರಿಸಿ ಮದುವೆಯಾದಳು [ಆದಿ. ೧೬೩]. ಭಾರತ ಯುದ್ಧದ ೧೮ ನೆಯ ದಿನದ ರಾತ್ರಿ

ತಮ್ಮ ಮುಂದಣ ಕರ್ತವ್ಯವನ್ನು ನಿಶ್ಚಯಿಸುವುದಕ್ಕೆ ಅಶ್ವತ್ಥಾಮ, ಕೃಪ, ಕೃತವರ್ಮರು ಇದರಡಿಯಲ್ಲಿ ಕುಳಿತು ಯೋಚಿಸಿದ್ದು [ಶಲ್ಯ. ೩೦]. ಹಾವು ಕಚ್ಚಿ ಸಾಯುಲೆಂದು ಶಾಪಹೊಂದಿದ ಪರೀಕ್ಷಿತನನ್ನು ಬದುಕಿಸಲು ಹೋಗುತ್ತಿದ್ದ ಕಶ್ಯಪನ ಪರೀಕ್ಷೆಗಾಗಿ ತಕ್ಷಕ ಆಲದ ಮರವನ್ನು ಕಚ್ಚಿದ್ದು ಕಶ್ಯಪ ತನ್ನ ಮಂತ್ರಬಲದಿಂದ ಆ ಮರವನ್ನು ಮೊದಲಿನಂತೆ ಮಾಡಿದ್ದು [ಆದಿ. ೪೩]

## ಪ

**ಪಞ್ಚಚೂಡಾ.**—ಒಬ್ಬ ಅಪ್ಸರಸಿ ಸ್ತ್ರೀಯರ ಸ್ವಭಾವ, ಗುಣದೋಷಾದಿಗಳ ವಿಷಯವಾಗಿ ನಾರದನೊಂದಿಗೆ ಸಂವಾದಮಾಡಿದಳು [ಭಾರ.-ಅನು ೭೩].

**ಪಞ್ಚಜನ.**—(I) ಒಬ್ಬ ಬ್ರಹ್ಮ ಈತ ತನ್ನ ಮಗಳಾದ ಅಸಿಕ್ನಿಯೆಂಬವಳನ್ನು ಚಾಕ್ಷುಷ ಮನ್ವಂತರದ ದಕ್ಷನಿಗೆ ಕೊಟ್ಟು ಮದುವೆಮಾಡಿದ. ನೋಡು—ದಕ್ಷ [ಭಾಗ -೬-೫].

(II) ಪ್ರಹ್ಲಾದನ ತಮ್ಮನಾದ ಸಂಹ್ಲಾದ ದೈತ್ಯನ ಮಗ ಇವ ಶ್ರೀಕೃಷ್ಣನ ಗುರುವಾದ ಸಾಂದೀಪಿನಿಯ ಮಗನನ್ನು ಕದ್ದುಯ್ದು ಸಮುದ್ರದಲ್ಲಿ ಅಡಗಿಕೊಂಡಿದ್ದ. ಬಲರಾಮ ಕೃಷ್ಣರು ಸಾಂದೀಪಿನಿಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ತರುವಾಯ, "ಯಾವ ವಿಧವಾದ ಗುರುದಕ್ಷಿಣೆಯನ್ನು ಸಮರ್ಪಿಸಬೇಕು?" ಎಂಬುದಾಗಿ ಸಾಂದೀಪಿನಿಯನ್ನು ಬೇಡಿದರು. ಆಗ ಗುರು ಪ್ರಭಾಸಕ್ಷೇತ್ರದಲ್ಲಿ ಮೃತನಾದ ತನ್ನ ಮಗನನ್ನೇ ತಂದೊಪ್ಪಿಸಬೇಕೆಂದು ಹೇಳಿದ ರಾಮ ಕೃಷ್ಣರು ಸಮುದ್ರತೀರವನ್ನು ಸೇರಿದೊಡನೆಯೇ, ಸಮುದ್ರ ರಾಜ ಮೈದೋರಿ ಇವರಿಬ್ಬರನ್ನೂ ಸತ್ಕರಿಸಿದ. ರಾಮ ಕೃಷ್ಣರು ತಮ್ಮ ಗುರುಪುತ್ರನನ್ನು ಕೊಡು ಎಂದು ಕೇಳಿದರು. ಸಮುದ್ರ "ನಿಮ್ಮ ಗುರುಪುತ್ರನನ್ನು ಅಪಹರಿಸಿದವ ನಾನಲ್ಲ ಪಂಚಜನನೆಂಬ ಅಸುರ ಅಪಹರಿಸಿದ್ದಾನೆ" ಎನಲು, ಬಲರಾಮ ಕೃಷ್ಣರು, ಸಮುದ್ರವನ್ನು ಹೊಕ್ಕು ಅಸುರನನ್ನು ಸಂಹರಿಸಿ, ಅವನ ದೇಹದಲ್ಲಿ ಗುರುಪುತ್ರನನ್ನು ಕಾಣದೆ, ಪಾಂಚಜನ್ಯವೆಂಬ ಶಂಖವನ್ನು ತೆಗೆದುಕೊಂಡು ಯಮಲೋಕಕ್ಕೆ ಹೋಗಿ, ಗುರುಪುತ್ರನನ್ನು ಕರೆತಂದು ಸಾಂದೀಪಿನಿಗೆ ಒಪ್ಪಿಸಿದರು [ಭಾಗ -೧೦-೪೫].

**ಪಞ್ಚತೀರ್ಥ.**—ನೋಡು—ನಾರೀತೀರ್ಥ

**ಪಞ್ಚನದ.**—ಐದು ನದಿಗಳುಳ್ಳ ಕ್ಷೇತ್ರ ಶತದ್ರು, ವಿಪಾಶಾ, ಇರಾವತಿ, ಚಂದ್ರಭಾಗಾ, ವಿತಸ್ತಾ ಎಂಬ ಐದು ನದಿಗಳೂ ಪಂಜಾಬಿನಲ್ಲಿ ಹರಿಯುವ ಕಾರಣ ಈ ದೇಶಕ್ಕೆ ಪಂಚನದವೆಂದು ಹೆಸರು [ಸಭಾ. ೩೫. ವನ. ೮೦].

**ಪಂಚನಳೀಯ.**—ದಮಯಂತೀ ಸ್ವಯಂವರ ಸಮಯದಲ್ಲಿ ಲೋಕಪಾಲರಾದ ಇಂದ್ರ, ಅಗ್ನಿ, ಯಮ, ವರುಣರು ನಾಲ್ವರೂ ದಮಯಂತಿಯನ್ನು ಬಯಸಿ, ಸಭಾ ಮಂಟಪದಲ್ಲಿ ನಳನಂತೆಯೇ ರೂಪವನ್ನು ಧರಿಸಿ ಕುಳಿತಿದ್ದರು. ನಿಷಧ ದೇಶಾಧೀಶ್ವರ ನಾದ ನಳನೂ ಅಲ್ಲಿಯೇ ಇದ್ದ. ಅಂತೂ ಐವರೂ ಒಂದೇ ರೂಪದಿಂದ ಕುಳಿತಿದ್ದರು. ಆಗ ದಮಯಂತಿ ಇಂದ್ರಾದಿಗಳನ್ನು ಒಲಿಸಿಕೊಂಡು ನಳನನ್ನೇ ವರಿಸಿ ಮದುವೆ ಯಾದಳು [ಭಾರ.-ವನ. ೫೪].

**ಪಞ್ಚಬಾಣ.**—ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಗಳೆಂಬ ಐದು ಬಾಣಗಳುಳ್ಳವ. ಮನ್ಮಥ.

**ಪಞ್ಚಭೂತಗಳು**—ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಎಂಬ ಈ ಐದನ್ನೂ ಪಂಚಭೂತಗಳೆಂದು ಕರೆಯುತ್ತಾರೆ ಇವುಗಳ ಸೃಷ್ಟಿ [ಶಾಂತಿ ೩೧೫]. ಇವುಗಳ ಗುಣಗಳು [ವನ ೨೧೫ ಭೀ ೫ ಶಾಂತಿ ೧೯೨, ೨೫೮, ೨೬೧ ಅನು. ೩೯, ೨೪೫. ಭಾಗ -೩-೨೬. ವಿಷ್ಣು -೧-೫].

**ಪಞ್ಚವಟೀ.**—ಗೋದಾವರೀ ನದಿಯ ಉತ್ತರದ ದಡದಲ್ಲಿ ನಾಸಿಕಾ(Nasik) ಕ್ಷೇತ್ರದ ಸಮೀಪದಲ್ಲಿರುವ ಒಂದು ಪ್ರದೇಶ ಶ್ರೀರಾಮ ವನವಾಸಕಾಲದಲ್ಲಿ ಅಗಸ್ತ್ಯಾಶ್ರಮದಿಂದ ದಕ್ಷಿಣಕ್ಕೆ ಬರುವಾಗ, ಅಗಸ್ತ್ಯನ ಅಪ್ಪಣೆಯಂತೆ ಇಲ್ಲಿ ಪರ್ಣಶಾಲೆಯನ್ನು ಕಲ್ಪಿಸಿಕೊಂಡು ಸೀತಾ ಲಕ್ಷ್ಮಣರೊಂದಿಗೆ ವಾಸವಾಗಿದ್ದ ಇಲ್ಲಿ ವಿಶಾಲವೂ ಉನ್ನತವೂ ಆಗಿರುವ ಐದು ಆಲದ ಮರಗಳಿರುವುದರಿಂದ ಈ ಪ್ರದೇಶಕ್ಕೆ ಪಂಚವಟಿಯೆಂದು ಹೆಸರು. ಶೂರ್ಪಣಖೆಯ ವಿರೂಪಕರಣವೂ, ಖರಾದಿಗಳ ಸಂಹಾರವೂ, ಸೀತಾಪಹರಣವೂ ಇಲ್ಲಿಯೇ ನಡೆದುವು [ರಾಮಾ -ಅರ ೧೩-೬೮. ಭಾರ.-ವನ. ೮೧].

**ಪಞ್ಚಶಿಖ.**—ಕಪಿಲೆಯೆಂಬವಳ ಮಗ ಬ್ರಹ್ಮಜ್ಞಾನ ಸಂಪನ್ನನಾಗಿದ್ದ ಒಬ್ಬ ಮಹರ್ಷಿ. ಈತ ಜನಕ ರಾಜನೊಂದಿಗೆ ಸಂವಾದಮಾಡಿ, ನಾಸ್ತಿಕಾದಿ ದುಷ್ಟಮತ ಗಳನ್ನು ಖಂಡಿಸಿ, ಆತನಿಗೆ ತತ್ತ್ವೋಪದೇಶಮಾಡಿದ [ಶಾಂತಿ ೨೨೦, ೨೨೧, ೩೨೪] ಈ ಜನಕನಿಗೆ ಜನದೇವನೆಂದು ಹೆಸರು [ಬೃಹನ್ನಾರ.-೪೫].

ಪಞ್ಚಶಿಖ ಶಬ್ದನಿರ್ವಚನ.—[ಶಾಂತಿ. ೨೨೦].

**ಪಞ್ಚಾಪ್ಸರಸ್ತೀರ್ಥ**—ಒಂದು ಸರೋವರ. ದಂಡಕಾರಣ್ಯದಲ್ಲಿದೆ. ಮಾಂಡಿ ಕರ್ಣಿಯೆಂಬ ಮುನಿ ಬಹಳ ಕಾಲದವರೆಗೆ ತಪೋನಿರತನಾಗಿದ್ದಾಗ ಇಂದ್ರ ಇವನ ನಿಯಮವನ್ನು ಭಂಗಗೊಳಿಸುವುದಕ್ಕಾಗಿ ಐವರು ಅಪ್ಸರಸಿಯರನ್ನು ಕಳುಹಿದ. ಮುನಿ ಅವರ ವಿಲಾಸಗಳಿಗೆ ಮನಸೋತು, ಅವರೈದುಮಂದಿಗೂ ಬೇರೆ ಬೇರೆ ಭವನ

ಗಳನ್ನು ನಿರ್ಮಿಸಿ, ತನ್ನ ತಪೋಮಹಿಮೆಯಿಂದ ದಿವ್ಯತಾರುಣ್ಯವನ್ನು ಪಡೆದು, ಅವರೊಂದಿಗೆ ಅನುಗಾಲವೂ ನೃತ್ತಗೀತಾದಿಗಳಿಂದ ವಿಹರಿಸುತ್ತಿದ್ದ. ಸೀತಾ ರಾಮಲಕ್ಷ್ಮಣರು ಸುತೀಕ್ಷ್ಣ ಮುನಿಯ ಆಶ್ರಮದಿಂದ ಅಗಸ್ತ್ಯಾಶ್ರಮಕ್ಕೆ ಹೋಗುತ್ತಿದ್ದಾಗ, ನಿರ್ಮಾನುಷವಾದ ಒಂದು ಪ್ರದೇಶದಲ್ಲಿ ದಿವ್ಯಗೀತಧ್ವನಿಯೂ ಪರಿಮಳವೂ ಇವರ ಮನಸ್ಸನ್ನು ಮೋಹಗೊಳಿಸಿದುವು. ಆಗ ರಾಮ ಇದರ ರಹಸ್ಯವೇನೆಂದು ಕೇಳಲಾಗಿ ಒಬ್ಬ ತಾಪಸ ರಾಮನಿಗೆ ಇದರ ವಿವರವನ್ನು ತಿಳಿಸಿದ [ರಾಮಾ.-ಅರ. ೧೧].

**ಪಂಚಾಲ.**—ಇಂದ್ರಪ್ರಸ್ಥಕ್ಕೆ ಪೂರ್ವ ದಿಕ್ಕಿನಲ್ಲಿರುವ ಒಂದು ದೇಶ. ಇದು ದ್ರುಪದನ ಆಳಿಕೆಗೆ ಒಳಪಟ್ಟಿತ್ತು. ದ್ರೋಣಾಚಾರ್ಯರು ದ್ರುಪದನಿಂದ ಅರ್ಧ ರಾಜ್ಯವನ್ನು ಕಸುಗೊಂಡ ಬಳಿಕ ಇದರಲ್ಲಿ ಉತ್ತರ ಪಂಚಾಲ, ದಕ್ಷಿಣ ಪಂಚಾಲವೆಂದು ಎರಡು ಭಾಗವಾದುವು ದ್ರೋಣ ಅಪಹರಿಸಿದ ಉತ್ತರ ಪಂಚಾಲಕ್ಕೆ ಅಹಿಕ್ಷೇತ್ರ ರಾಜಧಾನಿಯಾಗಿ ಏರ್ಪಟ್ಟಿತು. ದ್ರುಪದನಿಗೆ ಮಿಕ್ಕ ದಕ್ಷಿಣ ಪಂಚಾಲಕ್ಕೆ ಕಾಂಪಿಲ್ಯ ನಗರಿ ರಾಜಧಾನಿಯಾಯಿತು ಇವೆರಡನ್ನೂ ಈಗ ರೋಹಿಲ್ಲಖಂಡ (Rohilkhand) ಎಂದು ಕರೆಯುತ್ತಾರೆ [ಭೀಷ್ಮ. ೯].

**ಪಂಚೇಂದ್ರೋಪಾಖ್ಯಾನ**—ಹಿಂದೆ ದೇವತೆಗಳು ನೈಮಿಶಾರಣ್ಯದಲ್ಲಿ ಸತ್ರ ಯಾಗಮಾಡಿದಾಗ ಯಮನನ್ನು ಪಶುವಿಶಸನಕ್ಕೆ ನಿಯಮಿಸಿದರು. ಯಮ ಆ ಕಾರ್ಯವನ್ನು ಕೈಕೊಳ್ಳಲಾಗಿ ಭೂಲೋಕದಲ್ಲಿ ಮನುಷ್ಯರಿಗೆ ಮರಣವಿಲ್ಲವಾಯಿತು. ಆಗ ಇಂದ್ರಾದಿಗಳು ಬ್ರಹ್ಮನಲ್ಲಿಗೆ ಹೋಗಿ "ಸ್ವಾಮಿ, ಭೂಲೋಕದಲ್ಲಿ ಸಾವೇ ಇಲ್ಲವಾಗಿದೆ ನಮಗೂ ಮನುಷ್ಯರಿಗೂ ಭೇದವೇ ಇಲ್ಲವಾದುದರಿಂದ ನಮ್ಮ ದೊಡ್ಡಸ್ತಿಕೆ ಹಾಳಾಗಿದೆ" ಎಂದರು ಆಗ ಬ್ರಹ್ಮ "ನೀವು ಹೆದರಬೇಡಿ. ದೇವತೆಗಳ ಸತ್ರಯಾಗ ಮುಗಿದಕೂಡಲೇ ಯಮ ತಕ್ಕ ರೀತಿಯಲ್ಲಿ ತನ್ನ ಕರ್ತವ್ಯವನ್ನು ನೆರವೇರಿಸುವನು. ಇಷ್ಟರಲ್ಲಿಯೋ ನೀವು ಹೆದರಕೆಲಸವಿಲ್ಲ" ಎಂದ. ಬಳಿಕ ಇಂದ್ರಾದಿಗಳು ದೇವತೆಗಳ ಸತ್ರಯಾಗಕ್ಕೆ ಬಂದು ನೋಡುವಲ್ಲಿ, ಗಂಗೆಯಲ್ಲಿ ಒಂದು ಸುವರ್ಣಮಯವಾದ ಕಮಲವನ್ನು ಕಂಡು ಆಶ್ಚರ್ಯಭರಿತರಾದರು. ಅಷ್ಟರಲ್ಲಿ ಇಂದ್ರ ಇದು ಎಲ್ಲಿಂದ ಬಂತೆಂದು ಹುಡುಕುತ್ತ ಹೋಗಲಾಗಿ, ಗಂಗೆಯ ಉತ್ಪತ್ತಿಸ್ಥಾನದಲ್ಲಿ ಒಬ್ಬ ದಿವ್ಯಾಂಗನೆ ಅಳುತ್ತ ಸ್ನಾನಮಾಡುತ್ತಿದ್ದಳು. ಆಕೆಯ ಕಂಬನಿಗಳು ಒಂದೊಂದೂ ಒಂದು ಸ್ವರ್ಣಕಮಲಗಳಾಗುತ್ತಿದ್ದುವು. ಇಂದ್ರ "ನೀನು ಯಾರು ?" ಎಂಬುದಾಗಿ ಆಕೆಯನ್ನು ಪ್ರಶ್ನೆಮಾಡಲಾಗಿ ಆಕೆ ಇಂದ್ರನನ್ನು ತನ್ನ ಸಂಗಡ ಕರೆದುಕೊಂಡು ಪರ್ವತಶಿಖರಕ್ಕೆ ಹೋದಳು. ಅಲ್ಲಿ ಪರಮೇಶ್ವರ ಸೌಂದರ್ಯಭರಿತನಾದ ಒಬ್ಬ ಯುವಕನಾಗಿ ತನ್ನ ಪತ್ನಿಯೊಂದಿಗೆ

ಚದುರಂಗವನ್ನು ಆಡುತ್ತಿದ್ದ. ಆತ ಇಂದ್ರನನ್ನು ಲೆಕ್ಕಿಸಲಿಲ್ಲ. ತ್ರಿಲೋಕಾಧಿಪತಿಯಾದ ಇಂದ್ರನಿಗೆ ಅಭಿಮಾನಮೂಲಕವಾದ ಸಿಟ್ಟು ತಲೆಗೇರಿತು ಆ ಯುವಕ ಇಂದ್ರನನ್ನು ಓರೆಗಣ್ಣಿನಿಂದ ನೋಡಲಾಗಿ ಇಂದ್ರ ಕಂಬದಂತೆ ಅತ್ತಿತ್ತ ಅಲುಗಲಾರದೆ ನಿಂತುಬಿಟ್ಟ ಚದುರಂಗ ಮುಗಿದ ತರುವಾಯ ಆ ಯುವಕ ತನ್ನ ಮುಂದೆ ಅಳುತ್ತ ನಿಂತಿದ್ದ ಆ ತರುಣಿಯನ್ನು ಕರೆದು "ಇಂದ್ರನನ್ನು ಇಲ್ಲಿಗೆ ಕರೆದುಕೊಂಡು ಬಾ" ಎನಲು ಆ ತರುಣಿ ಇಂದ್ರನನ್ನು ಸೋಕಿದಕೂಡಲೇ ಅವ ಮೂರ್ಛೆಹೋಗಿ ನೆಲದಮೇಲೆ ಬಿದ್ದುಬಿಟ್ಟ. ಆಗ ಯುವಕ ಇಂದ್ರನನ್ನು ನೋಡಿ "ಎಲೋ ಮರುಳ, ಇನ್ನು ನಿನ್ನ ಅಹಂಕಾರವನ್ನು ಸಾಕುಮಾಡು. ನೀನು ಬಲಶಾಲಿಯಾಗಿದ್ದ ಪಕ್ಷದಲ್ಲಿ ಈ ಪರ್ವತಶಿಖರದ ಮರೆಸುತ್ತನ್ನು ತಿರುಗಿಸಿ ನೋಡು ಅಲ್ಲಿ ನಿನ್ನಂತಹವರು ಎಷ್ಟು ಮಂದಿ ಇದ್ದಾರೆಂಬುದು ತಿಳಿಯುತ್ತದೆ" ಎಂದ. ಇಂದ್ರ ಶಿಖರವನ್ನು ತಿರುಗಿಸಿ ನೋಡುವಲ್ಲಿ ಅಲ್ಲಿ ನಾಲ್ವರು ಬಿದ್ದಿದ್ದರು. ನಾನೂ ಇವರಂತೆಯೇ ಇಲ್ಲಿ ಎಷ್ಟು ಕಾಲ ಬಿದ್ದಿರಬೇಕೋ! ಅಕಟಾ, ಎಂತಹ ದುರ್ಘಟನೆಯಿದು! ಎಂದು ಭಯಪಡುತ್ತಿರುವಲ್ಲಿ ಆ ಯುವಕ ನಿಜರೂಪದಿಂದ ಅಲ್ಲಿಗೆ ಬಂದು "ಐಶ್ವರ್ಯಮದಮೂಢನಾದ ಇಂದ್ರನೇ, ಬಾಲಿಶತನದಿಂದ ನೀನು ನನ್ನನ್ನು ತಿರಸ್ಕರಿಸಿದೆಯಾಗಿ ಈ ಗುಹೆಯನ್ನು ಹೊಕ್ಕು ಇವರೊಂದಿಗೆ ಬಿದ್ದುಕೊಂಡಿರು" ಎನಲು ಇಂದ್ರ, ಪರಶಿವನನ್ನು ಮರೆಹೊಕ್ಕು "ಮಹಾಪ್ರಭೋ, ನನ್ನ ಅಪರಾಧವನ್ನು ಮನ್ನಿಸಿ ಅನುಗ್ರಹಿಸು" ಎಂದು ಬೇಡಿಕೊಂಡ ಆಗ ಪರಮೇಶ್ವರ "ನಿನ್ನಂತಹ ಗರ್ವಗ್ರಂಥಿಗಳಿಗೆ ಮೇಲ್ಮೆಯೆಂದರೇನು ? ಈ ನಾಲ್ಕು ಮಂದಿಯೂ ನಿನ್ನಂತೆಯೇ ಗರ್ವಿಷ್ಠರಾದುದರಿಂದಲೇ ಇಲ್ಲಿ ಬಿದ್ದಿದ್ದಾರೆ. ಈ ತರುಣಿ ನಿಮ್ಮ ಐವರಿಗೂ ಪತ್ನಿಯಾಗತಕ್ಕವಳು. ನೀವುಗಳೆಲ್ಲರೂ ಮನುಷ್ಯರಾಗಿ ಜನಿಸಿ, ಲೋಕೋತ್ತರ ಧೈರ್ಯ, ಶೌರ್ಯ, ಸಾಮರ್ಥ್ಯಗಳಿಂದ ಅದ್ಭುತಕಾರ್ಯಗಳನ್ನು ನಡೆಯಿಸಿ, ಕೀರ್ತಿವಂತರಾಗಿ ದಿವ್ಯಶಸ್ತ್ರಾಸ್ತ್ರಪ್ರಯೋಗಗಳಿಂದ ಲೋಕಕ್ಕೆಲ್ಲ ಆಶ್ಚರ್ಯವನ್ನುಂಟುಮಾಡಿ ಪುನಃ ಇಂದ್ರಲೋಕಕ್ಕೆ ಬನ್ನಿ" ಎಂದ ಆಗ ಆ ಐವರೂ (ವಿಶ್ವಭುಕ್, ಭೂತಧಾಮಾ, ಶಿಬಿ, ಶಾಂತಿ, ತೇಜಸ್ವಿಯೆಂಬ ಹೆಸರಿನ ಇಂದ್ರರು) "ಸ್ವಾಮಿ, ಹಾಗಾದರೆ ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳೇ ನಮಗೆ ಜನಕರಾಗುವಂತೆ ಅನುಗ್ರಹಿಸು" ಎಂದು ಬೇಡಿಕೊಳ್ಳಲಾಗಿ ಶಿವ "ತಥಾಸ್ತು" ಎಂದ. ಬಳಿಕ ಇವರೆಲ್ಲರೂ ಶಿವನನ್ನು ಬೀಳ್ಕೊಂಡು ನಾರಾಯಣನಲ್ಲಿಗೆ ಹೋಗಿ ಈ ವೃತ್ತಾಂತವನ್ನು ಅರುಹಲಾಗಿ, ಆತ ಅದಕ್ಕೆ ಸಮ್ಮತಿಸಿ ಐದನೆಯ ಇಂದ್ರ ಅರ್ಜುನನಾಗಿ ಹುಟ್ಟುವಂತೆ ಮಾಡಿ, ತನ್ನ ಶರೀರದಿಂದ ಒಂದು ಬಿಳಿಯ ಕೂದಲನ್ನೂ ಒಂದು ಕಪ್ಪು ಕೂದಲನ್ನೂ ಕಿತ್ತು ಬಿಸುಟ. ಬಿಳಿಯಕೂದಲು ರೋಹಿಣೀ

ದೇವಿಯ ಗರ್ಭವನ್ನು ಹೊಕ್ಕು ಬಲರಾಮನಾಗಿಯೂ, ಕರಿಯಕೂದಲು ದೇವಕಿಯ ಗರ್ಭವನ್ನು ಹೊಕ್ಕು ಕೃಷ್ಣನಾಗಿಯೂ ಜನ್ಮಪಡೆದುವು. ಅಳುತ್ತಿದ್ದ ತರುಣಿ ದ್ರೌಪದಿಯಾಗಿ ಅವತರಿಸಿದಳು. ಐವರು ಇಂದ್ರರೂ ಐದು ಮಂದಿ ಪಾಂಡವರು. ದ್ರೌಪದಿಯೇ ಅವರ ರಾಜ್ಯಲಕ್ಷ್ಮಿ [ಭಾರ.-ಆದಿ. ೨೧೪ ಮಾರ್ಕಂ.-೫]

**ಪತಿವ್ರತಾ ಧರ್ಮಗಳು.**—[ವನ ೨೩೪ ಅನು ೧೪೫].

**ಪತಿವ್ರತಾ ಮಾಹಾತ್ಮ್ಯ.**—[ವನ. ೨೦೮. ವಿರಾ. ೨೭].

**ಪದ್ಮ.**—(I) ಕುಬೇರನ ನವನಿಧಿಗಳಲ್ಲಿ ಒಂದು.

(II) ದಕ್ಷಬ್ರಹ್ಮನ ಪುತ್ರಿಯರಲ್ಲಿ ಒಬ್ಬಳಾದ ಕದ್ರುವೆಂಬವಳು ಕಾಶ್ಯಪ ಮುನಿಯಿಂದ ಪಡೆದ ಸರ್ಪರಾಜರಲ್ಲಿ ಒಬ್ಬ ಈತ ಕೇವಲ ಶಾಂತಸ್ವಭಾವದವನೂ ಆತ್ಮವಿದ್ಯಾಸಂಪನ್ನನೂ ಎನಿಸಿದ್ದ [ಭಾರ -ಸಭಾ ೯] ಈತನಿಗೆ ಪದ್ಮನಾಭನೆಂಬುದು ನಾಮಾಂತರ [ಶಾಂತಿ ೩೬೫] ಮಹಾಪದ್ಮಪುರನಿವಾಸಿಯಾದ ಧರ್ಮಾರಣ್ಯನೆಂಬ ಬ್ರಾಹ್ಮಣ ಈತನಲ್ಲಿಗೆ ಹೋಗಿ ಅನೇಕ ಧರ್ಮರಹಸ್ಯಗಳನ್ನೂ, ಅತಿಥಿಸತ್ಕಾರಪ್ರಕಾರವನ್ನೂ, ಶ್ರೇಯಸ್ಸಾಧನಮಾರ್ಗವನ್ನೂ ತಿಳಿದ [ಶಾಂ. ೩೬೩-೩೭೧].

**ಪದ್ಮವ್ಯೂಹ**—ಸೇನೆಯನ್ನು ಚಕ್ರಾಕಾರವಾಗಿ ಏರ್ಪಡಿಸುವುದು ಭಾರತಯುದ್ಧದ ಹದಿಮೂರನೆಯ ಯುದ್ಧದಲ್ಲಿ ದ್ರೋಣ ಕುರುಸೇನೆಯನ್ನು ಚಕ್ರಾಕಾರವಾಗಿ ಏರ್ಪಡಿಸಿದ್ದ. ಇದೇ ಚಕ್ರವ್ಯೂಹದಲ್ಲಿಯೇ ಅಭಿಮನ್ಯು ಹತನಾದುದು [ದ್ರೋ. ೩೪]

**ಪದ್ಮಾಕ್ಷ.**—ಚಂದ್ರಹಾಸನಿಂದ ಕುಂತಲ ರಾಜನ ಮಗಳಾದ ಚಂಪಕಮಾಲಿನಿಯಲ್ಲಿ ಜನಿಸಿದ ಮಗ ನೋಡು—ಚಂದ್ರಹಾಸ [ಜೈ -ಅಶ್ವ ೫೮, ೫೯].

**ಪದ್ಮಾವತಿ**—ಆಕಾಶರಾಯ ಪುತ್ರಕಾಮೇಷ್ಟಿಯಾಗ ಮಾಡಿದಾಗ ಭೂಮಿಯಲ್ಲಿ ದೊರೆತ ಮಗಳು ತಿರುಪತಿ ವೇಂಕಟರಮಣನನ್ನು ಮದುವೆಯಾದಳು [ಸ್ಕಾಂ.-ವೇಂ.ಮಾಹಾ. ೩]

**ಪನಸ.**—ಸುಗ್ರೀವನ ಕಪಿಸೇನಾನಾಯಕರಲ್ಲಿ ಒಬ್ಬ [ರಾಮಾ -ಕಿ. ೩೯]

**ಪಂಪಾ**—(I) ಒಂದು ಸರೋವರ [ರಾಮಾ.-ಅರ ೭೫] ಇದರ ಬಳಿಯಲ್ಲಿ ರಾಮ ಲಕ್ಷ್ಮಣರು ನಡೆತರುವಾಗ ಹನೂಮಂತ ಇವರನ್ನು ಸಂಧಿಸಿ ಸುಗ್ರೀವನಲ್ಲಿಗೆ ಕರೆದುಯ್ದು ಅವರಿಗೆ ಸ್ನೇಹವನ್ನು ಕಲ್ಪಿಸಿದ. ಇದು ಬಳ್ಳಾರಿ ಜಿಲ್ಲೆಯ ಆನೆಗೊಂದಿಯಿಂದ ಎಂಟು ಮೈಲುಗಳ ದೂರವಿರುವ ಋಷ್ಯಮೂಕ ಪರ್ವತದ ಸಮೀಪದಲ್ಲಿದೆ [ಭಾರ.-ವನ. ೨೮೦, ೨೮೧].

(II) ಒಂದು ನದಿ ಮೇಲೆ ಹೇಳಿದ ಪಂಪಾ ಸರೋವರದಿಂದ ಹುಟ್ಟಿ ತುಂಗ ಭದ್ರೆಗೆ ಸೇರುತ್ತದೆ [ರಾಮಾ -ಅರ ೬. ಭಾರ.-ವನ. ೮೨],

**ಪಯೋಷ್ಣೀ** —ಭಾರತ ವರ್ಷದ ಒಂದು ನದಿ. ಇದಕ್ಕೆ ಪೂರ್ಣಾನದಿಯೆಂಬುದು ನಾಮಾಂತರ. ಇದು ಬಿರಾರಿನಲ್ಲಿ ಹರಿದು ತಪತೀ ನದಿಯನ್ನು ಸೇರುತ್ತದೆ [ಭಾರ.-ವನ ೮೫, ೮೬, ೧೨೧. ಭೀ. ೯]. ಪಾಂಡವರು ತೀರ್ಥಯಾತ್ರೆಯ ಸಮಯದಲ್ಲಿ ಇಲ್ಲಿಗೂ ಹೋಗಿದ್ದರು [ವನ. ೧೨೧]. ಇದರ ತೀರದಲ್ಲಿ ಗಯ ರಾಜ ಯಜ್ಞ ಮಾಡಿದ [ವನ ೧೨೨].

**ಪರಪುರಞ್ಜಯ.**—ಹೈಹಯ ವಂಶದ ಅರಸು. ಒಮ್ಮೆ ಈತ ಬೇಟೆಗೆ ಹೋಗಿದ್ದಾಗ ಮೃಗವೆಂಬ ಭ್ರಾಂತಿಯಿಂದ ಒಬ್ಬ ಋಷಿಕುಮಾರನನ್ನು ಕೊಂದ. ಬಳಿಕ ಬ್ರಾಹ್ಮಣನೆಂದು ತಿಳಿದು ಪಶ್ಚಾತ್ತಾಪಯುಕ್ತನಾಗಿ, ಯಾರ ಮಗನೆಂದು ವಿಚಾರಿಸಿ ತಿಳಿದು ಆ ಮುನಿಯ ತಂದೆಯಾದ ತಾರ್ಕ್ಷ್ಯನೆಂಬ ಋಷಿಯ ಬಳಿ ಸಾರ್ದು ನಡೆದ ಸಮಾಚಾರವನ್ನು ಬಿನ್ನವಿಸಿದ. ಋಷಿ ರಾಜನಿಗೆ ಅಭಯವಿತ್ತು ತನ್ನ ಮಗನನ್ನು ಕರೆಯಲಾಗಿ ಮಡಿದ ಮಗ ಒಡನೆಯೇ ಎದ್ದುಬಂದ ಅರಸು ಇದನ್ನು ಕಂಡು ಆಶ್ಚರ್ಯಭರಿತನಾಗಿ ಇಂತಹ ಮಹಿಮೆ ಹೇಗೆ ಬರುವುದೆಂದು ಕೇಳಲಾಗಿ ತಾರ್ಕ್ಷ್ಯ ಮುನಿ ತನ್ನ ಮಗ ತನಗೆ ಇಚ್ಛಾಮರಣನಾಗುವಂತೆ ವರವನ್ನು ಪಡೆದಿದ್ದಾನೆಂತಲೂ, ಎಲ್ಲಕ್ಕೂ ತಪೋಬಲವೇ ಮಿಕ್ಕದ್ದೆಂತಲೂ ತಿಳಿಸಿ, ಆ ರಾಜನನ್ನು ಕಳುಹಿಸಿಕೊಟ್ಟ ನೋಡು—ತಾರ್ಕ್ಷ್ಯ [ಭಾರ -ವನ. ೧೮೭].

**ಪರಭಾರ್ಯಾಪುತ್ರರು** —ಸಾಮಾನ್ಯವಾಗಿ ಅನೇಕ ಮಂದಿ ಋಷಿಗಳು ಪರಸ್ತ್ರೀಯರಲ್ಲಿ ಜನಿಸಿದವರಾಗಿಯೂ ಪರಸ್ತ್ರೀಯರಲ್ಲಿ ಮಕ್ಕಳನ್ನು ಪಡೆದವರಾಗಿಯೂ ಇರುತ್ತಾರೆ ಇದರ ವಿಚಾರವಾಗಿ ಚರ್ಚೆ ಮತ್ತು ಋಷಿಗಳ ದೊಡ್ಡಸ್ತಿಕೆಗೆ ಅವರ ತಪಸ್ಸು, ವಿದ್ಯೆ ಇವೇ ಮೂಲಕಾರಣ ಎಂಬ ಮುಂತಾದ ವಿವರಗಳು [ಅನು. ೫೩-೫೭].

**ಪರಶುರಾಮ** —ಒಬ್ಬ ಮಹರ್ಷಿ ಭೃಗು ವಂಶದ ಜಮದಗ್ನಿ ಮಹರ್ಷಿಯಿಂದ ಪ್ರಸೇನಜಿತನೆಂಬ ಅರಸನ ಮಗಳಾದ ರೇಣುಕೆಯೆಂಬವಳಲ್ಲಿ ಜನಿಸಿದವ. ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಆರನೆಯ ಅವತಾರ ಮಹಾಪರಾಕ್ರಮಶಾಲಿ [ಭಾರ -ಆದಿ. ೬೭. ಸಭಾ. ೮ ವನ. ೧೧೭. ಉದ್ಯೋ. ೯೬ ಶಲ್ಯ. ೫೦]. ಉನ್ಮತ್ತರಾದ ಕ್ಷತ್ರಿಯರನ್ನು ಧ್ವಂಸಗೊಳಿಸುವ ಉದ್ದೇಶದಿಂದ ವಿಷ್ಣು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ಪರಶುರಾಮನಾಗಿ ಅವತರಿಸಿದ [ದೇ ಭಾ.-೪-೧೬. ಮತ್ಸ್ಯ.-೪೭ ಭಾಗ.-೯,೧೫ ಪದ್ಮ.-೬-೨೬೮. ಬ್ರಹ್ಮ-೧೦. ವಾಯು.-೯೧]. ನೋಡು—ಕರ್ಣ, ಕಶ್ಯಪ, ಕಾರ್ತವೀರ್ಯ, ಕೊಂಕಣ, ಚಿತ್ರರಥ, ಜಮದಗ್ನಿ, ದ್ರೋಣ, ನಾರೀಕವಚ, ಭೀಷ್ಮ ರೇಣುಕಾ, ಸ್ಯಮಂತ

ಪಂಚಕ. ಈತನಿಗೆ ರುಮಣ್ವಂತ, ಸುಷೇಣ, ವಸು, ವಿಶ್ವಾವಸು ಎಂಬುದಾಗಿ ನಾಲ್ವರು ಒಡಹುಟ್ಟಿದವರು [ಭಾರ -ಆದಿ. ೬೭. ವನ. ೧೧೭]. ತಂದೆಯಾದ ಜಮದಗ್ನಿಯ ಅಪ್ಪಣೆಯಮೇರೆಗೆ ತಾಯಿಯಾದ ರೇಣುಕೆಯ ಕೊರಳನ್ನು ಕಡಿದು, ಮರಳಿ ತಂದೆಯ ವರದಿಂದ ಆಕೆಯನ್ನು ಬದುಕಿಸಿದ [ಭಾರ -ವನ. ೧೧೭. ಭಾಗ.-೯, ೧೬] ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನು ಕತ್ತರಿಸಿದ್ದು [ಭಾರ.-ಶಾಂತಿ ೪೮]. ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಪಿತೃಗಳಿಗೆ ತರ್ಪಣಕೊಟ್ಟದ್ದು [ಭಾರ.-ಆದಿ ೨, ೬೫, ೧೧೩. ಅಶ್ವ. ೩೦]. ಶ್ರೀರಾಮನಿಂದ ಭಂಗಪಡೆದು, ತನ್ನಲ್ಲಿದ್ದ ವೈಷ್ಣವತೇಜಸ್ಸನ್ನು ಕಳಕೊಂಡದ್ದು [ರಾಮಾ -ಬಾಲ. ೭೫ ಭಾರ -ವನ ೧೧೭]. ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವಂತೆ ಪರಶುರಾಮ ದುರ್ಯೋಧನನಿಗೆ ತಿಳಿಯಹೇಳಿದ್ದು [ಭಾರ.-ಉದ್ಯೋ. ೯೬]. ಭೀಷ್ಮಾಚಾರ್ಯರೊಂದಿಗೆ ಯುದ್ಧ [ಉದ್ಯೋ ೧೭೯, ೧೮೫] ನೋಡು—ಅಮ್ಬಾ, ಅಂಬಾಲಿಕಾ, ಅಂಬಿಕಾ ಕರ್ಣ ಬ್ರಾಹ್ಮಣವೇಷದಿಂದ ಹೋಗಿ ಪರಶುರಾಮನಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿದ್ದು [ಕರ್ಣ ೩೬]. ಪರಶುರಾಮನಿಂದ ಪಡೆದ ಅಸ್ತ್ರಗಳು ಯುದ್ಧದಲ್ಲಿ ಫಲಿಸದಿರುವಂತೆ ಕರ್ಣ ಶಾಪಹೊಂದಿದ್ದು [ಕರ್ಣ ೩೬. ಶಾಂತಿ. ೩]. ಪರಶುರಾಮ ಸುವರ್ಣಮಾಹಾತ್ಮ್ಯವನ್ನು ಕುರಿತು ವಸಿಷ್ಠನೊಂದಿಗೆ ಸಂವಾದ ಮಾಡಿದ್ದು ವಸಿಷ್ಠನ ಪೂರ್ವಿಕರ ವೃತ್ತಾಂತವನ್ನು ಕೇಳಿ ತಿಳಿದದ್ದು [ಭಾರ.-ಅನು. ೧೩೨] ಪರಶುರಾಮ ದ್ರೋಣನಿಗೆ ಅಸ್ತ್ರವಿದ್ಯಾಭ್ಯಾಸಮಾಡಿಸಿದ್ದು [ಭಾರ.-ಆದಿ. ೧೮೦] ಪರಶುರಾಮ ಅಶ್ವಮೇಧಯಾಗ ಮಾಡಿ, ಭೂಮಂಡಲವನ್ನೆಲ್ಲ ಕಶ್ಯಪನಿಗೆ ದಾನಮಾಡಿದ್ದು [ಭಾರ -ಶಾಂತಿ. ೪೮]. ಪರಶುರಾಮ ಈಗ ನಡೆಯುತ್ತಿರುವ ಏಳನೆಯದಾದ ವೈವಸ್ವತ ಮನ್ವಂತರ ಕಳೆದ ತರುವಾಯ ಎಂಟನೆಯ ಸಾವರ್ಣಿ ಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬನಾಗುವನು [ಭಾಗ.-೮, ೧೩]. ಪರಶುರಾಮನ ಉತ್ಪತ್ತಿ ಮತ್ತು ಕಥೆ [ಭಾರ.-ಆದಿ. ೨, ೮. ಸಭಾ. ೪೯. ವನ. ೧೧೬. ದ್ರೋ. ೭೦. ಕರ್ಣ ೨೮. ಶಾಂತಿ. ೪೮. ಅಶ್ವ ೩೦].

**ಪರಶುರಾಮಾಸ್ತ್ರಪ್ರಯೋಗ**—ಕರ್ಣ ಅರ್ಜುನನ ಸಂಗಡ ಹದಿನೇಳನೆಯ ದಿನ ಯುದ್ಧಮಾಡುವಾಗ, ಕರ್ಣ ಅರ್ಜುನನನ್ನು ಕೊಲ್ಲುವುದಕ್ಕಾಗಿ ಈ ಅಸ್ತ್ರವನ್ನು ಪ್ರಯೋಗಿಸಿದ ಆದರೆ ಅದು ಸಾರ್ಥಕವಾಗಲಿಲ್ಲ [ಭಾರ -ಕರ್ಣ. ೬೭].

**ಪರಾವಸು.**—ರೈಭ್ಯ ಮಹರ್ಷಿಯ ಮಗ ಅರ್ವಾವಸುವೆಂಬವ ಇವನ ಸಹೋದರ [ಭಾರ.-ವನ. ೧೩೭] ಇವನ ತಂದೆಯಾದ ರೈಭ್ಯ ವಿಶ್ವಾಮಿತ್ರ ಮಹರ್ಷಿಯ ಮಗ [ಶಾಂತಿ. ೪೮]. ಭರದ್ವಾಜ ಪುತ್ರನಾದ ಯವಕ್ರೀತ ಅಸೂಯೆಯಿಂದ ಪರಾವಸುವಿನ ಹೆಂಡತಿಯನ್ನು ಮಾನಭಂಗಗೊಳಿಸತೊಡಗಿ, ರೈಭ್ಯನಿಂದ ಹತನಾದ

ನೋಡು—ಯುವಕ್ರೀತ [ಭಾರ.-ವನ. ೧೩೮] ಈತ ಬೃಹದ್ದ್ಯುಮ್ನ ರಾಜನಿಂದ ಯಜ್ಞಮಾಡಿಸಿದ್ದು [ಭಾರ.-ವನ ೧೪೦].

**ಪರಾಶರ.**—ವಸಿಷ್ಠ ಪುತ್ರನಾದ ಶಕ್ತಿ ಮಹರ್ಷಿಯಿಂದ ಅದೃಶ್ಯಂತಿಯೆಂಬಾಕೆ ಯಲ್ಲಿ ಜನಿಸಿದವ. ಇವ ಗರ್ಭದಲ್ಲಿರುವಾಗಲೇ ಶಕ್ತಿ ಮುನಿಯನ್ನು ಒಬ್ಬ ರಾಕ್ಷಸ ಕೊಂದ ನೋಡು—ಕಲ್ಮಾಷಪಾದ. ಶಕ್ತಿ ಮಹರ್ಷಿಯನ್ನು ರಾಕ್ಷಸ ನುಂಗುವಾಗ್ಗೆ ಅದೃಶ್ಯಂತಿ ಗರ್ಭಿಣಿಯಾಗಿದ್ದಳು ಈ ವಿಷಯವನ್ನು ತಿಳಿದಿರಲಿಲ್ಲವಾಗಿ ಸಂತತಿ ವಿಚ್ಛೇದದಿಂದ ಖತಿಗೊಂಡ ವಸಿಷ್ಠ ದೇಹತ್ಯಾಗಮಾಡುವುದಕ್ಕಾಗಿ ಅನೇಕ ವಿಧ ದಿಂದ ಪಾಡುಪಟ್ಟು ತನ್ನ ಪ್ರಯತ್ನಗಳೆಲ್ಲವೂ ವ್ಯರ್ಥವಾಗಲು ಕಡೆಗೆ ಆಶ್ರಮವನ್ನು ಹೊಕ್ಕ ಅದೃಶ್ಯಂತಿ ನಡೆಯುವಾಗ ದಿವ್ಯವಾದ ವೇದಾಧ್ಯಯನ ಧ್ವನಿ ಕೇಳಬಂತು ಆಶ್ಚರ್ಯಭರಿತನಾದ ಮುನಿ ಸೊಸೆಯನ್ನು ಕೇಳಲಾಗಿ, ಸೊಸೆ ಇದ್ದ ಸ್ಥಿತಿಯನ್ನು ಬಿನ್ನವಿಸಿದಳು ಬಳಿಕ ವಸಿಷ್ಠನ ಆತ್ಮ ಶಾಂತಿಯನ್ನೈದಿತು. ಕೆಲ ಕಾಲದಲ್ಲಿಯೇ ಅದೃಶ್ಯಂತಿ ಗಂಡು ಶಿಶುವನ್ನು ಪ್ರಸವಿಸಿದಳು ವಸಿಷ್ಠ ಇವನಿಗೆ ಪರಾಶರನೆಂದು ನಾಮಕರಣಮಾಡಿದ ಸಂತತಿವಿಚ್ಛೇದದಿಂದ ಪರಾಶನಾಗಿದ್ದ (ಜೀವಿತಾಶೆಯನ್ನು ತೊರೆದವ) ವಸಿಷ್ಠ ಮರಳಿ ಎಂದಿನಂತೆ ಗೃಹಸ್ಥಾಶ್ರಮದಲ್ಲಿ ನೆಲೆಗೊಂಡ ಕಾರಣ ಪರಾಶರನೆಂದು ಹೆಸರು (ಪರಾಸ್ತಾ+ಆಶಾ+ಯಸ್ಯಸಃ, ಪರಾಶಃ, ಪರಾಶಂ, ರಾತಿ, ಸ್ವಕಾರ್ಯತತ್ಪರಂ ಕರೋತಿ ಇತಿ ಪರಾಶರಃ)

ಪರಾಶ(ಸು)ಸ್ಸಯತಸ್ತೇನ ವಸಿಷ್ಠಃ ಸ್ಥಾಪಿತೋ ಮುನಿಃ ।
ಗರ್ಭಸ್ಥೇನ ತತೋ ಲೋಕೇ ಪರಾಶರ ಇತಿ ಸ್ಮೃತಃ ॥

[ಭಾರ.-ಆದಿ. ೧೯೪ ಸಭಾ. ೭].

ಪರಾಶರ ತನ್ನ ತಂದೆ ರಾಕ್ಷಸನಿಂದ ಹತನಾದನೆಂಬುದನ್ನು ತಿಳಿದು ಲೋಕವಿನಾ ಶಾರ್ಥವಾಗಿ ಯಜ್ಞಮಾಡತೊಡಗಿದ್ದು [ಆದಿ ೧೯೪] ವಸಿಷ್ಠನ ಉಪದೇಶಾನು ಸಾರವಾಗಿ, ಲೋಕವಿನಾಶಾರ್ಥವಾದ ಯಜ್ಞವನ್ನು ನಿಲ್ಲಿಸಿ, ರಾಕ್ಷಸವಿನಾಶಾರ್ಥ ವಾಗಿ ಯಜ್ಞಮಾಡತೊಡಗಿದ್ದು [ಭಾರ -ಆದಿ ೧೯೭ ಲಿಂಗ -೬೪ ವಿಷ್ಣು.- ]. ಶಿವಮಾಹಾತ್ಮ್ಯವನ್ನು ವಿವರಿಸಿದ್ದು [ಅನು ೪೯]. ಬ್ರಾಹ್ಮಣಾದಿ ನಾಲ್ಕು ವರ್ಣ ಗಳಿಗೂ, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಗೂ ಅನುಷ್ಠೇಯಗಳಾದ ಧರ್ಮ ಗಳನ್ನು ನಿರೂಪಿಸಿದ್ದು. ಯತಿಶುಶ್ರೂಷೆಯ ಪ್ರಶಂಸೆಯನ್ನು ವಿವರಿಸಿದ್ದು [ಅನು. ೧೪೬-೧೪೯]. ಮರಣಸೂಚಕ ಚಿಹ್ನೆಗಳು, ಪುಣ್ಯ ಪಾಪಗಳಿಗೆ ಅನುರೂಪವಾದ ಲೋಕಪ್ರಾಪ್ತಿ, ಮೋಕ್ಷಸಾಧನ ಪ್ರಯತ್ನಗಳನ್ನು ತಿಳಿಸಿದ್ದು [ಅನು. ೧೫೦-೧೫೬]. ಜನಕ ರಾಜನೊಂದಿಗೆ ಶ್ರೇಯಸ್ಸಾಧನೆಯ ವಿಷಯವಾಗಿ ಸಂವಾದಮಾಡಿದ್ದು.

ತಪಸ್ಸು, ಧರ್ಮ, ಮನುಷ್ಯಜನ್ಮ ಮುಂತಾದುವುಗಳ ಪ್ರಶಂಸೆಯನ್ನು ವಿವರಿಸಿದ್ದು [ಶಾಂತಿ. ೨೯೬-೩೦೪]. ಇದನ್ನೇ ಪರಾಶರಗೀತೆಯೆನ್ನುತ್ತಾರೆ.

ಈತ ತೀರ್ಥಯಾತ್ರಾ ವ್ಯಾಜದಿಂದ ಭೂಮಂಡಲವನ್ನೆಲ್ಲ ಸುತ್ತುತ್ತ ಯಮುನಾ ನದಿಯ ಬಳಿಗೆ ಬರುವಲ್ಲಿ, ಬೆಸ್ತರ ಯಜಮಾನ ಊಟಮಾಡುತ್ತಿದ್ದ. ಋಷಿ ಶಾಪ ಕೊಡುವನೆಂಬ ಹೆದರಿಕೆಯಿಂದ ತನ್ನ ಸಾಕುಮಗಳಾದ ಮತ್ಸ್ಯಗಂಧಿ (ಕಾಲಿ, ಅಥವಾ ಸತ್ಯವತಿ) ಎಂಬವಳನ್ನು ದೋಣಿಯನ್ನು ನಡಸಲು ಕಳುಹಿದ. ಆಗ ಪರಾಶರ ಆಕೆಯ ಸೌಂದರ್ಯದಿಂದ ಮೋಹಿತನಾಗಿ, ಆಕೆಯ ಕನ್ಯಾತ್ವಕ್ಕೆ ಭಂಗಬಾರದಿರುವಂತೆ ಅನುಗ್ರಹಿಸಿ, ಆಕೆಯ ದೇಹದ ನಾತ ತೊಲಗಿ ದಿವ್ಯಪರಿಮಳ ಸೂಸುವಂತೆ ಅನುಗ್ರಹಿಸಿ, ದಿವ್ಯಾಭರಣಗಳನ್ನೂ ಉಡಿಗೆತೊಡಿಗೆಗಳನ್ನೂ ತನ್ನ ತಪೋಮಹಿಮೆಯಿಂದ ಕಲ್ಪಿಸಿಕೊಟ್ಟು ಆಕೆಯೊಂದಿಗೆ ಕಲೆತ. ಬಳಿಕ ಸದ್ಯೋಗರ್ಭದಿಂದ ವ್ಯಾಸ ಜನಿಸಿದ ನೋಡು—ಕೃಷ್ಣದ್ವೈಪಾಯನ [ಅದಿ ೬೪] ಪರಾಶರ ಗೋತ್ರಪ್ರವರ್ತಕನಾದ ಮಹರ್ಷಿ [ಮತ್ಸ್ಯ.-೨೦೦]

**ಪರಿ(ರೀ)ಕ್ಷಿತ್.**—(i) ಒಬ್ಬ ಅರಸು ಚಂದ್ರವಂಶದ ಅನಶುಷನ ಮಗ ಈತನ ಜನನಿ ಅಮೃತಾದೇವಿ. ಈತ ಸುವೇಷೆಯೆಂಬ ತರುಣಿಯನ್ನು ಮದುವೆಯಾಗಿ ಭೀಮಸೇನನೆಂಬ ಮಗನನ್ನು ಪಡೆದ [ಭಾರ-ಆದಿ. ೬೩].

(ii) ಚಂದ್ರವಂಶದ ಅವಿಕ್ಷಿತರಾಜನ ಮಗ. ಶಬಲಾಶ್ವ, ಆದಿರಾಜ, ವಿರಾಜ, ಶಾಲ್ಮಲಿ, ಉಚ್ಚೈಶ್ಶ್ರವ, ಭಂಗಾರಕ, ಜಿತಾರಿಯೆಂಬವರು ಇವನ ಒಡಹುಟ್ಟಿದವರು. ಕಕ್ಷಸೇನ ಮೊದಲಾದವರು ಇವನ ಮಕ್ಕಳು [ಆದಿ ೧೦೧].

(iii) ಸೂರ್ಯವಂಶದ ಅರಸು. ಈತ ಒಮ್ಮೆ ಬೇಟೆಗೆ ಹೋಗಿದ್ದಾಗ ಆಯುವೆಂಬ ಮಂಡೂಕರಾಜನ ಪುತ್ರಿಯಾದ ಸುಶೋಭನೆಯೆಂಬ ತರುಣಿಯನ್ನು ಕಂಡು ಮೋಹಿಸಿದ. ಆಗ ಆ ತರುಣಿ "ಎಂದಿಗೂ ನನ್ನನ್ನು ನೀರಿನಲ್ಲಿ ಇಳಿಸದಂತೆ ಜಾಗರೂಕತೆಯಿಂದ ನೋಡಿಕೊಳ್ಳುವುದಾದರೆ ನಾನು ನಿನ್ನನ್ನು ವರಿಸುವೆನು" ಎಂದಳು. ಪರೀಕ್ಷಿತ ಇದಕ್ಕೆ ಸಮ್ಮತಿಸಿದ. ಕೆಲಕಾಲ ಇಬ್ಬರೂ ಸುಖವಾಗಿದ್ದು ಶಲ, ಬಲ, ದಲ ಎಂಬ ಮೂವರು ಮಕ್ಕಳನ್ನು ಪಡೆದರು. ಒಂದು ದಿನ ಪರೀಕ್ಷಿತ ತಾನು ತನ್ನ ಪ್ರಿಯೆಗೆ ಕೊಟ್ಟಿದ್ದ ಭಾಷೆಯನ್ನು ಮರೆತು ಜಲಕೇಳಿಗಾಗಿ ಪ್ರಿಯೆಯೊಂದಿಗೆ ಸರೋವರದಲ್ಲಿ ಇಳಿದ. ಕೂಡಲೇ ಸುಶೋಭನೆ ಮಾಯವಾದಳು. ರಾಜ ತನ್ನ ದೂತರ ಮೂಲಕ ಕೊಳವನ್ನೆಲ್ಲ ಹುಡುಕಿಸಿ, ಕಡೆಗೆ ಅಲ್ಲಿದ್ದ ಕಪ್ಪೆಗಳೇ ತನ್ನ ಪ್ರಿಯೆಯನ್ನು ಅಪಹರಿಸಿರಬೇಕೆಂದು ನಿಶ್ಚಯಿಸಿ ಆ ಕೊಳದಲ್ಲಿದ್ದ ಕಪ್ಪೆಗಳನ್ನೆಲ್ಲ ಕೊಲ್ಲತೊಡಗುವಷ್ಟರಲ್ಲಿ ಮಂಡೂಕರಾಜನಾದ ಆಯು ಅಲ್ಲಿಗೆ ಬಂದು, ಸುಶೋಭನೆ ತನ್ನ ಮಗಳೆಂತಲೂ ಇಂತೆಯೇ ಅನೇಕ ಮಂದಿ ರಾಜಪುತ್ರರು ಆಕೆಯಿಂದ ಮೋಸ

ಹೋಗಿರುವರೆಂತಲೂ ತಿಳಿಸಿದ. ಬಳಿಕ ಪರೀಕ್ಷಿತನ ಬಲಾತ್ಕಾರದಿಂದ ಮರಳಿ ಸುಶೋಭನೆಯನ್ನು ಆತನಿಗೆ ತಂದೊಪ್ಪಿಸಿದ [ಭಾರ.-ವನ. ೧೯೫].

(IV) ಚಂದ್ರ ವಂಶದ ಅರ್ಜುನನ ಮೂಲಕ ಸುಭದ್ರೆಯಲ್ಲಿ ಜನಿಸಿದ ಅಭಿಮನ್ಯುವಿನಿಂದ ವಿರಾಟಪುತ್ರಿಯಾದ ಉತ್ತರೆಯಲ್ಲಿ ಜನಿಸಿದವ [ಭಾರ.-ಆದಿ ೬೩]. ಈತ ಕೃಪಾಚಾರ್ಯನಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿದ [ಆದಿ ೪೯] ಈತ ಉತ್ತರೆಯ ಗರ್ಭದಲ್ಲಿರುವಾಗ ಅಶ್ವತ್ಥಾಮ ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಮೃತನಾಗಿ ಶ್ರೀ ಕೃಷ್ಣನ ಮಹಿಮೆಯಿಂದ ಮರಳಿ ಬದುಕಿಕೊಂಡ [ಅಶ್ವ. ೬೯]. ಈತನ ಉತ್ಪತ್ತಿ ಕಥೆ [ಆದಿ. ೬೮. ಭಾಗ.-೧-೧೨]. ಈತ ಉತ್ತರನ ಮಗಳಾದ ಭದ್ರವತಿ ಅಥವಾ ಇರಾವತಿಯೆಂಬ ತರುಣಿಯನ್ನು ಮದುವೆಯಾಗಿ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮಸೇನರೆಂಬ ನಾಲ್ವರು ತನಯರನ್ನು ಪಡೆದ [ಭಾರ.-ಆದಿ. ೩, ೬೩]. ಶ್ರೀ ಕೃಷ್ಣನಿರ್ಯಾಣಾನಂತರ ಪಾಂಡವರು ಈತನಿಗೆ ರಾಜ್ಯದಲ್ಲಿ ಪಟ್ಟಗಟ್ಟಿ ಮಹಾಪ್ರಸ್ಥಾನಕ್ಕೆ ಹೋದರು [ಮಹಾ. ೧]

ಪರೀಕ್ಷಿತ ಶಬ್ದನಿರ್ವಚನ :—ಈತ ಗರ್ಭದಲ್ಲಿರುವಾಗಲೇ ಸರ್ವವ್ಯಾಪಕನಾದ ಭಗವಂತ ಈತನಿಗೆ ದರ್ಶನವನ್ನಿತ್ತು ಸಲಹಿದ ಕಾರಣ, ಭಗವಂತ ಸರ್ವವ್ಯಾಪಕನು, ಸರ್ವಚರಾಚರಸ್ವರೂಪನೆಂಬ ಭಾವ ಇವನಿಗೆ ಜನ್ಮಸಿದ್ಧವಾಗಿದ್ದುದರಿಂದ ಪರೀಕ್ಷಿತನೆಂದು ಹೆಸರು [ಭಾರ.-ಆದಿ ೬೩]. ವಂಶ ಪರಿಕ್ಷೀಣವಾಗಿದ್ದಾಗ ಹುಟ್ಟಿದವನಾದುದರಿಂದಲೂ ಪರೀಕ್ಷಿತನೆಂದು ಹೆಸರು ಒಮ್ಮೆ ಈತ ರಥಾರೂಢನಾಗಿ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ, ಒಬ್ಬ ಶೂದ್ರ ರಾಜಚಿಹ್ನೆಗಳನ್ನು ಧರಿಸಿ, ಒಂದು ಗೋವನ್ನೂ ಒಂದು ವೃಷಭವನ್ನೂ ಹಿಂಸಿಸುತ್ತಿದ್ದುದನ್ನು ಕಂಡು, ಆ ಗೋವನ್ನು ಭೂದೇವಿಯೆಂತಲೂ ಆ ಪುರುಷನೇ ಕಲಿಪುರುಷನೆಂತಲೂ ಆ ವೃಷಭವೇ ಧರ್ಮವೆಂತಲೂ ತಿಳಿದು, ಆ ಶೂದ್ರನನ್ನು ಹಿಡಿದು ದಂಡಿಸತೊಡಗಲಾಗಿ, ಕಲಿ ಮರೆಹೊಕ್ಕು ಪ್ರಾಣಸಹಿತವಾಗಿ ಓಡಿಹೋದ [ಭಾಗ.-೧-೧೭]. ಈತ ಮೂರು ಸಲ ಅಶ್ವಮೇಧಯಾಗ ಮಾಡಿದ. ಪರೀಕ್ಷಿತ ಸಹಜವಾಗಿಯೇ ನೀತಿವಂತನೂ ಧಾರ್ಮಿಕನೂ, ಬ್ರಾಹ್ಮಣಭಕ್ತನೂ ಆಗಿದ್ದ. ಆದರೆ ಒಮ್ಮೆ ಈತನ ಪ್ರಾರಬ್ಧಯೋಗದಿಂದ ಒಂದು ಅಚಾತುರ್ಯ ನಡೆದು ಪ್ರಾಣವನ್ನೇ ನೀಗಿಕೊಂಡ ಈತ ಬೇಟೆಗೆ ಹೋಗಿದ್ದಾಗ ಶಮೀಕ ಮುನಿಯ ಆಶ್ರಮವನ್ನು ಹೊಕ್ಕ. ಸಮಾಧಿಸ್ಥನಾದ ಮುನಿ ಈತನನ್ನು ಗೌರವಿಸಲಿಲ್ಲ. ಮತ್ತೆ ಯಾರೂ ಆಶ್ರಮದಲ್ಲಿರಲಿಲ್ಲ. ಸಿಟ್ಟುಗೊಂಡ ಪರೀಕ್ಷಿತ ಸಮೀಪದಲ್ಲಿ ಸತ್ತುಬಿದ್ದಿದ್ದ ಒಂದು ಹಾವನ್ನು ತೆಗೆದು ಬಿಲ್ಲಿನ ತುದಿಯಿಂದ ಆ ಮುನಿಯ ಕೊರಳಿಗೆ ಮಾಲೆಹಾಕಿ ಹೋದ. ಸ್ವಲ್ಪಹೊತ್ತಿನಲ್ಲಿಯೇ ಶಮೀಕ ಪುತ್ರನಾದ ಶೃಂಗಿ ಅಲ್ಲಿಗೆ ಬಂದು ನೋಡಿ ಕ್ರೋಧಪರವಶನಾಗಿ " ನಮ್ಮ ತಂದೆಯು

ಕೊರಳಿಗೆ ಸತ್ತಹಾವನ್ನು ಹಾಕಿ ಬ್ರಾಹ್ಮಣಸಂತತಿಗೇ ಅಪಮಾನವನ್ನು ಮಾಡಿದವ ಇಂದಿಗೆ ಏಳು ದಿನಗಳೊಳಗಾಗಿ ಸರ್ಪದಂಶದಿಂದ ಸಾಯಲಿ" ಎಂಬುದಾಗಿ ಶಾಪವಿತ್ತ [ಭಾಗ -೧-೧೬. ಭಾರ.-ಆದಿ. ೪೦, ೪೧, ೪೯, ೫೦]. ಬಳಿಕ ಸಮಾಧಿಯಿಂದ ಎಚ್ಚತ್ತ ಶಮೀಕ ಮುನಿ ತನ್ನ ಮಗನ ಅವಿವೇಕಕ್ಕೆ ಚಿಂತಿಸಿ, ತನ್ನ ಶಿಷ್ಯನನ್ನು ಪರೀಕ್ಷಿತನಲ್ಲಿಗೆ ಕಳುಹಿ, ಶೃಂಗಿಯ ಶಾಪವನ್ನು ಆತನಿಗೆ ತಿಳಿಸಿ, ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡಿಕೊಳ್ಳುವಂತೆ ಹೇಳಿಕಳುಹಿದ. ಪರೀಕ್ಷಿತ ಒಡನೆಯೇ ತನ್ನ ದುಷ್ಕಾರ್ಯಕ್ಕೆ ಮನಮರುಗಿ, ಜನಮೇಜಯನನ್ನು ರಾಜ್ಯದಲ್ಲಿ ನಿಲ್ಲಿಸಿ, ಸರ್ಪಗಳಿಗೆ ಅಗಮ್ಯವಾದ ರೀತಿಯಲ್ಲಿ ಸಮುದ್ರದ ನಡುವೆ ಒಂದು ಎತ್ತರವಾದ ಸೌಧವನ್ನು ಕಲ್ಪಿಸಿ ಪ್ರಾಯೋಪವಿಷ್ಟನಾಗಿ, ವ್ಯಾಸ ಪುತ್ರನಾದ ಶುಕ ಮುನಿಯಿಂದ ಭಾಗವತ ಕಥೆಯನ್ನು ಶ್ರವಣಮಾಡಿದ ಕಡೆಗೆ ಏಳನೆಯ ದಿನದಲ್ಲಿ ಈತನ ಸಂದರ್ಶನಾರ್ಥವಾಗಿ ಬಂದ ಬ್ರಾಹ್ಮಣರು ತಂದುಕೊಟ್ಟ ಹಣ್ಣಿನಲ್ಲಿ ಸರ್ಪ ರಾಜನಾದ ತಕ್ಷಕ ಸೂಕ್ಷ್ಮರೂಪದಿಂದ ಹೊಕ್ಕು, ಆ ಹಣ್ಣನ್ನು ಬ್ರಾಹ್ಮಣ ಕೊಟ್ಟ ಕೂಡಲೇ ಪರೀಕ್ಷಿತ ಅದನ್ನು ಮೂಸಿನೋಡುವಾಗ ಅದರಿಂದ ತಕ್ಷಕ ಹೊರಬಂದು ಇವನನ್ನು ಕಚ್ಚಲಾಗಿ ಪರೀಕ್ಷಿತ ಮೃತನಾದ [ಭಾರ.-ಆದಿ ೪೨, ೫೧. ದೇ.ಭಾ.-೨-೧೦. ಭಾಗ.-೧-೧೮, ೧೯] ಪಾಂಡವರು ಮಹಾಪ್ರಸ್ಥಾನಮಾಡಿದ ತರುವಾಯ ಪರೀಕ್ಷಿತ ಭರತಖಂಡವನ್ನು ಏಕಚ್ಛತ್ರಾಧಿಪತ್ಯದಿಂದ ರಾಜ್ಯಭಾರಮಾಡಿದ. ಭಾರತಯುದ್ಧ ಮುಗಿಯುವಾಗ್ಗೆ ಇವ ಗರ್ಭದಲ್ಲಿದ್ದ ಭಾರತಯುದ್ಧಾನಂತರ ಮೂವತ್ತಾರು ವರ್ಷಗಳಿಗೆ ಕೃಷ್ಣನಿರ್ಯಾಣವಾಯಿತು ನೋಡು—ಕೃಷ್ಣ, ಗಾಂಧಾರಿ. ಕೃಷ್ಣನಿರ್ಯಾಣಾನಂತರ ಪಾಂಡವರು ಮಹಾಪ್ರಸ್ಥಾನಮಾಡಿದರು. ಪರೀಕ್ಷಿತ ಅರುವತ್ತು ವರ್ಷಕಾಲ ಅಂದರೆ ತನ್ನ ಮೂವತ್ತಾರನೆಯ ವರ್ಷದಲ್ಲಿ ರಾಜ್ಯಕ್ಕೆ ಬಂದು ತನ್ನ ತೊಂಬತ್ತಾರನೆಯ ವರ್ಷದಲ್ಲಿ ದೇಹತ್ಯಾಗಮಾಡಿದ [ದೇ ಭಾ.-೨-೧೬]

**ಪರಿಶ್ರವ**—ಪಾಂಡವರಿಗಿಂತಲೂ ಹಳೆಯವನಾದ ಪರೀಕ್ಷಿತ ರಾಜನ ಮಗನಾದ ಭೀಮಸೇನನ ಮಗ ಜನನಿ ಸುಕುಮಾರಿಯೆಂಬವಳು. ಈತನಿಗೆ ಪ್ರತೀಪನೆಂಬುದು ನಾಮಾಂತರ ಈತ ಶೈಬ್ಯ ರಾಜಪುತ್ರಿಯಾದ ಸುಂದರಿಯೆಂಬವಳನ್ನು ಮದುವೆಯಾಗಿ ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರು ಪುತ್ರರನ್ನು ಪಡೆದ [ಭಾರ.-ಆದಿ ೬೩] ಗಂಗೆ ಈತನನ್ನು ಮದುವೆಯಾಗಲು ಬಯಸಿದ್ದು. ಆ ವಿಷಯವಾಗಿ ಪರಿಶ್ರವನಿಗೂ ಗಂಗೆಗೂ ಸಂವಾದ ಪರಿಶ್ರವ ತಪಸ್ಸುಮಾಡುತ್ತಿದ್ದಾಗ ಗಂಗೆ ಅವನ ತೊಡೆಯಮೇಲೆ ಬಂದು ಕುಳಿತು ತನ್ನನ್ನು ಮದುವೆಮಾಡಿಕೊಳ್ಳಹೇಳಲಾಗಿ ಪರಿಶ್ರವ "ನೀನು ನನ್ನ ಬಲತೊಡೆಯಮೇಲೆ ಕುಳಿತೆಯಾಗಿ ನೀನು

ನನ್ನ ಮಗಳಂತಾಗಿರುವೆ ಆದುದರಿಂದ ನಾನು ನಿನ್ನನ್ನು ಮದುವೆಯಾಗಬಾರದು. ನೀನು ನನ್ನ ಮಗನನ್ನು ಮದುವೆಯಾಗುವೆಯಂತೆ'' ಎಂದುಹೇಳಿದ [ಭಾರ.-ಆದಿ. ೧೦೩].

**ಪರ್ಣಾದ.**—ವಿದರ್ಭ ದೇಶಾಧಿಪತಿಯಾದ ಭೀಮ ರಾಜನ ಆಸ್ಥಾನದಲ್ಲಿದ್ದ ಒಬ್ಬ ಬ್ರಾಹ್ಮಣ ದಮಯಂತಿ ನಳನನ್ನು ಅಗಲಿದ ಬಳಿಕ ವಿದರ್ಭ ದೇಶವನ್ನು ಸೇರಿದ ತರುವಾಯ ನಳನನ್ನು ಹುಡುಕುವುದಕ್ಕಾಗಿ ಇವನನ್ನು ಗೂಢಚಾರನನ್ನಾಗಿ ಕಳು ಹಿದಳು [ಭಾರ -ವನ. ೬೮].

**ಪರ್ಣಾಶಾ**—ಭಾರತವರ್ಷದ ಒಂದು ನದಿ ಇದು ಪಾರಿಯಾತ್ರ ಪರ್ವತದಿಂದ ಹರಿಯುತ್ತದೆ ಈಗಣ ರಾಜಪುತ್ರಸ್ಥಾನದಲ್ಲಿ (Rajaputana) ಪ್ರವಹಿಸಿ ಚರ್ಮಣ್ವತೀ ನದಿಗೆ (Chambal) ಸೇರುತ್ತದೆ [ಭಾರ.-ಸಭಾ. ಭೀ ೯] ಈ ನದಿಗೆ ಶೀತತೋಯಾ ಎಂಬುದು ನಾಮಾಂತರ ವರುಣ ಈ ನದಿಯಲ್ಲಿ ಶ್ರುತಾಯುಧ ನೆಂಬ ತನಯನನ್ನು ಪಡೆದ ಶ್ರುತಾಯುಧ ಶ್ರೀ ಕೃಷ್ಣನೊಂದಿಗೆ ಯುದ್ಧಮಾಡು ವಾಗ ಗದಾಯುಧವನ್ನು ಪ್ರಯೋಗಿಸಲಾಗಿ ಆ ಗದೆ ಕೃಷ್ಣನ ಮೇಲೆ ಬೀಳಲಾರದೆ ಹಿಂದಿರುಗಿ ಶ್ರುತಾಯುಧನ ಮೇಲೆ ಬಿದ್ದು ಅವನನ್ನೇ ಕೊಂದಿಕ್ಕಿತು [ದ್ರೋ ೯೨].

**ಪರ್ವತ.**—ಒಬ್ಬ ಮಹರ್ಷಿ. ನಾರದನ ಸೋದರಳಿಯ. ನೋಡು—ಅಂಬರೀಷ, ನಾರದ [ಸಭಾ. ೪, ೭, ೧೦] ಪರ್ವತ ನಾರದನನ್ನು ಕಪಿಮುಖನಾಗುವಂತೆ ಶಾಪ ವಿತ್ತದ್ದು [ಶಾಂತಿ ೨೯]. ಈತ ತಾನು ಪುಷ್ಕರವನ್ನು ಕದಿಯಲಿಲ್ಲವೆಂದು ಮಾಡಿದ ಶಪಥ [ಅನು. ೧೪೩].

**ಪರ್ವತಗಳು.**—ಭಾರತದಲ್ಲಿ ವರ್ಣಿತವಾಗಿರತಕ್ಕುವು [ಭೀ. ೬. ಅನು. ೨೭೧].

**ಪರ್ವಸಂಗ್ರಹ.**—ಭಾರತದೊಳಗಣ ಎಲ್ಲಾ ಪರ್ವಗಳಲ್ಲಿ ವರ್ಣಿತವಾಗಿರುವ ವಿಷಯವನ್ನೂ ಸಂಗ್ರಹವಾಗಿ ಬಣ್ಣಿಸಿರುವ ಭಾಗ [ಭಾರ.-ಆದಿ ೨]

**ಪಶುಪತಿ.**—ಶಿವನ ನಾಮಾಂತರ [ಲಿಂಗ.-ಉತ್ತ. ೯]. ನೋಡು—ಶಿವ

**ಪಶುಸಖ.**—ಸಪ್ತರ್ಷಿಗಳ ಭೃತ್ಯನಾದ ಒಬ್ಬ ಶೂದ್ರ. ಹೆಂಡತಿ ಗಂಡೆ ಯೆಂಬವಳು. ಮಹಾಧಾರ್ಮಿಕನೂ ಸತ್ಯಸಂಧನೂ ಆಗಿದ್ದ [ಭಾರ.-ಅನು. ೧೪೧-೧೪೩].

**ಪಶ್ಚಾತ್ತಾಪ.**—ಇದರಿಂದ ಪಾಪ ತೊಲಗುತ್ತದೆ [ಭಾರ.-ಅನು. ೧೭೪].

**ಪಶ್ಚಿಮದಿಗ್ವರ್ಣನ.**—[ಉದ್ಯೋ. ೧೧೦. ರಾಮಾ -ಕಿಷ್ಕಿಂ. ೪೨]. ರಾಜಸೂಯ ಯಾಗ ಸಮಯದಲ್ಲಿ ನಕುಲ ಪಶ್ಚಿಮ ದಿಕ್ಕನ್ನು ಜಯಿಸಿದ್ದು [ಸಭಾ. ೩೫].

**ಪಾಂಸುರಾಷ್ಟ್ರ.**—ಭಾರತವರ್ಷದ ಒಂದು ದೇಶ. ಪಾಂಡವರ ರಾಜಸೂಯ ಯಾಗ ಸಮಯದಲ್ಲಿ ಈ ದೇಶವನ್ನು ವಸುದಾನನೆಂಬವ ಪಾಲಿಸುತ್ತಿದ್ದ. ಅನೇಕ

ವಾಗಿ ಕಪ್ಪಕಾಣಿಕೆಗಳನ್ನು ತಂದೊಪ್ಪಿಸಿ, ರಾಜಸೂಯಕ್ಕೆ ಒತ್ತಾಸೆಮಾಡಿದ [ಭಾರ - ಸಭಾ ೭೮].

**ಪಾಞ್ಚಜನ್ಯ.**—ಶ್ರೀ ಕೃಷ್ಣನ ಶಂಖದ ಹೆಸರು ನೋಡು—ಪಂಚಜನ [ಭಾರ.-ಉದ್ಯೋ. ೧೫೧ ಭೀ. ೨೫].

**ಪಾಞ್ಚಾಲ.**—ಪಂಚಾಲ ದೇಶಾಧಿಪತಿಯಾದ ಅರಸರಿಗೆಲ್ಲ ಈ ಹೆಸರು ಸಲ್ಲುತ್ತದೆ. ಆದರೆ ಭಾರತದಲ್ಲಿ ಈ ಶಬ್ದ ದ್ರುಪದ, ಅಥವಾ ಆತನ ಮಗಸಾದ ಧೃಷ್ಟದ್ಯುಮ್ನನನ್ನು ಮಾತ್ರವೇ ಬೋಧಿಸುತ್ತದೆ.

**ಪಾಞ್ಚಾಲಿ.**—ದ್ರೌಪದಿ

**ಪಾಞ್ಚಾಲ್ಯ** —ಆರುಣಿ ಮುನಿಯ ನಾಮಾಂತರ ನೋಡು—ಆರುಣಿ [ಭಾರ.- ಆದಿ. ૩].

**ಪಾಟಲಾವತೀ** —ಒಂದು ನದಿ ಪಾರಿಯಾತ್ರ ಪರ್ವತದಿಂದ ಹುಟ್ಟಿ ಅನೂಪ ದೇಶದಲ್ಲಿ ಪ್ರವಹಿಸಿ, ಚರ್ಮಣ್ವತೀ ನದಿಯಲ್ಲಿ ಸೇರುತ್ತದೆ (The River Kali-Scind) [ಭೀ. ೯].

**ಪಾಣ್ಡವ** —ಪಾಂಡು ಪುತ್ರರಾದ ಧರ್ಮ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಐವರಿಗೂ ಈ ಹೆಸರು ಸಲ್ಲುತ್ತದೆ ನೋಡು—ಪಂಚೇಂದ್ರೋಪಾಖ್ಯಾನ ಪಾಂಡವರ ಉತ್ಪತ್ತಿಕಥೆ [ಅದಿ ೬೩, ೬೪]. ಇವರು ದೇವಾಂಶಸಂಭೂತರು [ಆದಿ ೬೮] ಇವರ ನಾಮಕರಣ, ಉಪನಯನ, ಶುಕ್ರನೆಂಬ ಋಷಿಯಲ್ಲಿ ಧನುರ್ವಿದ್ಯಾಭ್ಯಾಸಮಾಡಿದ್ದು ಮುಂತಾಗಿ [ಆದಿ ೧೩೩] ಪಾಂಡು ಮರಣಾನಂತರ ಇವರು ಹಸ್ತಿನಾವತಿಗೆ ಬಂದದ್ದು, ಇವರ ಆಯುಃಪ್ರಮಾಣವರ್ಣನೆ [ಆದಿ ೧೩೪]. ಪಾಂಡವರು ಧೃತರಾಷ್ಟ್ರನ ಅಪ್ಪಣೆಯಮೇರೆಗೆ ವಾರಣಾವತಕ್ಕೆ ಹೋದದ್ದು [ಆದಿ. ೧೫೫]. ಅರಗಿನ ಮನೆಯಲ್ಲಿ ವಾಸಮಾಡಿದ್ದು [ಆದಿ ೧೫೯]. ಅರಗಿನ ಮನೆಯನ್ನು ಬಿಟ್ಟು ಹೊರಬಂದು ರಾತ್ರಿಯಲ್ಲಿ ಗಂಗೆಯನ್ನು ದಾಟಿದ್ದು [ಆದಿ. ೧೬೧]. ಹಿಡಿಂಬನ ವನವನ್ನು ಪ್ರವೇಶಿಸಿದ್ದು [ಆದಿ ೧೬೩] ಶಾಲಿಹೋತ್ರಾಶ್ರಮದಲ್ಲಿ ವಾಸಮಾಡಿದ್ದು, ಅಲ್ಲಿಗೆ ವ್ಯಾಸರು ಬಂದು ಅವರನ್ನು ಸಂತವಿಸಿದ್ದು, ಅಲ್ಲಿಂದ ಏಕಚಕ್ರನಗರಕ್ಕೆ ಬಂದದ್ದು [ಆದಿ ೧೬೮, ೧೭೦]. ಬ್ರಾಹ್ಮಣವಚನಾನುಸಾರ ದ್ರೌಪದೀ ಸ್ವಯಂವರಕ್ಕೆ ಹೊರಟದ್ದು [ಆದಿ. ೧೮೩]. ನಡುದಾರಿಯಲ್ಲಿ ಚಿತ್ರರಥ (ಅಂಗಾರಪರ್ಣ) ಗಂಧರ್ವನ ಮಾತಿನಂತೆ ಉತ್ಕೋಚತೀರ್ಥಕ್ಕೆ ಹೋಗಿ ಧೌಮ್ಯ ಮುನಿಯನ್ನು ತಮ್ಮ ಪುರೋಹಿತನಾಗಿರುವಂತೆ ವರಿಸಿದ್ದು [ಆದಿ. ೧೯೯] ದ್ರುಪದ ನಗರವನ್ನು ಹೊಕ್ಕು ಕುಂಬಾರನ ಮನೆಯಲ್ಲಿ ವಾಸಮಾಡಿದ್ದು [ಆದಿ ೨೦೦]. ದ್ರೌಪದಿಯನ್ನು ಮದುವೆಯಾದದ್ದು [ಆದಿ. ೨೧೫]. ಕುಂತೀ, ದ್ರೌಪದಿಯರೊಂದಿಗೆ ಇಂದ್ರ

ಪ್ರಸ್ಥಕ್ಕೆ ಬಂದದ್ದು [ಆದಿ. ೨೨೭] ದ್ರೌಪದಿಯಲ್ಲಿ ಅವರು ಹೇಗೆ ನಡೆದುಕೊಳ್ಳ ಬೇಕೆಂಬುದನ್ನು ತಿಳಿಸಲು ನಾರದರು ಅವರಲ್ಲಿಗೆ ಬಂದದ್ದು [ಆದಿ. ೨೨೮]. ದ್ರೌಪದಿಯ ವಿಚಾರವಾಗಿ ಅವರು ಪ್ರತಿಜ್ಞೆಮಾಡಿದ್ದು [ಆದಿ. ೨೩೨]. ಪಾಂಡವರು ಸಾಮವೇದಿಗಳು [ಸಭಾ. ೧೦೨]. ಜೂಜಿನಲ್ಲಿ ಸೋತು ಕಾಡಿಗೆ ಹೊರಟಾಗ ಅವರ ನಡೆವಳಿಗಳು [ಸಭಾ. ೧೦೨]. ಅವರು ಕಾಮ್ಯಕವನದಲ್ಲಿ ವಾಸಮಾಡಿದ್ದು [ವನ. ೫]. ಅಲ್ಲಿಂದ ದ್ವೈತವನವನ್ನು ಪ್ರವೇಶಿಸಿದ್ದು [ವನ. ೨೪]. ಲೋಮಶ ಮುನಿ ಅವರನ್ನು ಕೈಲಾಸಪರ್ವತಕ್ಕೆ ಹೋಗುವಂತೆ ಪ್ರೇರಿಸಿದ್ದು [ವನ. ೧೪೧] ಅವರು ಬದರಿಕಾಶ್ರಮಕ್ಕೆ ಹೋದದ್ದು [ವನ. ೧೪೭] ಗಂಧರ್ವರಿಂದ ಬದ್ಧನಾದ ದುರ್ಯೋಧನನನ್ನು ಅವರು ಬಿಡಿಸಿದ್ದು [ವನ. ೨೪೭]. ಗಂಧಮಾದನ ಪರ್ವತಕ್ಕೆ ಹೋದದ್ದು [ವನ. ೧೫೯]. ಅಜ್ಞಾತವಾಸಕ್ಕಾಗಿ ವಿರಾಟನಗರಕ್ಕೆ ಬಂದದ್ದು [ವಿರಾ. ೬]. ಶ್ಮಶಾನ ವೃಕ್ಷದಲ್ಲಿ ತಮ್ಮ ಆಯುಧಗಳನ್ನು ಇರಿಸಿದ್ದು [ವಿರಾ. ೭]. ಅಜ್ಞಾತವಾಸ ಸಮಯದಲ್ಲಿ ಅವರ ಹೆಸರು [ವಿರಾ. ೨-೪]. ಅಜ್ಞಾತವಾಸ ಸಮಯದಲ್ಲಿ ಅವರ ಗೂಢವಾದ ಹೆಸರು [ವಿರಾ. ೨೭]. ಅವರ ರಥ, ಅಶ್ವ, ಧ್ವಜಾದಿಗಳ ವರ್ಣನೆ [ಉದ್ಯೋ ೫೬]. ಯುದ್ಧಕ್ಕೆ ಕುರುಕ್ಷೇತ್ರವನ್ನು ಆರಿಸಿದ್ದು [ಉ. ೧೫೧]. ಪಾಂಡುಸೇನೆಯಲ್ಲಿ ರಥಿಕ, ಅತಿರಥಿಕರ ವಿವರ [ಉ ೧೬೯]. ಕರ್ಣ ಅವರನ್ನು ಹೊಗಳಿದ್ದು [ದ್ರೋ ೨೨]. ಪಾಂಡುಸೇನೆಯಲ್ಲಿ ಮಡಿದವರ ಹೆಸರುಗಳು [ಕರ್ಣ ೩]. ದುರ್ಯೋಧನನನ್ನು ಕೊಂದ ಬಳಿಕ ಅವರು ಓಘವತೀ ನದೀತೀರದಲ್ಲಿ ಕುಳಿತುಕೊಂಡದ್ದು [ಶಲ್ಯ ೬೩] ತೊಡೆಮುರಿದು ಬಿದ್ದಿದ್ದ ದುರ್ಯೋಧನನ ಬಳಿಯಲ್ಲಿ ನಿಂತ ಅಶ್ವತ್ಥಾಮ ಪಾಂಡವರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದು [ಶಲ್ಯ. ೬೬]. ಪಾಂಡವರಮೇಲೆ ಅಶ್ವತ್ಥಾಮ ಐಷೀಕಾಸ್ತ್ರವನ್ನು ಪ್ರಯೋಗಮಾಡಿದ್ದು [ಸೌ. ೧೩]. ಅವರು ರಾಜ್ಯಭಾರಮಾಡಿದ ರೀತಿ [ಅಶ್ವ ೧೫]. ಶ್ರೀ ಕೃಷ್ಣನಿರ್ಯಾಣಾನಂತರ ಪರೀಕ್ಷಿತನಿಗೆ ರಾಜ್ಯದಲ್ಲಿ ಪಟ್ಟಗಟ್ಟಿ ಮಹಾಪ್ರಸ್ಥಾನಕ್ಕೆ ಹೋದದ್ದು [ಮಹಾ ೧]. ಅವರೆಲ್ಲರೂ ಸ್ವರ್ಗವನ್ನು ಸೇರಿ ಅಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದದ್ದು [ಸ್ವರ್ಗಾ. ೩].

**ಪಾಂಡವ ಪ್ರವೇಶಪರ್ವ** —ಪಾಂಡವರು ಅಜ್ಞಾತವಾಸಕ್ಕಾಗಿ ವಿರಾಟನಲ್ಲಿಗೆ ಹೋದದ್ದು [ವಿರಾ. ೧-೧೪].

**ಪಾಣ್ಡು**.—(1) ಚಂದ್ರ ವಂಶದ ವಿಚಿತ್ರವೀರ್ಯ ರಾಜನ ಹೆಂಡತಿಯಾದ ಅಂಬಾಲಿಕೆಯಲ್ಲಿ ವ್ಯಾಸ ಮುನಿಯಿಂದ ಜನಿಸಿದವ. ನೋಡು—ಕೃಷ್ಣದ್ವೈಪಾಯನ [ಆದಿ. ೧. ಸಭಾ. ೮ ವಿರಾ. ೫೩]. ಪಾಂಡು ರಾಯನ ಜನ್ಮಕಥೆ [ಭಾರ.-ಆದಿ. ೬೩]. ಈತನ ರಾಜ್ಯಾಭಿಷೇಕ [ಆದಿ. ೧೧೮]. ಪಾಂಡು ರಾಯನ ದಿಗ್ವಿಜಯ ವರ್ಣನೆ [ಆದಿ.

೧೨೨]. ಕುಂತಿಯೊಂದಿಗೆ ವಿವಾಹ [ಆದಿ. ೧೨೧]. ಮಾದ್ರಿಯನ್ನು ಮದುವೆಯಾದದ್ದು [ಆದಿ. ೧೨೨]. ಬೇಟೆಗಾಗಿ ಕಾಡಿಗೆ ಹೋದದ್ದು [ಆದಿ. ೧೨೩] ಆ ಕಾಲದಲ್ಲಿ ಕಿಂದಮನೆಂಬ ಮುನಿ ಮೃಗರೂಪವನ್ನು ಧರಿಸಿ, ತನ್ನ ಪ್ರಿಯೆಯೊಂದಿಗೆ ವಿಹರಿಸುತ್ತಿರುವಲ್ಲಿ ಪಾಂಡು ಸಾಮಾನ್ಯವಾದ ಹುಲ್ಲೆಯೆಂಬ ಭ್ರಾಂತಿಯಿಂದ ಅವುಗಳಲ್ಲಿ ಗಂಡು ಜಿಂಕೆಯನ್ನು ಕೊಂದ. ಆ ಜಿಂಕೆ ಒಡನೆಯೇ ನರದೇಹವನ್ನು (ಕಿಂದಮ ಮುನಿರೂಪ) ಧರಿಸಿ, "ಸ್ತ್ರೀ ಸಂಪರ್ಕಮಾಡಿದೆಯಾದರೆ ನೀನೂ ಸಾಯುವೆ" ಎಂದು ಶಾಪಕೊಟ್ಟಿತು ಆದರಿಂದ ಖಿನ್ನನಾದ ಪಾಂಡು ಪಟ್ಟಣವನ್ನು ಬಿಟ್ಟು ಶತಶೃಂಗ ಪರ್ವತದ ಬಳಿಯಲ್ಲಿಯೇ ತಾಪಸನಾಗಿದ್ದ [ಆದಿ. ೬೩, ೧೨೩]. ತಾನು ಸಂತಾನಹೀನನಾಗಿರುವುದನ್ನು ಕುಂತಿಯಲ್ಲಿ ಬಣ್ಣಿಸಿ, ಪುತ್ರೋತ್ಪತ್ತಿಗಾಗಿ ಆಕೆಯನ್ನು ಪ್ರೋತ್ಸಾಹಗೊಳಿಸಿದ್ದು. ಕುಂತಿ ಧರ್ಮ, ಭೀಮಾರ್ಜುನರನ್ನೂ, ಮಾದ್ರಿ ನಕುಲ ಸಹದೇವರನ್ನೂ ಪಡೆದದ್ದು [ಆದಿ ೬೩] ಕೆಲಕಾಲದ ತರುವಾಯ ಪಾಂಡು ಮಾದ್ರಿಯೊಂದಿಗೆ ವಿಹರಿಸಿ ದೇಹತ್ಯಾಗಮಾಡಿದ್ದು [ಆದಿ. ೬೩, ೧೩೪] ಪಾಂಡವರು ಈತನಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು [೧೩೬].

(ii) ಒಬ್ಬ ಅರಸು ಇದೇ ಚಂದ್ರ ವಂಶದ ಕುರು ರಾಜನ ಮಗನಾದ ಜನಮೇಜಯನೆಂಬ ಅರಸನ ಮಗ. ಈತನಿಗೆ ಧೃತರಾಷ್ಟ್ರನೇ ಮೊದಲಾದ ಏಳು ಮಂದಿ ಸಹೋದರರು [ಆದಿ. ೧೦೧]

**ಪಾಂಡ್ಯ.**—(i) ಭರತಖಂಡದ ದಕ್ಷಿಣ ಭಾಗದಲ್ಲಿರುವ ಒಂದು ದೇಶ [ಭೀ ೯]. ಈಗಣ ತಿರುನೆಲ್ವೇಲಿ ಮತ್ತು ಮಧುರೆಯ ಜಿಲ್ಲೆಗಳಿಗೆ ಈ ಹೆಸರು ಸಲ್ಲುತ್ತದೆ. ಕೆಲಕಾಲ ಉರಗಪುರವೂ (ಈಗಣ ನಾಗಪಟ್ಟಣ) ಕೆಲಕಾಲ ದಕ್ಷಿಣ ಮಧುರೆಯೂ ಇದರ ರಾಜಧಾನಿಗಳಾಗಿದ್ದುವು

(ii) ದ್ರವಿಡ ದೇಶಾಧೀಶ್ವರನಾದ ಪ್ರವೀರನೆಂಬ ಅರಸನಿಗೆ ಈ ಹೆಸರು ಭಾರತದಲ್ಲಿ ರೂಢವಾಗಿದೆ ಈತನಿಗೆ ಮಲಯಧ್ವಜ, ಚಿತ್ರವಾಹನ ಎಂಬ ನಾಮಾಂತರಗಳು. ಈತನ ಮಗಳಾದ ಚಿತ್ರಾಂಗದೆ ಅರ್ಜುನನಿಂದ ಬಭ್ರುವಾಹನನೆಂಬ ಮಗನನ್ನು ಪಡೆದಳು ನೋಡು—ಚಿತ್ರಾಂಗದೆ ಈತ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿನದಲ್ಲಿ ಅಶ್ವತ್ಥಾಮನಿಂದ ಹತನಾದ [ಭಾರ.-ಕರ್ಣ. ೫೫, ೫೬].

**ಪಾತಾಳಕೇತು.**—ಒಬ್ಬ ರಾಕ್ಷಸ ನೋಡು—ಕುವಲಾಶ್ವ, ಮದಾಲಸಾ.

**ಪಾತಾಳಲೋಕವರ್ಣನೆ**—[ಭಾರ.-ಉ. ೯೯. ಭಾಗ.-೫-೨೪. ದೇ ಭಾಗ.-೮, ೧೯, ೨೦].

**ಪಾಪ.**—ಅದರ ಫಲಾನುಭವವರ್ಣನ [ವನ. ೧೮೬. ಅನು. ೨೨೦-೨೨೩]. ಪಾಪ ಪರಿಹಾರಕ ಪ್ರಾಯಶ್ಚಿತ್ತಗಳು [ಶಾಂತಿ. ೩೩, ೩೪, ೧೬೩ ಅನು. ೧೭೪]. ಹನ್ನೆರಡು ವರ್ಷ ವಯಸ್ಸಿನವರೆಗೆ ಪಾಪಫಲ ತಂದೆತಾಯಿಗಳಿಗೆ ಸೇರಿದ್ದೆಂಬುದಾಗಿ [ಆದಿ. ೧೧೭].

**ಪಾರಿಜಾತ.**—ಕ್ಷೀರಸಮುದ್ರ ಮಥನಕಾಲದಲ್ಲಿ ಪಾಲ್ಗಡಲಿಂದ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದು [ಆದಿ. ೧೮]. ಶ್ರೀಕೃಷ್ಣ ಇದನ್ನು ಅಪಹರಿಸಿ ತಂದು ದ್ವಾರಕೆಯಲ್ಲಿ ನಟ್ಟದ್ದು. ನೋಡು—ಕೃಷ್ಣ [ಭಾರ.-ಸಭಾ.-೫೭. ಭಾಗ.-೧೦-೫೯. ಹರಿ.-೨-೬೪].

**ಪಾರಿಯಾತ್ರ.**—ಏಳು ಕುಲಪರ್ವತಗಳಲ್ಲಿ ಒಂದು ವಿಂಧ್ಯಪರ್ವತದ ಪಶ್ಚಿಮ ಭಾಗದಿಂದ ನರ್ಮದೆಯ ಉತ್ಪತ್ತಿಸ್ಥಾನದವರೆಗೂ ಹಬ್ಬಿ, ಆರಾವಳಿ ಬೆಟ್ಟಗಳಲ್ಲಿ ಸೇರಿಕೊಂಡಿದೆ [ಭೀಷ್ಮ ೯]. ವೇದಸ್ಮೃತಾ, ವೇತ್ರವತೀ, ವೃತ್ರಘ್ನೀ, ಸಿಂಧು, ಪರ್ಣಾಶಾ, ನರ್ಮದಾ, ಕಾವೇರೀ, ಮಹತೀ, ಪಾರಾ, ಧನ್ವತೀ, ರೂಪಾ, ವಿದಿಶಾ, ವೇಣುಮತೀ, ಸಿಪ್ರಾ, ಅವಂತೀ ಮುಂತಾದ ನದಿಗಳು ಇದರಿಂದ ಹುಟ್ಟುತ್ತವೆ [ಮತ್ಸ್ಯ.-೧೧೩].

**ಪಾರ್ಥ**—ಕುಂತಿಗೆ ಪೃಥೆಯೆಂದು ಹೆಸರು. ಪೃಥೆಯ ಮಕ್ಕಳಾದ ಐವರು ಪಾಂಡವರಿಗೂ ಈ ಹೆಸರು ಅನ್ವಯಿಸುತ್ತದೆ. ಆದರೆ ಸಾಮಾನ್ಯವಾಗಿ ಪಾರ್ಥ ಶಬ್ದ ಅರ್ಜುನನನ್ನೇ ಬೋಧಿಸುತ್ತದೆ ಒಟ್ಟಿನಮೇಲೆ ಈ ಶಬ್ದಕ್ಕೆ ಅರ್ಥವನ್ನು ಸಂದರ್ಭಾನುಸಾರ ಗೊತ್ತುಪಡಿಸಬೇಕು

**ಪಾರ್ವತಿ**—ಪರ್ವತರಾಜನಾದ ಹಿಮವಂತನಿಂದ ಮೇನೆಯೆಂಬಾಕೆಯಲ್ಲಿ ಜನಿಸಿದ ಮೂವರು ಪುತ್ರಿಯರಲ್ಲಿ ಹಿರಿಯಳು ಏಕಪರ್ಣಾ, ಏಕಪಾಟಲಾ ಎಂಬವರು ಈಕೆಯ ತಂಗಿಯರು. ಪಾರ್ವತಿಗೆ ಅಪರ್ಣಾ ಎಂಬ ಹೆಸರೂ ಉಮಾ ಎಂಬ ನಾಮಾಂತರವೂ ರೂಢಿಯಲ್ಲಿವೆ ಈ ಮೂವರೂ ದೇವ ದಾನವರಿಂದ ಚರಿಸಲು ಶಕ್ಯವಲ್ಲದ ತಪಸ್ಸನ್ನು ಮಾಡತೊಡಗಿದರು ಪಾರ್ವತಿ ಪರ್ಣಾಹಾರವನ್ನು ಕೂಡ ಪರಿತ್ಯಾಗಮಾಡಿದುದರಿಂದ "ಅಪರ್ಣೆ"ಯೆಂಬುದಾಗಿ ಪ್ರಖ್ಯಾತಿಗೊಂಡಳು. ಅದೇ ಸಮಯದಲ್ಲಿಯೇ ಪಾರ್ವತಿಯ ಜನನಿಯಾದ ಮೇನೆ, ತನ್ನ ಮಗಳನ್ನು ಉ (ಎಲೌ) ಮಾ (ಬೇಡ. ಕಷ್ಟಸಾಧ್ಯವಾದ ತಪಸ್ಸಿನಿಂದ ದೇಹವನ್ನು ಕೃಶಪಡಿಸಬೇಡ) ಎಂಬುದಾಗಿ ಬಾರಿಬಾರಿಗೂ ಅಡ್ಡಗಿಸಿದ ಕಾರಣ "ಉಮಾ" ಎಂಬ ಮತ್ತೊಂದು ಹೆಸರೂ ಪಾರ್ವತಿಗೆ ರೂಢಿಯಲ್ಲಿ ಬಂದಿತು. ಏಕಪರ್ಣೆ ತಪೋನಿರತಳಾಗಿದ್ದಾಗ ಒಂದೇ ಒಂದು ಎಲೆಯನ್ನು ಮಾತ್ರ ತಿಂದು ದೇಹಧಾರಣಮಾಡಿಕೊಂಡಿದ್ದಳು ಏಕಪಾಟಲೆ ಒಂದು ಪಾಟಲ (ಪಾದರಿ) ಪುಷ್ಪದಿಂದ ದೇಹಧಾರಣಮಾಡಿಕೊಂಡಿದ್ದ ಕಾರಣ ಈ ಮೂವರಿಗೂ ಈ ಹೆಸರುಗಳು ಬಂದುವು ಬಳಿಕ ಈ ಮೂವರೂ ಬ್ರಹ್ಮ

ವಾದಿನಿಯರೆನಿಸಿ ಇಂದ್ರಿಯ ವಿಕಾರಗಳನ್ನು ದೂರಮಾಡಿ, ಯೋಗಬಲಯುಕ್ತರಾಗಿ ತಪಶ್ಶರೀರದಿಂದ ಕಂಗೊಳಿಸುತ್ತಿರುವಲ್ಲಿ ಹಿಮವಂತ ಪಾರ್ವತಿಯನ್ನು ಮಹಾದೇವನಿಗೂ, ಏಕಪರ್ಣೆಯನ್ನು ಮಹಾನುಭಾವನೂ ಯೋಗಾಚಾರ್ಯನೂ ಎನಿಸಿದ ಅಸಿತದೇವಲ ಮುನಿಗೂ, ಮೂರನೆಯವಳಾದ ಏಕಪಾಟಲೆಯನ್ನು ಜೈಗೀಷವ್ಯ ಮುನಿಗೂ ಕೊಟ್ಟು ಮದುವೆಮಾಡಿದ ಮೈನಾಕ ಹಿಮವಂತನ ಹಿರಿಯ ಮಗ ನೋಡು—ದಕ್ಷ, ದಾಕ್ಷಾಯಣೀ [ಹರಿ.-೧-೧೮]. ತಾರಕಾಸುರನ ಬಾಧೆಯಿಂದ ದಿಕ್ಕುತೋರದ ದೇವತೆಗಳು ಬ್ರಹ್ಮವಿಷ್ಣುಗಳೊಂದಿಗೆ ತಮ್ಮ ಗೋಳನ್ನು ಹೇಳಿಕೊಂಡರು. ಆಗ ಬೃಹಸ್ಪತಿ ಮೇರು ಶಿಖರವನ್ನು ಹೊಂದಿ ಮನ್ಮಥನನ್ನು ಬರಮಾಡಿಸಿ "ಗಿರಿಜೆಯನ್ನು ಶಂಕರ ಮದುವೆಯಾಗುವಂತೆ ಮಾಡು ಅವರಿಬ್ಬರಿಂದ ಜನಿಸಿದ ಕುಮಾರನೇ ದೇವತೆಗಳ ಸೇನಾಪತಿತ್ವವನ್ನು ಕೈಕೊಂಡು ತಾರಕನನ್ನು ಕೊಲ್ಲುವ" ಎಂದ ಬಳಿಕ ಮನ್ಮಥ ರತಿವಸಂತರ ಸಂಗಡ ಶಿವನ ಆಶ್ರಮವನ್ನು ಹೊಕ್ಕು ಆತನನ್ನು ಕೆಣಕಿ ಮುಕ್ಕಣ್ಣನ ಮೂರನೆಯ ಕಣ್ಣಿಗೆ ಆಹುತಿಯಾಗಿ ದೇಹತ್ಯಾಗಮಾಡಿದ ಆಗ ರತಿಯ ಪ್ರಲಾಪವನ್ನು ಕೇಳಿ ಮರುಕಗೊಂಡ ಶಿವ "ಎಲೌ, ನಿನ್ನ ಪತಿ ಅನಂಗನಾಗಿಯೇ ಇದ್ದು ಕೃತಕಾರ್ಯನಾಗುವ ವಿಷ್ಣು ಭೃಗು ಮಹರ್ಷಿಯ ಶಾಪದಿಂದ ವಸುದೇವ ತನಯನಾಗಿ ಜನಿಸಿದಾಗ ನಿನ್ನ ಪತಿ ಅವನಿಗೆ ಮಗನಾಗಿ ಜನಿಸುವ" ಎಂದು ಕರುಣಿಸಿದ [ಲಿಂಗ-ಪೂರ್ವ ೧೦೧]. ಬಳಿಕ ಪಾರ್ವತಿ ಶಿವನನ್ನು ಮೆಚ್ಚಿಸುವುದಕ್ಕಾಗಿ ತೀವ್ರವಾದ ತಪವನ್ನು ಕೈಕೊಂಡಿರಲಾಗಿ, ಚತುರ್ಮುಖ ಗಿರಿಜೆಯಲ್ಲಿಗೆ ಬಂದು, ಅಡ್ಡಬಿದ್ದು, ಹೊಗಳಿ, "ಮಹಾದೇವ ತಪ್ಪದೆ ನಿನ್ನನ್ನು ವರಿಸುವನು ನಾವೆಲ್ಲರೂ ಆತನ ಕಿಂಕರರು" ಎಂದು ಹೇಳಿ ಕಣ್ಮರೆಯಾದ ಬಳಿಕ ಶಿವ ಬ್ರಾಹ್ಮಣರೂಪದಿಂದ ಪಾರ್ವತಿಯನ್ನು ಮೋಹಗೊಳಿಸಬಂದ ಗಿರಿಜೆ ತನ್ನ ತಪೋಮಹಿಮೆಯಿಂದ ಆತನನ್ನು ಗುರುತಿಸಿ ಹೊಗಳಲಾಗಿ, ಪರಮೇಶ್ವರ "ಎಲೌ ಸರ್ವಮಂಗಳೆಯೇ, ನಿನ್ನ ಸ್ವಯಂವರ ಸಮಯದಲ್ಲಿ ನಾನು ನನ್ನ ಮಹಿಮೆಯನ್ನು ತೋರಿ, ಸೌಮ್ಯರೂಪದಿಂದ ನಿನ್ನನ್ನು ಮದುವೆಯಾಗುವೆನು" ಎಂದು ಅನುಗ್ರಹಿಸಿ ಹೋದ ಬಳಿಕ ಈ ಸುದ್ದಿಯನ್ನು ಅರಿಯದ ಹಿಮವಂತ ತನ್ನ ಮಗಳ ಸ್ವಯಂವರವನ್ನು ಎಲ್ಲ ಲೋಕಗಳಲ್ಲಿಯೂ ಡಂಗುರ ಹೊಡಿಸಿದ. ಬ್ರಹ್ಮ ವಿಷ್ಣು ಮೊದಲಾದ ಸಕಲ ದೇವತೆಗಳೂ ಕೂಡಿದರು ಬಳಿಕ ಗಿರಿಜೆ ದಿವ್ಯಾಭರಣಭೂಷಿತೆಯಾಗಿ ರತ್ನಖಚಿತವಾದ ಪಲ್ಲಕ್ಕಿಯನ್ನೇರಿ ಸ್ವಯಂವರ ಮಂಟಪಕ್ಕೆ ಬಂದಳು ಆಕೆಯ ಸಖಿಯಾದ ಜಯೆಯೆಂಬವಳು ಪೂ ಮಾಲೆಯನ್ನು ಹಿಡಿದು ನಿಂತಿದ್ದಳು. ವಿಜಯೆಯೆಂಬ ಮತ್ತೊಬ್ಬ ಸಖಿ ಚಾಮರವನ್ನು ಹಿಡಿದಿದ್ದಳು. ಅಷ್ಟರಲ್ಲಿ ಪರಮೇಶ್ವರ ಶಿಶುರೂಪವನ್ನು ಧರಿಸಿ ಪಾರ್ವತಿಯ ತೊಡೆಯಮೇಲೆ

ಮಲಗಿದ ಆಗ ಇದಾವುದು ಈ ಕೂಸು ? ಎಂದು ಅದನ್ನು ಹೊಡೆಯಲು ಇಂದ್ರ ವಜ್ರವನ್ನು ಎತ್ತಿ ಸ್ತಬ್ಧನಾಗಿ ನಿಂತುಬಿಟ್ಟ. ಅಂತೆಯೇ ಅಷ್ಟದಿಕ್ಪಾಲಕರೇ ಮೊದಲಾದವರೆಲ್ಲರೂ ತಮ್ಮ ತಮ್ಮ ಆಯುಧಗಳನ್ನು ಹಿಡಿದೆತ್ತಿ ಸ್ತಬ್ಧರಾದರು. ವಿಷ್ಣು ಚಕ್ರವನ್ನು ಹಿಡಿದು ನಿಶ್ಚಲನಾದ. ಪೂಷ ಹಲ್ಲುಕಡಿಯಲಾಗಿ ಅವನ ಹಲ್ಲುಗಳು ಉದುರಿಬಿದ್ದುವು ಇಂತು ಸ್ತಬ್ಧರಾದವರೆಲ್ಲರೂ ದಿಕ್ಕುತೋರದೆ ಕೋಪ ದಿಂದ ಬುಸುಗುಟ್ಟುತ್ತ ನಿಂತಿರಲಾಗಿ ಚತುರ್ಮುಖ ಧ್ಯಾನದೃಷ್ಟಿಯಿಂದ ನಿಜಾಂಶ ವನ್ನು ತಿಳಿದು ಆತನನ್ನು ನಾನಾ ಪರಿಯಿಂದ ಹೊಗಳಿ, ಮಿಕ್ಕ ದೇವತೆಗಳಿಗೆಲ್ಲ ತಿಳಿಯಹೇಳಿದ ಬಳಿಕ ನಾರಾಯಣನೇ ಮೊದಲಾದ ದೇವತೆಗಳೆಲ್ಲರೂ ಮಹಾ ದೇವನನ್ನು ಶರಣುಹೊಕ್ಕರು. ಆಗ ಶಿವ ಪ್ರಸನ್ನನಾಗಿ ಸೌಮ್ಯವಾದ ನಿಜರೂಪ ವನ್ನು ಪ್ರಕಟಗೊಳಿಸಿ, ಅವರಿಗೆಲ್ಲ ದಿವ್ಯಚಕ್ಷುಸ್ಸನ್ನು ಅನುಗ್ರಹಿಸಿದ ಆಗ ಅವ ರೆಲ್ಲರೂ ಜಯಧ್ವನಿಯಿಂದ ಶಿವನನ್ನು ಹೊಗಳಿ ಪೂಮಳೆಗರೆದರು. ಆಗ ಗಿರಿಜೆ ಆನಂದಾತಿಶಯದಿಂದ ಹಿಗ್ಗಿ, ಪೂಮಾಲೆಯನ್ನು ಶಿವನ ಅಡಿದಾವರೆಯಲ್ಲಿ ಭಕ್ತಿ ಪುರಸ್ಸರವಾಗಿ ಸಮರ್ಪಿಸಿ ತಲೆವಾಗಿ ನಿಂತಳು ಆಗ ಅಲ್ಲಿ ನೆರೆದಿದ್ದವರೆಲ್ಲರೂ ಶಿವ ನನ್ನು ಕೊಂಡಾಡಿದರು ಆಗ ವಿಷ್ಣು ಅಲಂಕೃತೆಯಾದ ಗಿರಿಜೆಯನ್ನು ತಾನೇ ಕರೆತಂದು ಶಿವನ ನಿಜಸ್ವರೂಪವನ್ನು ವಿವರಿಸಿ, ಆತನ ಕಾಲುಗಳನ್ನು ತೊಳೆದು " ಸ್ವಾಮಿ, ನಿನ್ನವಳಾಗಿದ್ದ ಈ ನನ್ನ ತಂಗಿಯನ್ನು ಮರಳಿ ಪರಿಗ್ರಹಿಸಬೇಡುವೆನು " ಎಂದು ಉದಕಧಾರಾಪೂರ್ವಕವಾಗಿ ಗಿರಿಜೆಯನ್ನು ಶಿವನಿಗೆ ಧಾರೆಯೆರೆದುಕೊಟ್ಟ ಬಳಿಕ ಎಲ್ಲರೂ ಕಾಣಿಕೆಗಳನ್ನು ಒಪ್ಪಿಸಿ ಶಿವನನ್ನು ಬೀಳ್ಕೊಂಡು ತೆರಳಿದರು. ಬಳಿಕ ಪಾರ್ವತಿ ಶಿವನಿಂದ ಗಣಪತಿಯನ್ನು ಪಡೆದಳು [ಲಿಂಗ.-ಪೂರ್ವ ೧೦೨, ೧೦೩] ಹಿಮವಂತನಿಂದ ಮೇನೆಯಲ್ಲಿ ಗಂಗೆ, ಪಾರ್ವತಿಯೆಂಬ ಇಬ್ಬರು ಪುತ್ರಿಯರು ಜನಿಸಿದರು. ಗಂಗೆಯನ್ನು ದೇವತೆಗಳು ಲೋಕಹಿತಾರ್ಥವಾಗಿ ಹಿಮವಂತನನ್ನು ಬೇಡಿ ಪಡೆದರು ಪಾರ್ವತಿ ಈಶ್ವರನನ್ನು ಕುರಿತು ತಪಸ್ಸುಮಾಡಿ, ಆತನನ್ನು ಮೆಚ್ಚಿಸಿ ಮದುವೆಯಾದಳು [ರಾಮಾ.-ಬಾಲ ೩೫ ಶಿವ - ಪಾರ್ವತೀಖಂ ೫-೫೫]. ಪಾರ್ವತೀ ಪರಮೇಶ್ವರರು ಕ್ರೀಡಾಸಕ್ತರಾಗಿದ್ದಾಗ, ದೇವತೆಗಳೆಲ್ಲರೂ ಹೆದರಿ ಭೂದೇವಿಯು ಸಂಗಡ ಬ್ರಹ್ಮನನ್ನು ಮುಂದಿಟ್ಟುಕೊಂಡು ಶಿವನಲ್ಲಿಗೆ ಬಂದು " ಸ್ವಾಮಿ, ಪಾರ್ವತಿ ಯಲ್ಲಿ ಪಿಂಡೋತ್ಪತ್ತಿಯಾದರೆ ಯಾರೂ ತಡೆದುಕೊಳ್ಳಲಾರರು. ಈ ಕಾರ್ಯವನ್ನು ಸಾಕುಮಾಡಿ, ನಿನ್ನ ತೇಜವನ್ನು ನಿನ್ನಲ್ಲಿಯೇ ಅಡಗಿಸಿಕೊಳ್ಳಬೇಕು " ಎಂದು ಬೇಡಿ ದರು. ಆಗ ಪಾರ್ವತಿ ತನಗೆ ಪುತ್ರಸಂತಾನವಾಗದಂತೆ ಭಂಗಗೊಳಿಸಿದ ದೇವತೆ ಗಳನ್ನು ಕುರಿತು " ನಿಮಗೆ ನಿಮ್ಮ ಮಡದಿಯರಲ್ಲಿ ಸಂತಾನವಾಗಬೇಡ " ಎಂದು ಶಾಪವಿತ್ತು, ಭೂಮಿಯನ್ನು ಕುರಿತು " ನನಗೆ ಸಂತಾನವಾಗದಂತೆ ಭಂಗಪಡಿಸಿದೆ

ಯಾಗಿ ನೀನು ಅನೇಕ ರೂಪಗಳನ್ನು ಧರಿಸಿ, ಹಲವು ಮಂದಿಗೆ ಹೆಂಡತಿಯಾಗು. ನಿನಗೆ ಮಕ್ಕಳಲ್ಲಿ ಮಮತೆಯಿರಬೇಡ'' ಎಂಬದಾಗಿ ಶಪಿಸಿದಳು [ರಾಮಾ.-ಬಾಲ ೩೬] ಒಮ್ಮೆ ಜಲಂಧರನೆಂಬ ರಾಕ್ಷಸ ಈಕೆಯ ಪಾತಿವ್ರತ್ಯವನ್ನು ಕೆಡಿಸತೊಡಗಿ, ಶಿವನಿಂದ ಹತನಾದ. ನೋಡು—ಜಲಂಧರ ದಕ್ಷನಿಂದ ತಿರಸ್ಕೃತೆಯಾದ ಸತೀದೇವಿ ತನ್ನ ದೇಹವನ್ನು ತ್ಯಜಿಸಿ, ಹಿಮವಂತನಿಂದ ಮೇನೆಯಲ್ಲಿ ಜನಿಸಿ ಪಾರ್ವತಿಯೆಂಬ ಹೆಸರನ್ನು ಪಡೆದು, ಶಿವನನ್ನು ಮದುವೆಯಾದಳು [ಭಾಗ.-೪, ೭]. ನೋಡು—ದಾಕ್ಷಾಯಣೀ, ತಾರಕ, ಕುಮಾರಸ್ವಾಮಿ.

**ಪಾರ್ಷದ**.—ಪೃಷದ ರಾಜನ ಮಗನಾದ ದ್ರುಪದನ ನಾಮಾಂತರ.

**ಪಾರ್ಷದೀ**—ದ್ರೌಪದಿಯ ನಾಮಾಂತರ.

**ಪಾವನೀ**—ಭಾರತ ದೇಶದ ಒಂದು ನದಿ ಇದು ಬರ್ಮಾ ದೇಶದಲ್ಲಿ ಇರಾವತಿ ಯೆಂದು ಪ್ರಸಿದ್ಧವಾಗಿದೆ [ಭಾರ.-ಭೀ. ೬]

**ಪಾಶುಪತಾಸ್ತ್ರ**—ಅರ್ಜುನ ಪರಮೇಶ್ವರನಿಂದ ಪಡೆದದ್ದು ನೋಡು—ಅರ್ಜುನ [ಭಾರ -ವನ ४೦, ೧೬೮ ದ್ರೋ ೮೧]

**ಪಿಙ್ಗಲಾ**—(1) ಮಿಥಿಲಾ ನಗರಿಯಲ್ಲಿದ್ದ ಒಬ್ಬ ಸೂಳೆ ಅತ್ಯಂತ ಸುಂದರಿ ಯಾದ ಈಕೆ ಅನುದಿನವೂ ತನ್ನ ಕುಲಧರ್ಮಾನುಸಾರವಾಗಿ ಶೃಂಗಾರಮಾಡಿ ಕೊಂಡು ಬಾಗಿಲಬಳಿ ನಿಂತು, ತನಗೆ ಅನುರೂಪನಾದ ಪುರುಷನೊಬ್ಬನೂ ಬಾರ ದಿದ್ದುದನ್ನು ಕಂಡು, ಬೇಸತ್ತು, ತನ್ನ ಹಿಂದಣಜನ್ಮದ ಪರಿಪಾಕದಿಂದ ವೈರಾಗ್ಯ ವನ್ನು ತಳೆದು, ಪುರುಷಸಂಗವನ್ನು ಅಲ್ಲಗಳೆದು, ಜನ್ಮಜರಾಮರಣಶೂನ್ಯನಾದ ಪರಮಾತ್ಮನು ನನ್ನಲ್ಲಿಯೇ ಇರುವಾಗ ಹೀನಪುರುಷರನ್ನು ವರಿಸಬಾರದೆಂದು ತಿಳಿದು, ಬಾಗಿಲು ಮುಚ್ಚಿ ಮಲಗಿಕೊಳ್ಳುತ್ತಿದ್ದಳು ಈಕೆ ಕ್ರಮವಾಗಿ ಪರಮಾತ್ಮಸ್ವರೂಪ ವನ್ನರಿತು ಧನ್ಯೆಯಾದಳು [ಭಾರ -ಶಾಂತಿ. ೧೭೩. ಭಾಗ.-೧೧-೮].

(ii) ದೇಹದಲ್ಲಿರುವ ಮುಖ್ಯನಾದ ನಾಡಿಗಳಲ್ಲಿ ಒಂದು. ಇದು ಗುದ ಸ್ಥಾನದಿಂದ ಬೆನ್ನುಮೂಳೆಯ ಮೂಲಕ ತಲೆಯ ಮೇಲಿಂದ ಹುಬ್ಬುಗಳ ನಡುವೆ ಹೊರಟು ಕಣ್ಣಿಗೆ ಸೇರಿದೆ

**ಪಿತೃಗಳು**.—ದೇವತೆಗಳಲ್ಲಿ ಒಂದು ಪಂಗಡದವರು. ಇವರು ಅನುಗಾಲವೂ ಸ್ವರ್ಗದಲ್ಲಿಯೇ ಇರತಕ್ಕವರು ಮಹಾತೇಜಸ್ವಿಗಳೂ, ಕಾಮರೂಪಧಾರಿಗಳೂ ಎನಿಸಿ ದವರು ಇವರಲ್ಲಿ ಅಗ್ನಿಷ್ವಾತ್ತರು, ಬರ್ಹಿಷದರು, ಸೋಮಪರು, ಆಜ್ಯಪರು, ಕಾವ್ಯರು, ಹವಿಷ್ಮಂತರು, ಸಾಗ್ನಿಗಳು, ನಿರಗ್ನಿಗಳು ಎಂದು ಮುಂತಾಗಿ ಅನೇಕ ಪ್ರಭೇದಗಳಿವೆ ಸ್ವಾಯಂಭುವ ಮನ್ವಂತರದಲ್ಲಿ ದಕ್ಷ ತನ್ನ ಮಕ್ಕಳಲ್ಲಿ ಒಬ್ಬಳಾದ ಸ್ವಧಾ ದೇವಿಯನ್ನು ಇವರಿಗೆ ಕೊಟ್ಟು ಮದುವೆಮಾಡಿದ [ಭಾರ.-ಸಭಾ. ೮. ಹರಿ.-

೧-೧೮. ಮತ್ಸ್ಯ.-೧೩-೧೫]. ಇವರ ವಂಶೋತ್ಪತ್ತಿವರ್ಣನ [ಮತ್ಸ್ಯ-೩-೧೯೬]. ಪಿತೃಋಣವನ್ನು ತೀರಿಸುವ ಬಗೆ [ಶಾಂತಿ ೧೬೯]. ಇವರಿಗೆ ಪಿಂಡಸಂಜ್ಞೆ ಬಂದದ್ದು [ಶಾಂತಿ. ೩೫೫]

**ಪಿತೃಕಲ್ಪ.**—ಚತುರ್ಮುಖನ ಈಗ ನಡೆಯುತ್ತಿರುವ ತಿಂಗಳ ಮೂವತ್ತನೆಯ ದಿನದಲ್ಲಿ ನಡೆಯುತ್ತದೆ ಅಂದರೆ ಚತುರ್ಮುಖನ ಅಮಾವಾಸ್ಯೆಯ ದಿನಕ್ಕೆ ಪಿತೃಕಲ್ಪವೆಂದು ಹೆಸರು. ನೋಡು—ಕಲ್ಪ [ಮತ್ಸ್ಯ-೨೮೯]. ಇವರಿಗೆ ಮಯುನಾ, ಧಾರಿಣಿಯೆಂಬ ಇಬ್ಬರು ಬ್ರಹ್ಮವಾದಿನಿಯರಾದ ಕುಮರಿಯರು ಜನಿಸಿದರು [ಮತ್ಸ್ಯ.-೧೩-೧೫]

**ಪಿತೃವರ್ತಿ.**—ಕುರುಕ್ಷೇತ್ರದಲ್ಲಿದ್ದ ಕೌಶಿಕನೆಂಬ ಮುನಿಯ ಏಳು ಮಂದಿ ಮಕ್ಕಳಲ್ಲಿ ಕಡೆಯವ ಸ್ವಸೃಪ, ಕ್ರೋಧನ, ಹಿಂಸ, ಪಿಶುನ, ಕವಿ, ವಾಗ್ದುಷ್ಟರೆಂಬುವರು ಇವನ ಅಣ್ಣಂದಿರು ಈ ಏಳು ಮಂದಿಯೂ ಗರ್ಗ ಮುನಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು, ಕ್ಷಾಮಕಾಲದಲ್ಲಿ ಹೊಟ್ಟೆಗೆ ಗತಿಯಿಲ್ಲದೆ ಗರ್ಗ ಮುನಿಯ ಗೋವನ್ನು ಕೊಂದು ತಿನ್ನುವಂತೆ ನಿಶ್ಚಯಿಸಿದರು ಆಗ ಪಿತೃವರ್ತಿ ತನ್ನ ಒಡಹುಟ್ಟಿದವರಲ್ಲಿ ಇಬ್ಬರನ್ನು ವಿಶ್ವೇದೇವಸ್ಥಾನದಲ್ಲಿಯೂ, ಮತ್ತೆ ಮೂವರನ್ನು ಪಿತೃಸ್ಥಾನದಲ್ಲಿಯೂ, ಮತ್ತೊಬ್ಬನನ್ನು ಅತಿಥಿಯನ್ನಾಗಿಯೂ ನಿಯಮಿಸಿ, ವಿಧ್ಯುಕ್ತವಾಗಿ ಪಿತೃಪ್ರೀತಿಯಾಗುವಂತೆ ಶ್ರಾದ್ಧಮಾಡಿ ಆ ಗೋವಿನ ಮಾಂಸವನ್ನು ತಿಂದು, " ಆಕಳನ್ನು ಹುಲಿ ತಿಂದುಬಿಟ್ಟಿತು " ಎಂದು ಗರ್ಗ ಮುನಿಗೆ ಹೇಳಿದರು ಇಂತು ಸುಳ್ಳುಹೇಳಿದ ಕಾರಣ ಕಾಲಾಂತರದಲ್ಲಿ ಇವರೆಲ್ಲರೂ ದಶಾರ್ಣ ದೇಶದಲ್ಲಿ ಬೇಡರಾಗಿ ಹುಟ್ಟಿದರು ಆದರೆ ಗೋಮಾಂಸವನ್ನು ಪಿತೃಪ್ರೀತಿಗಾಗಿ ಉಪಯೋಗಿಸಿದುದರಿಂದ ಇವರಿಗೆ ಪೂರ್ವಜನ್ಮಸ್ಮರಣೆಯಿದ್ದಿತಾಗಿ ಬೇಗನೆ ಆ ಜನ್ಮವನ್ನು ಕಳೆದುಕೊಂಡು, ಮರುಜನ್ಮದಲ್ಲಿ ಜಿಂಕೆಗಳಾಗಿ ಕಾಲಾಂಜನ ಪರ್ವತದಲ್ಲಿ ಜನಿಸಿ, ಮೂರನೆಯ ಬಾರಿ ಶರದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾಗಿ ಜನ್ಮವೆತ್ತಿ, ನಾಲ್ಕನೆಯ ಸಲ ಮಾನಸ ಸರೋವರದಲ್ಲಿ ಹಂಸಪಕ್ಷಿಗಳಾಗಿ ಜನಿಸಿದರು ಈ ಸಮಯದಲ್ಲಿ ಪುರುವಂಶದ ವಿಭ್ರಾಜನೆಂಬ ಅರಸು ತನ್ನ ಪರಿವಾರದೊಂದಿಗೆ ಅಲ್ಲಿಗೆ ಬಂದು ಕ್ರೀಡಿಸುತ್ತಿದ್ದ. ಅದನ್ನು ಕಂಡು ಪಿತೃವರ್ತಿ ತಾನು ರಾಜನಾಗಬೇಕೆಂದು ಬಯಸಿದ ಅವನ ಇಬ್ಬರು ಒಡಹುಟ್ಟಿದವರು ಮಂತ್ರಿಪದವಿಯನ್ನು ಬಯಸಿದರು ಪಿತೃವರ್ತಿ ವಿಭ್ರಾಜ ರಾಜನ ಮಗನಾಗಿ ಬ್ರಹ್ಮದತ್ತನೆಂಬ ಹೆಸರಿನಿಂದ ಹುಟ್ಟಿದ ಮತ್ತಿಬ್ಬರು ಮಂತ್ರಿಪುತ್ರರಾಗಿ ಜನಿಸಿದರು. ನಿಷ್ಕಾಮರಾಗಿದ್ದ ಮಿಕ್ಕ ನಾಲ್ವರು ಬ್ರಾಹ್ಮಣಶ್ರೇಷ್ಠರಾಗಿ ಅದೇ ಪಟ್ಟಣದಲ್ಲಿಯೇ ಜನಿಸಿದರು. ಬ್ರಹ್ಮದತ್ತ ರಾಜ್ಯಾಧಿಕಾರವನ್ನೂ ಇನ್ನಿಬ್ಬರು ಮಂತ್ರಿಪದವಿಯನ್ನೂ ಪಡೆದು ಪ್ರಸಿದ್ಧಿಹೊಂದಿದರು, ಇವರಿಂದ ಸಂಹೃತವಾದ

ಆಕಳು ಸಂನತಿಯೆಂಬ ಹೆಸರಿನಿಂದ ದೇವಲ ಮುನಿಯ ಮಗಳಾಗಿ ಹುಟ್ಟಿ ಬ್ರಹ್ಮ ದತ್ತನನ್ನೇ ಮದುವೆಯಾದಳು ಬಳಿಕ ಬ್ರಾಹ್ಮಣಪುತ್ರರಾದ ಆ ನಾಲ್ವರೂ ತಪಸ್ಸಿಗಾಗಿ ಅರಣ್ಯಕ್ಕೆ ಹೊರಟಾಗ ಮುದುಕನಾದ ತಂದೆ, ತನಗೆ ಗತಿ ಯಾರೂ ಇಲ್ಲವೆಂದು ಗೋಳಾಡತೊಡಗಲಾಗಿ, ಆ ನಾಲ್ವರೂ ಒಂದು ಶ್ಲೋಕವನ್ನು ಬರೆದು ವೃದ್ಧನಾದ ಜನಕನಿಗೆ ಕೊಟ್ಟು "ಅಯ್ಯಾ, ಹೆದರಬೇಡ ಈ ಶ್ಲೋಕವನ್ನು ಕೊಂಡುಹೋಗಿ ಈ ದೇಶದ ಅರಸನಿಗೆ ತೋರಿಸಿದರೆ ಆತ ನಿನಗೆ ಪುಷ್ಕಲವಾಗಿ ಧನವನ್ನು ಕೊಡುತ್ತಾನೆ" ಎಂದು ಹೇಳಿ ತಪಸ್ಸಿಗೆ ಹೋದರು ಬಳಿಕ ಮುದುಕ ಮರುದಿನ ಅರಸನಲ್ಲಿಗೆ ಹೋಗಿ—

ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು
ದಾಶಾಸ್ತಥಾ ದಾಶಪುರೇ ಮೃಗಾಶ್ಚ ।
ಕಾಲಂಜರೇ ಸಪ್ತ ಚ ಚಕ್ರವಾಕಾಃ
ಯೇ ಮಾನಸೇ ತೇ ವಯಮತ್ರಸಿದ್ಧಾಃ ॥

ಎಂಬ ಶ್ಲೋಕವನ್ನು ಓದಲಾಗಿ, ಬ್ರಹ್ಮದತ್ತ ಅದನ್ನು ಕೇಳಿ, ಮಂತ್ರಿಪುತ್ರರೊಂದಿಗೆ ಮೂರ್ಛೆಬಿದ್ದು ಮರಳಿ ಚೇತರಿಸಿಕೊಂಡು, ಆ ಬ್ರಾಹ್ಮಣನಿಗೆ ಬೇಕಾದಷ್ಟು ಗ್ರಾಮಗಳನ್ನೂ ಧನವನ್ನೂ ಕೊಟ್ಟುಕಳುಹಿ, ತನ್ನ ಮಗನಾದ ವಿಷ್ವಕ್ಸೇನನೆಂಬವನಿಗೆ ರಾಜ್ಯದಲ್ಲಿ ಪಟ್ಟಗಟ್ಟಿ, ಸನ್ನತಿಯನ್ನೂ ಮಂತ್ರಿಪುತ್ರರನ್ನೂ ಸಂಗಡ ಕರೆದುಕೊಂಡು, ತನ್ನ ಮಿಕ್ಕ ನಾಲ್ವರು ಅಣ್ಣಂದಿರು ತಪಸ್ಸುಮಾಡುತ್ತಿದ್ದಲ್ಲಿಗೆ ಬಂದು ಸೇರಿದ. ಬಳಿಕ ಕೆಲ ಕಾಲದವರೆಗೆ ಇವರೆಲ್ಲರೂ ಯೋಗಪರಾಯಣರಾಗಿದ್ದು ಕಡೆಗೆ ದೇಹತ್ಯಾಗಮಾಡಿ ಶಾಶ್ವತಸುಖವನ್ನು ಪಡೆದರು [ಮತ್ಸ್ಯ -೨೦, ೨೧. ಶಿವ.-ಉಮಾ. ೪೦. ಹರಿ.-೧-೨೦, ೨೪].

**ಪಿನಾಕ** —ಶಿವನ ಬಿಲ್ಲಿನ ನಾಮಾಂತರ [ಮತ್ಸ್ಯ.-೨೩]

**ಪಿನಾಕಿ.**—ಪಿನಾಕವೆಂಬ ಬಿಲ್ಲನ್ನು ತಳೆದವ ಶಿವನ ನಾಮಾಂತರ.

**ಪಿಪ್ಪಲಾದ** —ದಧೀಚಿ ಮುನಿಯ ಮಗ. ನೋಡು—ದಧೀಚ [ಭಾರ.-ಶಾಂ.೪೬].

**ಪೀವರೀ.** —ವಿಭ್ರಾಜರೆಂಬ ಪಿತೃದೇವತೆಗಳ ಮಗಳು. ಈಕೆ ವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಿ, ಜಿತೇಂದ್ರಿಯನೂ ರೂಪಸೌಂದರ್ಯಶಾಲಿಯೂ ಆದ ಪತಿ ತನಗೆ ದೊರೆಯಬೇಕೆಂದು ಬೇಡಿದಳು ಬಳಿಕ ವಿಷ್ಣುವಿನ ಅನುಗ್ರಹದಿಂದ ವ್ಯಾಸಪುತ್ರನಾದ ಶುಕ ಮುನಿಯನ್ನು ಮದುವೆಯಾಗಿ ಕೃಷ್ಣ, ಗೌರಪ್ರಭ, ಶಂಭು, ಭೂರಿಶ್ರುತ, ಜಯ ಎಂಬ ಐವರು ಪುತ್ರರನ್ನೂ ಕೃತ್ವಿಯೆಂಬ ಕನ್ಯೆಯನ್ನೂ ಪಡೆದಳು. ಈ ಕೃತ್ವಿಯನ್ನು ಚಂದ್ರ ವಂಶದ ಅಣುಹನೆಂಬ ಅರಸು ಮದುವೆಯಾದ [ಮತ್ಸ್ಯ.-೧೫. ಭಾಗ.-೯, ೨೧. ದೇ.ಭಾ.-೧-೧೯].

**ಪುಞ್ಜಿಕಸ್ಥಲಾ**.—ಒಬ್ಬ ಅಪ್ಸರಸಿ [ಭಾರ -ಆದಿ. ೧೧೩. ಸಭಾ. ೧೦]. ಈಕೆ ಶಾಪದಿಂದ ಕಪಿಜನ್ಮವನ್ನು ಪಡೆದು ಕುಂಜರನೆಂಬ ಕಪಿನಾಯಕನಿಗೆ ಮಗಳಾಗಿ ಅಂಜನೆಯೆಂಬ ಹೆಸರಿನಿಂದ ಹುಟ್ಟಿದಳು ಒಮ್ಮೆ ಈಕೆ ದಿವ್ಯವಸ್ತ್ರಾಭರಣಭೂಷಿತೆ ಯಾಗಿ ಸಂಚರಿಸುತ್ತಿದ್ದಾಗ, ವಾಯುದೇವ ಈಕೆಯ ಸೌಂದರ್ಯಕ್ಕೆ ಬೆರಗಾಗಿ, ಈಕೆಯೊಂದಿಗೆ ಕಲೆಯಲು, ಆಂಜನೇಯನನ್ನು ಪಡೆದಳು ನೋಡ—ಅಂಜನಾ, ಆಂಜನೇಯ, ಕೇಸರಿ, ಹನೂಮಂತ [ರಾಮಾ.-ಕಿಷ್ಕಿಂ. ೬೩ ತತ್ವಸಂ.ರಾಮಾ. ಕಿಷ್ಕಿಂ. ೧೭. ಶಿವ.-ಶತರುದ್ರಸಂ. ೨೦].

**ಪುಣ್ಡರೀಕ**—(i) ಅಷ್ಟದಿಗ್ಗಜಗಳಲ್ಲಿ ಒಂದು ಆಗ್ನೇಯ ದಿಕ್ಕಿನಲ್ಲಿದೆ

(ii) ಸಕಲಶಾಸ್ತ್ರ ವಿಶಾರದನಾದ ಒಬ್ಬ ಬ್ರಾಹ್ಮಣ ನಾರಾಯಣನ ಸರ್ವೋತ್ತಮತ್ವ ವಿಷಯವಾಗಿ ನಾರದ ಮುನಿಯ ಸಂಗಡ ಸಂವಾದಮಾಡಿದವ [ಭಾರ.- ಅನು. ೧೮೩]

(iii) ಪಾತಾಳ ಲೋಕದಲ್ಲಿರುವ ಸರ್ಪರಾಜರಲ್ಲಿ ಒಬ್ಬ ಯುಧಿಷ್ಠಿರನ ಅಶ್ವಮೇಧಕ್ಕೆ ಮೊದಲು ಬಭ್ರುವಾಹನನು ಅರ್ಜುನನನ್ನು ಯುದ್ಧದಲ್ಲಿ ಕೊಂದು, ಮರಳಿ ಆತನನ್ನು ಬದುಕಿಸುವ ಸಲುವಾಗಿ ಸಂಜೀವನಮಣಿಯನ್ನು ತರುವುದಕ್ಕಾಗಿ ಪಾತಾಳ ಲೋಕಕ್ಕೆ ಹೋಗಿದ್ದಾಗ ಈತನಲ್ಲಿಗೆ ಹೋದ [ಜೈ ಭಾ -ಅಶ್ವ ೩೫-೪೦]

**ಪುಣ್ಡ್ರ**—(i) ಒಬ್ಬ ಅರಸು. ಬಲಿಯೆಂಬ ರಾಜನ ಹೆಂಡತಿಯಾದ ಸುದೇಷ್ಣೆ ಯೆಂಬವಳಲ್ಲಿ ದೀರ್ಘತಮನೆಂಬ ಮುನಿಯಿಂದ ಜನಿಸಿದ ಐವರು ಪುತ್ರರಲ್ಲಿ ಮೂರನೆ ಯವ. ಅಂಗ, ವಂಗ, ಕಲಿಂಗರು ಇವನ ಅಣ್ಣಂದಿರು. ಸುಹ್ಮನೆಂಬವನು ಇವನ ತಮ್ಮ. ನೋಡು—ದೀರ್ಘತಮ, ಬಲಿ [ಭಾರ.-ಆದಿ ೧೧೩]

(ii) ಒಂದು ದೇಶ ಪಾಂಡವರ ಕಾಲದಲ್ಲಿ ಪೌಂಡ್ರಕವಾಸುದೇವನೆಂಬ ಅರಸು ಇಲ್ಲಿ ರಾಜ್ಯಭಾರಮಾಡುತ್ತಿದ್ದು, ಕೃಷ್ಣನ ಮೇಲೆ ದಂಡೆತ್ತಿ ಮಡಿದ [ಭಾರ -ಸಭಾ ೧೪, ೩೧].

**ಪುನರ್ವಸು**.—(i) ದಕ್ಷನ ಪುತ್ರಿಯರಲ್ಲಿ ಒಬ್ಬಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಇವಳೂ ಒಬ್ಬಳು [ಭಾರ -ಆದಿ ೬೭. ವಿಷ್ಣು -೧, ೧೫] ಒಂದು ನಕ್ಷತ್ರ.

(ii) ಯದು ವಂಶದ ಅರಿದ್ಯೋತನೆಂಬ ಅರಸನ ಮಗ ಈತನಿಗೆ ಆಹುಕ ನೆಂಬ ಮಗನೂ ಆಹುಕಿಯೆಂಬ ಪುತ್ರಿಯೂ ಜನಿಸಿದರು ಕಂಸನ ತಂದೆಯಾದ ಉಗ್ರಸೇನ ಈ ಆಹುಕನ ಮಗ [ಭಾಗ -೯, ೨೪ ವಿಷ್ಣು -೪, ೧೪].

**ಪುರಞ್ಜಯ**—ಒಬ್ಬ ಅರಸು. ಸೂರ್ಯ ವಂಶದ ವಿಕುಕ್ಷಿಯೆಂಬ ಅರಸನ ಮಗ. ನೋಡು—ಕಕುತ್ಸ್ಥ.

**ಪುರನ್ದರ** —ಈಗಣ ವೈವಸ್ವತ ಮನ್ವಂತರದ ಇಂದ್ರನ ಹೆಸರು. ಇವ ಕಶ್ಯಪ ಮುನಿಯಿಂದ ಅದಿತಿ ದೇವಿಯಲ್ಲಿ ಜನಿಸಿದವ ಈತ ಒಂದು ನೂರು ಅಶ್ವಮೇಧ ಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದ ವಿಷ್ಣು ಈತನ ಸಹಾಯಾರ್ಥ ವಾಗಿ ವಾಮನ ರೂಪದಿಂದ ಅವತರಿಸಿದ. ನೋಡು—ಇಂದ್ರ, ಜಯಂತ, ಪೌಲೋಮಿ [ಭಾಗ -೪, ೧೬].

**ಪುರಲಕ್ಷಣ** —ಪಟ್ಟಣ ನಿರ್ಮಾಣಕ್ರಮ ಮುಂತಾದ್ದು [ಶಾಂತಿ. ೮೬].

**ಪುರಾಣ** —ವೇದದಲ್ಲಿ ವರ್ಣಿತವಾಗಿರುವ ಅರ್ಥವನ್ನೇ ವಿವರವಾಗಿ ಬೋಧಿಸ ತಕ್ಕ ಗ್ರಂಥಗಳು ಇವುಗಳಲ್ಲಿ ಮಹಾಪುರಾಣಗಳೆಂತಲೂ ಉಪಪುರಾಣಗಳೆಂತಲೂ ಎರಡು ಭೇದ. ಇವುಗಳನ್ನು ಅನೇಕ ಮಂದಿ ಮಹರ್ಷಿಗಳು ಬೇರೆ ಬೇರೆ ಕಾಲಗಳಲ್ಲಿ ರಚಿಸಿದರು [ಭಾರ -ಆದಿ ೧]

ಮಹಾಪುರಾಣಗಳು ಮತ್ತು ಅವುಗಳ ಗ್ರಂಥಪರಿಮಾಣ* —

| | | | |
|---|---|---|---|
| ೧ ಬ್ರಾಹ್ಮಪುರಾಣ | ೧೦೦೦೦ | ೧೦. ಬ್ರಹ್ಮವೈವರ್ತಪುರಾಣ | ೧೮೦೦೦ |
| ೨ ಪಾದ್ಮ ,, | ೫೫೦೦೦ | ೧೧ ಲೈಂಗ ,, | ೧೧೦೦೦ |
| ೩ ವೈಷ್ಣವ ,, | ೨೩೦೦೦ | ೧೨. ವಾರಾಹ ,, | ೨೪೦೦೦ |
| ೪ ಶೈವ ,, | ೨೪೦೦೦ | ೧೩ ಸ್ಕಾಂದ ,, | ೮೧೧೦೦ |
| ೫ ಭಾಗವತ ,, † | ೧೮೦೦೦ | ೧೪ ವಾಮನ ,, | ೧೦೦೦೦ |
| ೬. ನಾರದೀಯಪುರಾಣ | ೨೫೦೦೦ | ೧೫ ಕೌರ್ಮ ,, | ೧೭೦೦೦ |
| ೭ ಮಾರ್ಕಂಡೇಯಪುರಾಣ | ೯೦೦೦ | ೧೬ ಮಾತ್ಸ್ಯ ,, | ೧೪೦೦೦ |
| ೮. ಆಗ್ನೇಯ ,, | ೧೫೪೦೦ | ೧೭ ಗಾರುಡ ,, | ೯೮೦ |
| ೯. ಭವಿಷ್ಯ ,, | ೧೪೫೦೦ | ೧೮ ಬ್ರಹ್ಮಾಂಡ ,, | ೧೨೦೦೦ |

ಒಟ್ಟು ಗ್ರಂಥ ಸಂಖ್ಯೆ ೪೦೦೦೦೦ — ೨೦ = ೩೯೯೯೮೦ [ದೇ.ಭಾ.-೧, ೩. ಮತ್ಸ್ಯ.-೫೩]

ಮೇಲೆ ಹೇಳಿದ ಸಂಖ್ಯೆಗೆ ಭಾರತ ಗ್ರಂಥದ ಒಂದು ಲಕ್ಷವನ್ನೂ ಸೇರಿಸಿ ದರೆ ಪುರಾಣ ಸಂಖ್ಯೆ ಒಟ್ಟು ೫ ಲಕ್ಷ [ಪದ್ಮ-ಪಾತಾಳಖಂಡ. ೭೧] ಮಹಾ

---

*ಒಂದು ಅನುಷ್ಟುಪ್ ಶ್ಲೋಕ ಅಥವಾ ೩೨ ಅಕ್ಷರಗಳಿಗೆ ಒಂದು ಗ್ರಂಥವೆಂದು ಸಂಜ್ಞೆ

† ಭಾಗವತಗಳು—(ಶ್ರೀ ಕೃಷ್ಣನ ಮಹಿಮೆಯನ್ನು ಬೋಧಿಸುವ) ಶ್ರೀ ಭಾಗವತ, (ದೇವಿಯ ಮಹಿಮೆಯನ್ನು ತಿಳಿಸುವ) ದೇವೀಭಾಗವತ ಎಂಬದಾಗಿ ಎರಡು ವಿಧವಾಗಿವೆ ಕೆಲವರು ಶ್ರೀ ಭಾಗವತವೇ ಮಹಾಪುರಾಣಗಳಲ್ಲಿ ಸೇರತಕ್ಕದ್ದೆಂತಲೂ ಮತ್ತೆ ಕೆಲವರು ದೇವೀಭಾಗವತವೆ ಮಹಾ ಪುರಾಣಗಳಲ್ಲಿ ಸೇರತಕ್ಕದ್ದೆಂತಲೂ ವಿಶೇಷವಾಗಿ ಪ್ರತಿಪಾದಿಸಿರುತ್ತಾರೆ ಮತ್ತೆ ಕೆಲವರು ಶ್ರೀ ಭಾಗವತ ವಿಷ್ಣುಪುರಾಣದ ಆಧಾರದ ಮೇಲೆ ಬರೆದ ನವೀನ ಗ್ರಂಥವೆಂತಲೇ ವಾದಿಸುತ್ತಾರೆ

ಪುರಾಣಗಳಲ್ಲಿ—ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥಾ, ಹೇತು, ಅಪಾಶ್ರಯ ಎಂಬದಾಗಿ ಹತ್ತು ಲಕ್ಷಣಗಳಿರಬೇಕು. ಉಪ ಪುರಾಣಗಳಲ್ಲಿ—ಸರ್ಗ, ಪ್ರತಿಸರ್ಗ, ವಂಶ, ಮನ್ವಂತರವರ್ಣನ, ವಂಶಾನುಚರಿತ ಗಳೆಂಬ ಐದು ಲಕ್ಷಣಗಳಿರಬೇಕು [ಕೂರ್ಮ. ಮಲಮಾಸತತ್ವಖಂಡ].

ಹದಿನೆಂಟು ಮಹಾಪುರಾಣಗಳನ್ನೂ ವ್ಯಾಸ ಮಹರ್ಷಿಯೇ (ಕೃಷ್ಣದ್ವೈಪಾಯ ನನೇ) ರಚಿಸಿ ತನ್ನ ಮಗನಾದ ಶುಕಮುನಿಗೆ ಬೋಧಿಸಿದನೆಂಬದಾಗಿ ಅಲ್ಲಲ್ಲಿ ಆಧಾರಗಳಿವೆ ಆದರೆ ಸೂಕ್ಷ್ಮವಾಗಿ ವಿವೇಚಿಸಿದಲ್ಲಿ ಈ ಮಾತು ಸಮರ್ಪಕವಾಗಿ ತೋರುವುದಿಲ್ಲ.

" ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ "

ಎಂಬ ವಚನಾನುಸಾರ ವೇದದಲ್ಲಿ ಪ್ರತಿಪಾದಿತವಾಗಿರುವ ರಹಸ್ಯಾರ್ಥಗಳನ್ನು ವಿವರಿಸುವ ಸಲುವಾಗಿ ಪುರಾಣಗಳು ಹೊರಬಿದ್ದುವು ಇವುಗಳನ್ನು ಅನೇಕ ಮಂದಿ ಮಹರ್ಷಿಗಳು ಬೇರೆಬೇರೆ ಕಲ್ಪಗಳಲ್ಲಿ ರಚಿಸಿದರೆಂತಲೇ ಹೇಳಬೇಕಾಗುತ್ತದೆ ಆದಿ ಯಲ್ಲಿ ನೂರು ಕೋಟಿ ಗ್ರಂಥಪರಿಮಿತವಾದ ಪುರಾಣರಾಶಿ ಚತುರ್ಮುಖನ ಬಾಯಿಂದ ಹೊರಬಂತು ತ್ರಿವರ್ಗಸಾಧನವೇ ಇದಕ್ಕೆ ಫಲ ವೇದಗಳು ಬ್ರಹ್ಮನ ನಾಲ್ಕು ಬಾಯಿಗಳಿಂದಲೂ ಹೊರಡುವುದಕ್ಕಿಂತಲೂ ಮುಂಚಿತವಾಗಿಯೇ ಇವು ಹೊರಬಂದ ಕಾರಣ ಇವುಗಳಿಗೆ ಪುರಾಣಗಳೆಂದು ಹೆಸರು (ಪುರಾ+ನೀಯತೇ ಇತಿ=ಪುರಾಣಂ). ಪ್ರಳಯಕಾಲದಲ್ಲಿ ಶತಕೋಟಿಗ್ರಂಥ ಪರಿಮಿತವಾದ ಈ ಪುರಾಣರಾಶಿ ಸುಟ್ಟುಹೋಗ ಲಾಗಿ ವಿಷ್ಣು ಮತ್ಸ್ಯರೂಪದಿಂದ ಅವತರಿಸಿ, ಅವುಗಳನ್ನೆಲ್ಲ ಚತುರ್ಮುಖನಿಗೆ ಉಪದೇಶಿಸಿದ ಕಾಲಕ್ರಮದಲ್ಲಿ ಈ ಪುರಾಣಗಳು ಶಿಥಿಲವಾಗುತ್ತ ಬಂದವು. ಅದ ಕ್ಕಾಗಿ ವಿಷ್ಣು ಒಂದೊಂದು ಚತುರ್ಯುಗದ ದ್ವಾಪರಯುಗದಲ್ಲಿಯೂ ವ್ಯಾಸರೂಪ ದಿಂದ ಅವತರಿಸಿ, ಆ ಪುರಾಣರಾಶಿಯ ಸಾರವನ್ನು ನಾಲ್ಕು ಲಕ್ಷ ಗ್ರಂಥ ಪರಿಮಿತಿಗೆ ಇಳಿಸಿ, ಲೋಕದಲ್ಲಿ ಪ್ರಚಾರಗೊಳಿಸುತ್ತಾನೆ [ಮತ್ಸ್ಯ -೫೩].

ಈ ಮೇಲಣ ಆಧಾರದಿಂದ ಹದಿನೆಂಟು ಪುರಾಣಗಳನ್ನೂ ವ್ಯಾಸರೇ ಬರೆದ ರೆಂಬುದು ಉಪಚಾರೋಕ್ತಿಯಲ್ಲದೆ ವಾಸ್ತವವಲ್ಲವೆಂದು ವ್ಯಕ್ತವಾಗುತ್ತದೆ

ಪುರಾಣಗಳ ಮಾಹಾತ್ಮ್ಯ, ಅವುಗಳಲ್ಲಿ ವರ್ಣಿತವಾಗಿರುವ ವಿಷಯಗಳು, ಯಾವ ಕಾಲದಲ್ಲಿ ಯಾರಿಂದ ಯಾರಿಗಾಗಿ ಹೊರಬಿದ್ದವು ಎಂಬ ಮುಂತಾದ ವಿಷಯಗಳು [ಮತ್ಸ್ಯ.-೫೩. ಭಾಗ.-೧೨, ೧೩. ದೇ. ಭಾ -೧, ೩. ಲಿಂಗ.-೨. ಶಿವ.- ಉಮಾಖಂ. ೪೫].

**ಪುರುಕುತ್ಸ**—ಸೂರ್ಯವಂಶದ ಮಾಂಧಾತೃ ರಾಜನಿಂದ ಬಿಂದುಮತಿಯೆಂಬ ರಾಣಿಯಲ್ಲಿ ಜನಿಸಿದವ. ನೋಡು—ನರ್ಮದಾ, ಅನರಣ್ಯ [ಭಾಗ.-೯-೬]. ಈತ

ನಾಗಕುಲದ ನರ್ಮದೆಯೆಂಬವಳನ್ನು ಮದುವೆಯಾಗಿ ನಾಗಕುಲವನ್ನು ಹಿಂಸಿಸುತ್ತಿದ್ದ ಗಂಧರ್ವರನ್ನು ಸೋಲಿಸಿದ ಅನರಣ್ಯ ಈತನ ಮಗ [ಭಾರ.-ಸಭಾ ೮. ಅನು. ೧೭೭].

**ಪುರುಜಿತ್.**—ಕುಂತಿ ದೇಶದ ಅರಸನಾದ ಭೋಜ ರಾಜನ ಮಗ. ಕುಂತಿಯ ಒಡಹುಟ್ಟಿದವ ಅತಿರಥ [ಭಾರ -ಉ ೧೭೨ ಭೀಷ್ಮ ೨೫] ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ದ್ರೋಣನಿಂದ ಮಡಿದ [ದ್ರೋ. ೨೩]

**ಪುರೂರವಸ್** —ಚಂದ್ರ ಪುತ್ರನಾದ ಬುಧನಿಂದ ಇಲೆಯಲ್ಲಿ ಜನಿಸಿದವ. ಈತ ದೇವವಿಲಾಸಿನಿಯಾದ ಊರ್ವಶಿಯಲ್ಲಿ ಆಯು, ಧೀಮಂತ, ಅಮಾವಸು, ದೃಢಾಯು, ವನಾಯು, ಶತಾಯು ಎಂಬ ಪುತ್ರರನ್ನು ಪಡೆದ [ಭಾರ -ಆ. ೬೩, ೬೯].

**ಪುರೂರವನ ಚರಿತ್ರೆ.**—[ಭಾಗವತ-೯-೧೪ ಹರಿ -೧-೨೬. ಮತ್ಸ್ಯ -೨೪. ವಾಯು -೯೧ ದೇ ಭಾಗ -೧-೧೩]

**ಪುರೂರವ ವಂಶವರ್ಣನ** —[ಭಾಗ -೯-೧೫. ಹರಿ -೧-೨೭ ವಾಯು -೯೧. ಮತ್ಸ್ಯ -೧೧೫] ಪುಷ್ಕರವನ್ನು ಕದಿಯಲಿಲ್ಲವೆಂಬ ವಿಷಯದಲ್ಲಿ ಈತ ಆಣೆಯಿಟ್ಟುಕೊಂಡದ್ದು [ಅನು. ೧೪೩].

**ಪುರೋಚನ** —ದುರ್ಯೋಧನನ ಮಂತ್ರಿಗಳಲ್ಲಿ ಒಬ್ಬ. ಪಾಂಡವರನ್ನು ನಿರ್ಮೂಲಗೊಳಿಸುವ ಉದ್ದೇಶದಿಂದ ದುರ್ಯೋಧನನ ಸೂಚನೆಯ ಮೇರೆಗೆ ಇಂದ್ರಪ್ರಸ್ಥದಲ್ಲಿ ಅರಗಿನ ಮನೆಯನ್ನು ಕಟ್ಟಿಸಿ ಅದರಲ್ಲಿಯೇ ವಾಸವಾಗಿದ್ದ [ಭಾರ.-ಆದಿ. ೧೫೬] ವಿದುರನ ಮೂಲಕ ಈ ಒಳಸಂಚನ್ನು ತಿಳಿದಿದ್ದ ಭೀಮ ರಾತ್ರಿ ಹೊತ್ತಿನಲ್ಲಿ ತನ್ನ ಜನನಿಯನ್ನೂ ಸೋದರರನ್ನೂ ಕರೆದುಕೊಂಡು ಹೊರಬಂದು ಅರಗಿನ ಮನೆಗೆ ಬೆಂಕಿಯನ್ನು ಹೊತ್ತಿಸಲಾಗಿ ಪುರೋಚನ ಅಲ್ಲಿಯೇ ಬೆಂಕಿಗೆ ಆಹುತಿಯಾದ [ಭಾರ.-ಆದಿ. ೧೬೦]

**ಪುಲಸ್ತ್ಯ** —ಕೃತಯುಗದ ಅಂತ್ಯಭಾಗದಲ್ಲಿ ಚತುರ್ಮುಖನ ಮಾನಸಪುತ್ರ. ಮೇರು ಪರ್ವತದ ತಪ್ಪಲಿನಲ್ಲಿ ತಪಸ್ಸುಮಾಡಿಕೊಂಡಿದ್ದು, ತೃಣಬಿಂದು ಮುನಿಯ ಮಗಳಾದ ಗೋ ಎಂಬವಳನ್ನು ಮದುವೆಯಾಗಿ ವಿಶ್ರವಸನೆಂಬ ಮಗನನ್ನು ಪಡೆದ [ರಾಮಾ.-ಉತ್ತ. ೨]. ರಾವಣ ಕಾರ್ತವೀರ್ಯಾರ್ಜುನನ ಮೇಲೆ ಯುದ್ಧಕ್ಕೆ ಹೋಗಿ ಸೆರೆಸಿಕ್ಕಿದಾಗ ಪುಲಸ್ತ್ಯ ಕಾರ್ತವೀರ್ಯನಲ್ಲಿಗೆ ಹೋಗಿ ರಾವಣನನ್ನು ಬಿಡಿಸಿದ [ರಾಮಾ -ಉತ್ತ ೩೩]. ಈತ ಕರ್ದಮ ಬ್ರಹ್ಮನ ಮಗಳಾದ ಹವಿರ್ಭುಕ್ ಎಂಬವಳನ್ನು ಮದುವೆಯಾಗಿ ಅಗಸ್ತ್ಯ ಮಹರ್ಷಿಯನ್ನು ಪಡೆದ. ಇಲಬಿಲೆಯೆಂಬವಳಲ್ಲಿ ಕುಬೇರನನ್ನೂ ಕೇಶಿನಿಯೆಂಬವಳಲ್ಲಿ ರಾವಣಾದಿಗಳನ್ನೂ ಪಡೆದ [ಭಾಗ.-೪-೧]. ಪ್ರೀತಿಯೆಂಬ ಹೆಂಡತಿಯಲ್ಲಿ ದಂಭೋಳಿಯೆಂಬ ಮಗನನ್ನು ಪಡೆದ [ವಿಷ್ಣು.-೧-೧೦].

ಈತನಿಗೆ ಸಂಧ್ಯಾ, ಪ್ರತೀಚ್ಯಾ ಎಂಬ ಬೇರೆ ಇಬ್ಬರು ಹೆಂಡತಿಯರಿದ್ದರು [ಭಾರ.-ಉ. ೧೧೭]. ಭೂ ಪ್ರದಕ್ಷಿಣೆಯ ವಿಷಯವಾಗಿ ಭೀಷ್ಮನೊಂದಿಗೆ ಸಂವಾದಮಾಡಿದ [ಭಾರ.-ವನ. ೭೯]. ಪರಾಶರ ಮುನಿ ತನ್ನ ತಂದೆಯಾದ ಶಕ್ತಿ ಮುನಿಯನ್ನು ರಾಕ್ಷಸ ನುಂಗಿದ ಕಾರಣ, ರಾಕ್ಷಸಕುಲ ವಿನಾಶಾರ್ಥವಾಗಿ ಪರಾಶರ ಯಜ್ಞ ಮಾಡತೊಡಗಿದಾಗ ಪುಲಸ್ತ್ಯ ಪರಾಶರನಲ್ಲಿಗೆ ಹೋಗಿ, ಆತನನ್ನು ಬೇಡಿ, ಯಜ್ಞವನ್ನು ನಿಲ್ಲಿಸಿದ [ಭಾರ -ಆದಿ. ೧೮೭] ಪುಲಸ್ತ್ಯ ವಂಶವರ್ಣನೆ [ಭಾರ -ಆದಿ. ೬೭]. ತೀರ್ಥಮಹಿಮೆಯನ್ನು ವರ್ಣಿಸಿದ್ದು [ಭಾರ.-ವನ ೮೦].

**ಪುಲಹ** —ಚತುರ್ಮುಖನ ಹೊಕ್ಕುಳಿನಿಂದ ಜನಿಸಿದ ಒಬ್ಬ ಬ್ರಹ್ಮರ್ಷಿ. ಈತ ಕರ್ದಮ ಬ್ರಹ್ಮನ ಮಗಳಾದ ಗತಿಯೆಂಬವಳನ್ನು ಮದುವೆಯಾಗಿ ಕರ್ಮಶ್ರೇಷ್ಠ, ವರೀಯಸ್, ಸಹಿಷ್ಣು ಎಂಬ ಮೂವರು ಪುತ್ರರನ್ನು ಪಡೆದ [ಭಾರ -ಆದಿ. ೬೬, ೬೭. ಸಭಾ. ೭].

**ಪುಲಿನ್ದ** —(i) ಒಂದು ದೇಶ. ಇದು ಇಂದ್ರಪ್ರಸ್ಥಕ್ಕೆ ದಕ್ಷಿಣ ಭಾಗನಾಗಿ ಸಾಗರ ಜಿಲ್ಲೆಗೆ ಸೇರಿ ಬುಂದೇಲ ಖಂಡಕ್ಕೆ ಪಶ್ಚಿಮದಲ್ಲಿದೆ [ಭಾರ.-ಸಭಾ ೩೧. ಭೀ. ೯] ಪಾಂಡವರ ಕಾಲದಲ್ಲಿ ಸುಕುಮಾರ, ಸುಮಿತ್ರರೆಂಬ ಅರಸರು ಈ ರಾಜ್ಯವನ್ನು ಆಳುತ್ತಿದ್ದರು. [ಭಾರ -ಸಭಾ. ೨೯].

(ii) ಚಂದ್ರಹಾಸನ ಸಾಕು ತಂದೆ ಬೇಡರ ಅರಸು ನೋಡು—ಚಂದ್ರಹಾಸ.

**ಪುಲೋಮ.**—ಒಬ್ಬ ರಾಕ್ಷಸ ಇವ ಭೃಗುಮಹರ್ಷಿಯ ಪತ್ನಿಯಾದ ಪುಲೋಮೆಯೆಂಬವಳನ್ನು ಅಪಹರಿಸಿದ. ನೋಡು—ಪುಲೋಮಾ, ಚ್ಯವನ [ಭಾರ -ಆದಿ. ೫].

**ಪುಲೋಮಾ** —(i) ವೈಶ್ವಾನರನೆಂಬ ರಾಕ್ಷಸನ ಮಗಳು ಮಾರೀಚನೆಂಬ ರಾಕ್ಷಸನನ್ನು ಮದುವೆಯಾಗಿ ಅನೇಕ ಮಂದಿ ಪುತ್ರರನ್ನು ಪಡೆದಳು ಇವಳ ಸಂತತಿಯವರಿಗೆ ಪೌಲೋಮರೆಂದೇ ಹೆಸರು. ಅರ್ಜುನ ಇಂದ್ರಲೋಕಕ್ಕೆ ಹೋಗಿದ್ದಾಗ ಇವರನ್ನು ಕೊಂದ ನೋಡು—ನಿವಾತಕವಚ [ಭಾರ -ವನ ೧೭೫]

(ii) ಭೃಗ ಮಹರ್ಷಿಯ ಹೆಂಡತಿ. ಈಕೆ ಚ್ಯವನ, ವಜ್ರಶೀರ್ಷ, ಶುಚಿ, ಔರ್ವ, ಶುಕ್ರ, ವರೇಣ್ಯ, ಸವನ ಎಂಬ ಏಳು ಮಂದಿ ಪುತ್ರರನ್ನು ಪಡೆದಳು. ಇವಳನ್ನು ಪುಲೋಮನೆಂಬ ರಾಕ್ಷಸ ಅಪಹರಿಸಿದ [ಭಾರ.-ಆ. ೫, ಅನು. ೧೩೨].

**ಪುಷ್ಕರ.**—(i) ಒಂದು ಪರ್ವತ [ಭಾರ.-ಭೀ. ೧೨].

(ii) ಏಳು ಮಹಾದ್ವೀಪಗಳಲ್ಲಿ ಒಂದು [ವಿಷ್ಣು.-೨, ४. ಮತ್ಸ್ಯ.-೧೨೩]. ನೋಡು—ಪುಷ್ಕರ ದ್ವೀಪ.

(iii) ವರುಣನ ಮಗ. ಇವ ಚಂದ್ರನ ಮಗಳಾದ ಜ್ಯೋತ್ಸ್ನಾಕಾಲಿಯೆಂಬವಳನ್ನು ಮದುವೆಯಾದ [ಭಾರ.-ಉ. ೯೮].

(iv) ಒಂದು ಕ್ಷೇತ್ರ. ಅಜಮೀಢಪುರಕ್ಕೆ (Ajmer) ಆರು ಮೈಲುಗಳ ದೂರದಲ್ಲಿದೆ [ಭಾರ.-ವನ ೮೦]. ತ್ರೇತಾಯುಗದಲ್ಲಿ ಈ ಸರೋವರ ಅತ್ಯಂತ ಪವಿತ್ರತಮವಾಗಿ ಪ್ರಸಿದ್ಧವಾಗಿತ್ತು [ಭಾರ.-ವನ. ೮೩, ಅನು. ೬೪].

(v) ಒಬ್ಬ ಅರಸು ನಿಷಧ ದೇಶಾಧಿಪತಿಯಾದ ನಲ ರಾಜನೊಂದಿಗೆ ಜೂಜಾಡಿ, ಅವನನ್ನು ಸೋಲಿಸಿ, ಆತನ ರಾಜ್ಯವನ್ನು ಕಸುಗೊಂಡ [ಭಾರ.-ವನ. ೫೬] ಪುನಃ ನಳನಿಂದ ಪುಷ್ಕರ ಸೋತದ್ದು [ಭಾರ.-ವನ. ೭೬].

(vi) ದಶರಥ ಪುತ್ರನಾದ ಭರತನಿಂದ ಮಾಂಡವಿಯಲ್ಲಿ ಜನಿಸಿದ ಇಬ್ಬರು ಮಕ್ಕಳಲ್ಲಿ ಕಿರಿಯವ. ತಕ್ಷನೆಂಬವ ಹಿರಿಯವ. ಭರತ ಗಂಧರ್ವ ದೇಶವನ್ನು ಜಯಿಸಿ, ತಕ್ಷಶಿಲಾ, ಪುಷ್ಕರಾವತವೆಂಬ ಎರಡು ಪಟ್ಟಣಗಳನ್ನು ತನ್ನ ಇಬ್ಬರು ಮಕ್ಕಳ ಹೆಸರಿನಿಂದಲೇ ನಿರ್ಮಿಸಿ, ಆ ಪಟ್ಟಣಗಳಲ್ಲಿ ತನ್ನ ಮಕ್ಕಳಿಗೆ ಪಟ್ಟಗಟ್ಟಿದ [ರಾಮಾ -ಉತ್ತ. ೧೦೦].

**ಪುಷ್ಕರದ್ವೀಪ.**—ಇದರ ಸುತ್ತಲೂ ದಧಿ ಸಮುದ್ರವಿದೆ ಇದರ ವಿಸ್ತಾರ ೬೪ ಲಕ್ಷ ಯೋಜನ. ಪ್ರಿಯವ್ರತ ರಾಜನ ಮಗನಾದ ವೀತಿಹೋತ್ರ ಇದನ್ನು ಪಾಲಿಸುತ್ತಿದ್ದ. ತನ್ನ ಅನಂತರ ಈ ದ್ವೀಪವನ್ನು ಎರಡು ಭಾಗಮಾಡಿ ರಮಣಕ, ಧಾತಕಿಯೆಂಬ ತನ್ನ ಇಬ್ಬರು ಮಕ್ಕಳಿಗೂ ಹಂಚಿಕೊಟ್ಟ ಈ ದೇಶಗಳು ಅವುಗಳನ್ನು ಪಾಲಿಸಿದ ಅರಸರ ಹೆಸರಿನಿಂದಲೇ ಪ್ರಖ್ಯಾತಿಗೊಂಡಿವೆ. ಈ ದ್ವೀಪದಲ್ಲಿ ಮಾನಸವೆಂಬ ಪರ್ವತವಿದೆ [ವಿಷ್ಣು. ೨-೪].

**ಪುಷ್ಪಕ.**—ಕುಬೇರನ ವಿಮಾನ ಇದು ಎಷ್ಟು ಮಂದಿಯನ್ನಾದರೂ ಒಳಗೆ ಕೂಡಿಸಿಕೊಳ್ಳುವ ಮಹಿಮೆಯುಳ್ಳದ್ದು ಇದನ್ನು ಕುಬೇರ ಬ್ರಹ್ಮನಿಂದ ಪಡೆದ ಇದು ಸ್ವತಂತ್ರವಾಗಿ ಸಂಚರಿಸುವ ಮಹಿಮೆಯುಳ್ಳದ್ದು [ವಾ.-ರಾ.-ಉತ್ತ ೩ ಭಾರ -ಸ. ೫]. ರಾವಣ ಕುಬೇರನನ್ನು ಸೋಲಿಸಿ ಅವನಿಂದ ಲಂಕಾ ರಾಜ್ಯವನ್ನೂ ಪುಷ್ಪಕ ವಿಮಾನವನ್ನೂ ಕಸುಗೊಂಡ [ರಾ -ಉತ್ತ. ೧೧ ಭಾರ.-ವನ. ೨೭೬]. ರಾವಣವಧಾನಂತರ ಶ್ರೀ ರಾಮ ತನ್ನ ಪರಿವಾರಸಮೇತನಾಗಿ ಈ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಬಂದು, ಪುಷ್ಪಕವನ್ನು ಕುಬೇರನಲ್ಲಿಗೆ ಕಳುಹಿದ. ಆದರೆ ಕುಬೇರ ರಾವಣನನ್ನು ಕೊಂದುದಕ್ಕಾಗಿ ವಿಮಾನವನ್ನು ಶ್ರೀ ರಾಮನಿಗೆ ಕಾಣಿಕೆಯಾಗಿ ಕಳುಹಿಸಿದ. ಬಳಿಕ ಪುಷ್ಪಕ ರಾಮನ ಅಪ್ಪಣೆಯಂತೆ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದು, ಶ್ರೀ ರಾಮ ಸ್ಮರಿಸಿದಕೂಡಲೇ ಆತನಲ್ಲಿಗೆ ಬಂದು ಸೇರುತ್ತಿತ್ತು [ಭಾರ.-ವನ. ೨೯೨. ರಾಮಾ.-ಉತ್ತ. ೪೧].

**ಪುಷ್ಪದನ್ತ** —(i) ಅಷ್ಟದಿಗ್ಗಜಗಳಲ್ಲಿ ಒಂದು. ವಾಯುವ್ಯ ದಿಕ್ಕಿನಲ್ಲಿದೆ.

(ii) ಒಬ್ಬ ಗಂಧರ್ವ. ಮಹಾಶಿವಭಕ್ತನಾಗಿದ್ದು ಒಮ್ಮೆ ತನ್ನ ಮಹಿಮೆಯನ್ನು ಹೋಗಲಾಡಿಸಿಕೊಂಡು, ಮರಳಿ ಮಹಿಮ್ನಸ್ತೋತ್ರವನ್ನು ರಚಿಸಿ, ಶಿವನನ್ನು ಹೊಗಳಿ, ತನ್ನ ಪೂರ್ವಸ್ಥಿತಿಯನ್ನು ಪಡೆದ [ದೇ ಭಾಗ.-೯-೨೦].

**ಪುಷ್ಪೋತ್ಕಟಾ** — ಸುಮಾಲಿಯೆಂಬ ರಾಕ್ಷಸನ ಮಗಳು ಪುಲಸ್ತ್ಯ ಪುತ್ರನಾದ ವಿಶ್ರವಸನನ್ನು ಮದುವೆಯಾಗಿ ರಾವಣ, ಕುಂಭಕರ್ಣರನ್ನು ಪಡೆದಳು [ಭಾರ -ವನ. ೨೭೬]

**ಪುಷ್ಯ(ಮಿಾ).**—ದಕ್ಷನ ಮಗಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು [ವಿಷ್ಣು -೧-೧೫. ಭಾರ -ಆದಿ ೬೭]. ಒಂದು ನಕ್ಷತ್ರ.

**ಪೂಜನೀ.**—ಒಂದು ಹಕ್ಕಿ ಇದು ಬ್ರಹ್ಮದತ್ತ ರಾಜನ ಅರಮನೆಯಲ್ಲಿ ಗೂಡುಮಾಡಿಕೊಂಡಿತ್ತು. ಬ್ರಹ್ಮದತ್ತನಿಗೆ ಸರ್ವಸೇನನೆಂಬ ಮಗ ಹುಟ್ಟಿದ. ಅದೇ ಸಮಯದಲ್ಲಿಯೇ ಆ ಹಕ್ಕಿಯೂ ಒಂದು ಮೊಟ್ಟೆಯಿಟ್ಟು ಮರಿಮಾಡಿತು ಪೂಜನಿ ಅನುದಿನವೂ ಆಹಾರಕ್ಕೆ ಹೋಗಿ ಸಂಜೆಗೆ ಹಿಂದಿರುಗುವಾಗ ಅಮೃತ ತುಲ್ಯಗಳಾದ ಎರಡು ಹಣ್ಣುಗಳನ್ನು ತಂದು, ಒಂದನ್ನು ತನ್ನ ಮರಿಗೆ ಕೊಟ್ಟು ಮತ್ತೊಂದನ್ನು ರಾಜಪುತ್ರನಿಗೆ ಕೊಡುತ್ತಿತ್ತು. ಇಬ್ಬರೂ ಅದನ್ನು ತಿಂದು ಸುಖದಿಂದ ಆಡುತ್ತಿದ್ದರು ಒಂದು ದಿನ ಸರ್ವಸೇನನಿಗೆ ಆಡಿಕೊಳ್ಳುವುದಕ್ಕಾಗಿ ದಾದಿ ಆ ಮರಿಯನ್ನು ಗೂಡಿನಿಂದ ತೆಗೆದು ಮಗುವಿನ ಕೈಗೆ ಕೊಟ್ಟಳು ಸರ್ವಸೇನನು ಅದರ ಕತ್ತನ್ನು ಹಿಸುಕಿ ಕೊಂದ ಸಂಜೆಗೆ ಹಣ್ಣುಗಳನ್ನು ತೆಗೆದುಕೊಂಡು ಬಂದ ಪೂಜನಿ ತನ್ನ ಮರಿಯ ದುರವಸ್ಥೆಯನ್ನು ಕಂಡು ಗೋಳಾಡಿ, ರಾಜನನ್ನು ಹೀಯಾಳಿಸಿ, ಸರ್ವಸೇನನ ಕಣ್ಣುಗಳನ್ನು ತನ್ನ ಕೊಕ್ಕಿನಿಂದ ತಿವಿದು ಕುರುಡು ಮಾಡಿ ಅಲ್ಲಿಂದ ಹಾರಿಹೋಯಿತು [ಹರಿ -೧-೨೦. ಶಾಂತಿ. ೧೩೯].

**ಪೂತನಾ.**—ಬಾಲಗ್ರಹಗಳಲ್ಲಿ ಒಂದು ದೇವತೆ [ಭಾರ.-ವನ ೨೩೦]. ಒಬ್ಬ ರಕ್ಕಸಿ ಕಂಸನ ಪ್ರೇರಣೆಯ ಮೇರೆಗೆ ಬಾಲಕೃಷ್ಣನನ್ನು ಕೊಲ್ಲಬಂದು ಮಡಿದಳು [ಭಾಗ -೧೦-೬ ಹರಿ.-೨-೬. ವಿಷ್ಣು -೫-೫]

**ಪೂರು.**—(1) ಚಂದ್ರ ವಂಶದ ಯಯಾತಿ ರಾಜನಿಂದ ವೃಷಪರ್ವ ರಾಜಪುತ್ರಿಯಾದ ಶರ್ಮಿಷ್ಠೆಯಲ್ಲಿ ಜನಿಸಿದ ನಾಲ್ವರಲ್ಲಿ ಕಿರಿಯವ. ಅನು, ದ್ರುಹ್ಯು, ಯದು ಎಂಬವರು ಇವನ ಅಣ್ಣಂದಿರು. ಈತ ತನ್ನ ತಂದೆಯಾದ ಯಯಾತಿ ರಾಜನ ಮುದಿತನವನ್ನು ಕೈಕೊಂಡು ತನ್ನ ಯೌವನವನ್ನು ಆತನಿಗೆ ಒಪ್ಪಿಸಿದ ಕಾರಣ ರಾಜ್ಯಾಧಿಕಾರವನ್ನು ಪಡೆದ. ಈತ ಕೋಸಲ ರಾಜಪುತ್ರಿಯನ್ನು ಮದುವೆಯಾಗಿ ಜನಮೇಜಯನೆಂಬ ಮಗನನ್ನು ಪಡೆದ [ಭಾರ.-ಆದಿ. ೬೩. ಸಭಾ. ೮. ಮತ್ಸ್ಯ - ೪೬] ಪೌಷ್ಟಿಯೆಂಬ ಮತ್ತೊಬ್ಬ ಹೆಂಡತಿಯಲ್ಲಿ ಪ್ರವೀರ, ಈಶ್ವರ, ರೌದ್ರಾಶ್ವ

ರೆಂಬ ಮೂವರು ಮಕ್ಕಳನ್ನು ಪಡೆದ. ಇವರಲ್ಲಿ ಪ್ರವೀರನಿಂದಲೇ ಇವನ ವಂಶ ಅಭಿವೃದ್ಧಿಗೆ ಬಂತು [ಭಾರ -ಆದಿ. ೮೮]. ಪೂರುವಿಗೆ ರಾಜ್ಯಾಭಿಷೇಕವಾದದ್ದು [ಭಾರ -ಆದಿ ೬೯, ೭೯]. ಪೂರು ವಂಶವರ್ಣನ [ಮತ್ಸ್ಯ -೪೯ ಭಾಗ -೯. ೨೦. ಹರಿ.-೧-೩೧ ವಿಷ್ಣು.-೪-೧೯]. ನೋಡು—ದೇವಯಾನೀ

(ii) ಅರ್ಜುನನ ಸಾರಥಿ [ಭಾರ -ಸಭಾ ೩೬]

**ಪೂರ್ವಚಿತ್ತಿ.**—ಒಬ್ಬ ಅಪ್ಸರಸಿ ಪ್ರಿಯವ್ರತ ರಾಜನ ಪುತ್ರನಾದ ಆಗ್ನೀಧ್ರನ ತಪಸ್ಸನ್ನು ಭಂಗಗೊಳಿಸುವುದಕ್ಕಾಗಿ ಬ್ರಹ್ಮನಿಂದ ಪ್ರೇರಿತಳಾಗಿ, ಆತನಲ್ಲಿಗೆ ಬಂದು, ಆತನನ್ನು ಕಾಮವಿಕಾರಕ್ಕೆ ಗುರಿಪಡಿಸಿದಳು. ಬಳಿಕ ಆಗ್ನೀಧ್ರನಿಂದ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ, ಕೇತು ಮಾಲರೆಂಬ ಒಂಬತ್ತು ಮಂದಿ ಪುತ್ರರನ್ನೂ ಕ್ರಮವಾಗಿ ವರ್ಷಕ್ಕೆ ಒಬ್ಬೊಬ್ಬರಂತೆ ಪಡೆದಳು ಬಳಿಕ ಈ ಒಂಬತ್ತು ಮಂದಿ ಪುತ್ರರೂ ಜಂಬೂ ಮೊದಲಾದ ಒಂಬತ್ತು ಖಂಡಗಳಿಗೆ ಅಧಿಪತಿಗಳಾದರು [ಭಾರ -ಆದಿ ೧೩೭ ಭಾಗ -೫-೨]

**ಪೂರ್ವಫಲ್ಗುನೀ**—ದಕ್ಷನ ಮಗಳು ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು ಒಂದು ನಕ್ಷತ್ರ [ಭಾರ -ಆದಿ ೬೭ ವಿಷ್ಣು.-೧-೧೫]

**ಪೂರ್ವಾಭಾದ್ರ** — ,, ,,

**ಪೂರ್ವಾಷಾಢ** — ,, ,,

**ಪೂಷಾ**—ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ ಪಾರ್ವತಿಯ ವಿವಾಹಸಮಯ ದಲ್ಲಿ ಹಲ್ಲುಮುರಿದುಕೊಂಡ ನೋಡು—ದಕ್ಷ, ದಾಕ್ಷಾಯಣೀ, ಪಾರ್ವತಿ

**ಪೃಥಾ**—ಕುಂತಿಭೋಜನ ಮಗಳಾದ ಕುಂತಿಯ ಹೆಸರು ನೋಡು—ಕುಂತಿ.

**ಪೃಥಿವೀ**—ಭೂಮಿ ನೋಡು—ಕಶ್ಯಪ, ಪರಶುರಾಮ

**ಪೃಥಿವೀ ಗ್ರಹಮಂಡಲವರ್ಣನ**—[ಮತ್ಸ್ಯ ೧೨೪]

**ಪೃಥಿವೀ ವಾಸುದೇವ ಸಂವಾದ**—[ಭಾರ -ಅನು. ೬೯, ೧೫೪]

**ಪೃಥು**—(i) ಯದು ವಂಶದ ಅರಸು [ಆದಿ ೨೦೧, ೨೪೯].

(ii) ಅಷ್ಟವಸುಗಳಲ್ಲಿ ಒಬ್ಬ [ಆದಿ ೧೦೬]

(iii) ವೇನ ರಾಜನ ಮಗ. ವೇನ ನಾಸ್ತಿಕನಾಗಿದ್ದುದರಿಂದ ಭೂಮಿಯಲ್ಲಿ ಬೆಳೆಯಾಗದೆ ಬಿತ್ತಿದ ಬೀಜಗಳನ್ನೆಲ್ಲ ಭೂಮಿಯೇ ನುಂಗಿತ್ತು. ಆಗ ಪ್ರಜೆಗಳೆಲ್ಲರೂ ಒಟ್ಟುಗೂಡಿ ವೇನ ರಾಜನ ಶರೀರವನ್ನು ಮಥನಮಾಡಿ ಪೃಥುವನ್ನು ಸೃಜಿಸಿದರು. ಪೃಥು ಪ್ರಜೆಗಳ ಕಷ್ಟವನ್ನು ನೋಡಿ ಮನಮರುಗಿ ಭೂಮಿಯನ್ನು ನಿಗ್ರಹಿಸಿ, ಅದು ವರೆಗೆ ನುಂಗಿದ್ದ ವಸ್ತುಗಳನ್ನೆಲ್ಲ ಕೊಡಿಸಿ ಪ್ರಜೆಗಳಿಗೆ ಸುಖವನ್ನುಂಟುಮಾಡಿದ ಕಾರಣ ಅಂದಿನಿಂದ ಭೂಮಿಗೆ ಪೃಥಿವೀ (ಪೃಥು ರಾಜನ ಮಗಳು) ಎಂಬ ವ್ಯವಹಾರ

ವುಂಟಾಯಿತು [ವಿಷ್ಣು ೧-೧೩]. ಇದು ಚಾಕ್ಷುಷ ಮನ್ವಂತರದ ಕಥೆ [ಭಾಗ.-೪-೧೩. ಹರಿ -೧-೨. ವಾಯು -೬೨. ಮತ್ಸ್ಯ.-೧೦.ಪದ್ಮ.೧-೨೭. ಭಾರ.-ದ್ರೋ.೬೯. ಶಾಂತಿ ೨೮, ೫೮]. ಈತ ಅರ್ಚಿಸ್ ಎಂಬವಳನ್ನು ಮದುವೆಯಾಗಿ ಅಂತರ್ಧಾನನೆಂಬ ಮಗನನ್ನು ಪಡೆದ [ಭಾಗ.-೪-೧೫ ವಿಷ್ಣು.-೧-೧೪]. ಪ್ರಾಚೀನಬರ್ಹಿಯೆಂಬವ ಇವನ ಮೊಮ್ಮಗ [ಭಾಗ -೪-೨೪ ಹರಿ.-೧-೨. ವಿಷ್ಣು - ೧-೧೪]

(iv) ಸೂರ್ಯ ವಂಶದ ಅನೇನಸ ರಾಜನ ಮಗ. ಈತ ವೈವಸ್ವತ ಮನ್ವಂತರದವ. ಈತನ ಮೊದಲು ರಾಜ್ಯ ಅನಾಯಕವಾಗಿರಲಾಗಿ ಪೃಥು ಭೂಮಂಡಲದ ಅರಸರನ್ನೆಲ್ಲ ಗೆದ್ದು ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ಕ್ರಮವಾಗಿ ಸುಧರ್ಮ, ಶಂಖಪದ, ಕೇತುಮಂತ, ಹಿರಣ್ಯರೋಮರೆಂಬ ಅರಸರನ್ನು ತನ್ನ ಪ್ರತಿನಿಧಿಯಾಗಿ ನಿಯಮಿಸಿ, ತಾನು ಮಧ್ಯರಾಷ್ಟ್ರದಲ್ಲಿ ಚಕ್ರವರ್ತಿಯಾಗಿದ್ದು ರಾಜ್ಯಪಾಲನಮಾಡುತ್ತಿದ್ದ.

ಪೂರ್ವೇಣ ದಿಕ್ಪಾಲಮಥಾಭ್ಯಷಿಂಚತ್
ನಾಮ್ನಾ ಸುಧರ್ಮಾಣಮರಾತಿ ಕೇತುಂ ।
ತತೋಧಿಪಂ ದಕ್ಷಿಣತಶ್ಚಕಾರ
ಸರ್ವೇಶ್ವರಂ ಶಂಖಪದಾಭಿಧಾನಂ ॥
ಸ ಕೇತುಮಂತಂ ಚ ದಿಶಾಮಧೀಶಃ
ಚಕಾರ ಪಶ್ಚಾದ್ದಿಶಿಧರ್ಮರಕ್ಷಂ ।
ಹಿರಣ್ಯರೋಮಾಣಮುದಗ್ದಿಗೀಶಂ
ಪ್ರಜಾಪತಿರ್ದೇವಸುತಂ ಚಕಾರ ॥
ಅದ್ಯಾಪಿ ಕುರ್ವಂತಿ ದಿಶಾಮಧೀಶಾಃ
ಶತ್ರೂನ್ ದಹಂತಸ್ತು ಭುವೋಭಿರಕ್ಷಾಂ ।
ಚತುರ್ಭಿರೇಭಿಃ ಪೃಥುನಾಮಧೇಯೋ
ನೃಪೋಭಿಷಿಕ್ತಃ ಪ್ರಥಮಂ ಪೃಥಿವ್ಯಾಂ ॥
ಗತೇಂತರೇ ಚಾಕ್ಷುಷನಾಮಧೇಯೇ
ವೈವಸ್ವತಾಖ್ಯೇ ಚ ಪುನಃ ಪ್ರವೃತ್ತೇ ॥
ಪ್ರಜಾಪತಿಸ್ಸೋಸ್ಯ ಚರಾಚರಸ್ಯ
ಬಭೂವ ಸೂರ್ಯಾನ್ವಯವಂಶಚಿಹ್ನಃ ॥ [ಮತ್ಸ್ಯ.-೯. ವನ. ೨೦೫]

**ಪೃಥೂದಕ**—ಒಂದು ತೀರ್ಥ. ವಸಿಷ್ಠನಿಂದ ಸೋತ ವಿಶ್ವಾಮಿತ್ರ ಇದರ ಬಳಿ ಕೆಲಕಾಲ ತಪಸ್ಸುಮಾಡಿದ ಇದು ಬ್ರಹ್ಮಯೋನಿ ತೀರ್ಥದ ಬಳಿ ಇದೆ [ಭಾರ.-ವನ, ೮೧. ಶ. ೪೦]. ಈ ತೀರ್ಥ ಥಾನೇಶ್ವರಕ್ಕೆ ೧೪ ಮೈಲುಗಳ ದೂರದಲ್ಲಿದೆ,

**ಪೃಷತ(ದ)** —ಪಾಂಚಾಲ ದೇಶದ ಸೋಮಕ ರಾಜನ ಮಗ. ಈತನ ಮಗ ದ್ರುಪದ ರಾಜ [ಭಾರ -ಆದಿ ೧೮೦ ಭಾಗ -೯-೨೨ ಹರಿ -೧-೩೨]

**ಪೃಷಧ್ರ.**—(I) ವೈವಸ್ವತ ಮನುವಿನ ಹತ್ತು ಮಂದಿ ಮಕ್ಕಳಲ್ಲಿ ಎಂಟನೆಯವ. ಇವ ತನ್ನ ಕುಲಗುರುವಾದ ವಸಿಷ್ಠನ ಆಕಳುಗಳನ್ನು ಕಾಪಾಡುತ್ತಿದ್ದ. ಮಳೆಗಾಲದ ಒಂದು ಕಾಳರಾತ್ರಿಯಲ್ಲಿ ಹುಲಿ ಕೊಟ್ಟಿಗೆಗೆ ನುಗ್ಗಲು ಆಕಳುಗಳು ಹೆದರಿ ಕೂಗಾಡತೊಡಗಿದುವು. ಇವ ಖಡ್ಗವನ್ನು ಧರಿಸಿ ಹುಲಿಯೆಂಬ ಭ್ರಾಂತಿಯಿಂದ ಹುಲಿ ಹಿಡಿದಿದ್ದ ಆಕಳನ್ನು ಕೊಂದು, ವಸಿಷ್ಠಶಾಪದಿಂದ ಶೂದ್ರನಾಗಿ, ಅರಣ್ಯವನ್ನು ಹೊಕ್ಕು ಮುನಿವ್ರತವನ್ನು ಕೈಕೊಂಡು ಜೀವಿಸುತ್ತಿದ್ದು, ಕಡೆಗೆ ಕಾಳ್ಕಿಚ್ಚನ್ನು ಹೊಕ್ಕು ದೇಹತ್ಯಾಗಮಾಡಿದ [ಭಾಗ.-೯-೨].

(II) ಪಾಂಡವ ಪಕ್ಷದ ಒಬ್ಬ ಅರಸು. ಭಾರತ ಯುದ್ಧದಲ್ಲಿ ಹದಿನೈದನೆಯ ದಿನ ಅಶ್ವತ್ಥಾಮನಿಂದ ಮಡಿದ [ದ್ರೋ. ೧೫೭]

**ಪೈಲ** —ಪಿಲಿಯೆಂಬ ಮುನಿಯ ವಂಶದಲ್ಲಿ ಜನಿಸಿದ ಒಬ್ಬ ಮಹರ್ಷಿ [ಭಾರ - ಆದಿ. ೬೪. ಸಭಾ ४ ಶಾಂತಿ ४೬]. ಸಮಷ್ಟಿರೂಪದಿಂದಿದ್ದ ವೇದವನ್ನು ವ್ಯಾಸ ಮುನಿ ವಿಭಾಗಮಾಡಿದ ತರುವಾಯ ಅಂತು ವಿಭಕ್ತವಾದ ವೇದದಲ್ಲಿ ಋಗ್ವೇದವನ್ನು ಈ ಪೈಲ ಮುನಿಗೆ ಹೇಳಿಕೊಟ್ಟ [ವಿಷ್ಣು -೩, ४]

**ಪೌಂಡ್ರ** —ಭೀಮಸೇನನ ಶಂಖ [ಭಾರ -ಭೀ. ೨೫]

**ಪೌಂಡ್ರಕ** —ಪುಂಡ್ರ ವಂಶದ ವಸುದೇವನೆಂಬ ರಾಜನ ಮಗ. ವಸುದೇವ ಪುತ್ರನಾದ ಶ್ರೀ ಕೃಷ್ಣನಂತೆಯೇ ತಾನೂ ಕೀರ್ತಿವಂತನಾಗಬೇಕೆಂಬ ದುರಾಶೆಯಿಂದ ಕೃಷ್ಣನಂತೆಯೇ ಶಂಖ ಚಕ್ರಗಳನ್ನು ಧರಿಸಿ ಕೃಷ್ಣನ ಮೇಲೆ ಯುದ್ಧಕ್ಕೆ ಹೋಗಿ ಸೋತು, ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ಶಸ್ತ್ರಾಸ್ತ್ರಗಳನ್ನು ಪಡೆದು ಎಲ್ಲವೂ ವ್ಯರ್ಥವಾಗಲು, ಕಡೆಗೆ ಕೃಷ್ಣನನ್ನು ಕೊಲ್ಲುವುದಕ್ಕಾಗಿ ಕ್ಷುದ್ರಶಕ್ತಿಯನ್ನು ಕಳುಹಿ ಆ ಶಕ್ತಿಯೂ ಕುಂಠಿತವಾಗಲು, ಕಾಶೀ ರಾಜನನ್ನು ಮರೆಹೊಕ್ಕು ಆತನೊಂದಿಗೆ ತಾನೂ ಕೃಷ್ಣನಿಂದ ಹತನಾದ [ಭಾರ -ಆ ೨೦೧ ಸ ೧४, ೩೧. ಭಾಗ.-೧೦-೬೬]

**ಪೌಲಸ್ತ್ಯ.**—ಪುಲಸ್ತ್ಯನ ವಂಶದಲ್ಲಿ ಹುಟ್ಟಿದವ ಮುಖ್ಯವಾಗಿ ರಾವಣನಿಗೆ ಅನ್ವಯಿಸುತ್ತದೆ ನೋಡು—ಪುಲಸ್ತ್ಯ.

**ಪೌಲೋಮ** —ಪುಲೋಮೆಯ ಮಕ್ಕಳು ಅರ್ಜುನನಿಂದ ಹತರಾದರು. ನೋಡು—ಪುಲೋಮಾ [ಭಾರ.-ವನ ೧೭೫]

**ಪೌಷ್ಯ** —ಸೂರ್ಯ ವಂಶದ ಅರಸು ಧ್ರುವಸಂಧಿಯೆಂಬುದು ಇವನ ನಾಮಾಂತರ, ಉತ್ತಂಕ ಮುನಿ ಗುರುದಕ್ಷಿಣಾರ್ಥವಾಗಿ ಪೌಷ್ಯ ರಾಜನ ರಾಣಿ ಧರಿಸಿದ್ದ

ಕುಂಡಲಗಳನ್ನು ರಾಣಿಯಿಂದ ಪಡೆದು ಹಿಂದಿರುಗುವಾಗ್ಗೆ ಪೌಷ್ಯ ಉತ್ತಂಕನಿಗೆ ಔತಣವನ್ನು ಮಾಡಿದ. ಊಟಮಾಡುವಾಗ ಉತ್ತಂಕನಿಗೆ ಅನ್ನದಲ್ಲಿ ಕೂದಲು ಸಿಕ್ಕಲಾಗಿ, ಉತ್ತಂಕ ಪೌಷ್ಯ ರಾಜನನ್ನು ಕುರುಡನಾಗುವಂತೆ ಶಾಪವಿತ್ತ. ಪೌಷ್ಯ ಉತ್ತಂಕನನ್ನು ಪುತ್ರಹೀನನಾಗುವಂತೆ ಶಾಪವಿತ್ತ ಉತ್ತಂಕನಿಗೆ ಕೊಟ್ಟ ಶಾಪ ವನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ ಪುಷ್ಯ ರಾಜನಿಗೆ ಹೇಳಿದ ಆದರೆ ಅದು ಸಾಧ್ಯ ವಾಗಲಿಲ್ಲ. ಉತ್ತಂಕ ಮಾತ್ರ ತಾನು ಕೊಟ್ಟ ಶಾಪವನ್ನು ಹಿಂದಕ್ಕೆ ತೆಗೆದು ಕೊಂಡು ಅಲ್ಲಿಂದ ಹಿಂದಿರುಗಿದ [ಭಾರ.-ಆ ೩]

**ಪ್ರಚೇತಸ.**—ಪೃಥು ಚಕ್ರವರ್ತಿಯ ವಂಶಸ್ಥನಾದ ಪ್ರಾಚೀನಬರ್ಹಿಯಿಂದ ಶತದ್ರುತಿಯೆಂಬವಳಲ್ಲಿ ಜನಿಸಿದವ [ಭಾಗ - ೪, ೨೪] ವೃಕ್ಷಗಳ ಕನ್ಯೆಯಾದ ಮಾರಿಷೆಯೆಂಬವಳನ್ನು ಮದುವೆಯಾಗಿ ದಕ್ಷ ಪ್ರಜಾಪತಿಯನ್ನು ಪಡೆದ [ಭಾಗ.- ೪-೩೦. ಭಾರ -ಆ ೨೧೧ ವಿಷ್ಣು -೧-೧೫]. ಇವರು ಹನ್ನೊಂದು ಮಂದಿ ಇವರು ಶಿವ ನನ್ನು ತಪಸ್ಸಿನಿಂದ ಮೆಚ್ಚಿಸಿ ಪ್ರಜಾಧಿಪತ್ಯವನ್ನು ಬಯಸಿದರು ಆಗ ಶಿವ " ನಿಮಗೆ ಪ್ರಜಾಧಿಪತ್ಯ ದೊರೆಯಲಾರದು ನಿಮ್ಮ ಪುತ್ರನಾದ ದಕ್ಷ ಪ್ರಜಾಧಿಪತ್ಯವನ್ನು ಪಡೆಯುವ " ಎಂದು ಕಣ್ಮರೆಯಾದ ಬಳಿಕ ಪ್ರಚೇತಸರು ತಪಸ್ಸಿನಿಂದ ಹಿಂದಿರು ಗುವ ವೇಳೆಗೆ ಲೋಕದಲ್ಲೆಲ್ಲಾ ವೃಕ್ಷಗಳು ತುಂಬಿದ್ದುದನ್ನು ಕಂಡು, ಅವುಗಳನ್ನು ಕಡಿಯತೊಡಗಿದರು ಆಗ ವೃಕ್ಷಗಳ ಮೊರೆಯನ್ನು ಕೇಳಿ ಓಷಧೀಶನಾದ ಚಂದ್ರ ಪ್ರಚೇತಸರಲ್ಲಿಗೆ ಬಂದು, ಮರಗಳನ್ನು ಕಡಿಯದಂತೆ ಹೇಳಿ, ವೃಕ್ಷ ಪುತ್ರಿಯಾದ ಮಾರಿಷೆಯನ್ನು ಅವರಿಗೆ ಕೊಡಿಸಿದ ಬಳಿಕ ಪ್ರಚೇತಸರು ವಾರ್ಕ್ಷಿಯಾದ ಮಾರಿಷೆ ಯಲ್ಲಿ ದಕ್ಷನನ್ನು ಪಡೆದರು [ವಿಷ್ಣು.-೧-೧೫]

**ಪ್ರಜಾಪತಿ.**—ಚತುರ್ಮುಖನಿಗೂ, ಆತನ ತರುವಾಯ ಕಶ್ಯಪ, ಮರೀಚಿ, ಕರ್ದಮ ಮುಂತಾದವರಿಗೂ ಅನ್ವಯಿಸುತ್ತದೆ ಈತ ತನ್ನಲ್ಲಿಗೆ ತತ್ತ್ವೋಪದೇಶಾ ರ್ಥವಾಗಿ ಬಂದ ದೇವತೆಗಳಿಗೂ ಅಸುರರಿಗೂ ಮುನಿಗಳಿಗೂ ಅವರವರ ಯೋಗ್ಯ ತಾನುಸಾರವಾಗಿ ಉಪದೇಶಮಾಡಿದ [ಭಾರ -ಅಶ್ವ. ೨೭ ಛಾಂದೋಗ್ಯ ೮] ಈತನ ದೇಹದಿಂದ ಮೃತ್ಯುದೇವತೆ ಉತ್ಪನ್ನವಾದದ್ದು. ಬ್ರಹ್ಮ ಆ ಮೃತ್ಯುದೇವಿಯನ್ನು ಪ್ರಜಾಸಂಹಾರದಲ್ಲಿ ನಿಯಮಿಸಿದ್ದು. ಬ್ರಹ್ಮ ಪರಮೇಶ್ವರರ ಸಂವಾದ [ಭಾರ.-ಶಾಂತಿ. ೨೭೨].

**ಪ್ರತರ್ದನ** —ಕಾಶಿ ದೇಶಾಧಿಪನಾದ ದಿವೋದಾಸನಿಂದ ಯಯಾತಿ ಪುತ್ರಿ ಯಾದ ಮಾಧವಿಯೆಂಬವಳಲ್ಲಿ ಜನಿಸಿದ [ಭಾರ.-ಆದಿ ೮೬. ಉ. ೧೧೭. ಸಭಾ. ೮. ವನ. ೨೦೧ ಅನು ೨೭೧] ನೋಡು—ಕುವಲಾಶ್ವ, ಕೃತಧ್ವಜ, ಗಾಲವ. ಹೈಹಯ ದೇಶಾಧಿಪತಿಯಾದ ವೀತಹವ್ಯ ದಿವೋದಾಸನ ಮೇಲೆ ದಂಡೆತ್ತಿಬಂದು,

ದಿವೋದಾಸನನ್ನು ಸೋಲಿಸಿ, ರಾಜ್ಯದಿಂದ ಅಟ್ಟಿ ಅವನ ತಂದೆಯಾದ ಸುದೇವನನ್ನು ಕೊಂದ. ಪ್ರತರ್ದನ ರೋಷಭರಿತನಾಗಿ ವೀತಹವ್ಯನ ಮಕ್ಕಳನ್ನೆಲ್ಲ ಕೊಂದ. ಅಷ್ಟರಲ್ಲಿ ವೀತಹವ್ಯ ಅರಣ್ಯಕ್ಕೆ ಓಡಿಹೋಗಿ ತನ್ನ ತಂಗಿಯ ಗಂಡನಾದ ಚ್ಯವನ ಮುನಿಯ ಆಶ್ರಮದಲ್ಲಿ ಅವಿತುಕೊಂಡ. ಪ್ರತರ್ದನ ಹಿಂದಟ್ಟಿಹೋಗಿ ಆ ಮುನೀಶ್ವರನನ್ನು ಸತ್ಕರಿಸಿ "ಸ್ವಾಮಿ, ಇಲ್ಲಿ ಯಾರಾದರೂ ಕ್ಷತ್ರಿಯರು ಬಂದಿದ್ದಲ್ಲಿ ನನಗೆ ಒಪ್ಪಿಸಿರಿ" ಎಂದ. ಆಗ ಚ್ಯವನ "ಅಯ್ಯಾ ರಾಜಶ್ರೇಷ್ಠನೆ, ಇಲ್ಲಿ ಕ್ಷತ್ರಿಯರಾರೂ ಇರುವುದಿಲ್ಲ. ಇಲ್ಲಿರುವವರೆಲ್ಲರೂ ಬ್ರಾಹ್ಮಣರು" ಎಂದ. ಆ ಮಾತಿಗೆ ಪ್ರತರ್ದನ ನಗುತ್ತ "ತುಂಬ ಸಂತೋಷವಾಯಿತು ನನ್ನ ಹಗೆಯನ್ನು ಭಿನ್ನಜಾತಿಯವನನ್ನಾಗಿ ಮಾಡಿದಿರಲ್ಲವೇ! ಇದಕ್ಕಿಂತಲೂ ನಾಚಿಕೆಗೇಡಿತನವಿರುವುದೇ! ತಮ್ಮ ಮಾತು ದಿಟವಾಗಲಿ" ಎಂದು ಹೇಳಿಹೋದ ಇಂತು ವೀತಹವ್ಯ ಬ್ರಾಹ್ಮಣನಾದ [ಭಾರ.-ಅನು. ೮].

**ಪ್ರತಿವಿಂಧ್ಯ.**—ಪಾಂಡುಪುತ್ರನಾದ ಯುಧಿಷ್ಠಿರನಿಂದ ದ್ರೌಪದಿಯಲ್ಲಿ ಜನಿಸಿದವ [ಆದಿ. ೬೩, ೬೪, ೬೮]. ಮಹಾಭಾರತ ಯುದ್ಧ ಮುಗಿದ ರಾತ್ರಿ ಅಶ್ವತ್ಥಾಮನಿಂದ ಮಡಿದ [ಭಾರ.-ಸೌಪ್ತಿ. ೮].

**ಪ್ರತಿಷ್ಠಾನಪುರ.**—ಹಸ್ತಿನಾವತಿಯ ಸಮೀಪದಲ್ಲಿರುವ ಒಂದು ಪುರಾತನ ಪಟ್ಟಣ. ಇದನ್ನು ವರ್ಧಮಾನಪುರವೆಂದು (Burdwan) ಕರೆಯುತ್ತಾರೆ. ಪುರೂರವನ ಕಾಲದಲ್ಲಿ ಇದು ರಾಜಧಾನಿಯಾಗಿತ್ತು [ಭಾರ.-ಆದಿ ೯೬] ಇದನ್ನು ಈಗ Bithoor ಎಂದು ಕರೆಯುತ್ತಾರೆ. ಉತ್ತಾನಪಾದ ರಾಜನ ಕಾಲದಲ್ಲಿದ್ದ ಕೋಟೆಯ ಕಟ್ಟಡವೆಂಬುದಾಗಿ ತೋರಿಸುವ ಕೆಲವು ಕೋಟೆಯ ಗೋಡೆಗಳು ಈಗಲೂ ಇಲ್ಲಿ ಕಂಡುಬರುತ್ತವೆ.

**ಪ್ರತಿಸ್ಮೃತಿ.**—ಅತ್ಯದ್ಭುತ ಮಹಿಮೆಯುಳ್ಳ ಒಂದು ವಿದ್ಯೆ. ಇದನ್ನು ವ್ಯಾಸಮುನಿಯಿಂದ ಯುಧಿಷ್ಠಿರನೂ ಯುಧಿಷ್ಠಿರನಿಂದ ಅರ್ಜುನನೂ ಪಡೆದರು [ಭಾರ.-ವನ. ೩೬, ೩೭]

**ಪ್ರತೀಪ.**—(i) ಚಂದ್ರವಂಶದ ಅವಿಕ್ಷಿತ ರಾಜನ ವಂಶದಲ್ಲಿ ಜನಿಸಿದ ಧೃತರಾಷ್ಟ್ರನೆಂಬ ಅರಸನ ಮಗ. ಈತನಿಗೆ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಪುತ್ರರು [ಭಾರ.-ಆದಿ. ೧೦೧].

(ii) ಚಂದ್ರವಂಶದ ಪರೀಕ್ಷಿತನೆಂಬ ಅರಸನ ಮಗನಾದ ಭೀಮಸೇನ ರಾಜನಿಂದ ಸುಕುಮಾರಿಯೆಂಬವಳಲ್ಲಿ ಜನಿಸಿದವ. ಈತ ಶೈಬ್ಯ ರಾಜಪುತ್ರಿಯಾದ ಸುನಂದಿಯೆಂಬವಳನ್ನು ಮದುವೆಯಾಗಿ ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರು ಪುತ್ರರನ್ನು ಪಡೆದ [ಭಾರ.-ಆದಿ. ೬೩]. ಈತನಿಗೆ ಪರಿಶ್ರವನೆಂಬುದು ನಾಮಾಂತರ.

ಈತ ಗಂಗಾ ತೀರದಲ್ಲಿ ತಪಸ್ಸುಮಾಡುತ್ತಿದ್ದಾಗ ಈತನ ಸೌಂದರ್ಯಕ್ಕೆ ಮರುಳಾದ ಗಂಗೆ ದಿವ್ಯಸ್ತ್ರೀ ರೂಪದಿಂದ ಬಂದು ಈತನ ಬಲತೊಡೆಯ ಮೇಲೆ ಕುಳಿತಳು. ಆಗ ಪ್ರತೀಪ "ಎಲೌ, ನಾನು ಏಕಪತ್ನೀವ್ರತ. ಅಲ್ಲದೆ ನೀನು ಮಗನು ಕೂರುವುದಕ್ಕೆ ಯೋಗ್ಯವಾದ ಬಲತೊಡೆಯ ಮೇಲೆ ಕುಳಿತುಕೊಂಡೆಯಾಗಿ, ನೀನು ನನ್ನ ಮಗಳಾಗಿರುವೆ. ಆದುದರಿಂದ ನೀನು ನನ್ನ ಮಗನನ್ನು ಮದುವೆಯಾಗು" ಎಂದ. ಗಂಗೆ ಅಂತೆಯೇ ಶಂತನು ರಾಜನನ್ನು ವರಿಸಿದಳು [ಭಾರ.-ಆದಿ. ೧೦೨, ೧೦೩].

**ಪ್ರದ್ಯುಮ್ನ.**—ಶ್ರೀ ಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದವ. ಮನ್ಮಥನ ಅವತಾರ. ಸನತ್ಕುಮಾರಾಂಶಸಂಭೂತ ಈತ ಜನಿಸಿದಕೂಡಲೇ ಶಂಬರಾಸುರ ಮಾಯಾ ರೂಪದಿಂದ ಬಂದು ಮಗುವನ್ನು ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಹಾಕಿದ ಆ ಮಗುವನ್ನು ಒಂದು ದೊಡ್ಡ ಮೀನು ನುಂಗಿತು. ಆ ಮೀನನ್ನು ಬೆಸ್ತರು ಹಿಡಿದು ಶಂಬರಾಸುರನ ಅರಮನೆಗೆ ಒಪ್ಪಿಸಿದರು ಅಡುಗೆಯವರು ಮೀನನ್ನು ಕೊಯ್ಯಲಾಗಿ ಅದರಲ್ಲಿ ಕಂಡುಬಂದ ಮಗುವನ್ನು ರಾಣಿಯಾದ ಮಾಯಾವತಿಗೆ ಕೊಟ್ಟರು. ಅಷ್ಟರಲ್ಲಿ ನಾರದ ಅಲ್ಲಿಗೆ ಬಂದು ಈ ಮಗು ಮನ್ಮಥನೆಂತಲೂ, ಶಂಬರನನ್ನು ಇವನೇ ಕೊಲ್ಲತಕ್ಕವನೆಂತಲೂ ಹೇಳಿದ. ಬಳಿಕ ಮಾಯಾವತಿ ಆ ಮಗುವನ್ನು ಅಕ್ಕರೆಯಿಂದ ಸಾಕಿ, ಪ್ರಾಪ್ತವಯಸ್ಕನಾದ ತರುವಾಯ ಶಂಬರನ ಮಾಯಾವಿದ್ಯೆಗಳನ್ನೂ ಅದಕ್ಕಿಂತಲೂ ಅತಿಶಯವಾದ ಮಹಾಮಾಯಾವಿದ್ಯೆಯನ್ನೂ ಆತನಿಗೆ ಉಪದೇಶಿಸಿ, ಆತನ ಮೂಲಕ ಶಂಬರನನ್ನು ಕೊಲ್ಲಿಸಿ, ಅವನನ್ನು ರುಕ್ಮಿಣಿಯಲ್ಲಿಗೆ ಕರೆತಂದು ಒಪ್ಪಿಸಿದಳು. ಅಷ್ಟರಲ್ಲಿ ನಾರದ ಅಲ್ಲಿಗೆ ಬಂದು ನಡೆದ ಸಮಾಚಾರವನ್ನೆಲ್ಲ ವಿವರಿಸಲು ರುಕ್ಮಿಣಿ ಆನಂದದಿಂದ ತನ್ನ ಪುತ್ರನನ್ನು ಸ್ವೀಕರಿಸಿದಳು [ಭಾಗ -೧೦-೫೫. ವಿಷ್ಣು.-೫-೨೭. ಹರಿ.-೨-೧೦೪, ೧೦೭] ಈತ ರುಕ್ಮಿಣಿಯ ಅಣ್ಣನಾದ ರುಕ್ಮಿಯ ಪುತ್ರಿಯಾದ ರುಕ್ಮವತಿಯನ್ನು ಮದುವೆಯಾಗಿ ಅನಿರುದ್ಧನೆಂಬ ಮಗನನ್ನು ಪಡೆದ [ಭಾಗ -೧೦, ೬೧. ಭಾರ -ಸಭಾ. ೬೦].

**ಪ್ರದ್ವೇಷಿಣಿ**—ದೀರ್ಘತಮ ಮಹರ್ಷಿಯ ಪತ್ನಿ ನೋಡು—ದೀರ್ಘತಮ.

**ಪ್ರಭಂಜನ.**—ಮಣಿಪುರದ ಅರಸು. ಈತ ಸಂತಾನಾರ್ಥವಾಗಿ ಶಿವನನ್ನು ಕುರಿತು ತಪಸ್ಸುಮಾಡಿದ ಶಿವ ಪ್ರತ್ಯಕ್ಷನಾಗಿ "ನಿನಗೆ ಪುತ್ರಸಂತಾನ ಹೆಚ್ಚಿಗೆ ಆಗಲಾರದು. ವಂಶೋದ್ಧಾರಕ್ಕಾಗಿ ಒಬ್ಬ ಮಾತ್ರವೇ ಜನಿಸುವ" ಎಂದು ಹೇಳಿದ. ಅಂತೆಯೇ ಬಹಳ ಕಾಲದವರೆಗೂ ನಡೆದುಬಂದು ಮಲಯಧ್ವಜನ ಕಾಲದಲ್ಲಿ ಗಂಡು ಹುಟ್ಟದೆ ಚಿತ್ರಾಂಗದೆಯೆಂಬ ಹೆಣ್ಣು ಹುಟ್ಟಲಾಗಿ, ಮಲಯಧ್ವಜ ಆಕೆಯನ್ನು ಪುತ್ರಿಕಾಧರ್ಮದಿಂದ ಅರ್ಜುನನಿಗೆ ಕೊಟ್ಟು ಮದುವೆಮಾಡಿ, ಆಕೆಯ

ಹೊಟ್ಟೆಯಲ್ಲಿ ಹುಟ್ಟಿದ ಬಭ್ರುವಾಹನನಿಗೆ ಪಟ್ಟಗಟ್ಟಿ ಮಗಳನ್ನೂ ಮುಮ್ಮಗನನ್ನೂ ಮನೆಯಲ್ಲಿಯೇ ಇಟ್ಟುಕೊಂಡ [ಭಾರ.-ಆದಿ. ೨೩೫].

**ಪ್ರಭಾವತೀ.**—(i) ದೇವಶರ್ಮನೆಂಬ ಬ್ರಾಹ್ಮಣನ ಹೆಂಡತಿಯಾದ ರುಚಿಯೆಂಬಾಕೆಯೂ ಇವಳೂ ಅಕ್ಕತಂಗಿಯರು ಇವಳು ಅಂಗ ದೇಶಾಧಿಪನಾದ ಚಿತ್ರರಥನನ್ನು ಮದುವೆಯಾದಳು [ಭಾರ.-ಅನು. ೭೭].

(ii) ಶಾಂಡಿಲ್ಯ ಋಷಿಯ ಮಗಳು. ಋಷಭಕೂಟ ಪರ್ವತದ ಗುಹೆಯಲ್ಲಿ ತಪಸ್ಸುಮಾಡಿಕೊಂಡಿದ್ದಳು ಇವಳನ್ನೇ ಸ್ವಯಂಪ್ರಭೆಯೆಂತಲೂ ಶಾಂಡಿಲಿಯೆಂತಲೂ ಕರೆಯುವರು [ಭಾರ -ಉ. ೧೧೩, ಭೀ. ೮]. ಸೀತೆಯನ್ನು ಹುಡುಕುವುದಕ್ಕಾಗಿ ಹನೂಮದಾದಿಗಳು ದಕ್ಷಿಣ ದಿಕ್ಕಿಗೆ ಹೊರಟಾಗ ದಾರಿತಪ್ಪಿ ಈಕೆ ವಾಸವಾಗಿದ್ದ ಗುಹೆಯನ್ನು ಹೊಕ್ಕರು. ಆಗ ಪ್ರಭಾವತಿ ಅವರನ್ನು ಸತ್ಕರಿಸಿ, ಆ ಗುಹೆಯಿಂದ ಹೊರಗೆಡಹಿದಳು [ಕಿಷ್ಕಿಂ ೫೨]. ಈಕೆಗೆ ಕೇಡುಬಗೆದು ಗರುಡನಿಗೆ ರೆಕ್ಕೆಗಳು ಉದುರಿ, ಮರಳಿ ಈಕೆಯ ಅನುಗ್ರಹದಿಂದ ರೆಕ್ಕೆಗಳು ಹುಟ್ಟಿದ್ದು [ಭಾರ.-ಉ ೧೧೩, ಸ್ಕಾಂ.-ನಾಗರ ೮೧, ೮೨]

(iii) ಹಂಸಧ್ವಜನ ಮಗನಾದ ಸುಧನ್ವನ ಹೆಂಡತಿ

**ಪ್ರಭಾಸ**—(i) ಅಷ್ಟವಸುಗಳಲ್ಲಿ ಒಬ್ಬ ಈತ ಬೃಹಸ್ಪತಿಯ ತಂಗಿಯಾದ ಯೋಗಸಿದ್ಧಿಯೆಂಬವಳನ್ನು ಮದುವೆಯಾಗಿ, ದೇವಶಿಲ್ಪಿಯಾದ ವಿಶ್ವಕರ್ಮನೆಂಬ ತನಯುನನ್ನು ಪಡೆದ. ನೋಡು—ಅಷ್ಟವಸು [ಭಾರ.-ಆದಿ ೬೭].

(ii) ಒಂದು ಕ್ಷೇತ್ರ. ಗುಜರಾತಿನಲ್ಲಿದೆ ಇಲ್ಲಿ ಸುಪ್ರಸಿದ್ಧವಾದ ಸೋಮನಾಥ ದೇವಾಲಯವಿದೆ [ಭಾರ -ವನ. ೧೧೯. ಶಲ್ಯ. ೩೬] ಅರ್ಜುನ ತೀರ್ಥಯಾತ್ರಾ ಸಮಯದಲ್ಲಿ ಇಲ್ಲಿಗೆ ಬಂದಾಗ ಸುಭದ್ರೆಯ ವಿವಾಹ ವೃತ್ತಾಂತವನ್ನು ಕೇಳಿ, ಶ್ರೀ ಕೃಷ್ಣನನ್ನು ತನ್ನಲ್ಲಿಗೆ ಬರಮಾಡಿಕೊಂಡ [ಭಾರ.-ಆದಿ. ೨೩೮. ವನ. ೧೧೯]. ಪಾಂಡವರು ವನವಾಸ ಸಮಯದಲ್ಲಿ ತೀರ್ಥಯಾತ್ರೆಗೆ ಹೊರಟಾಗ ಇಲ್ಲಿಗೆ ಬಂದಿದ್ದರು [ಭಾರ.-ವನ. ೧೧೯]. ಯಾದವರು ಸ್ವಯೂಥಕಲಹದಿಂದ ಒಬ್ಬರನ್ನೊಬ್ಬರು ಹೊಡೆದು ಇದರ ತೀರದಲ್ಲಿ ಮಡಿದರು [ಭಾರ.-ಮೌಸಲ ೪].

**ಪ್ರಮತಿ.**—(i) ಒಬ್ಬ ಮಹರ್ಷಿ. ಚ್ಯವನ ಮಹರ್ಷಿಯಿಂದ ಸುಕನ್ಯೆಯಲ್ಲಿ ಜನಿಸಿದವ. ಈತ ದೇವವಿಲಾಸಿನಿಯಾದ ಘೃತಾಚಿಯಲ್ಲಿ ರುರುವೆಂಬ ಮಗನನ್ನು ಪಡೆದ [ಭಾರ.-ಆದಿ. ೮, ೫೪]. ಈತ ವಾಗಿಂದ್ರಿಯದ ಮಗ [ಭಾರ.-ಅನು ೮].

(ii) ಚಾಕ್ಷುಷ ಮನ್ವಂತರದ ಕಡೆಯ ಕಲಿಯುಗದಲ್ಲಿ ನಡೆದ ವಿಷ್ಣುವಿನ ಅವತಾರ [ಮತ್ಸ್ಯ.-೧೪೩].

(iii) ವಿಭೀಷಣನ ಮಂತ್ರಿಗಳಲ್ಲಿ ಒಬ್ಬ [ರಾಮಾ.-ಯು. ೩೭].

**ಪ್ರಮಥಗಣ.**—ಪರಮೇಶ್ವರನ ಮತ್ತು ಕುಮಾರಸ್ವಾಮಿಯ ಪರಿವಾರದವರು. ಇವರಿಂದ ಲೋಕಕ್ಕೆ ಉಂಟಾಗುವ ತೊಂದರೆಗಳು, ಅವುಗಳನ್ನು ತಪ್ಪಿಸಿಕೊಳ್ಳುವ ಉಪಾಯಗಳು [ಭಾರ.-ಅನು. ೧೯೪].

**ಪ್ರಮದ್ವರಾ.**—ವಿಶ್ವಾವಸುವೆಂಬ ಗಂಧರ್ವನಿಂದ ಮೇನಕೆಯೆಂಬ ಅಪ್ಸರಸಿಯಲ್ಲಿ ಜನಿಸಿದವಳು. ಮೇನಕೆ ಮಗುವನ್ನು ಬಿಟ್ಟುಹೋದ ತರುವಾಯ ಸ್ಥೂಲಕೇಶನೆಂಬ ಮುನಿ ಈಕೆಯನ್ನು ಕಾಪಾಡಿದ. ಈಕೆ ಪ್ರಾಪ್ತವಯಸ್ಕಳಾದ ಬಳಿಕ ಪ್ರಮತಿ ಪುತ್ರನಾದ ರುರು ಮಹರ್ಷಿಯನ್ನು ಮದುವೆಯಾಗಬೇಕೆಂದಿದ್ದಳು. ಒಮ್ಮೆ ಅರಣ್ಯದಲ್ಲಿ ಸಖಿಯರೊಂದಿಗೆ ಸಂಚರಿಸುತ್ತಿದ್ದಾಗ ಹಾವು ಕಚ್ಚಿ ಸತ್ತಳು. ಸುತ್ತಮುತ್ತಣ ಮುನಿಗಳು ಅವಳ ಶವವನ್ನು ಸ್ಥೂಲಕೇಶನಲ್ಲಿಗೆ ತಂದರು. ಆಗ ರುರು ತನ್ನ ಆಯುಷ್ಯದಲ್ಲಿ ಅರ್ಧ ಭಾಗವನ್ನು ಇವಳಿಗೆ ಕೊಟ್ಟು ಬದುಕಿಸಿ, ಇವಳನ್ನು ಮದುವೆಯಾದ [ಭಾರ.-ಆದಿ ೮. ಅನು. ೮]

**ಪ್ರಮಾಣಕೋಟಿ**—ಗಂಗೆಯ ಒಡ್ಡಿನಲ್ಲಿರುವ ಒಂದು ಮಡು ದುರ್ಯೋಧನಾದಿಗಳು ಭೀಮನಿಗೆ ವಿಷಮಿಶ್ರವಾದ ಆಹಾರವನ್ನು ತಿನ್ನಿಸಿ ಈ ಮಡುವಿನಲ್ಲಿ ಕೆಡಹಿದರು [ಭಾರ.-ಆ. ೬೧, ೧೩೭, ೧೩೮].

**ಪ್ರಮಾಥಿ.**—ವಿಶ್ರವಸನಿಂದ ಬಲಾಕೆಯೆಂಬ ರಾಕ್ಷಸಿಯಲ್ಲಿ ಜನಿಸಿದವ. ದೂಷಣನ ಒಡಹುಟ್ಟಿದವ ಕಪಿ ಸೇನಾನಾಯಕನಾದ ನೀಲನಿಂದ ಹತನಾದ [ಭಾರ.-ವನ. ೨೮೬].

**ಪ್ರಮೀಲಾ**—ಸ್ತ್ರೀರಾಜ್ಯದ ರಾಣಿ ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಈಕೆಯ ಪರಿವಾರದವರು ಕಟ್ಟಿಹಾಕಲಾಗಿ ಅರ್ಜುನ ಸ್ತ್ರೀಯರೊಂದಿಗೆ ಯುದ್ಧ ಮಾಡಲೊಲ್ಲದೆ, ತನ್ನ ಕುದುರೆಯನ್ನು ಹಿಂದಕ್ಕೆ ಕೊಡುವಂತೆ ಹೇಳಿಕಳುಹಿ, ಅದಕ್ಕೆ ಅವರು ಸಮ್ಮತಿಸದಿರಲು, ಆಕೆಯೊಡನೆ ಯುದ್ಧಮಾಡತೊಡಗಿ ಕಡೆಗೆ ಆಕೆಯನ್ನು ಮದುವೆಯಾಗಿ, ತನ್ನ ಕುದುರೆಯನ್ನು ಬಿಡಿಸಿಕೊಂಡು ಹೋದ [ಜೈ. ಭಾರ.- ೨೧, ೨೨].

**ಪ್ರಮ್ಲೋಚಾ(ಚನಾ).**—ಒಬ್ಬ ಅಪ್ಸರಸಿ ಕಂಡುವೆಂಬ ಮುನಿ ತಪೋನಿರತನಾಗಿರಲು ಇಂದ್ರ ಈಕೆಯನ್ನು ಕಂಡುವಿನ ಬಳಿಗೆ ಕಳುಹಿದ ಕಂಡು ಈಕೆಯೊಂದಿಗೆ ಅನೇಕ ಕಾಲದವರೆಗೆ ಸಂಸಾರಮಾಡಿಕೊಂಡಿದ್ದು, ಒಮ್ಮೆ ತನ್ನ ಹಿಂದಣಸ್ಥಿತಿಯನ್ನು ಸ್ಮರಿಸಿಕೊಂಡು ಕೋಪಭರಿತನಾದ. ಆಗ್ಗೆ ಪ್ರಮ್ಲೋಚೆ ಗರ್ಭವತಿಯಾಗಿದ್ದಳು. ಕಂಡುವಿನ ಸಿಟ್ಟಿನಿಂದ ಹೆದರಿದ ಪ್ರಮ್ಲೋಚನೆಯ ಗರ್ಭ ಕರಗಿ ನೀರಾಗಿ ಹೊರಬಂತು. ಆಕೆ ಅಲ್ಲಿಂದ ದೇವಲೋಕಕ್ಕೆ ಹೋಗುತ್ತ ತನ್ನ ಮೈ ಬೆವರನ್ನು ಮರಗಳ ಎಳೆಗಳಿಗೆ ಒರಸಿಹೋದಳು. ಆ ಬೆವರೆಲ್ಲವೂ ಗಾಳಿಯಿಂದ ಒಟ್ಟುಗೂಡಿ ಒಂದು

ಕನ್ಯೆಯಾಯಿತು. ವೃಕ್ಷಗಳೆಲ್ಲವೂ ಆ ಮಗುವನ್ನು ಬಹಳ ಅಕ್ಕರೆಯಿಂದ ಕಾಪಾಡಿದುವು. ಬಳಿಕ ಪ್ರಚೇತಸರು ಈಕೆಯನ್ನು ಮದುವೆಯಾದರು ನೋಡು—ಪ್ರಚೇತಸ [ಭಾಗ.-೪-೩೪, ೩೦. ಭಾರ -ಆದಿ ೧೩೨. ಸಭಾ ೧೦. ವಿಷ್ಣು -೧-೧೫].

**ಪ್ರಯಾಗ.**—ಗಂಗಾ ಯಮುನಾ ಸಂಗಮಸ್ಥಳದಲ್ಲಿರುವ ಒಂದು ಪಟ್ಟಣ. ದೊಡ್ಡ ಯಾತ್ರಾಸ್ಥಳ. ಬ್ರಹ್ಮ ಈ ಪ್ರದೇಶದಲ್ಲಿ ಅನೇಕ ಯಾಗಗಳನ್ನು ಮಾಡಿದ ಕಾರಣ ಇದಕ್ಕೆ ಪ್ರಯಾಗವೆಂದು ಹೆಸರು. ಇದನ್ನು ಈಗ ಅಲ್ಲಹಾಬಾದ್ (Allahabad) ಧಾರಾಗಂಜ ಎಂದು ಕರೆಯುತ್ತಾರೆ [ಭಾರ -ವನ. ೮೩].

**ಪ್ರಯಾಗಮಾಹಾತ್ಮ್ಯ** —[ಮತ್ಸ್ಯ.-೧೦೩-೧೧೨].

**ಪ್ರಲಮ್ಬ.**—ಒಬ್ಬ ರಾಕ್ಷಸ [ಭಾರ -ಆದಿ ೬೬. ಸಭಾ. ೫೧] ಬಲರಾಮ ಕೃಷ್ಣರು ನಂದಗೋಕುಲದಲ್ಲಿ ಕ್ರೀಡಿಸುತ್ತಿದ್ದಾಗ, ಇವ ಕಂಸನ ಪ್ರೇರಣೆಯಿಂದ ಗೊಲ್ಲನ ವೇಷವನ್ನು ಧರಿಸಿ, ಅವರಲ್ಲಿಗೆ ಬಂದು, ಅವರೊಡನೆ ಆಡುತ್ತ ಬಲರಾಮನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಹಾರಿದ ಇವನ ದುರುದ್ದೇಶವನ್ನು ತಿಳಿದ ಬಲರಾಮ ಇವನನ್ನು ನೆಲಕ್ಕೆ ಕೆಡಹಿ ಕೊಂದ [ಭಾಗ -೧೦-೧೮. ಹರಿ.-೨-೧೪. ವಿಷ್ಣು.-೫-೯].

**ಪ್ರಳಯವರ್ಣನ.**—[ಭಾರ -ವನ. ೧೯೧. ಶಾಂತಿ. ೩೧೭. ಅನು. ೩೯. ಭಾಗ -೧೨-೪].

**ಪ್ರವೀರ.**—ಚಿತ್ರಾಂಗದೆಯ ತಂದೆಯಾದ ಮಲಯಧ್ವಜನ ನಾಮಾಂತರ. ನೋಡು—ಚಿತ್ರಾಂಗದಾ. ಈತ ಭಾರತ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದ [ಕರ್ಣ. ೫೩]

**ಪ್ರಸನ್ನ** —ಮತಂಗ ಮುನಿಯ ಮಗ ಧರ್ಮವ್ಯಾಧನ ಮಗಳಾದ ಆರ್ಜುನಿಕಿಯನ್ನು ಮದುವೆಯಾಗಿದ್ದ. ನೋಡು—ಆರ್ಜುನಿಕಿ, ಧರ್ಮವ್ಯಾಧ.

**ಪ್ರಸೇನ.**—ನೋಡು—ಸ್ಯಮಂತಕ, ಪ್ರಸೇನಜಿತ್.

**ಪ್ರಸೇನಜಿತ್** —(i) ಒಬ್ಬ ಅರಸು ಇವನಿಗೆ ರೇಣುವೆಂಬುದು ನಾಮಾಂತರ. ಈತ ತನ್ನ ಮಗಳಾದ ರೇಣುಕೆಯನ್ನು ಜಮದಗ್ನಿ ಮಹರ್ಷಿಗೆ ಕೊಟ್ಟು ಮದುವೆ ಮಾಡಿದ [ಭಾರ.-ವನ ೧೧೭]

(ii) ಯಾದವರಲ್ಲಿ ಒಬ್ಬ. ಸತ್ರಾಜಿತನ ಸಹೋದರ. ಸತ್ರಾಜಿತ ಸೂರ್ಯನಿಂದ ಪಡೆದಿದ್ದ ಸ್ಯಮಂತಕಮಣಿಯನ್ನು ಇವ ತನ್ನ ಕೊರಳಲ್ಲಿ ಹಾಕಿಕೊಂಡು ಬೇಟೆಗೆ ಹೋಗಿದ್ದಾಗ ಒಂದು ಸಿಂಹ ಇವನನ್ನು ಕೊಂದು ಆ ರತ್ನವನ್ನು ಅಪಹರಿಸುತ್ತಿರಲಾಗಿ, ಜಾಂಬವಂತ ಆ ಸಿಂಹವನ್ನು ಕೊಂದು ರತ್ನವನ್ನು ಕೊಂಡುಯ್ದ. ಇವನಿಗೆ ಪ್ರಸೇನನೆಂಬುದು ನಾಮಾಂತರ [ಭಾರ.-ಸಭಾ. ೧೪. ಭಾಗ.-೧೦-೫೬].

**ಪ್ರಹಸ್ತ.**—ಸುಮಾಲಿಯೆಂಬ ರಾಕ್ಷಸನ ಮಗ. ರಾವಣನ ಮಂತ್ರಿ. ಇವ ರಾಮಾಯಣ ಯುದ್ಧದಲ್ಲಿ ನೀಲನೆಂಬ ಕಪಿನಾಯಕನಿಂದ ಹತನಾದ [ರಾಮಾ.-ಯುದ್ಧ ೫೭-೫೮]. ಇವ ರಾವಣನ ಸೋದರಮಾವ. ವಿಭೀಷಣನಿಂದ ಹತನಾದ [ಭಾರ.-ವನ. ೨೮೭].

**ಪ್ರಹ್ಲಾದ.**—ಹಿರಣ್ಯಕಶಿಪುವಿನಿಂದ ಕಯಾಧು ಎಂಬವಳಲ್ಲಿ ಜನಿಸಿದವ. ಇವನಿಗೆ ಸಂಹ್ರಾದ, ಅನುಹ್ರಾದ, ಶಿಬಿ, ಬಾಷ್ಕಲರೆಂಬ ನಾಲ್ವರು ತಮ್ಮಂದಿರು [ಭಾಗ -೬-೧೮]. ಇವನಿಗೆ ವಿರೋಚನ, ಕುಂಭ, ನಿಕುಂಭ ಎಂಬ ಮೂವರು ಪುತ್ರರೂ, ರಚನೆ(ವಿರೋಚನೆ) ಯೆಂಬ ಪುತ್ರಿಯೂ ಜನಿಸಿದರು [ಭಾಗ.-೭-೪. ಭಾರ.-ಆದಿ. ೬೬. ಸಭಾ. ೧೧ ವಾಯು -೮೪]. ಕೋಪವನ್ನೂ ಕ್ಷಮೆಯನ್ನೂ ಯಾವ ಯಾವ ಸಮಯದಲ್ಲಿ ಉಪಯೋಗಿಸಬೇಕೆಂಬ ವಿಷಯವಾಗಿ ಪ್ರಹ್ಲಾದನಿಗೂ ಮಹಾಬಲಿ ಚಕ್ರವರ್ತಿಗೂ ಸಂವಾದ [ಭಾರ.-ವನ ೨೮] ಮಕ್ಕಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಷಯವಾಗಿ ಹಂಸನೊಂದಿಗೆ ಸಂವಾದ [ಭಾರ -ಉ. ೩೫]. ಮನುಷ್ಯನ ಸ್ವಭಾವವೇ ಧರ್ಮಾರ್ಥಕಾಮಗಳಿಗೆ ಮುಖ್ಯಕಾರಣವೆಂಬ ವಿಷಯವಾಗಿ ಇಂದ್ರನೊಂದಿಗೆ ಸಂವಾದ [ಶಾಂತಿ ೧೨೪] ಜ್ಞಾನವೇ ಶ್ರೇಯಸ್ಸಾಧನೆಗೆ ಮುಖ್ಯವಾದುದೆಂಬ ವಿಷಯವಾಗಿ ಇಂದ್ರ ಪ್ರಹ್ಲಾದರ ಸಂವಾದ [ಶಾಂತಿ ೨೨೯]. ಪ್ರಪಂಚ ಅನಿತ್ಯವೆಂಬುದಾಗಿ ತಿಳುಯುವಿಕೆಯೇ ವೈರಾಗ್ಯಕ್ಕೆ ಮೂಲಕಾರಣವೆಂತಲೂ ಸುಖಕಾರಿಯೆಂತಲೂ ಅಜಗರ ಮುನಿಗೂ ಪ್ರಹ್ಲಾದನಿಗೂ ಸಂವಾದ [ಶಾಂತಿ. ೧೭೭]. ಪ್ರಹ್ಲಾದಚರಿತ್ರೆ [ಭಾಗ -೭-೪-೮ ವಿಷ್ಣು -೧-೧೭]. ಹಿರಣ್ಯಕಶಿಪು ಪ್ರಹ್ಲಾದನಿಗೆ ಯಾವ ಉಪದ್ರವವನ್ನು ಮಾಡದಿದ್ದರೂ ಹಿರಣ್ಯಕಶಿಪುವಿನ ದೌರಾತ್ಮ್ಯವನ್ನು ಮುರಿಯುವ ಸಲುವಾಗಿ ನೃಸಿಂಹರೂಪದಿಂದ ವಿಷ್ಣು ಹಿರಣ್ಯಕಶಿಪುವಿನ ಆಸ್ಥಾನವನ್ನು ಹೊಕ್ಕು, ಅವನೊಂದಿಗೆ ಯುದ್ಧಮಾಡಿ, ಕೊಂದು, ಬ್ರಹ್ಮಾದಿಗಳಿಂದ ಹೊಗಳಿಸಿಕೊಂಡು, ಎಂಟು ಚಕ್ರಗಳುಳ್ಳ ರಥದಿಂದ ವೈಕುಂಠಕ್ಕೆ ತೆರಳಿದ [ಮತ್ಸ್ಯ.-೧೬೧-೧೬೩].

**ಪ್ರಾಗ್ಜ್ಯೋತಿಷ.**—(i) ಒಂದು ಪಟ್ಟಣ ಇದನ್ನು ಕಾಮರೂಪವೆಂತಲೂ ಕರೆಯುತ್ತಾರೆ. ಇದು ಈಗ ಅಸ್ಸಾಂ ದೇಶದಲ್ಲಿದೆ ಪಾಂಡವರ ಕಾಲದಲ್ಲಿ ನರಕಾಸುರನ ಮಗನಾದ ಭಗದತ್ತ ಇಲ್ಲಿ ರಾಜ್ಯಭಾರಮಾಡುತ್ತಿದ್ದ [ಭಾರ.-ಸಭಾ. ೨೭, ೫೫].

(ii) ಮದ್ರ ದೇಶಾಧಿಪನಾದ ಶಲ್ಯನ ರಾಜಧಾನಿ [ಭಾರ.-ಉ. ೫೫].

**ಪ್ರಾಚೀನಬರ್ಹಿ.**—ಒಬ್ಬ ಅರಸು. ಅತ್ರಿ ವಂಶದಲ್ಲಿ ಜನಿಸಿದವ. ಪ್ರಚೇತಸರು ಇವನ ಮಕ್ಕಳು [ಭಾರ -ಶಾಂತಿ. ೨೦೭]. ಇವ ಪೃಥು ಚಕ್ರವರ್ತಿಯ ಮರಿಮಗ,

ಶತದ್ರುತಿಯೆಂಬವಳು ಇವನ ಹೆಂಡತಿ [ಭಾಗ -೪-೨೪ ಹರಿ.-೧-೨. ವಿಷ್ಣು.-೧-೧೪]. ನಾರದ ಇವನಿಗೆ ಅಜಾವಿಳನ ಚರಿತ್ರೆಯನ್ನು ವರ್ಣಿಸಿದ್ದು [ಭಾಗ.-೪-೨೫-೨೯].

**ಪ್ರಾಚೀನ್ವನ್ತ.**—ಒಬ್ಬ ಅರಸು. ಚಂದ್ರ ವಂಶದ ಪೂರು ರಾಜನ ಮಗನಾದ ಜನಮೇಜಯನೆಂಬ ರಾಜನ ಮಗ. ಇವ ಯದು ವಂಶದ ಅಶ್ಮಾಕಿಯೆಂಬವಳನ್ನು ಮದುವೆಯಾಗಿ ಶರ್ಯಾತಿಯೆಂಬ ಮಗನನ್ನು ಪಡೆದ [ಭಾರ.-ಆದಿ. ೬೩].

**ಪ್ರಾಚೇತಸ** —ನೋಡು—ಪ್ರಚೇತಸ, ದಕ್ಷ, ವಾಲ್ಮೀಕಿ.

**ಪ್ರಾಣವಿವಾದ** —ಪ್ರಾಣ ಮುಂತಾದ ಐದು ವಾಯುಗಳಿಗೂ ಮಿಕ್ಕ ಇಂದ್ರಿಯ ಗಳಿಗೂ ತಾನು ಹೆಚ್ಚು, ನಾನು ಹೆಚ್ಚು ಎಂಬ ವಿಷಯದಲ್ಲಿ ನಡೆದ ವಿವಾದ ಮತ್ತು ಪ್ರಾಣದ ಉತ್ಕೃಷ್ಟತೆ [ಭಾರ.-ಶಾಂತಿ. ೧೩. ಅಶ್ವ. ೨೪].

**ಪ್ರಾತಿಕಾಮಿ.**—ದುರ್ಯೋಧನನ ಸಾರಥಿಯ ಮಗ ಪಾಂಡವರು ಜೂಜಿನಲ್ಲಿ ಸೋತ ತರುವಾಯ ದ್ರೌಪದಿಯನ್ನು ಸಭೆಗೆ ಕರೆತರಲು ದ್ರೌಪದಿಯ ಬಳಿಗೆ ಹೋಗಿದ್ದ [ಸಭಾ. ೮೯]. ಇವ ಭಾರತ ಯುದ್ಧದಲ್ಲಿ ಮಡಿದ [ಭಾರ -ಶಲ್ಯ. ೩೩].

**ಪ್ರಾಧಾ.**—ದಕ್ಷಬ್ರಹ್ಮನ ಮಗಳು. ಕಶ್ಯಪ ಮುನಿಯ ಹದಿಮೂರು ಮಂದಿ ಪತ್ನಿಯರಲ್ಲಿ ಒಬ್ಬಳು ಈಕೆ ಸಿದ್ಧ, ಪೂರ್ಣ, ಬರ್ಹಿ, ಪೂರ್ಣಾಯು, ಬ್ರಹ್ಮಚಾರಿ, ರತಿ ಗುಣ, ಸುಪರ್ಣ, ವಿಶ್ವಾಯು, ಭಾನು, ಸುಚಂದ್ರರೆಂಬ ಹತ್ತು ಮಂದಿ ಪುತ್ರರನ್ನೂ, ಅನವದ್ಯಾ, ಮನು, ವಂಶಾ, ಅಸುರಾ, ಮಾರ್ಗಣಪ್ರಿಯಾ, ಅರೂಪಾ, ಸುಭಗಾ, ಭಾಸೀ ಎಂಬ ಎಂಟು ಮಂದಿ ಪುತ್ರಿಯರನ್ನೂ ಪಡೆದಳು [ಭಾರ -ಆದಿ. ೬೬].

**ಪ್ರಾಯಶ್ಚಿತ್ತಯೋಗ್ಯಗಳಾದ ಪಾಪಗಳು.**—[ಭಾರ.-ಶಾಂತಿ. ೩೩,೧೬೩. ಅನು. ೧೯೯]

**ಪ್ರಾವಾರಕರ್ಣ.**—ಹಿಮವತ್ಪರ್ವತದಲ್ಲಿ ವಾಸವಾಗಿದ್ದ ಉಲೂಕ ರಾಜ ನೋಡು —ಇಂದ್ರದ್ಯುಮ್ನ [ಭಾರ.-ವನ. ೨೦೨].

**ಪ್ರಾಪ್ತಿ** —ಕಂಸನ ಹೆಂಡತಿ. ಜರಾಸಂಧನ ಮಗಳು [ಭಾರ.-ಸಭಾ. ೧೪].

**ಪ್ರಿಯದರ್ಶನ.**—ದ್ರುಪದ ರಾಯನ ಮಗ ದ್ರೌಪದೀ ಸ್ವಯಂವರಾನಂತರ ನಡೆದ ಯುದ್ಧದಲ್ಲಿ ಇವ ಜಯದ್ರಥನಿಂದ ಮಡಿದ [ಭಾರ -ಆದಿ. ೨೧೮].

**ಪ್ರಿಯವ್ರತ.**—ಸ್ವಾಯಂಭುವ ಮನುವಿನಿಂದ ಶತರೂಪಾಯೆಂಬವಳಲ್ಲಿ ಜನಿಸಿದ ಹಿರಿಯ ಮಗ. ಉತ್ತಾನಪಾದ ರಾಜನ ಅಣ್ಣ. ಈತ ವಿಶ್ವಕರ್ಮನ ಮಗಳಾದ ಬರ್ಹಿಷ್ಮತಿಯನ್ನು ಮದುವೆಯಾಗಿ, ಅಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾ ವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ, ವೀತಿಹೋತ್ರ, ಕವಿ ಎಂಬ ಹತ್ತು ಮಂದಿ ಪುತ್ರರನ್ನೂ ಊರ್ಜಸ್ವತಿಯೆಂಬ ಕನ್ಯೆಯನ್ನೂ ಪಡೆದ. ಆ ಪುತ್ರರಲ್ಲಿ ಕವಿ, ಮಹಾವೀರ, ಸವನರೆಂಬವರು ವೈರಾಗ್ಯವನ್ನು ತಳೆದು ಅರಣ್ಯಕ್ಕೆ ಹೋದರು.

ಊರ್ಜಸ್ವತಿಯೆಂಬ ಕನ್ಯೆ ಶುಕ್ರಾಚಾರ್ಯನನ್ನು ಮದುವೆಯಾದಳು. ಈ ಪ್ರಿಯವ್ರತ ರಾಜ ವಿಶ್ವಕರ್ಮನ ಮಗಳಾದ ಬರ್ಹಿಷ್ಮತಿಯೆಂಬ ಮತ್ತೊಬ್ಬ ತರುಣಿಯನ್ನು ಮದುವೆಯಾಗಿ ಉತ್ತಮ, ತಾಮಸ, ರೈವತರೆಂಬ ಮೂವರು ಪುತ್ರರನ್ನು ಪಡೆದ. ಈ ಮೂವರೂ ಕಾಲಾಂತರದಲ್ಲಿ ಮನ್ವಂತರಾಧಿಪತಿಗಳಾದರು. ಬಳಿಕ ಪ್ರಿಯವ್ರತ ತನ್ನ ರಥದ ಚಕ್ರದ ರೇಖೆಯಿಂದ ಸಪ್ತ ಸಮುದ್ರಗಳನ್ನೂ ಸಪ್ತ ದ್ವೀಪಗಳನ್ನಾಗಿ ಕಲ್ಪಿಸಿ, ತನ್ನ ಹಿರಿಯ ಹೆಂಡತಿಯ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟು, ತಾನು ನಾರದ ಮುನಿಯಿಂದ ತತ್ತ್ವೋಪದೇಶವನ್ನು ಪಡೆದು ಮುಕ್ತನಾದ [ಭಾಗ -೫-೧] ಪ್ರಿಯವ್ರತ ಮಹಾರಾಜ ಕರ್ದಮ ಮಹರ್ಷಿಯ ಪುತ್ರಿಯಾದ ಕುಕ್ಷಿಯೆಂಬವಳನ್ನು ಮದುವೆಯಾಗಿ ಆಗ್ನೀಧ್ರ, ಅಗ್ನಿಬಾಹು, ವಪುಷ್ಮಂತ, ದ್ಯುತಿಮಂತ, ಮೇಧಾ, ಮೇಧಾತಿಥಿ, ಭವ್ಯ, ಸವನ, ಪುತ್ರ, ಜ್ಯೋತಿಷ್ಮಂತರೆಂಬ ಹತ್ತು ಮಂದಿ ಪುತ್ರರನ್ನೂ ಸಮ್ರಾಟ್, ಕುಕ್ಷಿ ಎಂಬ ಇಬ್ಬರು ಪುತ್ರಿಯರನ್ನೂ ಪಡೆದ. ಮೇಧಾ, ಅಗ್ನಿಬಾಹು, ಪುತ್ರ ಎಂಬ ಮೂವರೂ ಬಾಲ್ಯದಲ್ಲಿಯೇ ಯೋಗಪರಾಯಣರಾಗಲು, ಪ್ರಿಯವ್ರತ ತನ್ನ ರಾಜ್ಯವನ್ನು ಏಳು ಭಾಗಮಾಡಿ ತನ್ನ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟ [ವಿಷ್ಣು.-೨-೧]. ಪ್ರಿಯವ್ರತ ಮಹಾರಾಜ ಹನ್ನೊಂದು ಅರ್ಬುದ ವರ್ಷಗಳ ಕಾಲ ಅಖಂಡವಾದ ಭೂಮಂಡಲವನ್ನು ಮಹಾವೈಭವದಿಂದ ಪರಿಪಾಲಿಸಿದ. ಬರ್ಹಿಷ್ಮತಿಯನ್ನು ಈತ ಪ್ರಾಣಾಧಿಕಳೆಂದು ಭಾವಿಸಿದ್ದು, ಕಡೆಗೆ ವೈರಾಗ್ಯವನ್ನು ತಳೆದು ಆಕೆಯನ್ನು ಪರಿತ್ಯಜಿಸಿ, ನಾರದನಿಂದ ತತ್ತ್ವೋಪದೇಶವನ್ನು ಪಡೆದ [ಭಾಗ.-೫, ೧].

**ಪ್ಲಕ್ಷದ್ವೀಪ.**—ಇದು ಸಪ್ತ ಮಹಾದ್ವೀಪಗಳಲ್ಲಿ ಎರಡನೆಯದು. ಇದರ ಸುತ್ತಲೂ ಲವಣ ಸಮುದ್ರ ಸುತ್ತಿಕೊಂಡಿದೆ. ಇದನ್ನು ಪ್ರಿಯವ್ರತನ ಎರಡನೆಯ ಮಗನಾದ ಇಧ್ಮಜಿಹ್ವ ಕಾಪಾಡುತ್ತಿದ್ದ ಇದರ ವರ್ಣನೆ [ಭಾಗ.-೫-೨೦. ಲಿಂಗ.-೫೩. ದೇ. ಭಾಗ.-೮-೧೨].

## ಫ

**ಫಲ್ಗು.**—ಒಂದು ನದಿ. ಗಯಾ ಕ್ಷೇತ್ರದಲ್ಲಿದೆ [ಭಾರ.-ವನ. ೮೨, ೮೫].

**ಫಲ್ಗುನ.**—ಅರ್ಜುನ. ಉತ್ತರಾ (ಫಲ್ಗುನೀ) ನಕ್ಷತ್ರದಲ್ಲಿ ಜನಿಸಿದವನಾದುದರಿಂದ ಈ ಹೆಸರು [ವಿರಾ. ೪೩].

**ಫೇನಪ.**—ಭಾರ್ಗವ ವಂಶದ ಸುಮಿತ್ರನೆಂಬ ಮುನಿಯ ನಾಮಾಂತರ. ಈತ ತ್ರಿಕೂಟಗಿರಿಯಲ್ಲಿ ವಾಸವಾಗಿದ್ದ [ಭಾರ.-ಅನು. ೧೨೦].

# ಬ

**ಬಕ.**—(i) ಒಬ್ಬ ರಾಕ್ಷಸ. ಏಕಚಕ್ರ ನಗರದ ಸಮೀಪದಲ್ಲಿ ವಾಸವಾಗಿದ್ದ [ಆದಿ. ೧೭೪]. ಭೀಮನಿಂದ ಮಡಿದ [ಆದಿ ೬೧, ೧೬೭] ಇವನ ತಮ್ಮನಾದ ಅಲಾಯುಧನನ್ನು ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಘಟೋತ್ಕಚ ಕೊಂದ [ದ್ರೋಣ. ೧೭೯].

(ii) ಒಬ್ಬ ಋಷಿ ದಾಲ್ಭ್ಯ ಮುನಿಯ ಅಣ್ಣ [ಸಭಾ ೪. ವನ. ೨೬, ೧೯೬]. ಪ್ರಾಣಿಗಳಿಗೆ ಸುಖದುಃಖಗಳು ಸ್ಥಿರವಲ್ಲವೆಂಬ ವಿಷಯವಾಗಿ ಇಂದ್ರನೊಂದಿಗೆ ವಾದಮಾಡಿದ [ವನ ೧೯೬]. ಧೃತರಾಷ್ಟ್ರನೆಂಬ ಪಾಂಚಾಲ ರಾಜನ ರಾಜ್ಯವನ್ನು ಹಾಳುಮಾಡುವುದಕ್ಕಾಗಿ ಸತ್ತ ಪಶುಮಾಂಸದಿಂದ ಹೋಮಮಾಡಿದ [ಶಲ್ಯ ೪೨].

(iii) ಕಂಸ ಪರಿವಾರದ ಒಬ್ಬ ರಾಕ್ಷಸ. ಬಲರಾಮ ಕೃಷ್ಣರು ಗೋಪ ಬಾಲಕರೊಂದಿಗೆ ಕರುಗಳನ್ನು ಮೇಯಿಸುತ್ತಿದ್ದಾಗ ಇವ ಬಕರೂಪದಿಂದ ಕೃಷ್ಣ ನನ್ನು ನುಂಗಿ ತನ್ನ ದವಡೆಗಳಲ್ಲಿ ಅಗಿದು ನೆಲಕ್ಕೆ ಉಗುಳಿದ ಕೃಷ್ಣನಿಗೆ ಸ್ವಲ್ಪವೂ ಗಾಯವಾಗದಿರುವುದನ್ನು ಕಂಡು ಕೋಪದಿಂದ ಅವನನ್ನು ತನ್ನ ಕೊಕ್ಕಿನಿಂದ ಕಚ್ಚ ಹೋಗಲಾಗಿ, ಕೃಷ್ಣ ಆ ಬಕ ಪಕ್ಷಿಯ ಎರಡು ಕೊಕ್ಕುಗಳನ್ನೂ ಎರಡು ಕೈಗಳಿಂದ ಹಿಡಿದು ಸೀಳಿ ಕೊಂದ [ಭಾಗ.-೧೦-೧೨].

(iv) ಪುರಾತನ ಕಾಲದ ಒಬ್ಬ ಮಹರ್ಷಿ ಪಾಂಡವರ ಅಶ್ವಮೇಧದ ಕುದುರೆ ಈತನ ಆಶ್ರಮದ ಬಳಿ ಹೋಯಿತು. ಕೃಷ್ಣಾರ್ಜುನರು ಈತನನ್ನು ಸಂದರ್ಶಿಸಿ ಮಾತನಾಡತಕ್ಕ ಸಂದರ್ಭದಲ್ಲಿ ಅರ್ಜುನ " ತಮಗೆ ಎಷ್ಟು ವಯಸ್ಸು " ಎಂದು ಕೇಳಲಾಗಿ, ಆ ಮುನಿ ನಾನು ಚತುರ್ಮುಖನ ೨೦ ಅಹೋರಾತ್ರಗಳನ್ನು ಕಂಡಿದ್ದೇನೆ" ಎಂದ. ಆಶ್ಚರ್ಯಭರಿತನಾದ ಕೃಷ್ಣ ಆತನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಯುಧಿಷ್ಠಿರನ ಯಜ್ಞಶಾಲೆಗೆ ಕರೆತಂದ [ಜೈ. ಭಾರ.-೬೦].

**ಬಡಬಾಗ್ನಿ.**—ಬೃಹಸ್ಪತಿಯ ಮಗ. ಅಗ್ನಿದೇವತೆಗಳಲ್ಲಿ ಒಬ್ಬ. ಈತನಿಗೆ ಊರ್ಧ್ವಭಾಕ್ ಎಂಬುದು ನಾಮಾಂತರ [ಭಾರ.-ವನ. ೨೨೧].

**ಬದರೀ.**—ಒಂದು ಪುಣ್ಯಕ್ಷೇತ್ರ. ಹಿಮವತ್ಪರ್ವತದ ಉತ್ತರಕ್ಕೆ ಇದೆ. ನರ ನಾರಾಯಣರು ಇಲ್ಲಿ ಬಹಳಕಾಲ ತಪಸ್ಸುಮಾಡುತ್ತಿದ್ದರು. ಪಾಂಡವರು ತೀರ್ಥ ಯಾತ್ರಾಸಮಯದಲ್ಲಿ ಇಲ್ಲಿಗೆ ಬಂದಿದ್ದರು. ವ್ಯಾಸ ಮುನಿಯ ಆಶ್ರಮ [ಭಾರ.-ವನ. ೧೪೭]. ಇದು ಅಲಕನಂದಾ (Bhisen-Ganga) ತೀರದಲ್ಲಿದೆ. ಇದರ ತೀರ ದಲ್ಲಿಯೇ ನಾರಾಯಣಸ್ವಾಮಿಯ ಮಂದಿರವೂ ಇದೆ. ಸುಪ್ರಸಿದ್ಧವಾದ ಯಾತ್ರಾ ಸ್ಥಳ. ನೋಡು—ಗರುಡ [ಭಾರ.-ಅನು. ೪೧].

**ಬನ್ದಿ.**—ವರುಣನ ಮಗ. ಈತ ವಾದದ ನೆವದಿಂದ ಅನೇಕರನ್ನು ನೀರಿನಲ್ಲಿ ಮುಳುಗಿಸಿರಲಾಗಿ ಅಷ್ಟಾವಕ್ರ ಬಂದಿಯನ್ನು ಸೋಲಿಸಿ, ಅವರನ್ನೆಲ್ಲ ಉದ್ಧರಿಸಿದ. ನೋಡು—ಅಷ್ಟಾವಕ್ರ.

**ಬಭ್ರು.**—(i) ಒಬ್ಬ ಅರಸು. ಯದು ವಂಶದ ಸಾತ್ವತ ರಾಜನ ಮಗನಾದ ದೇವಾವೃಥ ರಾಜನ ಮಗ. ನೋಡು—ದೇವಾವೃಥ [ಭಾಗ.-೯-೨೪].

(ii) ಅಕ್ರೂರನ ನಾಮಾಂತರ [ಆದಿ. ೨೩೯ ಸಭಾ. ೧೪]. ಒಮ್ಮೆ ಶಿಶುಪಾಲ ಇವನ ಹೆಂಡತಿಯನ್ನು ಅಪಹರಿಸಿದ್ದ [ಸಭಾ. ೬೮].

**ಬಭ್ರುವಾಹನ.**—ಮಣಲೂರು ಪುರಾಧೀಶ್ವರನಾದ ಚಿತ್ರವಾಹನ ಅಥವಾ ಪ್ರವೀರನೆಂಬ ರಾಜನ ಮಗಳಾದ ಚಿತ್ರಾಂಗದೆಯಲ್ಲಿ ಪಾಂಡು ಪುತ್ರನಾದ ಅರ್ಜುನನಿಂದ ಜನಿಸಿದವ ಪ್ರವೀರ ರಾಜನಿಗೆ ಪುತ್ರಸಂತಾನವಿಲ್ಲವಾಗಿ ಆತ ಬಭ್ರುವಾಹನನನ್ನು ಪುತ್ರಿಕಾಪುತ್ರ ಧರ್ಮದಿಂದ ತನ್ನ ಮಗನನ್ನಾಗಿ ಮಾಡಿಕೊಂಡ ಹೀಗಾಗಿ ಬಭ್ರುವಾಹನ ಪ್ರವೀರನ ತರುವಾಯ ಆತನ ರಾಜ್ಯಕ್ಕೆ ಉತ್ತರಾಧಿಕಾರಿಯಾದ [ಭಾರ.-ಆದಿ ೬೩, ೨೩೭]. ಪಾಂಡವರ ರಾಜಸೂಯಯಾಗ ಸಮಯದಲ್ಲಿ ದಕ್ಷಿಣ ದಿಕ್ಕಿಗೆ ವಿಜಯಯಾತ್ರೆ ಹೊರಟಿದ್ದ ಸಹದೇವನಿಗೆ ಕಪ್ಪವನ್ನು ಕೊಟ್ಟ [ಭಾರ.-ಸಭಾ. ೩೩]. ಅಶ್ವಮೇಧಯಾಗ ಸಮಯದಲ್ಲಿ ಯಜ್ಞಾಶ್ವವನ್ನು ತಡೆದು ಅರ್ಜುನನನ್ನು ಯುದ್ಧದಲ್ಲಿ ಕೊಂದು, ಮರಳಿ ಸಂಜೀವಕಮಣಿಯ ಮೂಲಕ ಆತನನ್ನು ಬದುಕಿಸಿದ. ನೋಡು—ಉಲೂಪಿ, ಚಿತ್ರಾಂಗದೆ [ಭಾರ.-ಅಶ್ವ. ೭೯]. ಪಾಂಡವರ ಅಶ್ವಮೇಧಕ್ಕಾಗಿ ಹಸ್ತಿನಾವತಿಗೆ ಬಂದಿದ್ದ [ಭಾರ.-ಅಶ್ವ. ೮೯].

**ಬರ್ಹಿಷದ.**—ಪಿತೃದೇವತೆಗಳಲ್ಲಿ ಒಂದು ಪಂಗಡದವರಿಗೆ ಈ ಹೆಸರು ಸಲ್ಲುತ್ತದೆ [ಭಾರ.-ಆದಿ. ೬೪. ಸಭಾ. ೮. ಹರಿ.-೧, ೧೮. ಮತ್ಸ್ಯ.-೧೪೦].

**ಬರ್ಹಿಷ್ಮತಿ.**—(i) ಸ್ವಾಯಂಭುವ ಮನುಪುತ್ರನಾದ ಪ್ರಿಯವ್ರತ ರಾಜನ ಹೆಂಡತಿ. ವಿಶ್ವಕರ್ಮನ ಮಗಳು. ನೋಡು—ಪ್ರಿಯವ್ರತ

(ii) ಒಂದು ಪಟ್ಟಣ. ಬ್ರಹ್ಮಾವರ್ತ ದೇಶದಲ್ಲಿದೆ. ವಿಷ್ಣು ವರಾಹಾವತಾರವನ್ನು ತಳೆದಿದ್ದಾಗ, ಒಂದೆಡೆಯಲ್ಲಿ ನಿಂತು ತನ್ನ ದೇಹವನ್ನು ಕೊಡವಿದ ಆತನ ದೇಹದಿಂದ ಉದುರಿದ ರೋಮಗಳೆಲ್ಲವೂ ಹಸುರಾದ ದರ್ಭೆಗಳಾದವು (ಬರ್ಹಿಸ್). ಇಂತು ಬರ್ಹಿಸ್ಸುಗಳಿಂದ ತುಂಬಿದ ಪ್ರದೇಶಕ್ಕೆ ಬರ್ಹಿಷ್ಮತಿಯೆಂದು ಹೆಸರಾಯಿತು. ಸ್ವಾಯಂಭುವ ಮನು ಈ ಬರ್ಹಿಷ್ಮತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ [ಭಾಗ.-೩, ೨೨].

**ಬಲ, ಬಲದೇವ, ಬಲರಾಮ.**—ವಸುದೇವನಿಂದ ದೇವಕಿಯ ಗರ್ಭವನ್ನು ಸೇರಿ, ಬಳಿಕ ಮಾಯೆಯಿಂದ ರೋಹಿಣಿಯ ಗರ್ಭಕ್ಕೆ ಸಂಕ್ರಮಿಸಿ ರೋಹಿಣಿಯಿಂದ

ಜನಿಸಿದವ. ಬಲಾಧಿಕನಾದುದರಿಂದ, ಬಲ ಅಥವಾ ಬಲದೇವನೆಂತಲೂ, ಬಲ ಧಿಕನೂ ಮನೋಹರನೂ ಆದುದರಿಂದ ಬಲರಾಮನೆಂತಲೂ, ಇವನ ಆಯುಧಗಳು ಮುಸಲ (ಒನಕೆ) ಹಲ(ನೇಗಿಲು)ಗಳಾಗಿದ್ದುದರಿಂದ ಮುಸಲೀ, ಹಲೀ ಎಂತಲೂ ಒಂದು ಗರ್ಭದಿಂದ ಮತ್ತೊಂದು ಗರ್ಭಕ್ಕೆ ಸಂಕ್ರಮಿಸಿದ ಕಾರಣ ಸಂಕರ್ಷಣ ನೆಂತಲೂ, ನೀಲಿಯ ಪಟ್ಟೆವಸ್ತ್ರ ಇವನಿಗೆ ಅತ್ಯಂತ ಪ್ರೀತಿಪಾತ್ರವಾದುದರಿಂದ ನೀಲಾಂಬರನೆಂತಲೂ, ರೋಹಿಣಿಯ ಮಗನಾದುದರಿಂದ ರೌಹಿಣೇಯನೆಂತಲೂ ಅನೇಕ ಹೆಸರುಗಳು. ಆದಿಶೇಷನ ಅವತಾರ. ಶ್ರೀ ಕೃಷ್ಣನ ಅಣ್ಣ, ಬಲತಾಯ ಮಗ. ಶ್ರೀ ಕೃಷ್ಣನೊಂದಿಗೆ ಗೋಕುಲದಲ್ಲಿಯೇ ಬೆಳೆದು ಒಡನೆಯೇ ಇದ್ದವ [ಭಾರ. ಆದಿ ೬೮]. ಬಲರಾಮ ದೇವಕಿಯ ಏಳನೆಯ ಮಗ [ಭಾಗ -೯-೨೪]. ಗೋಕುಲ ದಲ್ಲಿದ್ದಾಗ ಧೇನುಕನೆಂಬ ಅಸುರನನ್ನು ಕೊಂದ [ಭಾರ.-ಸಭಾ. ೫೩. ಭಾಗ.-೧೦ ೧೫] ಧೇನುಕಾಸುರನನ್ನು ಕೃಷ್ಣನೇ ಕೊಂದ [ವಿಷ್ಣು.-೫-೧೫]. ಪ್ರಲಂಬಾಸುರನ ವಧೆ [ಭಾಗ.-೧೦-೧೮. ವಿಷ್ಣು.-೫-೯ ಹರಿ.-೨-೬೧]. ಕಂಸವಧಾನಂತರ ವಸು ದೇವ ಬಲರಾಮ ಕೃಷ್ಣರಿಗೆ ಉಪನಯನಮಾಡಿ ಸಾಂದೀಪಿನಿಯ ಬಳಿ ವಿದ್ಯಾ ಭ್ಯಾಸಕ್ಕೆ ಬಿಟ್ಟದ್ದು. ಸುದಾಮ(ಕುಚೇಲ)ನೊಂದಿಗೆ ಸ್ನೇಹ [ಭಾಗ.-೧೦-೪೫]. ಕಕುದ್ಮಿಯ (ರೈವತಕನ) ಮಗಳಾದ ರೇವತಿಯನ್ನು ಮದುವೆಯಾದದ್ದು [ಭಾಗ.-೯-೩]. ನೋಡು—ಕಕುದ್ಮಿ. ಪ್ರದ್ಯುಮ್ನನ ಮದುವೆಯ ಸಂದರ್ಭದಲ್ಲಿ ರುಕ್ಮಿಯೂ ಬಲರಾಮನೂ ಜೂಜಾಡಿದಾಗ, ವಾಗ್ವಾದ ನಡೆದು, ಬಲರಾಮ ರುಕ್ಮಿಯನ್ನು ಕೊಂದದ್ದು [ಭಾಗ.-೧೦-೬೧. ಹರಿ.-೨-೬೧]. ಜಾಂಬವತೀ ಪುತ್ರನಾದ ಸಾಂಬ ಕುಮಾರ ದುರ್ಯೋಧನನ ಮಗಳಾದ ಲಕ್ಷ್ಮಣೆಯನ್ನು ಅಪಹರಿಸಲಾಗಿ ಕೌರವರು ಸಾಂಬನನ್ನು ಬಂಧಿಸಿ ಸೆರೆಯಲ್ಲಿಟ್ಟರು. ಆಗ ಕ್ರುದ್ಧನಾದ ಬಲರಾಮ ನಾರದ ಮುನಿ ಯಿಂದ ಈ ವೃತ್ತಾಂತವನ್ನು ಕೇಳಿ, ಉದ್ಧವನನ್ನು ಕೌರವರಲ್ಲಿಗೆ ಕಳುಹಿ, ವ್ಯರ್ಥ ವಾಗಲು, ಕ್ರುದ್ಧನಾಗಿ ಹಸ್ತಿನಾವತಿಯನ್ನು ಗಂಗೆಯಲ್ಲಿ ಕೆಡಹುವುದಕ್ಕಾಗಿ ತನ್ನ ನೇಗಿಲಿನ ತುದಿಯನ್ನು ದಕ್ಷಿಣ ಭಾಗದ ಕೋಟೆಯ ಬುಡದಲ್ಲಿ ಹಾಕಿ ಮೀಟಿದ್ದು. ಕೌರವರು ಶರಣುಬಂದದ್ದು [ಭಾಗ.-೧೦-೬೮ ವಿಷ್ಣು.-೫-೩೫]. ನರಕಾಸುರನ ಮಿತ್ರ ನಾದ ದ್ವಿವಿದನೆಂಬ ವಾನರ ದ್ವಾರಕೆಯ ಮೇಲೆ ಕಲ್ಲುಮಳೆ ಸುರಿಸಿ ಹಾಳುಮಾಡು ತ್ತಿದ್ದಾಗ ಅವನನ್ನು ಬಲರಾಮ ಕೊಂದದ್ದು [ಭಾಗ.-೧೦-೬೭. ವಿಷ್ಣು.-೫-೩೬]. ಮದ್ಯಪಾನದಿಂದ ಮತ್ತನಾದ ಬಲರಾಮ ಗೋಪಿಯರೊಡನೆ ಯಮುನಾ ತೀರದಲ್ಲಿ ವಿಹರಿಸುತ್ತಿರುವಾಗ, ಜಲಕ್ರೀಡೆಗಾಗಿ ಯಮುನಾ ಪ್ರವಾಹವನ್ನು ತನ್ನ ಹತ್ತಿರಕ್ಕೆ ಕರೆದು, ಅದು ಬಾರದಿರಲಾಗಿ ತನ್ನ ನೇಗಿಲ ತುದಿಯಿಂದ ಭೇದಿಸತೊಡಗಿದ್ದು. ಯಮುನೆ ಮರೆಹೊಕ್ಕದ್ದು. ಬಲರಾಮನಿಗೆ ನೀಲದುಕೂಲ, ಮಾಲ್ಯ, ಭೂಷಣಗಳನ್ನು

ಕಾಣಿಕೆ ಕೊಟ್ಟದ್ದು [ಭಾಗ.-೧೦-೬೫]. ಸುಭದ್ರೆಯನ್ನು ದುರ್ಯೋಧನನಿಗೇ ಕೊಡಬೇಕೆಂಬ ಸಂಕಲ್ಪ. ಅರ್ಜುನ ಸನ್ಯಾಸಿ ವೇಷದಿಂದ ರೈವತಕ ಪರ್ವತದಲ್ಲಿದ್ದಾಗ ಅವನನ್ನು ಚಾತುರ್ಮಾಸ್ಯವ್ರತಕ್ಕಾಗಿ ದ್ವಾರಕೆಗೆ ಕರೆತಂದು, ಅಂತಃಪುರದಲ್ಲಿ ಸುಭದ್ರೆಯನ್ನು ಶುಶ್ರೂಷೆಗೆ ನೇಮಿಸಿ ನಿಲ್ಲಿಸಿದ್ದು, ಸುಭದ್ರಾಹರಣ ಮುಂತಾಗಿ [ಭಾಗ.-೧೦-೮೬. ಭಾರ.-ಆದಿ. ೨೩೯-೨೪೪]. ಸ್ಯಮಂತಕಮಣಿಯ ಮೂಲಕ ಬಲರಾಮ ಕೃಷ್ಣರಲ್ಲಿ ವೈಮನಸ್ಯವುಂಟಾದದ್ದು. ಬಲರಾಮ ವಿದೇಹ ದೇಶಕ್ಕೆ ಹೋದದ್ದು. ಅಲ್ಲಿ ದುರ್ಯೋಧನನಿಗೆ ಗದಾ ವಿದ್ಯೆಯನ್ನು ಕಲಿಸಿದ್ದು [ಭಾಗ -೧೦-೫೭. ವಿಷ್ಣು.-೪-೧೩]. ಇವನಿಗೆ ದುರ್ಯೋಧನನ ಮೇಲೆ ವಿಶೇಷವಾದ ಅಭಿಮಾನವಿತ್ತು. ಭಾರತ ಯುದ್ಧದಲ್ಲಿ ಪಾಂಡವರೇ ಗೆಲ್ಲುವರೆಂಬುದನ್ನೂ ತಿಳಿದಿದ್ದ ಕಾರಣ ಆ ಯುದ್ಧದಲ್ಲಿ ಯಾರಿಗೂ ಸಹಾಯಮಾಡಲೊಲ್ಲದೆ ತೀರ್ಥಯಾತ್ರೆ ಹೊರಟು ನೈಮಿಶಾರಣ್ಯವನ್ನು ಹೊಕ್ಕು ಋಷಿ ಸಮೂಹದಲ್ಲಿ ಪುರಾಣಶ್ರವಣಮಾಡಿಸುತ್ತಿದ್ದ ರೋಮಹರ್ಷಣ ಮುನಿ ತನಗೆ ಮರ್ಯಾದೆ ಮಾಡಲಿಲ್ಲವೆಂಬ ಕೋಪದಿಂದ ತನ್ನ ಕೈಯಲ್ಲಿದ್ದ ದರ್ಭೆಯಿಂದ ಆತನನ್ನು ಕೊಂದ. ಬಳಿಕ ಅಲ್ಲಿ ನೆರೆದಿದ್ದ ಮುನಿಗಳ ಮಾತಿನಂತೆ ಆತನನ್ನು ಬದುಕಿಸಿ, ಬ್ರಾಹ್ಮಣನನ್ನು ತಿರಸ್ಕರಿಸಿದ ಪಾಪವನ್ನು ನೀಗಿಕೊಳ್ಳುವುದಕ್ಕಾಗಿ ಆ ಮುನಿಗಳಿಗೆ ಪೀಡೆಯನ್ನುಂಟುಮಾಡುತ್ತಿದ್ದ ಬಲ್ವಲನೆಂಬ ರಕ್ಕಸನನ್ನು ಕೊಂದದ್ದು. ಒಂದು ಸಂವತ್ಸರಕಾಲ ಭೂಪ್ರದಕ್ಷಿಣೆ ಮಾಡಿದ್ದು ಮುಂತಾಗಿ [ಭಾಗ.-೧೦-೭೮, ೭೯ ಭಾರ.-ಉದ್ಯೋ. ೧೫೭. ಶಲ್ಯ. ೩೫. ಮಾರ್ಕಂ.-೬] ಬಲರಾಮ ಇಂತು ಭೂಪ್ರದಕ್ಷಿಣೆ ಮಾಡುತ್ತ ಭೀಮಾರ್ಜುನರ ಯುದ್ಧವನ್ನು ನಿಲ್ಲಿಸುವ ಸಲುವಾಗಿ ಕುರುಕ್ಷೇತ್ರಕ್ಕೆ ಬಂದ. ಅವರಿಬ್ಬರಿಗೂ ತಿಳಿಯಹೇಳಿದ. ತನ್ನ ಮಾತು ನಡೆಯದೆ, ಯುದ್ಧನಡೆದು, ದುರ್ಯೋಧನ ಸಾಯಲಾಗಿ, ಬಲರಾಮ ಭೀಮನನ್ನು ಕೊಲ್ಲುವ ಪ್ರಯತ್ನಮಾಡಿದ. ಕೃಷ್ಣ ಆತನನ್ನು ಸಂತವಿಸಿ, ದ್ವಾರಕೆಗೆ ಕಳುಹಿದ್ದು ಮುಂತಾಗಿ [ಭಾಗ.-೧೦-೭೯. ಭಾರ.-ಶಲ್ಯ ೬೧]. ಭಾಗವತದಲ್ಲಿ ಭೀಮ ದುರ್ಯೋಧನರು ತನ್ನ ಮಾತನ್ನು ಲೆಕ್ಕಿಸದಿರುವುದನ್ನು ಕಂಡು "ಅವರ ಪ್ರಾರಬ್ಧ"ವೆಂದು ಹೇಳಿ ದ್ವಾರಕೆಗೆ ಬಂದಂತಿದೆ [ಭಾಗ.-೧೦-೭೯]. ಧರ್ಮವಿಶೇಷಗಳನ್ನು ವಿವರಿಸಿದ್ದು [ಭಾರ.-ಅನು. ೧೮೯] ಪ್ರಭಾಸ ಕ್ಷೇತ್ರದಲ್ಲಿ ಯಾದವರು ಹೊಡೆದಾಡಿ ಮಡಿದದ್ದನ್ನು ಕಂಡು, ಬಲರಾಮ ಸರ್ಪಶರೀರವನ್ನು ಧರಿಸಿ ಸಮುದ್ರದಲ್ಲಿ ಮುಳುಗಿದ [ಭಾರ.-ಮೌ. ೫. ಭಾಗ.-೧೧-೩೦].

**ಬಲಾಕ.**—ಒಬ್ಬ ಬೇಡ. ಈತ ಮಾತಾಪಿತೃಭಕ್ತಿಯುಕ್ತನಾಗಿ, ಅನುದಿನವೂ ಒಂದು ಮೃಗವನ್ನು ಕೊಂದು ತಾಯ್ತಂದೆಗಳನ್ನು ಕಾಪಾಡುತ್ತಿದ್ದ. ಹೀಗಿರಲು ಒಂದು ದಿನ ಕಾಡಿನಲ್ಲಿ ಸಂಜೆಯವರೆಗೂ ಸುತ್ತಿದರೂ ಒಂದು ಮೃಗವೂ ಸಿಕ್ಕದೆ ಕಡೆಗೆ ಕತ್ತಲಾದ ಮೇಲೆ ಒಂದು ಮೃಗ ದೊರೆಯಲಾಗಿ ಅದನ್ನು ಕೊಂದು

ಮನೆಗೆ ತಂದು ನೋಡುವಲ್ಲಿ ಅದು ಕುರುಡಾಗಿತ್ತು. ಇಂತು ಕುರುಡ ಪ್ರಾಣಿಯನ್ನು ಕೊಂದದ್ದು ಅಧರ್ಮವಾಗಿದ್ದರೂ ಆ ಮೃಗ ಅನೇಕ ಮಂದಿಗೆ ಪೀಡೆಯನ್ನುಂಟುಮಾಡುತ್ತಿದ್ದುದರಿಂದ ಅದನ್ನು ಕೊಂದ ಬಲಾಕನಿಗೆ ಸ್ವರ್ಗವೇ ದೊರೆಯಿತು [ಭಾರ.-ಕರ್ಣ. ೭೨].

**ಬಲಾಕಾ.**—ಒಂದು ಕೊಕ್ಕರೆ ನೋಡು—ಕೌಶಿಕ.

**ಬಲಾನೀಕ**—(i) ದ್ರುಪದ ರಾಜನ ಮಗ ಹದಿನಾಲ್ಕನೆಯ ದಿವಸದ ರಾತ್ರಿ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದ [ಭಾರ.-ದ್ರೋ. ೧೫೭].

(ii) ಮತ್ತೊಬ್ಬ ಅರಸು ವಿರಾಟ ರಾಜನ ತಮ್ಮ [ದ್ರೋ. ೧೫೮]

**ಬಲಿ.**—(i) ಒಬ್ಬ ಕ್ಷತ್ರಿಯ. ಚಂದ್ರ ವಂಶದ ಶಿಬಿ ರಾಜನ ಮಗ ಈತನಿಗೆ ಸುದೇಷ್ಣೆಯೆಂಬವಳು ಹೆಂಡತಿ [ಭಾಗ.-೯-೨೩. ಹರಿ -೧-೩೧] ನೋಡು—ದೀರ್ಘತಮ [ಮತ್ಸ್ಯ.-೪೮. ಭಾರ -ಆದಿ ೧೧೩]

(ii) ಪ್ರಹ್ಲಾದ ಪುತ್ರನಾದ ವಿರೋಚನನ ಮಗ. ಇವನ ಮಗ ಬಾಣಾಸುರ [ಭಾರ -ಆದಿ. ೬೬. ಸಭಾ ೯]. ಇವನಿಗೆ ಇಂದ್ರಸೇನನೆಂಬುದು ನಾಮಾಂತರ [ಭಾಗ.-೮-೨೨] ಈತನ ಹೆಂಡತಿ ವಿಂಧ್ಯಾವಳಿ [ಭಾಗ.-೮-೨೦]. ಬಲಿ ಇಂದ್ರನಿಂದ ಸಂಹೃತನಾಗಿ, ಮರಳಿ ಶುಕ್ರಾಚಾರ್ಯನ ಮೃತಸಂಜೀವಿನೀ ಪ್ರಭಾವದಿಂದ ಬದುಕಿ ವಿಶ್ವಜಿತ್ತೆಂಬ ಯಾಗವನ್ನು ಮಾಡಿ, ಅಗ್ನಿದೇವನ ಮೂಲಕ ರಥಾಶ್ವಧ್ವಜಗಳನ್ನೂ, ತನ್ನ ಪಿತಾಮಹನಾದ ಪ್ರಹ್ಲಾದನಿಂದ ದಿವ್ಯಧನುಸ್ಸನ್ನೂ ಅಕ್ಷಯತೂಣೀರಗಳನ್ನೂ ಪಡೆದು ಇಂದ್ರನ ಮೇಲೆ ಯುದ್ಧಮಾಡಿ ಅವನನ್ನು ಸೋಲಿಸಿ, ಸ್ವರ್ಗರಾಜ್ಯವನ್ನು ವಶಪಡಿಸಿಕೊಂಡ [ಭಾಗ.-೮-೧೬]. ನರ್ಮದಾ ತೀರದಲ್ಲಿ ಬಲಿ ಅಶ್ವಮೇಧಯಾಗ ಮಾಡತೊಡಗಿದ. ಬಳಿಕ ಬ್ರಹ್ಮಾದಿಗಳ ಮೊರೆಯನ್ನು ಕೇಳಿ ವಿಷ್ಣು ಅದಿತಿದೇವಿಯಲ್ಲಿ ವಾಮನರೂಪದಿಂದ ಅವತರಿಸಿ ಉಪನಯನಾನಂತರ ಬಲಿ ಚಕ್ರವರ್ತಿಯ ಬಳಿಗೆ ಬಂದ ಬಲಿ ಚಕ್ರವರ್ತಿ ವಾಮನನನ್ನು ಆದರದಿಂದ ಬರಮಾಡಿಕೊಂಡು ಪೂಜಿಸಿದ್ದು [ಭಾಗ.-೮-೧೭]. ಬಲಿಯನ್ನು ಮೂರಡಿ ಭೂಮಿಯನ್ನು ಬೇಡಿದ್ದು. ಶುಕ್ರಾಚಾರ್ಯ ಕೊಡಬೇಡವೆಂದು ಅಡ್ಡಗಿಸಿದ್ದು ದಾನವನ್ನು ಪಡೆದ ವಾಮನ ಭೂಮ್ಯಂತರಿಕ್ಷಗಳನ್ನು ಎರಡು ಅಡಿಗಳಿಂದ ಅಳೆದು ಮೂರನೆಯ ಅಡಿಯನ್ನು ಬಲಿಯ ತಲೆಯಮೇಲಿಟ್ಟು ಆತನನ್ನು ಪಾತಾಳಕ್ಕೆ ಮೆಟ್ಟಿದ್ದು [ಭಾಗ.-೮-೧೮-೨೨. ಭಾರ.-ಸಭಾ. ೪೭]. ತಾಳ್ಮೆಯೇ ಶ್ರೇಷ್ಠವಾದುದೆಂಬ ವಿಷಯವಾಗಿ ಪ್ರಹ್ಲಾದನೊಡನೆ ಸಂವಾದಮಾಡಿದ್ದು [ಭಾರ.-ವನ. ೨೮]. ಧೂಪ ದೀಪಾದಿಗಳನ್ನು ಅರ್ಪಿಸುವ ವಿಷಯವಾಗಿ ಶುಕ್ರಾಚಾರ್ಯರೊಂದಿಗೆ ಸಂವಾದ [ಭಾರ.-ಅನು. ೧೫೫]. ಶ್ರೇಯಸ್ಸಾಧನೆಯ ವಿಷಯವಾಗಿ ಗರ್ದಭ ರೂಪವನ್ನು ಧರಿಸಿದ್ದ ಇಂದ್ರನೊಂದಿಗೆ

ಸಂವಾದ [ಭಾರ.-ಶಾಂತಿ. ೨೩೦]. ಬಲಿ ಚಕ್ರವರ್ತಿಗೆ ಕೋಟರೆಯೆಂಬ ಮತ್ತೊಬ್ಬ ಹೆಂಡತಿಯಿದ್ದಳು. ಈತನಿಗೆ ಬಾಣ, ಧೃತರಾಷ್ಟ್ರ, ಸೂರ್ಯ, ಚಂದ್ರ, ಚಂದ್ರಾಂಶು ತಾಪನ, ನಿಕುಂಭನಾಭ, ಗುರ್ವಕ್ಷ, ಕುಕ್ಷಿ, ಭೀಮ, ವಿಭೀಷಣ ಮೊದಲಾದ ಅನೇಕ ಮಂದಿ ಮಕ್ಕಳಿದ್ದರು ವಿಷ್ಣು ಈತನನ್ನು ರಸಾತಲಕ್ಕೆ ಕಳುಹುವಾಗ ಖಿನ್ನನಾದ ಬಲಿಯನ್ನು ಕಂಡು "ಶ್ರೋತ್ರಿಯನಿಲ್ಲದ ಶ್ರಾದ್ಧ, ಶ್ರದ್ಧೆಯಿಲ್ಲದ ದಾನ, ವಿಧಿಹೀನವಾದ ಯಜ್ಞ, ಶೌಚವಿಲ್ಲದ ದೇವ ಬ್ರಾಹ್ಮಣ ಪೂಜಾವ್ರತಗಳು, ಗುರುಭಕ್ತಿಯಿಲ್ಲದೆ ಮಾಡಿದ ಕರ್ಮ—ಈ ಐದು ವಿಧದಿಂದಲೂ ಬರತಕ್ಕ ಪುಣ್ಯಾಂಶ ಆಯಾ ಕಾರ್ಯಗಳನ್ನು ಮಾಡಿದವರಿಗೆ ಸಲ್ಲುವುದಿಲ್ಲ ಆ ಫಲ ಸಂಪೂರ್ಣವಾಗಿ ನಿನಗೇ ಸಲ್ಲುವುದು" ಎಂಬುದಾಗಿ ಬಲಿ ಚಕ್ರವರ್ತಿಗೆ ವರವನ್ನಿತ್ತ [ದೇ.ಭಾಗ.-೯-೪೫]. ದೇವತೆಗಳ ಪ್ರಾರ್ಥನಾನುಸಾರ ವಿಷ್ಣು ವಾಮನನಾಗಿ ಜನಿಸುವುದಕ್ಕೆ ಅದಿತಿಯ ಗರ್ಭವನ್ನು ಸೇರಿದಕೂಡಲೇ ದೈತ್ಯರೆಲ್ಲರೂ ತೇಜೋಹೀನರಾದರು. ಅನೇಕವಾಗಿ ಉತ್ಪಾತಗಳು ತಲೆದೋರಿದವು ಇದಕ್ಕೆ ಕಾರಣವೇನೆಂದು ಬಲಿ ತನ್ನ ತಾತನಾದ ಪ್ರಹ್ಲಾದನನ್ನು ಪ್ರಶ್ನೆಮಾಡಿದ. ಧ್ಯಾನದೃಷ್ಟಿಯಿಂದ ಸಕಲವನ್ನೂ ತಿಳಿದು ಪ್ರಹ್ಲಾದ ಬಲಿಗೆ ವಿವರಿಸಿದ ಬಲಿ ವಿಷ್ಣುವನ್ನು ನಿಂದಿಸಲು, ಪ್ರಹ್ಲಾದ ಕುಪಿತನಾಗಿ ಬಲಿಯನ್ನು ಹೀಯಾಳಿಸಿ, "ನನ್ನನ್ನು ಶಿರಚ್ಛೇದಮಾಡಿದ್ದಕ್ಕಿಂತಲೂ ಪಾತಕಕರವಾದ ಭಗವನ್ನಿಂದಾಭರಿತವಾದ ಮಾತನ್ನು ಹೇಳಿದೆಯಾಗಿ, ರಾಜ್ಯಭ್ರಷ್ಟನಾಗಿ ಉರುಳು"

"ಯಥಾ ಮೇ ಶಿರಸಶ್ಛೇದಾದಿದಂ ಗುರುತರಂ ವಚಃ ।
ತ್ವಯೋಕ್ತಮಚ್ಯುತಾಕ್ಷೇಪಿ ರಾಜ್ಯಭ್ರಷ್ಟಸ್ತಥಾ ಪತ" ॥

ಎಂಬುದಾಗಿ ಶಾಪವಿತ್ತ. ಬಲಿ ಪ್ರಹ್ಲಾದನನ್ನು ಬೇಡಿಕೊಂಡ ಪ್ರಹ್ಲಾದ ಬಲಿಗೆ ಶ್ರೇಯಸ್ಸು ದೊರೆಯುವಂತೆ ಮಾಡುವುದಾಗಿ ಅಭಯಕೊಟ್ಟ ವಾಮನಾವತಾರ ಸಮಯದಲ್ಲಿ ತಲೆದೋರಿದ ಉತ್ಪಾತಗಳನ್ನು ಕಂಡು, ಬಲಿ ಶುಕ್ರನನ್ನು ಪ್ರಶ್ನೆಮಾಡಿದ ವಾಮನಮೂರ್ತಿ ದಾನ ಬೇಡುವ ಸಲುವಾಗಿ ನಿನ್ನ ಬಳಿಗೆ ಬರುವನೆಂಬುದಾಗಿ ಶುಕ್ರಾಚಾರ್ಯ ವಿವರಿಸಿದ. ಶುಕ್ರ ಬಲಿ ಸಂವಾದ ಬಲಿಯಿಂದ ದಾನವನ್ನು ಪಡೆದ ವಾಮನ ಬಲಿಚಕ್ರವರ್ತಿಗೆ ಒಂದು ಕಲ್ಪಪ್ರಮಾಣದ ಆಯುಷ್ಯವನ್ನೂ, ಈ ವೈವಸ್ವತಮನ್ವಂತರ ಕಳೆದು ಮುಂದೆ ಸಾವರ್ಣಿಕ ಮನ್ವಂತರದಲ್ಲಿ ಇಂದ್ರಪದವಿಯನ್ನೂ, ಅದುವರೆಗೂ ಸುತಲ ಲೋಕದಲ್ಲಿ ಮುನ್ನೂರು ಮಂದಿ ಲಲನೆಯರೊಡನೆ ಸಕಲ ಭೋಗಗಳನ್ನೂ ಅನುಗ್ರಹಿಸಿ, "ನೀನು ದಾರಿತಪ್ಪಿ ನಡೆದೆಯಾದರೆ ವರುಣಪಾಶಗಳು ನಿನ್ನನ್ನು ಬಂಧಿಸುತ್ತವೆ" ಎಂಬುದಾಗಿ ಕಟ್ಟಳೆಯಿಟ್ಟ. ಹಾಗಾದರೆ ನನಗೆ ಸುತಲ ಲೋಕದಲ್ಲಿ ಇಷ್ಟೊಂದು ಭೋಗಗಳನ್ನು ಒದಗಿಸಲು ಸಾಧನನಾವುದೆಂದು ಬಲಿ ಪ್ರಶ್ನೆಮಾಡ

ಲಾಗಿ—

ದಾನಾನ್ಯವಿಧಿದತ್ತಾನಿ ಶ್ರಾದ್ಧಾನ್ಯಶ್ರೋತ್ರಿಯಾಣಿ ಚ ।
ಹುತಾನ್ಯಶ್ರದ್ಧಯಾ ಯಾನಿ ತಾನಿ ದಾಸ್ಯಂತಿ ತೇ ಫಲಂ ॥
ಅದಕ್ಷಿಣಾಸ್ತಥಾ ಯಜ್ಞಾಃ ಕ್ರಿಯಾಶ್ಚಾವಿಧಿನಾ ಕೃತಾಃ ।
ಫಲಾನಿ ತವ ದಾಸ್ಯಂತಿ ಅಧೀತಾನ್ಯವ್ರತಾನಿ ಚ ॥

ಎಂಬುದಾಗಿ ವಿಷ್ಣು ವರಪ್ರದಾನಮಾಡಿ ಆಗ್ಗೆ ಧರಿಸಿದ್ದ ತ್ರಿವಿಕ್ರಮ ರೂಪದಿಂದಲೇ ಕಣ್ಮರೆಯಾದ ]ಮತ್ಸ್ಯ.-೨೪೪-೨೪೬].

**ಬಲ್ವಲ.**—ವಿಪ್ರಚಿತ್ತಿ ದಾನವನ ಮಗನಾದ ಇಲ್ವಲನ ಮಗ ಇವ ನೈಮಿಶಾರಣ್ಯವಾಸಿಗಳಾದ ಮುನಿಗಳಿಗೆ ತುಂಬ ತೊಂದರೆಕೊಡುತ್ತಿದ್ದ ಕಾರಣ ಬಲರಾಮ ಇವನನ್ನು ಕೊಂದ [ಭಾಗ.-೧೦-೭೯].

**ಬಹುಳಾಶ್ವ**—ವಿದೇಹ ದೇಶದ ಅರಸು, ಮಿಥಿಲೆಯಲ್ಲಿ ರಾಜ್ಯಭಾರಮಾಡುತ್ತಿದ್ದ. ಇವ ಮಿಥಿಯೆಂಬ ಜನಕ ರಾಜನ ವಂಶಸ್ಥನಾದುದರಿಂದ ಜನಕನೆಂಬ ಅಡ್ಡಹೆಸರು ಇವನಿಗೂ ಸಲ್ಲುತ್ತದೆ ಇವನು ಮಹಾಜ್ಞಾನಿ. ಇವನ ಬಳಿಯಲ್ಲಿ ಶ್ರುತದೇವನೆಂಬ ಭೂಸುರೋತ್ತಮನೂ ಇವನಂತೆಯೇ ಜ್ಞಾನ ವೈರಾಗ್ಯಸಂಪನ್ನನಾಗಿದ್ದ ಇವರಿಬ್ಬರೂ ಕೃಷ್ಣಭಕ್ತರು ಇಂತಿರಲು ಸುಭದ್ರಾಹರಣವಾದ ತರುವಾಯ ಶ್ರೀ ಕೃಷ್ಣ ಅನೇಕ ಮಂದಿ ಆಪ್ತೇಷ್ಟರೊಡಗೂಡಿ, ನಾರದ, ವಾಮದೇವ, ಅತ್ರಿ, ವ್ಯಾಸ, ಪರಶುರಾಮ, ಅಸಿತ, ಆರುಣಿ, ಬೃಹಸ್ಪತಿ, ಶುಕ, ಕಣ್ವ, ಮೈತ್ರೇಯ, ಚ್ಯವನ ಮುಂತಾದ ಮಹರ್ಷಿಗಳೊಂದಿಗೆ ಮಿಥಿಲೆಗೆ ಹೋಗಿ, ಬಹುಳಾಶ್ವ, ಶ್ರುತದೇವರ ಪ್ರಾರ್ಥನೆಯಂತೆ ಆ ಮಹರ್ಷಿಗಳೊಡನೆ ಅಲ್ಲಿಯೇ ಕೆಲಕಾಲವಿದ್ದು, ಅವರಿಬ್ಬರಿಗೂ ಅನೇಕವಾಗಿ ಹಿತೋಕ್ತಿಗಳನ್ನು ಹೇಳಿ ಮರಳಿ ದ್ವಾರಕೆಗೆ ಬಂದ [ಭಾಗ - ೧೦-೮೬].

**ಬಾಣ.**—(1) ಶಿವಭಕ್ತಿಸಂಪನ್ನನಾದ ಒಬ್ಬ ರಾಕ್ಷಸ. ಇವನೂ ತ್ರಿಪುರಾಸುರರಂತೆಯೇ ಗಗನಮಂಡಲದಲ್ಲಿ ಮೂರು ಪಟ್ಟಣಗಳನ್ನು ನಿರ್ಮಿಸಿಕೊಂಡು, ಅನೇಕ ಮಂದಿ ಸ್ತ್ರೀಯರೊಡಗೂಡಿ, ಅನೌಪಮ್ಯೆಯೆಂಬ ರಾಣಿಯು ಸಂಗಡ ಸುಖದಿಂದಿದ್ದ. ಆಗ ದೇವತೆಗಳೂ ಋಷಿಗಳೂ ಒಟ್ಟುಗೂಡಿ "ಸ್ವಾಮಿ, ಬಾಣನ ಪುರತ್ರಯವೂ ಗಗನಮಂಡಲದಲ್ಲಿ ಚಕ್ರದಂತೆ ಸುತ್ತುತ್ತಿದೆ ನಾವು ಬಹಳವಾಗಿ ಹೆದರಿದ್ದೇವೆ. ಕಾಪಾಡು" ಎಂದು ಮೊರೆಯಿಟ್ಟರು. ಆಗ ಶಿವ ಬಾಣನಲ್ಲಿಗೆ ನಾರದನನ್ನು ಕಳುಹಿ, ಆತನ ಮೂಲಕ ಬಾಣನ ಪತ್ನಿಯರ ಪಾತಿವ್ರತ್ಯವನ್ನು ಕುಗ್ಗಿಸಿ, ಬಳಿಕ ತಾನು ಗಾಂಡೀವ ಧನುಸ್ಸಿನಿಂದ ಆ ಮೂರು ಪಟ್ಟಣಗಳೂ ಒಮ್ಮೆ ಸಂಧಿಸಿದ್ದಾಗ ಬಾಣ ಪ್ರಯೋಗಮಾಡಿದ. ಆ ಪಟ್ಟಣಗಳಲ್ಲಿ ಅಗ್ನಿ ತಲೆದೋರಿ ಸುಡತೊಡಗಿತು. ಆಗ

ಬಾಣ, ಆಹಾ ! ಇದೆಲ್ಲವೂ ಅಂಜುಬುರುಕರಾದ ಆ ದೇವತೆಗಳ ಪಿತ್ತಲಾಟಿಕೆ. ಅನ್ಯಾಯವಾಗಿ ಶಂಕರನಲ್ಲಿ ನನ್ನನ್ನು ದೂರಿರುವರೆಂದು ತಿಳಿದು, ತಾನು ಪೂಜಿಸುತ್ತಿದ್ದ ತ್ರಿಭುವನೇಶ್ವರನೆಂಬ ಲಿಂಗವನ್ನು ತಲೆಯಮೇಲಿಟ್ಟುಕೊಂಡು, ಶಿವನಲ್ಲಿಗೆ ಬಂದು, " ಪ್ರಭೋ, ನಾನು ಸಾಯಹೆದರಿದವನಲ್ಲ. ಆದರೆ ಈ ಲಿಂಗವನ್ನು ಮಾತ್ರ ಹಾಳುಮಾಡಬಾರದು " ಎಂದು ಮುಂತಾಗಿ ಪ್ರಾರ್ಥಿಸಲಾಗಿ, ಶಿವ ಅವನಿಗೆ ಅಭಯ ಪ್ರದಾನಮಾಡಿ, ಸ್ವರ್ಣಪುರದಲ್ಲಿರುವಂತೆ ಅಪ್ಪಣೆಯಿತ್ತು, ಅಗ್ನಿಯನ್ನು ಶಾಂತಗೊಳಿಸಿ ತನ್ನ ಸ್ಥಾನಕ್ಕೆ ತೆರಳಿದ [ಮತ್ಸ್ಯ.-೧೮೬-೧೮೮].

(ii) ಬಲಿ ಚಕ್ರವರ್ತಿಯ ಹಿರಿಯ ಮಗ. ಶಿವಭಕ್ತ. ಇವನಿಗೆ ಸಾವಿರ ತೋಳುಗಳಿದ್ದುವು. ಮಹಾಕಾಲನೆಂಬುದು ನಾಮಾಂತರ [ಭಾರ.-ಆದಿ ೬೬]. ಶಿವನನ್ನು ತಾಂಡವದಿಂದ ಮೆಚ್ಚಿಸಿ, ಶಿವನ ರುದ್ರಗಣಗಳಲ್ಲಿ ಒಬ್ಬ ತನ್ನ ಪಟ್ಟಣವನ್ನು ಕಾಪಾಡುವಂತೆಯೂ, ತನಗೆ ಸಾವಿರ ತೋಳುಗಳನ್ನು ಅನುಗ್ರಹಿಸುವಂತೆಯೂ ವರವನ್ನು ಪಡೆದು ಮಹಾಮಹಿಮಸಂಪನ್ನನಾಗಿದ್ದ ಇವನಿಗೆ ಉಷೆಯೆಂಬ ಮಗಳಿದ್ದಳು. ಅವಳನ್ನು ಶ್ರೀ ಕೃಷ್ಣನ ಮೊಮ್ಮಗನಾದ ಅನಿರುದ್ಧ ಕದ್ದು ಮದುವೆಯಾದದ್ದು [ಭಾಗ -೧೦, ೬೨. ಹರಿ -೨, ೧೧೮ ವಿಷ್ಣು -೫-೩೨] ನೋಡು—ಅನಿರುದ್ಧ, ಉಷಾ, ಕೃಷ್ಣ, ಚಿತ್ರಲೇಖಾ.

**ಬಾದರಾಯಣ.**—ಕೃಷ್ಣದ್ವೈಪಾಯನನ ನಾಮಾಂತರ.

**ಬಾರ್ಹಸ್ಪತ್ಯವ್ಯೂಹ.**—ಬೃಹಸ್ಪತಿಗ್ರಹದ ಮಂಡಲದಂತೆ ಸೇನೆಯನ್ನು ಏರ್ಪಡಿಸುವುದು. ರಾಮಾಯಣ ಯುದ್ಧದಲ್ಲಿ ಶ್ರೀ ರಾಮ ಕಪಿಸೇನೆಯನ್ನು ಈ ರೂಪದಿಂದ ಏರ್ಪಡಿಸಿದ್ದ [ಭಾರ.-ವನ ೨೮೬]. ಭಾರತ ಯುದ್ಧದ ಹದಿನೇಳನೆಯ ದಿನದಲ್ಲಿ ಕರ್ಣ ಕುರುಸೇನೆಯನ್ನು ಈ ರೀತಿಯಾಗಿ ಏರ್ಪಡಿಸಿದ್ದ [ಭಾರ -ಕರ್ಣ ೪೧].

**ಬಾಲ.**—ಹುಡುಗ ಬಾಲರಿಗೆ ೧೨ ಅಥವಾ ೧೪ ವರ್ಷಗಳವರೆಗೆ ಪಾಪಸಂಪರ್ಕವಿಲ್ಲ. ಅದುವರೆಗೆ ಅವರು ಮಾಡಿದ ಪಾಪಗಳು ಅವರ ತಾಯ್ತಂದೆಗಳಿಗೇ ಸೇರಿದ್ದು [ಭಾರ.-ಆದಿ. ೧೧೭].

**ಬಾಲಧಿ.**—ಒಬ್ಬ ಮಹರ್ಷಿ. ಈತ ತನಗೆ ಸಾವಿಲ್ಲದ ಮಗ ಹುಟ್ಟಬೇಕೆಂದು ತಪಸ್ಸುಮಾಡಿ, ಅಂತೆಯೇ ಮೇಧಾವಿಯೆಂಬ ಮಗನನ್ನು ಪಡೆದ [ಭಾರ.-ವನ. ೧೩೭].

**ಬಾಷ್ಕಲ** — ಹಿರಣ್ಯಕಶಿಪುವಿನ ಮಗ ಇವ ಚಂಡ, ಮುಂಡರೆಂಬ ರಾಕ್ಷಸರಾಜರಲ್ಲಿ ಸೇನಾಪತಿಯಾಗಿದ್ದ [ದೇ. ಭಾಗ.-೫-೨೪, ೨೬. ಭಾರ.-ಆದಿ. ೬೬].

**ಬಾಹು.**—ಸೂರ್ಯವಂಶದ ಅರಸು. ಸಗರ ಚಕ್ರವರ್ತಿಯ ತಂದೆ. **ನೋಡು**—ಸಗರ [ಭಾರ.-ಶಾಂತಿ. ೫೬. ಭಾಗ.-೯, ೮. ಹರಿ.-೧-೧೪].

**ಬಾಹುಕ.**—ನಳ ಚಕ್ರವರ್ತಿ ದಮಯಂತಿಯನ್ನು ಅರಣ್ಯದಲ್ಲಿ ತ್ಯಾಗಮಾಡಿ, ಕರ್ಕೋಟಕನಿಂದ ವಿಕಾರ ರೂಪವನ್ನು ಪಡೆದು, ಆತನ ಸೂಚನೆಯ ಮೇರೆಗೆ ಬಾಹುಕನೆಂಬ ಹೆಸರಿಟ್ಟುಕೊಂಡು ಋತುಪರ್ಣ ರಾಜನಲ್ಲಿ ಸಾರಥಿಯಾಗಿದ್ದ [ಭಾರ.-ವನ. ೬೪, ೭೩].

**ಬಾಹುಕಾ.**—ಪರೀಕ್ಷಿದ್ರಾಜನ ಹೆಂಡತಿ. ಇವಳಿಗೆ ಸುವೇಷಾ ಎಂಬುದು ನಾಮಾಂತರ ಈಕೆ ಭೀಮಸೇನನೆಂಬ ಮಗನನ್ನು ಹೆತ್ತಳು. ಈ ಭೀಮಸೇನ ಶಂತನು ಚಕ್ರವರ್ತಿಯ ತಾತ [ಭಾರ.-ಆದಿ. ೬೩].

**ಬಾಹುದಾ.**—ಹಿಮವತ್ಪರ್ವತದಿಂದ ಹರಿಯುವ ಒಂದು ನದಿ [ಭಾರ.-ಆದಿ. ೧೯. ವನ. ೮೨. ಭೀ. ೯]. ಲಿಖಿತ ಮುನಿ ಪಾಪ ಪ್ರಾಯಶ್ಚಿತ್ತರೂಪವಾಗಿ ತನ್ನ ಕೈಯನ್ನು ಕತ್ತರಿಸಿಕೊಂಡು, ಬಳಿಕ ತನ್ನ ಅಣ್ಣನಾದ ಶಂಖ ಮುನಿಯ ಅಪ್ಪಣೆಯ ಮೇರೆಗೆ ಈ ನದಿಯಲ್ಲಿ ಮಿಂದು ತನ್ನ ಬಾಹುವನ್ನು ಪಡೆದನಾಗಿ ಈ ನದಿಗೆ ಬಾಹುದೆ ಯೆಂದು ಹೆಸರು ನೋಡು—ಶಂಖ, ಲಿಖಿತ.

**ಬಾಹ್ಲೀಕ.**—(I) ಒಂದು ದೇಶ. ವಿಪಾಶಾ, ಶತದ್ರೂ ನದಿಗಳ ನಡುವೆ ಕೇಕಯ ದೇಶಕ್ಕೆ ಪೂರ್ವದಲ್ಲಿದೆ [ಭಾರ.-ಭೀಷ್ಮ ೯]. ಬಾಹ್ಲೀಕ ದೇಶದ ನಿಂದೆ [ಭಾರ.-ಕರ್ಣ ೩೭. ಶಾಂತಿ. ೩೩೬].

(II) ಮೇಲೆ ಹೇಳಿದ ಬಾಹ್ಲೀಕ ದೇಶದ ಅರಸು. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಮಡಿದ [ಭಾರ.-ದ್ರೋ ೧೫೭].

(III) ಚಂದ್ರ ವಂಶದ ಪ್ರತೀಪ ರಾಜನ ಮಗ. ಶಂತನು ಚಕ್ರವರ್ತಿಯ ತಮ್ಮ. ನೋಡು—ಪ್ರತೀಪ.

**ಬಿನ್ದುಮತಿ.**—ಶಶಬಿನ್ದು ರಾಜನ ಮಗಳು. ಸೂರ್ಯ ವಂಶದ ಯುವನಾಶ್ವ ರಾಜನ ಮಗನಾದ ಮಾಂಧಾತೃ ರಾಜನನ್ನು ಮದುವೆಯಾಗಿ ಪುರುಕುತ್ಸ, ಅಂಬರೀಷ, ಮುಚುಕುಂದರೆಂಬ ಮೂವರು ಪುತ್ರರನ್ನೂ, ಸೌಭರಿ ಮುನಿಯ ಪತ್ನಿಯ ರಾದ ಐವತ್ತು ಮಂದಿ ಪುತ್ರಿಯರನ್ನೂ ಪಡೆದಳು [ಭಾಗ.-೯-೬. ವಿಷ್ಣು.-೪-೨. ವಾಯು.-೮೮. ರಾಮಾ.-ಉತ್ತ. ೬೭].

**ಬಿನ್ದುಮಾಧವ.**—ಕಾಶೀ ಕ್ಷೇತ್ರದಲ್ಲಿರುವ ವಿಷ್ಣುವಿನ ಹೆಸರು [ಸ್ಕಾಂ. ವೈಷ್ಣ. ಕಾರ್ತಿ. ೩೪-೩೫].

**ಬಿನ್ದು ಸರೋವರ.**—ಒಂದು ತೀರ್ಥ. ಭಗೀರಥ ಗಂಗೆಯನ್ನು ತರುವುದಕ್ಕಾಗಿ ಇದರ ತೀರದಲ್ಲಿ ತಪಸ್ಸುಮಾಡಿದ [ಭಾರ.-ಸಭಾ. ೩. ಭೀಷ್ಮ. ೬]. ಮಯ ಯುಧಿಷ್ಠಿರನಿಗೆ ರಾಜಸೂಯ ಸಭೆಯನ್ನು ನಿರ್ಮಾಣಮಾಡುವಾಗ ಇದರಲ್ಲಿದ್ದ ಅನೇಕ ರತ್ನಗಳನ್ನು ಕೊಂಡುಹೋಗಿ ಪಾಂಡವರಿಗೆ ಸಭೆಯನ್ನು ನಿರ್ಮಿಸಿಕೊಟ್ಟ

[ಭಾರ.-ಸಭಾ. ೩]. ಕರ್ದಮ ಮುನಿ ಇದರ ತೀರದಲ್ಲಿ ವಿಷ್ಣುವನ್ನು ಕುರಿತು ತಪಸ್ಸುಮಾಡಿ ಸಿದ್ಧಿಯನ್ನು ಪಡೆದ [ಭಾಗ.-೯-೨೧]. ಭಗೀರಥನ ಬೇಡಿಕೆಯಂತೆ ಆಕಾಶದಿಂದ ವೇಗವಾಗಿ ಇಳಿಯುತ್ತಿದ್ದ ಗಂಗೆಯ ದುರುದ್ದೇಶವನ್ನು ತಿಳಿದ ಶಂಕರ ಗಂಗೆಯನ್ನು ತನ್ನ ಜಟಾಜೂಟದಲ್ಲಿ ಬಿಗಿಸಿದ. ಕ್ರುದ್ಧಳಾದ ಆಕೆಯ ಮೂಲಕ ನೆಲಕ್ಕೆ ಬಿದ್ದ ಕೆಲ ಬಿಂದುಗಳು ಸರೋವರವಾದುವು ಈ ಕಾರಣದಿಂದ ಈ ಸರೋವರಕ್ಕೆ ಬಿಂದುಸರೋವರವೆಂದು ಹೆಸರು [ಮತ್ಸ್ಯ -೧೨೧].

**ಬುದ್ಬುದಾ** —ಒಬ್ಬ ಅಪ್ಸರಸಿ ಇವಳು ತನ್ನ ಸಖಿಯರೊಂದಿಗೆ ಭೂಲೋಕ ಸಂಚಾರಾರ್ಥವಾಗಿ ಬಂದಿದ್ದಾಗ ದಕ್ಷಿಣಸಮುದ್ರ ತೀರದಲ್ಲಿ ತಪಸ್ಸುಮಾಡುತ್ತಿದ್ದ ಒಬ್ಬ ಮುನಿಯನ್ನು ಪರಿಹಾಸಮಾಡಿ, ಮೊಸಳೆಯ ರೂಪವನ್ನು ಪಡೆದು, ಅರ್ಜುನನ ತೀರ್ಥಯಾತ್ರಾ ಸಮಯದಲ್ಲಿ ಅರ್ಜುನನ ಮೂಲಕ ಶಾಪವಿಮುಕ್ತೆಯಾದಳು. ನೋಡು—ನಾರೀತೀರ್ಥ.

**ಬುದ್ಧ.**—ಭಗವಂತನ ಒಂಬತ್ತನೆಯ ಅವತಾರ. ಕಲಿಯುಗದ ಆದಿಯಲ್ಲಿ ದೇವ ದ್ವೇಷಿಗಳ ಬುದ್ಧಿಯನ್ನು ಮೋಹಗೊಳಿಸುವುದಕ್ಕಾಗಿ ಕೀಕಟದೇಶದ ಮಧ್ಯಗಯಾ ಪ್ರದೇಶದಲ್ಲಿ ಜಿನನೆಂಬವನ ಮನೆಯಲ್ಲಿ ಅವತರಿಸಿದ [ಭಾಗ -೧-೩]

**ಬುದ್ಧಿ.**—(1) ತಿಳಿವಳಿಕೆ. ಬುದ್ಧಿಯ ಮಹಿಮೆ [ಭಾರ -ಶಾಂತಿ. ೨೬೧].

(ii) ಧರ್ಮ ಪ್ರಜಾಪತಿಯ ಹೆಂಡತಿ. ಸ್ವಾಯಂಭುವ ಮನ್ವಂತರದ ಬ್ರಹ್ಮ ಮಾನಸ ಪುತ್ರನಾದ ದಕ್ಷನಿಂದ ಪ್ರಸೂತಿಯಲ್ಲಿ ಜನಿಸಿದ ಹದಿನಾರು ಮಂದಿ ಪುತ್ರಿ ಯರಲ್ಲಿ ಒಬ್ಬಳು. ಇವಳೂ ಶ್ರದ್ಧಾ, ಮೈತ್ರೀ, ದಯಾ, ಶಾಂತಿ, ತುಷ್ಟಿ, ಪುಷ್ಟಿ, ಕ್ರಿಯಾ, ಉನ್ನತಿ, ಮೇಧಾ, ತಿತಿಕ್ಷಾ, ಹ್ರೀ, ಮೂರ್ತಿ ಎಂಬ ಹದಿಮೂರು ಮಂದಿಯೂ ಧರ್ಮ ಪ್ರಜಾಪತಿಯನ್ನೇ ಮದುವೆಯಾದರು [ಭಾರ -ಆ. ೧೩೧. ಭಾಗ -೪, ೧].

**ಬುಧ.**—ನವಗ್ರಹಗಳಲ್ಲಿ ಒಬ್ಬ. ಬೃಹಸ್ಪತಿಯ ಹೆಂಡತಿಯಾದ ತಾರೆಯಲ್ಲಿ ಚಂದ್ರನಿಂದ ಜನಿಸಿದವ. ನೋಡು—ಚಂದ್ರ, ತಾರಾ, ಇಲಾ [ಭಾರ -ಸ ೧೧. ಭಾಗ.-೯-೧೪. ಹರಿ.-೧, ೨೫. ಪದ್ಮ-೫-೧೨ ಬ್ರಹ್ಮ-೯. ವಾಯು.-೯೦]. ಬುಧ ಚಾರ, ರಥ, ಮಂಡಲಾದಿವರ್ಣನೆ [ಮತ್ಸ್ಯ.-೧೨೫-೧೨೮]. ಈತ ಇಲೆಯಲ್ಲಿ ಪುರೂರವನೆಂಬ ಮಗನನ್ನು ಪಡೆದ. ನೋಡು—ಪುರೂರವ [ಭಾಗ.-೯, ೧. ದೇ.ಭಾ.-೧, ೧೧, ೧೨. ಭಾರ.-ಆ. ೭೩].

**ಬೃಹತ್ಕ್ಷತ್ರ.**—(1) ಕೇಕಯ ದೇಶದ ಅರಸು [ಭಾರ.-ಆ. ೨೦೧. ದ್ರೋ. ೩೨]. ಇವ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ಹದಿನಾಲ್ಕ ನೆಯ ದಿನದ ಹಗಲು ಯುದ್ಧದಲ್ಲಿ ಸಾಲ್ವರಾಜನ ಮಂತ್ರಿಯೂ ಪ್ರಧಾನ ಸೇನಾ

ಪತಿಯೂ ಆಗಿದ್ದ ಕ್ಷೇಮಧೂರ್ತಿಯೆಂಬವನನ್ನು ಕೊಂದ [ಭಾರ.-ದ್ರೋ. ೧೦೭]. ಕ್ಷೇಮಧೂರ್ತಿಯ ಕೊಲೆಯಿಂದ ಕುಪಿತನಾದ ದ್ರೋಣ ಅದೇ ದಿನವೇ ಬೃಹತ್ ಕ್ಷತ್ರನನ್ನು ಕೊಂದ [ಭಾರ.-ದ್ರೋ. ೧೨೫]

(ii) ನಿಷಧ ದೇಶದ ಅರಸು. ದುರ್ಯೋಧನನ ಪರವಾಗಿ ಹೋರಾಡಿ, ಹನ್ನೆರಡನೆಯ ದಿನದ ಯುದ್ಧದಲ್ಲಿ ಧೃಷ್ಟದ್ಯುಮ್ನನಿಂದ ಮಡಿದ [ದ್ರೋ. ೩೨].

**ಬೃಹದಶ್ವ.**—(i) ಇಕ್ಷ್ವಾಕು ವಂಶದ ಅರಸು. ಮಹಾಪರಾಕ್ರಮಶಾಲಿಯೂ ನೀತಿವಂತನೂ ಎನಿಸಿ ರಾಜ್ಯಭಾರಮಾಡಿದ. ಇವನ ಮಗ ಕುವಲಾಶ್ವ ನೋಡು—ಕುವಲಾಶ್ವ [ಭಾರ.-ವನ ೨೦೫]

(ii) ಒಬ್ಬ ಮಹರ್ಷಿ. ಪಾಂಡವರು ವನವಾಸಮಾಡುತ್ತಿದ್ದಾಗ ಈತ ಅವರಲ್ಲಿಗೆ ಬಂದು, ಅಲ್ಲಿಯೇ ಕೆಲಕಾಲ ನಿಂತು, ಅನೇಕ ಪುರಾತನ ಕಥೆಗಳನ್ನೂ ಇತಿಹಾಸಗಳನ್ನೂ ವಿವರಿಸಿ, ಅವರ ದುಃಖವನ್ನು ಕಡಮೆಮಾಡಿದ, ಮತ್ತು ಯುಧಿಷ್ಠಿರನಿಗೆ ಅಕ್ಷವಿದ್ಯೆಯ (ಪಗಡೆಯಾಟದ) ರಹಸ್ಯವನ್ನೂ ತಿಳಿಸಿದ [ಭಾರ - ವನ ೪೯-೭೭].

**ಬೃಹದ್ಗರ್ಭ.**—ಶಿಬಿ ಚಕ್ರವರ್ತಿಯ ಮಗ ಒಂದು ದಿನ ಒಬ್ಬ ಬ್ರಾಹ್ಮಣ ಶಿಬಿಯ ಬಳಿಗೆ ಬಂದು ಬೃಹದ್ಗರ್ಭನನ್ನು ಕೊಂದು ಅವನ ಮಾಂಸವನ್ನು ತನಗೆ ಆಹಾರವಾಗಿ ಕೊಟ್ಟರೆ ತನ್ನ ಆರೋಗ್ಯ ಸರಿಯಾಗುವುದೆಂದು ಹೇಳಲಾಗಿ ಶಿಬಿ ಇವನನ್ನು ಕೊಂದು, ಇವನ ಮಾಂಸದಿಂದ ಆ ಬ್ರಾಹ್ಮಣನನ್ನು ಸಂತೋಷಪಡಿಸಿದ [ಭಾರ.-ವನ ೨೦೧]

**ಬೃಹದ್ದ್ಯುಮ್ನ** —ಒಬ್ಬ ಅರಸು ಇವ ಒಂದು ಶ್ರೇಷ್ಠವಾದ ಕ್ರತುವನ್ನು ಮಾಡತೊಡಗಿ ಅದಕ್ಕೆ ಸರಿಯಾದ ಪುರೋಹಿತನನ್ನು ಹುಡುಕುತ್ತ, ಕಡೆಗೆ ವಿಶ್ವಾಮಿತ್ರನ ಮಗನಾದ ರೈಭ್ಯ ಮಹರ್ಷಿಯ ಪುತ್ರರಾದ ಅವಾವಸು, ಪರಾವಸುಗಳೆಂಬವರನ್ನು ವರಿಸಿ ಅವರ ಮೂಲಕ ತಾನು ಸಂಕಲ್ಪಿಸಿದ್ದ ಕ್ರತುವನ್ನು ಮುಗಿಸಿದ ಭಾರ -ವನ ೧೪೦].

**ಬೃಹದ್ಬಲ** —(i) ಸೂರ್ಯ ವಂಶದ ಅರಸು. ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿದವ [ಭಾರ.-ಸಭಾ ೩೧ ಉದ್ಯೋ. ೪. ಭೀ. ೫೬, ೧೧೬. ದ್ರೋ. ೩೭] ರಥಸತ್ತಮ [ಉದ್ಯೋ ೧೬೬] ಹದಿಮೂರನೆಯ ದಿವಸದ ಯುದ್ಧದಲ್ಲಿ ಅಭಿಮನ್ಯುವಿನಿಂದ ಮಡಿದ [ಭಾರ -ದ್ರೋ. ೪೭] ಇವನ ಮಗ ಬೃಹದ್ರಣ ಭಾಗ -೯-೧೨].

(ii) ಶಕುನಿಯ ಸಹೋದರರಲ್ಲಿ ಒಬ್ಬ.

(iii) ಉದ್ಧವನ ಸಹೋದರರಲ್ಲಿ ಒಬ್ಬ.

**ಬೃಹದ್ರಥ.**—ಮಗಧ ದೇಶದ ಅರಸು. ಚಂದ್ರವಂಶದ ಉಪರಿಚರವಸುವಿನ ಮಗ [ಭಾರ.-ಆದಿ ೬೪]. ಇವನ ಇಬ್ಬರು ಪತ್ನಿಯರೂ ಕಾಶಿರಾಜನ ಪುತ್ರಿಯರು. ಜರಾಸಂಧನ ದೇಹದ ಒಂದೊಂದು ಸೀಳನ್ನು ಹೆತ್ತವರು. ನೋಡು—ಚಂಡ ಕೌಶಿಕ, ಜರಾಸಂಧ [ಭಾರ.-ಆದಿ. ೬೮, ೨೦೧. ಸಭಾ. ೮-೧೯]. ಇವನ ವಂಶವರ್ಣನೆ [ಭಾಗ.-೯, ೨೨].

**ಬೃಹನ್ತ.**—ಒಬ್ಬ ಅರಸು. ಉಲೂಕ ದೇಶವನ್ನು ಆಳುತ್ತಿದ್ದ. ಪಾಂಡವ ಪಕ್ಷಪಾತಿ [ಭಾರ.-ಆ. ೨೦೧. ಸಭಾ. ೨೮. ಉ ೪] ಹದಿನೈದನೆಯ ದಿನದ ಯುದ್ಧದಲ್ಲಿ ದುಶ್ಶಾಸನನಿಂದ ಹತನಾದ ಕ್ಷೇಮಧೂರ್ತಿ ಇವನ ತಮ್ಮ [ಭಾರ.-ಕರ್ಣ. ೩].

**ಬೃಹನ್ನಳಾ.**—ವಿರಾಟ ರಾಜಧಾನಿಯಲ್ಲಿ ಅಜ್ಞಾತವಾಸ ಮಾಡುತ್ತಿದ್ದಾಗ ಅರ್ಜುನ ನಪುಂಸಕ ವೇಷದಲ್ಲಿದ್ದು ವಿರಾಟನ ಮಗಳಿಗೆ ಗಂಧರ್ವ ವಿದ್ಯೆಯನ್ನು ಕಲಿಸುತ್ತಿದ್ದಾಗ ಈ ಹೆಸರನ್ನು ಇಟ್ಟುಕೊಂಡಿದ್ದ [ಭಾರ -ವಿರಾ ೩] ಕೌರವರು ವಿರಾಟನ ಉತ್ತರ ದಿಕ್ಕಿನ ಗೋವುಗಳನ್ನು ಆಕ್ರಮಿಸಿದಾಗ ಬೃಹನ್ನಳೆ ಸೈರಂಧ್ರಿ (ದ್ರೌಪದಿ) ಯ ಮೂಲಕ ಉತ್ತರಕುಮಾರನಿಗೆ ತನ್ನ ಸಾಮರ್ಥ್ಯವನ್ನು ತಿಳುಹಿ, ತಾನು ಅವನಿಗೆ ಸಾರಥಿಯಾಗಲು ಸಮ್ಮತಿಸಿ, ಉತ್ತರನ ಸಂಗಡ ಯುದ್ಧಕ್ಕೆ ಹೊರಟದ್ದು [ವಿರಾ. ೩೮].

**ಬೃಹಸ್ಪತಿ** —ಒಬ್ಬ ಮಹರ್ಷಿ. ಅಂಗಿರಸನೆಂಬ ಮುನಿಯ ಮಗ ದೇವತೆಗಳ ಗುರು [ಭಾರ.-ಆದಿ ೬೭ ಸಭಾ. ೧೧. ಅಶ್ವ. ೫] ದೇವತೆಗಳು ಈತನನ್ನು ತಮ್ಮ ಆಚಾರ್ಯನಾಗಿರುವಂತೆ ವರಿಸಿ, ಬೇಡಿದ್ದು [ಭಾರ -ವನ ೨೨೦] ಈತ ಅಗ್ನಿ ರೂಪವನ್ನು ಧರಿಸಿ ಲೋಕಗಳನ್ನು ಕಾಪಾಡಿದ್ದು [ವನ. ೨೨೧] ಈತನ ಸಹೋದರಿಯಾದ ಬ್ರಹ್ಮವಾದಿನಿಯೆಂಬವಳು ಪ್ರಭಾಸನನ್ನು ಮದುವೆಯಾದಳು [ಭಾರ -ಆದಿ. ೬೭]. ಈತನ ಹೆಂಡತಿ ತಾರಾದೇವಿ. ಈಕೆಯಲ್ಲಿ ಚಂದ್ರನಿಂದ ಬುಧ ಜನಿಸಿದ ಬೃಹಸ್ಪತಿಗೂ ಚಂದ್ರನಿಗೂ ವಿವಾದ [ಭಾಗ.-೯-೧೪. ಹರಿ -೧-೨೫. ಪದ್ಮ-೫-೧೨. ಬ್ರ -೯. ಮತ್ಸ್ಯ -೨೩] ತಾರೆಗೆ ಸುಭೆಯೆಂಬುದು ನಾಮಾಂತರ. ಬೃಹಸ್ಪತಿಗೆ ಚಾಂದ್ರಮಸಿಯೆಂಬ ಮತ್ತೊಬ್ಬ ಹೆಂಡತಿಯಲ್ಲಿ (ಚಂದ್ರನಿಂದ ಅಪಹೃತೆಯಾದ ತಾರೆಗೇ ಚಾಂದ್ರಮಸಿಯೆಂಬುದು ನಾಮಾಂತರವೆಂಬುದಾಗಿ ಭಾರತ ವ್ಯಾಖ್ಯಾಕರ್ತೃಗಳಾದ ನೀಲಕಂಠಾಚಾರ್ಯರ ಅಭಿಪ್ರಾಯ) ಶಂಯು, ನಿಶ್ಚ್ಯವನ, ವಿಶ್ವಜಿತ್, ವಿಶ್ವಭುಕ್, ಬಡಬಾಗ್ನಿ, ಸ್ವಿಷ್ಟಕೃತರೆಂಬ ಆರು ಮಂದಿ ಪುತ್ರರೂ ಸ್ವಾಹಾಯೆಂಬ ಪುತ್ರಿಯೂ ಜನಿಸಿದರು [ಭಾರ.-ವನ. ೨೨೧]. ಕಚ ಈತನ ಮಗ. ಆದರೆ ಯಾವ ಪತ್ನಿಯಲ್ಲಿ ಜನಿಸಿದವನೆಂಬುದು ಮಾತ್ರ ಗೊತ್ತಾಗುವಂತಿಲ್ಲ [ಮತ್ಸ್ಯ.-೨೫ ಆದಿ. ೭೦. ಅನು. ೬೫]. ಬೃಹಸ್ಪತಿ ತನ್ನ ಅಣ್ಣನಾದ ಉಚಥ್ಯ ಮುನಿಯ ಪತ್ನಿಯಾದ

ಮಮತಾದೇವಿಯನ್ನು ಪರಿಗ್ರಹಿಸಿ ಭರದ್ವಾಜನೆಂಬ ಪುತ್ರನನ್ನು ಪಡೆದದ್ದು [ಭಾರ.-ಆದಿ. ೧೧೩. ಶಾಂತಿ. ೩೫೦. ಭಾಗ.-೯-೨೦ ಮತ್ಸ್ಯ.-೪೯] ನಹುಷ ಇಂದ್ರನಾಗಿದ್ದಾಗ ಶಚೀದೇವಿಯನ್ನು ನಿರ್ಬಂಧಪಡಿಸಿದ. ಬೃಹಸ್ಪತಿ ನಹುಷನನ್ನು ಅನರ್ಥಕ್ಕೆ ಗುರಿಮಾಡಿ ಶಚೀದೇವಿಯ ಪಾತಿವ್ರತ್ಯವನ್ನು ಕಾಪಾಡಿದ [ಭಾರ.-ಉದ್ಯೋ. ೧೧]. ಬೃಹಸ್ಪತಿ ಕೋಸಲ ದೇಶದ ಅರಸನಾದ ವಸುಮನಸನೆಂಬ ರಾಜನಿಗೆ ರಾಜಧರ್ಮಗಳನ್ನು ವಿವರಿಸಿದ್ದು [ಶಾಂತಿ. ೬೭]. ರಾಜಧರ್ಮ ವಿಷಯವಾಗಿ ಇಂದ್ರನೊಂದಿಗೆ ಸಂವಾದ [ಶಾಂತಿ ೮೪]. ಈತ ಉಪರಿಚರವಸುವಿನಿಂದ ಯಜ್ಞಮಾಡಿಸಿದ್ದು [ಶಾಂತಿ. ೩೪೪] ಯುಧಿಷ್ಠಿರನಿಗೆ ಧರ್ಮೋಪದೇಶಮಾಡಿದ್ದು [ಅನು. ೧೭೩]. ಒಮ್ಮೆ ಶುಕ್ರಾಚಾರ್ಯ ಧೂಮವ್ರತವೆಂಬ ತಪಸ್ಸನ್ನು ಕೈಕೊಂಡು ಶಿವನನ್ನು ಕುರಿತು ತಪಸ್ಸಿನಲ್ಲಿದ್ದಾಗ ಬೃಹಸ್ಪತಿ ಶುಕ್ರಾಚಾರ್ಯನ ರೂಪದಿಂದ ರಾಕ್ಷಸರಲ್ಲಿಗೆ ಹೋಗಿ, ತಾನೇ ಶುಕ್ರನೆಂದು ಹೇಳಿ ಅವರೊಂದಿಗೆ ಕಲೆತು ಅವರಿಗೆ ನಾಸ್ತಿಕವಾದವನ್ನು ಬೋಧಿಸಿ ಅವರನ್ನು ವಶಪಡಿಸಿಕೊಂಡ. ಶುಕ್ರ ತಪಸ್ಸನ್ನು ಮುಗಿಸಿ ರಾಕ್ಷಸರಲ್ಲಿಗೆ ಬರಲಾಗಿ, ಅವರು ನಿಜನಾದ ಶುಕ್ರನನ್ನು ಗುರುತಿಸದೆ ಬೃಹಸ್ಪತಿಯನ್ನೇ ಗೌರವಿಸಿದರು. ಕ್ರುದ್ಧನಾದ ಶುಕ್ರ ರಾಕ್ಷಸರಿಗೆ ತಿರಸ್ಕಾರವುಂಟಾಗುವಂತೆ ಶಾಪವಿತ್ತ. ಆದರಿಂದ ಸಂತುಷ್ಟನಾದ ಬೃಹಸ್ಪತಿ ತನ್ನ ಎತ್ತುಗಡಿ ಕೈಗೂಡಿದ್ದಕ್ಕೆ ಸಂತೋಷಪಟ್ಟು ಕಣ್ಮರೆಯಾಗಿ ಹೊರಟುಬಂದದ್ದು ಮುಂತಾಗಿ [ಮತ್ಸ್ಯ.-೪೭]. ಬೃಹಸ್ಪತಿ ನೀತಿ [ಭಾರ -ವನ. ೩೨].

**ಬ್ರಧ್ನಶ್ವ.**—ಒಬ್ಬ ಅರಸು. ಅಗಸ್ತ್ಯ ಮುನಿ ಒಮ್ಮೆ ಶ್ರುತರ್ವನೆಂಬ ರಾಜನಲ್ಲಿಗೆ ದ್ರವ್ಯಾಪೇಕ್ಷೆಯಿಂದ ಹೋದ. ಶ್ರುತರ್ವನಲ್ಲಿ ಹಣವಿರಲಿಲ್ಲವಾಗಿ ಶ್ರುತರ್ವ ಅಗಸ್ತ್ಯ ಮುನಿಯನ್ನು ಬ್ರಧ್ನಶ್ವನಲ್ಲಿಗೆ ಕರೆತಂದ. ಈತನಲ್ಲಿಯೂ ಸಾಕಾದಷ್ಟು ಹಣವಿರಲಿಲ್ಲ ಬಳಿಕ ಬ್ರಧ್ನಶ್ವ ಅಗಸ್ತ್ಯನನ್ನೂ ಶ್ರುತರ್ವನನ್ನೂ ಸಂಗಡ ಕರೆದುಕೊಂಡು ತ್ರಸದಸ್ಯು ರಾಜನಲ್ಲಿಗೆ ಹೋಗಿ ಅಲ್ಲಿಂದ ಇಲ್ವಲನ ಬಳಿಗೆ ಬಂದು ಅಗಸ್ತ್ಯನಿಗೆ ಹಣವನ್ನು ಕೊಡಿಸಿದ [ಭಾರ.-ವನ ೯೭] ನೋಡು—ಇಲ್ವಲ.

**ಬ್ರಹ್ಮ.**—(i) ಗುಣತ್ರಯರಹಿತವೂ, ಉಪಾಧಿರಹಿತವೂ, ಪರಿಚ್ಛೇದಶೂನ್ಯವೂ ಎನಿಸಿ ಸಚ್ಚಿದಾನಂದಸ್ವರೂಪವೆನಿಸಿದ ಪರಾತ್ಪರವಸ್ತು. ವೇದಗಳಿಗೂ ಈ ಹೆಸರು ಸಲ್ಲುತ್ತದೆ.

(ii) ಪ್ರಪಂಚದ ಸೃಷ್ಟಿಕರ್ತನಾದ ಚತುರ್ಮುಖ. ವಿಷ್ಣುವಿನ ನಾಭಿಪದ್ಮ ಸಂಭೂತ [ಭಾರ.-ಆದಿ. ೧. ವನ. ೨೭೪. ಶಾಂತಿ. ೩೫೭. ಭಾಗ.-೩-೮]. ಬ್ರಹ್ಮನಿಗೆ ಲೋಕದಲ್ಲಿ ದೇವಾಲಯ, ಪೂಜೆ, ರಥೋತ್ಸವಾದಿಗಳು ಇಲ್ಲದಿರುವಂತೆ ಶಿವ

ಶಾಪಕೊಟ್ಟದ್ದು—

ಬ್ರಹ್ಮ, ತ್ವಮರ್ಹಣಾಕಾಂಕ್ಷೀ ಶಠೇಶತ್ವಂ ಸಮಾಸ್ಥಿತಃ।
ನಾತಸ್ತೇ ಸತ್ಕೃತಿರ್ಲೋಕೇ ಭೂಯಾತ್ ಸ್ಥಾನೋತ್ಸವಾದಿಕಂ ॥
[ಶಿವ.-ವಿದ್ಯೇಶ್ವರಸಂ ೭-೮].

ಬ್ರಹ್ಮ ತ್ರಿಮೂರ್ತಿಗಳಲ್ಲಿ ತಾನೇ ಸರ್ವಶ್ರೇಷ್ಠನೆಂಬುದಾಗಿ ಮರೆತು ವೇದಗಳನ್ನೂ ನಿಂದಿಸಿ ಮಾತನಾಡಿದಾಗ, ಶಿವ ವೈದೋರಿ, ಬ್ರಹ್ಮನಿಂದ ತಿರಸ್ಕೃತನಾಗಿ, ಭೈರವನನ್ನು ಸೃಜಿಸಿ, ಆತನ ಮೂಲಕ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದ್ದು. ಭೈರವನಿಗೆ ಬ್ರಹ್ಮಹತ್ಯೆ ಪ್ರಾಪ್ತವಾದದ್ದು. ಬ್ರಹ್ಮಕಪಾಲ ಭೈರವನ ಕೈಗೆ ಅಂಟಿಕೊಂಡಿದ್ದು. ಬ್ರಹ್ಮಹತ್ಯೆ ಸ್ತ್ರೀ ರೂಪದಿಂದ ಭೈರವನನ್ನು ಹಿಂಬಾಲಿಸಿದ್ದು ಭೈರವ ಕಾಪಾಲಿಕನಾಗಿ ತಿರುಗುತ್ತಿದ್ದು, ವಿಷ್ಣುವನ್ನು ಸಂದರ್ಶಿಸಿದ್ದು. ಭೈರವ ಕಾಶೀ ಕ್ಷೇತ್ರವನ್ನು ಸೇರಿದೊಡನೆಯೇ ಬ್ರಹ್ಮಹತ್ಯೆ ಹಾಹಾಕಾರಮಾಡುತ್ತ ಪಾತಾಳಕ್ಕೆ ಕುಸಿದುಬಿದ್ದದ್ದು. ಭೈರವ ಅಲ್ಲಿ ಮಿಂದಕೂಡಲೇ ಆತನ ಕೈಗೆ ಅಂಟಿಕೊಂಡಿದ್ದ ಕಪಾಲ ಕಳಚಿಬಿದ್ದದ್ದು [ಶಿವ -ರುದ್ರಸಂ ಪ್ರಥಮಖಂ ೭. ಶಿವ.-ಶತರುದ್ರಖಂ ೮-೯]. ಇಂದ್ರಜಿತ್ತು ಇಂದ್ರನನ್ನು ಸೆರೆಹಿಡಿದಿದ್ದಾಗ ಬ್ರಹ್ಮ ಅವನನ್ನು ಬಿಡಿಸಿದ್ದು [ರಾಮಾ.-ಉತ್ತ ೨೯, ೩೦] ಬ್ರಹ್ಮ ಅತ್ರಿ ಮುನಿಯ ಪತ್ನಿಯಾದ ಅನಸೂಯಾದೇವಿಯಲ್ಲಿ ಚಂದ್ರನಾಗಿ ಅವತರಿಸಿದ್ದು [ಭಾಗ -೪-೧] ಬ್ರಹ್ಮ ವಿಷ್ಣುವಿನ ನಾಭಿಕಮಲದಿಂದ ಜನಿಸಿದ ಹುಟ್ಟುವಾಗ ಒಂದೇ ಮುಖವಿತ್ತು. ಆಗ ಬ್ರಹ್ಮ ಆ ಕಮಲಮಧ್ಯದಲ್ಲಿ ಕುಳಿತು ಶೂನ್ಯವಾಗಿರುವುದನ್ನು ಕಂಡು, ನಾಲ್ಕು ದಿಕ್ಕುಗಳನ್ನೂ ನೋಡಿ, ನಾಲ್ಕು ಮುಖಗಳನ್ನು ಪಡೆದ [ಭಾಗ.-೩-೮]. ಬ್ರಹ್ಮ ಶಿವನಿಂದ ಯೋಗಮಾಯೆಯಲ್ಲಿ ಜನಿಸಿದವ [ಲಿಂಗ -೪೧] ಬ್ರಹ್ಮನನ್ನು ವಿಷ್ಣು ಕಮಲದಲ್ಲಿ ಸೃಜಿಸಿದ [ಮತ್ಸ್ಯ -೧೬೯]. ಅದೇ ಕಮಲದಲ್ಲಿ ಬ್ರಹ್ಮ ತಪಸ್ಸು ಮಾಡುತ್ತಿದ್ದಾಗ ಮಧುಕೈಟಭರೆಂಬ ರಾಕ್ಷಸರು ಬ್ರಹ್ಮನನ್ನು ಕೊಲ್ಲಹೋದದ್ದು ಮುಂತಾಗಿ [ಮತ್ಸ್ಯ -೧೭೦. ಭಾರ -ವನ. ೨೦೩. ದೇ ಭಾ -೧-೪]. ಈತನಿಗೆ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು ಎಂಬುದಾಗಿ ಆರು ಮಂದಿ ಮಾನಸಪುತ್ರರು [ಭಾರ.-ಆದಿ. ೬೬, ೬೭. ಭಾಗ.-೩-೧೨] ವಾಲ್ಮೀಕಿ ರಾಮಾಯಣವನ್ನು ರಚಿಸುವುದಕ್ಕೆ ಮೊದಲು ಬ್ರಹ್ಮ ಅಲ್ಲಿಗೆ ಬಂದು ವಾಲ್ಮೀಕಿಗೆ ವರವನ್ನಿತ್ತು ಅನುಗ್ರಹಿಸಿದ್ದು [ರಾಮಾ.-ಬಾಲ. ೨]. ಭಾರತನಿರ್ಮಾಣ ಕಾಲದಲ್ಲಿ ವ್ಯಾಸರಲ್ಲಿಗೆ ಬಂದದ್ದು. ವ್ಯಾಸರನ್ನೂ ಭಾರತವನ್ನೂ ಹೊಗಳಿದ್ದು [ಭಾರ.-ಆದಿ. ೧]. ಸೀತೆ ಅಗ್ನಿಪ್ರವೇಶಮಾಡಿದ ಕಾಲದಲ್ಲಿ ಆಕೆಯ ಚಾರಿತ್ರವನ್ನು ಹೊಗಳಿದ್ದು [ಭಾರ.-ವನ. ೨೯೨ ರಾಮಾ.-ಯುದ್ಧ. ೧೨೦]. ತ್ರಿಪುರಸಂಹಾರ ಕಾಲದಲ್ಲಿ ಪರ

ಮಹೇಶ್ವರನಿಗೆ ಸಾರಥಿಯಾದದ್ದು [ಭಾಗ -೭-೧೦, ೧೧ ಕರ್ಣ. ೨೭. ಮತ್ಸ್ಯ.-೧೩೦, ೧೩೭, ೧೮೭] ಬ್ರಹ್ಮಸಭಾವರ್ಣನ [ಸಭಾ. ೧೧. ಅಶ್ವ ೧೦೭]. ಈತನಿಂದ ಭೃಗು, ಅಂಗಿರಸ್ಸು ಮೊದಲಾದ ಋಷಿಗಳ ಉತ್ಪತ್ತಿ [ಅನು ೧೩೨]. ಬ್ರಹ್ಮಾಂಡ ಸೃಷ್ಟಿವರ್ಣನ [ಶಾಂತಿ ೩೧೬. ಲಿಂಗ -೫೩. ಶಿವ.-ಕೋಟಿರುದ್ರ ೧೭] ಬ್ರಹ್ಮ ನಾರಾಯಣನನ್ನು ಹೊಗಳಿದ್ದು [ಭಾಗ -೩-೯]. ಬ್ರಹ್ಮನಾರಾಯಣನಿಂದ ಭಾಗವತ ಕಥೆಯನ್ನು ಕೇಳಿದ್ದು [ಭಾಗ -೨-೯].

**ಬ್ರಹ್ಮಚಾರಿ** —ಮೊದಲನೆಯ ಆಶ್ರಮವನ್ನು ಕೈಕೊಂಡವ. ಬ್ರಹ್ಮಚಾರಿಯ ನಡೆವಳಿಗಳು ಮುಂತಾಗಿ [ಭಾರ -ಆದಿ. ೮೫ ಶಾಂತಿ. ೧೮೯ ಅಶ್ವ ೪೬].

**ಬ್ರಹ್ಮದತ್ತ** —(i) ಒಬ್ಬ ಅರಸು. ಚಂದ್ರವಂಶದ ಅಣುಹ ಅಥವಾ ನೀಪ ರಾಜನಿಂದ, ಶುಕಮುನಿಯ ಮಗಳಾದ ಕೃತ್ವಿಯೆಂಬವಳಲ್ಲಿ ಜನಿಸಿದವ ನೋಡು—ಪೂಜಿನಿ [ಭಾರ -ಶಾಂತಿ ೧೩೯ ಮತ್ಸ್ಯ -೨೦, ೨೧] ಈತ ದೇವಲ ಮುನಿ ಪುತ್ರಿಯಾದ ಸನ್ನತಿಯೆಂಬವಳನ್ನು ಮದುವೆಯಾಗಿದ್ದ. ನೋಡು—ಸಾರ್ವಭೌಮ [ಹರಿ.-೧, ೨೩]. ಇವ ಕಾಂಪಿಲ್ಯನಗರದಲ್ಲಿ ರಾಜ್ಯಭಾರಮಾಡುತ್ತಿದ್ದ. ನೋಡು—ಕುಶನಾಭ, ಚೂಲಿ [ರಾಮಾ -ಬಾಲ. ೩೨, ೩೩. ಭಾರ.-ಸಭಾ ೮].

(ii) ಸಾಲ್ವದೇಶದ ಅರಸು ಕಾಶಿರಾಜನ ಪುತ್ರಿಯರಾದ ಅಂಬಾ, ಅಂಬಿಕಾ, ಅಂಬಾಲಿಕೆಯರನ್ನು ಭೀಷ್ಮ ಸ್ವಯಂವರಮಂಟಪದಿಂದ ಅಪಹರಿಸಿಕೊಂಡು ಹೋಗುತ್ತಿದ್ದಾಗ, ಭೀಷ್ಮನನ್ನು ಇದಿರಿಸಿ ಸೋತ [ಭಾರ -ಆದಿ ೧೦೯]. ಅಂಬೆ ಈತನನ್ನು ವರಿಸಿದ್ದ ಕಾರಣ, ತನ್ನ ಅಭಿಪ್ರಾಯವನ್ನು ಭೀಷ್ಮನಿಗೆ ತಿಳುಹಿ, ಆತನ ಅನುಮತಿಯಂತೆ ಬ್ರಹ್ಮದತ್ತನಲ್ಲಿಗೆ ಬಂದು ಅವನಿಂದಲೂ ತಿರಸ್ಕೃತೆಯಾದದ್ದು ಮುಂತಾಗಿ [ಭಾರ -ಆದಿ ೧೦೯, ೧೭೪, ೧೭೫] ಇವ ಶಿಶುಪಾಲನ ಮಿತ್ರ ಕೃಷ್ಣ ಶಿಶುಪಾಲನನ್ನು ಕೊಂದ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ, ಕೃಷ್ಣ ಹಸ್ತಿನಾವತಿಯಲ್ಲಿರುವಾಗಲೇ ಇವ ದ್ವಾರಕೆಯನ್ನು ಮುತ್ತಿ, ಅನಿರುದ್ಧನ ಸಂಗಡ ಯುದ್ಧಮಾಡುತ್ತಿದ್ದಾಗ ಕೃಷ್ಣ, ಹಸ್ತಿನಾವತಿಯಿಂದ ಬಂದು ಇವನನ್ನು ಕೊಂದ. ನೋಡು—ಸಾಲ್ವ [ಭಾಗ -೧೦-೭೬, ೭೭ ಭಾರ -ವನ ೨೨]

**ಬ್ರಹ್ಮಶಿರೋಸ್ತ್ರ** —ಬಹ್ಮಾಸ್ತ್ರ. ಇದನ್ನು ಪ್ರಯೋಗಿಸುವ ರೀತಿ, ನಿಯಮಗಳು ಮುಂತಾಗಿ [ಭಾರ -ಆದಿ - ೧೫೧] ಅರ್ಜುನ ಭಾರತಯುದ್ಧದ ಹದಿನೈದನೆಯ ದಿನದ ಯುದ್ಧದಲ್ಲಿ ಅಶ್ವತ್ಥಾಮನೊಂದಿಗೆ ಯುದ್ಧಮಾಡುವಾಗ ಇದನ್ನು ಪ್ರಯೋಗಿಸಿದ, ಅಶ್ವತ್ಥಾಮ ಓಡಿಹೋದ ಆಗ ಅರ್ಜುನ ಕೃಷ್ಣನ ಮಾತಿನಂತೆ ಅದನ್ನು ಉಪಸಂಹರಿಸಿದ [ಭಾರ.-ದ್ರೋ. ೨೦೨]. ಸೌಪ್ತಿಕವಧಾನಂತರ ಅರ್ಜುನನಿಗೂ ಅಶ್ವತ್ಥಾಮನಿಗೂ ಯುದ್ಧವಾದಾಗ ಇಬ್ಬರೂ ಅದನ್ನು ಪ್ರಯೋಗಿಸಿದರು.

ಕೃಷ್ಣಾದಿಗಳ ಮಾತಿನಂತೆ ಅರ್ಜುನ ಅದನ್ನು ಹಿಂದಕ್ಕೆ ತೆಗೆದುಕೊಂಡ. ಜಿತೇಂದ್ರಿಯ ನಲ್ಲದ ಅಶ್ವತ್ಥಾಮನಿಗೆ ಅದು ಸಾಧ್ಯವಾಗಲಿಲ್ಲವಾಗಿ ಆ ಅಸ್ತ್ರ ಉತ್ತರೆಯ ಗರ್ಭ ವನ್ನು ಸುಟ್ಟಿತು [ಸೌಪ್ತಿ. ೧೩, ೧೪].

**ಬ್ರಹ್ಮಸರೋವರ.**—ಒಂದು ತೀರ್ಥ. ಗಯರಾಜ ಇದರ ಬಳಿ ಯಜ್ಞ ಮಾಡಿದ [ಭಾರ.-ವನ. ೮೨, ೯೩].

**ಬ್ರಹ್ಮಹತ್ಯಾ.**—ಇದರ ವರ್ಣನೆ [ಶಾಂತಿ. ೨೮೮]. ಜನಮೇಜಯನಿಗೆ ಬ್ರಹ್ಮ ಹತ್ಯೆ ಬಂದದ್ದು. ಅದಕ್ಕಾಗಿ ಶೌನಕ ಮುನಿಯಿಂದ ಅಶ್ವಮೇಧಯಾಗ ಮಾಡಿಸಿದ್ದು [ಶಾಂತಿ. ೧೪೯-೧೫೧]. ವೃತ್ರಾಸುರನನ್ನು ಕೊಂದು ಇಂದ್ರ ಬ್ರಹ್ಮಹತ್ಯೆಗೆ ಗುರಿ ಯಾಗಿ ಅದನ್ನು ಹೋಗಲಾಡಿಸಿಕೊಂಡದ್ದು [ಭಾರ.-ಉ. ೯, ೧೦. ಶಾಂತಿ. ೨೮೮. ಭಾಗ.-೬-೮]. ವೈಶಂಪಾಯನನಿಗೆ ಬ್ರಹ್ಮಹತ್ಯಾಪ್ರಾಪ್ತಿ [ಅನು ೯]. ಯಾಜ್ಞವಲ್ಕ್ಯ ನಿಗೆ ಬ್ರಹ್ಮಹತ್ಯೆ ಬಂದದ್ದು [ಭಾಗ.-೧೨-೬]. ಬ್ರಹ್ಮ ಇಂದ್ರನ ಬ್ರಹ್ಮಹತ್ಯಾಪಾಪ ವನ್ನು ವಿಭಾಗಮಾಡಿ ಬೇರೆ ಬೇರೆ ಕಡೆಗಳಲ್ಲಿ ಇರಿಸಿದ್ದು [ಶಾಂತಿ. ೨೨೮] ಬ್ರಹ್ಮ ಹತ್ಯೆಗೆ ಸಮಾನಗಳಾದ ಪಾಪಗಳು [ಭಾರ.-ಅನು. ೬೦] ಬ್ರಹ್ಮಹತ್ಯಾಪ್ರಾಯಶ್ಚಿತ್ತ [ಭಾರ.-ಅನು. ೬೦].

**ಬ್ರಹ್ಮಸಾವರ್ಣಿ.**—ಮುಂದೆ ನಡೆಯುವ ಹತ್ತನೆಯ ಮನ್ವಂತರದ ಅಧಿಪತಿ. ಈತನಿಗೆ ಭೌಮ್ಯನೆಂಬುದು ನಾಮಾಂತರ ಆ ಕಾಲದಲ್ಲಿ ಸ್ವರ್ಗದಲ್ಲಿ ಶಂಭು ವೆಂಬ ಇಂದ್ರನೂ ಆತನ ಸಹಾಯಕ್ಕೆ ವಿಷ್ವಕ್ಸೇನನೆಂಬ ವಿಷ್ಣುವೂ ಅವತರಿಸುವರು [ಭಾಗ.-೮-೧೩].

**ಬ್ರಹ್ಮಾವರ್ತ.**—ಒಂದು ದೇಶ ಮೊದಲು ಸ್ವಾಯಂಭುವ ಮನುವಿನ ರಾಜ ಧಾನಿ. ಸರಸ್ವತಿ ಮತ್ತು ದೃಷದ್ವತೀ ನದಿಗಳ ಮಧ್ಯದಲ್ಲಿರುವ ಪ್ರದೇಶ. ನೋಡು—ಬರ್ಹಿಷ್ಮತಿ [ಭಾರ.-ವನ. ೮೧-೮೨].

**ಬ್ರಾಹ್ಮಣ.**—ನಾಲ್ಕು ವರ್ಣಗಳಲ್ಲಿ ಮೊದಲನೆಯವ. ಅವನ ಲಕ್ಷಣ [ಭಾರ.-ವನ ೧೮೨, ೨೦೯ ಶಾಂತಿ ೬೧, ೧೮೭] ಅವನ ಹೃದಯ ಬೆಣ್ಣೆಯಂಥಾದ್ದು, ಮಾತು ತೀಕ್ಷ್ಣ [ಆದಿ. ೩]. ಬ್ರಾಹ್ಮಣಮಹಿಮೆ [ವನ.-೧೮೭, ೧೮೮, ೧೯೫, ೨೧೪. ಶಾಂತಿ. ೭೨, ೩೫೧. ಅನು. ೬೮-೭೧, ೯೪, ೯೬, ೨೫೬, ೨೫೭. ಅಶ್ವ. ೯೮, ೯೯. ಭಾಗ.-೩-೧೬]. ಬ್ರಾಹ್ಮಣನನ್ನು ಕೊಲ್ಲಬಾರದು [ಆದಿ. ೨೮, ೨೦೪]. ಅವನನ್ನು ಮನ್ನಿಸಿದ ಫಲ [ವನ. ೨೦೩]. ಆಕಳು ಅವನಿಗೆ ಸಮಾನವಾದ ಬೆಲೆ [ಅನು. ೮೬]. ಅವನ ಸ್ವತ್ತನ್ನು ಅಪಹರಿಸಬಾರದು [ಅನು. ೧೦೫, ೧೫೮]. ಬ್ರಾಹ್ಮಣತ್ವ ಕರ್ಮ ದಿಂದ ಹೊಂದತಕ್ಕದ್ದು [ಅನು. ೨೧೭]. ಬ್ರಾಹ್ಮಣ ರಾಕ್ಷಸ ಸಂವಾದ [ಅನು.

೧೫೭]. ಬ್ರಾಹ್ಮಣ ಜನಕ ಸಂವಾದ [ಅಶ್ವ. ೩೩]. ಬ್ರಾಹ್ಮಣ ಪೂಜಾರ್ಹ [ಅನು. ೨೧೫, ೨೫೬].

## ಭ

**ಭಗ.**—ಸ್ವಾಯಂಭುವ ಮನ್ವಂತರದಲ್ಲಿ ದ್ವಾದಶಾದಿತ್ಯರಲ್ಲಿ ಒಬ್ಬ. ಈತ ದಕ್ಷ ಮಾಡಿದ ನಿರೀಶ್ವರ ಯಾಗಕ್ಕೆ ಹೋಗಿದ್ದು, ವೀರಭದ್ರನಿಂದ ಕಣ್ಣುಗಳನ್ನು ಹೋಗಲಾಡಿಸಿಕೊಂಡ ಈತ ಆ ಮನ್ವಂತರದಲ್ಲಿ ಪುಷ್ಯಮಾಸದ ಅಧಿಪತಿಯಾಗಿದ್ದ [ಭಾಗ.-೪-೫].

**ಭಗದತ್ತ.**—ನರಕಾಸುರನ ಮಗ. ಪ್ರಾಗ್‌ಜ್ಯೋತಿಷ ನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದ ಇವನಿಗೆ ಕೃತಪ್ರಜ್ಞ, ವಜ್ರದತ್ತರೆಂಬ ಇಬ್ಬರು ಪುತ್ರರು. ವಜ್ರದತ್ತನಿಗೆ ಯಜ್ಞದತ್ತನೆಂಬುದು ನಾಮಾಂತರ [ಭಾರ.-ಆದಿ. ೨೧. ಸಭಾ ೧೦, ೧೪, ೨೭. ದ್ರೋಣ. ೨೯]. ಪಾಂಡವರ ರಾಜಸೂಯಯಾಗ ಸಮಯದಲ್ಲಿ ಅರ್ಜುನನನ್ನು ಇದಿರಿಸಿ ಸೋತು ಕಪ್ಪವನ್ನು ಕೊಟ್ಟ [ಸಭಾ ೨೭]. ಕರ್ಣ ದಿಗ್ವಿಜಯಕ್ಕೆ ಹೊರಟಿದ್ದಾಗ ಭಗದತ್ತ ಆತನನ್ನು ಇದಿರಿಸಿ ಸೋತ [ಭಾರ.-ವನ. ೨೫೫] ಭಾರತ ಯುದ್ಧದಲ್ಲಿ ಈತ ದುರ್ಯೋಧನನ ಪರವಾಗಿ ಹೋರಾಡಿದ [ಭಾರ.-ಉ. ೧೯]. ಭಗದತ್ತನ ಪರಾಕ್ರಮವರ್ಣನೆ [ಭೀ. ೬೪, ೯೫. ದ್ರೋ. ೨೬]. ಭೀಮನೊಂದಿಗೆ ಯುದ್ಧ [ದ್ರೋ. ೨೬]. ಹನ್ನೆರಡನೆಯ ದಿವಸದ ಯುದ್ಧದಲ್ಲಿ ಭಗದತ್ತ ಅರ್ಜುನನೊಂದಿಗೆ ಯುದ್ಧಮಾಡಹೋಗಿ, ವೈಷ್ಣವಾಸ್ತ್ರವನ್ನು ಪ್ರಯೋಗಿಸಿ, ಆ ಅಸ್ತ್ರ ವ್ಯರ್ಥವಾಗಲು ಕ್ರೋಧಾಂಧನಾಗಿ, ಮರಳಿ ಅರ್ಜುನನ ಸಂಗಡ ಯುದ್ಧ ಮಾಡಿ, ಆತನಿಂದಲೇ ಮಡಿದ [ಭಾರ -ದ್ರೋ. ೨೬, ೨೮, ೨೯]. ಇವನ ಹಿರಿಯ ಮಗನಾದ ಕೃತಪ್ರಜ್ಞ ಹದಿನೈದನೆಯ ದಿನದ ಯುದ್ಧದಲ್ಲಿ ನಕುಲನಿಂದ ಮಡಿದ [ಕರ್ಣ. ೨]. ಇವನ ಎರಡನೆಯ ಮಗನಾದ ವಜ್ರದತ್ತ (ಯಜ್ಞದತ್ತ) ಪಾಂಡವರ ಅಶ್ವಮೇಧಕ್ಕೆ ಮೊದಲು ದಿಗ್ವಿಜಯಕ್ಕೆ ಹೊರಟಿದ್ದ ಅರ್ಜುನನೊಂದಿಗೆ ಯುದ್ಧಮಾಡಿ ಸೋತು, ಕಪ್ಪವನ್ನು ಕೊಟ್ಟ [ಭಾರ.-ಅಶ್ವ. ೭೫].

**ಭಗವನ್ತ.**—ಶ್ರೀಮನ್ನಾರಾಯಣ. ಭಗವದ್ವಿಷಯಕ ಜ್ಞಾನವನ್ನು ಸಂಪಾದಿಸುವ ಬಗೆ [ಉದ್ಯೋ. ೬೮]. ಭಗವಂತನ ನಾಮನಿರ್ವಚನ [ಉದ್ಯೋ. ೬೯]. ಭಗವದ್ಭಕ್ತ ಲಕ್ಷಣ [ಅಶ್ವ. ೧೧೮]. ಭಗವನ್ಮಹಿಮ ವರ್ಣನ [ಶಾಂತಿ. ೨೧೧, ೩೫೪. ಭಾಗ.-೩-೧೫, ೪-೭, ೪-೨೪]. ಭಗವಂತನನ್ನು ಸ್ಮರಿಸುವ ರೀತಿ [ಶಾಂತಿ. ೨೧೦. ಭಾಗ.-೩-೨೮].

**ಭಗೀರಥ.**—ಒಬ್ಬ ಅರಸು. ಇಕ್ಷ್ವಾಕು ವಂಶದ ದಿಲೀಪನ ಮಗ. ಜಿತೇಂದ್ರಿಯ. ಮಹಾ ಸಾಹಸಿ. ತನ್ನ ಅಜ್ಜಂದಿರಾದ ೬೦ ಸಾವಿರ ಮಂದಿ ಸಗರನ ಮಕ್ಕಳಿಗೆ ಸದ್ಗತಿಯನ್ನುಂಟುಮಾಡುವುದಕ್ಕಾಗಿ, ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ದೇವ ಲೋಕದಿಂದ ಗಂಗೆಯನ್ನು ತಂದ [ರಾಮಾ.-ಬಾಲ. ೪೨, ೪೩. ಭಾರ.-ಆದಿ. ೨೦೧. ವನ. ೧೦೭. ಸಭಾ. ೮. ವಿರಾ. ೫೩]  ಈತನಿಗೆ ಹಂಸಿಯೆಂಬ ಮಗಳಿದ್ದಳು. ಇವ ಳನ್ನು ಕೌತ್ಸ ಮುನಿ ಮದುವೆಯಾದ [ಭಾರ.-ಅನು. ೨೦೦]. ನಾರದ ಭಗೀರಥನ ಚರಿತ್ರೆಯನ್ನು ಸೃಂಜಯನಿಗೆ ಹೇಳಿದ್ದು [ದ್ರೋ. ೬೦]. ಶ್ರೀ ಕೃಷ್ಣ ಭಗೀರಥನ ಕಥೆಯನ್ನು ಯುಧಿಷ್ಠಿರನಿಗೆ ಹೇಳಿದ್ದು [ಭಾರ.-ಶಾಂತಿ. ೨೮. ವಾಯು.-೮೮]. ಭಗೀರಥ ವಂಶವರ್ಣನ [ಹರಿ.-೧-೧೫]. ಧರ್ಮಸ್ವರೂಪ ಮತ್ತು ಅನುಷ್ಠಾನದ ವಿಷಯವಾಗಿ ಭಗೀರಥ ಬ್ರಹ್ಮನೊಂದಿಗೆ ಸಂವಾದಮಾಡಿದ್ದು [ಭಾರ -ಅನು. ೧೬೦].

**ಭಙ್ಗಾಸ್ವನ**—ಒಬ್ಬ ರಾಜರ್ಷಿ. ಪುತ್ರಸಂತಾನಾರ್ಥವಾಗಿ ಯಜ್ಞಮಾಡಿ ನೂರು ಮಂದಿ ಮಕ್ಕಳನ್ನು ಪಡೆದ. ಆದರೆ ಈತ ಯಜ್ಞಮಾಡಿದ್ದನ್ನು ಕಂಡು ಇಂದ್ರನಿಗೆ ಇವನ ಮೇಲೆ ಅಸೂಯೆ ಹುಟ್ಟಿತು. ಭಂಗಾಸ್ವನ ಒಮ್ಮೆ ಬೇಟೆಗೆ ಹೋಗಿದ್ದಾಗ ಇಂದ್ರ ಇವನನ್ನು ಮರುಳುಗೊಳಿಸಿದ. ಭಂಗಾಸ್ವನ ಬಾಯಾರಿಕೆ ಯಿಂದ ಬಳಲಿ ಒಂದು ಕೊಳದಲ್ಲಿ ಇಳಿದು ಹೆಂಗಸಾದ ಬಳಿಕ ಭಂಗಾಸ್ವನ ಖಿನ್ನನಾಗಿ ತನ್ನ ಪರಿವಾರವನ್ನೆಲ್ಲ ಪಟ್ಟಣಕ್ಕೆ ಕಳುಹಿ, ತಾನು ಅಲ್ಲಿಯೇ ಒಬ್ಬ ಮುನಿಯನ್ನು ಮದುವೆಯಾಗಿ ಅನೇಕ ಮಂದಿ ಮಕ್ಕಳನ್ನು ಪಡೆದು ಆ ಮಕ್ಕಳನ್ನೆಲ್ಲ ತನ್ನ ಪಟ್ಟಣಕ್ಕೆ ಕಳುಹಿದ. ತಾನು ಗಂಡಸಾಗಿದ್ದಾಗ ಪಡೆದ ಮಕ್ಕಳು ಈ ಮಕ್ಕಳೊಂದಿಗೆ ಕಲೆತು ಅನ್ಯೋನ್ಯವಾಗಿದ್ದರು. ಇಷ್ಟರಲ್ಲಿ ಇಂದ್ರ ಆ ಇತ್ತಂಡದ ಮಕ್ಕಳಿಗೂ ಕಲಹವನ್ನು ತಂದೊಡ್ಡಲಾಗಿ, ಅವರೆಲ್ಲರೂ ಯುದ್ಧಮಾಡಿ ಇತ್ತಂಡ ದವರೂ ಮಡಿದರು. ಆಗ ಕಾಡಿನಲ್ಲಿ ಹೆಂಗಸಾಗಿದ್ದ ಅರಸು ಪಟ್ಟಣಕ್ಕೆ ಹೋಗಿ ತನ್ನ ಮಕ್ಕಳು ಮಡಿದುದಕ್ಕಾಗಿ ಬಹಳವಾಗಿ ಮರುಗುತ್ತಿದ್ದ ಆಗ ಇಂದ್ರ ಬ್ರಾಹ್ಮಣರೂಪದಿಂದ ಅವನಲ್ಲಿಗೆ ಬಂದು, ಹೆಂಗಸಾಗಿದ್ದ ಭಂಗಾಸ್ವನನನ್ನು ಕಂಡು —ಹಾಗೆ ದುಃಖಿಸಲು ಕಾರಣವೇನೆಂದು ಕೇಳಲಾಗಿ, ಭಂಗಾಸ್ವನ "ನನ್ನ ಮಕ್ಕಳು ಮಡಿದುದಕ್ಕಾಗಿ ಶೋಕಿಸುವೆ. ದಯೆಮಾಡಿ ನನ್ನ ಮಕ್ಕಳನ್ನು ಬದುಕಿಸಿಕೊಡು" ಎಂದು ಬೇಡಿದ. ಆಗ ಬ್ರಾಹ್ಮಣರೂಪದಿಂದಿದ್ದ ಇಂದ್ರ ಯಾವ ಮಕ್ಕಳನ್ನು ಬದುಕಿಸಿಕೊಡಬೇಕೆಂದು ಕೇಳಲಾಗಿ, ಭಂಗಾಸ್ವನ "ಗಂಡಸರಿಗಿಂತಲೂ ಹೆಂಗಸ ರಿಗೇ ಮಕ್ಕಳ ಮೇಲೆ ಮಮತೆ ಹೆಚ್ಚು. ನಾನು ಹೆಂಗಸಾಗಿದ್ದು ಪಡೆದ ಮಕ್ಕಳನ್ನೇ ಬದುಕಿಸಿಕೊಡು" ಎಂದು ಬೇಡಲಾಗಿ, ಇಂದ್ರ ಮೈದೋರಿ ಇತ್ತಂಡದ ಮಕ್ಕ ಳನ್ನೂ ಬದುಕಿಸಿ, ಭಂಗಾಸ್ವನನಿಗೆ ಪುರುಷತ್ವವನ್ನೂ ಅನುಗ್ರಹಿಸಿದ. ಆದರೆ

ಭಂಗಾಸ್ವನ ತಾನು ಸ್ತ್ರೀ ರೂಪದಿಂದಲೇ ಇದ್ದು ಭೋಗಪಡಲೆಳಸಿ, ಪುಂಸ್ತ್ವವನ್ನು ಕೈಕೊಳ್ಳಲಿಲ್ಲ [ಭಾರ.-ಅನು. ೩೪].

**ಭದ್ರವತೀ.**—ಅಭಿಮನ್ಯುವಿನ ಮಗನಾದ ಪರೀಕ್ಷಿದ್ರಾಜನ ಹೆಂಡತಿ. ಜನಮೇಜಯನನ್ನು ಹೆತ್ತವಳು [ಭಾರ.-ಆದಿ. ೬೩].

**ಭದ್ರಾ** —(i) ಚಂದ್ರನ ಮಗಳು. ಈಕೆ ಅಂಗಿರಸನ ಮಗನೂ ಬೃಹಸ್ಪತಿಯ ಸಹೋದರನೂ ಎನಿಸಿದ ಉಚಥ್ಯ ಮಹರ್ಷಿಯನ್ನು ಮದುವೆಯಾದಳು [ಭಾರ - ಅನು. ೨೫೯] ವರುಣ ಭದ್ರೆಯನ್ನು ಅಪಹರಿಸಲಾಗಿ ಉಚಥ್ಯ ವರುಣನ ಮೇಲಣ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಸಮುದ್ರವನ್ನು ಶೋಷಿಸಿದ. ನೋಡು—ಉಚಥ್ಯ [ಅನು. ೨೫೯].

(ii) ಕುಬೇರನ ಹೆಂಡತಿ [ಭಾರ.-ಆದಿ ೨೧೬].

(iii) ವಸುದೇವನ ಪತ್ನಿಯರಲ್ಲಿ ಒಬ್ಬಳು [ಭಾರ -ಮೌಸ ೮ ಭಾಗ.-೯-೨೪. ಹರಿ -೧-೩೫]

(iv) ಶ್ರೀ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು ಈಕೆ ಕೇಕಯ ದೇಶಾಧಿಪತಿಯಾದ ಧೃಷ್ಟಕೇತುವಿನಿಂದ, ಕೃಷ್ಣನ ಸೋದರತ್ತೆಯಾದ ಶ್ರುತಕೀರ್ತಿಯೆಂಬವಳಲ್ಲಿ ಜನಿಸಿದವಳು [ಭಾಗ -೧೦, ೫೬-೫೮. ವಿಷ್ಣು.-೫-೨೮]

(v) ಕಕ್ಷೀವಂತನೆಂಬ ಮುನಿಯ ಮಗಳು ಈಕೆ ಪೂರು ವಂಶದ ವ್ಯುಷಿತಾಶ್ವ ರಾಜನನ್ನು ಮದುವೆಯಾಗಿ ಸಾಲ್ವ, ಮದ್ರ, ಮೊದಲಾದ ಏಳು ಮಂದಿ ಪುತ್ರರನ್ನು ಹೆತ್ತಳು [ಭಾರ.-ಆದಿ. ೧೨೭]

**ಭದ್ರಾವತಿ.**—ಯೌವನಾಶ್ವ ರಾಜನ ರಾಜಧಾನಿ. ಪಾಂಡವರ ಅಶ್ವಮೇಧಕ್ಕೆ ಮೊದಲು ಭೀಮ ಅಶ್ವಮೇಧಯೋಗ್ಯವಾದ ಕುದುರೆಯನ್ನು ತರುವುದಕ್ಕಾಗಿ ಇಲ್ಲಿಗೆ ಬಂದಿದ್ದ ನೋಡು—ಯೌವನಾಶ್ವ

**ಭದ್ರಾಶ್ವ** —(i) ಪ್ರಿಯವ್ರತ ರಾಜನ ಮಗನಾದ ಆಗ್ನೀಧ್ರನಿಂದ ಪೂರ್ವಚಿತ್ತಿಯೆಂಬ ಅಪ್ಸರಸಿಯಲ್ಲಿ ಜನಿಸಿದ ಒಂಬತ್ತು ಮಂದಿ ಪುತ್ರರಲ್ಲಿ ಒಬ್ಬ ನೋಡು—ಆಗ್ನೀಧ್ರ.

(ii) ಒಂದು ದೇಶ ಭಾಗ. ಆಗ್ನೀಧ್ರನ ತರುವಾಯ ಮೇಲೆಹೇಳಿದ ಭದ್ರಾಶ್ವ ಪಾಲಿಸಿದ ಭೂ ಭಾಗಕ್ಕೆ ಈ ಹೆಸರು ಬಂದಿತು [ಭಾರ.-ಭೀ. ೬]. ಈ ಭದ್ರಾಶ್ವ ಖಂಡ ಪುಣ್ಯಶಾಲಿಗಳ ಭೋಗಸ್ಥಾನವಾಗಿದೆ [ಭಾರ.-ಅನು. ೨೪೦].

(iii) ಕುವಲಾಶ್ವನ ಮಗ. ನೋಡು—ಕುವಲಾಶ್ವ [ವನ.-೨೦೭].

**ಭರಣಿ.**—(i) ದಕ್ಷನ ಮಗಳು. ಚಂದ್ರನ ಹೆಂಡತಿ.

(ii) ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು [ಭಾರ.-ಆದಿ. ೬೭. ವಿಷ್ಣು.-೧-೧೫].

**ಭರತ.**—(i) ಋಷಭದೇವನಿಂದ ಜಯಂತಿಯೆಂಬವಳಲ್ಲಿ ಜನಿಸಿದ ಹಿರಿಯ ಮಗ. ಇವ ಪಂಚಜನಿಯೆಂಬವಳನ್ನು ಮದುವೆಯಾಗಿ ಸುಮತಿ, ರಾಷ್ಟ್ರಭೃತ್, ಸುದರ್ಶನ, ಆವರಣ, ಧೂಮ್ರಕೇತುಗಳೆಂಬ ಐವರು ಪುತ್ರರನ್ನು ಪಡೆದ. ಇವ ಪಾಲಿಸಿದ ದೇಶಕ್ಕೆ ಅಜನಾಭವರ್ಷ ಅಥವಾ ಭರತಖಂಡವೆಂದು ಹೆಸರಾಯಿತು [ವಿಷ್ಣು.-೨-೩. ಭಾಗ.-೧-೧೭, ೫-೫].

(ii) ಪೂರು ವಂಶದ ಇಲಿಲ ರಾಜನ ಮಗನಾದ ದುಷ್ಯಂತನಿಂದ ಶಕುಂತಲೆಯಲ್ಲಿ ಜನಿಸಿದವ. ಇವ ವಿದರ್ಭ ರಾಜಪುತ್ರಿಯರು ಮೂವರನ್ನೂ ಮದುವೆಯಾಗಿದ್ದ ಅವರಲ್ಲಿ ಸುನ್ದೆಯೆಂಬವಳು ಮುಖ್ಯಳು [ಆದಿ. ೬೩, ೮೮. ವಿರಾ. ೫೩]. ಭರತನ ಉತ್ಪತ್ತಿ ಕಥೆ. ಇವನಿಗೆ ಸರ್ವದಮನನೆಂಬುದು ನಾಮಾಂತರ [ಭಾರ.-ಆದಿ. ೯೫]. ಭರತನ ರಾಜ್ಯಾಭಿಷೇಕ [ಭಾರ -ಆದಿ ೧೦೦] ಭರತ ಚರಿತ್ರವರ್ಣನ [ಭಾರ.-ಆದಿ. ೧೦೧. ದ್ರೋ. ೬೮. ಶಾಂ ೨೮] ಭರತ ದೀರ್ಘತಮನೆಂಬ ಮುನಿಯನ್ನು ಪುರೋಹಿತನನ್ನಾಗಿಟ್ಟುಕೊಂಡು ಗಂಗಾ ತೀರದಲ್ಲಿ ೫೫ ಅಶ್ವಮೇಧಗಳನ್ನೂ ಅಂತೆಯೇ ಯಮುನೆಯ ದಡದಲ್ಲಿ ೨೮ ಅಶ್ವಮೇಧಗಳನ್ನೂ ಮಾಡಿದ. ಬಳಿಕ ಈತನಿಗೆ ಮೂವರು ಪತ್ನಿಯರಲ್ಲಿಯೂ ಪುತ್ರರಾದರು ಒಬ್ಬರಾದರೂ ಭರತನನ್ನು ಹೋಲತಕ್ಕವರಾಗಿರಲಿಲ್ಲ. ಈ ಮಾತನ್ನು ಪತಿಯ ಮೂಲಕ ತಿಳಿದ ಆ ಮೂವರೂ ತಮ್ಮ ಪುತ್ರರನ್ನು ಕೊಂದ ಕಾರಣ ವಂಶವೇ ನಿಂತುಹೋಗುವ ಗತಿ ಬಂತು. ಆಗ ದೇವತೆಗಳು ಭರದ್ವಾಜನನ್ನು ಭರತನಿಗೆ ಸಾಕುಕೊಟ್ಟರು. ಭರತ ಈತನಿಗೆ ವಿತಥ ಅಥವಾ ಭುಮನ್ಯು ಎಂದು ಹೆಸರಿಟ್ಟು ಅವನನ್ನು ಪರಿಗ್ರಹಿಸಿದ [ಭಾಗ -೯-೨೦].

(iii) ದಶರಥನಿಂದ ಕೈಕೆಯಲ್ಲಿ ಜನಿಸಿದವ. ಶ್ರೀ ರಾಮ ಹುಟ್ಟಿದ ಮರು ದಿನ ಪುಷ್ಯನಕ್ಷತ್ರ ಮೀನಲಗ್ನದಲ್ಲಿ ಜನಿಸಿದವ [ರಾಮಾ -ಬಾಲ ೧೮] ಜನಕನ ತಮ್ಮನಾದ ಕುಶಧ್ವಜನ ಹಿರಿಯ ಮಗಳಾದ ಮಾಂಡವಿಯನ್ನು ಮದುವೆಯಾಗಿದ್ದ [ಬಾಲ. ೭೫] ಭರತ ತನ್ನ ಸೋದರಮಾವನಾದ ಯುಧಾಜಿತನ ಸಂಗಡ ಕೇಕಯ ದೇಶಕ್ಕೆ ಹೋದದ್ದು [ಅಯೋ. ೧]. ಭರತ ಮಾತಾಮಹನ ಮನೆಯಲ್ಲಿ ದುಸ್ಸ್ವಪ್ನವನ್ನು ಕಂಡು ವಿಮನಸ್ಕನಾಗಿರುವಲ್ಲಿ, ಬೆಳಗಾಗುತಲೇ ವಸಿಷ್ಠ ಕಳುಹಿದ ದೂತನ ಸಂಗಡ ಅಯೋಧ್ಯೆಗೆ ಬಂದದ್ದು [ಅಯೋ. ೬೯-೭೨]. ಭರತ ಅಯೋಧ್ಯೆಗೆ ಬಂದು ನಡೆದ ವೃತ್ತಾಂತವನ್ನೆಲ್ಲ ತಾಯ ಮೂಲಕ ತಿಳಿದು, ಕೈಕೆಯನ್ನು ನಿಂದಿಸಿ, ಕೌಸಲ್ಯೆಯಿಂದ ವಾಸ್ತವಾಂಶವನ್ನು ತಿಳಿದು ದಶರಥನನ್ನು ಸಂಸ್ಕರಿಸಿದ್ದು [ಅಯೋ. ೭೭]. ವಸಿಷ್ಠಾದಿಗಳಿಂದ ಪಟ್ಟಗಟ್ಟಿಕೊಳ್ಳುವುದಕ್ಕೆ ಪ್ರೇರಿತನಾದ ಭರತ ರಾಜ್ಯಾಭಿಷೇಕಕ್ಕೆ

ಸಮ್ಮತಿಸದೆ, ರಾಮನನ್ನು ಕರೆತರುವುದಾಗಿ ಪ್ರತಿಜ್ಞೆಮಾಡಿ ಅರಣ್ಯಕ್ಕೆ ಹೊರಟದ್ದು [ಅಯೋ ೭೯-೮೨]. ಗಂಗಾ ತೀರದಲ್ಲಿ ಗುಹನನ್ನು ಸಂಧಿಸಿದ್ದು, ಭರತನ ಪ್ರಲಾಪ, ಗಂಗೆಯನ್ನು ದಾಟಿದ್ದು, ಭರದ್ವಾಜನನ್ನು ಕಂಡದ್ದು, ಭರದ್ವಾಜ ಭರತನಿಗೆ ಔತಣ ಮಾಡಿದ್ದು, ಭರತ ಅಲ್ಲಿಂದ ಚಿತ್ರಕೂಟವನ್ನು ಸೇರಿದ್ದು [ಅಯೋ. ೮೩-೯೫]. ಭರತ ರಾಮನನ್ನು ಕಂಡದ್ದು, ರಾಜನೀತಿಯನ್ನು ತಿಳಿದದ್ದು, ರಾಮನನ್ನು ಅಯೋಧ್ಯೆಗೆ ಕರೆದದ್ದು [ಅಯೋ. ೯೬-೧೦೨]. ರಾಮ ಭರತನಿಗೆ ತತ್ತ್ವೋಪದೇಶಮಾಡಿದ್ದು [ಅಯೋ. ೧೦೫] ರಾಮನ ಪಾದುಕೆಗಳನ್ನು ಪಡೆದು ಅಯೋಧ್ಯೆಗೆ ಹಿಂದಿರುಗಿ ನಂದಿ ಗ್ರಾಮದಲ್ಲಿ ಆ ಪಾದುಕೆಗಳಿಗೆ ರಾಜ್ಯಾಭಿಷೇಕಮಾಡಿದ್ದು [ಅಯೋ. ೧೧೨-೧೧೫]. ಭರತ ಹನೂಮಂತನಿಂದ ರಾಮಾಯಣವನ್ನು ಸಂಗ್ರಹವಾಗಿ ಕೇಳಿ ತಿಳಿದದ್ದು. ರಾಮ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿ, ಸಂತುಷ್ಟನಾದ ಭರತ ರಾಮನನ್ನು ಇದಿರ್ಗೊಂಡು, ಪಟ್ಟಾಭಿಷೇಕಕ್ಕೆ ಅಣಿಮಾಡಿದ್ದು [ಯುದ್ಧ. ೧೨೯-೧೩೧]. ಭರತ ರಾಮನಿಗೆ ರಾಜಸೂಯಯಾಗವನ್ನು ಮಾಡಬಾರದೆಂದು ಹೇಳಿದ್ದು [ಉತ್ತರ ೮೩]. ರಾಮನ ಅಪ್ಪಣೆಯಮೇರೆಗೆ ಭರತ ಗಂಧರ್ವದೇಶವನ್ನು ಜಯಿಸಿ, ತಕ್ಷಶಿಲಾ, ಪುಷ್ಕಲಾವತ ವೆಂಬ ಎರಡು ಪಟ್ಟಣಗಳನ್ನು ನಿರ್ಮಿಸಿ, ತನ್ನ ಇಬ್ಬರು ಮಕ್ಕಳಾದ ತಕ್ಷ ಮತ್ತು ಪುಷ್ಕಲರೆಂಬವರಿಗೆ ಆ ಪಟ್ಟಣಗಳಲ್ಲಿ ಪಟ್ಟಗಟ್ಟಿದ್ದು [ಉತ್ತರ. ೯೯-೧೦೦]. ಭರತ ಶತ್ರುಘ್ನನಿಗೆ ರಾಮಾವತಾರ ಮುಗಿಯುವುದೆಂದು ಹೇಳಿದ್ದು [ಉತ್ತರ ೧೦೭]. ಭರತ ರಾಮನೊಂದಿಗೆ ಮಹಾಪ್ರಸ್ಥಾನಮಾಡಿದ್ದು [ಉತ್ತ ೧೦೮]

(iv) ಒಬ್ಬ ಮಹರ್ಷಿ ನಾಟ್ಯಶಾಸ್ತ್ರವನ್ನು ಬರೆದವನು

**ಭರತಖಣ್ಡ**—ಋಷಭ ದೇವನ ಮಗನಾದ ಭರತ ಪಾಲಿಸಿದ ರಾಜ್ಯ. ಇದು ಕನ್ಯಾಕುಮಾರಿಯಿಂದ ಹಿಮವತ್ಪರ್ವತಗಳವರೆಗೆ ಪೂರ್ವ ಪಶ್ಚಿಮ ಸಮುದ್ರಗಳ ನಡುವೆ ಇದೆ ಇದರ ವರ್ಣನೆ ಕಡೆಗೆ ಇದು ಮ್ಲೇಚ್ಛರ ಆಳ್ವಿಕೆಗೆ ಗುರಿಯಾಗುವುದು.

ಅಯಂ ತು ನವಮಸ್ತೇಷಾಂ ದ್ವೀಪಸ್ಸಾಗರಸಂವೃತಃ।
ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಃ॥
ಆಯತಸ್ತು ಕುಮಾರೀತಃ ಗಂಗಾಯಾಃ ಪ್ರವಹಾವಧಿಃ।
ತಿರ್ಯಗೂರ್ಧ್ವಂ ತು ವಿಸ್ತೀರ್ಣಃ ಸಹಸ್ರಾಣಿ ದಶೈವತು॥
ದ್ವೀಪೋಹ್ಯುಪನಿವಿಷ್ಟೋಽಯಂ ಮ್ಲೇಚ್ಛೈರಂತೇತು ಸರ್ವತಃ॥

[ಮತ್ಸ್ಯ.-೧೧೪].

**ಭರತವರ್ಷ**—ಪ್ರಿಯವ್ರತನ ಮಗನಾದ ಆಗ್ನೀಧ್ರ ರಾಜನಿಂದ ಜನಿಸಿದ ಅಜ ನಾಭನೆಂಬ ಅರಸು ಪಾಲಿಸಿದ ಒಂದು ದೇಶ ಇದು ಜಂಬೂ ದ್ವೀಪದ ಒಂಬತ್ತನೆಯ ಒಂದು ಭಾಗ [ಲಿಂಗ.-೪೭. ಮತ್ಸ್ಯ.-೧೦೦, ೧೧೩. ಭಾರ.-ಭೀ. ೬].

**ಭರದ್ವಾಜ.**—(i) ಉಚಥ್ಯ ಮುನಿ ಪತ್ನಿಯಾದ ಮಮತೆಯೆಂಬವಳಲ್ಲಿ ಬೃಹಸ್ಪತ್ಯಾಚಾರ್ಯನಿಂದ ಜನಿಸಿದವ. ನೋಡು—ಉಚಥ್ಯ, ಬೃಹಸ್ಪತಿ [ಭಾಗ -೯-೨೦. ವಿಷ್ಣು.-೪-೧೯. ಮತ್ಸ್ಯ.-೪೯]. ಈತ ಗಂಗಾ ತೀರದಲ್ಲಿ ತಪಸ್ಸುಮಾಡುತ್ತಿದ್ದಾಗ ಈತನ ನಿಯಮವನ್ನು ಕೆಡಿಸಲು ಬಂದ ಘೃತಾಚಿಯೆಂಬ ಅಪ್ಸರಸಿಯನ್ನು ಕಂಡು ಎದೆಗುಂದಿದ ಮುನಿಯ ವೀರ್ಯವನ್ನು ದ್ರೋಣದಲ್ಲಿರಿಸಲಾಗಿ (ದೊನ್ನೆಯಲ್ಲಿ) ದ್ರೋಣಾಚಾರ್ಯ ಜನಿಸಿದ ನೋಡು—ದ್ರೋಣ [ಭಾರ.-ಆದಿ. ೮, ೬೪, ೧೧೧, ೧೪೦, ೧೫೦, ೧೫೬]. ಭರದ್ವಾಜ ಶಬ್ದನಿರ್ವಚನ ದ್ವಿಜ = ಇಬ್ಬರಿಂದ ಹುಟ್ಟಿದವ, ಭರ = ಪೋಷಿಸಲ್ಪಟ್ಟವ = ಭರದ್ವಾಜ. ಉಚಥ್ಯನ ಪತ್ನಿಯಾದ ಮಮತೆಯೆಂಬವಳು ಬೃಹಸ್ಪತಿಯಿಂದ ಗರ್ಭಧಾರಣಮಾಡಿ, ಆ ತರುವಾಯ ತನ್ನ ಪತಿ ತನ್ನನ್ನು ತ್ಯಾಗಮಾಡುವನೋ ಏನೋ ಎಂಬ ಭಯದಿಂದ ಶಿಶುವನ್ನು ತ್ಯಾಗಮಾಡಿದಳು ಅಂತೆಯೇ ಬೃಹಸ್ಪತಿಯೂ ಶಿಶುವನ್ನು ಬಿಟ್ಟುಹೋದ. ಆಗ ಮರುತ್ತರೆಂಬ ದೇವತೆಗಳು ಈ ಶಿಶುವನ್ನು ಪೋಷಿಸಲಾಗಿ ಭರದ್ವಾಜನೆಂಬ ಹೆಸರು ಬಂತು [ಭಾಗ -೯-೨೦ ಭಾರ -ಅನು. ೧೪೨]. ಭರದ್ವಾಜ ಭೃಗು ಮಹರ್ಷಿಯಿಂದ ಜಗತ್ತಿನ ಸೃಷ್ಟಿಪ್ರಕಾರವನ್ನು ಕೇಳಿ ತಿಳಿದದ್ದು [ಭಾರ -ಶಾಂತಿ ೧೮೦] ಭರದ್ವಾಜ ದಿವೋದಾಸನಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿಸಿದ್ದು [ಭಾರ.-ಅನು. ೮]. ಪುಷ್ಕರವನ್ನು ತಾನು ಕದಿಯಲಿಲ್ಲವೆಂಬ ವಿಷಯವಾಗಿ ಈತ ಮಾಡಿದ ಶಪಥ [ಭಾರ.-ಅನು ೧೪೩]

(ii) ಒಬ್ಬ ಮಹರ್ಷಿ. ಈತನಿಗೆ ಯವಕ್ರೀತನೆಂಬ ಮಗನಿದ್ದ ನೋಡು—ಯವಕ್ರೀತ, ರೈಭ್ಯ [ಭಾರ.-ವನ ೧೩೭-೧೪೦] ಈತನಿಗೆ ಅಗ್ನಿವೇಶ್ಯನೆಂಬ ಮತ್ತೊಬ್ಬ ಮಗನಿದ್ದ [ಭಾರ -ಆದಿ. ೧೪೦] ರೈಭ್ಯ ಮುನಿ ಕಲ್ಪಿಸಿದ ಕ್ಷುದ್ರ ದೇವತೆ ಈತನ ಮಗನನ್ನು ಕೊಂದುದಕ್ಕಾಗಿ ಪುತ್ರಶೋಕವನ್ನು ತಾಳಲಾರದೆ ಭರದ್ವಾಜ ಅಗ್ನಿಪ್ರವೇಶಮಾಡಿದ್ದು [ಭಾರ.-ವನ. ೧೩೯]. ರೈಭ್ಯ ಮುನಿ ಭರದ್ವಾಜನನ್ನು ಬದುಕಿಸಿದ್ದು [ವನ. ೧೪೦].

(iii) ಮತ್ತೊಬ್ಬ ಮಹರ್ಷಿ. ಈತ ಘೃತಾಚಿಯೆಂಬ ಅಪ್ಸರಸಿಯಲ್ಲಿ ಶ್ರುತಾವತಿಯೆಂಬ ಪುತ್ರಿಯನ್ನು ಪಡೆದ. ಈಕೆ ತನಗೆ ಒಬ್ಬ ಬ್ರಾಹ್ಮಣ ತಂದು ಕೊಟ್ಟ ಬೋರೆಹಣ್ಣುಗಳನ್ನು ಬೇಯಿಸುವುದಕ್ಕಾಗಿ ಬಹಳವಾಗಿ ಪಾಡುಪಟ್ಟು ಕಡೆಗೆ ತನ್ನ ಕಾಲುಗಳನ್ನೇ ಸೌದೆಗೆ ಬದಲಾಗಿ ಒಲೆಯಲ್ಲಿಟ್ಟು ಸುಟ್ಟು ಕಡೆಗೆ ಬೋರೆಹಣ್ಣುಗಳನ್ನು ಬೇಯಿಸಿದಳು [ಭಾರ.-ಶಲ್ಯ. ೪೯].

(iv) ಮತ್ತೊಬ್ಬ ಮಹರ್ಷಿ. ಈತ ವಾಲ್ಮೀಕಿ ಮಹರ್ಷಿಯ ಶಿಷ್ಯ [ರಾಮಾ.-ಬಾಲ.೨]. ಈತ ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡುತ್ತಿದ್ದ. ಶ್ರೀ ರಾಮ

ದಂಡಕಾರಣ್ಯಕ್ಕೆ ಹೊರಟಾಗ ಈತನಲ್ಲಿಗೆ ಹೋಗಿ, ತನಗೆ ವಾಸಯೋಗ್ಯವಾದ ಪ್ರದೇಶವಾವುದೆಂದು ಕೇಳಿ ಅಲ್ಲಿಂದ ಹತ್ತು ಗಾವುದದ ದೂರದಲ್ಲಿ ಚಿತ್ರಕೂಟಪರ್ವತ ವಿರುವುದೆಂತಲೂ ಅದೇ ವಾಸಯೋಗ್ಯವಾದ ಪ್ರದೇಶವೆಂತಲೂ ತಿಳಿದು, ಅಲ್ಲಿಂದ ಚಿತ್ರಕೂಟಕ್ಕೆ ಬಂದು ಸೇರಿದ [ರಾಮಾ.-ಅಯೋ. ೫೪, ೫೫]. ಭರತ ಶ್ರೀ ರಾಮ ನನ್ನು ಅಯೋಧ್ಯೆಗೆ ಕರೆತರಲು ಹೋದಾಗ ಭರದ್ವಾಜ ಭರತನ ಅಭಿಪ್ರಾಯವನ್ನು ತಿಳಿದು ಅವನನ್ನು ಶ್ಲಾಘಿಸಿ ಅವನಿಗೂ ಅವನ ಪರಿವಾರಕ್ಕೂ ಔತಣಮಾಡಿದ [ರಾಮಾ.-ಅಯೋ. ೯೦, ೯೧] ರಾವಣವಧಾನಂತರ ಶ್ರೀ ರಾಮ, ಸೀತಾ ಲಕ್ಷ್ಮಣ ವಿಭೀಷಣ, ಸುಗ್ರೀವಾದಿಗಳೊಂದಿಗೆ ಅಯೋಧ್ಯೆಗೆ ಹೊರಟು ನಡುದಾರಿಯಲ್ಲಿ ಈತನ ಆಶ್ರಮಕ್ಕೆ ಬಂದ. ಆಗ ಭರದ್ವಾಜ ಶ್ರೀ ರಾಮನಿಗೂ ಅವನ ಪರಿವಾರಕ್ಕೂ ಔತಣಮಾಡಿದ. ರಾಮ ತಾನು ಅಯೋಧ್ಯೆಗೆ ಬರುತ್ತಿರುವ ಸಮಾಚಾರವನ್ನು ಹನೂಮಂತನ ಮೂಲಕ, ಈತನ ಆಶ್ರಮದಲ್ಲಿರುವಾಗ ಭರತನಿಗೆ ಹೇಳಿಕಳುಹಿದ [ರಾಮಾ.-ಯುದ್ಧ. ೧೨೬].

(v) ದುಷ್ಯಂತನ ಮಗನಾದ ಭರತ ಮರುತ್ತುಗಳೆಂಬ ದೇವತೆಗಳಿಂದ ಪಡೆದ ಮಗ. ಇವನಿಗೆ ವಿತಥ, ಭುಮನ್ಯು ಎಂಬ ಹೆಸರುಗಳಿವೆ [ಭಾಗ -೯-೨೦].

**ಭಾಗಸ್ವರಿ** —ದಶಾರ್ಣ ದೇಶದ ಅರಸನಾದ ಋತುಪರ್ಣ ರಾಜನ ನಾಮಾಂತರ [ಭಾರ.-ಸ. ೮. ವನ. ೬೮, ೬೯].

**ಭಾಗೀರಥೀ** —ಭಗೀರಥ ಗಂಗೆಯನ್ನು ದೇವಲೋಕದಿಂದ ಭೂಮಿಗೆ ತಂದ ಕಾರಣ ಈ ಹೆಸರು ಗಂಗೆಗೆ ಸಲ್ಲುತ್ತದೆ. ನೋಡು—ಭಗೀರಥ.

**ಭಾಙ್ಗಾಸ್ವನ.**—ನೋಡು—ಭಙ್ಗಾಸ್ವನ [ಅನು ೩೪]

**ಭಾಣ್ಡೀರ** —ಒಂದು ಆಲದ ಮರ ಶ್ರೀ ಕೃಷ್ಣ ಗೋಕುಲದಲ್ಲಿದ್ದಾಗ ದನಕರು ಗಳನ್ನು ಬಿಸಿಲುಹೊತ್ತಿನಲ್ಲಿ ಈ ಮರದ ಅಡಿಯಲ್ಲಿ ನಿಲ್ಲಿಸಿ, ತಾನು ಗೊಲ್ಲಹುಡುಗ ರೊಂದಿಗೆ ಆಡುತ್ತಿದ್ದ [ಭಾರ.-ಸ. ೫೩]

**ಭಾನು.**—(i) ಕಶ್ಯಪನಿಂದ ಪ್ರಾಧೆಯೆಂಬವಳಲ್ಲಿ ಜನಿಸಿದ ದೇವ ಗಂಧರ್ವರಲ್ಲಿ ಒಬ್ಬ [ಭಾರ.-ಆದಿ ೬೬].

(ii) ಗಾಂಧಾರ ದೇಶಾಧಿಪತಿಯಾದ ಸುಬಲನ ಮಗ. ಶಕುನಿಯ ಒಡ ಹುಟ್ಟಿದವ. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಭೀಮನಿಂದ ಮಡಿದ [ದ್ರೋ. ೧೫೮].

(iii) ಪಾಂಚಾಲ ರಾಜಪುತ್ರರಲ್ಲಿ ಒಬ್ಬ. ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಭಾರ.-ಕರ್ಣ. ೪೩]. ಇವನ ಮಗ ಶಕ್ರದೇವ [ಭಾರ.-ಭೀ. ೫೪],

**ಭಾನುಮತಿ.**—(i) ಯದು ವಂಶದ ಕೃತವೀರ್ಯ ರಾಜನ ಮಗಳು. ಈಕೆ ಚಂದ್ರ ವಂಶದ ಶರ್ಯಾತಿ ರಾಜನ ಮಗನಾದ ಅಹಂಯಾತಿ ರಾಜನನ್ನು ಮದುವೆಯಾಗಿ ಸಾರ್ವಭೌಮನೆಂಬ ಮಗನನ್ನು ಪಡೆದಳು [ಭಾರ.-ಆದಿ. ೬೩].

(ii) ಬೃಹಸ್ಪತ್ಯಾಚಾರ್ಯನ ಪತ್ನಿಯರಲ್ಲಿ ಒಬ್ಬಳಾದ ಶುಭಾದೇವಿಯಲ್ಲಿ ಜನಿಸಿದ ಏಳು ಮಂದಿ ಪುತ್ರಿಯರಲ್ಲಿ ಒಬ್ಬಳು [ಭಾರ -ವನ. ೨೨೧].

(iii) ಕೋಸಲ ದೇಶದ ಅರಸನಾಗಿದ್ದ ಭಾನುಮಂತನ ಮಗಳಾದುದರಿಂದ ಈ ಹೆಸರು ಶ್ರೀ ರಾಮನ ಜನನಿಯಾದ ಕೌಸಲ್ಯೆಗೂ ಸಲ್ಲುತ್ತದೆ [ಭಾರ.-ವನ. ೨೭೫].

(iv) ದುರ್ಯೋಧನನ ಹೆಂಡತಿಯೆಂಬುದಾಗಿ ವ್ಯವಹಾರವಿದೆ.

**ಭಾನುಮನ್ತ.**—(i) ಕಳಿಂಗ ದೇಶದ ಅರಸು. ದುರ್ಯೋಧನನ ಪತ್ನಿಯಾದ ಭಾನುಮತಿ ಈತನ ಮಗಳು. ಇವನಿಗೆ ಚಿತ್ರಾಂಗದನೆಂಬುದು ನಾಮಾಂತರ [ಭಾರ.-ಶಾಂತಿ. ೪] ಇವ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಮೊದಲನೆಯ ದಿನವೇ ಭೀಮನಿಂದ ಮಡಿದ [ಭಾರ.-ಭೀಷ್ಮ. ೫೪].

(ii) ಕೋಸಲ ದೇಶದ ಅರಸು ಕೌಸಲ್ಯೆಯ ತಂದೆ [ಭಾರ -ವನ. ೨೭೫]

**ಭಾರತ.**—(i) ನೋಡು—ಭರತ, ಭರತಖಂಡ, ಭರತವರ್ಷ.

(ii) ಒಂದು ಇತಿಹಾಸ ಇದು ಒಂದು ಲಕ್ಷ ಗ್ರಂಥ ಪರಿಮಿತಿಯುಳ್ಳದ್ದು. ಶಕುಂತಲಾ ದುಷ್ಯಂತರ ಮಗನಾದ ಭರತ ಚಕ್ರವರ್ತಿಯ ವಂಶದಲ್ಲಿ ಜನಿಸಿದವರೆಲ್ಲರಿಗೂ ಭಾರತರೆಂಬ ಹೆಸರು ಸಲ್ಲುತ್ತದೆ. ಇಂತು ಭರತ ವಂಶದಲ್ಲಿ ಜನಿಸಿದವರ ಚರಿತ್ರೆಯನ್ನು ಒಳಗೊಂಡಿರುವ ಗ್ರಂಥಕ್ಕೂ ಭಾರತವೆಂದು ಹೆಸರು ಇದನ್ನು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ೨೮ ನೆಯ ದ್ವಾಪರಯುಗಾಂತ್ಯ ಮತ್ತು ಕಲಿಯುಗದ ಆರಂಭ—ಈ ಸಂಧಿಯಲ್ಲಿ ಕೃಷ್ಣದ್ವೈಪಾಯನ ಮುನಿ ಮೂರು ವರ್ಷಗಳ ಕಾಲದಲ್ಲಿ ರಚಿಸಿದ. ಅತ್ಯುತ್ತಮವಾದ ಇತಿಹಾಸವೆಂದು ಪ್ರಖ್ಯಾತಿಗೊಂಡು ಐದನೆಯ ವೇದವೆಂದು ರೂಢವಾಗಿದೆ [ಭಾರ.-ಸ್ವರ್ಗಾ. ೫]. ಭಾರತದ ನಿರ್ಮಾಣಪ್ರದೇಶ, ಕಾಲ ಮತ್ತು ಅದರ ನಿರ್ಮಾಣಪ್ರಕಾರ ಮುಂತಾದದ್ದು [ಭಾರ.-ಆದಿ. ೧, ೬೨].

**ಭಾರತಯುದ್ಧ.**—ಕುರುಕ್ಷೇತ್ರದಲ್ಲಿ ಪಾಂಡು ಪುತ್ರರಿಗೂ ಧೃತರಾಷ್ಟ್ರ ಪುತ್ರರಿಗೂ ನಡೆದದ್ದು. ಆಗ ಪಾಂಡವರಲ್ಲಿ ೭ ಅಕ್ಷೌಹಿಣಿ, ಕೌರವರಲ್ಲಿ ೧೧ ಅಕ್ಷೌಹಿಣಿಗಳ ಸೈನ್ಯವಿದ್ದಿತು. ಮಹಾಭಾರತ ಯುದ್ಧಾನಂತರ ಪಾಂಡವರೈವರು, ಕೃಷ್ಣ, ಸಾತ್ಯಕಿ ಈ ಏಳು ಮಂದಿ, ಕೌರವರ ಕಡೆ ಅಶ್ವತ್ಥಾಮ, ಕೃಪ, ಕೃತವರ್ಮರೆಂಬ ಮೂವರು ಅಂತು ಹತ್ತು ಮಂದಿ ಮಾತ್ರವೇ ಉಳಿದು ಮಿಕ್ಕ ಸೈನ್ಯವೆಲ್ಲವೂ ಹದಿನೆಂಟು ದಿನಗಳಲ್ಲಿ ಹಾಳಾಯಿತು (ಒಂದು ಅಕ್ಷೌಹಿಣಿಗೆ ೨೧,೮೭೦ ಆನೆಗಳು, ೨೧,೮೭೦ ರಥಗಳು,

೬೫,೬೧೦ ಕುದುರೆಗಳು ಮತ್ತು ೧,೦೯,೩೫೦ ಕಾಲಾಳುಗಳು) [ಭಾರ.-ಸ್ತ್ರೀ. ೨೬]. ಭಾರತ ಯುದ್ಧ ನಡೆದ ಕಾಲ [ಭಾರ.-ಆದಿ. ೨. ಶ್ಲೋ. ೧೮೪]. ಆ ಕಾಲದಲ್ಲಿ ತಲೆದೋರಿದ ದುರ್ನಿಮಿತ್ತಗಳು [ಭೀಷ್ಮ. ೨].

**ಭಾರದ್ವಾಜ.**—(i) ಭರದ್ವಾಜ ಗೋತ್ರದಲ್ಲಿ ಜನಿಸಿದ ಒಬ್ಬ ಮಹರ್ಷಿ. ಆಪತ್ಕಾಲದಲ್ಲಿ ಆಚರಿಸಬೇಕಾದ ಧರ್ಮಗಳನ್ನು ಕುರಿತು ಶತ್ರುಂತಪ ರಾಜನೊಂದಿಗೆ ಸಂವಾದಮಾಡಿದ [ಭಾರ.-ಶಾಂತಿ. ೧೪೦].

(ii) ನೋಡು—ದ್ರೋಣ.

(iii) ಸತ್ಯವಂತನ ತಂದೆಯಾದ ದ್ಯುಮತ್ಸೇನನ ಆಪ್ತಸ್ನೇಹಿತನಾಗಿದ್ದ ಒಬ್ಬ ಮಹರ್ಷಿ [ಭಾರ.-ವನ. ೨೯೮].

**ಭಾರ್ಗವ**—(i) ಭೃಗು ವಂಶದಲ್ಲಿ ಜನಿಸಿದವರು. ಋಚೀಕ, ಜಮದಗ್ನಿ, ಪರಶುರಾಮ, ಶುಕ್ರಾಚಾರ್ಯ, ಶೌನಕ ಮುಂತಾದವರಿಗೆಲ್ಲ ಈ ಹೆಸರು ಸಲ್ಲುತ್ತದೆ.

(ii) ಒಂದು ದೇಶ [ಭಾರ -ಭೀಷ್ಮ. ೯].

(iii) ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ೨೫ ನೆಯ ವ್ಯಾಸ [ದೇ. ಭಾ.-೧-೪].

**ಭೀಮ.**—(i) ಈಶ್ವರನ ನಾಮಾಂತರ.

(ii) ಚಂದ್ರ ವಂಶದ ಇಲಿನ ರಾಜನ ಮಗ. ದುಷ್ಯಂತನ ಸಹೋದರ [ಭಾರ.-ಆದಿ. ೮೮].

(iii) ಕಶ್ಯಪ ಮುನಿಯ ಪತ್ನಿಯರಲ್ಲಿ ಒಬ್ಬಳಾದ ಮುನಿಯೆಂಬವಳಲ್ಲಿ ಜನಿಸಿದ ದೇವ ಗಂಧರ್ವರಲ್ಲಿ ಒಬ್ಬ [ಭಾರ.-ಆದಿ ೬೬].

(iv) ಪುರಾತನ ಕಾಲದ ಅರಸು. ವಿದರ್ಭ ದೇಶವನ್ನು ಆಳುತ್ತಿದ್ದ. ಈತನಿಗೆ ಬಹಳ ಕಾಲ ಸಂತಾನವಿಲ್ಲದಿದ್ದು ಕಡೆಗೆ ದಮನೆಂಬ ಮುನಿಯ ಅನುಗ್ರಹದಿಂದ ದಮ, ದಮನ, ದಾಂತರೆಂಬ ಮೂವರು ಪುತ್ರರನ್ನೂ ದಮಯಂತಿಯೆಂಬ ಕನ್ಯೆಯನ್ನೂ ಪಡೆದ. ನೋಡು—ದಮಯಂತಿ, ನಳ [ಭಾರ.-ವನ. ೫೦]

(v) ಪಾಂಡು ಪುತ್ರನಾದ ಭೀಮಸೇನನಿಗೂ ಈ ಹೆಸರು ಸಲ್ಲುತ್ತದೆ. ನೋಡು—ಭೀಮಸೇನ.

(vi) ಶಿವನ ಅಷ್ಟಮೂರ್ತಿಗಳಲ್ಲಿ ಒಬ್ಬ. ನೋಡು—ಅಷ್ಟಮೂರ್ತಿ.

**ಭೀಮರಥೀ.**—ಭಾರತ ದೇಶದ ಒಂದು ನದಿ. ಇದು ಸಹ್ಯಾದ್ರಿಯಿಂದ ಹುಟ್ಟಿ ಹರಿಯುತ್ತದೆ [ಭಾರ -ವನ. ೮೬. ಭೀ. ೯].

**ಭೀಮಸೇನ**—ಕುಂತಿಭೋಜನ ಮಗಳಾದ ಪೃಥೆಯಲ್ಲಿ ವಾಯುದೇವನ ಅನುಗ್ರಹದಿಂದ ಜನಿಸಿದವ. ಯುಧಿಷ್ಠಿರನ ತಮ್ಮ; ಅರ್ಜುನ ಇವನ ತಮ್ಮ; ನಕುಲ,

ಸಹದೇವರು ಇವನ ಬಲತಾಯ ಮಕ್ಕಳು. ಇವನಿಗೆ ವೃಕೋದರನೆಂಬುದು ನಾಮಾಂತರ [ಭಾರ.-ಆದಿ. ೧೨೯]. ಇವ ಎಳೆಯ ಮಗುವಾಗಿದ್ದಾಗ ಒಮ್ಮೆ ಕುಂತಿಯ ಮಡಿಲಿನಿಂದ ಉರುಳಿ ಶತಶೃಂಗ ಪರ್ವತದ ಮೇಲೆ ಬಿದ್ದ. ಆ ಪರ್ವತ ಪುಡಿಯಾಯಿತು [ಆದಿ. ೧೨೯]. ಚಿಕ್ಕಂದಿನಲ್ಲಿ ಆಟವಾಡುವಾಗ ದುರ್ಯೋಧನಾದಿಗಳನ್ನು ಸೋಲಿಸಿದ್ದು. ದುರ್ಯೋಧನ ಇವನಿಗೆ ವಿಷಮಿಶ್ರವಾದ ಅನ್ನವನ್ನು ತಿನ್ನಿಸಿ, ಹಾವುಗಳಿಂದ ಕಚ್ಚಿಸಿದ್ದು ಮುಂತಾಗಿ [ಆದಿ. ೧೩೭]. ಭೀಮ ಬಲರಾಮನಲ್ಲಿ ಗದಾಯುದ್ಧವನ್ನು ಅಭ್ಯಾಸ ಮಾಡಿದ್ದು [ಆದಿ ೧೫೧]. ಅರಗಿನ ಮನೆಯಿಂದ ತಪ್ಪಿಸಿಕೊಂಡು, ಜನನೀ ಸೋದರರೊಂದಿಗೆ ಅರಣ್ಯವನ್ನು ಸೇರಿದ್ದು. ಹಿಡಿಂಬನ ಸಂಗಡ ಯುದ್ಧ, ಹಿಡಿಂಬನ ಕೊಲೆ, ಹಿಡಿಂಬನ ತಂಗಿಯಾದ ಹಿಡಿಂಬೆ ಅಥವಾ ಕಮಲಪಾಲಿಕೆಯನ್ನು ಮದುವೆಯಾದದ್ದು [ಆದಿ. ೧೬೫-೧೬೮]. ಏಕಚಕ್ರ ನಗರದಲ್ಲಿ ವಾಸಮಾಡುವಾಗ ಅಲ್ಲಿಯ ಕುಂಬಾರನೊಬ್ಬನನ್ನು ಬೇಡಿ, ತನ್ನ ಭೋಜನಕ್ಕೆ ಅನುಕೂಲವಾದ ದೊಡ್ಡ ಮಣ್ಣಿನ ಪಾತ್ರೆಯನ್ನು ಪಡೆದದ್ದು [ಆದಿ. ೧೭೧]. ಇವ ಹತ್ತು ಸಾವಿರ ಆನೆಗಳ ಬಲವುಳ್ಳವ [ಆದಿ. ೧೩೯]. ಇವನ ಹಿರಿಯ ಹೆಂಡತಿ, ಹಿಡಿಂಬೆ ಇವಳಲ್ಲಿ ಹುಟ್ಟಿದ ಮಗ ಘಟೋತ್ಕಚ [ಆದಿ ೬೩] ಬಕಾಸುರನನ್ನು ಕೊಂದದ್ದು [ಆದಿ. ೧೭೭] ಕಾಶಿ ರಾಜನ ಮಗಳಾದ ಜಲಂಧರೆಯೆಂಬವಳು ಎರಡನೆಯ ಹೆಂಡತಿ. ಇವಳಲ್ಲಿ ಹುಟ್ಟಿದ ಮಗ ಶರ್ವತ್ರಾತ [ಆದಿ ೬೩]. ದ್ರೌಪದಿಯೇ ಪತ್ನಿಯರಲ್ಲಿ ಮುಖ್ಯಳಾದವಳು. ಇವಳಲ್ಲಿ ಶ್ರುತಸೋಮನೆಂಬ ಮಗನನ್ನು ಪಡೆದ [ಆದಿ. ೬೪]. ದ್ರೌಪದೀಸ್ವಯಂವರ ಸಮಯದಲ್ಲಿ ಶಲ್ಯರಾಜನನ್ನು ಯುದ್ಧದಲ್ಲಿ ಸೋಲಿಸಿದ್ದು [ಆದಿ. ೨೦೫]. ಯುಧಿಷ್ಠಿರನ ರಾಜಸೂಯಕ್ಕೆ ಮೊದಲು ಕೃಷ್ಣಾರ್ಜುನರೊಂದಿಗೆ ಜರಾಸಂಧನಲ್ಲಿಗೆ ಹೋಗಿ, ಬಾಹುಯುದ್ಧದಲ್ಲಿ ಜರಾಸಂಧನನ್ನು ಕೊಂದ [ಸಭಾ. ೨೫] ಮಯಾಸುರ ಬಿಂದುಸರೋವರದಿಂದ ಭೀಮನಿಗೆ ದಿವ್ಯವಾದ ಗದೆಯನ್ನು ತಂದುಕೊಟ್ಟದ್ದು [ಸಭಾ ೩] ರಾಜಸೂಯಯಾಗ ಸಮಯದಲ್ಲಿ ದಶಾರ್ಣ ದೇಶವನ್ನು ಗೆದ್ದುಬಂದದ್ದು [ಸಭಾ. ೩೦]. ದುರ್ಯೋಧನನ ತೊಡೆಯನ್ನು ಮುರಿದು, ಅವನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದು [ಸಭಾ. ೯೨]. ಅರಣ್ಯವಾಸ ಸಮಯದಲ್ಲಿ ಕಿಮ್ಮೀರನೆಂಬ ರಾಕ್ಷಸನನ್ನು ಕೊಂದದ್ದು [ವನ. ೧೧]. ಸೌಗಂಧಿಕ ಪುಷ್ಪವನ್ನು ತರುವುದಕ್ಕಾಗಿ ಹೊರಟಾಗ ದಾರಿಯಲ್ಲಿ ಹನೂಮಂತನನ್ನು ಸಂಧಿಸಿ, ಆತನೊಡನೆ ಸಂವಾದ [ವನ. ೧೪೯]. ಸೌಗಂಧಿಕ ಪುಷ್ಪವನ್ನು ತರುವಾಗ ತನ್ನನ್ನು ಅಡ್ಡಗಿಸಿದ ಮಣಿಮಂತನೆಂಬ ರಕ್ಕಸನನ್ನು ಕೊಂದದ್ದು [ವನ. ೧೬೧]. ನಹುಷ ಅಜಗರ ರೂಪದಿಂದ ಇವನನ್ನು ಹಿಡಿದದ್ದು [ವನ. ೧೮೦]. ಅಜ್ಞಾತವಾಸ ಸಮಯದಲ್ಲಿ ಇವನಿಗೆ ವಲಲನೆಂಬುದು ರೂಢಿಯಾದ ಹೆಸರು [ವಿರಾ. ೩]. ಪಾಂಡವರು ಅಜ್ಞಾತವಾಸ ಸಮಯದಲ್ಲಿ ಇವನನ್ನು ಜಯೇಶ

ನೆಂದು ಗೂಢವಾಗಿ ಕರೆಯುತ್ತಿದ್ದರು [ವಿರಾ. ೭]. ಇವ ಶೂದ್ರ [ವಿರಾ. ೧೦, ೩೬]. ವಿರಾಟ ನಗರದಲ್ಲಿ ಭೀಮ ಜೀಮೂತನೆಂಬ ಜಟ್ಟಿಯನ್ನು ಕೊಂದದ್ದು [ವಿರಾ. ೧೩]. ದ್ರೌಪದಿಯನ್ನು ಮಾನಭಂಗಪಡಿಸಲು ಯತ್ನಿಸಿದ ಕೀಚಕನನ್ನೂ, ಅವನ ತಮ್ಮಂದಿರಾದ ಉಪಕೀಚಕರನ್ನೂ ಕೊಂದದ್ದು [ವಿರಾ. ೨೬-೨೭] ದಕ್ಷಿಣ ಗೋಗ್ರಹಣದಲ್ಲಿ ಸುಶರ್ಮ ವಿರಾಟನನ್ನು ಸೆರೆಹಿಡಿದಿದ್ದಾಗ ಭೀಮ ಅವನನ್ನು ಬಿಡಿಸಿದ್ದು [ವಿರಾ. ೩೩]. ಧೃತರಾಷ್ಟ್ರ ಭೀಮನ ಪ್ರತಾಪವನ್ನು ವರ್ಣಿಸಿದ್ದು [ಉ. ೫೧]. ಭೀಮ ತನ್ನನ್ನು ತಾನೇ ಹೊಗಳಿಕೊಂಡದ್ದು [ಉದ್ಯೋ ೭೫, ೭೬ ಭೀಷ್ಮ ೧೦೨, ೧೧೩, ೧೧೪. ದ್ರೋ. ೨೦೧ ಶಲ್ಯ ೩೩, ೬೨]. ಭೀಮ ಅಷ್ಟಗುಣರಥ [ಉದ್ಯೋ. ೧೬೯]. ಇವನ ಶಂಖದ ಹೆಸರು ಪೌಂಡ್ರ [ಭೀ. ೨೫]. ಐದನೆಯ ದಿವಸದ ಯುದ್ಧದಲ್ಲಿ ದುರ್ಯೋಧನನನ್ನು ಸೋಲಿಸಿದ ಭೀಮ ದ್ರೋಣರ ಯುದ್ಧ [ಭೀಷ್ಮ ೭೭, ೭೮, ೭೯]. ಏಳನೆಯ ದಿನದಲ್ಲಿ ದುರ್ಯೋಧನನ ಎಂಟು ಮಂದಿ ತಮ್ಮಂದಿರನ್ನು ಕೊಂದು, ಭೀಷ್ಮನನ್ನು ಸೋಲಿಸಿದ [ಭೀ. ೮೮] ದ್ರೋಣನ ಸಾರಥಿಯನ್ನು ಕೊಂದದ್ದು [ಭೀ. ೭೫] ಹನ್ನೊಂದನೆಯ ದಿನದ ಯುದ್ಧದಲ್ಲಿ ಗದಾಯುದ್ಧಮಾಡಿ ಶಲ್ಯನನ್ನು ಸೋಲಿಸಿದ್ದು [ದ್ರೋ ೧೫] ಹದಿನಾಲ್ಕನೆಯ ದಿವಸದ ಹಗಲಿನ ಯುದ್ಧದಲ್ಲಿ ಭೀಮ ಕೆಲ ಮಂದಿ ಕೌರವರನ್ನು ಕೊಲ್ಲಲಾಗಿ ದ್ರೋಣ ಭೀಮನನ್ನು ಅಡ್ಡಗಿಸಿದ್ದು. ಭೀಮ ದ್ರೋಣನ ರಥವನ್ನು ಮುರಿದದ್ದು ಇಂತೆಯೇ ದ್ರೋಣನ ಎಂಟು ರಥಗಳನ್ನು ಮುರಿದು ಆ ಕಾಲಕ್ಕೆ ತನ್ನ ಬಳಿಗೆ ಬಂದ ಅರ್ಜುನನನ್ನು ಕಂಡು ಭೀಮ ಸಿಂಹನಾದ ಮಾಡಿದ್ದು ಅದನ್ನು ಕೇಳಿ ಯುಧಿಷ್ಠಿರ ಸಂತಸಗೊಂಡದ್ದು [ದ್ರೋ. ೧೨೮]. ಕರ್ಣನೊಂದಿಗೆ ಯುದ್ಧಮಾಡಿ ಅವನನ್ನು ಸೋಲಿಸಿದ್ದು ಕರ್ಣನಿಗೆ ಒತ್ತಾಸೆಮಾಡ ಬಂದ ದುರ್ಜಯನನ್ನು ಕೊಂದದ್ದು. ಕರ್ಣ ಓಡಿಹೋದದ್ದು. ದುರ್ಯೋಧನನ ಐವರು ತಮ್ಮಂದಿರನ್ನು ಕೊಂದದ್ದು ಕರ್ಣನಿಗೆ ಒತ್ತಾಸೆಮಾಡಬಂದ ವಿಕರ್ಣಾದಿಗಳ ವಧೆ [ದ್ರೋ ೧೨೯-೧೩೮]. ಭೀಮ ಕರ್ಣನಿಂದ ಸೋತದ್ದು [ದ್ರೋ. ೧೩೯]. ಕರ್ಣ ಭೀಮನನ್ನು ನಿಂದಿಸಿದ್ದು [ದ್ರೋ. ೧೪೬] ಹದಿನೈದನೆಯ ದಿನದ ಯುದ್ಧದಲ್ಲಿ ಭೀಮ, ದುರ್ಮದ, ದುಷ್ಕರ್ಣ ಮುಂತಾದ ಕೌರವರನ್ನು ಕೊಂದದ್ದು [ದ್ರೋ. ೧೫೬]. ಬಾಹ್ಲೀಕ ರಾಜನನ್ನೂ, ಹತ್ತು ಮಂದಿ ಕೌರವರನ್ನೂ, ಶಕುನಿಯ ಐವರು ತಮ್ಮಂದಿರನ್ನೂ ಕೊಂದದ್ದು [ದ್ರೋ. ೧೫೮]. ಬಕಾಸುರನ ತಮ್ಮನಾದ ಅಲಾಯುಧನೊಂದಿಗೆ ಯುದ್ಧ [ದ್ರೋ. ೧೭೮]. ಭೀಮ ಧೃಷ್ಟದ್ಯುಮ್ನನನ್ನು ಚುಚ್ಚುಮಾತುಗಳಿಂದ ಪ್ರೋತ್ಸಾಹಗೊಳಿಸಿ ದ್ರೋಣನ ವಧೆಗೆ ಪ್ರೇರಿಸಿ, ತಾನು ದ್ರೋಣನ ಸೈನ್ಯವನ್ನು ನುಗ್ಗಿದ್ದು [ದ್ರೋ. ೧೮೭-೧೯೮]. ಅವನ ತಲೆಯಮೇಲೆ ನಾರಾಯಣಾಸ್ತ್ರ ಜ್ವಲಿಸಿದ್ದು [ದ್ರೋ. ೨೦೦]. ಹದಿನಾರನೆಯ ದಿನ, ಸಾಲ್ವನ ಮಂತ್ರಿಯೂ ಸೇನಾ

ಪತಿಯೂ ಆಗಿದ್ದ ಕ್ಷೇಮಧೂರ್ತಿಯನ್ನು ಕೊಂದದ್ದು [ಕರ್ಣ. ೯] ಭೀಮ ಅಶ್ವತ್ಥಾಮನನ್ನು ಗೋಳಾಡಿಸಿದ್ದು [ಕರ್ಣ. ೧೭]. ದುರ್ಯೋಧನನನ್ನು ಯುದ್ಧದಲ್ಲಿ ಸೋಲಿಸಿ, ಅವನ ಗಜಸೇನೆಯನ್ನು ಮುರಿದದ್ದು [ಕರ್ಣ. ೪೦] ಕರ್ಣನನ್ನು ಕಿರುಗುಟ್ಟಿಸಿ, ಕೆಲ ಮಂದಿ ಕೌರವರನ್ನು ಕೊಂದದ್ದು [ಕರ್ಣ. ೪೬]. ತನ್ನ ಸಾರಥಿಯಾದ ವಿಶೋಕ ನೊಂದಿಗೆ ಸಂವಾದ [ಕರ್ಣ. ೮೦] ಶಕುನಿಯನ್ನು ಯುದ್ಧದಲ್ಲಿ ಸೋಲಿಸಿದ್ದು [ಕರ್ಣ. ೮೧]. ರಣಾಂಗಣದಲ್ಲಿ ಅರಸರೆಲ್ಲರೂ ನೋಡುತ್ತಿದ್ದಂತೆಯೇ ದುಶ್ಶಾಸನನ ತೋಳು ಗಳನ್ನು ಮುರಿದು, ಅವನ ಎದೆಯನ್ನು ಸಿಗಿದು, ರಕ್ತವನ್ನು ಪಾನಮಾಡಿದ್ದು [ಕರ್ಣ. ೮೬, ೮೭]. "ಪಶು, ಪಶು" ಎನ್ನುತ್ತ ದುಶ್ಶಾಸನನ ತಲೆಯಮೇಲೆ ತುಳಿದು ಕುಣಿದದ್ದು. ದುಶ್ಶಾಸನನ ತಮ್ಮಂದಿರನ್ನು ಕೆಲವರನ್ನು ಕೊಂದದ್ದು [ಕರ್ಣ. ೮೮]. ಹದಿನೆಂಟನೆಯ ದಿನದ ಯುದ್ಧದಲ್ಲಿ ಶಲ್ಯನೊಂದಿಗೆ ಗದಾಯುದ್ಧಮಾಡಿದ್ದು [ಶಲ್ಯ. ೧೧]. ದುರ್ಯೋಧನನ ಹೊರತು ಮಿಕ್ಕ ಅವನ ತಮ್ಮಂದಿರನ್ನೆಲ್ಲ ಕೊಂದದ್ದು [ಶಲ್ಯ. ೨೫, ೨೬]. ದುರ್ಯೋಧನ ಮಡುವಿನಲ್ಲಿ ಮುಳುಗಿದ್ದಾನೆಂಬ ಸುದ್ದಿಯನ್ನು ಬೇಡರ ಮೂಲಕ ತಿಳಿದ ಕೃಷ್ಣ ಭೀಮನನ್ನೂ ಇತರ ಪಾಂಡವರನ್ನೂ ಕರೆದುಕೊಂಡು ಅಲ್ಲಿಗೆ ಹೋದದ್ದು [ಶಲ್ಯ. ೩೦] ದುರ್ಯೋಧನನನ್ನು ಕೊಲ್ಲುವುದು ಭೀಮನಿಗೂ ಅಸಾಧ್ಯವೆಂಬುದಾಗಿ ಯುಧಿಷ್ಠಿರ ಕೃಷ್ಣನೊಂದಿಗೆ ಹೇಳಿದ್ದು ಆ ಮಾತಿಗೆ ಭೀಮ ತನ್ನ ಸಾಮರ್ಥ್ಯವನ್ನು ಬಣ್ಣಿಸಿ, ಅವನನ್ನು ಕೊಲ್ಲುವುದು ತನಗೆ ಅತಿ ಸುಲಭವೆಂದು ಹೇಳಿದ್ದು. ಕೃಷ್ಣಾದಿಗಳು ಅವನನ್ನು ಹೊಗಳಿದ್ದು ಭೀಮದುರ್ಯೋಧನರು ವೀರನಾದದೊಂದಿಗೆ ಗದಾಯುದ್ಧಕ್ಕೆ ಮೊದಲುಮಾಡಿದ್ದು ಆ ಕಾಲಕ್ಕೆ ಸರಿಯಾಗಿ ಬಲರಾಮ ಅಲ್ಲಿಗೆ ಬಂದದ್ದು [ಶಲ್ಯ ೩೩, ೩೪, ೫೪] ಭೀಮ ದುರ್ಯೋಧನರ ಗದಾಯುದ್ಧವರ್ಣನ [ಶಲ್ಯ ೫೬-೫೮] ಭೀಮ ದುರ್ಯೋಧನನ ತೊಡೆಯನ್ನು ಮುರಿದದ್ದು. ಅವ ತಮಗೆ ಮಾಡಿದ ಅಪಕಾರಗಳನ್ನೆಲ್ಲ ಎತ್ತಿ ಆಡಿ, ಅವನ ತಲೆಯಮೇಲೆ ಎಡಗಾಲಿನಿಂದ ತುಳಿದದ್ದು [ಶಲ್ಯ ೫೯, ೬೦]. ಇದನ್ನು ಸಹಿಸ ಲಾರದೆ ಬಲರಾಮ ಭೀಮನನ್ನು ಕೊಲ್ಲಹೋದದ್ದು. ಕೃಷ್ಣ ಅಣ್ಣನನ್ನು ಸಂತವಿ ಸಿದ್ದು [ಶಲ್ಯ. ೬೧] ಪಾಂಚಾಲಾದಿಗಳು ಭೀಮನನ್ನು ಹೊಗಳಿದ್ದು [ಶಲ್ಯ ೬೨]. ಉಪ ಪಾಂಡವರನ್ನೂ ಧೃಷ್ಟದ್ಯುಮ್ನನನ್ನೂ ಕೊಂದ ಸೇಡನ್ನು ತೀರಿಸಿಕೊಳ್ಳುವುದ ಕ್ಕಾಗಿ, ಅಶ್ವತ್ಥಾಮನನ್ನು ಕೊಲ್ಲುವುದಕ್ಕೆ ಹೊರಟದ್ದು [ಸೌ. ೧೧] ಪುತ್ರಶೋಕ ಪೀಡಿತೆಯಾದ ದ್ರೌಪದಿಯನ್ನು ಸಂತವಿಸಿದ್ದು [ಶಲ್ಯ ೧೬] ತಾನು ದುರ್ಯೋಧನ ನನ್ನು ಕೊಂದದ್ದು ನ್ಯಾಯವೆಂಬುದಾಗಿ ಗಾಂಧಾರಿಯೊಂದಿಗೆ ಚರ್ಚೆಮಾಡಿದ್ದು [ಸ್ತ್ರೀ. ೧೪]. ದುರ್ಯೋಧನನ ಶ್ರಾದ್ಧಕ್ಕಾಗಿ ಧೃತರಾಷ್ಟ್ರ ಹಣವನ್ನು ಕೇಳಲಾಗಿ ಭೀಮ ಕೊಡಕೂಡದೆಂದದ್ದು [ಆಶ್ರ. ೧೭]. ಧೃತರಾಷ್ಟ್ರನಿಗೆ ವೈರಾಗ್ಯ ಹುಟ್ಟುವುದ

ಕ್ಕಾಗಿ ಭೀಮ ಆತನನ್ನು ಬಿರುನುಡಿದದ್ದು [ಆಶ್ರ ೩]. ಮಹಾಪ್ರಸ್ಥಾನ ಸಮಯ ದಲ್ಲಿ ದೇಹಪಾತ [ಮಹಾ. ೨]

(ii) ಪಾಂಡವರಿಗಿಂತಲೂ ಹಿಂದಣ ಅದೇ ವಂಶದ ಒಬ್ಬ ಅರಸು ನೋಡು —ಪರಿಶ್ರವ [ಭಾರ.-ಆದಿ. ೬೩, ೧೦೩].

(iii) ಅಭಿಮನ್ಯು ಪುತ್ರನಾದ ಪರೀಕ್ಷಿದ್ರಾಜನ ಮಗ. ಜನಮೇಜಯನ ಒಡಹುಟ್ಟಿದವ [ಭಾರ -ಆದಿ. ೩].

**ಭೀಮಾ.**—ಭೀಮರಥೀ ನದಿಯ ನಾಮಾಂತರ.

**ಭೀಷಣ**—ಬಕಾಸುರನ ಮಗ ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ಅರ್ಜುನನಿಂದ ಹತನಾದ [ಜೈ ೨೨].

**ಭೀಷ್ಮ.**—ಶಂತನು ಚಕ್ರವರ್ತಿಯಿಂದ ಗಂಗೆಯಲ್ಲಿ ಜನಿಸಿದ ಎಂಟು ಮಂದಿ ಪುತ್ರರಲ್ಲಿ ಕಡೆಯವ. ನೋಡು—ಅಂಬಾ, ಅಂಬಿಕಾ, ಅಂಬಾಲಿಕಾ, ಅಷ್ಟವಸು, ಗಂಗಾ, ಪರಶುರಾಮ ಈತ ವಸುವಿನ ಅವತಾರ [ಭಾರ -ಆದಿ ೬೩, ೬೪, ೬೭ ವಿರಾ. ೩೭]. ವಸಿಷ್ಠಮುನಿಯ ಶಾಪದಿಂದ ಭೂಮಿಯಲ್ಲಿ ಅವತರಿಸಿದವ. ಈತ ಜನಿಸಿದ ಕೂಡಲೇ ಗಂಗೆ ಈತನನ್ನು ಕರೆದುಕೊಂಡು ತನ್ನ ಲೋಕಕ್ಕೆ ಹೋದದ್ದು [ಆದಿ. ೧೦೬] ಮತ್ತೊಮ್ಮೆ ಶಂತನು ಚಕ್ರವರ್ತಿ ಗಂಗಾ ತೀರಕ್ಕೆ ಬಂದಿದ್ದಾಗ ಗಂಗೆ ಭೀಷ್ಮನನ್ನು ಶಂತನುವಿಗೆ ಒಪ್ಪಿಸಿದಳು (ಈ ಸಮಯಕ್ಕೆ ಭೀಷ್ಮ ಬಾಲ್ಯ ವನ್ನು ಕಳೆದು, ಪರಶುರಾಮನಲ್ಲಿ ಧನುರ್ವಿದ್ಯಾಭ್ಯಾಸವನ್ನು ಮುಗಿಸಿದ್ದ). ಬಳಿಕ ಶಂತನು ಭೀಷ್ಮನನ್ನು ಪಟ್ಟಣಕ್ಕೆ ಕರೆದೊಯ್ದು ಆತನಿಗೆ ಯೌವರಾಜ್ಯಾಭಿಷೇಕ ಮಾಡಿದ ಕೆಲಕಾಲದ ಬಳಿಕ ಶಂತನು ದಾಶರಾಜನ ಪಾಲಿತಪುತ್ರಿಯಾದ ಸತ್ಯವತಿ ಯನ್ನು ಕಂಡು ಮೋಹಭರಿತನಾಗಿ, ಆಕೆಯನ್ನು ತನಗೆ ಕೊಡುವಂತೆ ದಾಶರಾಜ ನನ್ನು ಕೇಳಲಾಗಿ, ದಾಶರಾಜ ಸತ್ಯವತಿಯ ಗರ್ಭದಲ್ಲಿ ಜನಿಸಿದ ಮಗನಿಗೆ ರಾಜ್ಯಾಧಿ ಕಾರವನ್ನು ಕೊಡುವುದಕ್ಕೆ ಸಮ್ಮತಿಸುವುದಾದರೆ, ತಾನು ಸತ್ಯವತಿಯನ್ನು ಶಂತನು ವಿಗೆ ಕೊಡುವೆನೆಂದ ಶಂತನು ಇದಕ್ಕೆ ಸಮ್ಮತಿಸದೆ, ಮನೆಗೆ ಬಂದು ಚಿಂತಾಕ್ರಾಂತ ನಾಗಿರುವಲ್ಲಿ ಈ ವಿಷಯವನ್ನು ಮಂತ್ರಿಗಳ ಮೂಲಕ ತಿಳಿದ ಭೀಷ್ಮ ದಾಶರಾಜ ನಲ್ಲಿಗೆ ಹೋಗಿ, ಆತನ ಕೋರಿಕೆಗೆ ಸಮ್ಮತಿಸಿ, ಆತನಿಗೆ ನಂಬುಗೆ ಹುಟ್ಟುವುದಕ್ಕಾಗಿ, ತಾನು ಮದುವೆಯೇ ಆಗುವುದಿಲ್ಲವೆಂದು ಮುಂತಾಗಿ ಭಯಂಕರ ಪ್ರತಿಜ್ಞೆಯನ್ನು ಮಾಡಿ, ಸತ್ಯವತಿಯನ್ನು ತಂದು ಶಂತನುವಿಗೆ ಮದುವೆಮಾಡಿ, ಸಂತುಷ್ಟನಾದ ಶಂತನುವಿನಿಂದ ಸ್ವೇಚ್ಛಾಮರಣರೂಪವಾದ ವರವನ್ನು ಪಡೆದು, ಸತ್ಯವ್ರತ, ದೇವ ವ್ರತ ಮುಂತಾದ ಹೆಸರುಗಳನ್ನು ಪಡೆದ [ಆದಿ. ೧೦೭]. ಶಂತನುವಿನ ಮರಣಾ ನಂತರ ಸತ್ಯವತಿಯ ಮಗನಾದ ವಿಚಿತ್ರವೀರ್ಯನಿಗಾಗಿ ಕಾಶಿರಾಜನ ಪುತ್ರಿಯರಾದ

ಅಂಬಾ, ಅಂಬಾಲಿಕಾ, ಅಂಬಿಕೆಯರನ್ನು ಅಪಹರಿಸಿ ತಂದದ್ದು. ಅಂಬೆ ವಿಚಿತ್ರವೀರ್ಯನನ್ನು ಮದುವೆಯಾಗಲು ಸಮ್ಮತಿಸದಿದ್ದಾಗ, ಆಕೆಯನ್ನು ಅವಳ ಇಷ್ಟಾನುಸಾರ, ಸಾಲ್ವರಾಜನಲ್ಲಿಗೆ ಕಳುಹಿದ್ದು. ಸಾಲ್ವರಾಜನೊಂದಿಗೆ ಯುದ್ಧ [ಆದಿ. ೧೦೮, ೧೦೯]. ವಿಚಿತ್ರವೀರ್ಯನ ಮರಣಾನಂತರ ರಾಜ್ಯಕ್ಕೆ ಉತ್ತರಾಧಿಕಾರಿಯಿಲ್ಲದ ಕಾರಣ ಸತ್ಯವತಿ ಭೀಷ್ಮನನ್ನು ಅಂಬಿಕಾ, ಅಂಬಾಲಿಕೆಯರಲ್ಲಿ ಸಂತಾನವನ್ನುಂಟುಮಾಡುವಂತೆ ಪ್ರೇರಿಸಿದ್ದು. ಭೀಷ್ಮ ಅದಕ್ಕೆ ಒಪ್ಪದಿದ್ದದ್ದು [ಆದಿ. ೧೧೨]. ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುಹೋದರೆಂಬ ಸುದ್ದಿಯನ್ನು ಕೇಳಿ ಭೀಷ್ಮ ಪ್ರಲಾಪಿಸಿ, ವಿದುರನ ಮೂಲಕ ವಾಸ್ತವಾಂಶವನ್ನು ತಿಳಿದು ಸಂತೋಷಿಸಿದ್ದು [ಆದಿ ೧೬೨]. ದ್ರೌಪದೀ ಸ್ವಯಂವರಾನಂತರ ಪಾಂಡವರು ಬದುಕಿರುವರೆಂಬ ಸುದ್ದಿಯನ್ನು ಕೇಳಿ ಮಿಕ್ಕ ಅರಸರೆಲ್ಲರೂ ಭೀಷ್ಮನನ್ನು ನಿಂದಿಸಿದ್ದು. ಪಾಂಡವರನ್ನು ಕರೆತರಿಸಿ ಅವರಿಗೆ ಸಲ್ಲಬೇಕಾದ ರಾಜ್ಯವನ್ನು ಕೊಡಬೇಕೆಂದು ಭೀಷ್ಮ ಹೇಳಿದ್ದು [ಆದಿ ೨೦೭, ೨೨೪]. ಪಾಂಡವರ ರಾಜಸೂಯಯಾಗ ಮುಗಿಯುವಾಗ, ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡುವಂತೆ ಭೀಷ್ಮ ಸಹದೇವನಿಗೆ ಸೂಚಿಸಿದ್ದು [ಸಭಾ. ೩೯] ಶಿಶುಪಾಲ ಕೃಷ್ಣನನ್ನು ನಿಂದಿಸುತ್ತಿದ್ದಾಗ ಭೀಷ್ಮ ಶಿಶುಪಾಲನಿಗೆ ಕೃಷ್ಣನ ಮಹಿಮೆಯನ್ನು ತಿಳಿಸಿದ್ದು [ಸಭಾ ೪೧-೬೧]. ಭೀಷ್ಮ ಶಿಶುಪಾಲನ ಬಾಲಚರಿತ್ರೆಯನ್ನು ವಿವರಿಸಿದ್ದು [ಸಭಾ ೬೬-೬೮] ಭೀಷ್ಮ ದ್ರೋಣಾದಿಗಳ ಸಂಗಡ ದ್ಯೂತಸಭೆಯನ್ನು ಹೊಕ್ಕದ್ದು [ಸಭಾ. ೮೫]. ದುರ್ಯೋಧನ ಪಾಂಡವರ ಸುಳಿವನ್ನು ಕಂಡುಹಿಡಿಯಲು ಸಾಹಸಪಡುತ್ತಿದ್ದಾಗ, ಭೀಷ್ಮ ಅವರೊಂದಿಗೆ ಸಂಧಿ ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಹೇಳಿದ್ದು [ವಿರಾ. ೩೧] ಸುಶರ್ಮನನ್ನು ದಕ್ಷಿಣ ಗೋಗ್ರಹಣಕ್ಕೆ ಕಳುಹಲು ಭೀಷ್ಮ ಸಮ್ಮತಿಸಿದ್ದು [ವಿರಾ ೩೨] ದುರ್ಯೋಧನ ಕರ್ಣ ಶಕುನಿಗಳ ಸಂಗಡ ದ್ರೋಣ ಕೃಪ ಅಶ್ವತ್ಥಾಮಾದಿ ಪರಿವಾರ ಸಮೇತನಾಗಿ ಭೀಷ್ಮ ಉತ್ತರ ಗೋಗ್ರಹಣಕ್ಕೆ ಹೊರಟದ್ದು [ವಿರಾ. ೩೭] ಉತ್ತರ ಗೋಗ್ರಹಣ ಸಮಯದಲ್ಲಿ ಕರ್ಣನಿಗೂ ಅಶ್ವತ್ಥಾಮನಿಗೂ ವಾಗ್ಯುದ್ಧಕ್ಕೆ ಮೊದಲಿಟ್ಟಾಗ ಭೀಷ್ಮ ಅವರನ್ನು ಸಮಾಧಾನಪಡಿಸಿದ್ದು [ವಿರಾ. ೫೧]. ಅಜ್ಞಾತವಾಸದ ಗಡು ಮುಗಿಯಲಿಲ್ಲವೆಂದು ದುರ್ಯೋಧನ ಹರಹಿಡಿದಾಗ ಭೀಷ್ಮ ಆ ವಿಷಯವನ್ನು ಪರಿಷ್ಕರಿಸಿದ್ದು. ಯುದ್ಧಕ್ಕೆ ಸೇನೆಯನ್ನು ಅಣಿಮಾಡಿದ್ದು [ವಿರಾ. ೫೨, ೭೭]. ಅರ್ಜುನನನ್ನು ಗುರುತಿಸಿದ ಭೀಷ್ಮ ಅವನ ಮೇಲೆ ಬೀಳಹೋದದ್ದು. ಅವರಿಬ್ಬರ ಯುದ್ಧ [ವಿರಾ. ೫೫, ೫೭, ೬೨]. ಅರ್ಜುನನಿಂದ ಭೀಷ್ಮ ಸೋತದ್ದು [ವಿರಾ. ೬೩]. ಅದೇ ಸಮಯದಲ್ಲಿ ದುರ್ಯೋಧನ ಹೆದರಿ ಓಡಿಹೋಗುತ್ತಿದ್ದಾಗ ಭೀಷ್ಮ ಅವನನ್ನು ಕಾಪಾಡಿದ್ದು [ವಿರಾ. ೬೭]. ಪಾಂಡವರ ವನವಾಸ ಮತ್ತು ಅಜ್ಞಾತವಾಸದ

ಗಡು ಮುಗಿಯಲಿಲ್ಲವೆಂಬ ವಿಷಯವಾಗಿ ಕರ್ಣನೊಂದಿಗೆ ವಿವಾದ [ಉದ್ಯೋ. ೨೧]. ಕೃಷ್ಣಾರ್ಜುನರು ನಾರಾಯಣ ಮತ್ತು ನರರ ಅವತಾರವೆಂಬ ವಿಷಯವನ್ನು ಭೀಷ್ಮ ದುರ್ಯೋಧನನಿಗೆ ತಿಳಿಸಿದ್ದು. ಭೀಷ್ಮನ ಮಾತನ್ನು ಧೃತರಾಷ್ಟ್ರನೂ ಅಲ್ಲಗಳೆದದ್ದು [ಉದ್ಯೋ. ೪೯]. ಭೀಷ್ಮ ಯುದ್ಧಕ್ಕೆ ಸಮ್ಮತಿಸದಿರಲು, ದುರ್ಯೋಧನ ಭೀಷ್ಮನಿಲ್ಲದೆಯೇ ತಾನು ಜಯಶಾಲಿಯಾಗುವೆನೆಂದು ಕೊಚ್ಚಿದ್ದು [ಉದ್ಯೋ. ೫೮]. ಭೀಷ್ಮ ಕರ್ಣನನ್ನು ಹೀಯಾಳಿಸಿದ್ದು. ಭೀಷ್ಮ ಸಾಯುವವರೆಗೂ ತಾನು ಆಯುಧವನ್ನು ಹಿಡಿಯುವುದಿಲ್ಲವೆಂದು ಕರ್ಣ ಪ್ರತಿಜ್ಞೆಮಾಡಿದ್ದು. ಈ ಮಾತನ್ನು ಕೇಳಿ ಭೀಷ್ಮ ಸಿಟ್ಟುಗೊಂಡು ತಾನು ಪ್ರತಿನಿತ್ಯವೂ ಹತ್ತು ಸಾವಿರ ಮಂದಿ ಯುದ್ಧ ವೀರರನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿದ್ದು [ಉದ್ಯೋ ೬೨]. ಭೀಷ್ಮ ಪಾಂಡವ ಪಕ್ಷಪಾತಿಯೆಂದು ದುರ್ಯೋಧನ ಆತನನ್ನು ಹಂಗಿಸಿ, ಭೀಷ್ಮನ ಸಹಾಯವಿಲ್ಲದೆಯೇ ಕರ್ಣನ ಸಹಾಯದಿಂದ ತಾನು ಪಾಂಡವರನ್ನು ಗೆಲ್ಲುವೆನೆಂದದ್ದು [ಉದ್ಯೋ. ೬೩]. ಕೃಷ್ಣ ರಾಯಭಾರಿಯಾಗಿ ಬಂದಿದ್ದಾಗ ದುರ್ಯೋಧನ ಆತನಿಗೆ ಮನ್ನಣೆಮಾಡಬಾರದೆಂದದ್ದು. ಭೀಷ್ಮ ದುರ್ಯೋಧನನನ್ನು ಹೀಯಾಳಿಸಿ ಸಭೆಯಿಂದ ಹೊರಬಂದದ್ದು [ಉ. ೮೮]. ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ಭೀಷ್ಮ ದುರ್ಯೋಧನನಿಗೆ ತಿಳಿಯಹೇಳಿದ್ದು [ಉದ್ಯೋ ೧೨೬, ೧೨೭]. ದುರ್ಯೋಧನ ಭೀಷ್ಮನಿಗೆ ಸೇನಾಪತ್ಯದಲ್ಲಿ ಪಟ್ಟಗಟ್ಟಿದ್ದು [ಉದ್ಯೋ ೧೫೬]. ಭೀಷ್ಮ ತನ್ನ ಸಾಮರ್ಥ್ಯವನ್ನು ಬಣ್ಣಿಸಿ ದುರ್ಯೋಧನನಿಗೆ ಅಭಯಕೊಟ್ಟದ್ದು [ಉದ್ಯೋ. ೧೬೫]. ಭೀಷ್ಮ ಕರ್ಣನನ್ನು ಅರ್ಧರಥಿಕನನ್ನಾಗಿ ಲೆಕ್ಕಿಸಿದ್ದು. ಭೀಷ್ಮಕರ್ಣರ ವಾಗ್ಯುದ್ಧ. ಭೀಷ್ಮ ಪಾಂಡವರ ಸೈನ್ಯದಲ್ಲಿ ರಥಾತಿರಥರನ್ನು ಲೆಕ್ಕಿಸಿದ್ದು [ಉದ್ಯೋ. ೧೬೮-೧೭೧]. ಶಿಖಂಡಿ ಮೊದಲು ಹೆಂಗಸೆಂಬ ವಿಷಯವನ್ನು ತಿಳುಹಿ, ತಾನು ಅವನ ಸಂಗಡ ಮಾತ್ರ ಯುದ್ಧಮಾಡುವುದಿಲ್ಲವೆಂಬುದನ್ನು ಭೀಷ್ಮ ದುರ್ಯೋಧನನಿಗೆ ತಿಳಿಸಿದ್ದು [ಉದ್ಯೋ. ೧೭೨] ಭೀಷ್ಮ ಅಂಬಾ, ಅಂಬಾಲಿಕಾ, ಅಂಬಿಕೆಯರ ಚರಿತ್ರೆಯನ್ನು ವಿವರಿಸಿದ್ದು. ಪರಶುರಾಮ ಭೀಷ್ಮರ ಯುದ್ಧ. ಶಿಖಂಡಿಯ ಚರಿತ್ರೆ [ಉದ್ಯೋ. ೧೭೩-೧೯೩]. ಈತ ತಾಲಧ್ವಜ [ಉದ್ಯೋ. ೧೫೦]. ಭೀಷ್ಮವಧ ಕಥೆ (ಸಂಗ್ರಹ) [ಭೀ. ೧೩] ದುರ್ಯೋಧನ ಭೀಷ್ಮನನ್ನು ಕಾಪಾಡಲು ದುಶ್ಶಾಸನನನ್ನು ಆತನ ಮೈಗಾವಲಿಗೆ ನಿಯಮಿಸಿದ್ದು [ಭೀ. ೧೫]. ಮೊದಲನೆಯ ದಿನ ಭೀಷ್ಮ ವಿರಾಟಪುತ್ರನಾದ ಶ್ವೇತನನ್ನು ಕೊಂದದ್ದು [ಭೀ. ೪೮]. ಎರಡನೆಯ ದಿನ ಭೀಷ್ಮ ವ್ಯೂಹರಚನೆ ಮಾಡಿದ್ದು [ಭೀ ೫೧]. ಎರಡನೆಯ ದಿನ ಭೀಷ್ಮಾರ್ಜುನರ ಯುದ್ಧ [ಭೀ. ೫೨]. ನಾಲ್ಕನೆಯ ದಿನ ಭೀಷ್ಮಾರ್ಜುನರ ಯುದ್ಧ [ಭೀ. ೬೦]. ಮೂರನೆಯ ದಿನ ಭೀಷ್ಮ ಅರ್ಜುನನನ್ನು ಇದಿರಿಸಿ ಘೋರನಾಗಿ ಯುದ್ಧಮಾಡುತ್ತಿದ್ದಾಗ, ಶ್ರೀ ಕೃಷ್ಣ ತನ್ನ

ಪ್ರತಿಜ್ಞೆಯನ್ನು ಮರೆತು ಚಕ್ರವನ್ನು ಹಿಡಿದು ಭೀಷ್ಮನನ್ನು ಕೊಲ್ಲಹೋದದ್ದು [ಭೀ. ೫೯]. ಐದನೆಯ ದಿನ ಭೀಷ್ಮ ದುರ್ಯೋಧನನಿಗೆ ಕೃಷ್ಣನ ಮಹಿಮೆಯನ್ನು ಬಣ್ಣಿಸಿ, ಕೃಷ್ಣ ಎಲ್ಲಿದ್ದರೆ ಅಲ್ಲಿ ಜಯ "ಯತೋ ಧರ್ಮಸ್ತತಃ ಕೃಷ್ಣಃ ಯತಃ ಕೃಷ್ಣಸ್ತತೋ ಜಯಃ" ಎಂದು ಹೇಳಿ, ಕೃಷ್ಣನನ್ನು ನಾನಾ ಪರಿಯಿಂದ ಹೊಗಳಿ, ಪಾಂಡವರೊಂದಿಗೆ ಸಂಧಿಮಾಡಿಕೊಳ್ಳಹೇಳಿದ್ದು [ಭೀ ೬೮, ೬೯] ಆರನೆಯ ದಿನದ ರಾತ್ರಿ ದುರ್ಯೋಧನ ಭೀಷ್ಮನಲ್ಲಿ ಮೊರೆಯಿಟ್ಟದ್ದು ಭೀಷ್ಮ ದುರ್ಯೋಧನನನ್ನು ಸಂತೋಷಪಡಿಸಿದ್ದು [ಭೀ. ೮೦, ೮೧]. ಎಂಟನೆಯ ರಾತ್ರಿ ಕರ್ಣ ದುರ್ಯೋಧನನನ್ನು ಕುರಿತು "ಭೀಷ್ಮ ಶಸ್ತ್ರವನ್ನು ಕೆಳಗಿಟ್ಟಪಕ್ಷದಲ್ಲಿ ನಾನು ಪಾಂಡವರನ್ನು ಅನಾಯಾಸವಾಗಿ ಗೆಲ್ಲುತ್ತೇನೆ" ಎಂದು ಹೇಳಿದ್ದು ಆ ಮಾತಿನಂತೆ ದುರ್ಯೋಧನ ಭೀಷ್ಮನಲ್ಲಿಗೆ ಬಂದು ಕರ್ಣನಿಗೆ ಸೇನಾಧಿಕಾರವನ್ನು ಕೊಟ್ಟುಬಿಡುವಂತೆ ಭೀಷ್ಮನಿಗೆ ಹೇಳಿದ್ದು. ಭೀಷ್ಮ ಅರ್ಜುನನನ್ನು ಗೆಲ್ಲುವುದು ಅಸಾಧ್ಯವೆಂದು ಮುಂತಾಗಿ ಹೇಳಿ, ಮಾರುದಿನ ಶಿಖಂಡಿಯ ಹೊರತು ದ್ರುಪದ ಮುಂತಾದ ಶೂರರನ್ನು ತಾನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದು [ಭೀ ೯೭, ೯೮] ಒಂಬತ್ತನೆಯ ದಿನ ಭೀಷ್ಮ ರಣರಂಗದಲ್ಲಿ ವಿಜೃಂಭಿಸಲು, ಕೃಷ್ಣ ಆತನನ್ನು ಕೊಲ್ಲುವುದಕ್ಕಾಗಿ ರಥದಿಂದ ಇಳಿದು ಓಡಿಹೋದದ್ದು [ಭೀ ೧೦೬]. ಅದೇ ರಾತ್ರಿಯಲ್ಲಿ ಯುಧಿಷ್ಠಿರ ಕೃಷ್ಣನೊಂದಿಗೆ ಯೋಚಿಸಿ, ಭೀಷ್ಮನ ಬಳಿಸಾರಿ, ಆತನ ವಧೆಗೆ ಉಪಾಯವೇನೆಂದು ಬೇಡಿದ್ದು. ಭೀಷ್ಮ ಶಿಖಂಡಿಯ ವೃತ್ತಾಂತವನ್ನು ತಿಳುಹಿದ್ದು [ಭೀ ೧೦೭]. ಭೀಷ್ಮನೊಂದಿಗೆ ಶಿಖಂಡಿಯ ಯುದ್ಧಸನ್ನಾಹ, ಶಿಖಂಡಿಯ ಪ್ರತಾಪವರ್ಣನೆ, ಭೀಷ್ಮದುರ್ಯೋಧನರ ಸಂವಾದ, ಭೀಷ್ಮಪರಾಕ್ರಮವರ್ಣನೆ [ಭೀ ೧೦೮, ೧೦೯, ೧೧೮] ಭೀಷ್ಮ ಯುದ್ಧಮಾಡಲೊಲ್ಲದೆ ಯುಧಿಷ್ಠಿರನಿಗೆ ತನ್ನನ್ನು ಕೊಲ್ಲುವಂತೆ ಸೂಚಿಸಿದ್ದು [ಭೀ. ೧೧೪] ಭೀಷ್ಮ ಶಸ್ತ್ರತ್ಯಾಗಮಾಡಿ ನೆಲದಮೇಲೆ ಬಿದ್ದದ್ದು [ಭೀ. ೧೧೯] ರಣರಂಗದಲ್ಲಿದ್ದ ಅರಸರೆಲ್ಲರೂ ಕುರು ಪಾಂಡವರೊಡಗೂಡಿ ಭೀಷ್ಮನಲ್ಲಿಗೆ ಬಂದು ಆತನ ಅಡಿದಾವರೆಗಳಿಗೆ ನಮಸ್ಕರಿಸಿದ್ದು. ಅರ್ಜುನ ಭೀಷ್ಮನಿಗೆ ಅಂಬಿನ ಹಾಸುಗೆ, ದಿಂಬುಗಳನ್ನು ಕಲ್ಪಿಸಿದ್ದು [ಭೀ. ೧೨೦]. ನೀರಡಿಕೆಯಿಂದ ಬಳಲಿದ್ದ ಭೀಷ್ಮ ಪಾನೀಯವನ್ನು ಬೇಡಿದ್ದು. ಮಿಕ್ಕ ಅರಸರು ತಂದುಕೊಟ್ಟ ಜಲವನ್ನು ಅಲ್ಲಗಳೆದು ಭೀಷ್ಮ ಅರ್ಜುನನನ್ನು ಬೇಡಿದ್ದು. ಅರ್ಜುನ ಪರ್ಜನ್ಯಾಸ್ತ್ರದಿಂದ ಭೂಮಿಯನ್ನು ಭೇದಿಸಿ, ಪಾತಾಳಗಂಗೆಯಿಂದ ಭೀಷ್ಮನ ದಾಹವನ್ನು ಶಾಂತಿಗೊಳಿಸಿದ್ದು. ಭೀಷ್ಮ ದುರ್ಯೋಧನನಿಗೆ ಅರ್ಜುನನ ಪರಾಕ್ರಮವನ್ನು ಬಣ್ಣಿಸಿ, ಅವನೊಡನೆ ಸಂಧಿಮಾಡಿಕೊಳ್ಳಹೇಳಿದ್ದು [ಭೀ. ೧೨೧]. ಅಂದಿನ ರಾತ್ರಿ ಎಲ್ಲರೂ ಹೊರಟುಹೋದ ಬಳಿಕ, ಕರ್ಣ ರಹಸ್ಯವಾಗಿ ಭೀಷ್ಮನಲ್ಲಿಗೆ ಹೋಗಿ ನಮಸ್ಕರಿಸಿ,

ತನ್ನ ದುಡುಕತನವನ್ನು ಮನ್ನಿಸಬೇಡಿದ್ದು. ಭೀಷ್ಮ ಕರ್ಣನಿಗೆ ಅವ ಕುಂತಿಯ ಮಗನೆಂಬುದನ್ನು ತಿಳುಹಿ ಪಾಂಡವರೊಂದಿಗೆ ಸೇರಹೇಳಿದ್ದು. ಕರ್ಣ ಯುಕ್ತಿಯಿಂದ ತಪ್ಪಿಸಿಕೊಂಡು ಭೀಷ್ಮನನ್ನು ಕ್ಷಮೆ ಬೇಡಿ ಶಿಬಿರಕ್ಕೆ ಬಂದದ್ದು [ಭೀ. ೧೨೨]. ಗಾಂಧಾರಿ ಅಂಬಿನ ಹಾಸುಗೆಯಲ್ಲಿ ಪವಡಿಸಿದ್ದ ಭೀಷ್ಮನನ್ನು ಕಂಡು, ಮನಮರುಗಿ ಕೃಷ್ಣನಿಗೆ ತೋರಿದ್ದು [ಸ್ತ್ರೀ. ೨೩]. ಧರ್ಮರಹಸ್ಯಗಳನ್ನು ಕೇಳಿ ತಿಳಿಯುವುದಕ್ಕಾಗಿ ಕೃಷ್ಣ ಯುಧಿಷ್ಠಿರನನ್ನು ಭೀಷ್ಮನ ಬಳಿಗೆ ಹೋಗಹೇಳಿದ್ದು. ಯುಧಿಷ್ಠಿರನ ಪ್ರಾರ್ಥನಾನುಸಾರ ಕೃಷ್ಣ ಪಾಂಡವರ ಸಂಗಡ ಭೀಷ್ಮನಲ್ಲಿಗೆ ಬಂದದ್ದು. ಭೀಷ್ಮ ಕೃಷ್ಣನನ್ನು ಹೊಗಳಿದ್ದು (ಈ ಸ್ತೋತ್ರವನ್ನೇ ಭೀಷ್ಮಸ್ತವರಾಜವೆನ್ನುತ್ತಾರೆ) [ಶಾಂತಿ ೪೫, ೪೭ ಭಾಗ.-೧-೯]. ಶ್ರೀ ಕೃಷ್ಣ ಯುಧಿಷ್ಠಿರನಿಗೆ ಧರ್ಮೋಪದೇಶಮಾಡುವಂತೆ ಭೀಷ್ಮನಿಗೆ ಹೇಳಿದ್ದು. ಭೀಷ್ಮ ಕೃಷ್ಣನನ್ನು ತನಗೆ ಶ್ರೇಯಸ್ಸು ಉಂಟಾಗುವಂತೆ ಬೇಡಿದ್ದು. ಅದನ್ನು ಕೃಷ್ಣ ಅನುಮೋದಿಸಿದ್ದು [ಶಾಂತಿ. ೪೯-೫೦]. ತನ್ನ ದೇಹವೆಲ್ಲವೂ ಅಂಬುಗಳಿಂದ ಗಾಯಗೊಂಡಿರುವ ಕಾರಣ ಧರ್ಮವನ್ನು ಉಪದೇಶಿಸಲು ತಾನು ಅಶಕ್ತನೆಂಬುದಾಗಿ ಭೀಷ್ಮ ಹೇಳಿದ್ದು ಕೃಷ್ಣ ಭೀಷ್ಮನಿಗೆ ಶರೀರ ಪಾಟವವನ್ನು ಅನುಗ್ರಹಿಸಿದ್ದು ಆ ದಿನ ಸಂಜೆಗೆ ಎಲ್ಲರೂ ತಮ್ಮ ತಮ್ಮ ಬಿಡಾರಕ್ಕೆ ಹೋಗಿ, ಮರುದಿನ ಬೆಳಗಾಗುತಲೇ ಭೀಷ್ಮನಲ್ಲಿಗೆ ಬಂದದ್ದು. ಕೃಷ್ಣ ಧರ್ಮ ಪ್ರವಚನಕ್ಕಾಗಿ ಭೀಷ್ಮನನ್ನು ಪ್ರೇರಿಸಿದ್ದು [ಶಾಂತಿ ೫೧-೫೩] ಭೀಷ್ಮ ಯುಧಿಷ್ಠಿರನನ್ನು ಪ್ರಶ್ನೆಮಾಡಹೇಳಿದ್ದು [ಶಾಂತಿ ೫೪] ಭೀಷ್ಮ ಯುಧಿಷ್ಠಿರನಿಗೆ ವರ್ಣ, ಆಶ್ರಮ, ರಾಜ, ಮಂತ್ರಿ, ರಾಜನೀತಿ, ಆಪದ್ಧರ್ಮ, ಮೋಕ್ಷಧರ್ಮ ಮುಂತಾದ ಅನೇಕಾನೇಕ ಧರ್ಮರಹಸ್ಯಗಳನ್ನು ಬೋಧಿಸಿದ್ದು [ಶಾಂತಿ ೫೫-೩೭೫]. ಯುಧಿಷ್ಠಿರ ಶಮಾದಿಗಳ ಸ್ವರೂಪವನ್ನು ವಿವರಿಸಕೇಳಿದ್ದು ಭೀಷ್ಮಾದಿಗಳ ಕೊಲೆಗೆ ತಾನೇ ಕಾರಣವೆಂಬ ಬುದ್ಧಿಯಿಂದ ಅನುಗಾಲವೂ ತನ್ನನ್ನು ತಾನೇ ಹಳಿಯುತ್ತ, ಮರುಗುತ್ತಿದ್ದ ಯುಧಿಷ್ಠಿರನನ್ನು ಕುರಿತು ಭೀಷ್ಮ '' ಜೀವ ಸ್ವತಂತ್ರನಲ್ಲ. ಕರ್ಮ ಜೀವನನ್ನು ಬಂಧಿಸುತ್ತದೆ '' ಎಂದು ಹೇಳಿ ಅದಕ್ಕೆ ದೃಷ್ಟಾಂತರೂಪವಾಗಿ ಅನೇಕವಾಗಿ ಉಪಕಥೆಗಳನ್ನು ವಿವರಿಸಿ ಅನೇಕ ಮಹಿಮೆಗಳನ್ನು ತಿಳಿಸಿದ್ದು [ಅನು ೧-೨೭೧]. ಯುಧಿಷ್ಠಿರನಿಗೆ ಸಕಲ ಧರ್ಮಗಳನ್ನೂ ವಿವರಿಸಿದ ತರುವಾಯ, ಭೀಷ್ಮ ತನಗೆ ಅವಸಾನಕಾಲ ಸಮೀಪಿಸಿತೆಂದು ತಿಳಿದು, ಭಗವಂತನನ್ನು ಸ್ಮರಿಸುತ್ತ ಮೌನದಿಂದ ಇದ್ದದ್ದು. ಅದನ್ನು ಕಂಡು ದ್ವೈಪಾಯನ ಮುನಿ ಯುಧಿಷ್ಠಿರಾದಿಗಳನ್ನು ಹಸ್ತಿನಾವತಿಗೆ ಕಳುಹಿದ್ದು. ಕೃಷ್ಣನ ಸಂಗಡ ಎಲ್ಲರೂ ಹಸ್ತಿನಾವತಿಗೆ ಹೋದದ್ದು [ಅನು. ೨೭೨. ಭಾಗ.-೧-೯]. ಯುಧಿಷ್ಠಿರ ಭೀಷ್ಮನ ಅಂತ್ಯಸಂಸ್ಕಾರಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಂಡು, ಕೃಷ್ಣ, ಧೃತರಾಷ್ಟ್ರಾದಿಗಳ ಸಂಗಡ ಭೀಷ್ಮನಲ್ಲಿಗೆ ಬಂದದ್ದು.

ಭೀಷ್ಮ ಕೃಷ್ಣ ಧೃತರಾಷ್ಟ್ರಾದಿಗಳಿಂದ ಅನುಮತಿಯನ್ನು ಪಡೆದು, ಯೋಗಬಲದಿಂದ ಬ್ರಹ್ಮರಂಧ್ರವನ್ನು ಭೇದಿಸಿ ಅಖಂಡತೇಜಸ್ಸಿನಲ್ಲಿ ಐಕ್ಯವನ್ನು ಪಡೆದು ಕ್ಷಣಕಾಲ ದಲ್ಲಿ ಕಣ್ಮರೆಯಾದದ್ದು ಬಳಿಕ ಧೃತರಾಷ್ಟ್ರ ಯುಧಿಷ್ಠಿರಾದಿಗಳು ರಾಜವೈಭವದಿಂದ ಭೀಷ್ಮನ ದೇಹವನ್ನು ಸಂಸ್ಕಾರಮಾಡಿದ್ದು. ಯುಧಿಷ್ಠಿರಾದಿಗಳು ಗಂಗೆಯಲ್ಲಿ ಮುಳುಗಿ ಭೀಷ್ಮನಿಗೆ ತರ್ಪಣ ಕೊಟ್ಟು ದಡಕ್ಕೆ ಬರುವಷ್ಟರಲ್ಲಿ ಗಂಗೆ ನದಿಯಿಂದ ದಿವ್ಯರೂಪ ವನ್ನು ಧರಿಸಿ ಬಂದು ಭೀಷ್ಮನ ಮರಣಕ್ಕಾಗಿ ದುಃಖಿಸಿದ್ದು, ಅಂತು ಪ್ರಲಾಪಿಸು ತ್ತಿದ್ದ ಗಂಗೆಯನ್ನು ಕೃಷ್ಣನೇ ಮೊದಲಾದವರು ಉಚಿತರೀತಿಯಿಂದ ಸಂತವಿಸಿದ್ದು [ಅನು. ೨೭೩, ೨೭೪]. ಭೀಷ್ಮನ ಮರಣದಿಂದ ದುಃಖಿಸುತ್ತಿದ್ದ ಯುಧಿಷ್ಠಿರನನ್ನು ಧೃತರಾಷ್ಟ್ರಾದಿಗಳು ಸಮಾಧಾನಪಡಿಸಿದ್ದು ಮುಂತಾಗಿ [ಅಶ್ವ. ೧-೨] ಭೀಷ್ಮ ತನ್ನ ತಂದೆಯಿಂದ ಸ್ವೇಚ್ಛಾಮರಣರೂಪವಾದ ವರವನ್ನು ಪಡೆದಿದ್ದನಾಗಿ ಉತ್ತರಾಯಣ ಬರುವವರೆಗೂ ಕಾದಿದ್ದು, ಉತ್ತರಾಯಣ ಬಂದ ಬಳಿಕ ದೇಹ ತ್ಯಾಗಮಾಡಿದ.

**ಭೀಷ್ಮಕ** —ವಿದರ್ಭ ದೇಶದ ಅರಸು. ರುಕ್ಮಿಣಿ ಈತನ ಮಗಳು [ಭಾರ.-ಸ. ೪, ३೨]. ಇವನಿಗೆ ಹಿರಣ್ಯರೋಮನೆಂಬುದು ನಾಮಾಂತರ [ಉದ್ಯೋ ೧೫೮]. ಇವನಿಗೆ ರುಕ್ಮಿ, ರುಕ್ಮರಥ, ರುಕ್ಮಬಾಹು, ರುಕ್ಮಕೇಶ, ರುಕ್ಮಮಾಲಿಯೆಂಬುದಾಗಿ ಐವರು ಪುತ್ರರಿದ್ದರು [ಭಾಗ -೧೦, ೫೨]

**ಭುಮನ್ಯು**.—(I) ಚಂದ್ರ ವಂಶದ ಅವಿಕ್ಷಿತನ ಸಂತತಿಯಲ್ಲಿ ಜನಿಸಿದ ಜನಮೇ ಜಯನೆಂಬ ಅರಸನ ಮಗನಾದ ಧೃತರಾಷ್ಟ್ರನೆಂಬ ರಾಜನ ಮಗ [ಆದಿ ೧೦೧].

(II) ಒಬ್ಬ ಅರಸು. ಶಕುಂತಲೆಯ ಮಗನಾದ ಭರತ ಚಕ್ರವರ್ತಿಯ ಮಗ. ಈತ ಸುವರ್ಣೆಯೆಂಬವಳನ್ನು ಮದುವೆಯಾಗಿ ಸುಹೋತ್ರನೆಂಬ ಮಗನನ್ನು ಪಡೆದ [ಭಾರ.-ಆದಿ. ೬೩]. ಸುವರ್ಣೆಗೆ ಪುಷ್ಕರಿಣಿಯೆಂಬುದು ನಾಮಾಂತರ [ಆದಿ. ೧೦೧]. ಈತನಿಗೆ ದಿವಿರಥ, ಸುಹೋತ್ರ, ಸುಹೋತಾ, ಸುಹವಿ, ಸುಯಜು, ಋಚೀಕ ನೆಂಬುದಾಗಿ ಆರು ಮಂದಿ ಪುತ್ರರು [ಭಾರ.-ಆದಿ. ೧೦೧]. ಈ ಭುಮನ್ಯು ಭರದ್ವಾಜ ಮಹರ್ಷಿಯ ರೂಪಾಂತರ. ಈತನಿಗೆ ವಿತಥನೆಂಬುದು ನಾಮಾಂತರ. ನೋಡು—ಭರದ್ವಾಜ, ಭರತ [ಭಾಗ.-೯-೨೦].

**ಭೂಗೋಲವರ್ಣನ**.—[ಭಾರ.-ಭೀ ೫-೯. ಭಾಗ.-೫-೧೬-೨೦. ಬೃಹನ್ನಾರ.-೩. ಪದ್ಮ-೧-೩-೯. ವಾಯು.-೩೪-೫೦. ವಿಷ್ಣು.-೨-೨-೭. ಮತ್ಸ್ಯ.-೧೨೧. ಕೂರ್ಮ. ೧, ೪೪-೪೯. ಮಾರ್ಕಂ.-೪೯, ೫೭. ವರಾಹ. ೭೪-೮೯. ಬ್ರಹ್ಮ-೧೮-೨೭. ದೇ. ಭಾ.-೮, ೪-೧೩. ಲಿಂಗ.-೪೬. ಗರು. ೫೪-೫೭. ಶಿವ.-ಉಮಾ.-೧೭-೧೮].

**ಭೂತಸೃಷ್ಟಿ, ಅವುಗಳ ಗುಣ ಮುಂತಾದ್ದು.**—[ವನ. ೨೧೫. ಭೀ. ೫ ಶಾಂ. ೧೯೨, ೨೫೮, ೨೬೧, ೩೧೫. ಅನು ೩೯, ೨೪೫ ಭಾಗ.-೩-೨೬. ವಿಷ್ಣು -೧-೨, ೩. ಮತ್ಸ್ಯ.-೨-೭].

**ಭೂಮಿ.**—ಪಂಚಭೂತಗಳಲ್ಲಿ ಮೊದಲನೆಯದು, ಮತ್ತು ಅದರ ಅಭಿಮಾನಿ ದೇವತೆ. ಭೂಮಿ ಭಾರವನ್ನು ಹೊರಲಾರದೆ ಬ್ರಹ್ಮನನ್ನು ಮರೆಹೊಕ್ಕದ್ದು [ಭಾರ.-ಆ ೬೫] ವಿಷ್ಣು ಭೂಮಿಯನ್ನು ಉದ್ಧರಿಸಿದ್ದು [ವಿಷ್ಣು -೧-೪ ಭಾಗ -೩-೧೩. ವಾಯು -೬. ಪದ್ಮ -೬-೨೬೪. ಲಿಂಗ.-೯೪. ಮತ್ಸ್ಯ.-೨೪೭, ೨೪೮. ಶಿವ.-ಯುದ್ಧ ಖಂ ೫೧ ಭಾರ.-ಸಭಾ. ೪೫. ವನ. ೧೪೪, ೨೭೩. ಶಾಂತಿ. ೨೦೮].

**ಭೂದಾನ ಫಲ.**—[ಅಶ್ವ.-೧೦೨. ಅನು. ೯೭, ೨೩೫]. ಭೂಮಿಯ ಗುಣಗಳು [ವನ ೨೧೫. ಭೀ ೪. ಶಾಂತಿ. ೨೬೧].

**ಭೂಮಿಞ್ಜಯ**—ವಿರಾಟ ಪುತ್ರನಾದ ಉತ್ತರನ ನಾಮಾಂತರ. ನೋಡು— ಉತ್ತರ [ವಿರಾ. ೩೭].

**ಭೂರಿ**—ಚಂದ್ರ ವಂಶದ ಸೋಮದತ್ತನೆಂಬ ಅರಸನ ಮಗ. ಇವನಿಗೆ ಭೂರಿಶ್ರವ, ಶಲ ಎಂಬುದಾಗಿ ಇಬ್ಬರು ಒಡಹುಟ್ಟಿದವರು [ಭಾರ.-ಆದಿ ೨೦೧ ಭಾಗ.-೯-೨೨] ನೋಡು—ಶಲ. ಭೂರಿ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಸಾತ್ಯಕಿಯಿಂದ ಮಡಿದ [ದ್ರೋ. ೧೬೭]

**ಭೂರಿಶ್ರವ.**—ಚಂದ್ರ ವಂಶದ ಸೋಮದತ್ತನ ಮಗ. ನೋಡು— ಭೂರಿ [ಆದಿ. ೨೦೧]. ಇವ ದುರ್ಯೋಧನನ ಪರವಾಗಿ ಹೋರಾಡಿದವ ರಥಯೂಥಯೂಥಪ ಭಾರ -ಉ. ೧೬೫]. ಇವನಿಗೆ ಶಲ, ಭೂರಿಯೆಂಬ ಇಬ್ಬರು ಒಡಹುಟ್ಟಿದವರು. ನಾಲ್ಕನೆಯ ದಿನದ ಯುದ್ಧದಲ್ಲಿ ಸಾತ್ಯಕಿಯೊಂದಿಗೆ ಘೋರವಾಗಿ ಯುದ್ಧಮಾಡಿದ ಭಾರ -ಭೀ.-೬೩]. ಐದನೆಯ ದಿನದ ಯುದ್ಧದಲ್ಲಿ ಇವನ ಹತ್ತು ಮಂದಿ ಮಕ್ಕಳನ್ನೂ ತ್ಯಕಿ ಕೊಂದ [ಭೀಷ್ಮ ೭೪] ಹದಿನಾಲ್ಕನೆಯ ದಿನದ ಹಗಲು ಯುದ್ಧದಲ್ಲಿ ವ ಸಾತ್ಯಕಿಯೊಂದಿಗೆ ಯುದ್ಧಮಾಡುತ್ತಿದ್ದಾಗ ಸಾತ್ಯಕಿಯ ಕೊರಳನ್ನು ಕಡಿಯುವುದಕ್ಕಾಗಿ ಖಡ್ಗವನ್ನು ಎತ್ತಿರಲಾಗಿ, ಅರ್ಜುನ ಇವನ ತೋಳನ್ನು ಕಡಿದ. ರುವಾಯ ಭೂರಿಶ್ರವ ಪ್ರಾಯೋಪವೇಶಮಾಡಿ ಕುಳಿತಿದ್ದಾಗ ಸಾತ್ಯಕಿ ಇವನ ರುಂಡವನ್ನು ಉರುಳಿಸಿದ [ದ್ರೋ. ೧೪೨, ೧೪೩] ಗಾಂಧಾರಿ ಇವನ ಶವವನ್ನು ವರ್ಣಿಸಿದ್ದು [ಸ್ತ್ರೀ. ೨೪].

**ಭೂಲಿಙ್ಗಶಕುನಿ.**—ಒಂದು ಹಕ್ಕಿ. ಇದಕ್ಕೆ ಕುಲಿಂಗವೆಂಬುದು ನಾಮಾಂತರ. ಸಾಹಸವನ್ನು ಮಾಡಬೇಡ" ಎಂದು ಯಾವಾಗಲೂ ಹೇಳುತ್ತಿರುವುದು ಇದರ

ಸ್ವಭಾವ. ತಾನು ಮಾತ್ರ ಸಿಂಹದ ಹಲ್ಲು ಸಂದಿನಲ್ಲಿ ಸಿಕ್ಕಿಕೊಂಡಿರುವ ಮಾಂಸವನ್ನೇ ತಿನ್ನುತ್ತದೆ. ಮನುಷ್ಯರು ಹೆರರಿಗೆ ಉಪದೇಶಮಾಡುವುದರಲ್ಲಿ ನಿಪುಣರೇ ಹೊರತು, ತಾವು ಆಚರಿಸುವುದಿಲ್ಲವೆಂಬುದಕ್ಕೆ ದೃಷ್ಟಾಂತವಾಗಿ ಈ ಕಥೆ ವರ್ಣಿತವಾಗಿದೆ [ಸಭಾ.-೬೭].

**ಭೂಲೋಕ ವರ್ಣನ.**—[ಲಿಂಗ.-೫೩]. ನೋಡು—ಭೂಗೋಳ ವರ್ಣನ.

**ಭೃಗು.**—ಒಬ್ಬ ಬ್ರಹ್ಮರ್ಷಿ. ಬ್ರಹ್ಮನ ಹೃದಯದಿಂದ ಜನಿಸಿದವ ಈತ ಸ್ವಾಯಂಭುವ ಮನ್ವಂತರದವ. ಈತನ ಮಗ ಕವಿ. ಮತ್ತೊಬ್ಬ ಮಗ ಚ್ಯವನ ಮುನಿ [ಆದಿ. ೬೭]. ಈತನಿಗೆ ಖ್ಯಾತಿಯೆಂಬವಳು ಹೆಂಡತಿ. ಈಕೆಯಲ್ಲಿ ಲಕ್ಷ್ಮಿ ಅವತರಿಸಿದ ಕಾರಣ ಲಕ್ಷ್ಮಿಗೆ ಭಾರ್ಗವಿಯೆಂದು ಹೆಸರು ಧಾತ, ವಿಧಾತ ರೆಂಬವರು ಮತ್ತಿಬ್ಬರು ಗಂಡುಮಕ್ಕಳೂ ಈತನಿಗೆ ಇದ್ದರು [ಆದಿ. ೬೭ ಭಾಗ.-೪-೧. ವಿಷ್ಣು -೧-೧೦ ಮತ್ಸ್ಯ.-೨೫೨]. ಶುಕ್ರಾಚಾರ್ಯ ಈತನಿಂದ ಜನಿಸಿದವ ವಿಷ್ಣು ಇವನ ಜನನಿಯಾದ ಖ್ಯಾತಿಯನ್ನು ಕೊಂದು ಭೂಮಿಯಲ್ಲಿ ಜನಿಸುವ ಹಾಗೆ ಶಾಪ ಹೊಂದಿದ್ದು [ದೇ.ಭಾಗ.-೪-೧೧] ಮರಳಿ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ವರುಣನ ಯಜ್ಞಕುಂಡದಲ್ಲಿ ಜನಿಸಿದ. ಈ ಕಾರಣದಿಂದಲೇ ಭೃಗುವಿಗೆ ವಾರುಣಿಯೆಂದು ಹೆಸರು [ಭಾರ -ಆದಿ. ೫. ಅನು ೧೩೨] ಈತನ ಹೆಂಡತಿಯ ಹೆಸರು ಪುಲೋಮೆ [ಭಾರ.-ಆ ೫, ೬]. ಈತನಿಗೆ ಪುಲೋಮೆಯಲ್ಲಿ ಚ್ಯವನ, ವಜ್ರಶೀರ್ಷ, ಶುಚಿ, ಔರ್ವ, ಶುಕ್ರ, ವರೇಣ್ಯ, ಸವನರೆಂಬ ಏಳು ಮಂದಿ ಪುತ್ರರು ಜನಿಸಿದರು. ವರೇಣ್ಯನಿಗೆ ವಿಭುವೆಂಬ ನಾಮಾಂತರವೂ ಇದೆ [ಭಾರ.-ಅನು. ೧೩೨]. ಅಗ್ನಿ ಸರ್ವಭಕ್ಷಕನಾಗುವಂತೆ ಭೃಗು ಶಾಪಕೊಟ್ಟದ್ದು [ಭಾರ.-ಆ. ೬. ಶಲ್ಯ ೪೮]. ಭೃಗು ಭರದ್ವಾಜ ಮುನಿಗೆ ಸೃಷ್ಟಿವಿವರಣೆಯನ್ನು ತಿಳಿಸಿದ್ದು [ಶಾಂತಿ. ೧೮೦]. ಪುಷ್ಕರವನ್ನು ತಾನು ಕದಿಯಲಿಲ್ಲವೆಂಬುದಾಗಿ ಭೃಗು ಆಣೆಯಿಟ್ಟುಕೊಂಡದ್ದು [ಭಾರ.-ಅನು. ೧೪೩]. ಇಂದ್ರಪದವಿಯಿಂದ ನಹುಷನನ್ನು ಕೆಡಹಿದ ವಿಷಯವಾಗಿ ಅಗಸ್ತ್ಯನೊಡನೆ ಸಂವಾದಮಾಡಿದ್ದು [ಅನು. ೧೫೬] ಭೃಗು ವಂಶವರ್ಣನ [ಭಾರ.-ಆದಿ. ೫] ಕಾರ್ತವೀರ್ಯನ ಸಂತತಿಯವರು ಭೃಗು ವಂಶದವರನ್ನು ಕೊಂದದ್ದು [ಭಾರ.-ಆದಿ. ೧೯೪].

**ಭೃಗುಕಚ್ಛ.**—ಭೃಗು ಮಹರ್ಷಿ ತಪಸ್ಸುಮಾಡುತ್ತಿದ್ದ ಪ್ರದೇಶದಲ್ಲಿರುವ ಮಡು. ಇದು ನರ್ಮದೆ ಸಮುದ್ರಕ್ಕೆ ಸೇರುವ ಸ್ಥಳದಲ್ಲಿ ಬ್ರೋಚ್ ಎಂದು ಪ್ರಸಿದ್ಧವಾಗಿದೆ [ಭಾರ.-ಸ. ೩೨].

**ಭೈರವ.**—ಶಿವನ ರೂಪಾಂತರ [ಶಿವ.-ಶತರುದ್ರ. ೯].

**ಭೋಗವತೀ.**—(i) ಜ್ಞಾನಸಂಪನ್ನೆಯಾದ ತಾಪಸಿ. ಈಕೆ ನಿಬಂಧನನೆಂಬ ತನ್ನ ಮಗನ ಸಂಗಡ ಅಧ್ಯಾತ್ಮವಿಚಾರವಾಗಿ ಚರ್ಚೆಮಾಡಿದವಳು [ಭಾರ.-ಶಾಂ. ೨೦೫].

(ii) ಪಾತಾಳಲೋಕದಲ್ಲಿನ ಒಂದು ಸುಂದರವಾದ ಪಟ್ಟಣ. ಇದು ಸರ್ಪಗಳ ರಾಜಧಾನಿ [ಭಾರ.-ಉ. ೧೦೩].

**ಭೋಜ.**—ಭೋಜ ದೇಶದ ಅರಸನಾದ ಕೃತವರ್ಮನಿಗೆ ಈ ಹೆಸರು ರೂಢಿಯಲ್ಲಿದೆ [ಭಾರ.-ಆದಿ. ೨೦೧. ದ್ರೋ. ೧೧೪, ೧೧೬].

**ಭೋಜಕಟಕ.**—ಒಂದು ಪಟ್ಟಣ ವಿದರ್ಭ ದೇಶಾಧಿಪನಾದ ಭೀಷ್ಮಕ ರಾಜನ ಮಗನೂ ರುಕ್ಮಿಣಿಯ ಸಹೋದರನೂ ಆಗಿದ್ದ ರುಕ್ಮಿ ಇಲ್ಲಿ ವಾಸಮಾಡುತ್ತಿದ್ದ. ಇದು ಬೀರಾರಿನಲ್ಲಿ ಪೂರ್ಣಾ ನದಿಯ ದಡದ ಮೇಲೆ ಎಲ್ಲಿಚ್‌ಪುರ್ ಎಂದು ಪ್ರಖ್ಯಾತಿಗೊಂಡಿದೆ [ಸಭಾ ೩೨]

**ಭೋಜಾ** —ಸೌವೀರ ದೇಶದ ರಾಜನ ಮಗಳು ಯದು ವಂಶದ ಸಾತ್ಯಕಿಯ ಹೆಂಡತಿ. ಇವಳಿಗೆ ಹತ್ತು ಮಂದಿ ಪುತ್ರರು. ನೋಡು—ಸಾತ್ಯಕಿ [ಭಾರ.-ದ್ರೋ. ೧೦]. ಇವಳಿಗೆ ಸರಸ್ವತಿಯೆಂಬುದು ನಾಮಾಂತರ [ಭಾರ -ಮೌ ೮]

**ಭೌಮ.**—ಅಂಗಾರಕ ಗ್ರಹದ ನಾಮಾಂತರ. ಸತೀದೇವಿಯ ವಿಯೋಗದಿಂದ ಸಂತಪ್ತನಾದ ಶಿವ ನಿರ್ವಿಕಲ್ಪಸಮಾಧಿಯಲ್ಲಿದ್ದು ಬಹಿರ್ಮುಖನಾದಾಗ ಆತನ ಹಣೆಯಿಂದ ಬೆವರು ನೀರಿನ ಒಂದು ಹನಿ ನೆಲದಮೇಲೆ ಬಿದ್ದು ಕೆಂಪುಬಣ್ಣದ ಗಂಡು ಶಿಶುರೂಪವನ್ನು ತಾಳಿ ಅಳತೊಡಗಿತು ಆಗ ಭೂದೇವಿ ಶಿವನ ಹೆದರಿಕೆಯಿಂದ ಒಡನೆಯೇ ದಿವ್ಯ ಸ್ತ್ರೀರೂಪವನ್ನು ತಳೆದು ಆ ಮಗುವನ್ನು ಎತ್ತಿಕೊಂಡು ಹಾಲುಕೊಟ್ಟು ಮುದ್ದಾಡಿದಳು. ಶಿವ ಇದನ್ನು ಕಂಡು ಮನಸ್ಸಿನಲ್ಲಿಯೇ ನಗುತ್ತ ಭೂಮಿಯನ್ನು ಕುರಿತು "ಇವನನ್ನು ನೀನು ಅಕ್ಕರೆಯಿಂದ ಕಾಪಾಡು. ಇವ ಮಹಾತೇಜಸ್ವಿಯಾಗಿ ನಿನ್ನ ಹೆಸರಿನಿಂದಲೇ ಲೋಕದಲ್ಲಿ ಪ್ರಖ್ಯಾತಿಪಡೆಯುತ್ತಾನೆ" ಎಂದ. ಒಡನೆಯೇ ಭೂಮಿ ಆ ಮಗುವನ್ನು ಎತ್ತಿಕೊಂಡು ತನ್ನ ಸ್ಥಾನಕ್ಕೆ ತೆರಳಿದಳು. ಆ ಬಾಲಕ ಕ್ರಮವಾಗಿ ವೃದ್ಧಿಹೊಂದಿ, ತರುಣನಾದಾಗ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಗ್ರಹಮಂಡಲದಲ್ಲಿ ಸ್ಥಾನವನ್ನು ಹೊಂದಿದ. ಈ ಕಾರಣದಿಂದಲೇ ಅಂಗಾರಕನಿಗೆ ಕುಜ, ಲೋಹಿತಾಂಗ, ಭೌಮ, ಮಹೀಸುತ ಮುಂತಾದ ಹೆಸರುಗಳು ಬಂದುವು [ಶಿವ.-ಪಾರ್ವ.ಖಂ. ೧೦].

**ಭೌಮನ.**—ದೇವತೆಗಳ ಬಡಗಿಯಾದ ವಿಶ್ವಕರ್ಮನ ನಾಮಾಂತರ. ಇವ ದೇವಲೋಕದಲ್ಲಿ ಅಮೃತವನ್ನು ಕಾಪಾಡುತ್ತಿದ್ದವ [ಭಾರ.-ಆದಿ. ೩೯].

# ಮ

**ಮಗಧ**—ಭಾರತ ವರ್ಷದ ಒಂದು ದೇಶ. ಈಗಣ ಬಿಹಾರ ಸಂಸ್ಥಾನಕ್ಕೆ ಈ ಹೆಸರು ಸಲ್ಲುತ್ತದೆ. ಸಿಂಧೂ ನದಿಯ ಪೂರ್ವಕ್ಕೆ ಇದೆ. ರಾಜಗಿರಿಯೆಂಬುದು ಇದಕ್ಕೆ ಪುರಾತನ ಕಾಲದ ರಾಜಧಾನಿ [ಭೀ. ೯] ವೈಹಾರ, ವಾರಾಹ, ವೃಷಭ, ಋಷಿಗಿರಿ ಅಥವಾ ಋಷಭಕೂಟ, ಚೈತ್ಯಕ ಎಂಬ ಐದು ಪರ್ವತಗಳು ಈ ದೇಶದಲ್ಲಿವೆ [ಸಭಾ. ೨೧] ರಾಮಾಯಣ ಕಾಲದಲ್ಲಿ ದಶರಥನ ಮಾವನೂ ಸುಮಿತ್ರೆಯ ತಂದೆಯೂ ಆಗಿದ್ದ ಶೂರಸೇನನೆಂಬ ಅರಸು ಇಲ್ಲಿ ರಾಜ್ಯಭಾರಮಾಡುತ್ತಿದ್ದ. ಪಾಂಡವರ ಕಾಲದಲ್ಲಿ ಜರಾಸಂಧನೂ ಅವನ ತರುವಾಯ ಜರಾಸಂಧನ ಮಗನಾದ ಸಹದೇವನೂ ಇಲ್ಲಿ ರಾಜ್ಯಭಾರಮಾಡುತ್ತಿದ್ದರು. ನೋಡು—ಜರಾಸಂಧ.

**ಮಙ್ಕಣ(ಕ)**—ಒಬ್ಬ ಋಷಿ ವಾಯುದೇವನಿಂದ ಸುಕನ್ಯೆಯಲ್ಲಿ ಜನಿಸಿದವ [ಭಾರ.-ವನ. ೮೧. ಶಲ್ಯ. ೩೯]. ಈತನಿಗೆ ವಾಯುವೇಗ, ವಾಯುಬಲ, ವಾಯುಹ, ವಾಯುಮಂಡಲ, ವಾಯುಜ್ವಾಲ, ವಾಯುರೇತ, ವಾಯುಚಕ್ರ—ಎಂಬುದಾಗಿ ಏಳು ಮಂದಿ ಮಕ್ಕಳು. ಈತನ ಚರಿತ್ರೆ [ಭಾರ -ಶ.೩೯. ಪದ್ಮ-೧-೨೭, ೬-೧೩೬. ಸ್ಕಾಂ.-ಪ್ರಭಾ ೨೭೦] ಈ ಮಂಕಣ ಕಶ್ಯಪ ಮುನಿಯ ಮಾನಸಪುತ್ರ [ವಾಮನ. ೩೮].

**ಮಙ್ಕಿ**—ಒಬ್ಬ ಋಷಿ ಈತ ಆರಣ್ಯದಲ್ಲಿ ವ್ಯವಸಾಯದಿಂದ ಜೀವಿಸಿಕೊಂಡಿದ್ದ ದೈವಯೋಗದಿಂದ ಕಡೆಗೆ ವೈರಾಗ್ಯವನ್ನು ಪಡೆದ. ಈತನ ಕಥೆ [ಭಾರ.-ಶಾಂ. ೧೭೬].

**ಮಣಲೂರು.**—ಪಾಂಡ್ಯ ದೇಶದ ರಾಜಧಾನಿ. ಅರ್ಜುನನ ಮಾವನಾದ (ಚಿತ್ರಾಂಗದೆಯ ಜನಕನಾದ) ಚಿತ್ರವಾಹನ ಇಲ್ಲಿ ರಾಜ್ಯಭಾರಮಾಡುತ್ತಿದ್ದ. [ಭಾರ -ಆದಿ. ೬೩]. ಅರ್ಜುನ ತೀರ್ಥಯಾತ್ರೆಗೆ ಹೊರಟಾಗ ಇಲ್ಲಿಗೆ ಬಂದಿದ್ದ ನೋಡು—ಬಭ್ರುವಾಹನ [ಆದಿ. ೨೩೫]. ಯುಧಿಷ್ಠಿರನ ಅಶ್ವಮೇಧದ ಕುದುರೆಯ ರಕ್ಷಣೆಗಾಗಿ ಮತ್ತೊಮ್ಮೆ ಬಂದಿದ್ದ. ನೋಡು—ಚಿತ್ರಾಂಗದಾ [ಅಶ್ವ. ೭೯]. ರಾಜಸೂಯ ದಿಗ್ವಿಜಯ ಸಂದರ್ಭದಲ್ಲಿ ಸಹದೇವ ಇಲ್ಲಿಗೆ ಬಂದಿದ್ದ [ಸಭಾ. ೩೯].

**ಮಣಿಪುರ.**—(i) ಮಣಲೂರಿನ ನಾಮಾಂತರ.

(ii) ನಿವಾತಕವಚರೆಂಬ ರಾಕ್ಷಸರ ರಾಜಧಾನಿ. ರಾವಣ ತನ್ನ ದಿಗ್ವಿಜಯ ಕಾಲದಲ್ಲಿ ಈ ಪಟ್ಟಣದ ಮೇಲೆ ದಂಡೆತ್ತಿಬಂದಿದ್ದ [ರಾಮಾ.-ಉತ್ತ. ೨೩].

**ಮಣಿಪುಷ್ಪಕ.**—ಪಾಂಡು ಪುತ್ರನಾದ ಸಹದೇವನ ಶಂಖ [ಭೀ ೨೫].

**ಮಣಿಮತಿ**—ಒಂದು ಪಟ್ಟಣ. ಇಲ್ವಲ ಮತ್ತು ವಾತಾಪಿಗಳ ರಾಜಧಾನಿ. ಇದಕ್ಕೆ ದುರ್ಜಯಾ ಎಂಬುದು ನಾಮಾಂತರ [ವನ, ೯೪].

**ಮಣಿಮನ್ತ.**—(i) ದ್ರೌಪದೀ ಸ್ವಯಂವರಕ್ಕೆ ನೆರೆದಿದ್ದ ಅರಸರಲ್ಲಿ ಒಬ್ಬ [ಭಾರ.-ಆ. ೨೦೧].

(ii) ಒಬ್ಬ ರಾಕ್ಷಸ. ಸೌಗಂಧಿಕ ಪುಷ್ಪವನ್ನು ತರುವುದಕ್ಕೆ ಹೋಗಿದ್ದಾಗ ಭೀಮ ಇವನನ್ನು ಕೊಂದ [ವನ. ೧೬೧]. ನೋಡು—ಭೀಮ.

**ಮಣ್ಡೂಕಕನ್ಯಾ.**—ಆಯುವೆಂಬ ಹೆಸರಿನ ಮಂಡೂಕ ರಾಜನ ಮಗಳು. ಇವಳಿಗೆ ಸುಶೋಭನೆಯೆಂಬುದು ವ್ಯವಹಾರದ ಹೆಸರು. ಇವಳು ಇಕ್ಷ್ವಾಕು ವಂಶದ ಪರೀಕ್ಷಿತನೆಂಬ ಅರಸನನ್ನು ಮದುವೆಯಾಗಿ ಶಲ, ದಲ, ಬಲರೆಂಬ ಮೂವರು ಪುತ್ರರನ್ನು ಪಡೆದಳು. ನೋಡು—ಪರೀಕ್ಷಿತ್, ಶಲ, ದಲ, ಬಲ [ವನ. ೧೯೫].

**ಮಣ್ಡೂಕ ರಾಜ.**—ನೋಡು—ಮಣ್ಡೂಕಕನ್ಯಾ, ಆಯು.

**ಮಣ್ಡೋದರಿ.**—ಹೇಮಾಯೆಂಬ ಅಪ್ಸರಸಿಯಲ್ಲಿ ಮಯಾಸುರನಿಂದ ಜನಿಸಿದವಳು. ರಾವಣನ ಹೆಂಡತಿ. ಮಹಾಪತಿವ್ರತೆ. ನೋಡು—ಅಕ್ಷಕುಮಾರ, ಇಂದ್ರಜಿತ್ತು [ರಾಮಾ -ಉತ್ತ ೧೨].

**ಮತಙ್ಗ.**—(i) ಒಬ್ಬ ಬ್ರಹ್ಮರ್ಷಿ ಋಷ್ಯಮೂಕ ಪರ್ವತದ ಬಳಿಯಲ್ಲಿ ತಪಸ್ಸುಮಾಡಿಕೊಂಡಿದ್ದ. ವಾಲಿ ದುಂದುಭಿಯೆಂಬ ರಕ್ಕಸನನ್ನು ಕೊಂದು, ಮದೋನ್ಮತ್ತನಾಗಿ, ಆ ದುಂದುಭಿಯ ರುಂಡವನ್ನು ಎಸೆಯಲಾಗಿ ಅದು ಮತಂಗ ಮುನಿಯ ಆಶ್ರಮದಲ್ಲಿ ಬಿದ್ದು, ಸುತ್ತಮುತ್ತಣ ಪ್ರದೇಶವನ್ನು ಹೊಲಸು ಮಾಡಿತು. ಕ್ರುದ್ಧನಾದ ಮುನಿ "ಮರಳಿ ವಾಲಿ ಇಲ್ಲಿಗೆ ಬಂದರೆ ಅವನು ಬದುಕಲಾರ" ಎಂದು ಶಾಪವಿತ್ತ. ಈ ಗುಟ್ಟನ್ನು ತಿಳಿದಿದ್ದ ಸುಗ್ರೀವ ತನ್ನ ಆಪ್ತಸಚಿವರೊಂದಿಗೆ ಋಷ್ಯಮೂಕ ಪರ್ವತದಲ್ಲಿ ನಿರ್ಭಯವಾಗಿದ್ದ ಶ್ರೀರಾಮನಿಗೂ ಸುಗ್ರೀವನಿಗೂ ಇಲ್ಲಿಯೇ ಮೊತ್ತಮೊದಲು ಸ್ನೇಹವಾಯಿತು [ರಾಮಾ -ಕಿಷ್ಕಿಂ. ೧೧].

(ii) ಮತ್ತೊಬ್ಬ ಮಹರ್ಷಿ. ಬ್ರಾಹ್ಮಣ ಸ್ತ್ರೀಯಲ್ಲಿ ನಾಯಿಂದನಿಂದ ಜನಿಸಿದವ. ಒಮ್ಮೆ ಈತ ನಿಷ್ಕಾರಣವಾಗಿ ಒಂದು ಕತ್ತೆಯ ಮರಿಯನ್ನು ಹೊಡೆಯಲಾಗಿ, ಅದು ತನ್ನ ತಾಯ ಬಳಿ ದೂರಿತು. ಆಗ ಹೆಣ್ಣುಕತ್ತೆ "ಅವನು ಚಂಡಾಲ, ಎಷ್ಟು ತಪಸ್ಸುಮಾಡಿದರೇನು ? ಹುಟ್ಟುಗುಣ ಎಲ್ಲಿಗೆ ಹೋದೀತು" ಎಂದಿತು. ಅದನ್ನು ಕೇಳಿದ ಮತಂಗ, ಆ ಹೆಣ್ಣುಕತ್ತೆಯ ಬಳಿಸಾರಿ, ತನ್ನ ಹುಟ್ಟಿನ ಗುಟ್ಟನ್ನು ತಿಳಿದು ತಪಸ್ಸುಮಾಡತೊಡಗಿ, ಅನೇಕ ವೇಳೆ ಇಂದ್ರ ಈತನಲ್ಲಿಗೆ ಬಂದು ಬ್ರಾಹ್ಮಣ್ಯ ದುರ್ಲಭವೆಂದು ಹೇಳಿ, ಬೇರೆ ಬೇರೆ ಎಷ್ಟೋ ವರಗಳಿಂದ ಪ್ರಲೋಭಗೊಳಿಸಿದರೂ, ಕಡೆಗೂ ತನ್ನ ತಪೋಮಹಿಮೆಯಿಂದ ಬ್ರಹ್ಮರ್ಷಿಯಾದ [ಭಾರ.-ಅನು. ೩, ೪].

**ಮತಙ್ಗಾಶ್ರಮ.**—ನೋಡು—ಮತಂಗ [ರಾಮಾ.-ಕಿಷ್ಕಿಂ. ೧೦, ೧೧. ಭಾರ.-ವನ. ೮೩].

**ಮತಿನಾರ.**—ಒಬ್ಬ ಅರಸು. ಚಂದ್ರವಂಶದ ಅನಾಧೃಷ್ಟಿರಾಜನ ಮಗ. ಈತನಿಗೆ ತಂಸು, ಮಹಾಂತ, ದ್ರುಹ್ಯು ಎಂಬುದಾಗಿ ಮೂವರು ಪುತ್ರರು ಜನಿಸಿದರು [ಭಾರ.-ಆದಿ. ೮೮].

**ಮತ್ಸಿಲ್ಲ.**—ಉಪರಿಚರವಸುವಿನಿಂದ ಗಿರಿಕೆಯಲ್ಲಿ ಜನಿಸಿದವ. ನೋಡು—ಉಪರಿಚರ, ಗಿರಿಕಾ.

**ಮತ್ಸ್ಯ.**—(I) ಒಂದು ದೇಶ. ಈಗಣ ಜಯಪುರದ ಸುತ್ತಣ ಪ್ರದೇಶವನ್ನೂ ಆಳ್ವಾರ್ ಸಂಸ್ಥಾನವನ್ನೂ ಸೇರಿಸಿಕೊಂಡರೆ ಮತ್ಸ್ಯದೇಶವಾಗುತ್ತದೆ ಶೂರಸೇನ ದೇಶಕ್ಕೆ ಪಶ್ಚಿಮದಲ್ಲಿದೆ. ಪಾಂಡವರ ಕಾಲದಲ್ಲಿ ವಿರಾಟ ಇಲ್ಲಿ ರಾಜ್ಯಭಾರಮಾಡುತ್ತಿದ್ದ [ಭೀ ೯].

(II) ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯದು. ಸೋಮಕನೆಂಬ ರಕ್ಕಸ ವೇದಗಳನ್ನು ಅಪಹರಿಸಲಾಗಿ ವಿಷ್ಣು ಈ ರೂಪದಿಂದ ಅವನನ್ನು ಕೊಂದು ಮರಳಿ ವೇದಗಳನ್ನು ತಂದ.

ಹಿಂದೆ ಸೂರ್ಯಪುತ್ರನಾದ ವೈವಸ್ವತಮನು ವಿಷ್ಣುವನ್ನು ಕುರಿತು ತಪಸ್ಸುಮಾಡಿ, ಪ್ರಳಯಕಾಲದಲ್ಲಿ ಚರಾಚರರೂಪವಾದ ಜಗತ್ತನ್ನು ಒಬ್ಬನೇ ಸ್ವತಂತ್ರವಾಗಿ ಅನಾಯಾಸದಿಂದ ಕಾಪಾಡುವ ಸಾಮರ್ಥ್ಯವನ್ನು ಅನುಗ್ರಹಿಸುವಂತೆ ವರವನ್ನು ಪಡೆದ. ಒಮ್ಮೆ ಮನು ತರ್ಪಣಮಾಡುತ್ತಿದ್ದಾಗ ಈತನ ಮೇಲೆ ಒಂದು ಮೀನು ಬಿತ್ತು. ಕರುಣಶಾಲಿಯಾದ ಮನು ಅದನ್ನು ಕಾಪಾಡಲು ತನ್ನ ಪಾತ್ರೆಯೊಳಗೆ ಹಾಕಿದ. ಒಂದು ರಾತ್ರಿಯಲ್ಲಿ ಅದು ೧೬ ಅಂಗುಲ ಬೆಳೆಯಿತು ಬಳಿಕ ಅದನ್ನು ಒಂದು ಜಲಾಶಯದಲ್ಲಿ ಬಿಡಲಾಗಿ, ಅದು ಒಂದು ರಾತ್ರಿಯಲ್ಲಿ ಆರು ಮೊಳದುದ್ದವಾಗಿ "ಕಾಪಾಡು, ಕಾಪಾಡು" ಎಂದು ಮೊರೆಯಿಟ್ಟಿತು. ಕ್ರಮವಾಗಿ ಮಡು, ನದಿಗಳಿಂದ ಸಮುದ್ರವನ್ನು ಸೇರಿತು. ಸಮುದ್ರದ ಉದಕವನ್ನೆಲ್ಲ ಆವರಿಸಿಕೊಂಡ ಆ ಮತ್ಸ್ಯವನ್ನು ನೋಡಿ ಮನು ಭೀತನಾಗಿ "ನೀನಾರು ? ರಕ್ಕಸನೋ ! ಅಥವಾ ವಿಶ್ವವ್ಯಾಪಕನಾದ ವಿಷ್ಣುವೋ !" ಎಂದು ಕೇಳಲಾಗಿ, ಮತ್ಸ್ಯರೂಪಿಯಾದ ವಿಷ್ಣು, ಎಲೆ ಅರಸೆ ! ಕೆಲಕಾಲದಲ್ಲಿಯೇ ಭೂಮಿ ಮುಳುಗಿಹೋಗುವುದು. ಈ ಹಡಗು ದೇವನಿರ್ಮಿತವಾದುದು. ಸಕಲ ವಿಧವಾದ ಸ್ವೇದಜ, ಅಂಡಜ, ಉದ್ಭಿಜ್ಜ, ಜರಾಯುಜಗಳೆಂಬ ಪ್ರಾಣಿವರ್ಗವನ್ನು ಇದರಲ್ಲಿಟ್ಟು ಕಾಪಾಡು. ಪ್ರಳಯಮಾರುತದಿಂದ ಈ ಹಡಗು ತಲೆಕೆಳಗಾಗುವ ಸಂದರ್ಭದಲ್ಲಿ ನೀನು ಈ ಹಡಗನ್ನು ನನ್ನ ಕೊಂಬಿನಮೇಲೆ ಇಟ್ಟು ಜೋಪಾನಮಾಡು. ಪ್ರಳಯ ಮುಗಿದ ಬಳಿಕ

ಕೃತಯುಗ ಪ್ರಾರಂಭವಾದಾಗ ನೀನು ಜಗತ್ತಿಗೆ ಒಡೆಯನಾಗುವೆ. ಸರ್ವಜ್ಞತ್ವವೂ, ಲೋಕೋತ್ತರ ಧೈರ್ಯ ಪರಾಕ್ರಮಗಳೂ ನಿನಗೆ ಲಭಿಸುವುವು ಅಗ್ಗೆ ನೀನು ಮನ್ವಂತರಾಧಿಪತ್ಯವನ್ನು ಪಡೆದು ದೇವತೆಗಳಿಗೂ ಪೂಜನೀಯನಾಗುವೆ'' ಎಂದು ಹೇಳಿದ [ಮತ್ಸ್ಯ-೧] ಪೂರ್ವ ಕಲ್ಪದ ಅವಸಾನದಲ್ಲಿ ಪ್ರಳಯವಾಯಿತು ಲೋಕ ಗಳೆಲ್ಲವೂ ಸಮುದ್ರದಲ್ಲಿ ಮುಳುಗಿದುವು ಚತುರ್ಮುಖ ನಿದ್ರೆಯಲ್ಲಿದ್ದಾಗ ಆತನ ನಾಲ್ಕು ಬಾಯಿಗಳಿಂದ ಹೊರಟುಬರುತ್ತಿದ್ದ ವೇದರಾಶಿಯನ್ನು ಹಯಗ್ರೀವನೆಂಬ ಅಸುರ ಅಪಹರಿಸಿದ ಆ ಕಾಲದಲ್ಲಿ ಭಗವದ್ಭಕ್ತಾಗ್ರೇಸರನಾಗಿದ್ದ ಸತ್ಯವ್ರತನೆಂಬ ರಾಜರ್ಷಿ ಕೃತಮಾಲಾ ನದಿಯ ಜಲಮಧ್ಯದಲ್ಲಿ ನಿಂತು ತಪಸ್ಸುಮಾಡುತ್ತಿದ್ದಾಗ ಒಂದು ಚಿಕ್ಕ ಮೀನು ಆತನ ಕೈಯೊಳಗೆ ನೀರಿನಲ್ಲಿ ಬಂತು. ಸತ್ಯವ್ರತ ಅದನ್ನು ನದಿಯೊಳಗೆ ಬಿಟ್ಟ ಆ ಮತ್ಸ್ಯ ಸತ್ಯವ್ರತನನ್ನು ಕುರಿತು ''ಅಯ್ಯಾ, ಈ ನೀರಿನಲ್ಲಿ ಭೀಕರ ಜಲಜಂತುಗಳು ನನ್ನನ್ನು ಬಾಧಿಸುತ್ತವೆ ಅದಕ್ಕಾಗಿಯೇ ನಿನ್ನನ್ನು ಮರೆ ಹೊಕ್ಕಿದ್ದೇನೆ'' ಎನಲು, ದಯಾರ್ದ್ರನಾದ ಸತ್ಯವ್ರತ ಅದನ್ನು ಎತ್ತಿಕೊಂಡು ತನ್ನ ಆಶ್ರಮಕ್ಕೆ ತಂದು ಕಾಪಾಡತೊಡಗಿದ ಕ್ರಮನಾಗಿ ಕುಡಕೆ, ಮಡಕೆ, ಗುಡಾಣ, ಸರೋವರ, ಮಡುವುಗಳಲ್ಲಿ ಬೆಳೆದು ಕಡೆಗೆ ಅರಸನ ಮೂಲಕ ಸಮುದ್ರ ವನ್ನೇ ಸೇರಿತು ಕಡೆಗೆ ಸತ್ಯವ್ರತ ಆ ಮತ್ಸ್ಯರೂಪಿಯಾದ ಪರಮಾತ್ಮನ ಅನು ಗ್ರಹದಿಂದ ಅಂದಿಗೆ ಏಳನೆಯ ದಿನದಲ್ಲಿ ನಡೆದ ಪ್ರಳಯದಲ್ಲಿ ದಿವ್ಯ ನಾವೆಯ ಮೂಲಕ ಜಗತ್ತನ್ನು ಕಾಪಾಡಿ ವೈವಸ್ವತ ಮನುವಾದ. ಈ ಅವತಾರ, ಬ್ರಹ್ಮನ ಇಪ್ಪತ್ತೆಂಟನೆಯ ರಾತ್ರಿಯಲ್ಲಿ ನಡೆಯಿತು. ನೋಡು—ಕಲ್ಪ [ಭಾಗ -೮-೨೪. ಭಾರ - ವನ ೧೯೦]

**ಮತ್ಸ್ಯಗನ್ಧಾ** —ಉಪರಿಚರವಸುವಿನ ವೀರ್ಯದಿಂದ ಮತ್ಸ್ಯದ ಹೊಟ್ಟೆಯಲ್ಲಿ ಜನಿಸಿ ಬೆಳೆದವಳು. ನೋಡು—ಸತ್ಯವತಿ, ಅದ್ರಿಕಾ

**ಮತ್ಸ್ಯರಾಜ.**—ಮತ್ಸ್ಯಗಂಧೆಯ ಒಡಹುಟ್ಟಿದವ. ನೋಡು—ಉಪರಿಚರ

**ಮತ್ಸ್ಯೋಪಾಖ್ಯಾನ** —ಮೂರು ಮೀನುಗಳ ಕಥೆ [ಭಾರ -ಶಾಂತಿ ೧೩೭]

**ಮದ** —ಅಶ್ವಿನೀದೇವತೆಗಳ ಮೂಲಕ ತಾರುಣ್ಯವನ್ನು ಪಡೆದ ಚ್ಯವನ ತನ್ನ ಕೃತಜ್ಞತೆಯನ್ನು ತೋರಲು ಅಶ್ವಿನೀದೇವತೆಗಳಿಗೆ ತನ್ನ ಮಾವನಾದ ಶರ್ಯಾತಿ ರಾಜನ ಯಜ್ಞದಲ್ಲಿ ಹವಿರ್ಭಾಗವನ್ನು ಕಲ್ಪಿಸಿದ. ಇಂದ್ರ ವಜ್ರಹಿಡಿದು ಹರ ತೊಟ್ಟ ಆಗ ಇಂದ್ರನನ್ನು ಕೊಲ್ಲುವುದಕ್ಕಾಗಿ ಚ್ಯವನ ಮಹರ್ಷಿ ನಿರ್ಮಿಸಿದ ಶತ್ರು, ಈ ಮದನಿಗೆ ಮಂದನೆಂಬುದು ನಾಮಾಂತರ [ಭಾರ.-ಅನು. ೨೬೧].

**ಮದನ** —ಮನ್ಮಥ. ಮದನನೂ, ಸಂಧ್ಯೆಯೂ ಚತುರ್ಮುಖನಿಂದ ಜನಿಸಿದ್ದು. ಮದನನ ಸೌಂದರ್ಯಾತಿಶಯವರ್ಣನೆ. ಮಥನ, ಮನ್ಮಥ, ಕಂದರ್ಪ, ದರ್ಪಕ

ಶಬ್ದಗಳ ನಿರ್ವಚನ. ಜಗತ್ತನ್ನು ಮೋಹಗೊಳಿಸುವ ವರವನ್ನು ಬ್ರಹ್ಮನಿಂದ ಪಡೆದದ್ದು ಆ ವರವನ್ನು ಪರೀಕ್ಷಿಸುವುದಕ್ಕಾಗಿ ಮದನ ಬ್ರಹ್ಮಾದಿಗಳ ಮೇಲೆ ತನ್ನ ಶಕ್ತಿಯನ್ನು ತೋರಿದ್ದು ಬ್ರಹ್ಮ ತನ್ನ ಮಗಳಾದ ಸಂಧ್ಯೆಯನ್ನು ಮೋಹಿಸಿದ್ದು. ದಕ್ಷಾದಿಗಳು ಮನೋವಿಕಾರಕ್ಕೆ ಗುರಿಯಾದದ್ದು. ಶಿವ ಅಲ್ಲಿಗೆ ಬಂದು ಬ್ರಹ್ಮನಿಗೆ ಬುದ್ಧಿವಾದ ಹೇಳಿದ್ದು. ಶಿವನ ಫಾಲನೇತ್ರದಿಂದ ಸುಟ್ಟುಹೋಗುವಂತೆ ಬ್ರಹ್ಮ ಮದನನಿಗೆ ಶಾಪಕೊಟ್ಟದ್ದು ಮದನ ದಕ್ಷಪುತ್ರಿಯಾದ ರತಿಯನ್ನು ಮದುವೆಯಾದದ್ದು ರತಿಯ ಲಾವಣ್ಯವರ್ಣನೆ ಮದನನ ಜಗನ್ಮೋಹಕಶಕ್ತಿ ಮುಂತಾದುವುಗಳ ನಿರೂಪಣ [ಶಿವ -ಸತೀಖಂ ೨-೫]

**ಮದಯನ್ತೀ**—ಚಂದ್ರ ವಂಶದ ಸುದಾಸ ರಾಜನ ಮಗನಾದ ಕಲ್ಮಾಷಪಾದ ರಾಜನ ಹೆಂಡತಿ. ನೋಡು—ಕಲ್ಮಾಷಪಾದ [ಭಾರ.-ಆ ೧೭೮ ಅಶ್ವ ೫೭].

**ಮದಾಲಸಾ.**—ವಿಶ್ವಾವಸುವೆಂಬ ಗಂಧರ್ವ ರಾಜನ ಮಗಳು. ಕುವಲಾಶ್ವನ ಹೆಂಡತಿ. ನೋಡು—ಕುವಲಾಶ್ವ, ಪಾತಾಳಕೇತು [ಮಾರ್ಕಂ.-೧೯-೨೨]

**ಮದಿರಾಕ್ಷ.**—ಇವನಿಗೆ ಮದಿರಾಶ್ವನೆಂಬುದು ನಾಮಾಂತರ. ವಿರಾಟ ರಾಜನ ಒಡಹುಟ್ಟಿದವ [ಭಾರ -ವಿರಾ. ೩೩]. ರಥೋದಾರ [ಉದ್ಯೋ ೧೭೧]

**ಮದಿರಾಶ್ವ.**—(i) ನೋಡು—ಮದಿರಾಕ್ಷ

(ii) ಇಕ್ಷ್ವಾಕು ವಂಶದ ದಶಾಶ್ವ ರಾಜನ ಮಗ ಮಾಹಿಷ್ಮತಿಯಲ್ಲಿ ರಾಜ್ಯಭಾರಮಾಡುತ್ತಿದ್ದ [ಭಾರ.-ಅನು ೨] ಈತ ತನ್ನ ಮಗಳಾದ ಸುಮಧ್ಯಮೆ ಯೆಂಬವಳನ್ನು ಹಿರಣ್ಯಹಸ್ತನೆಂಬ ಮುನಿಗೆ ಮದುವೆಮಾಡಿಕೊಟ್ಟ [ಶಾಂತಿ. ೨೩೫].

**ಮದ್ಯ.**—ಹೆಂಡ ಅದರ ಉತ್ಪತ್ತಿ, ಉತ್ಪತ್ತಿಗೆ ಕಾರಣಗಳು ಮದ್ಯಪಾನದಿಂದುಂಟಾಗುವ ದೋಷಗಳು [ಅನು ೨೩೧].

**ಮದ್ಯಪಾನ ನಿಷೇಧ.**—[ಭಾರ.-ಆದಿ. ೭೦].

**ಮದ್ಯಪಾನ ಪ್ರಾಯಶ್ಚಿತ್ತ.**—[ಭಾರ -ಶಾಂತಿ ೧೬೩].

**ಮದ್ರ.**—(i) ಒಂದು ದೇಶ. ಪಂಜಾಬಿನಲ್ಲಿ ರಾವಿ ಮತ್ತು ಚೀನಾಬ್ ನದಿಗಳ ನಡುವೆ ಇದೆ. ಇದರ ರಾಜಧಾನಿ ಶಾಕಲ ಪಟ್ಟಣ [ಭಾರ.-ಭೀ ೯]. ಮದ್ರ ದೇಶದವರ ನಿಂದೆ [ಭಾರ.-ಕರ್ಣ. ೩೮].

(ii) ಸಾಮಾನ್ಯವಾಗಿ ಈ ಶಬ್ದ ಮಹಾಭಾರತದಲ್ಲಿ ನಕುಲ ಸಹದೇವರ ಸೋದರಮಾವನಾದ ಶಲ್ಯನಿಗೆ ಅನ್ವಯಿಸುವಂತೆ ವರ್ಣಿತವಾಗಿದೆ [ಭಾರ. ಭೀ. ೮೫. ಆದಿ. ೧. ಸಭಾ. ೩೨]. ದಶರಥನ ಕಾಲದಲ್ಲಿ ರಾಜ್ಯಭಾರಮಾಡುತ್ತಿದ್ದ ಮದ್ರ ದೇಶಾಧಿಪನಾದ ಚಾರುದೇಷ್ಣನಿಗೂ ಅನ್ವಯಿಸುತ್ತದೆ [ದೇ.ಭಾಗ.-೫-೧೭, ೧೮].

**ಮಧು** —(i) ಒಬ್ಬ ರಾಕ್ಷಸ. ನೋಡು—ಕೈಟಭ [ದೇ.ಭಾಗ.-೧-೪, ೯. ಭಾರ -ಸ. ೪೪. ವನ. ೨೦೬. ಶಾಂತಿ. ೩೫೭. ಮಾರ್ಕಂ -೭೮].

(ii) ಲವಣಾಸುರನ ರಾಜಧಾನಿ [ರಾಮಾ.-ಉತ್ತ. ೬೮, ೬೯].

(iii) ಒಬ್ಬ ರಾಕ್ಷಸ. ಕೃತಯುಗದಲ್ಲಿ ಲೋಲಾ ಎಂಬವಳ ಹಿರಿಯಮಗ. ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಶಿವನ ಶೂಲಕ್ಕೆ ಸಮಾನವಾದ ಒಂದು ಶೂಲ ವನ್ನು ಬೇಡಿದ ಶಿವ ಅಂತೆಯೇ ಶೂಲವನ್ನು ಅನುಗ್ರಹಿಸಿ, "ನೀನು ದೇವತೆ ಗಳಿಗೂ ಲೋಕಕ್ಕೂ ಕೇಡುಬಗೆಯದಿರುವವರೆಗೆ ಈ ಶೂಲ ನಿನ್ನಲ್ಲಿರುವುದು. ನೀನು ಹಾದಿತಪ್ಪಿ ನಡೆದೆಯಾದರೆ ಈ ಶೂಲ ನಿನ್ನ ಕೈ ಬಿಟ್ಟುಹೋಗುವುದು" ಎಂದ. ಬಳಿಕ ಮಧು ದಿವ್ಯವಾದ ಒಂದು ಪಟ್ಟಣವನ್ನು ನಿರ್ಮಿಸಿ, ಅದಕ್ಕೆ ಮಧು ಪುರವೆಂದು ಹೆಸರಿಟ್ಟು, ವಿಶ್ವಾವಸು ಗಂಧರ್ವನ ಮಗಳಾದ ಕುಂಭೀನಸಿಯನ್ನು ಮದುವೆಯಾಗಿ ಲವಣನೆಂಬ ಮಗನನ್ನು ಪಡೆದ ಲವಣ ದುಷ್ಟನಾದುದನ್ನು ಕಂಡು, ದಿಕ್ಕುತೋರದೆ ತನ್ನಲ್ಲಿದ್ದ ಶೂಲವನ್ನು ಮಗನಿಗೆ ಕೊಟ್ಟು ತಾನು ಸಮುದ್ರ ವನ್ನು ಹೊಕ್ಕ. ನೋಡು—ಲವಣ [ರಾಮಾ.-ಉತ್ತ ೬೧]. ಶತ್ರುಘ್ನ ಲವಣ ನನ್ನು ಕೊಂದ ಬಳಿಕ ಶ್ರೀ ರಾಮನ ಅಪ್ಪಣೆಯಂತೆ ತಾನೇ ಈ ಪಟ್ಟಣದಲ್ಲಿ ರಾಜ್ಯಭಾರಮಾಡಿದ [ರಾಮಾ.-ಉತ್ತ. ೭೦].

(iv) ಒಂದು ಪಟ್ಟಣ. ಮೇಲೆ ಹೇಳಿದ ಮಧುವೆಂಬ ದಾನವ ನಿರ್ಮಿಸಿದ್ದು. ಇದಕ್ಕೆ ಮಧುರೆಯೆಂಬ ನಾಮಾಂತರವೂ ಇದೆ

**ಮಧುಮನ್ತ.**—ಒಂದು ಪಟ್ಟಣ. ವಿಂಧ್ಯಪರ್ವತದ ಬಳಿಯಿತ್ತು. ನೋಡು —ದಣ್ಡ, ದಣ್ಡಕ.

**ಮಧುರಾ** —ಶೂರಸೇನ ದೇಶದ ರಾಜಧಾನಿ. ಶ್ರೀಕೃಷ್ಣನ ಜನ್ಮಸ್ಥಳ(Muttra) ಭಾರ -ಸ. ೧೯].

**ಮಧುವನ.**—(i) ಯಮುನಾ ನದಿಯ ತೀರದಲ್ಲಿರುವ ಒಂದು ವನ. ಕೃಷ್ಣಾವ ತಾರ ಕಾಲದಲ್ಲಿ ಇತ್ತು.

(ii) ಸುಗ್ರೀವನ ಉದ್ಯಾನ. ನೋಡು—ದಧಿಮುಖ [ರಾಮಾ.-ಸುನ್ದ. ೧, ೬೨].

**ಮನಸ್ಸು.**—ಜ್ಞಾನೇಂದ್ರಿಯಗಳಲ್ಲಿ ಮುಖ್ಯವಾದದ್ದು [ಶಾಂತಿ. ೨೬೧]. ಮನ ಸ್ಸಿಗೂ ಮಿಕ್ಕ ಇಂದ್ರಿಯಗಳಿಗೂ ಪರಸ್ಪರವಾಗಿ ನಾನು ಹೆಚ್ಚು, ತಾನು ಹೆಚ್ಚು ಎಂಬುದಾಗಿ ವಿವಾದ [ಭಾರ.-ಅಶ್ವ. ೨೩]. ಮನಸ್ಸು ಎಲ್ಲಾ ಇಂದ್ರಿಯಗಳನ್ನೂ ಜಯಿಸಿ ತಾನೇ ಅವುಗಳಲ್ಲಿ ಸರ್ವೋತ್ತಮನೆನಿಸಿಕೊಂಡದ್ದು [ಭಾರ.-ಅಶ್ವ. ೩೧].

**ಮನಸ್ಯು.**—ಒಬ್ಬ ಅರಸು. ಚಂದ್ರವಂಶದ ಪ್ರವೀರನೆಂಬ ರಾಜನಿಂದ ಶೂರಸೇನೆಯಲ್ಲಿ ಜನಿಸಿದವ. ಈತ ಸೌವೀರರಾಜಪುತ್ರಿಯನ್ನು ಮದುವೆಯಾಗಿದ್ದ. ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಶಕ್ತ, ಸಂಹನನ, ವಾಗ್ಮಿಯೆಂಬ ಮೂವರು ಪುತ್ರರನ್ನು ಪಡೆದ [ಭಾರ.-ಆದಿ. ೮೮].

**ಮನು.**—ಇವರು ಹದಿನಾಲ್ಕು ಮಂದಿ ಚತುರ್ಮುಖನ ಒಂದು ಹಗಲಿನಲ್ಲಿ ಈ ಹದಿನಾಲ್ಕು ಮಂದಿಯೂ ಭೂಲೋಕದಲ್ಲಿ ರಾಜ್ಯಭಾರಮಾಡುತ್ತಾರೆ ಮನುವೆಂಬುದು ಇಂದ್ರನೆಂಬ ಹಾಗೆ ಪದವಿಯ ಹೆಸರೇ ಹೊರತು ವ್ಯಕ್ತಿಯ ಹೆಸರಲ್ಲ. ಒಬ್ಬೊಬ್ಬ ಮನುವಿನ ರಾಜ್ಯಭಾರ ಕಾಲಕ್ಕೆ ಮನ್ವಂತರವೆಂದು ಹೆಸರು ಸ್ವಯಂಭೂ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷರೆಂಬ ಆರು ಮಂದಿ ಮನುಗಳು ಬ್ರಹ್ಮನ ಕಳೆದ ೫೦ ವರ್ಷಗಳ ಅವಧಿಯಲ್ಲಿ ರಾಜ್ಯಭಾರಮಾಡಿದರು ಈಗ ಏಳನೆಯವನಾದ ವೈವಸ್ವತ ಮನು ರಾಜ್ಯಭಾರಮಾಡುತ್ತಿದ್ದಾನೆ ಈ ಕಾರಣದಿಂದಲೇ ಈ ಮನ್ವಂತರಕ್ಕೆ ವೈವಸ್ವತಮನ್ವಂತರವೆಂದು ಹೆಸರು ಈತನ ತರುವಾಯ ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿಗಳೆಂಬ ಏಳು ಮಂದಿ ಮುಂದೆ ನಡೆಯುವ ಬ್ರಹ್ಮನ ೫೦ ವರ್ಷಗಳಲ್ಲಿ ರಾಜ್ಯಭಾರಮಾಡುವರು ತರುವಾಯ ಚತುರ್ಮುಖನ ಆಯುಃಪರಿಮಾಣ ಮುಗಿದು ಮಹಾಪ್ರಳಯವಾಗುತ್ತದೆ ಸಪ್ತದ್ವೀಪ ಪರಿವೃತವಾದ, ಮಹಾ ಸಾಗರದಿಂದ ಸುತ್ತುವರಿಯಲ್ಪಟ್ಟ ಭೂಮಂಡಲಕ್ಕೆಲ್ಲ ಮನುವೊಬ್ಬನೇ ಚಕ್ರವರ್ತಿಯಾಗಿ ರಾಜ್ಯಭಾರಮಾಡುತ್ತಾನೆ ಕೃತ, ತ್ರೇತಾ, ದ್ವಾಪರ, ಕಲಿಯುಗಗಳು ಇದುವರೆಗೆ ಇಪ್ಪತ್ತೇಳು ಬಾರಿ ನಡೆದು ಈಗ ಇಪ್ಪತ್ತೆಂಟನೆಯ ಕಲಿಯುಗ ನಡೆಯುತ್ತಿದೆ ಈ ಯುಗ ಮುಗಿದ ಬಳಿಕ ಇಂತೆಯೇ ಕೃತ, ತ್ರೇತಾ, ದ್ವಾಪರ, ಕಲಿಯುಗಗಳು ಇನ್ನೂ ೪೩ ಬಾರಿ ಆದರೆ (ಅಂದರೆ ಕೃತಾದಿ ಯುಗಗಳು ೭೧ ಬಾರಿ ಮುಗಿದರೆ) ಒಂದು ಮನ್ವಂತರವಾಗುತ್ತದೆ. ಒಂದು ಮನ್ವಂತರಕ್ಕೆ ೩೦,೬೭,೨೦,೦೦೦ ಮಾನುಷ ಸಂವತ್ಸರಗಳು [ವಿಷ್ಣು -೧, ೩. ಹರಿ.-೧, ೭. ಬ್ರಹ್ಮ-೫. ಬ್ರಹ್ಮವೈ -೨, ೯೩, ಮಾರ್ಕಂ.-೫೦] ಈಗ ರಾಜ್ಯಭಾರಮಾಡುತ್ತಿರುವ ಮನು ಸೂರ್ಯನ ಮಗ. ಈ ಕಾರಣದಿಂದಲೇ ಈ ಮನುವಿಗೆ ವೈವಸ್ವತಮನುವೆಂತಲೂ ಈ ಮನ್ವಂತರಕ್ಕೆ ವೈವಸ್ವತಮನ್ವಂತರವೆಂತಲೂ ಹೆಸರು. ಈತನಿಗೆ ಇಕ್ಷ್ವಾಕು ಮೊದಲಾಗಿ ಹತ್ತು ಮಂದಿ ಪುತ್ರರು [ಭಾರ.-ಆದಿ. ೬೯. ಅಶ್ವ. ೪]. ಈತ ದಕ್ಷಬ್ರಹ್ಮನ ಪುತ್ರಿಯರಲ್ಲಿ ಒಬ್ಬಳಾದ ಶ್ರದ್ಧಾದೇವಿಯನ್ನು ಮದುವೆಯಾಗಿದ್ದ [ಭಾಗ.-೯, ೧. ಶಿವ -ಉಮಾ.-೩೪ ಮತ್ಸ್ಯ -೯]. ಜ್ಞಾನ ಮತ್ತು ಯೋಗ ಇವುಗಳ ಫಲವೇನೆಂಬ ವಿಷಯವಾಗಿಯೂ ಪರಮಾತ್ಮನನ್ನು

ತಿಳಿಯತಕ್ಕ ರೀತಿಗಳ ವಿಷಯವಾಗಿಯೂ ಮನು ಚಕ್ರವರ್ತಿ ಬೃಹಸ್ಪತ್ಯಾಚಾರ್ಯ ನೊಂದಿಗೆ ಸಂವಾದಮಾಡಿದ್ದು [ಭಾರ -ಶಾಂತಿ ೧೯೯-೨೦೪]. ಭಗವಂತನಿಗೆ ಪುಷ್ಪ, ಧೂಪ ಮೊದಲಾದುವುಗಳನ್ನು ಸಮರ್ಪಿಸುವ ವಿಷಯವಾಗಿ ಮನುಚಕ್ರವರ್ತಿ ಸುವರ್ಣನೆಂಬ ಮುನೀಶ್ವರನ ಸಂಗಡ ಸಂವಾದಮಾಡಿದ್ದು [ಭಾರ -ಅನು. ೧೫೫].

**ಮನೋರಮಾ** —ಒಬ್ಬ ರಾಜಪುತ್ರಿ ನಿಷಧ ದೇಶಾಧಿಪತಿಯಾಗಿದ್ದ ವೀರ ಸೇನ ರಾಜನ ಮಗಳು ಇಕ್ಷ್ವಾಕು ವಂಶದ ಧ್ರುವಸಂಧಿ ಅಥವಾ ಪೌಷ್ಯನೆಂಬ ಅರಸನನ್ನು ಮದುವೆಯಾಗಿದ್ದಳು ಲೀಲಾವತಿಯೆಂಬವಳು ಇವಳ ಸವತಿ ಮನೋರಮೆ ಧ್ರುವಸಂಧಿಯಿಂದ ಸುದರ್ಶನನೆಂಬ ಮಗನನ್ನು ಪಡೆದಳು. ಲೀಲಾ ವತಿಯೂ ಅಂತೆಯೇ ಶತ್ರುಜಿತನೆಂಬ ತನಯನನ್ನು ಹೆತ್ತಳು ಕೆಲಕಾಲದ ತರು ವಾಯ ಧ್ರುವಸಂಧಿ ರಾಜ ತನ್ನ ಕಿರಿಯ ಹೆಂಡತಿಯಾದ ಲೀಲಾವತಿಯ ಮಗನಿಗೆ ರಾಜ್ಯದಲ್ಲಿ ಪಟ್ಟಗಟ್ಟಬೇಕೆಂದಿರುವಲ್ಲಿ ಮನೋರಮೆ ತನ್ನ ತಂದೆಯ ಮೂಲಕ ತನ್ನ ಮಗನಿಗೇ ರಾಜ್ಯವನ್ನು ಕೊಡಬೇಕೆಂದು ಹೇಳಿಸಿದಳು ಧ್ರುವಸಂಧಿ ವೀರಸೇನನನ್ನು ಯುದ್ಧದಲ್ಲಿ ಕೊಂದಕಾರಣ ಮನೋರಮೆ ತನ್ನ ಮಗನೊಂದಿಗೆ ಭರದ್ವಾಜಾಶ್ರಮಕ್ಕೆ ಹೋದಳು [ದೇ ಭಾ.-೩, ೧೪-೨೫].

**ಮನ್ದ** —ಒಬ್ಬ ರಾಕ್ಷಸ. ಚ್ಯವನ ಮುನಿಯ ಹೋಮಕುಂಡದಿಂದ ಜನಿಸಿದವ. ಅಶ್ವಿನೀದೇವತೆಗಳು ಚ್ಯವನನಿಗೆ ತಾರುಣ್ಯವನ್ನು ಅನುಗ್ರಹಿಸಿದ ಕಾರಣ ಚ್ಯವನ ಅಶ್ವಿನೀದೇವತೆಗಳಿಗೆ· ಹವಿರ್ಭಾಗವನ್ನು ಕೊಟ್ಟ ಇಂದ್ರನಿಗೆ ಇದು ಸಮ್ಮತವಾಗದ ಕಾರಣ ಚ್ಯವನನ ಮೇಲೆ ವಜ್ರಾಯುಧವನ್ನು ಎಸೆಯಲಾಗಿ, ಚ್ಯವನ ಈ ರಾಕ್ಷಸ ನನ್ನು ಸೃಷ್ಟಿಮಾಡಿದ ಇಂದ್ರ ಈ ರಾಕ್ಷಸನಿಗೆ ಹೆದರಿ ಚ್ಯವನನನ್ನು ಮರೆಹೊಕ್ಕ. ನೋಡು—ಮದ [ಭಾರ -ಅನು. ೨೬೧].

**ಮನ್ದಪಾಲ**.—ಒಬ್ಬ ಮಹರ್ಷಿ ದೇಹಾಂತ್ಯದಲ್ಲಿ ತನಗೆ ಸದ್ಗತಿ ದೊರೆಯದ ಕಾರಣ, ಅದಕ್ಕೆ ಕಾರಣವೇನೆಂದು ದೇವತೆಗಳನ್ನು ಪ್ರಶ್ನೆಮಾಡಿದ. "ನೀನು ಸಂತಾನಹೀನನಾದುದರಿಂದ ನಿನಗೆ ಸದ್ಗತಿಯಿಲ್ಲ" ಎಂದು ದೇವತೆಗಳು ಹೇಳಿದರು. ಮಂದಪಾಲ ಒಡನೆಯೇ ಶಾರ್ಙ್ಗಕ ಪಕ್ಷಿರೂಪವನ್ನು ತಾಳಿ ಜರಿತೆಯೆಂಬ ಶಾರ್ಙ್ಗಕ ಹೆಣ್ಣುಹಕ್ಕಿಯೊಂದಿಗೆ ಸೇರಿ ಜರಿತಾರಿ, ಸಾರಿಸೃಕ್ಕ, ದ್ರೋಣ, ಸ್ತಂಬಮಿತ್ರರೆಂಬ ನಾಲ್ವರು ಪುತ್ರರನ್ನು ಪಡೆದು ಕಡೆಗೆ ಸದ್ಗತಿಯನ್ನೈದಿದ [ಭಾರ.-ಆ ೨೫೫. ಅನು. ೫೩]. ಈತನಿಗೆ ಲಪಿತೆಯೆಂಬ ಮತ್ತೊಬ್ಬ ಹೆಂಡತಿಯಿದ್ದಳು [ಆದಿ. ೨೫೫].

**ಮನ್ದರ**.—ಒಂದು ಪರ್ವತ. ಮೇರು ಪರ್ವತಕ್ಕೆ ಪೂರ್ವ ಭಾಗದಲ್ಲಿ ಭೂಮಿ ಯನ್ನು ನಿಲ್ಲಿಸಿರುವ ಒಂದು ಬೆಟ್ಟ. ದೇವ ದಾನವರು ಪಾಲ್ಗಡಲನ್ನು ಕಡೆಯುವಾಗ ಇದನ್ನು ಕಡೆಗೋಲಾಗಿಟ್ಟುಕೊಂಡಿದ್ದರು [ಭಾರ.-ಆದಿ. ೧೮. ವನ. ೧೬೪]. ಪಾಂಡ

ವರು ವನವಾಸ ಕಾಲದಲ್ಲಿ ತೀರ್ಥಯಾತ್ರೆಗೆ ಹೋಗಿದ್ದಾಗ ಮಂದರಪರ್ವತವನ್ನು ಸಂದರ್ಶಿಸಿದ್ದು [ವನ. ೧೪೪].

**ಮನ್ದಾರ.**—ದೇವಲೋಕದ ಕಲ್ಪವೃಕ್ಷಗಳಲ್ಲಿ ಒಂದು.

**ಮನ್ದೋದರಿ.**—(i) ನೋಡು—ಮಂಡೋದರಿ.

(ii) ಸಿಂಹಳದ್ವೀಪದ ಅರಸನಾದ ಚಂದ್ರಸೇನ ರಾಜನಿಂದ ಗುಣವತಿಯೆಂಬ ಹೆಂಡತಿಯಲ್ಲಿ ಜನಿಸಿದವಳು. ಚಂದ್ರಸೇನ ಇವಳನ್ನು ಇಂದ್ರದೇಶಾಧಿಪತಿಯಾದ ಸುಧನ್ವ ರಾಜನ ಮಗನಾದ ಕಂಬುಗ್ರೀವನಿಗೆ ಕೊಟ್ಟು ಮದುವೆಮಾಡಬೇಕೆಂದಿರುವಾಗ ಮಂದೋದರಿ "ಪುರುಷರು ಸ್ತ್ರೀಲೋಲರು. ಅವರನ್ನು ನಂಬಲಾಗದು. ನಾನು ಮದುವೆಯಾಗುವುದಿಲ್ಲ" ಎಂದಳು. ತಾಯ್ತಂದೆಗಳು ಎಷ್ಟು ವಿಧವಾಗಿ ತಿಳಿಯಹೇಳಿದರೂ ಸಮ್ಮತಿಸಲಿಲ್ಲ. ಕೆಲಕಾಲದ ಬಳಿಕ ಇವಳ ತಂಗಿಯಾದ ಇಂದುಮತಿಯ ವಿವಾಹ ಸಮಯದಲ್ಲಿ ಅನೇಕ ಮಂದಿ ರಾಜಪುತ್ರರು ಬಂದಿರುವಲ್ಲಿ ಈಕೆ ಮದ್ರರಾಜ ಪುತ್ರನಾದ ಚಾರುದೇಷ್ಣನನ್ನು ಮೋಹಿಸಿ, ತಂದೆಯ ಅನುಮತಿಯಿಂದ ಮದುವೆಯಾದಳು. ಆದರೆ ಕಡೆಗೂ ಇವಳ ಮನಸ್ಸಿನ ಅಭಿಪ್ರಾಯವೇ ಇವಳ ಅನುಭವಕ್ಕೆ ಬಂದು ಆದರಿಂದ ಬಹಳವಾಗಿ ವ್ಯಥೆಪಟ್ಟಳು [ದೇ ಭಾ -೫, ೧೭, ೧೮].

**ಮನ್ಥರಾ.**—ದಶರಥನ ಮೂರನೆಯ ಹೆಂಡತಿಯಾದ ಕೈಕಯಿಯ ದಾಸಿ. ದಶರಥ ರಾಮನಿಗೆ ಯುವರಾಜ ಪದವಿಯಲ್ಲಿ ಪಟ್ಟಗಟ್ಟಬೇಕೆಂದಿರುವಾಗ, ಇವಳು ಆ ಸುದ್ದಿಯನ್ನು ಕೇಳಿ, ತನ್ನ ಒಡತಿಯ ಬಳಿಸಾರಿ, ಆಕೆಯ ಮನಸ್ಸನ್ನು ದುರ್ಬೋಧನೆಯಿಂದ ಕಲಕಿ ರಾಮ ೧೪ ವರ್ಷಗಳ ಕಾಲ ಅರಣ್ಯಕ್ಕೆ ಹೋಗುವಂತೆ ಮಾಡಿದಳು [ರಾಮಾ.-ಅಯೋ. ೯]. ಶತ್ರುಘ್ನ ಮಂಥರೆಯನ್ನು ಶಿಕ್ಷಿಸತೊಡಗಿದ್ದು, ಮಂಥರೆ ಕೈಕಯಿಯನ್ನು ಮರೆಹೊಕ್ಕದ್ದು, ಭರತ ಅವಳನ್ನು ಶತ್ರುಘ್ನನಿಂದ ಬಿಡಿಸಿದ್ದು [ರಾಮಾ.-ಅಯೋ. ೭೮].

**ಮನ್ಮಥ.**—ನೋಡು—ಕಾಮ, ತಾರಕ, ಮದನ. ಸತೀ ವಿಯೋಗಾನಂತರ ಶಿವ ಸಮಾಧಿನಿಷ್ಠನಾಗಿದ್ದಾಗ ದೇವತೆಗಳೆಲ್ಲರೂ ಪಾರ್ವತಿಯನ್ನು ಶಿವ ಮದುವೆಯಾಗುವಂತೆ ಮಾಡಬೇಕೆಂಬ ಉದ್ದೇಶದಿಂದ ಮನ್ಮಥನನ್ನು ಕರೆದು ಶಿವನ ನಿಷ್ಠೆಯನ್ನು ಭಂಗಗೊಳಿಸುವುದಕ್ಕಾಗಿ ಶಿವನಲ್ಲಿಗೆ ಕಳುಹಿಸಿದರು. ಮನ್ಮಥ ಶಿವನನ್ನು ಗೆಲ್ಲುವುದಾಗಿ ಪ್ರತಿಜ್ಞೆಮಾಡಿದ. ಶಿವನನ್ನು ಇದಿರಿಸಲು ಹೋಗಿ ಆತನ ಹಣೆಗಣ್ಣಿನಿಂದ ಬೂದಿಯಾದ. ದೇವತೆಗಳ ಹಂಬಲಿಕೆಯನ್ನು ಕೇಳಿ ಕನಿಕರದಿಂದ ಶಿವ ಮನ್ಮಥನನ್ನು ಬದುಕಿಸಿ, ಅನಂಗನೆಂದು ಹೆಸರಿಟ್ಟದ್ದು ಮುಂತಾಗಿ [ಶಿವ.-ಪಾರ್ವತೀಖಂ. ೧೭-೨೦. ರಾಮಾ.-ಬಾಲ. ೨೩. ಲಿಂಗ.-೧೦೧].

**ಮನ್ವಂತರವರ್ಣನೆ.**—ನೋಡು—ಮನು [ಮತ್ಸ್ಯ -೯ ವಿಷ್ಣು -೩-೧. ಮಾರ್ಕಂ - ೫೦, ೫೮, ೬೬, ೭೧-೭೩, ೭೫, ೭೭, ೯೧, ೯೬]

**ಮಮತಾ.**—ಅಂಗಿರಸ ಮಹರ್ಷಿಯ ಮಗನಾದ ಉಚಥ್ಯ ಮುನಿಯ ಹೆಂಡತಿ. ನೋಡು—ಉಚಥ್ಯ, ದೀರ್ಘತಮ, ಬೃಹಸ್ಪತಿ, ಭಾರದ್ವಾಜ, ಸಂವರ್ತ [ಭಾರ.- ಆದಿ. ೧೦೩. ಶಾಂತಿ ೩೫೦. ಭಾಗ.-೯, ೨೦. ವಿಷ್ಣು.-೪, ೧೯. ಮತ್ಸ್ಯ.-೪೯].

**ಮಯ.**—(i) ತ್ರಿಪುರಾಸುರರಲ್ಲಿ ಒಬ್ಬ. ನೋಡು—ತ್ರಿಪುರ, ಮಂಡೋದರಿ [ಭಾರ -ಸ ೫೧ ಮತ್ಸ್ಯ -೧೭೯-೧೩೪]. ಮಯ ಹೇಮೆಯೆಂಬ ಅಪ್ಸರಸಿಯನ್ನು ಮದುವೆಯಾಗಿ ಮಾಯಾವಿ, ದುಂದುಭಿಗಳೆಂಬ ಇಬ್ಬರು ಪುತ್ರರನ್ನೂ ಮಂಡೋದರಿ ಯೆಂಬ ಮಗಳನ್ನೂ ಪಡೆದ ಹೇಮೆ ದೇವಲೋಕಕ್ಕೆ ಹೋದಬಳಿಕ ಮಯ ಮಂಡೋ ದರಿಯನ್ನು ರಾವಣನಿಗೆ ಕೊಟ್ಟು ಮದುವೆಮಾಡಿದ [ರಾಮಾ -ಉತ್ತ ೧೨].

(ii) ಇವ ರಾಕ್ಷಸರ ಶಿಲ್ಪಿ ಖಾಂಡವವನದಲ್ಲಿ ವಾಸನಾಗಿದ್ದ ಅಗ್ನಿ ಖಾಂಡವವನವನ್ನು ಸುಡತೊಡಗಿದಾಗ ಇವ ಅರ್ಜುನನನ್ನು ಮರೆಹೊಕ್ಕು, ಆತನ ಮೂಲಕ ಕೃಷ್ಣನಿಂದಲೂ ಅಭಯವನ್ನು ಪಡೆದು, ತನ್ನ ಕೃತಜ್ಞತೆಯನ್ನು ತೋರ್ಪಡಿಸುವ ಸಲುವಾಗಿ ಯುಧಿಷ್ಠಿರನಿಗೆ ಕೃಷ್ಣನ ಸೂಚನೆಯ ಮೇರೆಗೆ ಲೋಕ ವನ್ನೇ ಬೆರಗುಮಾಡುವ ಒಂದು ಸಭೆಯನ್ನು ನಿರ್ಮಿಸಿ, ಬಿಂದುಸರೋವರದಿಂದ ಒಂದು ದಿವ್ಯವಾದ ಗದೆಯನ್ನೂ ದೇವದತ್ತವೆಂಬ ಶಂಖವನ್ನೂ ತಂದು, ಗದೆ ಯನ್ನು ಭೀಮನಿಗೂ ಶಂಖವನ್ನು ಅರ್ಜುನನಿಗೂ ಕೊಟ್ಟು, ತಾನು ಬಿಂದುಸರೋ ವರಕ್ಕೆ ಹೋದ ನೋಡು—ಬಿಂದುಸರೋವರ [ಭಾರ.-ಆ. ೨೫೪, ೨೬೦. ಸಭಾ. ೧-೩]

**ಮಯೂರಧ್ವಜ.**—(i) ಮಣಿಪುರದ ಅರಸು ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಕಟ್ಟಿ, ಅರ್ಜುನನನ್ನು ಯುದ್ಧದಲ್ಲಿ ಸೋಲಿಸಿದ. ಬಳಿಕ ಕೃಷ್ಣಾ ರ್ಜುನರು ಬ್ರಾಹ್ಮಣವೇಷದಿಂದ ಮಯೂರಧ್ವಜನಲ್ಲಿಗೆ ಹೋಗಿ ಅವನ ಶರೀರವನ್ನು ತಮ್ಮಿಬ್ಬರಿಗೂ ಭಾಗಮಾಡಿಕೊಡುವಂತೆ ಹೇಳಿದರು. ಮಯೂರಧ್ವಜ ಅದಕ್ಕೆ ಸಮ್ಮತಿಸಿ, ತನ್ನ ಮಗನಾದ ತಾಮ್ರಧ್ವಜನ ಮೂಲಕ ತನ್ನ ದೇಹವನ್ನು ಗರಗಸ ದಿಂದ ಕುಯಿಸಿ ಎರಡು ಭಾಗ ಮಾಡಿಕೊಡುವಂತೆ ಹೇಳಿ, ತಾನು ನಿರ್ವಿಕಾರನಾಗಿ ಕುಳಿತ. ಆಗ ಕೃಷ್ಣ ಇವನ ಮನಸ್ಥೈರ್ಯಕ್ಕೆ ಮೆಚ್ಚಿ, ತನ್ನ ನಿಜರೂಪವನ್ನು ತೋರಿ, ಅವನಿಂದ ಕುದುರೆಯನ್ನು ಬಿಡಿಸಿಕೊಂಡು ಮುಂದಕ್ಕೆ ಹೊರಟ ನೋಡು— ತಾಮ್ರಧ್ವಜ [ಜೈ. ಭಾ.-೪೧-೪೬].

(ii) ಶಿವನ ಮಗನಾದ ಷಣ್ಮುಖನ ವಾಹನ ಮಯೂರವಾದುದರಿಂದ ಈ ಹೆಸರು ಆತನಿಗೂ ಸಲ್ಲುತ್ತದೆ [ಭಾರ.-ವನ. ೨೩೩].

**ಮರಣ.**—ಸಾವು ಮರಣವನ್ನು ಸೂಚಿಸುವ ಅರಿಷ್ಟಗಳು [ಶಿವ.-ಉಮಾಖಂ. ೨೫ ಭಾರ -ಶಾಂ. ೩೨೨ ಅನು ೧೫೦, ೧೬೯, ೨೪೨] ಮರಣಕಾಲದ ಯಾತನೆ ಗಳು, ಅವುಗಳ ವರ್ಣನೆ [ಭಾಗ.-೩, ೩೦]

**ಮರೀಚಿ** —(i) ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸಪುತ್ರರಲ್ಲಿ ಒಬ್ಬ. ಕಶ್ಯಪ ಮುನಿ ಈತನ ಮಗ [ಭಾರ -ಆದಿ ೬೩-೬೭ ಸ ೭, ೧೧ ಶಾಂ.೨೦೭]. ಈತ ಕರ್ದಮ ಮುನಿಪುತ್ರಿಯಾದ ಕಲಾದೇವಿಯನ್ನು ಮದುವೆಯಾಗಿದ್ದ ಕಲಾ ದೇವಿ ಈತನ ಹಿರಿಯ ಹೆಂಡತಿ [ಭಾಗ.-೪, ೧] ಊರ್ಣೆಯೆಂಬವಳು ಕಿರಿಯ ಹೆಂಡತಿ. ಈಕೆಯಲ್ಲಿ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣಿಯೆಂಬ ಆರು ಮಂದಿ ಪುತ್ರರು ಜನಿಸಿದರು ಇವರು ಆರು ಮಂದಿಯೂ ಒಮ್ಮೆ ಬ್ರಹ್ಮ ನಿಗೆ ಹಿಂಸೆಯನ್ನುಂಟುಮಾಡಿ, ದುಷ್ಟಯೋನಿಯಲ್ಲಿ ಜನಿಸುವಂತೆ ಶಾಪವನ್ನು ಪಡೆದು, ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷನ ಮಕ್ಕಳಾಗಿ ಹುಟ್ಟಿ, ಒಡನೆಯೇ ದೇಹತ್ಯಾಗಮಾಡಿದರು ಎರಡನೆಯ ಜನ್ಮದಲ್ಲಿ ಕಾಲನೇಮಿಯೆಂಬ ರಾಕ್ಷಸನ ಮಕ್ಕ ಳಾಗಿ ಹುಟ್ಟಿ ಸತ್ತರು. ಮೂರನೆಯ ಜನ್ಮದಲ್ಲಿ ವಸುದೇವನಿಂದ ದೇವಕಿಯಲ್ಲಿ ಹುಟ್ಟಿ, ಕಂಸನ ಖಡ್ಗಕ್ಕೆ ಆಹುತಿಯಾಗಿ ಸತ್ತು ಶಾಪವಿಮೋಚನೆಯನ್ನು ಪಡೆದು ಸದ್ಗತಿಯನ್ನೈದಿದರು. ಬಲರಾಮ ಮತ್ತು ಶ್ರೀಕೃಷ್ಣರಿಗಿಂತ ಮೊದಲು ದೇವಕೀ ವಸುದೇವರಿಂದ ಜನಿಸಿದ ಆರು ಮಂದಿ ಮಕ್ಕಳೂ ಸಾಯುವುದಕ್ಕೆ ಬ್ರಹ್ಮನ ಶಾಪವೂ ಒಂದು ದೊಡ್ಡ ಕಾರಣವಾಗಿ ಏರ್ಪಟ್ಟಿತು ಕಂಸ ಅವರ ಸಾವಿಗೆ ನಿಮಿತ್ತ ಮಾತ್ರದವ [ಭಾಗ.-೧೦, ೮೫. ದೇ ಭಾ.-೪, ೨೨]

(ii) ಈಗ ನಡೆಯುತ್ತಿರುವ ಏಳನೆಯದಾದ ವೈವಸ್ವತ ಮನ್ವಂತರದಲ್ಲಿ ಬ್ರಹ್ಮಮಾನಸಪುತ್ರರಲ್ಲಿ ಒಬ್ಬ. ಈತನ ಮಗ ಕಶ್ಯಪ ಮಹರ್ಷಿ. ಈತ ಮಂತ್ರದ್ರಷ್ಟ [ಮತ್ಸ್ಯ.-೧೪೫]

(iii) ಕಶ್ಯಪ ಮಹರ್ಷಿಯಿಂದ ಜನಿಸಿದ ಅಪ್ಸರಸಿಯರಲ್ಲಿ ಒಬ್ಬಳು [ಭಾರ.- ಆದಿ. ೧೩೨].

**ಮರುತ್.**—ಗಾಳಿ. ಕಶ್ಯಪ ಮುನಿಯ ಮೊದಲನೆಯ ಹೆಂಡತಿಯಾದ ದಿತಿ ಗರ್ಭ ಧಾರಣಮಾಡಿದ್ದಾಗ, ಇಂದ್ರ ಕತ್ತರಿಸಿದ ೪೯ ತುಂಡುಗಳಿಗೂ ಈ ಹೆಸರು ಸಲ್ಲು ತ್ತದೆ. ನೋಡು—ದಿತಿ, ಮಾರುತ, ಇಂದ್ರ [ಭಾರ -ಆದಿ. ೧೩೨. ಶಾಂತಿ ೨೦೭]. ಇಂದ್ರ ದಿತಿಯ ಮಕ್ಕಳನ್ನೆಲ್ಲ ಕೊಂದ. ದಿತಿ ಇಂದ್ರನನ್ನು ಕೊಲ್ಲತಕ್ಕ ಮಗ ತನಗೆ ಹುಟ್ಟಬೇಕೆಂಬ ಅಭಿಲಾಷೆಯಿಂದ ಕಶ್ಯಪನನ್ನು ಬೇಡಿ ಕಶ್ಯಪನ ಅನುಗ್ರಹದಿಂದ ಗರ್ಭವತಿಯಾದಳು. ಇಂದ್ರ ಈ ಸಮಾಚಾರವನ್ನು ಕೇಳಿ ದಿತಿಯ ಬಳಿಗೆ ಬಂದು ಆಕೆ

ಯನ್ನು ಅನುಗಾಲವೂ ಶುಶ್ರೂಷೆಮಾಡುತ್ತಿರುವಲ್ಲಿ, ದಿತಿ ಒಂದು ದಿನ ಅಶುಚಿಯಾಗಿ ಹಗಲುಹೊತ್ತಿನಲ್ಲಿ ನಿದ್ದೆಮಾಡುತ್ತಿದ್ದಳು ಸಮಯವನ್ನು ಹೊಂಚು ಹಾಕುತ್ತಿದ್ದ ಇಂದ್ರ ದಿತಿಯ ಗರ್ಭವನ್ನು ಏಳು ಭಾಗವಾಗಿ ಕತ್ತರಿಸಿದ. ಆಗ ಆ ಗರ್ಭ ಅಳತೊಡಗಿತು. ಅಂತು ಅಳುತ್ತಿದ್ದ ಏಳು ತುಂಡುಗಳನ್ನು ಮರಳಿ ಏಳು ಏಳು ಭಾಗ ಮಾಡಿ (ಮಾ+ರುದ) ಅಳಬೇಡ ಎಂದು ಹೇಳಿದ ಇಷ್ಟರಲ್ಲಿ ದಿತಿ ಎಚ್ಚತ್ತು, ಇಂದ್ರನ ಕೃತ್ಯವನ್ನು ನೋಡಿ, ತನ್ನ ಅಜಾಗರೂಕತೆಗೆ ಮನಮರುಗಿ ಈ ಮಕ್ಕಳನ್ನು ನೀನೇ ಕಾಪಾಡಬೇಕೆಂದು ಇಂದ್ರನನ್ನು ಬೇಡಿದಳು. ಇಂದ್ರ ಅವರಿಗೆ ದೇವತ್ವವನ್ನು ಕೊಟ್ಟು ಮಾರುತ ಅಥವಾ ಮರುತ್ತುಗಳೆಂದು ಹೆಸರಿಟ್ಟ. ಇಂತು ವಾಯು (ಮರುತ್ತು)ಗಳಲ್ಲಿ ೪೯ ಬಗೆಯಾಯಿತು ಪಂಚಪ್ರಾಣಗಳನ್ನೂ ಇವುಗಳೊಂದಿಗೆ ಸೇರಿಸಿದರೆ ಒಟ್ಟು ೫೪ ಬಗೆ [ಭಾಗ -೬-೧೮ ರಾಮಾ -ಬಾಲ ೪೬, ೪೭]

**ಮರುತ್ತ.**—ಒಬ್ಬ ಅರಸು ಸೂರ್ಯವಂಶದ ಅವಿಕ್ಷಿತ ರಾಜನ ಮಗ ಈ ಕಾರಣದಿಂದ ಈತನಿಗೆ ಆವಿಕ್ಷಿತನೆಂಬ ಹೆಸರೂ ರೂಢಿಯಲ್ಲಿದೆ ಈತ ಜನಿಸಿದಕೂಡಲೇ ತುಂಬುರು ಮರುತ್ತನ ಜನನಿಯಾದ ವಿಶಾಲಾದೇವಿಯಲ್ಲಿಗೆ ಬಂದು ನಿನ್ನ ಮಗ ಮರುತ್ತುಗಳಂತೆ ಮಹಾಪರಾಕ್ರಮಿಯೂ ಬಲಾಢ್ಯನೂ ಆಗುವನೆನ್ನಲು ಈತನಿಗೆ ಮರುತ್ತನೆಂದು ಹೆಸರಿಟ್ಟರು ಮರುತ್ತ ಇಂದ್ರನಿಗಿಂತಲೂ ಬಲಾಧಿಕನೂ ಶ್ರೀಮಂತನೂ ಎನಿಸಿದ್ದ ಒಮ್ಮೆ ಯಾಗಮಾಡತೊಡಗಿ ಬೃಹಸ್ಪತಿಯನ್ನು ಋತ್ವಿಜನನ್ನಾಗಿ ಕರೆದ. ಆದರೆ ಮನುಷ್ಯರು ಮಾಡುವ ಯಜ್ಞಕ್ಕೆ ಹೋಗಬಾರದೆಂದು ಇಂದ್ರ ಬೃಹಸ್ಪತಿಯನ್ನು ಅಡ್ಡಗಿಸಿದ ಬಳಿಕ ನಾರದನ ಸೂಚನೆಯಂತೆ ಮರುತ್ತ ರಾಜ ಬೃಹಸ್ಪತಿಯ ತಮ್ಮನಾದ ಸಂವರ್ತನನ್ನು ಕರೆತಂದು ಯಜ್ಞಮಾಡತೊಡಗಿದ ಇಂದ್ರ ಯಜ್ಞಕ್ಕೆ ವಿಘ್ನಮಾಡತೊಡಗಿದ. ಇಂದ್ರನ ಸಾಹಸ ಸಂವರ್ತನ ಮಂತ್ರಬಲದ ಮುಂದೆ ಸಾಗಲಿಲ್ಲ ಆಗ ಇಂದ್ರಾದಿಗಳು ಪ್ರತ್ಯಕ್ಷನಾಗಿ ಬಂದು ಆಹುತಿಗಳನ್ನು ಸ್ವೀಕರಿಸತೊಡಗಿದರು [ಭಾರ -ಸಭಾ. ೭, ೮ ಅಶ್ವ ೪] ಈ ಯಜ್ಞದಲ್ಲಿ ಮರುತ್ತುಗಳು ಬಡಿಸತಕ್ಕವರಾಗಿದ್ದರು. ವಿಶ್ವೇದೇವತೆಗಳು ಸಭಾಸದರಾಗಿದ್ದರು [ದ್ರೋ ೫೫ ಶಾಂತಿ. ೨೮ ಅಶ್ವ ೪, ೫, ೬] ಈತ ಆ ಯಜ್ಞದಲ್ಲಿ ಬ್ರಾಹ್ಮಣರಿಗೆ ಹಂಚಿಕೊಟ್ಟು ಉಳಿದ ಹಣವನ್ನು ಹಿಮವತ್ಪ್ರಾಂತದಲ್ಲಿ ಹೂತಿಟ್ಟ. ಯುಧಿಷ್ಠಿರ ಅಶ್ವಮೇಧಕ್ಕೆ ಮೊದಲು ವ್ಯಾಸನ ಸೂಚನೆಯಂತೆ ಆ ಹಣವನ್ನು ತಂದು ತನ್ನ ಅಶ್ವಮೇಧಕ್ಕೆ ಉಪಯೋಗಿಸಿಕೊಂಡ [ಭಾರ -ಅಶ್ವ. ೪-೬, ೯ ಮಾರ್ಕಂ.-೧೩೨-೧೩೪] ಮರುತ್ತ ಯಜ್ಞಮಾಡುತ್ತಿದ್ದಾಗ ದಿಗ್ವಿಜಯಕ್ಕೆ ಹೊರಟ ರಾವಣ ಯಜ್ಞಶಾಲೆಗೆ ಬಂದು ಪೀಡಿಸಿದ್ದು [ರಾಮಾ -ಉತ್ತ. ೧೮]. ಮರುತ್ತನ ವಂಶ ವರ್ಣನೆ [ಭಾಗ -೯-೨].

**ಮಲದ.**—ಕರೂಶ ದೇಶದ ಪಕ್ಕದಲ್ಲಿರುವ ಒಂದು ದೇಶ. ನೋಡು:—ಕರೂಶ. ಈಗಣ ಷಹಾಬಾದ್ ಜಿಲ್ಲೆಯ ಪಶ್ಚಿಮ ಭಾಗ [ಭೀ ೯ ರಾಮಾ.-ಬಾಲ ೨೩].

**ಮಲಯ.**—(i) ಭರತಖಂಡದ ಸಪ್ತಕುಲಪರ್ವತಗಳಲ್ಲಿ ಒಂದು [ಭಾರ.-ಭೀ. ೯, ೧೧].

(ii) ಭರತಖಂಡದೊಳಗಣ ಒಂದು ಉಪಪರ್ವತ. ಪಶ್ಚಿಮ ಘಟ್ಟಗಳಿಗೆ ಸೇರಿದ್ದು. ಇದರಿಂದ ಕೃತಮಾಲಾ, ತಾಮ್ರಾ, ಉತ್ಪಲಾವತಿ, ಪುಷ್ಪಜಾ ಮೊದಲಾದ ನದಿಗಳು ಹುಟ್ಟಿ ಹರಿಯುತ್ತವೆ [ಮತ್ಸ್ಯ -೧೧೪].

**ಮಲಯಧ್ವಜ.**—ಒಬ್ಬ ಅರಸು. ಮಣಲೂರಿನಲ್ಲಿ ರಾಜ್ಯಭಾರಮಾಡುತ್ತಿದ್ದ ಚಿತ್ರಾಂಗದೆಯ ತಂದೆ. ಅರ್ಜುನನ ಮಾವ ಇವನಿಗೆ ಪ್ರವೀರ, ಚಿತ್ರವಾಹನ ಎಂಬವು ನಾಮಾಂತರಗಳು [ಭಾರ.-ಆದಿ. ೨೩೫ ಸ. ೩೩]. ಇವ ಪಾಂಡವರ ಪರನಾಗಿ ಹೋರಾಡಿ ಹದಿನೇಳನೆಯ ದಿನದ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದ [ಭಾರ.-ಕರ್ಣ ೫೬].

**ಮಲ್ಲ.**—ಒಂದು ದೇಶ. ಇದರಲ್ಲಿ ಪೂರ್ವ ಮಲ್ಲ, ಪಶ್ಚಿಮ ಮಲ್ಲ ಎಂಬುದಾಗಿ ಎರಡು ಭೇದಗಳಿವೆ. ಪಶ್ಚಿಮ ಮಲ್ಲ ಈಗ ಮುಲ್ತಾನ್ (Multan) ಎಂದು ಪ್ರಸಿದ್ಧವಾಗಿದೆ. ಪೂರ್ವ ಮಲ್ಲ ಹಜರಿಬಾಗ್ (Hazaribagh) ಮತ್ತು ಮನು ಭೂಮಿ (Manbhum) ಜಿಲ್ಲೆಗಳಿಗೆ ಸೇರಿದೆ [ಭಾರ -ಭೀ. ೯].

**ಮಹತೀ.**—ನಾರದನ ವೀಣೆಯ ಹೆಸರು.

**ಮಹಾಕಾಯ.**—ರಾವಣನ ಮುಖ್ಯ ಸೇನಾಪತಿ ಧೂಮ್ರಾಕ್ಷ ಮಡಿದ ಬಳಿಕ ಇವ, ಕಪಿಸೇನೆಯನ್ನು ಇದಿರಿಸಿ ವಾಲಿಪುತ್ರನಾದ ಅಂಗದನಿಂದ ಮಡಿದ [ರಾಮಾ.-ಯು. ೭೧].

**ಮಹಾನದಿ.**—ಓಢ್ರ ದೇಶದಲ್ಲಿದೆ [ಆದಿ. ೨೩೫. ಭೀ ೯].

**ಮಹಾಪಾರ್ಶ್ವ.**—ಒಬ್ಬ ರಾಕ್ಷಸ. ವಿಶ್ರವಸನಿಂದ ಪುಷ್ಪೋತ್ಕಟೆಯಲ್ಲಿ ಜನಿಸಿದವ. ರಾವಣನ ಬಲತಮ್ಮ. ಇವ ರಾವಣನ ಆಪ್ತರಲ್ಲಿ ಒಬ್ಬ [ರಾಮಾ -ಸುಂ. ४೯]. ಸೀತೆಯನ್ನು ಎಷ್ಟುಮಾತ್ರಕ್ಕೂ ರಾಮನಿಗೆ ಒಪ್ಪಿಸಲಾಗದೆಂದು ರಾವಣನಿಗೆ ಬೋಧೆಮಾಡಿ, ಯುದ್ಧದಲ್ಲಿ ಅಂಗದನಿಂದ ಹತನಾದ [ರಾಮಾ.-ಯು. ೬೯, ೯೯].

**ಮಹಾಭಿಷ.**—ಪುರಾತನ ಕಾಲದ ಅರಸು. ಇಕ್ಷ್ವಾಕು ಸಂತತಿಯವ. ಇವ ಅನೇಕ ಯಜ್ಞಗಳನ್ನು ಮಾಡಿ ಬ್ರಹ್ಮಲೋಕವನ್ನು ಪಡೆದಿದ್ದ. ಒಮ್ಮೆ ಗಂಗೆಯ ಸೆರಗು ಹಾರಿಹೋಗಿದ್ದಾಗ ಮಹಾಭಿಷ ಆಕೆಯನ್ನು ಪ್ರೇಮಭರಿತ ದೃಷ್ಟಿಯಿಂದ ನೋಡಿ, ಭೂಲೋಕದಲ್ಲಿ ಜನಿಸುವಂತೆ ಬ್ರಹ್ಮನಿಂದ ಶಾಪವನ್ನು ಪಡೆದು ಚಂದ್ರ

ವಂಶದ ಪ್ರತೀಪ ರಾಜನಿಗೆ ಶಂತನುವೆಂಬ ಹೆಸರಿನಿಂದ ಮಗನಾಗಿ ಜನಿಸಿದ. ನೋಡು—ಶಂತನು [ಭಾರ.-ಆದಿ. ೧೦೩].

**ಮಹಾರೌರವ.**—ಇಪ್ಪತ್ತೊಂದು ನರಕಗಳಲ್ಲಿ ಒಂದು. ನೋಡು—ನರಕ.

**ಮಹಾಲಕ್ಷ್ಮಿ.**—ವಿಷ್ಣುವಿನ ಹೆಂಡತಿ [ದೇ.ಭಾ.-೩-೬].

**ಮಹಾಸರಸ್ವತಿ.**—ಬ್ರಹ್ಮನ ಹೆಂಡತಿ ,, ,,

**ಮಹಾಸೇನ** —ಕುಮಾರಸ್ವಾಮಿ.

**ಮಹಿಷಾಸುರ.**—(1) ಒಬ್ಬ ರಾಕ್ಷಸ. ದಿತಿಯ ಮಕ್ಕಳನ್ನೆಲ್ಲ ಇಂದ್ರ ಸಂಹರಿಸಲಾಗಿ ಅಪುತ್ರವತಿಯಾದ ದಿತಿ ಸುಪಾರ್ಶ್ವ ಮುನಿಯ ಆಶ್ರಮದ ಬಳಿ ಎಮ್ಮೆಯಂತೆ ನಿಂತು ತಪಸ್ಸುಮಾಡಿದಳು. ಬ್ರಹ್ಮ ಅಲ್ಲಿಗೆ ಬಂದು ಅವಳ ಅಭಿಪ್ರಾಯವನ್ನು ತಿಳಿದು ನಿನಗೆ ಬಲಾಧಿಕನಾದ ಪುತ್ರ ಜನಿಸುವನೆಂದು ಹೇಳಿಹೋದ. ಆಗ ಸುಪಾರ್ಶ್ವ ಕೋಣದಂತಿರುವ (ಮಹಿಷದಂತೆ ಇರುವ) ಮಗ ಹುಟ್ಟುವನೆಂದ. ದಿತಿ ಮರಳಿ ಬ್ರಹ್ಮನನ್ನು ಬೇಡಲಾಗಿ, ಮುಖ ಮಾತ್ರ ಮಹಿಷದಂತಿರುವುದು ಮಿಕ್ಕ ಆಕಾರವೆಲ್ಲ ಮನುಷ್ಯನಂತಿರುವುದೆಂದು ಅನುಗ್ರಹಿಸಿದ. ಮಹಿಷ ಜನಿಸಿ, ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ತನಗೆ ಮರಣವಿಲ್ಲದಂತೆ ಅನುಗ್ರಹಿಸಬೇಡಿದ. ಆಗ ಶಿವ ಅದು ಸಾಧ್ಯವಿಲ್ಲ. ಹುಟ್ಟಿದವರಿಗೆ ಸಾವು ತಪ್ಪಿದುದಲ್ಲ ಎನಲು, ಮಹಿಷ ಹಾಗಾದರೆ ತನಗೆ ಹೆಂಗಸಿನಿಂದ ಮರಣವಾಗಲೆಂದು ಬೇಡಲಾಗಿ, ಶಿವ "ತಥಾಸ್ತು" ಎಂದು ಕಣ್ಮರೆಯಾದ ಮಹಿಷನ ದುರುದುಂಬಿತನ ತಡೆಯಲು ಅಶಕ್ಯವಾಯಿತು. ದೇವತೆಗಳೆಲ್ಲರೂ ತಮ್ಮ ತೇಜಸ್ಸಿನ ಒಂದೊಂದು ಭಾಗವನ್ನು ಒಟ್ಟುಗೂಡಿಸಿ ಹೊಗಳಿದರು ಆಗ ಒಬ್ಬ ದಿವ್ಯಸುಂದರಿ ಏರ್ಪಟ್ಟಳು. ಬಳಿಕ ದೇವತೆಗಳೆಲ್ಲರೂ ತಮ್ಮ ಆಯುಧಗಳನ್ನೆಲ್ಲ ಆಕೆಗೆ ಅರ್ಪಿಸಿ ಮೊರೆಯಿಡಲಾಗಿ, ಆಕೆ ತ್ರಿಪುರಸುಂದರಿಯೆಂಬ ಹೆಸರಿನಿಂದ ಹಿಮವತ್ಪ್ರಾಂತದಲ್ಲಿ ಕ್ರೀಡಿಸುತ್ತಿರಲಾಗಿ, ನಾರದ ಮಹಿಷನಲ್ಲಿಗೆ ಬಂದು, ಆಕೆಯ ರೂಪವನ್ನು ಬಣ್ಣಿಸಲಾಗಿ, ಮಹಿಷ ಆಕೆಯನ್ನು ಮೋಹಿಸಿದ. ಯುದ್ಧಮಾಡಿ ನನ್ನನ್ನು ಸೋಲಿಸಿದವನನ್ನೇ ನಾನು ಮದುವೆಯಾಗುವೆನೆಂದು ದೇವಿ ಹೇಳಲಾಗಿ, ಆಕೆಯೊಂದಿಗೆ ಯುದ್ಧಮಾಡಿ ಹತನಾದ [ಶಿವ.-ಉಮಾ. ೪೬ ದೇ ಭಾ -೫-೨೦. ಮತ್ಸ್ಯ.-೧೫೩. ಮಾರ್ಕಂ -೭೯, ೮೦]. ರಂಭನೆಂಬ ರಕ್ಕಸ ಪುತ್ರಾರ್ಥವಾಗಿ ಅಗ್ನಿಯನ್ನು ಕುರಿತು ತಪಸ್ಸುಮಾಡುತ್ತಿದ್ದಲ್ಲಿ ಅಗ್ನಿ ಪ್ರತ್ಯಕ್ಷನಾಗಿ "ದೇವತೆಗಳನ್ನು ಸದೆಬಡೆಯುವಂತಹ ಪುತ್ರ ಜನಿಸುವ. ಆದರೆ ನಿನಗೆ ಮೊದಲು ಯಾವ ಜಂತು ಕಣ್ಣಿಗೆ ಬಿದ್ದು ನೀನು ಕ್ರೀಡಿಸುವೆಯೋ ಅಂತಹ ಮಗನೇ ಹುಟ್ಟುವ" ಎಂದ. ರಂಭ ಒಂದು ಮಹಿಷಿಯನ್ನು (ಎಮ್ಮೆ) ಕಂಡು ಕ್ರೀಡಿಸಲಾಗಿ ಮಹಿಷಾಸುರ ಜನಿಸಿದ [ದೇ ಭಾ.-೩-೧೩].

(ii) ಪ್ರಹ್ಲಾದನ ತಮ್ಮನಾದ ಅನುಹ್ರಾದನ ಕಿರಿಯುಮಗ. ತಾರಕಾಸುರನ ಸೇನಾಪತಿಯಾಗಿದ್ದು ಷಣ್ಮುಖನಿಂದ ಮಡಿದ [ಭಾರ.-ವನ ೨೩೧ ದ್ರೋ ೧೬೬]

**ಮಹೇನ್ದ್ರ.**—(i) ಸಪ್ತ ಕುಲಪರ್ವತಗಳಲ್ಲಿ ಒಂದು [ಭಾರ -ಆದಿ. ೨೩೫ ವನ ೮೩. ಭೀ. ೯]. ಯುಧಿಷ್ಠಿರ ತೀರ್ಥಯಾತ್ರೆಮಾಡಿದಾಗ ಇಲ್ಲಿಗೆ ಹೋಗಿದ್ದ. ಪರಶುರಾಮ ಇಲ್ಲಿಯೇ ಆಶ್ರಮವನ್ನು ಕಲ್ಪಿಸಿಕೊಂಡು ವಾಸವಾಗಿದ್ದ. ಈಗ ಇದನ್ನು ಕಾಲಂಜರವೆನ್ನುತ್ತಾರೆ [ಭಾರ -ವನ ೧೭]. ಪರಶುರಾಮ ಶ್ರೀ ರಾಮನಿಂದ ನಿಗ್ರಹವನ್ನು ಪಡೆದ ತರುವಾಯ ಮಹೇಂದ್ರಪರ್ವತಕ್ಕೆ ಹೋಗಿ ನಿಂತ [ರಾಮಾ -ಬಾಲ ೭೬] ಈ ಪರ್ವತದಿಂದ ತ್ರಿಭಾಗಾ, ಋಷಿಕುಲ್ಯಾ, ಇಕ್ಷುದಾ, ತ್ರಿದಿವಾ, ಅಚಲಾ, ತಾಮ್ರಪರ್ಣೀ, ಮೂಲೀ, ಶರವಾ, ವಿಮಲಾ ಎಂಬ ನದಿಗಳು ಹುಟ್ಟಿ ಹರಿಯುತ್ತವೆ [ಮತ್ಸ್ಯ.-೧೧೪].

(ii) ಸ್ವರ್ಗಲೋಕಾಧಿಪತಿಯಾದ ಇಂದ್ರನಿಗೂ ಈ ಹೆಸರು ಸಲ್ಲುತ್ತದೆ ನೋಡು—ಇಂದ್ರ

**ಮಹೋದರ.**—(i) ಒಬ್ಬ ಮಹರ್ಷಿ. ಒಮ್ಮೆ ಈತ ಸ್ನಾನಮಾಡುತ್ತಿದ್ದಾಗ ನಾತವನ್ನು ಬೀರುತ್ತಿದ್ದ ಒಂದು ರಾಕ್ಷಸನ ತಲೆ ಈತನ ಕಾಲಿಗೆ ಅಂಟಿಕೊಂಡಿತು. ಇದರಿಂದ ಖಿನ್ನನಾದ ಮುನಿ ಅನೇಕ ತೀರ್ಥಗಳನ್ನು ಸಂಚರಿಸುತ್ತ ಔಶನಸ ತೀರ್ಥಕ್ಕೆ ಬಂದು ಅಲ್ಲಿ ಸ್ನಾನಮಾಡುವಾಗ ಆ ರುಂಡ ಬಿದ್ದುಹೋಯಿತು. ನೋಡು—ಔಶನಸತೀರ್ಥ, ಕಪಾಲಮೋಚನತೀರ್ಥ [ಭಾರ -ವನ ೮೧ ಶಲ್ಯ. ೪೦]

(ii) ಸುಮಾಲಿಯೆಂಬ ರಾಕ್ಷಸನ ಮಕ್ಕಳಲ್ಲಿ ಒಬ್ಬ [ರಾಮಾ -ಉತ್ತ. ೧೧]. ಇವ ರಾವಣನ ಸೋದರಮಾವ. ಹನೂಮಂತ ಅಶೋಕವನವನ್ನು ಹಾಳುಮಾಡಿದಾಗ, ಇವ ಹನೂಮಂತನ ಸಂಗಡ ಯುದ್ಧಮಾಡಹೋಗಿ ಸತ್ತ [ರಾಮಾ.-ಸುಂದ. ೪೮].

(iii) ಒಬ್ಬ ರಾಕ್ಷಸ ವಿಶ್ರವಸ ಮುನಿಯಿಂದ ಪುಷ್ಪೋತ್ಕಟೆಯಲ್ಲಿ ಜನಿಸಿದವ. ರಾವಣನ ಬಲತಮ್ಮ. ಮಂತ್ರಿಯೂ ಆಗಿದ್ದ ರಾಮಾಯಣ ಯುದ್ಧದಲ್ಲಿ ನೀಲನೆಂಬ ಕಪಿನಾಯಕನಿಂದ ಹತನಾದ [ರಾಮಾ.-ಯುದ್ಧ ೭೦].

(iv) ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ. ಭೀಮನಿಂದ ಹತನಾದ [ಭಾರ.-ಆದಿ. ೬೮, ೧೩೧. ಭೀ. ೮೮].

**ಮಾಕನ್ದಿ.**—ಗಂಗೆಯ ಒಡ್ಡಿನಲ್ಲಿರುವ ಒಂದು ಪಟ್ಟಣ [ಭಾರ.-ಆದಿ. ೧೪೮]. ಪಾಂಡವರು ದುರ್ಯೋಧನನೊಂದಿಗೆ ಸಂಧಿಮಾಡಿಕೊಳ್ಳಲು ಯತ್ನಿಸಿದಾಗ ದುರ್ಯೋಧನನಿಂದ ತಮಗೆ ಜೀವನಾಂಶರೂಪವಾಗಿ ಬೇಡಿದ ಐದು ಗ್ರಾಮಗಳಲ್ಲಿ ಒಂದು [ಭಾರ.-ಉದ್ಯೋ. ೩೧].

**ಮಾಗಧ.**—(i) ಮಗಧ ದೇಶದ ಅರಸು. ನೋಡು—ಜರಾಸಂಧ

(ii) ಮಗಧ ದೇಶದ ಮತ್ತೊಬ್ಬ ರಾಜಪುತ್ರ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ನಾಲ್ಕನೆಯ ದಿನದ ಯುದ್ಧದಲ್ಲಿ ಅಭಿಮನ್ಯುವಿನಿಂದ ಮಡಿದ [ಭಾರ -ಭೀ ೬೨]

**ಮಾಣ್ಡವೀ** —ಸೀರಧ್ವಜ ಜನಕನ ತಮ್ಮನಾದ ಕುಶಧ್ವಜ ಜನಕನ ಮಗಳು. ಕೈಕಯಿಯ ಪುತ್ರನಾದ ಭರತನ ಹೆಂಡತಿ ನೋಡು—ಭರತ [ರಾಮಾ -ಬಾಲ ೭೩]

**ಮಾಣ್ಡವ್ಯ** —ಒಬ್ಬ ಮಹರ್ಷಿ. ನೋಡು—ಅಣಿಮಾಂಡವ್ಯ

**ಮಾಣ್ಡಕರ್ಣಿ.**—ಒಬ್ಬ ಮಹರ್ಷಿ ನೋಡು—ಪಂಚಾಪ್ಸರಸ್ತೀರ್ಥ [ರಾಮಾ.-ಅರ. ೧೧].

**ಮಾತಲಿ** —ಇಂದ್ರನ ಸಾರಥಿ ಸುಧರ್ಮೆಯೆಂಬವಳಲ್ಲಿ ಗುಣಕೇಶಿಯೆಂಬ ಮಗಳನ್ನು ಪಡೆದ [ಭಾರ -ಉ ೯೭]. ಇವನ ಮಗನಾದ ಗೋಮುಖ ಇಂದ್ರನ ಮಗನಾದ ಜಯಂತನ ಸಾರಥಿ [ರಾಮಾ -ಉತ್ತ ೨೮ ಭಾರ -ಉ ೧೦೦] ಮಾತಲಿ ತನ್ನ ಮಗಳಿಗೆ ವರನನ್ನು ಹುಡುಕಿದ ಕಥೆ ನೋಡು—ಗುಣಕೇಶಿ ಆ ಕಾಲದಲ್ಲಿ ಮಾತಲಿ ಪಾತಾಳಲೋಕಕ್ಕೆ ಹೋಗಿದ್ದದ್ದು [ಭಾರ -ಉ. ೯೭-೧೦೫] ಸೇವ್ಯನ (ಸೇವೆಯನ್ನು ಕೈಕೊಳ್ಳುವವ) ಮೂಲಕ ದೊರೆಯಬೇಕಾದ ಪ್ರಯೋಜನದ ವಿಷಯವಾಗಿ ಮಾತಲಿ ಇಂದ್ರನೊಂದಿಗೆ ಸಂವಾದಮಾಡಿದ್ದು [ಭಾರ -ಅನು ೧೫೩]. ಅರ್ಜುನ ಹಿಮವತ್ಪರ್ವತದಲ್ಲಿ ತಪಸ್ಸುಮಾಡಿ, ಕಿರಾತರೂಪಿಯಾದ ಶಿವನಿಂದ ಪಾಶುಪತಾಸ್ತ್ರವನ್ನು ಪಡೆದ ಬಳಿಕ ಮಾತಲಿ ಅರ್ಜುನನಲ್ಲಿಗೆ ಬಂದು ಪಾರ್ಥನನ್ನು ಇಂದ್ರನ ರಥದಲ್ಲಿ ಕುಳ್ಳಿರಿಸಿಕೊಂಡು ಸ್ವರ್ಗಲೋಕಕ್ಕೆ ಕರೆದುಯ್ದದ್ದು [ಭಾರ -ವನ ४೨]. ರಾಮರಾವಣರ ಯುದ್ಧದಲ್ಲಿ ಇಂದ್ರನ ಸೂಚನೆಯ ಮೇರೆಗೆ ಮಾತಲಿ ರಾಮನಲ್ಲಿಗೆ ಬಂದು ಇಂದ್ರನ ರಥದಲ್ಲಿ ರಾಮನನ್ನು ಕುಳ್ಳಿರಿಸಿ ಯುದ್ಧಮಾಡಿಸಿದ್ದು [ರಾಮಾ.-ಯು. ೧೦೩ ಭಾರ -ವನ. ೨೯೧] ರಾಮ ಮಾತಲಿಯನ್ನು ಗೌರವಿಸಿ ಮರಳಿ ದೇವಲೋಕಕ್ಕೆ ರಥದೊಂದಿಗೆ ಕಳುಹಿಸಿದ್ದು [ರಾಮಾ.-ಯು. ೧೧೫].

**ಮಾತಾಪಿತೃಗಳ ಋಣವನ್ನು ತೀರಿಸಿಕೊಳ್ಳತಕ್ಕ ರೀತಿ.**—[ಭಾರ -ಶಾಂ. ೨೯೧].

**ಮಾದ್ರೀ.**—ಮದ್ರ ದೇಶಾಧಿಪತಿಯಾದ ಋತಾಯನನೆಂಬ ಅರಸನ ಮಗಳು. ಶಲ್ಯನ ಒಡಹುಟ್ಟಿದವಳು [ಭಾರ -ಆದಿ ೬೩] ಪಾಂಡು ರಾಜನ ಎರಡನೆಯ ಹೆಂಡತಿ. ಈಕೆ ಧೈರ್ಯಾಭಿಮಾನಿದೇವತೆಯಾದ ಧೃತಿಯ ಅಂಶದಿಂದ ಜನಿಸಿದವಳು [ಭಾರ -ಆದಿ. ೬೭, ೧೨೨] ಪಾಂಡು ರಾಜನ ಸೂಚನೆಯ ಮೇರೆಗೆ ಕುಂತಿಯ ಮೂಲಕ ಮಂತ್ರವನ್ನು ಗ್ರಹಿಸಿ, ಅಶ್ವಿನೀದೇವತೆಗಳ ಅನುಗ್ರಹದಿಂದ ನಕುಳ, ಸಹದೇವ

ರನ್ನು ಹೆತ್ತಳು [ಭಾರ.-ಆದಿ. ೧೩೩]. ಈಕೆಯ ಸಂಸರ್ಗದಿಂದ ಪಾಂಡು ಮಡಿಯ ಲಾಗಿ, ಮಾದ್ರಿ ಸಹಗಮನಮಾಡಿದಳು [ಭಾರ.-ಆದಿ. ೧೩೪].

**ಮಾಧವಿ** —ಯಯಾತಿ ರಾಜನ ಮಗಳು. ನೋಡು—ಗಾಲವ [ಭಾರ.-ಆದಿ.೮೭. ಮತ್ಸ್ಯ.-೨೫-೪೩] ಪ್ರಸವಿಸಿದ ಕೂಡಲೇ ಮರಳಿ ಕನ್ಯಾತ್ವ ಬರುವಂತೆ ಮಾಧವಿ ವರವನ್ನು ಪಡೆದದ್ದು [ಭಾರ -ಉ. ೧೧೬]. ಈಕೆಗೆ ನಾಲ್ವರು ಪುತ್ರರು. ಇಕ್ಷ್ವಾಕು ವಂಶದ ಹರ್ಯಶ್ವ ರಾಜನಿಂದ ಜನಿಸಿದವ ವಸುಮನನೆಂಬವ ಮೊದಲನೆಯವ [ಭಾರ -ಉ ೧೧೬] ಕಾಶಿ ರಾಜನಾದ ದಿವೋದಾಸನಿಂದ ಜನಿಸಿದವ ಪ್ರತರ್ದನ ನೆಂಬವ ಎರಡನೆಯವ [ಭಾರ -ಉ. ೧೧೭] ಭೋಜ ನಗರಾಧೀಶ್ವರನಾದ ಉಶೀನರ ನಿಂದ ಜನಿಸಿದ ಶಿಬಿಯೆಂಬವ ಮೂರನೆಯವ [ಭಾರ -ಉ ೧೧೮] ವಿಶ್ವಾಮಿತ್ರ ಮಹರ್ಷಿಯಿಂದ ಜನಿಸಿದ ಅಷ್ಟಕನೆಂಬವ ನಾಲ್ಕನೆಯವ [ಭಾರ.-ಉ. ೧೧೯]. ಯಯಾತಿ ಗಂಗಾ ಯಮುನಾ ಸಂಗಮಸ್ಥಲದಲ್ಲಿ ಮಾಧವಿಯ ಸ್ವಯಂವರವನ್ನು ಏರ್ಪಡಿಸಿದ್ದು ಮಾಧವಿ ಸಕಲ ರಾಜಪುತ್ರರನ್ನೂ ತಿರಸ್ಕರಿಸಿ, ತಪಸ್ಸಿಗಾಗಿ ಅರಣ್ಯಕ್ಕೆ ಹೋದದ್ದು [ಭಾರ -ಉ ೧೨೦] ಯಯಾತಿ ಅನೇಕ ಕಾಲ ಸ್ವರ್ಗಸುಖವನ್ನು ಅನುಭವಿಸಿ, ಪುಣ್ಯಹೀನನಾಗಿ ಸ್ವರ್ಗದಿಂದ ಚ್ಯುತನಾಗಿ ಭೂಮಿಗೆ ಬಂದು ಅಷ್ಟಕಾದಿ ಮಹರ್ಷಿಗಳೊಂದಿಗೆ ಸಂವಾದಮಾಡುತ್ತಿದ್ದಾಗ ಮಾಧವಿ ತನ್ನ ತಂದೆಯ ಬಳಿಗೆ ಬಂದದ್ದು [ಭಾರ.-ಆದಿ ೮೭].

**ಮಾನ್ಧಾತ.**—ಒಬ್ಬ ಅರಸು ಸೂರ್ಯ ವಂಶದ ಯುವನಾಶ್ವ ರಾಜನ ಮಗ. ಯುವನಾಶ್ವನಿಗೆ ನೂರಾರು ಮಂದಿ ಪತ್ನಿಯರಿದ್ದರೂ ಸಂತಾನಾರ್ಥವಾಗಿ ಅನೇಕ ಕ್ರತುಗಳನ್ನು ಮಾಡಿದರೂ ಸಂತಾನವಾಗದ ಕಾರಣ, ಭೃಗು ಮಹರ್ಷಿಯ ಮೂಲಕ ಪುತ್ರಕಾಮೇಷ್ಟಿಯನ್ನು ಮಾಡಿಸಿದ. ಭೃಗು ಒಂದು ಕಲಶದಲ್ಲಿ ಪುತ್ರ ಪ್ರದಗಳಾದ ಮಂತ್ರಗಳಿಂದ ಅಭಿಮಂತ್ರಿತವಾದ ಉದಕವನ್ನು ಯಜ್ಞವೇದಿಕೆ ಯಲ್ಲಿಟ್ಟಿದ್ದ. ಯುವನಾಶ್ವ ಪ್ರಮಾದದಿಂದ ಅದನ್ನು ಕುಡಿದು ಗರ್ಭಧಾರಣ ಮಾಡಿದ. ಕಾಲಕ್ರಮದಲ್ಲಿ ಶಿಶು ಜನಿಸಲಾಗಿ ಮಗು ಏನನ್ನು ಕುಡಿಯುವುದು (ಕಂ ಧಾಸ್ಯತಿ) ? ಎಂದು ಪ್ರಶ್ನೆ ಬಂತು ಆಗ ಇಂದ್ರ ತನ್ನ ಬಲಗೈ ಹೆಬ್ಬೆಟ್ಟಿನಲ್ಲಿ ಅಮೃತರಸವನ್ನು ತುಂಬಿ ಅಲ್ಲಿಗೆ ಬಂದು—ಮಾಂ ಧಾಸ್ಯತಿ (ನನ್ನನ್ನು ಚೀಪುತ್ತಾನೆ) ಎಂದು ಹೇಳಿ ಶಿಶುವಿಗೆ ಪಾನಮಾಡಿಸಲಾಗಿ ಆ ಮಗುವಿಗೆ ಮಾಂಧಾತನೆಂದು ಹೆಸರಾಯಿತು [ಭಾರ.-ವನ. ೧೨೭. ದ್ರೋ ೬೨. ಭಾಗ.-೯-೬]. ಮಾಂಧಾತ ಯದು ವಂಶದ ಶಶಬಿಂದು ರಾಜನ ಮಗಳಾದ ಬಿಂದುಮತಿಯನ್ನು ಮದುವೆಯಾಗಿ ಪುರು ಕುತ್ಸ, ಅಂಬರೀಷ, ಮುಚುಕುಂದರೆಂಬ ಮೂವರು ಪುತ್ರರನ್ನು ಪಡೆದ [ಭಾಗ.-೯-೬. ವಾಯು.-೮೮]. ಈತನಿಗೆ ೫೦ ಮಂದಿ ಪುತ್ರಿಯರು. ಇವರನ್ನು ಸೌಭರಿ

ಮಹರ್ಷಿಗೆ ಕೊಟ್ಟು ಮದುವೆಮಾಡಿದ [ಭಾಗ -೯-೬ ವಿಷ್ಣು.-೪-೨] ಇವ ಮಹಾ ಪರಾಕ್ರಮಸಂಪನ್ನನಾಗಿ ನೂರು ರಾಜಸೂಯಗಳನ್ನೂ ನೂರು ಅಶ್ವಮೇಧಗಳನ್ನೂ ಮಾಡಿ ಸಾರ್ವಭೌಮನೆನಿಸಿಕೊಂಡ [ಭಾರ.-ಶಾಂತಿ ೨೯, ೧೨೪] ಉಚಥ್ಯ ಮುನಿ ಯೊಂದಿಗೆ ಸಂವಾದಮಾಡಿದ್ದು [ಭಾರ.-ಶಾಂತಿ. ೯೦] ದಂಡೋಪಾಯ ವಿಷಯ ವಾಗಿ ಅಂಗ ರಾಜನಾದ ವಸುಹೋಮನೊಂದಿಗೆ ಸಂವಾದಮಾಡಿದ್ದು [ಭಾರ.- ಶಾಂತಿ. ೧೨೨]. ಮಾಂಧಾತೃ ಚರಿತ್ರವರ್ಣನ [ಭಾರ.-ವನ. ೧೨೭. ದ್ರೋ ೬೨ ಶಾಂತಿ ೨೮]. ಮಾಂಧಾತನಿಗೆ ಒಮ್ಮೆ ಸ್ವರ್ಗಲೋಕವನ್ನು ಜಯಿಸಬೇಕೆಂಬ ದುರ್ಬುದ್ಧಿ ಹುಟ್ಟಿ, ಇಂದ್ರನಮೇಲೆ ದಂಡೆತ್ತಿಹೋದ. ಇಂದ್ರ "ನನ್ನನ್ನು ಸೋಲಿಸುವುದಕ್ಕೆ ಮೊದಲು ಭೂಲೋಕದಲ್ಲಿರುವ ಲವಣಾಸುರನನ್ನು ಗೆದ್ದು ಬಾ" ಎಂದ. ಮಾಂಧಾತ ಲವಣಾಸುರನನ್ನು ಇದಿರಿಸಿ, ಲವಣಾಸುರ ಶಿವನ ಅನುಗ್ರಹ ದಿಂದ ಪಡೆದಿದ್ದ ಶೂಲದ ಮೂಲಕ ಲವಣನಿಂದ ಹತನಾದ [ರಾಮಾ.-ಉತ್ತ ೬೭] ಇವ ಸ್ವರ್ಗವನ್ನು ಸೇರಿದ ಬಳಿಕ ಕೆಲಕಾಲದ ಮೇಲೆ ಕೌರವರು ವಿರಾಟನ ಮೇಲೆ ದಂಡೆತ್ತಿಬಂದು ಉತ್ತರ ಗೋಗ್ರಹಣವನ್ನು ಮಾಡಿದಾಗ ಅರ್ಜುನನ ಯುದ್ಧವಿದ್ಯಾಚಾತುರ್ಯವನ್ನು ನೋಡಲು ಇಂದ್ರನ ಸಂಗಡ ಬಂದಿದ್ದ [ಭಾರ.- ವಿರಾ. ೫೩].

**ಮಾಯಾ** —ಮೋಕ್ಷಪ್ರದಗಳೆಂದು ಪ್ರಖ್ಯಾತಿವೆತ್ತ ಏಳು ಪಟ್ಟಣಗಳಲ್ಲಿ ಒಂದು. ಇದನ್ನೇ ಗಂಗಾದ್ವಾರವೆಂತಲೂ ಹರಿದ್ವಾರವೆಂತಲೂ ಕರೆಯುವರು. ಶಂತನುವಿನ ತಂದೆಯಾದ ಪ್ರತೀಪ ರಾಜ ಇಲ್ಲಿ ತಪಸ್ಸುಮಾಡಿದ. ಗಂಗೆ ಶಂತನು ವನ್ನು ಇಲ್ಲಿಯೇ ವರಿಸಿದಳು ಭರದ್ವಾಜ ಇಲ್ಲಿ ತಪಸ್ಸುಮಾಡುತ್ತಿದ್ದಾಗ ದ್ರೋಣ ನನ್ನು ಪಡೆದ. ನಾಗಕನ್ಯೆಯಾದ ಉಲೂಪಿ ಅರ್ಜುನನನ್ನು ಇಲ್ಲಿಂದಲೇ ನಾಗ ಲೋಕಕ್ಕೆ ಕರೆದುಯ್ದಳು. ನೋಡು—ಉಲೂಪಿ.

**ಮಾಯಾವತಿ.**—ಶಂಬರಾಸುರನ ಹೆಂಡತಿ. ಇವಳು ಹಿಂದಣಜನ್ಮದಲ್ಲಿ ಕಾಮನ ಪತ್ನಿಯಾಗಿದ್ದ ರತಿದೇವಿ. ನೋಡು—ಪ್ರದ್ಯುಮ್ನ [ಭಾಗ.-೧೦-೫೫ ವಿಷ್ಣು.-೫-೨೭. ಹರಿ.-೨-೧೦೪].

**ಮಾಯಾವಿ.**—ಮಯಾಸುರನಿಂದ ಹೇಮೆಯೆಂಬ ಅಪ್ಸರಸಿಯಲ್ಲಿ ಜನಿಸಿದ ಹಿರಿಯಮಗ. ದುಂದುಭಿ ಇವನ ಸಹೋದರ. ದುಂದುಭಿಯನ್ನು ಕೊಂದ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ವಾಲಿಯ ಮೇಲೆ ಯುದ್ಧಮಾಡಹೋಗಿ, ವಾಲಿಯಿಂದ ಹತನಾದ [ರಾಮಾ.-ಕಿಷ್ಕಿಂ. ೯. ಉತ್ತರ. ೧೨]

**ಮಾರಿಷಾ.**—ಪಿತೃದೇವತೆಗಳ ಹೆಂಡತಿ, ನೋಡು—ಪ್ರಚೇತಸ, ಪ್ರಮ್ಲೋ ಚಾ, ಕಂಡು.

**ಮಾರೀಚ** —(i) ಮರೀಚಿ ಮುನಿಯ ಪುತ್ರನಾದ ಕಾಶ್ಯಪನಿಗೆ ಈ ಹೆಸರು ಸಲ್ಲುತ್ತದೆ

(ii) ಸುಂದನೆಂಬ ರಾಕ್ಷಸನಿಂದ ಸುಕೇತು ಪುತ್ರಿಯಾದ ತಾಟಕೆಯೆಂಬ ಯಕ್ಷ ಸ್ತ್ರೀಯಲ್ಲಿ ಜನಿಸಿ ಅಗಸ್ತ್ಯನ ಶಾಪದಿಂದ ರಾಕ್ಷಸನಾದ ನೋಡು—ತಾಟಕಾ, ತಿಲೋತ್ತಮೆ [ರಾಮಾ.-ಬಾಲ ೨೫]. ವಿಶ್ವಾಮಿತ್ರ ಸಿದ್ಧಾಶ್ರಮದಲ್ಲಿ ಯಾಗ ಮಾಡುತ್ತಿದ್ದಾಗ ಮಾರೀಚ ಆತನ ಯಜ್ಞವನ್ನು ಹೊಲಸಮಾಡತೊಡಗಿ ರಾಮನಿಂದ ವಾಯವ್ಯಾಸ್ತ್ರದ ಮೂಲಕ ಸಮುದ್ರದ ಆಚೆಗೆ ಬಿದ್ದ [ರಾಮಾ -ಬಾಲ. ೩೦]. ಸೀತೆಯನ್ನು ಅಪಹರಿಸುವುದರಲ್ಲಿ ತನಗೆ ಸಹಾಯಮಾಡಬೇಕೆಂದು ರಾವಣ ಮಾರೀಚನಲ್ಲಿಗೆ ಹೋಗಿ, ತನ್ನ ದುರವಸ್ಥೆಯನ್ನು ಹೇಳಿಕೊಂಡ ಮಾರೀಚ ರಾಮನ ಪರಾಕ್ರಮವನ್ನು ಬಣ್ಣಿಸಿ, ಆತನ ಗೋಜಿಗೆ ಹೋಗದಿರುವಂತೆ ರಾವಣನಿಗೆ ತಿಳಿಯ ಹೇಳಿದ ರಾವಣ ಲಂಕೆಗೆ ಹೋಗಿ ಶೂರ್ಪಣಖೆಯ ಪ್ರೇರಣೆಯಿಂದ ಮರಳಿ ಮಾರೀಚನಲ್ಲಿಗೆ ಬಂದ ರಾವಣ ಮಾರೀಚ ಸಂವಾದ ಮಾರೀಚ ಮಾಯಾಮೃಗ ರೂಪವನ್ನು ತಳೆದು, ಸೀತೆಯನ್ನು ಮರುಳುಮಾಡಿದ ಬಳಿಕ ರಾಮನಿಂದ ಮಾರೀಚ ಮಡಿದ [ರಾಮಾ -ಅರಣ್ಯ ೩೮-೪೪. ಭಾರ -ವನ ೨೭೯] ಇವ ರಾವಣನ ಮಂತ್ರಿ. ಸುಬಾಹು ಇವನ ತಮ್ಮ [ಭಾರ -ಸ. ೫೦]

**ಮಾರುತಿ** —ವಾಯುಪುತ್ರರಾದ ಹನೂಮಂತನಿಗೂ, ಭೀಮಸೇನನಿಗೂ ಈ ಹೆಸರು ಸಲ್ಲುತ್ತದೆ

**ಮಾರ್ಕಣ್ಡೇಯ** —ಒಬ್ಬ ಮಹರ್ಷಿ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮ ಮಾನಸಪುತ್ರನಾದ ಭೃಗು ಮಹರ್ಷಿಯ ಸಂತತಿಯಲ್ಲಿ ಜನಿಸಿದ ಮೃಕಂಡು ಮುನಿಯ ಮಗ [ಭಾರ.-ವನ ೧೩೦. ಸಭಾ. ೪, ೧೧]. ಮಾರ್ಕಂಡೇಯ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ೧೪ ಕಲ್ಪಗಳವರೆಗಿನ ದೀರ್ಘಾಯುಷ್ಯವನ್ನು ಪಡೆದ [ಭಾರ -ವನ. ೧೩೦] ಮಾರ್ಕಂಡೇಯನ ಹೆಂಡತಿ ಧೂಮೋರ್ಣೆಯೆಂಬವಳು [ಭಾರ -ಅನು ೨೪೮] ಮಾರ್ಕಂಡೇಯ ಚರಿತ್ರ [ಭಾರ -ವನ ೧೩೦, ೧೯೧-೧೯೨] [ಭಾಗ -೧೨-೮-೧೦ ಬ್ರಹ್ಮ. ೫೨-೫೬. ಬೃಹನ್ನಾರ. ೪-೫]. ಮಾರ್ಕಂಡೇಯ ವಂಶವರ್ಣನ [ಭಾಗ -೪-೧]. ಮಾರ್ಕಂಡೇಯ ಪರಮಾತ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಆತನ ಮಾಯೆಯನ್ನು ತೋರುವಂತೆ ಕೇಳಿದ. ಭಗವಂತ " ತಥಾಸ್ತು " ಎಂದು ಕಣ್ಮರೆಯಾಗಿ ಮಾರ್ಕಂಡೇಯನಿಗೆ ತನ್ನ ಮಾಯೆಯನ್ನು ತೋರಿದ [ಮತ್ಸ್ಯ.-೧೬೫-೧೬೮. ಭಾಗ.-೧೨, ೮-೧೦]. ಪಾಂಡವರು ದ್ವೈತವನದಲ್ಲಿ ವಾಸವಾಗಿದ್ದಾಗ ಮಾರ್ಕಂಡೇಯ ಅವರಲ್ಲಿಗೆ ಬಂದು ದರ್ಶನಕೊಟ್ಟ [ಭಾರ.-ವನ. ೨೫]. ಪಾಂಡವರು ಕಾಮ್ಯಕವನದಲ್ಲಿ ವಾಸವಾಗಿದ್ದಾಗ ಅವರಲ್ಲಿಗೆ ಬಂದು, ಅವರಿಗೆ ಅನೇಕ ಪುರಾಣಕಥೆಗಳನ್ನೂ

ಧರ್ಮಗಳನ್ನೂ ಬೋಧಿಸಿದ [ಭಾರ.-ವನ. ೧೮೪-೨೩೩]. ಮಾರ್ಕಂಡೇಯ ಯುಧಿಷ್ಠಿರನಿಗೆ ಕೃಷ್ಣನ ಸರ್ವೋತ್ತಮತ್ವವನ್ನು ತಿಳಿಸಿದ [ಭಾರ.-ವನ. ೧೯೨]. ಕೃತ, ತ್ರೇತಾ, ದ್ವಾಪರ, ಕಲಿಯುಗಗಳ ಧರ್ಮವಿಚಾರವಾಗಿ ನಾರದನೊಂದಿಗೆ ಸಂವಾದ [ಭಾರ.-ಅನು. ೫೪]. ನಾರಾಯಣ ಮಾರ್ಕಂಡೇಯನಿಗೆ ಪ್ರಳಯವನ್ನು ತೋರಿದ್ದು [ಭಾರ -ವನ ೧೯೧. ಭಾಗ -೧೨, ೮-೧೦. ಮತ್ಸ್ಯ.-೧೬೪-೧೬೮]. ಕನ್ಯಾದಾನ ಕಾಲ, ಕನ್ಯಾಪ್ರದಾನಮಾಡತಕ್ಕವರು, ಸ್ತ್ರೀಯರ ಗುಣದೋಷಗಳು, ಪಾತಿವ್ರತ್ಯ, ಮುಂತಾದುವುಗಳನ್ನು ಕುರಿತು ನಾರದನೊಂದಿಗೆ ಮಾರ್ಕಂಡೇಯ ಸಂವಾದಮಾಡಿದ್ದು [ಭಾರ.-ಅನು. ೫೦-೬೨] ಮಾರ್ಕಂಡೇಯ ಕೇಳಿದ ಸಮಸ್ಯೆಗಳು [ಭಾರ -ವನ. ೧೮೪-೨೩೩].

(ii) ದಶರಥ ಮಾಡಿದ ಪುತ್ರಕಾಮೇಷ್ಟಿಯಲ್ಲಿ ಒಬ್ಬ ಋತ್ವಿಜ [ರಾಮಾ.-ಬಾಲ. ೭].

(iii) ಶ್ರೀ ರಾಮನ ಆಸ್ಥಾನದಲ್ಲಿದ್ದ ಒಬ್ಬ ಪ್ರಧಾನ [ರಾಮಾ.-ಉತ್ತ. ೭೪].

**ಮಾರ್ಕಂಡೇಯಾಶ್ರಮ.**—ಗೋಮತೀ ಸರಯೂ ನದಿಗಳ ಸಂಗಮಸ್ಥಳದಲ್ಲಿ ಭಾಗೇಶ್ವರದ ಬಳಿ ಇದೆ [ಭಾರ -ವನ ೧೩೦]

**ಮಾರ್ತಿಕಾವತಕ**—(i) ಸಾಲ್ವ ದೇಶದ ಅರಸು [ಭಾರ.-ವನ. ೧೪, ೨೦. ದ್ರೋ. ೪೮]

(ii) ಚಿತ್ರರಥ ಗಂಧರ್ವನ ನಾಮಾಂತರ ಈತ ತನ್ನ ಸ್ತ್ರೀಯರೊಂದಿಗೆ ಜಲಕೇಳಿಯಲ್ಲಿರಲಾಗಿ, ಅಲ್ಲಿಗೆ ಸ್ನಾನಾರ್ಥವಾಗಿ ಬಂದ ಜಮದಗ್ನಿಯ ಪತ್ನಿಯಾದ ರೇಣುಕೆ ಈತನನ್ನು ಮೋಹಿಸಿದಳು [ಭಾರ.-ವನ. ೧೧೭].

**ಮಾಲವ.**—ಒಂದು ದೇಶ. ಅನೂಪ ದೇಶದ ವಾಯುವ್ಯ ದಿಕ್ಕಿನಲ್ಲಿದೆ (ಪೂರ್ವಕಾಲದಲ್ಲಿ ಉಜ್ಜಯನಿ ಇದರ ರಾಜಧಾನಿಯಾಗಿತ್ತು. ಭೋಜ ರಾಜನ ಕಾಲದಲ್ಲಿ ಧಾರಾನಗರ ಇದರ ರಾಜಧಾನಿ) [ಭಾರ.-ಭೀ ೯]

**ಮಾಲವಿ.**—(i) ಮಾಲವ ರಾಜಪುತ್ರಿ. ವಿರಾಟನ ಹೆಂಡತಿಯಾದ ಸುದೇಷ್ಣೆಯ ದೊಡ್ಡತಾಯಿ ಮತ್ತು ಬಲತಾಯಿ. ಕೀಚಕ ಮತ್ತು ಉಪಕೀಚಕರು ಇವಳ ಮಕ್ಕಳು. ಸುದೇಷ್ಣೆ ಇವಳ ತಂಗಿಯೂ ಸವತಿಯೂ ಆದ ಮಾಲವಿಯ ಮಗಳು [ಭಾರ.-ವಿರಾ. ೨೧].

(ii) ಸುದೇಷ್ಣೆಯ ಜನನಿಗೂ ಈ ಹೆಸರು ಸಲ್ಲುತ್ತದೆ

(iii) ಮದ್ರ ದೇಶಾಧಿಪತಿಯಾಗಿದ್ದ ಅಶ್ವಪತಿ ರಾಜನ ಹೆಂಡತಿ. ಸಾವಿತ್ರಿಯ ಜನನಿ [ಭಾರ.-ವನ. ೨೯೮].

**ಮಾಲಿ.**—ಒಬ್ಬ ರಾಕ್ಷಸ. ವಿದ್ಯುತ್ಕೇಶನ ಮಗನಾದ ಸುಕೇಶನೆಂಬ ರಾಕ್ಷಸನಿಂದ ಗ್ರಾಮಣಿಯೆಂಬ ಗಂಧರ್ವನ ಮಗಳಾದ ದೇವವತಿಯಲ್ಲಿ ಜನಿಸಿದವ. ಮಾಲ್ಯವಂತ, ಸುಮಾಲಿಯೆಂಬವರು ಇವನ ಒಡಹುಟ್ಟಿದವರು. ಇವರು ಮೂವರೂ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ವರಗಳನ್ನು ಪಡೆದು, ವಿಶ್ವಕರ್ಮನಿಂದ ಲಂಕಾ ಪಟ್ಟಣವನ್ನು ನಿರ್ಮಿಸಿ, ಅಲ್ಲಿ ರಾಜ್ಯಭಾರಮಾಡಿಕೊಂಡಿದ್ದರು. ಆಗ ನರ್ಮದೆಯೆಂಬ ಗಂಧರ್ವ ಸ್ತ್ರೀ ಸುಂದರಿ, ಕೇತುಮತಿ, ವಸುಧೆಯೆಂಬ ತನ್ನ ಮೂವರು ಪುತ್ರಿಯರನ್ನು ಮಾಲ್ಯವಂತ, ಸುಮಾಲಿ, ಮಾಲಿಯೆಂಬ ಮೂವರಿಗೆ ಕೊಟ್ಟು ಮದುವೆಮಾಡಿದಳು ಮಾಲ್ಯವಂತನ ಹೆಂಡತಿಯಾದ ಸುಂದರಿಯೆಂಬವಳು ವಜ್ರಮುಷ್ಟಿ, ವಿರೂಪಾಕ್ಷ, ದುರ್ಮುಖ, ಸುಪ್ತಘ್ನ, ಯಜ್ಞಕೋಪ, ಉನ್ಮತ್ತರೆಂಬ ಏಳು ಮಂದಿ ಪುತ್ರರನ್ನೂ, ಅನಲೆಯೆಂಬ ಮಗಳನ್ನೂ ಪಡೆದಳು. ಸುಮಾಲಿಯ ಹೆಂಡತಿಯಾದ ಕೇತುಮತಿಯೆಂಬವಳು ಪ್ರಹಸ್ತ, ಅಕಂಪನ, ವಿಕಟ, ಕಾಲಕಾರ್ಮುಕ, ಧೂಮ್ರಾಕ್ಷ, ದಂಡ, ಸುಪಾರ್ಶ್ವ, ಸಂಹ್ರಾದಿ, ಪ್ರಘಸ, ಭಾಸಕರ್ಣರೆಂಬ ಹತ್ತು ಮಂದಿ ಪುತ್ರರನ್ನೂ, ರಾಕಾ, ಪುಷ್ಪೋತ್ಕಟಾ, ಕೈಕಸಿ, ಕುಂಭೀನಸಿಯೆಂಬ ನಾಲ್ವರು ಪುತ್ರಿಯರನ್ನೂ ಪಡೆದಳು. ಮಾಲಿಯ ಪತ್ನಿಯಾದ ವಸುಧೆಯೆಂಬವಳು ಅನಲ, ಅನಿಲ, ಹರ, ಸಂಪಾತಿಯೆಂಬ ನಾಲ್ವರು ಪುತ್ರರನ್ನು ಪಡೆದಳು [ರಾಮಾ.-ಉತ್ತರ. ೫]. ಬಳಿಕ ಈ ಮೂವರೂ ದೇವತೆಗಳನ್ನು ಸದೆಬಡಿದು ಅವರ ಅಧಿಕಾರಗಳನ್ನೆಲ್ಲ ಆಕ್ರಮಿಸಿಕೊಂಡರು. ದೇವತೆಗಳು ವಿಷ್ಣುವನ್ನು ಮರೆಹೊಕ್ಕರು ವಿಷ್ಣು ದೇವತೆಗಳಿಗೆ ಅಭಯಪ್ರದಾನಮಾಡಿದ. ಈ ವಾರ್ತೆಯನ್ನು ಕೇಳಿ ಈ ಮೂವರೂ ವಿಷ್ಣುವನ್ನು ಇದಿರಿಸಿದರು [ರಾಮಾ.-ಉತ್ತ. ೬]. ಮಾಲಿ ವಿಷ್ಣುವಿನಿಂದ ಹತನಾಗಲು ಮಾಲ್ಯವಂತ ಸುಮಾಲಿಗಳು ಲಂಕೆಯನ್ನು ಹೊಕ್ಕು, ಮರಳಿ ವಿಷ್ಣುವನ್ನು ಇದಿರಿಸಿ ಯುದ್ಧಮಾಡಿ, ಗರುಡನ ರೆಕ್ಕೆಗಳ ಹೊಡೆತದಿಂದ ಕಂಗೆಟ್ಟು ಲಂಕೆಯನ್ನು ಸೇರಿ, ಮರಳಿ ಅಲ್ಲಿಯೇ ವಾಸಮಾಡಲು ಧೈರ್ಯವಿಲ್ಲದೆ ಪಾತಾಳವನ್ನು ಹೊಕ್ಕರು [ಉತ್ತ. ರಾಮಾ.-೭-೮].

**ಮಾಲಿನಿ.**— (i) ಒಂದು ನದಿ. ಇದರ ತೀರದಲ್ಲಿ ಕಣ್ವ ಮುನಿ ತಪಸ್ಸುಮಾಡಿಕೊಂಡಿದ್ದ [ಭಾರ.-ಆದಿ. ೯೧] ಅಯೋಧ್ಯೆಯಿಂದ ೫೦ ಮೈಲುಗಳ ದೂರದಲ್ಲಿದೆ. ಇದು ಸರಯೂ ನದಿಯ ಉಪನದಿ.

(ii) ವಿಶ್ರವಸನ ಹೆಂಡತಿ. ವಿಭೀಷಣನ ಜನನಿ [ಭಾರ.-ವನ. ೨೭೬].

(iii) ವಿರಾಟ ನಗರದಲ್ಲಿ ದ್ರೌಪದಿ ಸುದೇಷ್ಣೆಯ ಬಳಿ ದಾದಿಯಾಗಿದ್ದಾಗ ಈ ಹೆಸರಿಟ್ಟುಕೊಂಡಿದ್ದಳು [ವಿರಾ. ೧೪].

**ಮಾಲ್ಯವಂತ.**—(i) ಒಂದು ಪರ್ವತ [ಭಾರ-ಸ. ೨೯. ವನ. ೧೫೯. ಭೀ. ೬]. ಇದು ಕಿಷ್ಕಿಂಧೆಗೆ ಸಮೀಪದಲ್ಲಿದೆ. ಪೂರ್ವ ಘಟ್ಟಗಳ ಈಶಾನ್ಯ ಭಾಗದಲ್ಲಿ ಕಡಪ, ಕರ್ನೂಲು, ನೆಲ್ಲೂರು, ಗುಂಟೂರು ಜಿಲ್ಲೆಗಳಲ್ಲಿ ಹಬ್ಬಿದೆ. ಇದಕ್ಕೆ ಪ್ರಸ್ರವಣ ವೆಂಬುದು ನಾಮಾಂತರ [ರಾಮಾ.-ಕಿಷ್ಕಿಂ. ೨೮].

(ii) ಮಾಲಿಯ ಸಹೋದರ. ನೋಡು—ಮಾಲಿ.

**ಮಾಷ.**—ಭಯಂಕರವಾದ ಗೂಳಿಯ ರೂಪವನ್ನು ಧರಿಸಿದ್ದ ಒಬ್ಬ ರಾಕ್ಷಸ. ಜರಾಸಂಧ ಇದರ ಚರ್ಮದಿಂದ ಮೂರು ನಗಾರಿಗಳನ್ನು ಮಾಡಿಸಿ ತನ್ನ ರಾಜಧಾನಿ ಯಾದ ಗಿರಿವ್ರಜದ ಸುತ್ತಲೂ ಇರಿಸಿದ್ದ [ಸಭಾ ೨೧].

**ಮಾಹಿಷಕ**—ಮಹೀಷಕವೆಂಬುದು ಇದರ ನಾಮಾಂತರ ಮೈಸೂರು ದೇಶ [ಭಾರ.-ಅಶ್ವ. ೮೪].

**ಮಾಹಿಷ್ಮತಿ.**—(i) ಒಂದು ಪಟ್ಟಣ. ಕಾರ್ತವೀರ್ಯಾರ್ಜುನನ ರಾಜಧಾನಿ. ಕಾರ್ತವೀರ್ಯನ ತರುವಾಯ ನಲನೆಂಬವ ಇಲ್ಲಿ ರಾಜ್ಯಭಾರಮಾಡುತ್ತಿದ್ದ ಇವ ಪಾಂಡವ ಪಕ್ಷದವ [ಭಾರ-ಸಭಾ ೩೨]. ಇಂದೂರಿಗೆ ೪೦ ಮೈಲುಗಳ ದೂರ ದಲ್ಲಿ ನರ್ಮದಾ ನದಿಯ ಬಲ ದಡದಲ್ಲಿದೆ

(ii) ಇಕ್ಷ್ವಾಕು ವಂಶದ ದಶಾಶ್ವ ರಾಜ ಇಲ್ಲಿ ರಾಜ್ಯಭಾರಮಾಡುತ್ತಿದ್ದ [ಭಾರ.-ಅನು. ೨].

**ಮಿತ್ರ.**—ಸೂರ್ಯನ ನಾಮಾಂತರ ನೋಡು—ವರುಣ, ಅಗಸ್ತ್ಯ, ವಸಿಷ್ಠ.

**ಮಿತ್ರವಿಂದಾ.**—ಒಬ್ಬ ರಾಜಪುತ್ರಿ ಅವಂತಿ ದೇಶದ ಅರಸನಾದ ಜಯಸೇನ ನಿಂದ ವಸುದೇವನ ತಂಗಿಯಾದ ರಾಜಾಧಿದೇವಿಯಲ್ಲಿ ಜನಿಸಿದವಳು. ಶ್ರೀಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು ಇವಳಿಗೆ ವೃಕನೇ ಮೊದಲಾಗಿ ಹತ್ತು ಮಂದಿ ಪುತ್ರರು [ಭಾಗ.-೧೦-೫೯. ವಿಷ್ಣು.-೫-೨೮]

**ಮಿತ್ರಸಹ**—ಕಲ್ಮಾಷಪಾದನ ನಾಮಾಂತರ [ಹರಿ.-೧-೧೫]. ಇವ ವಸಿಷ್ಠ ಶಾಪ ದಿಂದ ರಾಕ್ಷಸ ಜನ್ಮವನ್ನು ಪಡೆದು, ಹೊಸದಾಗಿ ಮದುವೆಯಾಗಿದ್ದ ದಂಪತಿಗಳಲ್ಲಿ ವರನನ್ನು ತಿಂದು ಅವನ ಪತ್ನಿಯಿಂದ "ನೀನು ಸ್ತ್ರೀ ಸಂಗವನ್ನು ಮಾಡಿದೆಯಾದರೆ ನಿನಗೆ ಮರಣ ತಪ್ಪಿದುದಲ್ಲ" ಎಂದು ಶಾಪವನ್ನು ಪಡೆದ ಮಿತ್ರಸಹ ಗುರುಶಾಪಾವ ಸಾನದಲ್ಲಿ ತನ್ನ ನಿಜರೂಪವನ್ನು ಪಡೆದು ಪಟ್ಟಣಕ್ಕೆ ಹೋದ ಒಂದು ದಿನ ತನ್ನ ಪತ್ನಿಯೊಂದಿಗೆ ಸೇರಹೋದಾಗ ಆಕೆ ತನ್ನ ಪತಿಗೆ ಬಂದಿರುವ ಶಾಪವನ್ನು ಕೇಳಿದ್ದ ಳಾಗಿ ಮಿತ್ರಸಹನನ್ನು ಅಡ್ಡಗಿಸಲು, ಮಿತ್ರಸಹ ಖಿನ್ನನಾಗಿ ಬ್ರಹ್ಮಹತ್ಯೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅನೇಕ ತೀರ್ಥಗಳನ್ನು ಸುತ್ತುತ್ತ, ಗೌತಮ ಮುನಿಯನ್ನು ಮರೆಹೊಕ್ಕು, ಆತನ ಉಪದೇಶಾನುಸಾರ ಗೋಕರ್ಣ ಕ್ಷೇತ್ರವನ್ನು

ಸೇರಿ ಮಹಾಬಲೇಶ್ವರನನ್ನು ಪೂಜಿಸಿ ಬ್ರಹ್ಮಹತ್ಯೆಯಿಂದ ಮುಕ್ತನಾದ. ನೋಡು—ಕಲ್ಮಾಷಪಾದ [ಶಿವ.-ಕೋಟಿರುದ್ರಸಂ ೧೦].

**ಮಿಥಿ.**—ಇಕ್ಷ್ವಾಕು ಪುತ್ರನಾದ ನಿಮಿ ರಾಜನ ದೇಹವನ್ನು ಮಥನಮಾಡಿದುದರಿಂದ ಜನಿಸಿದವ. ನೋಡು—ನಿಮಿ [ರಾಮಾ -ಉತ್ತ. ೫೫-೫೭].

**ಮಿಥಿಲಾ.**—ವಿದೇಹ ವಂಶದ ಅರಸರ ರಾಜಧಾನಿ. ಮಿಥಿ ನಿರ್ಮಿಸಿದುದರಿಂದ ಇದಕ್ಕೆ ಮಿಥಿಲೆಯೆಂದು ಹೆಸರು. ಇದೇ ಈ ದೇಶದ ರಾಜಧಾನಿ [ಭಾರ.-ವನ. ೨೧೦]. ಮಿಥಿಲೆ ಈಗ ಜನಕಪುರ (Janakapur) ಎಂದು ಪ್ರಸಿದ್ಧವಾಗಿದೆ.

**ಮಿಶ್ರಕೇಶಿ**—ಒಬ್ಬ ಅಪ್ಸರಸಿ [ಭಾರ.-ಆದಿ. ೬೬, ೧೩೨]. ಇವಳು ಚಂದ್ರ ವಂಶದ ಪೂರು ರಾಜನ ಮಗನಾದ ರೌದ್ರಾಶ್ವನ ಮೂಲಕ ಋಚೇಯು, ಕಕ್ಷೇಯು ಮೊದಲಾದ ಹತ್ತು ಮಂದಿ ಪುತ್ರರನ್ನು ಪಡೆದಳು [ಭಾರ.-ಆದಿ. ೮೮].

**ಮುಚುಕುನ್ದ**—ಒಬ್ಬ ಅರಸು ಸೂರ್ಯ ವಂಶದ ಮಾಂಧಾತ ರಾಜನ ಮಗ ಅಂಬರೀಷ, ಪುರುಕುತ್ಸರು ಇವನ ಒಡಹುಟ್ಟಿದವರು ಸೌಭರಿ ಮುನಿಯ ಪತ್ನಿಯರು ಐವತ್ತು ಮಂದಿ ಇವನ ಸಹೋದರಿಯರು [ಭಾಗ -೯-೬]. ಶರಣಾಗತ ರಕ್ಷಣೆ ಅತ್ಯುತ್ತಮವೆಂಬ ವಿಷಯವಾಗಿ ಭೃಗು ಮಹರ್ಷಿಯ ಮೂಲಕ ಕಪೋತ ಚರಿತೆಯನ್ನು ಕೇಳಿ ತಿಳಿದ [ಭಾರ.-ಶಾಂತಿ. ೧೪೩]. ಮುಚುಕುಂದ ಚರಿತ್ರ, ಮುಚುಕುಂದ ಕುಬೇರನೊಂದಿಗೆ ಸಂವಾದಮಾಡಿದ್ದು [ಭಾರ.-ಶಾಂ ೭೪]. ಮುಚುಕುಂದ ಕಾಲಯವನನ್ನು ಕೊಂದದ್ದು [ಭಾಗ.-೧೦-೫೧, ೫೨. ವಿಷ್ಣು.-೫-೨೩ ಹರಿ.-೨-೫೭]. ಮುಚುಕುಂದ ಕೃಷ್ಣನನ್ನು ಹೊಗಳಿದ್ದು [ಭಾಗ.-೧೦-೫೧]

**ಮುಣ್ಡ.**—ಒಬ್ಬ ರಾಕ್ಷಸ. ನೋಡು—ಚಂಡ. [ಮಾರ್ಕಂ - ೮೨].

**ಮುದ್ಗಲ.**—ಕುರು ಕ್ಷೇತ್ರದಲ್ಲಿ ವಾಸಮಾಡುತ್ತಿದ್ದ ಒಬ್ಬ ಮಹರ್ಷಿ. ಈತನಿಗೆ ವ್ರೀಹಿದ್ರೋಣನೆಂಬುದು ನಾಮಾಂತರ [ಭಾರ.-ವನ. ೨೬೧] ಈತ ಭರ್ಮ್ಯಾಶ್ವನ ಮಗ. ದಿವೋದಾಸನೂ ಗೌತಮ ಪತ್ನಿಯಾದ ಅಹಲ್ಯೆಯೂ ಈತನ ಮಕ್ಕಳು [ಭಾಗ.-೯-೨೧]. ದುರ್ವಾಸ ಮುನಿ ಮುದ್ಗಲನ ಚಿತ್ತವೃತ್ತಿಯನ್ನು ಪರೀಕ್ಷಿಸುವ ಸಲುವಾಗಿ ಆಗಿಂದಾಗ್ಗೆ ಆರು ಸಲ ಮುದ್ಗಲನಲ್ಲಿಗೆ ಅತಿಥಿಯಾಗಿ ಬಂದು ಪೀಡಿಸಿದ. ಮುದ್ಗಲ ಒಂದೇ ತೆರನಾದ ಮನೋವೃತ್ತಿಯಿಂದ ಆತನನ್ನು ಸತ್ಕರಿಸಿದ. ಮುದ್ಗಲ ಒಂದೊಂದು ಕಾಳನ್ನೂ ಕೂಡಿಹಾಕಿ, ಆ ಧಾನ್ಯದಿಂದ ಯಾಚಕರಿಗೆ ಮೃಷ್ಟಾನ್ನವನ್ನು ಬಡಿಸುತ್ತಿದ್ದ. ಈ ಪುಣ್ಯಪರಿಪಾಕದಿಂದ ಇವನನ್ನು ಸ್ವರ್ಗಕ್ಕೆ ಕರೆದುಯ್ಯುವ ಸಲುವಾಗಿ ದೇವತೆಗಳು ವಿಮಾನವನ್ನು ಕಳುಹಿದರು. ಮುದ್ಗಲ "ದೇವಲೋಕ ಹೇಗಿದೆ" ಎಂದು ಮುಂತಾಗಿ ಪ್ರಶ್ನೆಮಾಡಿದ. ಅದಕ್ಕೆ ದೂತರು "ಅಲ್ಲಿ ಅನೇಕ ಭೋಗಭಾಗ್ಯಗಳಿಗೆ ಯಾವ ಕೊರತೆಯೂ ಇಲ್ಲ. ನಿನ್ನ

ಪುಣ್ಯಧನ ಸವೆಯುವವರೆಗೂ ಬೇಕಾದಂತೆ ಸುಖಪಡಬಹುದು" ಎಂದರು. ಮುಂದಣ ಗತಿಯೇನೆಂದು ಮುದ್ಗಲ ಕೇಳಲಾಗಿ, ದೂತರು "ಪುಣ್ಯಧನ ಮುಗಿದ ತರುವಾಯ ಇಲ್ಲಿಗೇ ಬರುವೆ" ಎನಲು, ಮುದ್ಗಲ "ನನಗೆ ಅಂತಹ ಸುಖ ಬೇಕಿಲ್ಲ. ನಾನು ಶಾಶ್ವತಸುಖಕ್ಕಾಗಿ ಪಾಡುಪಡುತ್ತಿದ್ದೇನೆ" ಎಂದು ವಿಮಾನವನ್ನು ಹಿಂದಕ್ಕೆ ಕಳುಹಿದ [ಭಾರ.-ವನ. ೨೬೧, ೨೬೨].

**ಮುನಿ**—(I) ದಕ್ಷನ ಪುತ್ರಿಯರಲ್ಲಿ ಒಬ್ಬಳು ಕಶ್ಯಪ ಮುನಿಯನ್ನು ಮದುವೆಯಾಗಿ ಹದಿನಾರು ಮಂದಿ ದೇವಗಂಧರ್ವರನ್ನು ಹೆತ್ತಳು [ಭಾರ.-ಆದಿ ೬೬].

(II) ತಪಸ್ವಿ. ಮುನಿ ಧರ್ಮಗಳು, ಮುನಿಯ ಲಕ್ಷಣ ಮುಂತಾದುವು [ಭಾರ.-ಆದಿ ೮೫, ೧೨೪].

**ಮುರ**—ನರಕಾಸುರನ ಪರಿವಾರದ ಒಬ್ಬ ರಾಕ್ಷಸ ಶ್ರೀಕೃಷ್ಣನಿಂದ ಮಡಿದ [ಭಾಗ.-೧೦-೫೯. ಹರಿ -೨, ೬೩. ವಿಷ್ಣು -೫, ೨೯. ಭಾರ.-ಸ. ೫೫].

**ಮುಷ್ಟಿಕ**—ಕಂಸನ ಆಸ್ಥಾನದಲ್ಲಿದ್ದ ಒಬ್ಬ ಜಟ್ಟಿ ನೋಡು—ಚಾಣೂರ.

**ಮೂಕ.**—ಒಬ್ಬ ರಾಕ್ಷಸ ಇಂದ್ರಕೀಲಪರ್ವತದಲ್ಲಿ ವಾಸವಾಗಿದ್ದ ಪಾಶುಪತಾಸ್ತ್ರವನ್ನು ಪಡೆಯುವ ಸಲುವಾಗಿ ತಪಸ್ಸುಮಾಡುತ್ತಿದ್ದ ಅರ್ಜುನನಿಗೆ ವರಪ್ರದಾನಮಾಡುವುದಕ್ಕಾಗಿ ಶಿವ ಕಿರಾತರೂಪದಿಂದ ಇಂದ್ರಕೀಲಪರ್ವತಕ್ಕೆ ಬಂದಾಗ ಮೂಕ ದಾನವ ಹಂದಿಯ ರೂಪವನ್ನು ತಾಳಿದ್ದ. ಶಿವ ಹಿಂದಟ್ಟೆ ಬರಲಾಗಿ ಅರ್ಜುನನ ಬಳಿಹಾಯ್ದು ಅವನಿಂದ ಹತನಾದ [ಭಾರ -ವನ. ೩೯. ಶಿವ.-ಶತರುದ್ರ. ೩೯].

**ಮೂಲಕ**—ನೋಡು—ನಾರೀಕವಚ.

**ಮೃಕಣ್ಡು.**—ಒಬ್ಬ ಮಹರ್ಷಿ. ಭೃಗು ಮಹರ್ಷಿಯಿಂದ ಕರ್ದಮ ಪುತ್ರಿಯಾದ ಖ್ಯಾತಿದೇವಿಯಲ್ಲಿ ಜನಿಸಿದ ಧಾತನೆಂಬ ಮುನಿಯ ಮಗ. ಮೇರು ಪುತ್ರಿಯಾದ ಆಯತಿಯೆಂಬವಳು ಇವನ ಜನನಿ ಇವರಿಬ್ಬರೂ ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ ಮಾರ್ಕಂಡೇಯನೆಂಬ ತನಯನನ್ನು ಪಡೆದರು [ಭಾಗ.-೪-೧].

**ಮೃಗಜಾತಿಯ ಉತ್ಪತ್ತಿ.**—[ಭಾರ -ಆದಿ ೬೭]

**ಮೃಗಮನ್ದಾ.**—ಕ್ರೋಧವಶೆಯೆಂಬವಳ ಮಗಳು. ಇವಳಿಂದ ಕರಡಿಗಳೂ ಸೃಮರವೆಂಬ ಪ್ರಾಣಿಗಳೂ ಜನಿಸಿದುವು [ಭಾರ -ಆದಿ ೬೭].

**ಮೃಗಯಾ.**—ಬೇಟೆ ಬೇಟೆ ಕ್ಷತ್ರಿಯರಿಗೆ ಅನಿಂದಿತವಾದ ಧರ್ಮ [ಭಾರ.-ಅನು. ೨೧೫]. ಪರೀಕ್ಷಿತ ಬೇಟೆಯಾಡಿದ್ದು [ಭಾರ -ಆದಿ. ೪೦]. ಸಂವರಣ ಬೇಟೆಯಾಡಿದ್ದು [ಭಾರ.-ಆದಿ. ೧೭೭]. ಯಯಾತಿ ಬೇಟೆಯಾಡಿದ್ದು [ಭಾರ.-ಆದಿ. ೭೨, ೭೫]. ದುಷ್ಯಂತ ಬೇಟೆಯಾಡಿದ್ದು [ಭಾರ.-ಆದಿ. ೯೦]. ವಿಶ್ವಾಮಿತ್ರ ಬೇಟೆ

ಯಾಡಿದ್ದು [ಭಾರ.-ಆದಿ. ೧೯೧]. ಕೃಷ್ಣಾರ್ಜುನರು ಬೇಟೆಯಾಡಿದ್ದು [ಭಾರ.-ಆದಿ. ೨೪೭].

**ಮೃತಸಂಸ್ಕಾರ.**—ಭಾರತಯುದ್ಧದಲ್ಲಿ ಮಡಿದವರಿಗೆ ಯುಧಿಷ್ಠಿರ ಮಾಡಿದ್ದು [ಭಾರ.-ಸ್ತ್ರೀ. ೨೬]. ಮೃತರಾದ ದುರ್ಯೋಧನಾದಿಗಳನ್ನು ವ್ಯಾಸ ಧೃತರಾಷ್ಟ್ರ, ಗಾಂಧಾರಿ, ಕುಂತಿಯರಿಗೆ ತೋರಿದ್ದು [ಭಾರ -ಆಶ್ರ. ೩೪]. ಜನಮೇಜಯನಿಗೆ ವ್ಯಾಸ ಪರೀಕ್ಷಿತ್ತು, ಶಮೀಕ, ಶೃಂಗಿಗಳನ್ನು ತೋರಿದ್ದು [ಭಾರ.-ಆಶ್ರ. ೩೭].

**ಮೃತ್ಯು.**—ಸಂಹರಿಸತಕ್ಕ ದೇವತೆ ಮೃತ್ಯುದೇವತೆಯ ಉತ್ಪತ್ತಿ [ಭಾರ.-ದ್ರೋ. ೫೩ ಶಾಂತಿ ೨೬೩] ಮೃತ್ಯುದೇವತೆಯ ಸ್ವರೂಪವರ್ಣನೆ [ಭಾರ.-ಉ. ೪೨]. ಪ್ರಜೆಗಳನ್ನು ಕೊಲ್ಲುವ ವಿಷಯವಾಗಿ ಮೃತ್ಯುದೇವತೆ ಬ್ರಹ್ಮನೊಂದಿಗೆ ಸಂವಾದ ಮಾಡಿದ್ದು [ಶಾಂತಿ ೨೬೪] ಇಕ್ಷ್ವಾಕುವಿನೊಂದಿಗೆ ಸಂವಾದ [ಭಾರ.-ಶಾಂತಿ. ೧೯೭]. ಸರ್ಪದೊಂದಿಗೂ ಅರ್ಜುನನೆಂಬ ಬೇಡನೊಂದಿಗೂ, ಸೂರ್ಯವಂಶದ ಸುದರ್ಶನ ರಾಜನ ಪತ್ನಿಯಾದ ಓಘವತಿಯೊಂದಿಗೂ ಮೃತ್ಯುದೇವತೆಯ ಸಂವಾದ [ಭಾರ.-ಅನು. ೧೦೨]. ಒಮ್ಮೆ ಭೂಭಾರ ಮಿತಿಮೀರಲಾಗಿ ಭೂದೇವಿ ಬ್ರಹ್ಮನಲ್ಲಿ ಮೊರೆಯಿಟ್ಟಳು. ಕುಪಿತನಾದ ಬ್ರಹ್ಮನ ಭ್ರೂಮಧ್ಯದಿಂದ ಜನಿಸಿದ ಕ್ರೋಧಾಗ್ನಿ ಲೋಕಗಳನ್ನೆಲ್ಲ ಸುಡತೊಡಗಿತು ಆಗ ಪರಮೇಶ್ವರ ಬ್ರಹ್ಮನಿಗೆ ಶಾಂತನಾಗುವಂತೆ ಹೇಳಿದ. ಬ್ರಹ್ಮ ಶಾಂತನಾದ ಕೂಡಲೇ ಆತನ ದೇಹದಿಂದ ಒಂದು ಸ್ತ್ರೀ ವ್ಯಕ್ತಿ ಹೊರಬಂತು. ಬ್ರಹ್ಮ ಆಕೆಗೆ ಮೃತ್ಯುವೆಂದು ಹೆಸರಿಟ್ಟು ಲೋಕದ ಪ್ರಾಣಿಗಳನ್ನು ಕೊಲ್ಲಹೇಳಿದ. ಮೃತ್ಯು ಇದಕ್ಕೆ ಸಮ್ಮತಿಸದೆ ತಪಸ್ಸಿಗೆ ಹೊರಡಲಾಗಿ ಬ್ರಹ್ಮ "ಪ್ರಾಣಿಸಂಹಾರದಿಂದ ನಿನಗೆ ಪಾಪಬಾರದಂತೆ ನಾನು ವರವನ್ನು ಕೊಡುವೆನು" ಎಂದ ಮೃತ್ಯು ಅದಕ್ಕೆ ಸಮ್ಮತಿಸಿ, ಪ್ರಾಣಿಗಳಲ್ಲಿ ಅರಿಷಡ್ವರ್ಗವನ್ನು ಸೃಷ್ಟಿಮಾಡ ಹೇಳಿದಳು ಬ್ರಹ್ಮ ಕಾಮಾದಿಗಳನ್ನು ಕಲ್ಪಿಸಲು ಇವುಗಳ ಮೂಲಕ ಮೃತ್ಯು ಪ್ರಾಣಿಗಳನ್ನು ಕೊಲ್ಲತೊಡಗಿತು [ಭಾರ -ದ್ರೋ ೫೩, ೫೪]

**ಮೇಕಲ.**—ಮೇಕಲ ಪರ್ವತದ ಬಳಿ ಇರುವ ಒಂದು ದೇಶ. ಅಮರಕಂಟಕದ ಸುತ್ತಲೂ ಇದೆ. ಈ ಪರ್ವತದಲ್ಲಿ ನರ್ಮದಾ ನದಿ ಜನಿಸುವ ಕಾರಣ ಅದಕ್ಕೆ ಮೇಕಲಕನ್ಯಕಾ ಎಂದು ಹೆಸರು [ಭಾರ.-ಭೀ ೯].

**ಮೇಘನಾದ**—ಇಂದ್ರಜಿತ್ತನ ನಾಮಾಂತರ. ನೋಡು—ಇಂದ್ರಜಿತ್ತು, ಮಂಡೋದರಿ [ರಾಮಾ.-ಉತ್ತ. ೧೨].

**ಮೇಘವರ್ಣ.**—ಘಟೋತ್ಕಚನ ಮಗ. ಇವನಿಗೆ ಮೇಘನಾದನೆಂಬ ನಾಮಾಂತರವೂ ಇದೆ. ಭೀಮ ಯೌವನಾಶ್ವ ರಾಜನ ಬಳಿಯಲ್ಲಿದ್ದ ಅಶ್ವಮೇಧದ ಕುದುರೆಯನ್ನು ತರುವುದಕ್ಕೆ ಹೋದಾಗ ಇವ ಭೀಮನ ಸಂಗಡ ಹೋಗಿ, ತನ್ನ ಮಾಯಾ

ಬಲದಿಂದ ಕುದುರೆಯನ್ನು ಅಪಹರಿಸಿ ತಂದು, ಯುದ್ಧಕ್ಕೆ ಬಂದ ಯೌವನಾಶ್ವನ ಸೇನೆಯನ್ನು ಇದಿರಿಸಿ, ಆತನಿಂದ ಸತ್ಕೃತನಾಗಿ ಭೀಮನ ಸಂಗಡ ಕುದುರೆಯನ್ನು ಪಡೆದು ಹಿಂದಿರುಗಿದ [ಜೈ.ಭಾರ.-೧-೭].

**ಮೇಘಸನ್ಧಿ.**—ಒಬ್ಬ ಅರಸು. ಜರಾಸಂಧನ ಪುತ್ರನಾದ ಸಹದೇವನ ಮಗ. ಪಾಂಡವರ ಅಶ್ವಮೇಧದ ಕುದುರೆಯನ್ನು ಕಟ್ಟಿಹಾಕಿ, ಅರ್ಜುನನಿಂದ ಸೋತು, ಕಪ್ಪವನ್ನು ಕೊಟ್ಟು ಶರಣಾಗತನಾದ [ಭಾರ.-ಅಶ್ವ. ೮೩].

**ಮೇದಿನಿ.**—ಭೂಮಿ ನೋಡು—ಕೈಟಭ

**ಮೇಧಾತಿಥಿ**—(i) ಒಬ್ಬ ಮಹರ್ಷಿ. ಗೌತಮ ಕುಲದಲ್ಲಿ ಜನಿಸಿದವ. ಚಿರಕಾರಿಯ ತಂದೆ. ನೋಡು—ಚಿರಕಾರಿ [ಭಾರ.-ಸ ೭. ಶಾಂತಿ ೨೭೨, ३೪೪].

(ii) ಒಬ್ಬ ಅರಸು ಚಂದ್ರ ವಂಶದ ಪೂರು ವಂಶದಲ್ಲಿ ಜನಿಸಿದವ ಈತ ಬ್ರಾಹ್ಮಣನಾದ ಈತನ ಮಗ ಕಣ್ವನೆಂಬವ [ಭಾರ - ಅನು. ೨೫೫].

(iii) ಪ್ರಿಯವ್ರತ ರಾಜನ ಮಗ. ಈತ ಶಾಕ ದ್ವೀಪದ ಅರಸು. ನೋಡು—ಪ್ರಿಯವ್ರತ [ಭಾಗ -೫-೧]

**ಮೇಧಾವಿನಿ**—ಚಂದ್ರಹಾಸನ ಪಾಲಕಪಿತನಾದ ಕುಳಿಂದ ರಾಜನ ಹೆಂಡತಿ. ನೋಡು—ಚಂದ್ರಹಾಸ, ಕುಳಿಂದ.

**ಮೇನಕಾ.**—ಅಪ್ಸರಸಿ [ಭಾರ.-ಆದಿ ೧೩೭ ಸ ೧೦] ವಿಶ್ವಾಮಿತ್ರ ಈಕೆಯಲ್ಲಿ ಶಕುಂತಲೆಯನ್ನು ಪಡೆದ [ಭಾರ -ಆ. ೯೩] ಈಕೆಯ ದರ್ಶನದಿಂದ ಎದೆಗುಂದಿದ ಪೃಷತ ರಾಜನಿಂದ ದ್ರುಪದ ಜನಿಸಿದ [ಭಾರ.-ಆದಿ. ೧೫೦]. ಹಿಮವಂತನ ಪತ್ನಿಯಾದ ಮೇನೆಗೂ ಈ ಹೆಸರು ಸಲ್ಲುತ್ತದೆ.

**ಮೇನಾ.**—(i) ಭಾರತ ವರ್ಷದ ಒಂದು ನದಿ [ಭೀ. ೯].

(ii) ಪಿತೃದೇವತೆಗಳ ಮಾನಸಪುತ್ರಿ. ಹಿಮವಂತನ ಹೆಂಡತಿ. ಮೈನಾಕನೆಂಬ ತನಯನನ್ನೂ, ಪಾರ್ವತಿಯನ್ನೂ ಪಡೆದಳು [ಶಿವ.-ಪಾರ್ವ. ೨. ಹರಿ.-೧-೧೮. ಮತ್ಸ್ಯ.-೧೩]. ಈಕೆ ನೂರು ಮಂದಿ ಮಕ್ಕಳನ್ನು ಪಡೆದಳು [ಶಿವ -ಪಾರ್ವ. ೫]. ನೋಡು—ಅಪರ್ಣಾ, ಏಕಪರ್ಣಾ, ಏಕಪಾಟಲಾ.

**ಮೇರು.**—ಸುವರ್ಣಪರ್ವತ [ಭಾರ -ಸ. ೨೯. ಭೀ. ೬. ಭಾಗ.-೫-೧೬. ದೇ. ಭಾಗ.-೮-೭. ಲಿಂಗ.-೪೮]. ಮೇರುಪರ್ವತ ವರ್ಣನ [ಭಾರ.-ವನ. ೧೬೪. ಮತ್ಸ್ಯ.-೧೨೪. ಭಾಗ.- ೫-೧೬].

**ಮೇರುದೇವೀ.**—ಮೇರುವಿನ ಮಗಳು. ಅಗ್ನೀಧ್ರ ರಾಜನ ಮಗನಾದ ನಾಭಿಯ ಹೆಂಡತಿ. ನೋಡು—ನಾಭಿ, ಋಷಭ.

**ಮೈತ್ರಾವರುಣಿ.**—ಮಿತ್ರ ಮತ್ತು ವರುಣನಿಂದ ಜನಿಸಿದವ. ಈ ಹೆಸರು ಅಗಸ್ತ್ಯನಿಗೂ ವಸಿಷ್ಠನಿಗೂ ಸಲ್ಲುತ್ತದೆ. ನೋಡು—ಅಗಸ್ತ್ಯ, ವಸಿಷ್ಠ [ರಾಮಾ.-ಉತ್ತ. ೫೬, ೫೭].

**ಮೈತ್ರೇಯ.**—ಒಬ್ಬ ಬ್ರಹ್ಮರ್ಷಿ [ಭಾರ.-ಸ ೪. ಶಾಂತಿ. ೪೬]. ಪಾಂಡವರು ವನವಾಸಕ್ಕೆ ಹೋದರೆಂಬುದನ್ನು ಕೇಳಿ ಮನನೊಂದು ಧೃತರಾಷ್ಟ್ರನಲ್ಲಿಗೆ ಬಂದು ಪಾಂಡವರೊಡನೆ ಸಂಧಿಮಾಡಿಕೊಳ್ಳಹೇಳಿದ. ದುರ್ಯೋಧನ ಹೆಮ್ಮೆಯಿಂದ ತೊಡೆಯನ್ನು ತಟ್ಟಿಕೊಳ್ಳಲಾಗಿ "ನಿನಗೆ ತೊಡೆಯಲ್ಲಿಯೇ ಮರಣ ಪ್ರಾಪ್ತವಾಗಲಿ" ಎಂದು ಶಾಪವಿತ್ತ [ಭಾರ -ವನ. ೧೦]. ಈತ ತುಷಾರವನೆಂಬ ಮುನಿಯಿಂದ ಮಿತ್ರೆಯೆಂಬವಳಲ್ಲಿ ಜನಿಸಿದವ [ಭಾಗ.-೩-೧]. ದಾನ ಉತ್ತಮ ಫಲ ಪ್ರದವೆಂಬ ವಿಷಯವಾಗಿ ವ್ಯಾಸ ಮುನಿಯೊಂದಿಗೆ ಸಂವಾದಮಾಡಿದ [ಭಾರ.-ಅನು. ೧೫೬-೧೮೪]. ಪರಾಶರ ಮುನಿಯಿಂದ ವಿಷ್ಣುಪುರಾಣವನ್ನು ಕೇಳಿ ತಿಳಿದ [ವಿಷ್ಣು.-೧-೧].

**ಮೈಥಿಲ.**—ಮಿಥಿಲೆಯ ಅರಸರೆಲ್ಲರಿಗೂ ಈ ಹೆಸರು ಸಲ್ಲುತ್ತದೆ. ನೋಡು—ಮಿಥಿ, ಮಿಥಿಲಾ.

**ಮೈಥಿಲಿ.**—ಮಿಥಿಲ ರಾಜಪುತ್ರಿ. ಸೀತೆ.

**ಮೈನಾಕ.**—ಹಿಮವಂತನಿಂದ ಮೇನಕೆಯಲ್ಲಿ ಜನಿಸಿದ ಹಿರಿಯಮಗ [ಭಾರ.-ವನ. ೮೭. ಭೀ. ೧೨]. ಇಂದ್ರ ಪರ್ವತಗಳ ರೆಕ್ಕೆಗಳನ್ನು ಕತ್ತರಿಸುವಾಗ ದಕ್ಷಿಣ ಸಮುದ್ರದಲ್ಲಿ ಮುಳುಗಿ, ಹನೂಮಂತ ಲಂಕೆಗೆ ಹೊರಟಾಗ ಸಮುದ್ರಮಧ್ಯದಿಂದ ಎದ್ದು ಹನೂಮಂತನನ್ನು ಸತ್ಕರಿಸಿ, ಇಂದ್ರನಿಂದ ಅಭಯಪಡೆದ [ರಾಮಾ.-ಸುಂದ. ೧]. ಇವನ ಮಗ ಕ್ರೌಂಚ [ಹರಿ.-೧-೧೮].

**ಮೈನ್ದ.**—ಸುಗ್ರೀವನ ಕಪಿನಾಯಕರಲ್ಲಿ ಒಬ್ಬ. ರಾಮ ರಾವಣರ ಯುದ್ಧದಲ್ಲಿ ರಾಮನ ಪರವಾಗಿ ಹೋರಾಡಿದ. ಸುಷೇಣನೆಂಬ ಕಪಿನಾಯಕನ ಮಗ ದ್ವಿವಿದ ಇವನ ಒಡಹುಟ್ಟಿದವ. ವಾಲಿಪತ್ನಿಯಾದ ತಾರೆ ಇವನ ತಂಗಿ [ರಾಮಾ.-ಕಿಷ್ಕಿಂ. ೪೧]. ರಾಮಾಯಣ ಯುದ್ಧದಲ್ಲಿ ವಜ್ರಮುಷ್ಟಿ ಯೂಪಾಕ್ಷ ಮೊದಲಾದ ರಾಕ್ಷಸರನ್ನು ಕೊಂದ [ರಾಮಾ.-ಯು. ೭೬]. ಯುಧಿಷ್ಠಿರನ ತಮ್ಮನಾದ ಸಹದೇವ ರಾಜಸೂಯ ಸಮಯದಲ್ಲಿ ದಿಗ್ವಿಜಯಕ್ಕೆ ಹೊರಟಾಗ ಇವ ಸಹದೇವನೊಂದಿಗೆ ಯುದ್ಧಮಾಡಿದ [ಭಾರ.-ಸಭಾ. ೩೨]. . ನೋಡು—ದ್ವಿವಿದ.

**ಮೋಕ್ಷ.**—ನಾಲ್ಕು ಪುರುಷಾರ್ಥಗಳಲ್ಲಿ ಮುಖ್ಯವಾದದ್ದು. ಅದರ ಪ್ರಶಂಸೆ [ಭಾರ.-ಶಾಂತಿ. ೧೩೫, ೨೮೦. ಅನು. ೨೪೩].

**ಮೋಕ್ಷಧರ್ಮಪರ್ವ.**—[ಭಾರ.-ಶಾಂತಿ. ೧೭೩-೩೭೫].

**ಮೋದಾಗಿರಿ.**—ಭಾರತವರ್ಷದ ಒಂದು ಬೆಟ್ಟ. ಅಂಗದೇಶಕ್ಕೆ ಪೂರ್ವದಲ್ಲಿದೆ (ಈಗಣ ಭಾಗಲಪುರ ಜಿಲ್ಲೆಯಲ್ಲಿ ಮುದ್ಗಗಿರಿ, ಮೂಡಲಗಿರಿ, ಮುದ್ಗಲ್ಲಗಿರಿ ಎಂಬ ಹೆಸರುಗಳಿಂದ ಪ್ರಖ್ಯಾತಿಗೊಂಡಿದೆ) [ಭಾರ.-ಸ. ೩೧].

**ಮೋಹಿನಿ.**—ಅಮೃತವನ್ನು ಹಂಚುವ ಕಾಲದಲ್ಲಿ ವಿಷ್ಣು ರಾಕ್ಷಸರನ್ನು ವಂಚಿಸಲು ಧರಿಸಿದ ಸ್ತ್ರೀರೂಪ [ಭಾರ -ಆದಿ. ೧೮. ಭಾಗ -೮. ಸ್ಕ ೯, ೧೦] ಮೋಹಿನಿಯ ರೂಪವನ್ನು ಕಂಡು ಶಿವ ಎದೆಗುಂದಿದ್ದು [ಭಾಗ -೮-೧೨ ಶಿವ.-ಶತ. ೨೦].

**ಮೌದ್ಗಲ್ಯ.**—ನೋಡು—ನಾಲಾಯನಿ [ಭಾರ.-ಆದಿ ೨, ೧೨, ೨೧೩].

**ಮೌಸಲಯುದ್ಧ ಕಥಾ.**—ಯಾದವರು ಪ್ರಭಾಸಕ್ಷೇತ್ರದಲ್ಲಿ ಸ್ವಯೂಥಕಲಹದಿಂದ ಮಡಿದದ್ದು [ಭಾಗ.-೩-೪, ೧೧-೩೦. ಭಾರ -ಮೌಸ. ೪].

**ಮ್ಲೇಚ್ಛ**—ಭಾರತವರ್ಷದ ಒಂದು ದೇಶ [ಭಾರ -ಭೀ. ೯].

**ಮ್ಲೇಚ್ಛಭಾಷಾ.**—ಮ್ಲೇಚ್ಛದೇಶದ ಜನರ ವಾಡಿಕೆಯಲ್ಲಿರುವ ಭಾಷೆ ಪಾಂಡವರು ಅರಗಿನ ಮನೆಗೆ ಹೊರಡುವುದಕ್ಕೆ ಮೊದಲು ವಿದುರ ಅರಗಿನ ಮನೆಯ ಗುಟ್ಟನ್ನು ಮ್ಲೇಚ್ಛಭಾಷೆಯಿಂದ ಪಾಂಡವರಿಗೆ ತಿಳಿಸಿದ [ಭಾರ -ಆದಿ. ೧೫೭].

## ಯ

**ಯಕ್ಷ**—ದೇವತೆಗಳಲ್ಲಿ ಒಂದು ಪಂಗಡದವರು. ಸೃಷ್ಟ್ಯಾದಿಯಲ್ಲಿ ಚತುರ್ಮುಖ ಮೊತ್ತಮೊದಲು ಉದಕವನ್ನು ಸೃಷ್ಟಿಸಿ ಆ ತರುವಾಯ ಅವುಗಳ ಸಂರಕ್ಷಣೆಗಾಗಿ ಕೆಲವು ಪ್ರಾಣಿಗಳನ್ನು ಸೃಷ್ಟಿಸಿದ ಅವುಗಳಲ್ಲಿ ಕೆಲವರು "ಜಕ್ಷ" (ತಿನ್ನು) ಎಂದರು ಕೆಲವರು "ರಕ್ಷ" (ಕಾಪಾಡು) ಎಂದರು ಆಗ ಚತುರ್ಮುಖ ಜಕ್ಷ ಎಂದವರನ್ನು ಯಕ್ಷರೆಂತಲೂ, ರಕ್ಷ ಎಂದವರನ್ನು ರಾಕ್ಷಸರೆಂತಲೂ ಕರೆದ [ರಾಮಾ -ಉತ್ತ. ೪ ಭಾರ.-ಸ. ೧೦] ಕುಬೇರ ಕಾವೇರೀ ನರ್ಮದಾ ನದಿಗಳ ಸಂಗಮಸ್ಥಲದಲ್ಲಿ ನಿಯಮವನ್ನು ಕೈಕೊಂಡು ಶಿವನನ್ನು ಮೆಚ್ಚಿಸಿ ಯಕ್ಷರಾಜ್ಯವನ್ನು ಪಡೆದ [ಮತ್ಸ್ಯ -೧೮೯]

**ಯಕ್ಷಪ್ರಶ್ನ.**—ಪಾಂಡವರು ಅರಣ್ಯವಾಸವನ್ನು ಮುಗಿಸಿ, ಅಜ್ಞಾತವಾಸವನ್ನು ಕೈಕೊಳ್ಳುವುದಕ್ಕೆ ಸ್ವಲ್ಪ ಕಾಲದ ಮೊದಲು ಯಮ ಪಾಂಡವರನ್ನು ಪರೀಕ್ಷಿಸುವ ಉದ್ದೇಶದಿಂದ ಒಂದು ಜಿಂಕೆಯ ರೂಪದಿಂದ ಬಂದು, ಪಾಂಡವರ ಆಶ್ರಮದ ಬಳಿ ವಾಸವಾಗಿದ್ದ ಒಬ್ಬ ತಪಸ್ವಿಯ ಅರಣಿಯನ್ನು ಅಪಹರಿಸಿ, ಅದನ್ನು ಹಿಡಿತರಲು ಹೋದ ಭೀಮಾರ್ಜುನ ನಕುಲ ಸಹದೇವರನ್ನು ಕಣ್ಮರೆಯಾಗಿದ್ದು ಕೆಲ ಪ್ರಶ್ನೆಗಳನ್ನು ಕೇಳಿ ಮೂರ್ಛೆಗೊಳಿಸಿ, ತರುವಾಯ ತಮ್ಮಂದಿರನ್ನು ಹುಡುಕಿ

ಕೊಂಡು ಅಲ್ಲಿಗೆ ಬಂದ ಯುಧಿಷ್ಠಿರನಿಂದ ತನ್ನ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಪಡೆದು, ಬಳಿಕ ತನ್ನ ನಿಜರೂಪವನ್ನು ತೋರಿದ. ಅವರನ್ನು ಅನುಗ್ರಹಿಸಿದ [ಭಾರ.-ವನ. ೩೧೪].

**ಯಕ್ಷೇಶ್ವರ.**—ಸಮುದ್ರ ಮಥನಾನಂತರದಲ್ಲಿ ಅಮೃತಪಾನದಿಂದ ಗರ್ವಿತರಾದ ದೇವತೆಗಳು ತಾವೇ ಬಲಾಧಿಕರೆಂತಲೂ ತಾವೇ ದೈತ್ಯರನ್ನು ಕೊಂದವರೆಂತಲೂ ಕೊಚ್ಚಿಕೊಳ್ಳುತ್ತಿರಲಾಗಿ, ಶಿವ ಅವರಲ್ಲಿಗೆ ಯಕ್ಷರೂಪದಿಂದ ಬಂದು ಅಲ್ಲಿ ಒಂದು ತೃಣವನ್ನು ಇರಿಸಿ, '' ಇದನ್ನು ಕತ್ತರಿಸಿ '' ಎಂದ ಸಕಲ ದೇವತೆಗಳೂ ವಿಫಲಪ್ರಯತ್ನರಾಗಿ ಚಿಂತಾಭರಿತರಾದರು ಆಗ ಅಶರೀರವಾಣಿ '' ಈ ಯಕ್ಷ ಸಾಮಾನ್ಯನಲ್ಲ. ಈತನೇ ಪರಮೇಶ್ವರ '' ಎನಲು ದೇವತೆಗಳೆಲ್ಲರೂ ಆತನನ್ನು ಮರೆಹೊಕ್ಕರು [ಶಿವ.-ಶತರುದ್ರ. ೧೬].

**ಯಜುರ್ವೇದ**—ನಾಲ್ಕು ವೇದಗಳಲ್ಲಿ ಎರಡನೆಯದು. ಇದು ಚತುರ್ಮುಖನ ದಕ್ಷಿಣಾಭಿಮುಖವಾದ ಬಾಯಿಂದ ಹೊರಟುಬಂತು. ಇದರಲ್ಲಿ ಶುಕ್ಲಯಜುರ್ವೇದ, ಕೃಷ್ಣಯಜುರ್ವೇದ ಎಂಬುದಾಗಿ ಎರಡು ಬಗೆ. ಧನುರ್ವೇದ ಇದರ ಉಪವೇದ. ಈ ವೇದಮಂತ್ರಗಳನ್ನು ಯಜ್ಞದಲ್ಲಿ ದೇವತೆಗಳಿಗೆ ಆಹುತಿಗಳನ್ನು ಸಮರ್ಪಿಸಲು ವಿನಿಯೋಗಿಸುತ್ತಾರೆ [ಭಾಗ.-೩-೧೨ ವಿಷ್ಣು.-೩-೪]. ವೇದಸಮುದಾಯಕ್ಕೆಲ್ಲಕ್ಕೂ ಯಜುರ್ವೇದವೆಂಬ ವ್ಯವಹಾರವೂ ಇದೆ—

ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯತ್ ।
ಚಾತುರ್ಹೋತ್ರಮಭೂತ್ತಸ್ಮಿನ್ ತೇನ ಯಜ್ಞಮಥಾ ಕರೋತ್ ॥
[ವಿಷ್ಣು -೩-೪ ಶ್ಲೋ ೧೧].

ಕೃಷ್ಣದ್ವೈಪಾಯನ ಸಮಷ್ಟಿರೂಪದಿಂದಿದ್ದ ವೇದವನ್ನು ನಾಲ್ಕು ಭಾಗಮಾಡಿದ ತರುವಾಯ, ಯಜುರ್ವೇದವನ್ನು ವೈಶಂಪಾಯನನೆಂಬ ಮುನಿಗೆ ಉಪದೇಶಿಸಿದ. ಆತನ ಶಿಷ್ಯಪರಂಪರಾ ಕ್ರಮದಿಂದ ಈಗ ಲೋಕದಲ್ಲಿ ಪ್ರಚಾರದಲ್ಲಿದೆ [ವಿಷ್ಣು.-೩,೪].

**ಯಜ್ಞ.**—(i) ಯಾಗ. ಯಾಗವನ್ನು ಮಾಡುವುದಕ್ಕೆ ಅರ್ಹರು ಯಾರು ? [ಭಾರ.-ಶಾಂತಿ. ೧೬೩]. ಯಜ್ಞಪ್ರತಿನಿಧಿ ಕರ್ಮಗಳು [ಭಾರ.-ಅನು. ೧೬೪]. ಯಾಗಪ್ರಶಂಸೆ [ಭಾರ.-ಶಾಂತಿ. ೨೭೮]. ಯಜ್ಞಫಲವನ್ನು ಅಪಹರಿಸತಕ್ಕ ದೇವತೆಗಳು ಹದಿನೈದು ಮಂದಿ.

(ii) ಮಹರ್ಷಿ. ನೋಡು—ತುಷಿತ [ಭಾರ.-ವನ. ೨೨೨].

**ಯಜ್ಞದತ್ತ.**—ನರಕಾಸುರನ ಮಗನಾದ ಭಗದತ್ತನ ಮಗ. ವಜ್ರದತ್ತನೆಂಬುದು ಇವನಿಗೆ ನಾಮಾಂತರ. ನೋಡು—ಭಗದತ್ತ. ಪ್ರಾಗ್ಜ್ಯೋತಿಷ

ನಗರದ ಅರಸು. ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ಅರ್ಜುನ ನಿಂದ ಸೋತ [ಭಾರ.-ಅಶ್ವ. ೭೫-೭೬].

**ಯಜ್ಞವರಾಹ.**—ವರಾಹರೂಪಧಾರಿಯಾದ ಮಹಾವಿಷ್ಣು ನೋಡು—ವರಾಹಾವತಾರ.

**ಯಜ್ಞಸೇನ.**—ದ್ರುಪದ ರಾಜನ ನಾಮಾಂತರ.

**ಯತಿ.**—(i) ನಾಲ್ಕು ಆಶ್ರಮಗಳಲ್ಲಿ ಕಡೆಯದು [ಭಾರ.-ಆದಿ. ೮೫. ಶಾಂತಿ. ೧೯೦, ೨೫೧, ೨೮೪]. ಯತಿಮಹಿಮೆ [ಭಾರ.-ಅಶ್ವ. ೧೦೮]. ಯತಿಶುಶ್ರೂಷೆಯ ಮಹಿಮೆ [ಭಾರ.-ಅನು. ೧೪೮, ೧೪೯]. ಯತ್ಯಾಶ್ರಮ ಮೋಕ್ಷಸಾಧನೆಗೆ ಮುಖ್ಯ ವಾದ ಉಪಾಯ [ಭಾರ -ಅಶ್ವ ೪೭]

(ii) ಒಬ್ಬ ಅರಸು. ಚಂದ್ರ ವಂಶದ ನಹುಷ ರಾಜನ ಮಗ. ಯಯಾತಿಯ ಸಹೋದರ. ಇವ ಬಾಲ್ಯದಿಂದಲೇ ವಿರಕ್ತನಾಗಿದ್ದ [ಭಾರ.-ಆದಿ. ೬೯].

**ಯದು.**—ಯಯಾತಿ ರಾಜನ ಮಗ. ಶುಕ್ರಾಚಾರ್ಯನ ಮಗಳಾದ ದೇವಯಾನಿ ಇವನ ಜನನಿ [ಭಾರ -ಆದಿ ೬೩]. ಇವನೂ ಇವನ ಒಡಹುಟ್ಟಿದವನಾದ ತುರ್ವಸುವೂ ಯಯಾತಿಯ ಮುದಿತನವನ್ನು ಸ್ವೀಕರಿಸಲೊಲ್ಲದೆ ರಾಜ್ಯಾಧಿಕಾರವನ್ನು ಕಳೆದುಕೊಂಡರು. ಈ ಕಾರಣದಿಂದಲೇ ಯದು ವಂಶದಲ್ಲಿ ಜನಿಸಿದ ಕೃಷ್ಣ ಕಂಸನನ್ನು ಕೊಂದ ಬಳಿಕ ತಾನು ಸಿಂಹಾಸನವನ್ನೇರದೆ ಕಂಸನ ತಂದೆಯಾದ ಉಗ್ರಸೇನನಿಗೇ ಪಟ್ಟಗಟ್ಟಿದ. ನೋಡು—ದೇವಯಾನಿ, ಪೂರು. ಯದು ವಂಶವರ್ಣನ [ಭಾಗ.-೯-೨೩. ಮತ್ಸ್ಯ.-೪೩ ವಿಷ್ಣು.-೪-೧೧. ಹರಿ -೧-೩೩. ವಾಯು.-೯೪. ಲಿಂಗ.-೬೮, ೬೯]. ಯದು ವಂಶ ಹಾಳಾದದ್ದು [ಭಾರ.-ಮೌಸ ೪. ಭಾಗ.-೧೧-೩೦].

**ಯಮ**—ಸೂರ್ಯನ ಮಗ ದಕ್ಷಿಣ ದಿಕ್ಕಿನ ಅಧಿಪತಿ. ನಾರದ ಯಮನ ಸಭೆಯನ್ನು ಯುಧಿಷ್ಠಿರನಿಗೆ ವರ್ಣಿಸಿದ್ದು. ಸಂಯಮಿನಿ ಇವನ ರಾಜಧಾನಿ [ಭಾರ.-ಸಭಾ. ೮]. ಸೂರ್ಯನಿಂದ ಸಂಜ್ಞಾದೇವಿಯಲ್ಲಿ ಜನಿಸಿದವ. ಯಮುನೆ ಈತನ ತಂಗಿ. ಶನಿ ಇವನ ಬಲತಾಯ ಮಗ [ಭಾಗ -೬-೬. ವಿಷ್ಣು.-೩-೨. ಹರಿ.-೧-೯. ಮತ್ಸ್ಯ.-೧೧. ಪದ್ಮ.-೫-೮. ವಾಯು.-೮೪. ಬ್ರಹ್ಮ.-೬. ವರಾ.-೨೦. ಶಿವ.-ಉಮಾ. ೭]. ಅಣಿಮಾಂಡವ್ಯ ಮುನಿಯನ್ನು ಶಿಕ್ಷೆಗೆ ಗುರಿಪಡಿಸಿ, ಭೂಲೋಕದಲ್ಲಿ ಶೂದ್ರನಾಗಿ ಜನಿಸುವಂತೆ ಶಾಪಪಡೆದು ವಿದುರನಾಗಿ ಅವತರಿಸಿದ [ಭಾರ.-ಆದಿ. ೬೪, ೧೧೫, ೧೧೭]. ಯಮ ಕುಂತಿಯಲ್ಲಿ ಯುಧಿಷ್ಠಿರನನ್ನು ಪಡೆದದ್ದು [ಆದಿ. ೧೨೯]. ಪಾಶುಪತಾಸ್ತ್ರವನ್ನು ಸಂಪಾದಿಸಲು ಅರ್ಜುನ ಇಂದ್ರಕೀಲ ಪರ್ವತದಲ್ಲಿ ತಪಸ್ಸುಮಾಡುತ್ತಿದ್ದಾಗ ಆತನಲ್ಲಿಗೆ ಬಂದು ವರಪ್ರದಾನಮಾಡಿದ್ದು [ಭಾರ.-ವನ. ೪೧]. ಸತ್ಯವಂತನ ಜೀವವನು. ಕೊಂಡುಯ್ಯುವಾಗ ತನ್ನನ್ನು ಹಿಂಬಾಲಿಸಿದ ಸಾವಿತ್ರಿಯ ತಿಳಿ

ವಳಿಕೆಗೆ ಮೆಚ್ಚಿ ಆಕೆಗೆ ಅನೇಕ ವರಗಳನ್ನಿತ್ತು ಕಡೆಗೆ ಸತ್ಯವಂತನನ್ನೇ ಬದುಕಿಸಿ ಕೊಟ್ಟದ್ದು [ಭಾರ-ವನ ೨೯೮] ಯಮ ಛಾಯಾದೇವಿಯಿಂದ ಶಾಪಹೊಂದಿದ್ದು [ಮಾರ್ಕಂ-೭೨]. ಯಕ್ಷರೂಪದಿಂದ ಯುಧಿಷ್ಠಿರನನ್ನು ಪರೀಕ್ಷಿಸಿ, ಆತನಿಗೆ ವರ ಕೊಟ್ಟದ್ದು [ಭಾರ.-ವನ. ೩೧೪, ೩೧೫]. ಮಾರ್ಕಂಡೇಯನಿಗಾಗಿ ಶಿವನ ಮೂಲಕ ಭಂಗಪಟ್ಟದ್ದು [ಭಾರ-ವ.-೧೩೦. ಬ್ರ-೫೪-೫೬]. ಬ್ರಹ್ಮನ ಸೂಚನೆಯಂತೆ ಯಮ ಶ್ರೀ ರಾಮನಲ್ಲಿಗೆ ಬಂದು, ರಾಮಾವತಾರದಿಂದ ನಡೆಯಬೇಕಾಗಿದ್ದ ಕಾರ್ಯಗಳೆಲ್ಲವೂ ಮುಗಿದುವು. ಇನ್ನು ವೈಕುಂಠಕ್ಕೆ ಬಿಜಮಾಡಬೇಕೆಂದು ಸೂಚಿಸಿದ ಅದೇ ಸಮಯ ದಲ್ಲಿ ರಾಮನಲ್ಲಿಗೆ ಬಂದ ದುರ್ವಾಸಮುನಿಯ ವಿಷಯವನ್ನು ಲಕ್ಷ್ಮಣ ರಾಮನಿಗೆ ಅರಿಕೆಮಾಡಹೋಗಿ, ಪ್ರಾಣಾಂತಕವಾದ ಶಿಕ್ಷೆಗೆ ಗುರಿಯಾದ [ರಾ-ಉ ೧೦೩,೧೦೪].

**ಯಮಯಾತನೆಗಳು.**—[ಭಾರ.-ಅನು. ೨೨೯].

**ಯಮಲೋಕ ಮಾರ್ಗವರ್ಣನ**—[ಭಾರ-ವನ. ೨೦೩. ಅನು ೨೨೯ ಅಶ್ವ. ೧೦೦. ಭಾಗ-೩-೩೦].

**ಯಮುನಾ**—ಸುಪ್ರಸಿದ್ಧವಾದ ನದಿ. ಸೂರ್ಯನ ಮಗಳು [ಭಾರ.-ಭೀ. ೯]. ಕೃಷ್ಣಾರ್ಜುನರು ಯಮುನೆಯಲ್ಲಿ ಜಲಕ್ರೀಡೆಯಾಡಿದ್ದು. ನೋಡು—ಬಲರಾಮ [ಭಾರ.-ಆದಿ. ೨೪೮].

**ಯಯಾತಿ.**—ಚಂದ್ರವಂಶದ ನಹುಷರಾಜನಿಂದ ಪಿತೃಕನ್ಯೆಯಾದ ವಿರಜೆ ಯೆಂಬಾಕೆಯಲ್ಲಿ ಜನಿಸಿದವ [ಭಾರ.-ಆ ೬೩ ಸ ೮ ವಿರಾ. ೫೩ ಬ್ರಹ್ಮ-೧೨ ಹರಿ.-೧-೩೦] ಯಯಾತಿಚರಿತ್ರ [ಭಾರ-ಆ ೬೯-೭೮ ದ್ರೋ. ೬೩. ಶಾಂತಿ ೨೮]. ಈತ ಶುಕ್ರಾಚಾರ್ಯನ ಮಗಳಾದ ದೇವಯಾನಿಯನ್ನೂ ವೃಷಪರ್ವರಾಜನ ಮಗಳಾದ ಶರ್ಮಿಷ್ಠೆಯನ್ನೂ ಮದುವೆಯಾಗಿದ್ದ ಯದು, ತುರ್ವಸು ಎಂಬವರು ದೇವ ಯಾನಿಯ ಮಕ್ಕಳು. ಅನು, ದ್ರುಹ್ಯು, ಪೂರು, ಎಂಬವರು ಶರ್ಮಿಷ್ಠೆಯ ಪುತ್ರರು. ನೋಡು—ದೇವಯಾನಿ, ಅನು, ಯದು, ತುರ್ವಸು, ದ್ರುಹ್ಯು, ಪೂರು [ಭಾರ.-ಆ. ೬೩, ೭೫]. ಈತನಿಗೆ ಮಾಧವಿಯೆಂಬ ಪುತ್ರಿಯಿದ್ದಳು [ಆದಿ ೮೭]. ಇವ ವಿಶ್ವಾಚಿ ಯೆಂಬ ಅಪ್ಸರಸಿಯೊಡನೆ ಕ್ರೀಡಿಸಿದ್ದು [ಆದಿ. ೬೯] ಯಯಾತಿ ಬೇಟೆಯಾಡಿದ್ದು. ಆ ಸಮಯದಲ್ಲಿ ದೇವಯಾನಿಯನ್ನು ಸಂದರ್ಶಿಸಿದ್ದು ಮುಂತಾಗಿ [ಭಾರ.-ಆದಿ. ೭೨-೭೫]. ಯಯಾತಿ ಮುದುಕನಾಗುವಂತೆ ಶುಕ್ರಾಚಾರ್ಯ ಶಾಪಕೊಟ್ಟದ್ದು [ಭಾರ-ಆದಿ. ೭೭]. ತನ್ನ ಮುದಿತನವನ್ನು ಕೈಕೊಂಡು, ತಮ್ಮ ಯೌವನವನ್ನು ಕೊಡಲು ಸಮ್ಮತಿಸದ ಯದು, ಅನು, ತುರ್ವಸು, ದ್ರುಹ್ಯುಗಳಿಗೆ ಶಾಪಕೊಟ್ಟದ್ದು ಅಂತೆಯೇ ತನ್ನ ಯೌವನವನ್ನು ಕೊಟ್ಟ ಪೂರುವಿಗೆ ರಾಜ್ಯವನ್ನೂ ವರಗಳನ್ನೂ ಕೊಟ್ಟದ್ದು [ಭಾರ.-ಆ. ೭೮]. ಯಯಾತಿಗೆ ವೈರಾಗ್ಯ ಹುಟ್ಟಿದ್ದು. ಪೂರುವಿಗೆ ಅವನ ಯೌವನ

ವನ್ನು ಹಿಂದಕ್ಕೆ ಕೊಟ್ಟು, ತನ್ನ ಮುದಿತನವನ್ನೇ ತಾನು ಸ್ವೀಕರಿಸಿ ತಪಸ್ವಿಯಾಗಿ ಕಾಡಿಗೆ ಹೋದದ್ದು [ಭಾರ -ಆ ೭೯] ಯಯಾತಿ ಸ್ವರ್ಗವನ್ನು ಸೇರಿ ಅಲ್ಲಿ ಸುಖಗಳನ್ನು ಅನುಭವಿಸಿ, ಕ್ಷೀಣಪುಣ್ಯನಾಗಿ ಸ್ವರ್ಗದಿಂದ ಭೂಮಿಗೆ ಬಿದ್ದದ್ದು. ಅಷ್ಟಕನೊಂದಿಗೆ ಸಂವಾದ [ಭಾರ -ಆ. ೮೦-೮೪. ಉದ್ಯೋ ೧೨೧]. ವಿಶ್ವಾಮಿತ್ರನ ಅಪ್ಪಣೆಯ ಮೇರೆಗೆ ಅಶ್ವಮೇಧಯೋಗ್ಯವಾದ, ಒಂದು ಕಿವಿ ಮಾತ್ರ ಕಪ್ಪಗಿರುವ ಕುದುರೆ ಗಳನ್ನು ಯಾಚಿಸುವ ಸಲುವಾಗಿ ಗಾಲವಮುನಿ ಈತನಲ್ಲಿಗೆ ಬಂದದ್ದು. ಕುದುರೆಗಳಿಗೆ ಪ್ರತಿಯಾಗಿ ಯಯಾತಿ ತನ್ನ ಮಗಳಾದ ಮಾಧವಿಯನ್ನು ಗಾಲವ ನಿಗೆ ಕೊಟ್ಟದ್ದು ನೋಡು—ಗಾಲವ, ಮಾಧವಿ [ಉದ್ಯೋ ೧೧೫]. ಯಯಾತಿಯ ಗೋದಾನಪ್ರಕಾರ [ವನ ೧೯೮] ಯಯಾತಿ ಸರಸ್ವತೀ ತೀರದಲ್ಲಿ ಯಜ್ಞಮಾಡಿದ್ದು [ಭಾರ.-ಶಲ್ಯ. ೪೨] ಯಯಾತಿ ಮಾಧವಿಯ ಸ್ವಯಂವರವನ್ನು ಏರ್ಪಡಿಸಿದ್ದು [ಉ ೧೨೦]. ನೋಡು—ಮಾಧವಿ, ಗಾಲವ, ವಿಶ್ವಾಮಿತ್ರ ಪುಷ್ಕರವನ್ನು (ತಾವರೆ ಯನ್ನು) ತಾನು ಕದಿಯಲಿಲ್ಲವೆಂದು ಯಯಾತಿ ಶಪಥಮಾಡಿದ್ದು [ಭಾರ -ಅನು. ೧೪೩]. ಯಯಾತಿಯ ಕಥೆ [ಭಾಗ -೯-೧೮ ಹರಿ -೧-೩೦ ವಾಯು -೯೩. ಮತ್ಸ್ಯ ೨೪-೪೨ ರಾಮಾ -ಉತ್ತರ ೫೮-೫೯. ವಿಷ್ಣು.-೪-೧೦ ಬ್ರಹ್ಮ-೧೨].

**ಯವಕ್ರೀತ.**—ಭರದ್ವಾಜನೆಂಬ ಒಬ್ಬ ಋಷಿಯ ಮಗ ಈತ ಅಧ್ಯಯನ ಮಾಡದೆಯೇ ತನಗೆ ಸಕಲ ವಿದ್ಯೆಗಳೂ ಹೊಳೆಯುವುದಕ್ಕಾಗಿ ಇಂದ್ರನನ್ನು ಕುರಿತು ತಪಸ್ಸುಮಾಡಿದ್ದು ಮುಂತಾಗಿ [ಭಾರ.-ವನ ೧೩೭] ಇವ ರೈಭ್ಯ ಮುನಿಯ ಪುತ್ರನಾದ ಪರಾವಸುವಿನ ಹೆಂಡತಿಯನ್ನು ಬಲಾತ್ಕಾರದಿಂದ ಸೇರಿ, ರೈಭ್ಯಮುನಿ ನಿರ್ಮಿಸಿದ ಕ್ಷುದ್ರದೇವತೆಯಿಂದ ಮಡಿದದ್ದು ಅರ್ವಾವಸು (ಪರಾವಸುವಿನ ತಮ್ಮ) ತಪೋಮಹಿಮೆಯಿಂದ ದೇವತೆಗಳನ್ನು ಮೆಚ್ಚಿಸಿ, ಯವಕ್ರೀತ, ರೈಭ್ಯ, ಭರದ್ವಾಜ ರನ್ನು ಬದುಕಿಸಿದ್ದು [ಭಾರ.-ವನ. ೧೩೮-೧೪೩]

**ಯವನ**—(i) ಭಾರತ ವರ್ಷದ ಒಂದು ದೇಶ [ಭೀಷ್ಮ ೯]

(ii) ನೋಡು—ಕಾಲಯವನ, ಕೃಷ್ಣ, ಮುಚುಕುಂದ.

**ಯಶೋದಾ.**—(i) ಗೋಕುಲದ ಅರಸನಾದ ನಂದನ ಹೆಂಡತಿ. ಕೃಷ್ಣನ ಸಾಕುತಾಯಿ [ಭಾಗ.-೧-೩]

(ii) ಸೂರ್ಯ ವಂಶದ ಅಂಶುಮಂತನ ಹೆಂಡತಿ ದಿಲೀಪನ ಜನನಿ.

(iii) ಚಂದ್ರ ವಂಶದ ಹಸ್ತಿ ರಾಜನ ಹೆಂಡತಿ. ಈಕೆಯ ಮಗ ವಿಕುಂಜನ. ವಿಕುಂಜನನಿಗೆ ವಿಕುಂಠನೆಂಬುದು ನಾಮಾಂತರ [ಭಾರ -ಆದಿ. ೬೩].

**ಯಾಜ**—ಕಾಶ್ಯಪನ ಸಂತತಿಯಲ್ಲಿ ಜನಿಸಿದ ಒಬ್ಬ ಮಹರ್ಷಿ. ಯಮುನಾ ತೀರದಲ್ಲಿ ತಪಸ್ಸುಮಾಡುತ್ತಿದ್ದ. ಇವನೂ ಇವನ ತಮ್ಮನಾದ ಉಪಯಾಜನೂ

ದ್ರುಪದ ರಾಜನಿಗೆ ಸಂತಾನಾರ್ಥವಾಗಿ ಯಜ್ಞಮಾಡಿದರು. ನೋಡು—ಉಪಯಾಜ, ದ್ರುಪದ [ಭಾರ.-ಆ. ೧೮೧, ೧೮೨].

**ಯಾಜ್ಞವಲ್ಕ್ಯ.**—ಒಬ್ಬ ಬ್ರಹ್ಮರ್ಷಿ. ಮೊದಲನೆಯ ಮಹಾಯುಗದ ವೈಶಂಪಾಯನ ಮಹರ್ಷಿಯು ಸೋದರಳಿಯ ಮತ್ತು ಶಿಷ್ಯ [ಭಾರ.-ಸ. ೪, ೭]. ಈತ ಚತುರ್ಮುಖನ ದೇಹದಿಂದ ಜನಿಸಿದವ [ವಾಯು.-೬೦]. ಬ್ರಹ್ಮರಾತನೆಂಬ ಮುನಿಯ ಮಗ. ವೈಶಂಪಾಯನ ಮಹರ್ಷಿಯ ಶಿಷ್ಯ [ವಿಷ್ಣು.-೩೫]. ಯಾಜ್ಞವಲ್ಕ್ಯ ವೈಶಂಪಾಯನನ ಶಿಷ್ಯರನ್ನು ಧಿಕ್ಕರಿಸಿ, ಗುರುಶಾಪಗ್ರಸ್ತನಾಗಿ, ವೈಶಂಪಾಯನನಿಂದ ಕಲಿತ ವೇದಗಳನ್ನು ವಮನಮಾಡಿದ್ದು, ಮಿಕ್ಕ ಮುನಿಗಳು ಅದನ್ನು ತಿತ್ತಿರಿ ಪಕ್ಷಿರೂಪದಿಂದ ಪರಿಗ್ರಹಿಸಿದ್ದು. ಬಳಿಕ ಯಾಜ್ಞವಲ್ಕ್ಯ ಸೂರ್ಯನಿಂದ ಶುಕ್ಲ ಯಜುರ್ವೇದವನ್ನು ಪರಿಗ್ರಹಿಸಿದ್ದು ಮುಂತಾಗಿ [ಭಾಗ.-೧೨-೬. ವಿಷ್ಣು.-೩-೫]. ನೋಡು—ತಿತ್ತಿರಿ, ಕೃಷ್ಣಯಜುರ್ವೇದ ಜನಕ ರಾಜನ ಯಜ್ಞಸಭೆಯಲ್ಲಿ ವಾದ ಮಾಡುವಾಗ ಪ್ರಾಣಪಣದಿಂದ ಶಾಕಲ್ಯ ಮುನಿಯನ್ನು ಕೊಂದ [ವಾಯು.-೬೦]. ಜನಕನೊಂದಿಗೆ ಬ್ರಹ್ಮವಿದ್ಯಾ ವಿಷಯವಾಗಿ ವಾದಮಾಡಿ ವಿಶೇಷವಾಗಿ ಮನ್ನಣೆಹೊಂದಿದ [ಭಾರ.-ಶಾಂತಿ. ೩೧೬-೩೨೩] ವಿಶ್ವಾವಸುವೆಂಬ ಗಂಧರ್ವನೊಂದಿಗೆ ಸಂವಾದ [ಶಾಂತಿ ೩೨೩].

**ಯಾಜ್ಞಸೇನಿ**—ದ್ರುಪದ ಪುತ್ರನಾದ ಧೃಷ್ಟದ್ಯುಮ್ನ.

**ಯಾಜ್ಞಸೇನೀ**—ದ್ರೌಪದಿ. ನೋಡು—ಯಜ್ಞಸೇನ

**ಯುಗನ್ಧರ.**—ಯದು ವಂಶದ ಸಾತ್ಯಕಿಯ ಮಗ ಭಾರತಯುದ್ಧದಲ್ಲಿ ಹನ್ನೊಂದನೆಯ ದಿನ ದ್ರೋಣನಿಂದ ಮಡಿದ [ಭಾರ -ದ್ರೋ ೧೬]

**ಯುಗ.**—ಕೃತ, ತ್ರೇತಾ, ದ್ವಾಪರ, ಕಲಿ ಎಂಬುದಾಗಿ ನಾಲ್ಕು—

| | | | |
|---|---|---|---|
| ಕಲಿಪ್ರಮಾಣ | | ೪,೩೨,೦೦೦ | ಸೌರ ವರ್ಷಗಳು |
| ದ್ವಾಪರ | | ೮,೬೪,೦೦೦ | ,, |
| ತ್ರೇತಾ | | ೧೨,೯೬,೦೦೦ | ,, |
| ಕೃತ | .. | ೧೭,೨೮,೦೦೦ | ,, |

ಒಟ್ಟು ೪೩,೨೦,೦೦೦ ಇಲ್ಲಿಗೆ ಒಂದು ಚತುರ್ಯುಗವಾಗುತ್ತದೆ [ವಿಷ್ಣು.-೧-೩]. ಯುಗಧರ್ಮನಿರೂಪಣ [ಭಾರ.-ವನ ೧೫೧. ಭೀಷ್ಮ. ೧೦. ಶಾಂತಿ. ೬೯. ಮತ್ಸ್ಯ.-೧೪೨-೧೪೪. ಭಾಗವತ-೧೨-೩. ಹರಿ.-೧-೮. ಗರುಡ.-೨೨೩].

**ಯುಧಾಜಿತ್.**—ಕೇಕಯ ದೇಶದ ಅಶ್ವಪತಿ ರಾಜನ ಮಗ. ದಶರಥಪತ್ನಿಯಾದ ಕೈಕಯಿಯ ಸಹೋದರ. ರಾಮ ಲಕ್ಷ್ಮಣಾದಿಗಳ ವಿವಾಹಮಹೋತ್ಸವಾ

ನಂತರ ಭರತ ಶತ್ರುಘ್ನರನ್ನು ಕೇಕಯ ರಾಜಧಾನಿಗೆ ಕರೆದುಯ್ದ [ರಾಮಾ.-ಬಾಲ. ೭೭].

**ಯುಧಾಮನ್ಯು.**—ಪಾಂಚಾಲ ದೇಶದ ಅರಸು. ರಥೋದಾರ. ಪಾಂಡವ ಪಕ್ಷಪಾತಿ [ಭಾರ.-ಉ. ೧೯೬]. ಯುಧಾಮನ್ಯುವಿನ ಯುದ್ಧವರ್ಣನೆ [ಭಾರ.-ದ್ರೋ. ೧೩೦]. ಯುದ್ಧ ಮುಗಿದ ದಿನ ರಾತ್ರಿಯಲ್ಲಿ ಅಶ್ವತ್ಥಾಮನಿಂದ ಕೊಲೆ ಮಾಡಲ್ಪಟ್ಟ [ಭಾರ.-ಸೌಪ್ತಿ. ೮].

**ಯುಧಿಷ್ಠಿರ.**—ಪಾಂಡು ರಾಜನ ಹಿರಿಯ ಹೆಂಡತಿಯಾದ ಕುಂತಿಯಲ್ಲಿ ಯಮನ ಮೂಲಕ ಜನಿಸಿದವ. ಅಜಾತಶತ್ರು, ಧರ್ಮರಾಜ, ಧರ್ಮಪುತ್ರ ಎಬ ಹೆಸರುಗಳು ಈತನಿಗೆ ರೂಢಿಯಲ್ಲಿವೆ [ಭಾರ -ಆದಿ ೬೩]. ಇವನ ಉತ್ಪತ್ತಿಯ ಕಾಲದಲ್ಲಿನ ಗ್ರಹ ಸ್ಥಿತಿ [ಆದಿ. ೧೨೯] ಪಾಂಡು ರಾಜ ಯುಧಿಷ್ಠಿರನಿಗೆ ಉಪನಯನಮಾಡಿದ್ದು [ಆ. ೧೩೩]. ಯುಧಿಷ್ಠಿರ ತಮ್ಮಂದಿರೊಡಗೂಡಿ ಪಾಂಡುವಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು [ಆದಿ ೧೩೬] ಕೃಪಾಚಾರ್ಯನಲ್ಲಿ ಅಸ್ತ್ರವಿದ್ಯಾಭ್ಯಾಸ ಪ್ರಾರಂಭ [ಆದಿ. ೧೩೯] ದ್ರೋಣನಲ್ಲಿ ಅಸ್ತ್ರವಿದ್ಯೆಯನ್ನು ಕಲಿತದ್ದು [ಆದಿ ೧೪೨]. ಯುಧಿಷ್ಠಿರಾದಿಗಳ ಅಸ್ತ್ರವಿದ್ಯಾಪರೀಕ್ಷೆ [ಆದಿ ೧೪೪] ಯುಧಿಷ್ಠಿರನ ಯೌವರಾಜ್ಯಾಭಿಷೇಕ [ಆದಿ. ೧೫೧]. ಜನನೀಸೋದರರ ಸಂಗಡ ವಾರಣಾವತಕ್ಕೆ ಹೋಗಿ ಅರಗಿನಮನೆಯಲ್ಲಿ ನಿಂತದ್ದು ವಿದುರ ಮ್ಲೇಚ್ಛಭಾಷೆಯಿಂದ ಅರಗಿನಮನೆಯ ಗುಟ್ಟನ್ನು ತಿಳಿಸಿದ್ದು [ಆದಿ. ೧೫೭, ೧೫೮]. ವ್ಯಾಸ ಮುನಿಯನ್ನು ಸಂದರ್ಶಿಸಿ, ಏಕಚಕ್ರ ನಗರವನ್ನು ಸೇರಿದ್ದು [ಆದಿ ೧೭೦] ಕುಂತಿ ಬಕನಲ್ಲಿಗೆ ಭೀಮನನ್ನು ಕಳುಹಿಸುವಾಗ ಯುಧಿಷ್ಠಿರ ಪರಿತಾಪಪಟ್ಟದ್ದು [ಆದಿ ೧೭೬]. ದ್ರೌಪದೀ ಸ್ವಯಂವರವಾರ್ತೆಯನ್ನು ಕೇಳಿ, ದ್ರುಪದ ನಗರಿಗೆ ಹೊರಟದ್ದು. ವ್ಯಾಸಸಂದರ್ಶನ [ಆದಿ ೧೭೯, ೧೮೩, ೧೮೪]. ದ್ರುಪದ ನಗರವನ್ನು ಪ್ರವೇಶಿಸಿ, ಕುಂಬಾರನ ಮನೆಯಲ್ಲಿ ಇಳಿದು ಕೊಂಡದ್ದು. ಬ್ರಾಹ್ಮಣವೇಷದಿಂದ ಸ್ವಯಂವರಮಂಟಪವನ್ನು ಹೊಕ್ಕದ್ದು [ಆದಿ. ೨೦೦]. ದ್ರೌಪದೀ ಸ್ವಯಂವರಾನಂತರ ನಡೆದ ಯುದ್ಧದಲ್ಲಿ ಯುಧಿಷ್ಠಿರ ದುರ್ಯೋಧನನನ್ನು ಸೋಲಿಸಿದ್ದು [ಆದಿ. ೨೦೫]. ಐವರೂ ದ್ರೌಪದಿಯನ್ನು ಮದುವೆಯಾಗಬೇಕೆಂದು ಯುಧಿಷ್ಠಿರ ನಿಶ್ಚಯಿಸಿದ್ದು ಕೃಷ್ಣಸಂದರ್ಶನ [ಆದಿ. ೨೦೬]. ದ್ರೌಪದಿಯೊಂದಿಗೆ ಹಸ್ತಿನಾವತಿಯನ್ನು ಹೊಕ್ಕು, ಅರ್ಧರಾಜ್ಯವನ್ನು ಪಡೆದು ಪಟ್ಟಾಭಿಷಿಕ್ತನಾದದ್ದು [ಆದಿ. ೨೨೭]. ನಾರದನ ಮೂಲಕ ಸುಂದೋಪಸುಂದರ ಚರಿತ್ರೆಯನ್ನು ಕೇಳಿ ಒಬ್ಬೊಬ್ಬರೂ ದ್ರೌಪದಿಯನ್ನು ಸರದಿಯ ಮೇರೆಗೆ ಅನುಭವಿಸಬೇಕೆಂದು ಪ್ರತಿಜ್ಞೆಮಾಡಿದ್ದು [ಆದಿ. ೨೩೨]. ದ್ರೌಪದಿಯಲ್ಲಿ ಪ್ರತಿವಿಂಧ್ಯನೆಂಬ ತನಯನನ್ನು ಪಡೆದ [ಆಧಿ. ೨೪೭]. ಯುಧಿಷ್ಠಿರನ ರಾಜ್ಯಪಾಲನವರ್ಣನೆ [ಆಧಿ.

೨೪೮]. ಇಂದ್ರಪ್ರಸ್ಥದಲ್ಲಿ ಮಯನಿರ್ಮಿತವಾದ ನೂತನ ಸಭೆಯನ್ನು ಪ್ರವೇಶಿಸಿದ್ದು, ನಾರದಾಗಮನ [ಸಭಾ ೪, ೫]. ರಾಜಸೂಯಯಾಗ ಮಾಡುವಂತೆ ನಾರದನ ಸೂಚನೆ ದೂತನ ಮೂಲಕ ಕೃಷ್ಣನನ್ನು ಬರಮಾಡಿಕೊಂಡದ್ದು [ಸಭಾ ೧೨, ೧೩]. ರಾಜಸೂಯ ವಿಷಯವಾಗಿ ಭೀಮನೊಂದಿಗೆ ಸಂವಾದ [ಸಭಾ ೧೫] ರಾಜಸೂಯ ವಿಷಯವಾಗಿ ಅರ್ಜುನನೊಂದಿಗೆ ಸಂವಾದ [ಸಭಾ ೧೬] ರಾಜಸೂಯ ದೀಕ್ಷೆಯನ್ನು ಕೈಕೊಂಡದ್ದು ರಾಜಸೂಯಯಾಗವರ್ಣನೆ [ಸಭಾ. ೩೬-೩೮. ಭಾಗ.-೧೦-೭೪]. ಭೀಷ್ಮನ ಮೂಲಕ ಕೃಷ್ಣನ ಮಾಹಾತ್ಮ್ಯವನ್ನು ತಿಳಿದದ್ದು [ಸಭಾ ೪೩-೬೧]. ಯುಧಿಷ್ಠಿರ ವ್ಯಾಸಾದಿಗಳನ್ನು ಪೂಜಿಸಿದ್ದು [ಸಭಾ ೭೨]. ದ್ಯೂತ ವಿಷಯವಾಗಿ ಯುಧಿಷ್ಠಿರ ಶಕುನಿಯೊಂದಿಗೆ ಮಾತನಾಡಿದ್ದು, ದ್ಯೂತ ನಿರ್ಣಯ [ಸಭಾ. ೮೪]. ಯುಧಿಷ್ಠಿರ ಜೂಜಿನಲ್ಲಿ ಸೋತದ್ದು [ಸಭಾ ೮೫, ೮೮] ಧೃತರಾಷ್ಟ್ರನ ಮೂಲಕ ದ್ರೌಪದಿಗೆ ವರರೂಪವಾಗಿ, ರಾಜ್ಯವನ್ನು ಪಡೆದು ಇಂದ್ರಪ್ರಸ್ಥಕ್ಕೆ ಹೊರಟದ್ದು [ಸಭಾ ೯೩-೯೫] ಮರಳಿ ಜೂಜಿಗೆ ಪ್ರಾರಂಭ, ಯುಧಿಷ್ಠಿರನ ಸೋಲು, ಅರಣ್ಯಕ್ಕೆ ಹೊರಡಲು ಭೀಷ್ಮಾದಿಗಳ ಅನುಮತಿಯನ್ನು ಕೇಳಿದ್ದು [ಸಭಾ ೯೮-೧೦೦] ಅರಣ್ಯ ವಾಸಕ್ಕೆ ಹೊರಟ ಯುಧಿಷ್ಠಿರ ತನ್ನನ್ನು ಹಿಂಬಾಲಿಸಿ ಬಂದ ಪಟ್ಟಣಿಗರನ್ನು ಹಿಂದಕ್ಕೆ ಕಳುಹಿ, ಗಂಗಾ ತೀರದಲ್ಲಿ ಬಿಡಾರಮಾಡಿದ್ದು ಸೂರ್ಯನನ್ನು ಹೊಗಳಿ ಅಕ್ಷಯಪಾತ್ರೆಯನ್ನು ಸಂಪಾದಿಸಿದ್ದು [ವನ ೧-೩] ಕೃಷ್ಣ ಯುಧಿಷ್ಠಿರ ಸಂವಾದ [ವನ ೧೨-೨೨] ದಾಲ್ಭ್ಯ ಮುನಿಯ ಮೂಲಕ ಯುಧಿಷ್ಠಿರ ಬ್ರಾಹ್ಮಣರಿಂದಲೇ ಕ್ಷತ್ರಿಯರು ಅಭಿವೃದ್ಧಿಯನ್ನೈದಿದರೆಂಬುದನ್ನು ಕೇಳಿ ತಿಳಿದದ್ದು ಮಹರ್ಷಿಗಳ ಸಮಾಗಮ [ವನ ೨೬]. " ಈಗಲೇ ದುರ್ಯೋಧನನನ್ನು ಕೊಂದು ರಾಜ್ಯವನ್ನು ಸ್ವೀಕರಿಸತಕ್ಕದ್ದು " ಎಂದು ಹೇಳಿದ ದ್ರೌಪದಿಯೊಂದಿಗೆ ಯುಧಿಷ್ಠಿರನ ವಿವಾದ [ಭಾರ.-ವನ ೨೭-೩೨]. ವ್ಯಾಸ ಮಹರ್ಷಿಯ ಮೂಲಕ ಪ್ರತಿಸ್ಮೃತಿಯೆಂಬ ವಿದ್ಯೆಯನ್ನು ಉಪದೇಶಹೊಂದಿದ್ದು [ವನ. ೩೬] ಬೃಹದಶ್ವ ಮಹರ್ಷಿಯ ಮೂಲಕ ಅನೇಕ ಪುರತಾನ ಕಥೆಗಳನ್ನೂ ಅಕ್ಷವಿದ್ಯಾರಹಸ್ಯವನ್ನೂ ತಿಳಿದ [ಭಾರ -ವನ. ೪೯-೭೭]. ತನ್ನಲ್ಲಿ ಬಂದು ಉಳಿಕೊಂಡ, ನಾರದನ ಮೂಲಕ ಭೂಪ್ರದಕ್ಷಿಣೆ, ತೀರ್ಥಮಾಹಾತ್ಮ್ಯಗಳನ್ನು ತಿಳಿದದ್ದು [ಭಾರ.-ವನ. ೭೯-೮೩]. ಅದೇ ಸಮಯದಲ್ಲಿ ಅರ್ಜುನ ಸ್ವರ್ಗಲೋಕಕ್ಕೆ ಹೋಗಿದ್ದನಾಗಿ, ಯುಧಿಷ್ಠಿರ ಕಾಮ್ಯಕವನದಲ್ಲಿ ವಾಸ ಮಾಡಲೊಲ್ಲದೆ ಬೇರೆ ಸ್ಥಳದಲ್ಲಿ ವಾಸಮಾಡಬೇಕೆಂದು ಹೇಳಿದ್ದು. ಧೌಮ್ಯ ನಾನಾ ತೀರ್ಥಮಹಿಮೆಗಳನ್ನು ಬಣ್ಣಿಸಿದ್ದು [ವನ ೮೪-೮೮]. ಲೋಮಶ ಮುನಿಯ ಸಂಗಡ ತೀರ್ಥಯಾತ್ರೆ [ವನ. ೮೯-೧೪೪]. ಇಂದ್ರ ಯುಧಿಷ್ಠಿರನಲ್ಲಿಗೆ ಬಂದು, ಜಯವನ್ನು ಹಾರೈಸಿ ತೆರಳಿದ್ದು [ಭಾರ.-ವನ. ೧೬೭]. ಅಜಗರರೂಪದಿಂದಿದ್ದ ನಹುಷನ ಪ್ರಶ್ನೆ

ಗಳಿಗೆ ಉತ್ತರಕೊಟ್ಟದ್ದು [ವನ. ೧೮೨]. ಮಾರ್ಕಂಡೇಯ ಮಹರ್ಷಿಯೊಂದಿಗೆ ವಾಸಮಾಡುತ್ತ ಆತನಿಂದ ಅನೇಕ ಧರ್ಮಗಳನ್ನು ಕೇಳಿ ತಿಳಿದದ್ದು [ವನ. ೧೮೫-೩೧೫. ಪದ್ಮ.-೧-೪೦-೪೯]. ಯಕ್ಷರೂಪದಿಂದ ಬಂದ ಯಮನ ಪ್ರಶ್ನೆಗಳಿಗೆ ಉತ್ತರಕೊಟ್ಟು ವರಗಳನ್ನು ಪಡೆದದ್ದು [ವನ. ೩೧೪]. ವಿರಾಟ ನಗರಕ್ಕೆ ಹೊರಡುವುದಕ್ಕೆ ಮುಂಚಿತವಾಗಿ ಧೌಮ್ಯ ಮಹರ್ಷಿಯೊಂದಿಗೆ ರಹಸ್ಯವಾಗಿ ಯೋಚಿಸಿದ್ದು. ತಮ್ಮಂದಿರೊಂದಿಗೆ ಯೋಚಿಸಿ, ತಾನು ಯತಿವೇಷದಿಂದ ವಿರಾಟನಲ್ಲಿ ವಾಸಮಾಡುವುದಾಗಿ ಹೇಳಿದ್ದು [ವಿರಾ. ೧, ೨]. ಅಜ್ಞಾತವಾಸ ಸಮಯದಲ್ಲಿ ಕಂಕನೆಂದು ಹೆಸರಿಟ್ಟುಕೊಂಡಿದ್ದ. ಪಾಂಡವರು ಇವನನ್ನು "ಜಯ"ನೆಂಬ ಗೂಢನಾಮದಿಂದ ಕರೆಯುತ್ತಿದ್ದರು [ವಿರಾ. ೨, ೭]. ಯುಧಿಷ್ಠಿರ ದುರ್ಗಾದೇವಿಯನ್ನು ಸ್ತುತಿಸಿ, ವರಗಳನ್ನು ಪಡೆದದ್ದು [ವಿರಾ. ೮]. ಕೀಚಕನ ದುರುಳತನವನ್ನು ಸೈರಂಧ್ರಿ (ದ್ರೌಪದಿ) ರಾಜಸಭೆಯಲ್ಲಿ ದೂರಿದಾಗ, ಭೀಮ ಕೀಚಕನನ್ನು ಕೊಲ್ಲುವುದಕ್ಕೆ ಯತ್ನಿಸಿದ. ಯುಧಿಷ್ಠಿರ ಭೀಮನನ್ನು ಸನ್ನೆಯಿಂದ ಅಡ್ಡಗಿಸಿದ [ವಿರಾ ೧೯]. ರಾಜಸಭೆಗೆ ಬಂದು ದೂರಿದ ದ್ರೌಪದಿಯನ್ನು ಯುಧಿಷ್ಠಿರ ಸಂತವಿಸಿದ್ದು [ವಿರಾ. ೨೦]. ಸುಶರ್ಮ ದಕ್ಷಿಣಗೋಗ್ರಹಣಕ್ಕೆ ಬಂದಾಗ ಯುದ್ಧಕ್ಕೆ ಅನುವಾದ ವಿರಾಟನನ್ನು ಕುರಿತು ಯುಧಿಷ್ಠಿರ ತನಗೂ ಯುದ್ಧದಲ್ಲಿ ಪರಿಚಯವಿರುವುದೆಂದು ಹೇಳಿ ವಲಲಾದಿಗಳನ್ನೂ (ಭೀಮಾದಿಗಳನ್ನೂ) ಸಂಗಡ ಕರೆದುಕೊಂಡು ಯುದ್ಧಕ್ಕೆ ಹೊರಟದ್ದು [ವಿರಾ. ೩೩] ಸುಶರ್ಮ ವಿರಾಟನನ್ನು ಸೆರೆಹಿಡಿದಾಗ ಯುಧಿಷ್ಠಿರ ಭೀಮನ ಮೂಲಕ ವಿರಾಟನನ್ನು ಬಿಡಿಸಿದ್ದು [ವಿರಾ. ೩೫]. ಪಟ್ಟಣದಲ್ಲಿ ಜಯವನ್ನು ಸಾರಿಸುವಂತೆ ಯುಧಿಷ್ಠಿರ ವಿರಾಟನಿಗೆ ಸೂಚಿಸಿದ್ದು [ವಿರಾ. ೩೬]. ವಿರಾಟನೊಂದಿಗೆ ಯುಧಿಷ್ಠಿರ ಪಗಡೆಯಾಡಿದ್ದು. ಉತ್ತರನೇ ಕೌರವರನ್ನು ಗೆದ್ದವನೆಂಬ ಸುದ್ದಿಯನ್ನು ಕೇಳಿ ಬೃಹನ್ನಲೆಯೇ ಕೌರವರನ್ನು ಗೆದ್ದದ್ದು ಎಂಬುದಾಗಿ ಯುಧಿಷ್ಠಿರ ಒತ್ತಿಹೇಳಿದ್ದು ಕ್ರುದ್ಧನಾದ ವಿರಾಟ ದಾಳದಿಂದ ಯುಧಿಷ್ಠಿರನ ಹಣೆಯಮೇಲೆ ಹೊಡೆದದ್ದು. ಯುಧಿಷ್ಠಿರನ ಹಣೆಯಿಂದ ಸೋರುತ್ತಿದ್ದ ರಕ್ತವನ್ನು ಸೈರಂಧ್ರಿ ಸೀರೆಯ ಸೆರಗಿನಿಂದ ಒರಸಿ, ರಕ್ತ ನೆಲದ ಮೇಲೆ ತೊಟ್ಟಿಕ್ಕದಹಾಗೆ ಹಿಡಿದದ್ದು [ವಿರಾ. ೭೦]. ಅದೇ ರಾತ್ರಿ ಯುಧಿಷ್ಠಿರ ಭೀಮಾದಿಗಳನ್ನು ಏಕಾಂತದಲ್ಲಿ ಸಂಧಿಸಿದ್ದು. ವಿರಾಟ ಯುಧಿಷ್ಠಿರನನ್ನು ಹೊಡೆದ ಸುದ್ದಿಯನ್ನು ಕೇಳಿ ಭೀಮಾದಿಗಳು ವಿರಾಟನನ್ನು ಕೊಲ್ಲಬೇಕೆಂದದ್ದು, ಯುಧಿಷ್ಠಿರ ಅವರನ್ನು ಅಡ್ಡಗಿಸಿದ್ದು [ವಿರಾ. ೭೩]. ಮರುದಿನ ಬೆಳಗಾಗುತಲೆ ಯುಧಿಷ್ಠಿರ ಪತ್ನೀ ಸೋದರರೊಂದಿಗೆ ರಾಜವೇಷವನ್ನು ಧರಿಸಿ ಸಿಂಹಾಸನದಲ್ಲಿ ಕುಳಿತದ್ದು, ವಿರಾಟ ಸಿಟ್ಟುಗೊಂಡದ್ದು, ಉತ್ತರ ಯುಧಿಷ್ಠಿರಾದಿಗಳನ್ನು ಗುರುತಿಸಿದ್ದು, ವಿರಾಟ ಯುಧಿಷ್ಠಿರನನ್ನು ಮರೆಹೊಕ್ಕದ್ದು [ವಿರಾ. ೭೪-೭೬]. ಪಾಂಡವರ ವನವಾಸ ಮುತ್ತು

ಅಜ್ಞಾತವಾಸಗಳ ಅವಧಿ ಮುಗಿಯಲಿಲ್ಲವೆಂದು ದುರ್ಯೋಧನ ಯುಧಿಷ್ಠಿರನಿಗೆ ದೂತನ ಮೂಲಕ ತಿಳಿಸಿದ್ದು. ಯುಧಿಷ್ಠಿರ ಅದೇ ದೂತನ ಮೂಲಕವಾಗಿಯೇ, ಆ ಸಂದೇಹವನ್ನು ಭೀಷ್ಮನ ಮೂಲಕ ನಿವೃತ್ತಿಮಾಡಿಕೊಳ್ಳಬೇಕೆಂದು ಹೇಳಿಕಳುಹಿದ್ದು [ವಿರಾ. ೭೭]. ಯುಧಿಷ್ಠಿರ ಮದ್ರ ರಾಜನಾದ ಶಲ್ಯನನ್ನು ಸಂಧಿಸಿ ಗೋಳಾಡಿದ್ದು, ಶಲ್ಯ ಸಂತೈಸಿದ್ದು [ಉದ್ಯೋ. ೧೮]. ಸಾತ್ಯಕಿ ಅರಸರೊಂದಿಗೆ ಸೇನಾಸಮೇತನಾಗಿ ಯುಧಿಷ್ಠಿರನಲ್ಲಿಗೆ ಬಂದದ್ದು [ಉದ್ಯೋ. ೧೯]. ಧೃತರಾಷ್ಟ್ರ ಸಂಜಯನನ್ನು ಯುಧಿಷ್ಠಿರನಲ್ಲಿಗೆ ಸಂಧಿಗಾಗಿ ಕಳುಹಿಸಿದ್ದು ಯುಧಿಷ್ಠಿರ ಧೃತರಾಷ್ಟ್ರಾದಿಗಳ ಕುಶಲ ವನ್ನು ಪ್ರಶ್ನೆಮಾಡಿ, ತಮ್ಮನ್ನು ಯುದ್ಧದಲ್ಲಿ ಗೆಲ್ಲುವುದು ಅಸಾಧ್ಯವೆಂತಲೂ ಇಂದ್ರಪ್ರಸ್ಥ ರಾಜ್ಯವನ್ನು ಕೊಟ್ಟಲ್ಲದೆ ಸಂಧಿಯಾಗಲಾರದೆಂತಲೂ ಹೇಳಿಕಳುಹಿದ್ದು [ಉದ್ಯೋ. ೨೨-೩೦] ಯುಧಿಷ್ಠಿರ ದುರ್ಯೋಧನನನ್ನು ಐದು ಗ್ರಾಮಗಳನ್ನು ಕೊಡು ವಂತೆ ಬೇಡಿದ್ದು [ಉದ್ಯೋ. ೩೧] ಯುಧಿಷ್ಠಿರ ಕೃಷ್ಣನನ್ನು ಸಂಧಿಗಾಗಿ ಹಸ್ತಿನಾ ವತಿಗೆ ಬಿಜಮಾಡಬೇಕೆಂದು ಬೇಡಿದ್ದು, ಕೃಷ್ಣ ಯುದ್ಧವನ್ನು ಮಾಡಲೇಬೇಕೆಂದು ಯುಧಿಷ್ಠಿರನಿಗೆ ಹೇಳಿದ್ದು [ಉದ್ಯೋ. ೭೧-೭೨] ಯುಧಿಷ್ಠಿರ ಕೃಷ್ಣನ ಮೂಲಕ ಕುಂತಿಗೆ ತನ್ನ ಮತ್ತು ಪತ್ನೀ ಸೋದರರ ವಂದನೆಗಳನ್ನು ಹೇಳಿಕಳುಹಿದ್ದು [ಉದ್ಯೋ ೮೩]. ಯುಧಿಷ್ಠಿರ ಸೇನಾಸಮೇತನಾಗಿ ಕುರುಕ್ಷೇತ್ರವನ್ನು ಪ್ರವೇಶಿಸಿದ್ದು, ಸೇನೆಯನ್ನು ಏರ್ಪಡಿಸಿದ್ದು [ಉದ್ಯೋ ೧೫೧, ೧೫೨]. ಯುಧಿಷ್ಠಿರ ದ್ರುಪದನೇ ಮೊದಲಾದ ಏಳು ಮಂದಿ ಅರಸರನ್ನು ತನ್ನ ಏಳು ಅಕ್ಷೌಹಿಣೀ ಸೇನೆಗೆ ಪ್ರಮುಖ ರನ್ನಾಗಿ ನಿಯಮಿಸಿ ಧೃಷ್ಟದ್ಯುಮ್ನನನ್ನು ಸರ್ವಸೇನಾಧಿಪತಿಯನ್ನಾಗಿ ನಿಯಮಿಸಿದ್ದು [ಉದ್ಯೋ. ೧೫೭]. ಯುದ್ಧಕ್ಕಾಗಿ ಸೇನೆಯನ್ನು ಹೊರಡಿಸಿದ್ದು [ಉದ್ಯೋ. ೧೬೪]. ಯುಧಿಷ್ಠಿರ ಚಾರರ ಮೂಲಕ ಭೀಷ್ಮಾದಿಗಳ ಸಾಮರ್ಥ್ಯವನ್ನು ಕೇಳಿ, ಅರ್ಜುನನ ಮೂಲಕ ತಮ್ಮ ಪಕ್ಷದವರ ಸಾಮರ್ಥ್ಯವನ್ನು ತಿಳಿದು ಹೇಳಿಕಳುಹಿದ್ದು [ಉದ್ಯೋ. ೧೯೪]. ಯುಧಿಷ್ಠಿರ ತನ್ನ ಸೇನೆಯನ್ನು ಮೂರು ಭಾಗವಾಗಿ ವಿಂಗಡಿಸಿ, ಯುದ್ಧಕ್ಕೆ ಕಳುಹಿಸಿದ್ದು [ಉದ್ಯೋ. ೧೯೬]. ಯುಧಿಷ್ಠಿರ ಸೋದರರೊಂದಿಗೆ ಯುದ್ಧಕ್ಕೆ ಹೊರಟದ್ದು, ಕೌರವ ಸೇನೆಯನ್ನು ಕಂಡು ದುಃಖಿಸಿದ್ದು [ಭೀ. ೨೨]. ಯುಧಿಷ್ಠಿರ ರಥದಿಂದ ಇಳಿದು, ಪಾದಚಾರಿಯಾಗಿ ಕುರುಸೇನೆಯನ್ನು ಪ್ರವೇಶಿಸಿ, ಭೀಷ್ಮ ದ್ರೋಣಾದಿಗಳನ್ನು ಅಭಿವಂದಿಸಿ, ಅವರಿಂದ ಜಯಶೀಲನಾಗುವಂತೆ ಆಶೀರ್ವಾದ ವನ್ನು ಪಡೆದು ಹಿಂದಿರುಗಿದ್ದು [ಭೀ. ೪೩]. ಯುಧಿಷ್ಠಿರನ ಯುದ್ಧವರ್ಣನೆ [ಭೀ. ೮೪, ೧೦೫. ದ್ರೋ. ೧೦೬, ೧೫೪. ಶಲ್ಯ ೧೫, ೧೬]. ಯುಧಿಷ್ಠಿರ ಒಂಬತ್ತನೆಯ ರಾತ್ರಿ ಕೃಷ್ಣನೊಂದಿಗೆ ಏಕಾಂತದಲ್ಲಿ ಯೋಚಿಸಿ, ಭೀಷ್ಮನ ಬಳಿಸಾರ್ದು, ಭೀಷ್ಮನ ವಧೆಗೆ ಉಪಾಯವನ್ನು ಹೇಳುವಂತೆ ಆತನನ್ನೇ ಪ್ರಾರ್ಥಿಸಿದ್ದು, ಮುಂತಾಗಿ

[ಭೀ ೧೦೭]. ಯುಧಿಷ್ಠಿರನನ್ನು ಜೀವದೊಂದಿಗೆ ಸೆರೆಹಿಡಿದುಕೊಡುವೆನೆಂದು ದ್ರೋಣ ದುರ್ಯೋಧನನಿಗೆ ಭಾಷೆ ಕೊಟ್ಟದ್ದು, ಯುಧಿಷ್ಠಿರ ಅದಕ್ಕಾಗಿ ಚಿಂತಿಸಿದ್ದು, ಅರ್ಜುನ ಸಂತವಿಸಿದ್ದು [ದ್ರೋ. ೧೨]. ದ್ರೋಣ ಯುಧಿಷ್ಠಿರನನ್ನು ಹಿಡಿಯಲು ಪ್ರಯತ್ನಿಸಿದ್ದು, ಅರ್ಜುನ ದ್ರೋಣನನ್ನು ಭಂಗಪಡಿಸಿದ್ದು [ದ್ರೋ ೧೬]. ಮರಳಿ ಯುಧಿಷ್ಠಿರನನ್ನು ಹಿಡಿಯಬಂದ ದ್ರೋಣನನ್ನು ಸತ್ಯಜಿತ ಅಡ್ಡಗಿಸಿದ್ದು, ಯುಧಿಷ್ಠಿರ ಹೆದರಿ ಓಡಿಹೋದದ್ದು [ದ್ರೋ. ೨೧] ಯುಧಿಷ್ಠಿರನನ್ನು ಹಿಡಿಯಲು ಸಾಧ್ಯವಾಗದಿದ್ದುದನ್ನು ಕಂಡು ದುರ್ಯೋಧನ ಪರಿತಪಿಸಿದ್ದು [ದ್ರೋ ೩೩]. ಪದ್ಮವ್ಯೂಹವನ್ನು ಭೇದಿಸುವಂತೆ ಯುಧಿಷ್ಠಿರ ಅಭಿಮನ್ಯುವನ್ನು ಪ್ರೇರಿಸಿ ಕಳುಹಿಸಿದ್ದು [ದ್ರೋ ೩೫]. ಅಭಿಮನ್ಯುವಿನ ಕೊಲೆಗೆ ಯುಧಿಷ್ಠಿರ ದುಃಖಿಸಿದ್ದು, ವ್ಯಾಸ ಯುಧಿಷ್ಠಿರನನ್ನು ಸಂತೈಸಿದ್ದು [ದ್ರೋ. ೫೧. ೫೨]. ಯುಧಿಷ್ಠಿರ ವ್ಯಾಸ ಮುನಿಯಿಂದ ಷೋಡಶ ರಾಜರ ಕಥೆಗಳನ್ನು ಕೇಳಿ ತಿಳಿದದ್ದು [ದ್ರೋ ೫೩-೭೧]. ಯುಧಿಷ್ಠಿರ ಅಭಿಮನ್ಯುವಿನ ಮರಣಪ್ರಕಾರವನ್ನು ಅರ್ಜುನನಿಗೆ ಬಿತ್ತರಿಸಿದ್ದು [ದ್ರೋ. ೭೩] ಜಯದ್ರಥನನ್ನು ಕೊಲ್ಲುವುದು ದುಷ್ಕರವೆಂತಲೂ, ಅರ್ಜುನನ ಪ್ರತಿಜ್ಞೆಗೆ ಭಂಗಬರುವುದರ ಮೂಲಕ ಅರ್ಜುನ ದೇಹತ್ಯಾಗಮಾಡಲೇಬೇಕಾಗುವುದೆಂತಲೂ ಯುಧಿಷ್ಠಿರ ಶೋಕಪೀಡಿತನಾದದ್ದು, ಕೃಷ್ಣ ಆತನನ್ನು ಸಂತವಿಸಿದ್ದು, ಯುಧಿಷ್ಠಿರನ ಮೈಗಾವಲಿಗೆ ಸಾತ್ಯಕಿಯನ್ನು ನಿಯಮಿಸಿದ್ದು [ದ್ರೋ. ೮೨-೮೪]. ಯುಧಿಷ್ಠಿರ ದ್ರೋಣನೊಂದಿಗೆ ಯುದ್ಧ ಮಾಡಿದ್ದು [ದ್ರೋ ೧೦೬]. ಹದಿನಾಲ್ಕನೆಯ ದಿನದ ಹಗಲು ಯುದ್ಧದಲ್ಲಿ ಕೃಷ್ಣನ ಪಾಂಚಜನ್ಯಧ್ವನಿ ಮಾತ್ರವೇ ಕೇಳಬಂದು, ಗಾಂಡೀವಧ್ವನಿ ಕೇಳಬಾರದೆ ಇದ್ದುದರಿಂದ ಅರ್ಜುನ ವಿಪತ್ತಿಗೆ ಗುರಿಯಾಗಿರಬಹುದೆಂಬ ಶಂಕೆಯಿಂದ, ಯುಧಿಷ್ಠಿರ ಅರ್ಜುನನ ಸಮಾಚಾರವನ್ನು ತಿಳಿದುಬರುವಂತೆ ಸಾತ್ಯಕಿಯನ್ನು ಕಳುಹಿದ್ದು [ದ್ರೋ. ೧೧೦, ೧೧೧]. ಸಾತ್ಯಕಿ ಬೇಗನೆ ಬಾರದಿರಲು ಅವರಿಬ್ಬರ ಸಮಾಚಾರವನ್ನು ತಿಳಿದುಬರುವಂತೆ ಭೀಮನನ್ನು ಕಳುಹಿದ್ದು [ದ್ರೋ. ೧೨೬]. ಅರ್ಜುನನನ್ನು ಕಂಡ ಭೀಮನ ಸಿಂಹನಾದದಿಂದ ಯುಧಿಷ್ಠಿರ ಸಂತೋಷಪಟ್ಟದ್ದು [ದ್ರೋ. ೧೨೮] ಜಯದ್ರಥ ಮಡಿದನೆಂಬ ಸುದ್ದಿಯನ್ನು ಕೇಳಿ ಯುಧಿಷ್ಠಿರ ಸಂತೋಷಪಟ್ಟು ಕೃಷ್ಣಾದಿಗಳನ್ನು ಸತ್ಕರಿಸಿದ್ದು, ಕೃಷ್ಣ ಯುಧಿಷ್ಠಿರರ ಸಂವಾದ [ದ್ರೋ. ೧೫೦, ೧೫೧]. ಯುಧಿಷ್ಠಿರ ದುರ್ಯೋಧನನನ್ನು ಸೋಲಿಸಿದ್ದು [ದ್ರೋ. ೧೫೪ ಕರ್ಣ. ೨೦]. ಯುಧಿಷ್ಠಿರ ಕೃತವರ್ಮನಿಂದ ಸೋತದ್ದು [ದ್ರೋ. ೧೬೬]. ಘಟೋತ್ಕಚ ಹತನಾದುದಕ್ಕಾಗಿ ಯುಧಿಷ್ಠಿರನ ಸಂತಾಪ, ಕರ್ಣನನ್ನು ಕೊಲ್ಲುವುದಕ್ಕೆ ಹೊರಟ ಯುಧಿಷ್ಠಿರನನ್ನು ವ್ಯಾಸ ಹಿಂದಿರುಗಿಸಿದ್ದು [ದ್ರೋ. ೧೮೪]. ಕೃಷ್ಣನ ಪ್ರೇರಣೆಯಿಂದ ಯುಧಿಷ್ಠಿರ "ಅಶ್ವತ್ಥಾಮಾ ಹತಃ" (ಅಶ್ವತ್ಥಾಮ ಮಡಿದ)—ಎಂದದ್ದು [ದ್ರೋ. ೧೯೧],

ಯುಧಿಷ್ಠಿರ ಕರ್ಣನಿಂದ ಸೋತು, ಪರಿಹಾಸಕ್ಕೆ ಗುರಿಯಾಗಿ ಮರುಗಿದ್ದು [ಕರ್ಣ. ೪೪]. ಕರ್ಣನ ಬಾಣದಿಂದ ಗಾಯಪಟ್ಟು ಖಿನ್ನನಾಗಿ ಮರುಗುತ್ತ ಶಿಬಿರದಲ್ಲಿದ್ದ ಯುಧಿಷ್ಠಿರನನ್ನು ಕೃಷ್ಣಾರ್ಜುನರು ಕಾಣಬಂದದ್ದು, ಕರ್ಣನನ್ನು ಅರ್ಜುನ ಕೊಂದಿರ ಬಹುದೆಂದು ಎಣಿಸಿ ಯುಧಿಷ್ಠಿರ ಅವರಿಬ್ಬರನ್ನೂ ಶ್ಲಾಘಿಸಿದ್ದು, ಕರ್ಣ ಇನ್ನೂ ಸಾಯಲಿಲ್ಲವೆಂಬ ಸುದ್ದಿಯನ್ನು ಅರ್ಜನನ ಮೂಲಕ ತಿಳಿದ ಯುಧಿಷ್ಠಿರ ಅರ್ಜುನ ನನ್ನು ಹೀಯಾಳಿಸಿ, ಗಾಂಡೀವವನ್ನು ಕೃಷ್ಣನಿಗೆ ಕೊಡಹೇಳಿದ್ದು, ಅರ್ಜುನ ಯುಧಿಷ್ಠಿರನನ್ನು ಕೊಲ್ಲಹೋದದ್ದು, ವಧೆಗೆ ಪ್ರತಿಯಾಗಿ, ತನ್ನನ್ನು ತಾನೇ ಹೊಗಳಿ ಕೊಳ್ಳುವಹಾಗೆ ಕೃಷ್ಣ ಅರ್ಜುನನಿಗೆ ಹೇಳಿದ್ದು, ಅರ್ಜುನ ತನ್ನನ್ನು ಹೊಗಳಿ ಕೊಂಡದ್ದು, ಕ್ರುದ್ಧನಾದ ಯುಧಿಷ್ಠಿರ ತಪೋವನಕ್ಕೆ ಹೋಗಲು ಯತ್ನಿಸಿದ್ದು, ಕೃಷ್ಣ ಯುಧಿಷ್ಠಿರನನ್ನು ಸಂತೈಸಿದ್ದು, ಅರ್ಜುನ ಕರ್ಣನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದು [ಕರ್ಣ. ೬೮-೭೫]. ಕರ್ಣವಧಾನಂತರ ತನ್ನಲ್ಲಿಗೆ ಬಂದು ನಮಸ್ಕರಿಸಿದ ಕೃಷ್ಣಾರ್ಜುನರನ್ನು ಯುಧಿಷ್ಠಿರ ಹೊಗಳಿದ್ದು [ಕರ್ಣ ೧೦೦, ೧೦೧] ಯುಧಿಷ್ಠಿರ ಶಲ್ಯನ ತಮ್ಮಂದಿರನ್ನೂ ಶಲ್ಯನನ್ನೂ ಕೊಂದದ್ದು [ಶಲ್ಯ. ೧೫, ೧೬]. ಯುಧಿಷ್ಠಿರ ಕೃಷ್ಣಾದಿಗಳೊಂದಿಗೆ ಮಡುವಿನ ಬಳಿಗೆ ಹೋಗಿ ದುರ್ಯೋಧನನನ್ನು ಬಿರುನುಡಿಗಳಿಂದ ಕೆರಳಿಸಿದ್ದು, ಯುಧಿಷ್ಠಿರ ದುರ್ಯೋಧನರ ವಾಗ್ವಾದ [ಶಲ್ಯ. ೩೧-೩೬]. ಯುಧಿಷ್ಠಿರ ದುರ್ಯೋಧನನನ್ನು ಕುರಿತು ತಮ್ಮಲ್ಲಿ ಯಾರು ಸೋತರೂ ದುರ್ಯೋಧನನಿಗೆ ರಾಜ್ಯ ಸ್ಥಿರವೆಂದು ಹೇಳಿದ್ದು. ಕೃಷ್ಣ ಯುಧಿಷ್ಠಿರನ ಮೇಲೆ ಸಿಟ್ಟಾದದ್ದು [ಶಲ್ಯ. ೩೩]. ತೊಡೆ ಮುರಿದುಬಿದ್ದು ಸಂಕಟಪಡುತ್ತಿದ್ದ ದುರ್ಯೋಧನನನ್ನು ಯುಧಿಷ್ಠಿರ ಸಮಾಧಾನಪಡಿಸಿದ್ದು [ಶಲ್ಯ. ೬೦] ಯುಧಿಷ್ಠಿರ ಕೃಷ್ಣಾದಿಗಳನ್ನು ಸಂಗಡ ಕರೆದು ಕೊಂಡು ದುರ್ಯೋಧನನ ಶಿಬಿರಕ್ಕೆ ಬಂದು ತಮ್ಮ ತಮ್ಮ ರಥಗಳಿಂದ ಇಳಿದದ್ದು. ಗಾಂಧಾರಿಯನ್ನು ಸಂತೈಸುವುದಕ್ಕೆ ಯುಧಿಷ್ಠಿರ ಕೃಷ್ಣನನ್ನು ಹಸ್ತಿನಾವತಿಗೆ ಕಳುಹಿದ್ದು [ಶಲ್ಯ. ೬೩]. ಅಶ್ವತ್ಥಾಮನ ತಲೆಯಮೇಲಿದ್ದ ಜೀವರತ್ನವನ್ನು ಭೀಮ ಕಿತ್ತುತಂದು ದ್ರೌಪದಿಗೆ ಕೊಡಲಾಗಿ, ಯುಧಿಷ್ಠಿರ ದ್ರೌಪದಿಯ ಕೋರಿಕೆಯ ಮೇರೆಗೆ ಆ ರತ್ನವನ್ನು ತನ್ನ ತಲೆಯಮೇಲೆ ಧರಿಸಿದ್ದು [ಸೌ. ೧೬]. ಅಶ್ವತ್ಥಾಮ ಅಷ್ಟೊಂದು ಮಂದಿಯನ್ನು ಒಬ್ಬನೇ ಹೇಗೆ ಕೊಂದನೆಂಬುದಾಗಿ ಯುಧಿಷ್ಠಿರ ಕೃಷ್ಣ ನನ್ನು ಪ್ರಶ್ನೆಮಾಡಿ, ಅವ ರುದ್ರಾಂಶಸಂಭೂತನೆಂದು ತಿಳಿದದ್ದು [ಸೌ. ೧೭, ೧೮]. ಯುಧಿಷ್ಠಿರ ಕೃಷ್ಣ ಭೀಮಾದಿಗಳೊಂದಿಗೆ ಗಾಂಧಾರಿಯ ಬಳಿಗೆ ಬಂದದ್ದು, ಯುಧಿಷ್ಠಿರ ನಿಗೆ ಶಾಪವನ್ನು ಕೊಡಬೇಕೆಂದಿದ್ದ ಗಾಂಧಾರಿಯನ್ನು ವ್ಯಾಸ ಅಡ್ಡಗಿಸಿದ್ದು [ಸ್ತ್ರೀ. ೧೩]. ಯುಧಿಷ್ಠಿರ ಗಾಂಧಾರೀ ಕುಂತಿಯರಿಗೆ ನಮಸ್ಕರಿಸಿದ್ದು, ಗಾಂಧಾರಿಯ ದೃಷ್ಟಿಪಾತ ದಿಂದ ಯುಧಿಷ್ಠಿರನ ಉಗುರುಗಳು ವಕ್ರವಾದದ್ದು [ಸ್ತ್ರೀ. ೧೫]. ರಣರಂಗದಲ್ಲಿ

ಸತ್ತವರನ್ನೆಲ್ಲ ಸುಡುವಂತೆ ಯುಧಿಷ್ಠಿರ ವಿದುರ, ಸಂಜಯ ಮೊದಲಾದವರಿಗೆ ಹೇಳಿದ್ದು [ಸ್ತ್ರೀ. ೨೬]. ಯುಧಿಷ್ಠಿರ ಧೃತರಾಷ್ಟ್ರಾದಿಗಳ ಸಂಗಡ ಗಂಗಾತೀರಕ್ಕೆ ಬಂದದ್ದು. ಕುಂತಿ ಕರ್ಣನನ್ನು ತನ್ನ ಹಿರಿಯಮಗನೆಂತಲೂ, ಆತನಿಗೇ ಮೊತ್ತ ಮೊದಲು ಉದಕದಾನಮಾಡಬೇಕೆಂತಲೂ ಹೇಳಿದ್ದು. ಯುಧಿಷ್ಠಿರ ಕುಂತಿಯನ್ನು ನಿಂದಿಸಿದ್ದು. ಧೃತರಾಷ್ಟ್ರನ ಸಂಗಡ ಬಂಧುಗಳಿಗೆಲ್ಲ ಉದಕದಾನಮಾಡಿದ್ದು [ಸ್ತ್ರೀ ೨೭]. ಯುಧಿಷ್ಠಿರನಲ್ಲಿಗೆ ವ್ಯಾಸ, ನಾರದ ಮುಂತಾದ ಮಹರ್ಷಿಗಳು ಬಂದದ್ದು, ಯುಧಿಷ್ಠಿರ ಕರ್ಣನ ವೃತ್ತಾಂತವನ್ನು ತಿಳುಹುವಂತೆ ನಾರದನನ್ನು ಪ್ರಶ್ನೆಮಾಡಿ ತಿಳಿದದ್ದು [ಶಾಂತಿ. ೧-೫]. ಕುಂತಿ ಯುಧಿಷ್ಠಿರನನ್ನು ಸಮಾಧಾನ ಪಡಿಸಿದ್ದು, ರಾಜ್ಯವನ್ನು ಬಿಟ್ಟು ಅರಣ್ಯಕ್ಕೆ ಹೋಗಬೇಕೆಂದು ಯುಧಿಷ್ಠಿರ ನಿಶ್ಚಯಿಸಿದ್ದು, ರಾಜ್ಯಪರಿತ್ಯಾಗದಿಂದ ಅಪಕೀರ್ತಿಯುಂಟಾಗುವುದೆಂದು ಅರ್ಜುನ ಯುಧಿಷ್ಠಿರನಿಗೆ ತಿಳಿಸಿದ್ದು, ಯುಧಿಷ್ಠಿರನ ಪರಿತಾಪವರ್ಣನೆ [ಶಾಂತಿ. ೬-೯] ಪ್ರಜಾಪಾಲನೆಯೇ ಕ್ಷತ್ರಿಯನಿಗೆ ಮುಖ್ಯ ಧರ್ಮವೆಂಬುದಾಗಿ ದ್ರೌಪದಿಯೂ ಭೀಮಾದಿಗಳೂ ತಿಳಿಸಿದ್ದು [ಶಾಂತಿ. ೧೦-೨೨]. ವ್ಯಾಸ ಯುಧಿಷ್ಠಿರನಿಗೆ ಕ್ಷತ್ರಿಯಧರ್ಮವನ್ನು ತಿಳಿಸಿ, ರಾಜ್ಯವನ್ನು ಕೈಕೊಳ್ಳುವಂತೆ ಯುಧಿಷ್ಠಿರನನ್ನು ಬಲಾತ್ಕರಿಸಿದ್ದು [ಶಾಂತಿ. ೨೩-೨೭]. ಕೃಷ್ಣ ಯುಧಿಷ್ಠಿರನಿಗೆ ಷೋಡಶ ಮಹಾರಾಜರ ಚರಿತ್ರೆಯನ್ನು ತಿಳಿಸಿದ್ದು [ಶಾಂತಿ. ೨೮]. ನಾರದ ಯುಧಿಷ್ಠಿರಸಂವಾದ [ಶಾಂತಿ. ೩೦]. ವ್ಯಾಸ ಯುಧಿಷ್ಠಿರ ಸಂವಾದ, ಕ್ಷತ್ರಧರ್ಮನಿರೂಪಣ [ಶಾಂತಿ. ೩೧-೩೫]. ಭೀಷ್ಮನ ಮೂಲಕ ರಾಜಧರ್ಮಗಳನ್ನು ಕೇಳಿ ತಿಳಿಯುವಂತೆ ವ್ಯಾಸ ಯುಧಿಷ್ಠಿರನಿಗೆ ಸೂಚಿಸಿದ್ದು, ಯುಧಿಷ್ಠಿರ ಹಸ್ತಿನಾವತಿಯನ್ನು ಪ್ರವೇಶಿಸಿದ್ದು, ಯುಧಿಷ್ಠಿರನ ರಾಜ್ಯಾಭಿಷೇಕ [ಶಾಂತಿ. ೩೬-೩೯]. ರಾಜ್ಯಾಧಿಕಾರದಲ್ಲಿ ಭೀಮಾದಿಗಳಿಗೆ ಯೋಗ್ಯವಾದ ಪದವಿಗಳನ್ನು ಕೊಟ್ಟು, ಯುದ್ಧದಲ್ಲಿ ಹತರಾದ ಬಾಂಧವರ ಕುಟುಂಬಗಳನ್ನು ಕಾಪಾಡಲು ಏರ್ಪಡಿಸಿದ್ದು [ಶಾಂತಿ. ೪೦-೪೧]. ಧರ್ಮಶ್ರವಣಾರ್ಥವಾಗಿ ಭೀಷ್ಮನಲ್ಲಿಗೆ ಹೋಗುವಂತೆ ಯುಧಿಷ್ಠಿರನಿಗೆ ಕೃಷ್ಣ ಸೂಚಿಸಿದ್ದು [ಶಾಂತಿ. ೪೫]. ಕೃಷ್ಣಾದಿಗಳೊಂದಿಗೆ ಯುಧಿಷ್ಠಿರ ಭೀಷ್ಮನಲ್ಲಿಗೆ ಹೋದದ್ದು, ಕೃಷ್ಣನ ಮೂಲಕ ಪರಶುರಾಮನ ವೃತ್ತಾಂತವನ್ನು ಕೇಳಿ ತಿಳಿದದ್ದು, ಭೀಷ್ಮನ ಸೂಚನೆಯ ಮೇರೆಗೆ ಯುಧಿಷ್ಠಿರ ಭೀಷ್ಮನನ್ನು ಪ್ರಶ್ನೆಮಾಡಿ ಅನೇಕ ಧರ್ಮರಹಸ್ಯಗಳನ್ನು ತಿಳಿದದ್ದು [ಶಾಂತಿ. ೫೩-೩೭೫. ಅನು. ೧-೨೭೦] ಯುಧಿಷ್ಠಿರ ಭೀಷ್ಮನಿಗೆ ಸಂಸ್ಕಾರಮಾಡಿದ್ದು [ಅನು. ೨೭೩-೨೭೪]. ಭೀಷ್ಮಸಂಸ್ಕಾರಾನಂತರ ದುಃಖಿತನಾದ ಯುಧಿಷ್ಠಿರನನ್ನು ಧೃತರಾಷ್ಟ್ರ ಸಂತವಿಸಿದ್ದು, ವಿದುರ ಸಮಾಧಾನ ಹೇಳಿದ್ದು. ಇಂತಾದರೂ ಸಕಲಾನರ್ಥಗಳಿಗೂ ತಾನೇ ಮೂಲವೆಂಬ ಭಾವನೆಯಿಂದ ಯುಧಿಷ್ಠಿರ ಮೇಲಿಂದಮೇಲೆ ಭೀಷ್ಮ ದ್ರೋಣ, ಕರ್ಣಾದಿಗಳನ್ನು ಸ್ಮರಿಸಿ

ದುಃಖಿಸುತ್ತ ತನಗೆ ಅರಣ್ಯಕ್ಕೆ ಹೋಗಲು ಅನುಮತಿ ಕೊಡುವಂತೆ ಕೃಷ್ಣನನ್ನು ಕೇಳಿದ್ದು, ವ್ಯಾಸ ತಿಳಿಯಹೇಳಿದ್ದು [ಅಶ್ವ. ೧-೨]. ಬಂಧುಹತ್ಯಾದೋಷಪರಿಹಾರಕ್ಕಾಗಿ ಅಶ್ವಮೇಧವನ್ನು ಮಾಡುವಂತೆ ವ್ಯಾಸರ ಸೂಚನೆ, ಹಣವಿಲ್ಲದ ಕಾರಣ ಅದು ತನಗೆ ಅಸಾಧ್ಯವೆಂಬುದಾಗಿ ಯುಧಿಷ್ಠಿರ ತಿಳಿಸಿದ್ದು, ಹಿಮವತ್ಪರ್ವತದಲ್ಲಿ ಮರುತ್ತ ರಾಜ ಹೂತಿಟ್ಟಿರುವ ಹಣವನ್ನು ತಂದು ಅಶ್ವಮೇಧಮಾಡುವಂತೆ ವ್ಯಾಸರು ಹೇಳಿದ್ದು, ಮರುತ್ತ ಸಂವರ್ತರ ಕಥೆ [ಅಶ್ವ. ೩-೪] ಯುಧಿಷ್ಠಿರ ಕೃಷ್ಣನ ಮೂಲಕ ಇಂದ್ರ ಮತ್ತು ವೃತ್ರಾಸುರರ ಯುದ್ಧದ ರೀತಿಯನ್ನು ಕೇಳಿ ತಿಳಿದದ್ದು [ಅಶ್ವ. ೧೧]. ಯುಧಿಷ್ಠಿರ ಹಸ್ತಿನಾವತಿಯನ್ನು ಹೊಕ್ಕು ಪ್ರಜಾಪಾಲನೆಯನ್ನು ಕೈಕೊಂಡದ್ದು [ಅಶ್ವ. ೧೪] ಯುಧಿಷ್ಠಿರ ವ್ಯಾಸನ ಸೂಚನೆಯ ಮೇರೆಗೆ ಭೀಮಾದಿಗಳನ್ನು ಸಂಗಡ ಕರೆದುಕೊಂಡು ಹಿಮವತ್ಪರ್ವತಕ್ಕೆ ಹೋಗಿ ದ್ರವ್ಯವನ್ನು ತಂದದ್ದು, ಶಿವಸ್ತುತಿ [ಅಶ್ವ. ೬೩-೬೫]. ಹಣವನ್ನು ತಂದನೆಂಬ ಸುದ್ದಿಯನ್ನು ಕೇಳಿ ಕೃಷ್ಣಾದಿಗಳು ಯುಧಿಷ್ಠಿರನನ್ನು ಇದಿರ್ಗೊಂಡು ಹಸ್ತಿನಾವತಿಗೆ ಕರೆತಂದದ್ದು [ಅಶ್ವ. ೭೦, ೭೧] ವ್ಯಾಸನ ಸೂಚನೆಯ ಮೇರೆಗೆ ಅಶ್ವಮೇಧದ ಕುದುರೆಯನ್ನು ಭೂಪ್ರದಕ್ಷಿಣೆಗೆ ಪೂಜಿಸಿ ಬೀಳ್ಕೊಟ್ಟು, ಅರ್ಜುನನನ್ನು ಅದರ ಕಾವಲಿಗಾಗಿ ಕಳುಹಿಸಿದ್ದು [ಅಶ್ವ. ೭೨]. ಅಶ್ವಮೇಧಯಜ್ಞಮಾಡಿದ್ದು [ಅಶ್ವ ೮೯, ೯೦]. ಅಶ್ವಮೇಧಾವಸಾನದಲ್ಲಿ ಯಜ್ಞಶಾಲೆಯಲ್ಲಿಯೇ ಒಂದು ಬಿಲದಿಂದ ಹೊರಬಂದ ಒಂದು ಮುಂಗುಸಿ ಯುಧಿಷ್ಠಿರನ ಯಜ್ಞವನ್ನು ಹೀಯಾಳಿಸಿ, ಉಂಛವೃತ್ತಿಯಿಂದ ಜೀವಿಸುತ್ತಿದ್ದ ಬ್ರಾಹ್ಮಣನ ಕಥೆಯನ್ನು ಹೇಳಿ ಕಣ್ಮರೆಯಾದದ್ದು [ಅಶ್ವ. ೯೧, ೯೨]. ಯುಧಿಷ್ಠಿರ ವಿಷ್ಣುಭಕ್ತರ ಧರ್ಮಗಳನ್ನು ಹೇಳುವಂತೆ ಕೃಷ್ಣನನ್ನು ಪ್ರಾರ್ಥಿಸಿ, ಕೇಳಿ ತಿಳದದ್ದು [ಅಶ್ವ. ೯೬-೧೧೮]. ಕೃಷ್ಣ ಯುಧಿಷ್ಠಿರನನ್ನು ಬೀಳ್ಕೊಂಡು ದ್ವಾರಕೆಗೆ ಹೋದದ್ದು [ಅಶ್ವ. ೧೧೮]. ಯುಧಿಷ್ಠಿರನ ರಾಜ್ಯಪರಿಪಾಲನೆ, ಧೃತರಾಷ್ಟ್ರನನ್ನು ಶುಶ್ರೂಷಿಸಿದ್ದು [ಆಶ್ರಮ. ೧,೨] ಧೃತರಾಷ್ಟ್ರ ತಾನು ಅರಣ್ಯಕ್ಕೆ ಹೋಗಬೇಕೆಂದು ಯುಧಿಷ್ಠಿರನಲ್ಲಿ ತಿಳಿಸಿದ್ದು, ಯುಧಿಷ್ಠಿರ ಸಮ್ಮತಿಸದಿದ್ದದ್ದು. ವ್ಯಾಸರು ಅಲ್ಲಿಗೆ ಬಂದು ತಿಳಿಯಹೇಳಿದ್ದು, ಯುಧಿಷ್ಠಿರ ಅತಿ ಪ್ರಯಾಸದಿಂದ ಸಮ್ಮತಿಸಿದ್ದು, ಧೃತರಾಷ್ಟ್ರ ಅರಣ್ಯಕ್ಕೆ ಹೋಗುವಾಗ ರಾಜನೀತಿಯನ್ನು ಉಪದೇಶಿಸಿದ್ದು [ಆಶ್ರ. ೪-೬]. ಯುಧಿಷ್ಠಿರ ಧೃತರಾಷ್ಟ್ರನಿಗೆ ಭೀಷ್ಮಾದಿಗಳ ಶ್ರಾದ್ಧಕ್ಕಾಗಿ ಹಣವನ್ನು ಕೊಡದಿದ್ದದ್ದು [ಆಶ್ರ. ೧೪]. ಧೃತರಾಷ್ಟ್ರ ಕುಂತೀ, ಗಾಂಧಾರೀ, ವಿದುರ, ಸಂಜಯರನ್ನು ಕರೆದುಕೊಂಡು ತಪೋವನಕ್ಕೆ ಹೊರಟದ್ದು, ಯುಧಿಷ್ಠಿರಾದಿಗಳು ಹಿಂಬಾಲಿಸಿದ್ದು, ಕುಂತಿ ಸಮಾಧಾನ ಹೇಳಿದ್ದು, ಯುಧಿಷ್ಠಿರ ಬಹು ದುಃಖದಿಂದ ಪಟ್ಟಣಕ್ಕೆ ಹಿಂದಿರುಗಿ ಬಂದದ್ದು [ಆಶ್ರ. ೧೯]. ಕುಂತಿ ಮೊದಲಾದವರು ಕಾಡಿಗೆ ಹೋದುದಕ್ಕಾಗಿ ಯುಧಿಷ್ಠಿರಾದಿಗಳು ಲೋಕ

ವ್ಯವಹಾರದಲ್ಲಿ ಉದಾಸೀನರಾದದ್ದು. ಸಕಲ ಪರಿವಾರದೊಂದಿಗೆ ಕಾಡಿಗೆ ಹೋಗಿ, ಧೃತರಾಷ್ಟ್ರಾದಿಗಳನ್ನು ಸಂದರ್ಶಿಸಿ, ದುಃಖಿಸಿದ್ದು [ಆಶ್ರ. ೨೩-೨೬]. ಧೃತರಾಷ್ಟ್ರ ಯುಧಿಷ್ಠಿರ ಸಲ್ಲಾಪ [ಆಶ್ರ ೨೮]. ಯುಧಿಷ್ಠಿರ ಮಹರ್ಷಿಗಳ ಆಶ್ರಮಗಳನ್ನು ಸಂದರ್ಶಿಸಿದ್ದು [ಆಶ್ರ ೨೯]. ಭಾರತ ಯುದ್ಧದಲ್ಲಿ ಮಡಿದು ವ್ಯಾಸ ಮುನಿಯ ಅನುಗ್ರಹದಿಂದ ಬದುಕಿದ ಬಂಧು, ಮಿತ್ರ, ಪರಿವಾರದೊಂದಿಗೆ ಗಂಗಾ ತೀರದಲ್ಲಿ ಒಂದು ರಾತ್ರಿ ಸಂತೋಷವಾಗಿದ್ದದ್ದು [ಆಶ್ರ. ೩೫] ಯುಧಿಷ್ಠಿರ ಕುಂತೀ, ಗಾಂಧಾರೀ, ಧೃತರಾಷ್ಟ್ರಾದಿಗಳಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು [ಆಶ್ರ ೩, ೯-೪೧] ಯುಧಿಷ್ಠಿರ ಉತ್ಪಾತಗಳನ್ನು ಕಂಡದ್ದು, ಕೃಷ್ಣನಿರ್ಯಾಣ ವೃತ್ತಾಂತವನ್ನು ಕೇಳಿದ್ದು [ಮೌಸ ೧, ೬]. ಯುಧಿಷ್ಠಿರ ಧೃತರಾಷ್ಟ್ರನ ದಾಸೀಪುತ್ರನಾದ ಯುಯುತ್ಸುವಿಗೆ ರಾಜ್ಯಭಾರವನ್ನು ಒಪ್ಪಿಸಿ, ಪರೀಕ್ಷಿತನಿಗೆ ರಾಜ್ಯದಲ್ಲಿ ಪಟ್ಟಗಟ್ಟಿ, ಮಹಾಪ್ರಸ್ಥಾನಕ್ಕೆ ಹೊರಟದ್ದು [ಮಹಾ ೧] ಜ್ಯೇಷ್ಠಾನುಕ್ರಮವಾಗಿ ಎಲ್ಲರೂ ಮೇರುಪರ್ವತಕ್ಕೆ ಹೋಗುತ್ತಿರುವಲ್ಲಿ ಕನಿಷ್ಠಕ್ರಮದಿಂದ ಒಬ್ಬೊಬ್ಬರಾಗಿ ಬಿದ್ದು ದೇಹತ್ಯಾಗಮಾಡಿದ್ದು ಭೀಮ ಅದಕ್ಕೆ ಕಾರಣವೇನೆಂದು ಪ್ರಶ್ನೆಮಾಡಲಾಗಿ ಯುಧಿಷ್ಠಿರ, ಯೋಗಭ್ರಂಶವೇ ಕಾರಣವೆಂದು ತಿಳಿಸಿದ್ದು [ಮೌಸ. ೨] ನಾಯಿ ಮಾತ್ರವೇ ತನ್ನನ್ನು ಹಿಂಬಾಲಿಸಲಾಗಿ ಯುಧಿಷ್ಠಿರ ಮುಂಬರಿಯುತ್ತಿದ್ದಾಗ ಇಂದ್ರ ರಥವನ್ನು ತಂದು ಏರಹೇಳಿದ್ದು, ಯುಧಿಷ್ಠಿರ ನಾಯನ್ನೂ ಏರಿಸಿಕೊಂಡಲ್ಲದೆ ತಾನು ರಥವನ್ನು ಏರುವುದಿಲ್ಲವೆನಲು ನಾಯ ರೂಪವನ್ನು ಧರಿಸಿದ್ದ ಯಮ ಪ್ರತ್ಯಕ್ಷನಾಗಿ ಯುಧಿಷ್ಠಿರನನ್ನು ಹೊಗಳಿದ್ದು, ಬಳಿಕ ಯಮನೂ ಇಂದ್ರನೂ ಯುಧಿಷ್ಠಿರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸ್ವರ್ಗಕ್ಕೆ ಕರೆದುಯ್ಯುವಾಗ ಯುಧಿಷ್ಠಿರ ಸ್ವರ್ಗದಲ್ಲಿ ಭೀಮಾದಿಗಳನ್ನು ಕಾಣದೆ ಇಂದ್ರನನ್ನು ಕುರಿತು ಭೀಮಾದಿಗಳಿಲ್ಲದೆಡೆಯಲ್ಲಿ ತಾನು ವಾಸಮಾಡಲಾರೆನೆಂದದ್ದು [ಮಹಾ. ೩]. ಸ್ವರ್ಗದಲ್ಲಿ ಮಹಾವೈಭವದಿಂದ ಮೆರೆಯುತ್ತಿದ್ದ ದುರ್ಯೋಧನನನ್ನು ಕಂಡು, ಆತನ ಹೆಮ್ಮೆಯನ್ನು ಸಹಿಸಲಾರದೆ, ಆತನೊಂದಿಗೆ ವಾಸಮಾಡಲಾರೆನೆಂಬುದನ್ನು ತಿಳಿಸಿ, ತಮ್ಮಂದಿರೇ ಮೊದಲಾದವರನ್ನು ಕಾಣಬೇಕೆಂಬ ಇಚ್ಛೆಯನ್ನು ನಾರದನಲ್ಲಿ ತಿಳಿಸಿದ್ದು [ಸ್ವರ್ಗಾ. ೧]. ಕರ್ಣಾದಿಗಳನ್ನು ಕಾಣದ ಯುಧಿಷ್ಠಿರ ದೇವತೆಗಳನ್ನು ಕುರಿತು, ಬಂಧುಜನಗಳಿಲ್ಲದ ಎಂತಹ ಪದವಿಯಲ್ಲಿಯಾದರೂ ತಾನು ವಾಸಮಾಡೆನೆಂಬುದನ್ನು ತಿಳಿಸಿದ್ದು. ದೇವದೂತರು ಯುಧಿಷ್ಠಿರನನ್ನು ನರಕಕ್ಕೆ ಕೊಂಡುಯ್ದು ತೋರಿಸಿದ್ದು, ಅಲ್ಲಿಂದ ಹಿಂದಿರುಗಿ ನೋಡುತ್ತಿರುವಷ್ಟರಲ್ಲಿಯೇ ನರಕ ಕಣ್ಮರೆಯಾದದ್ದು. ಯುಧಿಷ್ಠಿರ ಆಕಾಶಗಂಗೆಯಲ್ಲಿ ಮಿಂದು ದಿವ್ಯದೇಹವನ್ನು ಧರಿಸಿ, ದಿವ್ಯ ಮುನಿಗಳ ಮೂಲಕ ಹೊಗಳಿಸಿಕೊಳ್ಳುತ್ತ ಸೋದರರಿರುವ ಸ್ಥಳವನ್ನು ಸೇರಿದ್ದು [ಸ್ವರ್ಗಾ. ೨, ೩].

ಯುಧಿಷ್ಠಿರ ಸ್ವರ್ಗದಲ್ಲಿ ಕೃಷ್ಣ, ಕರ್ಣ, ಉಪಪಾಂಡವರೇ ಮೊದಲಾದವರನ್ನು ಪ್ರತ್ಯೇಕವಾಗಿ ಕಂಡದ್ದು [ಸ್ವರ್ಗಾ. ೪]. ಈತನಿಗೆ ಶಿಬಿ ರಾಜನ ಮಗಳಾದ ದೇವಕಿ ಯೆಂಬ ಮತ್ತೊಬ್ಬ ಹೆಂಡತಿಯಲ್ಲಿ ಯೌಧೇಯನೆಂಬ ಮಗ ಜನಿಸಿದ [ಆದಿ. ೬೩]. ಈತ ಮೂರು ಅಶ್ವಮೇಧಗಳನ್ನು ಮಾಡಿದ [ಭಾಗ.-೧-೧೨].

**ಯುಯುತ್ಸು.**—(i) ಧೃತರಾಷ್ಟ್ರನ ದಾಸೀಪುತ್ರ [ಆದಿ ೬೪, ೨೦೧]. ಇವ ಕೌರವರ ಸಂಗಡಲೇ ಇದ್ದ. ಆದರೆ ಭಾರತ ಯುದ್ಧಾರಂಭದಲ್ಲಿ ಪಾಂಡವರ ಪಕ್ಷ ವನ್ನು ಸೇರಿದ [ಭೀ. ೪೩]. ಹದಿನಾರನೆಯ ದಿನದ ಯುದ್ಧದಲ್ಲಿ ಶಕುನಿಯ ಮಗ ನಾದ ಉಲೂಕನೊಂದಿಗೆ ಯುದ್ಧಮಾಡಿದ [ಕರ್ಣ. ೧೬]. ಭಾರತ ಯುದ್ಧಾನಂತರ ಧೃತರಾಷ್ಟ್ರನ ಸಂತತಿಯಲ್ಲಿ ಉಳಿದವ ಇವನೊಬ್ಬನೇ. ಯುಧಿಷ್ಠಿರ ಮಹಾಪ್ರಸ್ಥಾ ನಕ್ಕೆ ಹೊರಟಾಗ ಪರೀಕ್ಷಿತನಿಗೆ ಪಟ್ಟಗಟ್ಟಿ, ರಾಜ್ಯಭಾರದ ಎಲ್ಲ ಆಡಳಿತಗಳನ್ನೂ ಈತನಿಗೆ ಒಪ್ಪಿಸಿದ [ಮಹಾಪ್ರ. ೧].

(ii) ಗಾಂಧಾರಿಯ ಮಕ್ಕಳಲ್ಲಿ ಒಬ್ಬ [ಭಾರ.-ಆದಿ. ೬೮, ೧೩೧].

**ಯುಯುಧಾನ.**—ಯದು ವಂಶದ ಸತ್ಯಕನ ಮಗ. ಇವನಿಗೆ ಹತ್ತು ಮಂದಿ ಪುತ್ರರು [ಆದಿ. ೨೩೯]. ಇವ ಮರುತ್ತುಗಳ ಅಂಶದಿಂದ ಜನಿಸಿದವ [ಆದಿ. ೬೪, ೬೮]. ದ್ರೌಪದೀ ಸ್ವಯಂವರವನ್ನು ನೋಡುವುದಕ್ಕೆ ಬಂದಿದ್ದ [ಆದಿ. ೨೦೧] ಬಲರಾಮ ದುರ್ಯೋಧನನಲ್ಲಿ ಪಕ್ಷಪಾತಿಯಾಗಿದ್ದುದನ್ನು ಕಂಡು ಸಾತ್ಯಕಿ ತಿರಸ್ಕರಿಸಿದ್ದು [ಉದ್ಯೋ. ೩]. ಇವ ರಥಯೂಥಪ [ಉದ್ಯೋ ೧೬೦]. ಕೃಷ್ಣ ಸಂಧಿಗೆ ಹೋದದ್ದು ಇವನಿಗೆ ಸಮ್ಮತವಿಲ್ಲ. ಯುದ್ಧವನ್ನು ಮಾಡಿಯೇತೀರಬೇಕೆಂಬುದು ಇವನ ಮತ [ಉದ್ಯೋ. ೮೦]. ಗಾಂಧಾರ ರಾಜಪುತ್ರರು ಇವನ ರಥವನ್ನು ಮುರಿದದ್ದು [ಭೀ. ೫೮]. ನಾಲ್ಕು ಮತ್ತು ಹದಿನಾಲ್ಕನೆಯ ದಿನಗಳಲ್ಲಿ ಭೂರಿಶ್ರವನೊಂದಿಗೆ ಯುದ್ಧ [ಭೀ. ೬೩—(೪ ನೆಯ ದಿನ). ದ್ರೋ. ೧೪೨—(೧೪ ನೆಯ ದಿನ)]. ಭೂರಿಶ್ರವ ಇವನ ಹತ್ತು ಮಂದಿ ಪುತ್ರರನ್ನೂ ಕೊಂದದ್ದು [ಭೀ. ೭೪]. ಭೂರಿಶ್ರವ ಇವನನ್ನು ಕೊಲ್ಲಬಂದದ್ದು, ಅರ್ಜುನ ಭೂರಿಶ್ರವನ ಭುಜವನ್ನು ಕತ್ತರಿಸಿದ್ದು, ಯುಯುಧಾನ ಭೂರಿಶ್ರವನ ತಲೆಯನ್ನು ಕತ್ತರಿಸಿದ್ದು [ದ್ರೋ. ೧೪೨, ೧೪೩]. ಹದಿನಾಲ್ಕನೆಯ ದಿನದಲ್ಲಿ ದ್ರೋಣನ ನೂರಾರು ಬಿಲ್ಲುಗಳನ್ನು ಕತ್ತರಿಸಿದ್ದು [ದ್ರೋ. ೧೧೦]. ಧೃಷ್ಟದ್ಯುಮ್ನನನ್ನು ಕೊಲ್ಲಹೋದದ್ದು. ಭೀಮ ಅವನನ್ನು ತಡೆದದ್ದು [ದ್ರೋ. ೧೯೯]. ಕೃತವರ್ಮನನ್ನು ಸೋಲಿಸಿದ್ದು [ಶಲ್ಯ. ೨೦]. ಕೃತವರ್ಮನ ಶಿರಚ್ಛೇದ [ಮೌಸ. ೪]. ಈತನ ಹೆಂಡತಿ ಸರಸ್ವತಿಯೆಂಬವಳು [ಮೌಸ. ೮].

**ಯುವನಾಶ್ವ.**—ಸೂರ್ಯ ವಂಶದ ಪ್ರಸೇನಜಿತನೆಂಬ ರಾಜನ ಮಗ. ಮಾಂಧಾತನ ತಂದೆ. ನೋಡು—ಮಾಂಧಾತ [ಭಾರ.-ವನ. ೧೨೭]. ಶ್ರಾವಸ್ತನೆಂಬವ ಮತ್ತೊಬ್ಬ ಮಗ [ವನ. ೨೦೫. ಭಾಗ.-೯-೬].

**ಯೂಪಕೇತು (ಯೂಪಧ್ವಜ).**—ಚಂದ್ರ ವಂಶದ ಸೋಮದತ್ತ ರಾಜನ ಮಗ. ನೋಡು—ಭೂರಿಶ್ರವ [ದ್ರೋ. ೨೫].

**ಯೋಗ.**—ಚಿತ್ತವೃತ್ತಿಯನ್ನು ಅಡ್ಡಗಿಸುವುದು. ಯೋಗನಿರೂಪಣ [ಭಾರ.-ಶಾಂತಿ. ೩೦೬, ೩೧೧. ಅನು. ೨೪೬. ಭಾಗ.-೩-೨೮].

**ಯೋಜನಗಂಧಾ.**—ಸತ್ಯವತಿಯ ನಾಮಾಂತರ.

**ಯೌಧೇಯ.**—ಯುಧಿಷ್ಠಿರನಿಂದ ಶೈಬ್ಯ ರಾಜನ ಪುತ್ರಿಯಾದ ದೇವಕಿಯೆಂಬವಳಲ್ಲಿ ಜನಿಸಿದವ [ಭಾರ.-ಆದಿ. ೬೩].

**ಯೌವನಾಶ್ವ.**—ಭದ್ರಾವತೀ ನಗರದ ಅರಸು. ನೋಡು—ಮೇಘವರ್ಣ. ಪಾಂಡವರು ಅಶ್ವಮೇಧದ ಕುದುರೆಯನ್ನು ಇವನಿಂದ ತಂದರು [ಜೈ.ಭಾರ.-೧-೭].

## ರ

**ರಕ್ತಬೀಜ.**—ಒಬ್ಬ ರಾಕ್ಷಸ. ಶುಂಭ ನಿಶುಂಭರೆಂಬ ರಕ್ಕಸರ ಸೋದರಳಿಯ. ನೋಡು—ನಿಶುಂಭ ಇವ ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ತನ್ನ ದೇಹದಿಂದ ನೆಲಕ್ಕೆ ಬಿದ್ದ ಒಂದೊಂದು ತೊಟ್ಟು ರಕ್ತವೂ ತನ್ನಂತೆಯೇ ಪರಾಕ್ರಮಶಾಲಿಯಾದ ಒಬ್ಬ ರಾಕ್ಷಸನಾಗುವಂತೆ ವರವನ್ನು ಪಡೆದಿದ್ದ. ಶುಂಭ ನಿಶುಂಭರು ಆದಿಶಕ್ತಿ (ತ್ರಿಪುರಸುಂದರಿ) ಯನ್ನು ಮೋಹಿಸಿ, ಆಕೆಯ ಸಂಗಡ ಯುದ್ಧಮಾಡುವಾಗ ಇವನೂ ಯುದ್ಧಕ್ಕೆ ಬಂದ. ಇವನ ದೇಹದಿಂದ ಬಿದ್ದ ರಕ್ತಬಿಂದುಗಳೆಲ್ಲವೂ ರಾಕ್ಷಸರಾಗುತ್ತ ಬಂದರು ಆಗ ದೇವಿ ಚಾಮುಂಡೆಯು ನಾಲಗೆಯನ್ನು ವಿಸ್ತರಿಸ ಹೇಳಿದಳು. ಚಾಮುಂಡಾದೇವಿ ಅಂತೆಯೇ ಮಾಡಲಾಗಿ, ರಕ್ತಬೀಜ ಆಕೆಯ ನಾಲಗೆಯ ಮೇಲೆ ನಿಂತು ಯುದ್ಧಮಾಡುತ್ತಿರಲಾಗಿ, ಇವನ ದೇಹದಿಂದ ಬಿದ್ದ ರಕ್ತಬಿಂದುಗಳನ್ನೆಲ್ಲ ಆಕೆಯ ನಾಲಗೆ ಹೀರತೊಡಗಿತು. ಆಗ ರಕ್ತಬೀಜ ಶಕ್ತಿಗುಂದಿದ. ತ್ರಿಪುರಸುಂದರಿ ಇವನನ್ನು ಕೊಂದಳು [ದೇ.ಭಾಗ.-೫-೨೭, ೨೮, ೨೯. ಮಾರ್ಕಂ.-೮೩].

**ರಘು.**—ಸೂರ್ಯ ವಂಶದ ಅರಸು [ಭಾರ.-ವಿರಾ. ೫೩]. ಖಟ್ವಾಂಗ ರಾಜನ ಮಗ ಇವನ ಮಗ ಅಜಮಹಾರಾಜ. ಇವನ ವಂಶವರ್ಣನೆ [ಭಾಗ.-೯-೧೦].

**ರಜತಾಶ್ವ.**—ನೋಡು—ಯುಯುಧಾನ. ಸಾತ್ಯಕಿಯ ನಾಮಾಂತರ [ಭಾರ.-ದ್ರೋ. ೨೩].

**ರಜಿ.**—ಚಂದ್ರ ವಂಶದ ಪುರೂರವ ರಾಜನ ಮಗನಾದ ಆಯು ರಾಜನ ಪಟ್ಟ ಮಹಿಷಿಯಾದ ಸ್ವರ್ಭಾನವಿಯಲ್ಲಿ ಜನಿಸಿದವ ನಹುಷ, ವೃದ್ಧಶರ್ಮ, ಅನೇನಸ, ಗಯ ಎಂಬವರು ಇವನ ಒಡಹುಟ್ಟಿದವರು [ಭಾರ.-ಆದಿ. ೭೯]. ಇವನಿಗೆ ಮಹಾ ಪರಾಕ್ರಮಶಾಲಿಗಳಾದ ಐನೂರು ಮಂದಿ ಮಕ್ಕಳಿದ್ದರು. ಒಮ್ಮೆ ದೇವ ದಾನವರಿಗೆ ಯುದ್ಧ ಮೊದಲಾಯಿತು. ರಜಿ ಇಂದ್ರನ ಪರವಾಗಿ ಹೋರಾಡಿ ಸ್ವರ್ಗಾಧಿಪತ್ಯ ವನ್ನು ಇಂದ್ರನಿಗೆ ಕೊಟ್ಟ. ಇಂದ್ರ ರಜಿಯನ್ನೇ ಸ್ವರ್ಗರಾಜ್ಯದಲ್ಲಿ ಪ್ರತಿಷ್ಠೆಗೊಳಿ ಸಿದ. ರಜಿ ಕಾಲಗತಿಯನ್ನೈದಿದ ಬಳಿಕ ಇಂದ್ರ ರಜಿಯ ಮಕ್ಕಳನ್ನು ಬಗೆಬಗೆ ಯಿಂದ ಬೇಡಿದರೂ ಅವರು ಸ್ವರ್ಗಾಧಿಪತ್ಯವನ್ನು ಮರಳಿ ಇಂದ್ರನಿಗೆ ಕೊಡಲು ಸಮ್ಮತಿಸಲಿಲ್ಲ. ಆಗ ಇಂದ್ರ ಬೃಹಸ್ಪತ್ಯಾಚಾರ್ಯರ ಮೂಲಕ ಮಾಟಮಾಡಿಸಿ, ಇವರನ್ನು ಕೊಲ್ಲಿಸಿ, ತಾನು ಮರಳಿ ಸ್ವರ್ಗಾಧಿಪತ್ಯವನ್ನು ಪಡೆದ [ಹರಿ.-೧-೧೮. ಭಾಗ.-೯-೧೭ ಮತ್ಸ್ಯ.-೨೪].

**ರತಿ.**—ದಕ್ಷಬ್ರಹ್ಮನ ಮಗಳು. ಮನ್ಮಥನ ಹೆಂಡತಿ. ನೋಡು—ಮದನ, ಮನ್ಮಥ [ಭಾರ.-ಆ ೬೭. ಶಿವ -ಸತೀ ೪. ಕಾಳಿಕಾ.-೩]

**ರತ್ನಮಾಲಾ.**—ಜನಕ ರಾಜನ ಮಹಿಷಿ. ನೋಡು—ಜನಕ.

**ರಥಧ್ವಜಾದಿವರ್ಣನೆ.**—ಭಾರತ ಯುದ್ಧದಲ್ಲಿ ನೆರೆದಿದ್ದ ರಾಜರ ರಥ, ಧ್ವಜಗಳ ವರ್ಣನೆ [ಭಾರ.-ಉ. ೫೬. ದ್ರೋ. ೧೦೫].

**ರಥನ್ತರೀ.**—ಚಂದ್ರ ವಂಶದ ಇಲಿಲನೆಂಬ ರಾಜನ ಹೆಂಡತಿ ನೋಡು—ಇಲಿಲ [ಭಾರ.-ಆದಿ. ೬೩]. ಈಕೆ ದುಷ್ಯಂತ, ಶೂರ, ಭೀಮ, ಪ್ರವಸು, ವಸುಗಳೆಂಬ ಐವರು ಪುತ್ರರನ್ನು ಹೆತ್ತಳು [ಭಾರ.-ಆ. ೮೮].

**ರಥಾತಿರಥಸಂಖ್ಯಾನ.**—ಭಾರತ ಸೇನೆಯಲ್ಲಿ ರಥಾತಿರಥರನ್ನು ಪರಿಗಣಿಸಿದ್ದು [ಭಾರ.-೧೬೫-೧೭೨].

**ರನ್ತಿದೇವ.**—ಚಂದ್ರ ವಂಶದ ಸಂಕೃತಿ ರಾಜನ ಮಗ. ನೋಡು—ಚರ್ಮಣ್ವತಿ [ಭಾರ.-ಅನು. ೧೨೩. ಭಾಗ.-೯-೨೧]. ರಂತಿದೇವ ಒಮ್ಮೆ ಪತ್ನೀಪುತ್ರಪರಿವಾರ ದೊಂದಿಗೆ ಅರಣ್ಯದಲ್ಲಿ ತಪಸ್ಸುಮಾಡುತ್ತ, ಕೇವಲ ದೀನಾವಸ್ಥೆಯಲ್ಲಿದ್ದ. ಒಮ್ಮೆ ಇವ ೪೮ ದಿನಗಳು ಉಪವಾಸಮಾಡಿದ. ೪೯ನೆಯ ದಿನ ದಿವ್ಯಭೋಜನ ದೇವ ಲೋಕದಿಂದ ಬಂತು. ರಂತಿದೇವ ಅದನ್ನು ಪತ್ನೀಪುತ್ರ ಪರಿವಾರಕ್ಕೆ ಹಂಚಿಕೊಟ್ಟು ತಾನು ಶೇಷವನ್ನು ಭುಜಿಸಬೇಕೆಂದಿರುವಷ್ಟರಲ್ಲಿ ಒಬ್ಬ ಬ್ರಾಹ್ಮಣ ಬಂದ. ಅನ್ನ ವನ್ನು ಅವನಿಗೆ ಬಡಿಸಿ, ಆತನನ್ನು ತೃಪ್ತಿಪಡಿಸುವಷ್ಟರಲ್ಲಿ ಒಬ್ಬ ಶೂದ್ರ ಅತಿಥಿ

ಯಾಗಿ ಬಂದು ಅನ್ನವನ್ನು ಬೇಡಿದ. ಶೂದ್ರನೂ ಭೋಜನಮಾಡಿ ತೃಪ್ತನಾಗಿ ಹೋದ ಒಡನೆಯೇ ಒಬ್ಬ ಬೇಡ ಕೆಲ ನಾಯಿಗಳ ಸಂಗಡ, ಬಹಳ ಹಸಿವಾಗುತ್ತಿದೆ, ಅನ್ನವನ್ನು ಕೊಡೆಂದು ಕೇಳಲಾಗಿ, ರಂತಿದೇವ ಮಿಕ್ಕ ಅನ್ನವನ್ನೆಲ್ಲ ಕೊಟ್ಟು ಭಗವಂತನನ್ನು ಸ್ಮರಿಸಿ, ಆ ಬೇಡನಿಗೂ ನಾಯಿಗಳಿಗೂ ನಮಸ್ಕಾರಮಾಡಿದ. ಆಗ ರಂತಿದೇವನ ಪಾಲಿಗೆ ನೀರು ಮಾತ್ರ ಮಿಕ್ಕಿತ್ತು ಅಷ್ಟರಲ್ಲಿ ಒಬ್ಬ ಪುಲ್ಕಸ ಬಂದು ದಾಹಶಾಂತಿಗಾಗಿ ಜಲವನ್ನು ಯಾಚಿಸಲಾಗಿ ತನ್ನಲ್ಲಿದ್ದ ಉದಕವನ್ನೂ ರಂತಿದೇವ ಭಗವತ್ಪ್ರೀತಿಯಾಗಲೆಂಬ ಬುದ್ಧಿಯಿಂದ ಕೊಟ್ಟು, ತಾನು ಹಸಿವು ನೀರಡಿಕೆಗಳಿಂದ ಸಾಯುವಂತಿದ್ದರೂ ನಿರ್ವಿಕಾರನಾಗಿದ್ದ. ಅಷ್ಟರಲ್ಲಿ ಬ್ರಹ್ಮಾದಿಗಳು ಮೈದೋರಿದರು. ರಂತಿದೇವ ಅವರೆಲ್ಲರನ್ನೂ ನಮಸ್ಕರಿಸಿ, ಯಾವುದೊಂದು ವರವನ್ನೂ ಬೇಡದೆ ಸುಮ್ಮನೆ ನಿಂತಿದ್ದ. ಆಗ ದೇವತೆಗಳ ಅನುಗ್ರಹದಿಂದ ರಂತಿದೇವ ಮಾಯಾಪಾಶವನ್ನು ಕಳಚಿ ಬಿಸುಟು ಜ್ಞಾನಸಂಪನ್ನನಾದ. ರಂತಿದೇವನ ಸಹವಾಸದಲ್ಲಿದ್ದವರು ಕೂಡ ಪರಮಯೋಗಿಗಳಾದರು [ಭಾರ.-ದ್ರೋ. ೬೭. ಶಾಂತಿ. ೨೮, ೨೫೦].

**ರಮಣಕ.**—(I) ಒಂದು ದ್ವೀಪ. ಪ್ರಿಯವ್ರತರಾಜನ ಮಗನಾದ ಯಜ್ಞಬಾಹುವೆಂಬವ ಪಾಲಿಸುತ್ತಿದ್ದ ಭೂಭಾಗ. ಶಾಲ್ಮಲಿದ್ವೀಪಕ್ಕೆ ಸೇರಿದೆ [ಭಾಗ.-೫-೧]. ಕಾಳಿಯನನ್ನು ಕೃಷ್ಣ ಭಂಗಗೊಳಿಸಿ ಈ ದ್ವೀಪಕ್ಕೆ ಕಳುಹಿಸಿದ. ಗರುಡ ಸರ್ಪಗಳನ್ನು ಈ ದ್ವೀಪಕ್ಕೆ ಹೊತ್ತುಕೊಂಡು ಹೋಗಿ ಪೀಡಿಸಿದ್ದು, ಮುಂತಾಗಿ [ಭಾರ -ಆದಿ. ೨೬].

(II) ಜಂಬೂದ್ವೀಪದ ಸುತ್ತಮುತ್ತಣ ಎಂಟು ಉಪದ್ವೀಪಗಳಲ್ಲಿ ಒಂದು [ಭಾಗ.-೫-೧೯. ದೇ.ಭಾ.-೮-೧೧].

**ರಮ್ಭ-ಕರಮ್ಭ.**—ರಾಕ್ಷಸರು. ಇವರಿಬ್ಬರೂ ದೇವಕಂಟಕರಾಗಿರುವಲ್ಲಿ ದೇವತೆಗಳು ಕರಂಭನನ್ನು ಕೊಂದರು. ಬಳಿಕ ರಂಭ ತಪಸ್ಸುಮಾಡಿ, ದೇವತೆಗಳ ಸೊಕ್ಕನ್ನು ಮುರಿಯುವಂತಹ ಮಹಿಷಾಸುರನೆಂಬ ಮಗನನ್ನು ಪಡೆದ. ನೋಡು—ಮಹಿಷಾಸುರ [ದೇ.ಭಾಗ.-೩-೧೨].

**ರಮ್ಭಾ.**—ಒಬ್ಬ ಅಪ್ಸರಸಿ. ಕಶ್ಯಪನಿಂದ ಪ್ರಾಧೆಯೆಂಬವಳಲ್ಲಿ ಜನಿಸಿದವಳು. ದೇವಲೋಕದ ಮುಖ್ಯವಿಲಾಸಿನಿಯರಲ್ಲಿ ಒಬ್ಬಳು [ಭಾರ.-ಆದಿ. ೬೬, ೧೩೨. ಸಭಾ. ೧೦]. ಇವಳು ತುಂಬುರುವೆಂಬ ಗಂಧರ್ವನ ಹೆಂಡತಿ [ಉದ್ಯೋ. ೧೧೭]. ಇಂದ್ರನಿಂದ ಪ್ರೇರಿತಳಾಗಿ ವಿಶ್ವಾಮಿತ್ರನ ತಪಸ್ಸನ್ನು ಭಂಗಗೊಳಿಸಹೋಗಿ ಬಹಳ ಕಾಲದವರೆಗೆ ಶಿಲಾರೂಪವನ್ನು ಪಡೆದಿರುವಂತೆ ಶಾಪವನ್ನು ಹೊಂದಿದಳು [ರಾಮಾ -ಬಾಲ. ೬೪. ಭಾರ.-ಅನು. ೬].

**ರಮ್ಯಕ.**—ಅಗ್ನೀಧ್ರ ಮಹಾರಾಜನ ಮಗನಾದ ರಮ್ಯಕ ರಾಜ್ಯಭಾರಮಾಡಿದ ಭೂಭಾಗಕ್ಕೆ ಈ ಹೆಸರು ಸಲ್ಲುತ್ತದೆ. ಇದು ಪೂರ್ವ ಪಶ್ಚಿಮ ಸಮುದ್ರಗಳ ನಡುವೆ ಶ್ವೇತ, ನೀಲಗಳೆಂಬ ಪರ್ವತಗಳ ಮಧ್ಯದಲ್ಲಿದೆ [ಭಾರ.-ಭೀ. ೬. ವಿಷ್ಣು.-೨-೧].

**ರಮ್ಯಕವರ್ಷ.**—ನೋಡು—ರಮ್ಯಕ.

**ರಸಾತಲ**—ಏಳು ಪಾತಾಳಲೋಕಗಳಲ್ಲಿ ಒಂದು. ಬ್ರಹ್ಮದೇವನ ಮುಖದಿಂದ ಜನಿಸಿದ ಕಾಮಧೇನು ಇಲ್ಲಿ ವಾಸಮಾಡುತ್ತದೆ. ಇದರ ಹಾಲಿನಿಂದ ಕ್ಷೀರನಿಧಿ ಯೆಂಬ ಹಾಲಿನ ಮಡು ಇಲ್ಲಿ ತುಂಬಿದೆ ಕಾಮಧೇನುವಿನ ಮಕ್ಕಳಾದ ಸುರೂಪಾ, ಹಂಸಿಕಾ, ಸುಭದ್ರಾ, ಸರ್ವಕಾಮದುಘಾ ಎಂಬ ನಾಲ್ಕು ಧೇನುಗಳು ಈ ಲೋಕದ ನಾಲ್ಕು ದಿಕ್ಕುಗಳಲ್ಲಿಯೂ ಇವೆ [ಭಾರ -ಉದ್ಯೋ. ೧೦೨].

**ರಾಕ್ಷಸರು.**—ಕ್ರೂರಸ್ವಭಾವದವರು ರಾಕ್ಷಸರು ಜನನಿ ಗರ್ಭಧಾರಣಮಾಡಿದ ಕೂಡಲೇ ಜನಿಸಿ, ಹೆತ್ತ ತಾಯಿಗೆ ಸಮಾನವಾದ ವಯಸ್ಸನ್ನು ಪಡೆಯುವಹಾಗೆ ಪಾರ್ವತಿ ವರವನ್ನು ಕೊಟ್ಟದ್ದು. ನೋಡು—ಸುಕೇಶ [ರಾಮಾ -ಉತ್ತ. ೪]. ವಸಿಷ್ಠಪುತ್ರನಾದ ಶಕ್ತಿಮುನಿಯನ್ನು ಒಬ್ಬ ರಾಕ್ಷಸ ನುಂಗಲಾಗಿ, ಆ ಸುದ್ದಿಯನ್ನು ಕೇಳಿದ ಪರಾಶರ ರಾಕ್ಷಸರನ್ನು ನಿರ್ಮೂಲಗೊಳಿಸುವುದಕ್ಕಾಗಿ ಯಜ್ಞಮಾಡಿದ್ದು, ಮುಂತಾಗಿ. ನೋಡು—ಪರಾಶರ [ಭಾರ.-ಆದಿ. ೧೯೭]. ರಾಕ್ಷಸಿಯರು ಗರ್ಭ ಧಾರಣಮಾಡಿದ ಕೂಡಲೇ ಮಕ್ಕಳನ್ನು ಹೆರುತ್ತಾರೆ [ಭಾರ.-ಆದಿ ೧೬೯]. ರಾಕ್ಷಸರು ರಾಜರಾಗಿ ಹುಟ್ಟಿದ್ದು [ಭಾರ.-ಆದಿ. ೬೫].

**ರಾಜಧರ್ಮವರ್ಣನೆ.**—[ರಾಮಾ.-ಅಯೋ. ೧೦೦. ಭಾರ.-ಶಾಂತಿ. ೧-೧೩೦. ಮತ್ಸ್ಯ.-೨೨೨-೨೪೯].

**ರಾಜನೀತಿವರ್ಣನೆ.**—[ಭಾರ -ಸಭಾ. ೫. ಶಾಂತಿ. ೬೮, ೮೯. ಆಶ್ರ. ೬-೮]. ರಾಜ ಸನ್ನಿಧಿಯಲ್ಲಿ ವಾಸಮಾಡಬೇಕಾದ ಕ್ರಮ ಧೌಮ್ಯ ಮುನಿ ಪಾಂಡವರಿಗೆ ಹೇಳಿದ್ದು [ಭಾರ.-ವಿರಾ. ೫]. ರಾಜ ಹತ್ತು ಮಂದಿ ಶ್ರೋತ್ರಿಯರಿಗೆ ಸಮಾನ [ಭಾರ.-ಆ. ೪೧]. ರಾಜಪುರೋಹಿತರ ಲಕ್ಷಣ [ಭಾರ.-ಶಾಂತಿ. ೭೩].

**ರಾಜಪುರ.**—ಒಂದು ಪಟ್ಟಣ ಕಳಿಂಗ ದೇಶದ ರಾಜಧಾನಿ. ದುರ್ಯೋಧನನ ಮಾವನಾದ ಚಿತ್ರಾಂಗದ ಇಲ್ಲಿ ರಾಜ್ಯಭಾರಮಾಡುತ್ತಿದ್ದ [ಭಾರ.-ಶಾಂತಿ. ೪].

**ರಾಜಸೂಯ.**—ಒಂದು ಯಜ್ಞ. ಪಾಂಡು ರಾಜನ ಸೂಚನೆಯಂತೆ ನಾರದನ ಉಪದೇಶದಿಂದ ಯುಧಿಷ್ಠಿರ ರಾಜಸೂಯಮಾಡಿದ್ದು [ಭಾರ.-ಸ. ೩೮. ಭಾಗ.-೧೦, ೭೪]. ರಾಜಸೂಯಕ್ಕೆ ಬಂದಿದ್ದ ಅರಸರು [ಭಾರ.-ಸಭಾ. ೩೭]. ಪಾಂಡವರು ರಾಜಸೂಯ ಮಾಡುವಂತೆ ಪಾಂಡು ರಾಜ ಒಮ್ಮೆ ದೇವಲೋಕದಲ್ಲಿ ಕಾಣಬಂದ ನಾರದನ ಮೂಲಕ ಯುಧಿಷ್ಠಿರನಿಗೆ ಹೇಳಿಕಳುಹಿಸಿದ್ದು [ಸಭಾ. ೧೨]. ರಾಜ

ಸೂಯ ಮಹಿಮೆ [ಸಭಾ. ೧೨, ೭೧, ೭೮, ೭೯]. ರಾಜಸೂಯಕ್ಕೆ ನೆರೆದಿದ್ದ ಮುನಿಗಳು ಮೊದಲಾಗಿ [ಸಭಾ. ೩೬]. ರಾಜಸೂಯ ಸಭೆಯಲ್ಲಿ ದುರ್ಯೋಧನ ಮುಗ್ಗರಿಸಿದ್ದು [ಸಭಾ. ೭೪]. ದುರ್ಯೋಧನ ರಾಜಸೂಯಯಾಗ ಮಾಡಬೇಕೆಂದು ಪ್ರಯತ್ನಿಸಿದ್ದು. ಅದಕ್ಕೆ ಪ್ರತಿಯಾಗಿ ಮತ್ತೊಂದು ಯಜ್ಞ ಮಾಡಿದ್ದು [ವನ. ೨೫೬]. ಹರಿಶ್ಚಂದ್ರ ರಾಜಸೂಯ ಮಾಡಿದ್ದು [ಭಾರ.-ಸಭಾ ೧೨].

**ರಾಜಾಧಿದೇವಿ.**—ಚಂದ್ರವಂಶದ ಶೂರರಾಜನಿಂದ ಮಾರಿಷೆಯೆಂಬವಳಲ್ಲಿ ಜನಿಸಿದ ಐವರು ಪುತ್ರಿಯರಲ್ಲಿ ಕಿರಿಯವಳು ವಸುದೇವನ ಒಡಹುಟ್ಟಿದವಳು. ಈಕೆ ಅವಂತಿ ದೇಶದ ಅರಸನಾದ ಜಯಸೇನನನ್ನು ಮದುವೆಯಾಗಿ ವಿಂದ, ಅನುವಿಂದರೆಂಬ ಪುತ್ರರನ್ನೂ ಮಿತ್ರವಿಂದೆಯೆಂಬ ಕನ್ಯೆಯನ್ನೂ ಪಡೆದಳು. ಮಿತ್ರವಿಂದೆ ಶ್ರೀಕೃಷ್ಣನನ್ನು ಮದುವೆಯಾದಳು. ನೋಡು—ಕೃಷ್ಣ [ಭಾಗ.-೧೦-೫೮].

**ರಾಧಾ.**—(i) ಭಗವತಿಯ ಐದು ಪ್ರಕೃತಿಗಳಲ್ಲಿ ಒಂದು [ದೇ.ಭಾ.-೯-೧].

(ii) ಸೂತರಾಜನಾದ ಅಧಿರಥನ ಹೆಂಡತಿ. ಕರ್ಣನ ಸಾಕುತಾಯಿ. ಈ ಕಾರಣದಿಂದಲೇ ಕರ್ಣನಿಗೆ ರಾಧೇಯನೆಂಬ ಹೆಸರು [ಭಾರ -ಆದಿ. ೬೮. ವನ ೩೧೦[.

(iii) ಯದುವಂಶದ ವೃಷಭಾನುವಿನಿಂದ ಕಳಾವತಿಯೆಂಬವಳಲ್ಲಿ ಜನಿಸಿದವಳು. ಕೃಷ್ಣ ಗೋಕುಲದಲ್ಲಿದ್ದಾಗ ಆತನ ಪ್ರಿಯಸಖಿಯಾಗಿದ್ದಳು.

**ರಾಮ.**—(i) ನೋಡು—ಪರುಶುರಾಮ. ಈ ಅವತಾರ ೧೯ ನೆಯ ತ್ರೇತಾಯುಗದಲ್ಲಿ ನಡೆಯಿತು [ಮತ್ಸ್ಯ -೪೭. ಶ್ಲೋ. ೨೪೪].

(ii) ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಏಳನೆಯದು. ಸೂರ್ಯವಂಶದ ದಶರಥನಿಂದ ಹಿರಿಯ ರಾಣಿಯಾದ ಕೌಸಲ್ಯೆಯಲ್ಲಿ ಜನಿಸಿದವ [ರಾಮಾ -ಬಾಲ. ೧೮. ಭಾರ -ವನ. ೨೭೫]. ಚೈತ್ರ ಶುಕ್ಲ ೯ ಪುನರ್ವಸು ನಕ್ಷತ್ರದಲ್ಲಿ ಜನಿಸಿದವ [ರಾಮಾ.-ಬಾಲ. ೧೮]. ರಾಮ ಲಕ್ಷ್ಮಣನೊಂದಿಗೆ ವಿಶ್ವಾಮಿತ್ರನ ಯಾಗ ಸಂರಕ್ಷಣೆಗಾಗಿ ಸಿದ್ಧಾಶ್ರಮಕ್ಕೆ ಹೊರಟದ್ದು [ಬಾಲ ೨೨]. ರಾಮ ವಿಶ್ವಾಮಿತ್ರನಿಂದ ಮಲದ, ಕರೂಶ, ಕಾಮಾಶ್ರಮ, ತಾಟಕೆಯರ ವೃತ್ತಾಂತವನ್ನು ತಿಳಿದದ್ದು [ಬಾಲ. ೨೩-೨೫]. ತಾಟಕೆಯನ್ನು ಕೊಂದದ್ದು [ಬಾಲ.- ೨೬]. ವಿಶ್ವಾಮಿತ್ರನ ಮೂಲಕ ಅಸ್ತ್ರೋಪದೇಶವನ್ನು ಪಡೆದದ್ದು, ಸಿದ್ಧಾಶ್ರಮವನ್ನು ಸೇರಿದ್ದು [ಬಾಲ. ೨೭-೨೯]. ಮಾರೀಚ ಸುಬಾಹುಗಳನ್ನು ನಿಗ್ರಹಿಸಿದ್ದು [ಬಾಲ. ೩೦]. ವಿಶ್ವಾಮಿತ್ರನೊಂದಿಗೆ ಮಿಥಿಲೆಗೆ ಹೊರಟದ್ದು, ಕುಶನಾಭ, ಬ್ರಹ್ಮದತ್ತರ ವೃತ್ತಾಂತ, ವಿಶ್ವಾಮಿತ್ರನ ಪೂರ್ವಕಥೆ, ಗಂಗೆಯ ಉತ್ಪತ್ತಿ, ಭಗೀರಥ ಗಂಗೆಯನ್ನು ತಂದದ್ದು [ಬಾಲ ೩೧-೪೪]. ಕ್ಷೀರಸಮುದ್ರಮಥನ, ದಿತಿಯ ತಪಸ್ಸು, ಮರುತ್ತುಗಳ ವೃತ್ತಾಂತ, ಅಹಲ್ಯೆಯನ್ನು ಉದ್ಧರಿಸಿದ್ದು [ಬಾಲ. ೪೫-೪೯]. ರಾಮ ಲಕ್ಷ್ಮಣರು

ಜನಕನ ರಾಜಧಾನಿಯಾದ ಮಿಥಿಲೆಗೆ ಸೇರಿದ್ದು, ಗೌತಮ ಪುತ್ರನಾದ ಶತಾನಂದ ಮುನಿ, ವಿಶ್ವಾಮಿತ್ರ ವಸಿಷ್ಠರ ಸಮಾಚಾರವನ್ನು ಜನಕನ ಸಭೆಯಲ್ಲಿ ವಿವರಿಸಿದ್ದು. ವಿಶ್ವಾಮಿತ್ರ ತ್ರಿಶಂಕುವಿನಿಂದ ಯಜ್ಞಮಾಡಿಸಿದ್ದು. ವಿಶ್ವಾಮಿತ್ರ ಬ್ರಹ್ಮರ್ಷಿಯಾದದ್ದು, ಮೇನಕೆಯನ್ನೂ ರಂಭೆಯನ್ನೂ ಶಪಿಸಿದ್ದು [ಬಾಲ. ೫೦-೬೫]. ರಾಮ ಶಿವಧನುಸ್ಸನ್ನು ಮುರಿದದ್ದು [ಬಾಲ. ೬೭]. ರಾಮನ ವಂಶಾವಳಿ [ಬಾಲ. ೭೦]. ರಾಮ ಸೀತೆಯನ್ನು ಮದುವೆಯಾದದ್ದು [ಬಾಲ. ೭೩]. ರಾಮ ಪರಶುರಾಮನನ್ನು ನಿಗ್ರಹಿಸಿದ್ದು [ರಾಮಾ.-ಬಾಲ. ೭೪-೭೬. ಭಾರ.-ವನ. ೯೮]. ರಾಮ ಅಯೋಧ್ಯೆಯಲ್ಲಿ ಪಾರುಪತ್ಯಮಾಡಿಕೊಂಡಿದ್ದದ್ದು [ಬಾಲ. ೭೭]. ರಾಮನ ಯೌವರಾಜ್ಯಾಭಿಷೇಕ ಪ್ರಯತ್ನ [ಅಯೋ. ೧-೫. ಭಾರ -ವನ. ೨೭೮]. ಮಂಥರೆ ವಿಘ್ನವನ್ನು ತಂದೊಡ್ಡಿದ್ದು, ಕೈಕಯಿ ರಾಮನನ್ನು ಅರಣ್ಯಕ್ಕೆ ಕಳುಹಹೇಳಿದ್ದು [ಅಯೋ. ೬-೧೩]. ರಾಮನ ಪಟ್ಟಾಭಿಷೇಕಕ್ಕೆ ವಸಿಷ್ಠನ ಸನ್ನಾಹ [ಅಯೋ. ೧೪]. ರಾಮ ದಶರಥನಲ್ಲಿಗೆ ಹೋಗಿ, ಕೈಕಯಿಯ ಮೂಲಕ ಸಮಾಚಾರವನ್ನು ತಿಳಿದು ವನವಾಸಕ್ಕೆ ಸಮ್ಮತಿಸಿದ್ದು [ಅಯೋ. ೧೫-೧೯]. ರಾಮ ವನವಾಸಕ್ಕೆ ಕೌಸಲ್ಯೆಯ ಅನುಮತಿಯನ್ನು ಬೇಡಿದ್ದು, ಕೌಸಲ್ಯೆಗೂ ಲಕ್ಷ್ಮಣನಿಗೂ ಸಮಾಧಾನ ಹೇಳಿದ್ದು [ಅಯೋ. ೨೦-೨೫]. ರಾಮ ತಾನು ಕಾಡಿಗೆ ಹೋಗುವ ಸುದ್ದಿಯನ್ನು ಸೀತೆಗೆ ಹೇಳಿದ್ದು, ಸೀತಾ ರಾಮರ ವಾಗ್ವಾದ, ಸೀತೆ ತನ್ನನ್ನು ಹಿಂಬಾಲಿಸಲು ರಾಮ ಒಪ್ಪಿದ್ದು[ಅಯೋ. ೨೬-೩೦]. ಲಕ್ಷ್ಮಣನನ್ನು ಸಂಗಡ ಕರೆದುಯ್ಯಲು ರಾಮ ಒಪ್ಪಿದ್ದು [ಅಯೋ. ೩೧]. ರಾಮ ಅರಣ್ಯಕ್ಕೆ ಹೋಗುವ ಮೊದಲು ದಾನಮಾಡಿದ್ದು, ಅರಣ್ಯಕ್ಕೆ ಹೋಗಲು ರಾಮ ದಶರಥನ ಅಪ್ಪಣೆಯನ್ನು ಬೇಡಿದ್ದು, ದಶರಥನ ಪ್ರಲಾಪ [ಅಯೋ. ೩೨-೩೪]. ರಾಮ ದಶರಥನಿಗೆ ಸಮಾಧಾನ ಹೇಳಿದ್ದು [ಅಯೋ. ೩೮]. ರಾಮ ಸೀತಾ ಲಕ್ಷ್ಮಣರೊಂದಿಗೆ ಕಾಡಿಗೆ ಹೊರಟದ್ದು [ಅಯೋ ೪೦]. ರಾಮ ತಮಸಾ ನದಿಯನ್ನು ಸೇರಿದ್ದು, ತನ್ನ ಹಿಂದೆ ಬಂದಿದ್ದ ಪ್ರಜೆಗಳನ್ನು ವಂಚಿಸಿದ್ದು [ಅಯೋ. ೪೫-೪೬]. ರಾಮ ಕೋಸಲ ದೇಶವನ್ನು ಸೇರಿದ್ದು [ಅಯೋ. ೪೯]. ರಾಮ ಗುಹನನ್ನು ಕಂಡು ಆತನಿಂದ ಸತ್ಕೃತನಾಗಿ, ಗಂಗಾ ತೀರದಲ್ಲಿ ಗುಹನ ಕಾವಲಿನಲ್ಲಿ ರಾತ್ರಿಯನ್ನು ಕಳೆದದ್ದು [ಅಯೋ. ೫೦-೫೧]. ರಾಮ ಗುಹನನ್ನೂ ಸುಮಂತ್ರನನ್ನೂ ಹಿಂದಿರುಗಿಸಿದ್ದು, ಸುಮಂತ್ರನಿಗೆ ನೀತಿಹೇಳಿದ್ದು, ವನವಾಸ ಪ್ರಾರಂಭ, ಭರದ್ವಾಜಾಶ್ರಮಕ್ಕೆ ಬಂದದ್ದು [ಅಯೋ. ೫೨-೫೪]. ಚಿತ್ರಕೂಟವನ್ನು ಸೇರಿದ್ದು [ಅಯೋ. ೫೫-೫೭]. ಭರತನ ಸೇನೆಯನ್ನು ಕಂಡು ಕ್ರುದ್ಧನಾದ ಲಕ್ಷ್ಮಣನಿಗೆ ರಾಮ ಸಮಾಧಾನ ಹೇಳಿದ್ದು [ಅಯೋ ೯೭]. ರಾಮ ಭರತನನ್ನು ಸಂಧಿಸಿದ್ದು, ಭರತನಿಗೆ ರಾಜನೀತಿ ಹೇಳಿದ್ದು, ರಾಮ ರಾಜ್ಯಭಾರವನ್ನು ಸಮ್ಮತಿಸದಿದ್ದದ್ದು [ಅಯೋ. ೯೯-೧೧೧].

ರಾಮ ದಶರಥನಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು, ಕೌಸಲ್ಯಾದಿಗಳನ್ನು ಕಂಡದ್ದು, ಭರತನಿಗೆ ತತ್ತ್ವವನ್ನು ಉಪದೇಶಿಸಿದ್ದು [ಅಯೋ. ೧೦೩-೧೦೫]. ರಾಮ ಭರತನಿಗೆ ತಾನು ವನವಾಸಮಾಡಲು ಕಾರಣವನ್ನು ತಿಳಿಸಿದ್ದು, ತನಗೆ ಚಾರ್ವಾಕನೀತಿಯನ್ನು ಹೇಳಿದ ಜಾಬಾಲಿಯನ್ನು ನಿಂದಿಸಿದ್ದು [ಅಯೋ. ೧೦೭-೧೦೯]. ತಾನು ಅಯೋಧ್ಯೆಗೆ ಬರುವುದಿಲ್ಲವೆಂದು ಹೇಳಿ ಭರತನಿಗೆ ತನ್ನ ಪಾದುಕೆಗಳನ್ನು ಕೊಟ್ಟದ್ದು [ಅಯೋ. ೧೧೧-೧೧೨]. ರಾಮ ಅತ್ರಿ ಮುನಿಯ ಆಶ್ರಮಕ್ಕೆ ಬಂದದ್ದು [ಅಯೋ. ೧೧೭]. ಅತ್ರಿ ಮುನಿಯ ಆಶ್ರಮದಿಂದ ದಂಡಕಾರಣ್ಯಕ್ಕೆ ಹೋದದ್ದು [ಅಯೋ. ೧೧೯]. ರಾಮ ವಿರಾಧನನ್ನು ಕೊಂದದ್ದು [ಅರಣ್ಯ. ೩]. ರಾಮ ಶರಭಂಗ ಮುನಿಯ ಆಶ್ರಮಕ್ಕೆ ಹೋದದ್ದು [ಅರ. ೫]. ದಂಡಕಾರಣ್ಯದಲ್ಲಿ ಮುನಿಗಳ ತಪಸ್ಸಿಗೆ ಭಂಗವನ್ನುಂಟುಮಾಡುತ್ತಿದ್ದ ರಾಕ್ಷಸರನ್ನು ಕೊಲ್ಲುವುದಾಗಿ ರಾಮ ತಪಸ್ವಿಗಳಿಗೆ ಅಭಯಪ್ರದಾನಮಾಡಿದ್ದು [ಅರ. ೬]. ರಾಮ ಸುತೀಕ್ಷ್ಣಮುನಿಯ ಆಶ್ರಮಕ್ಕೆ ಹೋದದ್ದು [ಅರ. ೭]. ಕ್ಷತ್ರಿಯಧರ್ಮ ವಿಷಯವಾಗಿ ಸೀತಾರಾಮರ ವಾಗ್ವಾದ [ಅರ. ೯, ೧೦]. ರಾಮ ಅಗಸ್ತ್ಯಾಶ್ರಮಕ್ಕೆ ಹೋದದ್ದು, ಅಗಸ್ತ್ಯ ರಾಮನಿಗೆ ಬಿಲ್ಲು ಬಾಣಗಳನ್ನು ಕೊಟ್ಟದ್ದು [ಅರ. ೧೧-೧೨] ರಾಮ ಪಂಚವಟಿಯನ್ನು ಸೇರಿ, ಜಟಾಯುವನ್ನು ಸಂಧಿಸಿ, ಆಶ್ರಮವನ್ನು ಕಟ್ಟಿ ವಾಸಮಾಡತೊಡಗಿದ್ದು [ಅರ. ೧೩-೧೫]. ತನ್ನನ್ನು ಮೋಹಿಸಿ ಬಂದ ಶೂರ್ಪಣಖಿಯನ್ನು ಲಕ್ಷ್ಮಣನ ಮೂಲಕ ವಿರೂಪಗೊಳಿಸಿದ್ದು [ಅರ. ೧೭, ೧೮]. ರಾಮ ಖರನ ೧೪ ಸಾವಿರ ಸೇನೆಯನ್ನು ಮುರಿದದ್ದು [ಅರ. ೨೦]. ಖರ, ದೂಷಣ, ತ್ರಿಶಿರರ ವಧೆ [ಅರ, ೨೪-೩೦] ರಾಮ ಮಾಯಾಮೃಗವನ್ನು ಕೊಂದದ್ದು [ಅರ. ೪೩, ೪೪]. ನಡುದಾರಿಯಲ್ಲಿ ಲಕ್ಷ್ಮಣನನ್ನು ಸಂಧಿಸಿದ ರಾಮ ಲಕ್ಷ್ಮಣನನ್ನು ನಿಂದಿಸಿದ್ದು [ಅರ. ೫೭-೫೮]. ರಾಮ ಸೀತೆಗಾಗಿ ಪ್ರಲಾಪಿಸಿದ್ದು [ಅರ. ೬೦-೬೪] ರಾಮನನ್ನು ಲಕ್ಷ್ಮಣ ಸಂತವಿಟ್ಟದ್ದು [ಅರ. ೬೫-೬೬]. ರಾಮ ಜಟಾಯುವನ್ನು ಕಂಡು, ಆತನಿಗೆ ಸಂಸ್ಕಾರಮಾಡಿದ್ದು, ಕಬಂಧನ ಕೈಗೆ ಸಿಕ್ಕಿ, ಅವನನ್ನು ಕೊಂದದ್ದು [ಅರ. ೬೭-೭೦]. ರಾಮ ಕಬಂಧನ ಮೂಲಕ ಸೀತಾ ವೃತ್ತಾಂತವನ್ನು ಕೇಳಿ ಸುಗ್ರೀವನಲ್ಲಿಗೆ ತೆರಳಿದ್ದು [ಅರ. ೭೧-೭೨]. ರಾಮ ಶಬರಿಯನ್ನು ಕಂಡು ಪಂಪಾಸರೋವರವನ್ನು ಸೇರಿದ್ದು [ಅರ ೭೩-೭೫]. ರಾಮ ಋಷ್ಯಮೂಕ ಪರ್ವತವನ್ನು ಸೇರಿದ್ದು, ಹನೂಮಂತನನ್ನು ಸಂಧಿಸಿದ್ದು [ಕಿಷ್ಕಿಂ. ೧, ೨]. ರಾಮ ಸುಗ್ರೀವನನ್ನು ಸಂಧಿಸಿದ್ದು, ರಾಮ ಸುಗ್ರೀವರು ಪರಸ್ಪರವಾಗಿ ಮೈತ್ರಿಯನ್ನು ಬೆಳಸಿದ್ದು, ಸೀತಾದೇವಿಯ ಆಭರಣಗಳನ್ನು ಕಂಡು ರಾಮ ಪ್ರಲಾಪಿಸಿದ್ದು, ಸುಗ್ರೀವನಿಗೆ ಅಭಯಕೊಟ್ಟದ್ದು [ಕಿಷ್ಕಿಂ. ೪-೮]. ರಾಮ ಸುಗ್ರೀವನ ಮೂಲಕ ವಾಲಿ ಸುಗ್ರೀವರ ದ್ವೇಷಕ್ಕೆ ಕಾರಣವನ್ನು ಕೇಳಿ ತಿಳಿದದ್ದು, ಸುಗ್ರೀವನಿಗೆ ತನ್ನ ಬಲವನ್ನು ಪರೀಕ್ಷಿ

ಕೊಟ್ಟು, ಮರಳಿ ಅಭಯಪ್ರದಾನಮಾಡಿದ್ದು [ಕಿಷ್ಕಿಂ. ೯-೧೧]. ರಾಮ ವಾಲಿಯನ್ನು ಕೊಂದದ್ದು [ಕಿಷ್ಕಿಂ. ೧೬, ೧೭]. ವಾಲಿ ರಾಮರ ಸಂವಾದ, ವಾಲಿ ರಾಮನನ್ನು ನಿಂದಿಸಿ, ಹೊಗಳಿದ್ದು [ಕಿ. ೧೭, ೧೮]. ರಾಮ ತಾರೆಯನ್ನು ಸಂತವಿಸಿದ್ದು [ಕಿ. ೨೪]. ರಾಮ ಲಕ್ಷ್ಮಣನ ಮೂಲಕ ಸುಗ್ರೀವನಿಗೆ ಪಟ್ಟಾಭಿಷೇಕಮಾಡಿಸಿದ್ದು [ಕಿ. ೨೬]. ರಾಮ ಲಕ್ಷ್ಮಣನ ಸಂಗಡ ಮಾಲ್ಯವತ್ಪರ್ವತವನ್ನು ಸೇರಿದ್ದು, ವರ್ಷಾಕಾಲವರ್ಣನೆ, ರಾಮ ಹಂಬಲಿಸಿದ್ದು [ಕಿ. ೨೭-೨೮]. ರಾಮ ಸುಗ್ರೀವನ ಮೇಲೆ ಸಿಟ್ಟಾದದ್ದು [ಕಿ. ೩೦]. ರಾಮ ಲಕ್ಷ್ಮಣನನ್ನು ಸುಗ್ರೀವನಲ್ಲಿಗೆ ಕಳುಹಿದ್ದು [ಕಿ ೩೧]. ರಾಮನ ಬಳಿಗೆ ಸುಗ್ರೀವ ಬಂದದ್ದು [ಕಿ. ೩೬-೩೮]. ರಾಮ ದಕ್ಷಿಣ ದಿಕ್ಕಿಗೆ ಹೊರಟ ಹನೂಮಂತನಿಗೆ ತನ್ನ ಉಂಗುರವನ್ನು ಗುರುತಿಗಾಗಿ ಕೊಟ್ಟದ್ದು [ಕಿ. ೪೪] ರಾಮ ಸೀತೆ ಬದುಕಿರುವಳೆಂಬ ಸುದ್ದಿಯನ್ನು ಕೇಳಿ, ಹನೂಮಂತ ತಂದೊಪ್ಪಿಸಿದ ಚೂಡಾಮಣಿಯನ್ನು ಕಂಡು, ಸಂತೋಷಪಟ್ಟದ್ದು [ಸುಂ. ೬೪-೬೬]. ರಾಮ ಹನೂಮಂತನನ್ನು ಕೊಂಡಾಡಿದ್ದು [ಯುದ್ಧ.೧]. ರಾಮ ಹನೂಮಂತನಿಂದ ಲಂಕಾ ಪಟ್ಟಣದ ವೃತ್ತಾಂತವನ್ನು ಕೇಳಿ ತಿಳಿದದ್ದು, ತೆಂಕಣ ಸಮುದ್ರವನ್ನು ಸೇರಿದ್ದು, ಸೀತೆಯನ್ನು ಸ್ಮರಿಸಿ ಹಂಬಲಿಸಿದ್ದು [ಯು. ೨-೫]. ರಾಮ ತನ್ನನ್ನು ಮರೆಹೊಕ್ಕ ವಿಭೀಷಣನನ್ನು ಕೊಂಡಾಡಿ, ಅಭಯವಿತ್ತು, ಲಂಕಾ ರಾಜ್ಯಾಧಿಪತ್ಯವನ್ನು ವಾಗ್ದಾನಮಾಡಿದ್ದು, ವರುಣನನ್ನು ಪ್ರಾರ್ಥಿಸಿದ್ದು [ಯು. ೧೭-೧೯]. ರಾಮ ರಾವಣನ ಗೂಢಚಾರನಾದ ಶುಕನನ್ನು ಬಿಡಿಸಿ, ರಾವಣನಲ್ಲಿಗೆ ಕಳುಹಿಸಿದ್ದು [ಯು. ೨೦]. ವರುಣನ ಮೇಲೆ ಆಗ್ನೇಯಾಸ್ತ್ರವನ್ನು ಬಿಟ್ಟದ್ದು [ಯು. ೨೧]. ಸೇತುನಿರ್ಮಾಣ, ಸಮುದ್ರವನ್ನು ದಾಟಿದ್ದು [ಯು. ೨೨] ರಾಮ ಯುದ್ಧಕ್ಕೆ ಅಣಿಯಾದದ್ದು [ಯು. ೩೭] ರಾಮ ಪಾಳೆಯವನ್ನು ಸುವೇಲ ಪರ್ವತದಲ್ಲಿ ನಿಲ್ಲಿಸಿ, ಲಂಕಾ ಪಟ್ಟಣವನ್ನು ನೋಡಿದ್ದು, ರಾಮ ರಾವಣರ ಯುದ್ಧಕ್ಕೆ ಪ್ರಾರಂಭ [ಯು. ೪೨, ೫೯]. ರಾಮ ಲಕ್ಷ್ಮಣರು ಇಂದ್ರಜಿತ್ತನ ನಾಗಪಾಶಗಳಿಂದ ಬದ್ಧರಾಗಿ, ಮೂರ್ಛೆಹೊಂದಿದ್ದು [ಯು. ೪೪-೪೬]. ರಾಮ ಲಕ್ಷ್ಮಣನಿಗಾಗಿ ಹಂಬಲಿಸಿದ್ದು [ಯು. ೪೯]. ರಾಮ ಲಕ್ಷ್ಮಣರು ಗರುಡನಿಂದ ಬಿಡುಗಡೆಹೊಂದಿದ್ದು [ಯು. ೫೦]. ರಾಮ ವಿಭೀಷಣನ ಮೂಲಕ, ಕುಂಭಕರ್ಣನ ವೃತ್ತಾಂತವನ್ನು ತಿಳಿದದ್ದು [ಯು. ೬೧]. ರಾಮ ಲಕ್ಷ್ಮಣರು ಇಂದ್ರಜಿತ್ತನಿಂದ ಬ್ರಹ್ಮಾಸ್ತ್ರಕ್ಕೆ ಸಿಕ್ಕಿ ಬಿಡುಗಡೆಹೊಂದಿದ್ದು [ಯು. ೭೩, ೭೪]. ಇಂದ್ರಜಿತು ಮಾಯಾಸೀತೆಯನ್ನು ಕೊಂದದ್ದನ್ನು ನೋಡಿ ರಾಮ ಹಂಬಲಿಸಿದ್ದು, ಲಕ್ಷ್ಮಣ ರಾಮನನ್ನು ಸಮಾಧಾನಪಡಿಸಿದ್ದು [ಯು. ೮೨, ೮೩]. ರಾಮನಿಗೆ ವಿಭೀಷಣ ಧೈರ್ಯಹೇಳಿದ್ದು [ಯು.೮೪]. ಇಂದ್ರಜಿತ್ತನ್ನು ಕೊಂದದ್ದಕ್ಕಾಗಿ ರಾಮ ಲಕ್ಷ್ಮಣನನ್ನು ಕೊಂಡಾಡಿದ್ದು [ಯು. ೯೨]. ರಾಮ ರಾಕ್ಷಸ ಸೇನೆಯನ್ನು ಮುರಿದದ್ದು [ಯು. ೯೪]. ರಾಮ ರಾವಣರ ಯುದ್ಧ

[ಯು.೧೦೦]. ರಾವಣನ ಶಕ್ತ್ಯಾಯುಧದಿಂದ ಮೂರ್ಛೆಬಿದ್ದ ಲಕ್ಷ್ಮಣನಿಗಾಗಿ ರಾಮ ಪ್ರಲಾಪಿಸಿದ್ದು [ಯು ೧೦೨]. ಮಾತಲಿ ಮೂಲಕ ಇಂದ್ರ ಕಳುಹಿದ ರಥದಲ್ಲಿ ಕುಳಿತು ರಾಮ ರಾವಣನಮೇಲೆ ಯುದ್ಧಕ್ಕೆ ಹೊರಟದ್ದು [ಯು ೧೦೩] ರಾಮ ರಾವಣರ ಯುದ್ಧ [ಯು ೧೦೪, ೧೦೫] ರಾಮ ಅಗಸ್ತ್ಯನಿಂದ ಆದಿತ್ಯಮಂತ್ರವನ್ನು ಉಪ ದೇಶಹೊಂದಿದ್ದು [ಯು ೧೦೭] ರಾಮ ರಾವಣರ ಕೊನೆಯ ಯುದ್ಧ [ಯು. ೧೦೯-೧೧೦]. ರಾವಣನವಧೆ [ಯು. ೧೧೧ ಭಾರ.-ವನ ೨೯೧ ಸಭಾ -೫೦ ದ್ರೋ ೫೯] ಲಕ್ಷ್ಮಣನ ಮೂಲಕ ವಿಭೀಷಣನಿಗೆ ಲಂಕೆಯಲ್ಲಿ ಪಟ್ಟಗಟ್ಟಿಸಿದ್ದು [ಯು ೧೧೫] ರಾಮ ಸೀತೆಯನ್ನು ತನ್ನಲ್ಲಿಗೆ ಬರಮಾಡಿಕೊಂಡದ್ದು, ಸೀತೆಯನ್ನು ನಿಂದಿಸಿದ್ದು [ಯು. ೧೧೭, ೧೧೮] ರಾಮ ಲಕ್ಷ್ಮಣರು ದಶರಥನನ್ನು ಕಂಡದ್ದು [ಯು. ೧೨೨] ರಾಮ ಇಂದ್ರನ ಮೂಲಕ ಕಪಿಗಳನ್ನು ಬದುಕಿಸಿದ್ದು [ಯು ೧೨೩] ರಾಮ ಪುಷ್ಪಕ ವನ್ನೇರಿ ಅಯೋಧ್ಯೆಗೆ ಹೊರಟದ್ದು, ಸೀತೆಗೆ ಯುದ್ಧಭೂಮಿಯನ್ನೂ ಪುಣ್ಯಾಶ್ರಮ ಗಳನ್ನೂ ತೋರಿಸಿದ್ದು [ಯು ೧೨೪-೧೨೬] ರಾಮ ಭರದ್ವಾಜನಿಂದ ಸತ್ಕೃತ ನಾದದ್ದು [ಯು ೧೨೭] ರಾಮ ಅಯೋಧ್ಯೆಗೆ ಬಂದದ್ದು, ಭರತಾದಿಗಳನ್ನು ಸಂಧಿಸಿದ್ದು ಸುಗ್ರೀವ, ವಿಭೀಷಣಾದಿಗಳನ್ನು ಸತ್ಕರಿಸುವಂತೆ ಭರತನಿಗೆ ಹೇಳಿದ್ದು ಮುಂತಾಗಿ [ಯು.೧೩೦] ಶ್ರೀರಾಮ ಪಟ್ಟಾಭಿಷೇಕ [ಯು ೧೩೧] ರಾಮನನ್ನು ಕೊಂಡಾಡಲು ಮುನಿಗಳು ಆತನಲ್ಲಿಗೆ ಬಂದದ್ದು, ರಾಮ ಅಗಸ್ತ್ಯನ ಮೂಲಕ ರಾವಣನ ಸಮಾ ಚಾರಗಳನ್ನು ಕೇಳಿ ತಿಳಿದದ್ದು [ಉತ್ತ ೧-೩೪] ರಾಮನ ಆಸ್ಥಾನವರ್ಣನೆ. ತನ್ನನ್ನು ಸಂದರ್ಶಿಸಲು ಬಂದ ಅರಸರನ್ನು ಬೀಳ್ಕೊಟ್ಟದ್ದು [ಉತ್ತ ೩೭-೩೯]. ರಾಮ ಸುಗ್ರೀವ ವಿಭೀಷಣಾದಿಗಳನ್ನು ಬೀಳ್ಕೊಟ್ಟದ್ದು [ಉತ್ತ. ೪೦] ಕುಬೇರನಿಂದ ಪುಷ್ಪಕವಿಮಾನವನ್ನು ಪಡೆದದ್ದು [ಉ ೪೧] ರಾಮ ಸೀತೆಯ ಅಪವಾದವನ್ನು ಕೇಳಿದ್ದು, ಸೀತೆಯನ್ನು ಲಕ್ಷ್ಮಣನ ಮೂಲಕ ಕಾಡಿಗೆ ಕಳುಹಿಸಿದ್ದು [ಉ. ೪೩-೪೫]. ರಾಮ ಸೀತೆಯನ್ನು ಅಗಲುವುದಕ್ಕೆ ಕಾರಣ [ಉತ್ತ ೫೧]. ನೋಡು—ಭೃಗು. ರಾಮ ಮಹರ್ಷಿಗಳಿಂದ ಲವಣಾಸುರನ ಪೀಡೆಯನ್ನು ಕೇಳಿ ತಿಳಿದದ್ದು, ಲವಣ ನನ್ನು ಕೊಲ್ಲುವುದಕ್ಕಾಗಿ ಶತ್ರುಘ್ನನನ್ನು ಕಳುಹಿಸಿದ್ದು [ಉತ್ತ ೬೦-೬೨]. ರಾಮ ಶತ್ರುಘ್ನನಿಗೆ ಅಯೋಧ್ಯೆಯಲ್ಲಿ ಪಟ್ಟಗಟ್ಟಿದ್ದು [ಉತ್ತ ೬೩] ರಾಮ ನಾರದನಿಂದ ಯುಗಧರ್ಮಗಳನ್ನು ಕೇಳಿ ತಿಳಿದದ್ದು. ಶಂಬೂಕನೆಂಬ ಶೂದ್ರತಾಪಸನನ್ನು ಕೊಂದು ಮೃತನಾಗಿದ್ದ ಬ್ರಾಹ್ಮಣಪುತ್ರನನ್ನು ಬದುಕಿಸಿದ್ದು [ಉತ್ತ. ೭೪, ೭೫]. ರಾಮ ಅಗಸ್ತ್ಯ ಮುನಿಯಿಂದ ಶ್ವೇತರಾಯ, ದಂಡಕರ ವೃತ್ತಾಂತವನ್ನು ತಿಳಿದದ್ದು [ಉತ್ತ. ೭೬, ೭೭, ೭೮]. ರಾಮ ರಾಜಸೂಯಯಾಗ ಮಾಡಬೇಕೆಂದದ್ದು, ಭರತ ನಿಷೇಧಿಸಿದ್ದು. ವೃತ್ರಾಸುರನ ವೃತ್ತಾಂತ, ಲಕ್ಷ್ಮಣ ರಾಮನಿಗೆ ಅಶ್ವಮೇಧಯಾಗ

ಮಾಡುವಂತೆ ಹೇಳಿದ್ದು [ಉತ್ತ. ೮೧-೮೫]. ರಾಮ ಅಶ್ವಮೇಧಯಾಗ ಮಾಡಿದ್ದು [ಉತ್ತ. ೯೦-೯೧]. ರಾಮ ಕುಶ ಲವರಿಂದ ರಾಮಾಯಣವನ್ನು ಕೇಳಿದ್ದು [ಉ. ೯೨-೯೩]. ರಾಮ ಸೀತೆಯನ್ನು ಕಂಡದ್ದು [ಉತ್ತ. ೯೪, ೯೫]. ರಾಮ ಬ್ರಹ್ಮನಿಂದ ಪೂರ್ವವೃತ್ತಾಂತವನ್ನು ತಿಳಿದದ್ದು [ಉ. ೯೭]. ರಾಮ ರಾಜ್ಯಭಾರಮಾಡಿದ್ದು [ಉತ್ತ. ೯೮]. ರಾಮ ಭರತನನ್ನು ಗಂಧರ್ವದೇಶಕ್ಕೆ ಕಳುಹಿದ್ದು [ಉ. ೯೯]. ರಾಮ ಲಕ್ಷ್ಮಣನ ಮಕ್ಕಳಾದ ಅಂಗದ, ಚಂದ್ರಕೇತುಗಳಿಗೆ ತಾರಾಪಥ, ಚಂದ್ರಕಾಂತ ಪಟ್ಟಣಗಳಲ್ಲಿ ರಾಜ್ಯಭಾರಮಾಡುವಂತೆ ನಿಯಮಿಸಿ ಪಟ್ಟಗಟ್ಟಿದ್ದು [ಉತ್ತ. ೧೦೧]. ನೋಡು—ಕುಶ, ಲವ. ಬ್ರಾಹ್ಮಣವೇಷದಿಂದ ತನ್ನಲ್ಲಿಗೆ ಬಂದ ಯಮನ ಸಂಗಡ ರಾಮ ಮಾತನಾಡಿದ್ದು, ಅದೇ ಸಮಯದಲ್ಲಿ ದುರ್ವಾಸ ಮುನಿ ಬಂದ ಸುದ್ದಿಯನ್ನು ಹೇಳಬಂದ ಲಕ್ಷ್ಮಣನಿಗೆ ಶಿಕ್ಷೆಯನ್ನು ವಿಧಿಸಿದ್ದು [ಉತ್ತ. ೧೦೩-೧೦೪]. ರಾಮ ಅವತಾರವನ್ನು ಪೂರ್ತಿಗೊಳಿಸಿದ್ದು [ಉತ್ತ. ೧೦೬]. ರಾಮ ತನ್ನನ್ನು ಹಿಂಬಾಲಿಸಿದ ಪೌರಪರಿವಾರದೊಂದಿಗೆ ಸರಯೂ ನದಿಯನ್ನು ಹೊಕ್ಕು ದೇಹತ್ಯಾಗಮಾಡಿ, ದಿವ್ಯದೇಹದಿಂದ ವೈಕುಂಠವನ್ನು ಸೇರಿದ್ದು [ಉತ್ತ. ೧೦೭-೧೧೯].

**ರಾಮಾವತಾರ ಕಥಾವರ್ಣನೆ.**—(i) [ಭಾರ.-ಸಭಾ. ೫೦. ವನ. ೧೪೯, ೧೫೦. ವಾಯು.-೮೮. ಭಾಗ.-೯-೧೦, ೧೧. ಪದ್ಮ.-೬, ೨೬೨-೨೭೧] ರಾಮನ ಕಥೆಯನ್ನು ಹನೂಮಂತ ಭೀಮನಿಗೆ ಹೇಳಿದ್ದು [ಭಾರ.-ವನ. ೧೪೯].

(ii) ನೋಡು—ಬಲರಾಮ.

**ರಾಮಹ್ರದ.**—ಒಂದು ತೀರ್ಥ [ಭಾರ.-ವನ ೮೧]. ಪರಶುರಾಮ ಕ್ಷತ್ರಿಯರನ್ನು ಸದೆಬಡಿದು ತನ್ನ ಪಿತೃಗಳಿಗೆ ತರ್ಪಣವನ್ನಿತ್ತ ಮಡು. ನೋಡು—ಕುರುಕ್ಷೇತ್ರ.

**ರಾಮೋಪಾಖ್ಯಾನಪರ್ವ.**—[ಭಾರತ-ವನ ೨೭೪-೨೯೩]. ರಾಮ ರಾಜ್ಯಭಾರ ಮಾಡಿದ ಕಾಲಪ್ರಮಾಣ [ರಾಮಾ.-ಯು. ೧೩೧. ಭಾರ.-ಶಾಂತಿ ೨೯]. ಸೀತಾವಿಯೋಗಾನಂತರ ರಾಮ ೧೦೦೦ ವರ್ಷ ರಾಜ್ಯಭಾರಮಾಡಿದ [ರಾಮಾ.-ಉತ್ತ. ೯೮]. ರಾಮಾವತಾರ ೨೪ ನೆಯ ತ್ರೇತಾಯುಗದಲ್ಲಿ ನಡೆಯಿತು [ದೇ.ಭಾಗ.-೪-೧೬. ಮತ್ಸ್ಯ.-೪೮].

ಚತುರ್ವಿಂಶೇ ಯುಗೇ ರಾಮಃ ವಸಿಷ್ಠೇನ ಪುರೋಧಸಾ ।
ಸಪ್ತಮೋ ರಾವಣಸ್ಯಾರ್ಥೇ ಜಜ್ಞೇ ದಶರಥಾತ್ಮಜಃ ॥
[ಮತ್ಸ್ಯ.-೪೭. ಶ್ಲೋ. ೨೪೫].

**ರಾವಣ.**—ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರನಾದ ಪುಲಸ್ತ್ಯ ಮುನಿಯ ಮೊಮ್ಮಗನಾದ ವಿಶ್ರವಸನಿಂದ ಕೈಕಸಿಯೆಂಬಾಕೆ

ಯಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಹಿರಿಯವ. ಕುಂಭಕರ್ಣ, ವಿಭೀಷಣರು ಇವನ ಒಡಹುಟ್ಟಿದವರು [ರಾಮಾ.-ಉತ್ತ. ೯ ಭಾರ.-ವನ. ೨೭೩, ೨೭೪]. ಈಗ ನಡೆ ಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಜನಿಸಿದವ [ಲಿಂಗ.-೬೩]. ಇವ ವಿಶ್ರವಸ ನಿಂದ ಪುಷ್ಪೋತ್ಕಟೆಯೆಂಬವಳಲ್ಲಿ ಜನಿಸಿದವ [ಭಾರ.-ವನ. ೨೭೬]. ಹುಟ್ಟು ವಾಗಲೇ ಇವನಿಗೆ ಹತ್ತು ತಲೆಗಳಿದ್ದುವು. ಅಂಜನಪರ್ವತದಂತೆ ಕರ್ರಗೆ ಇದ್ದ [ಉತ್ತ. ೯]. ರಾವಣ ಗೋಕರ್ಣಕ್ಷೇತ್ರದಲ್ಲಿ ತಪಸ್ಸುಮಾಡಿ, ಮನುಷ್ಯರ ಹೊರತು ಮತ್ತಾರಿಂದಲೂ ತನಗೆ ಮರಣಬಾರದಂತೆ ಬ್ರಹ್ಮನಿಂದ ವರವನ್ನು ಪಡೆದ [ಉತ್ತ. ೧೦]. ಕುಬೇರನನ್ನು ಜಯಿಸಿ ಲಂಕಾ ರಾಜ್ಯವನ್ನು ಕಸುಗೊಂಡು ಲಂಕೆಗೆ ರಾಜನಾದ [ಉತ್ತ. ೧೧]. ಮಯನ ಮಗಳಾದ ಮಂಡೋದರಿಯನ್ನು ಮದುವೆ ಯಾಗಿ ಮೇಘನಾದನೆಂಬ (ಇಂದ್ರಜಿತ್ತು) ತನಯನನ್ನು ಪಡೆದ [ಉತ್ತ. ೧೨]. ದಿಗ್ವಿಜಯಕ್ಕೆ ಹೊರಟು, ಕುಬೇರ ಲೋಕವನ್ನು ಮುತ್ತಿ, ಜಯಿಸಿದ [ಉತ್ತ. ೧೩-೧೫]. ಕೈಲಾಸವನ್ನು ಎತ್ತಿ, ನಂದಿಯನ್ನು ಪರಿಹಾಸಮಾಡಿ, ಕಪಿಗಳ ಮೂಲಕ ತನ್ನ ವಂಶ ಹಾಳಾಗುವಂತೆ ಶಾಪವನ್ನು ಪಡೆದ. ಕೈಲಾಸ ಪರ್ವತವನ್ನು ಎತ್ತುವುದಕ್ಕೆ ಪ್ರಯತ್ನಮಾಡಿದ. ಪರ್ವತ ಇವನ ಮೇಲೆ ಕುಸಿಯಲಾಗಿ, ಆ ಭಾರವನ್ನು ತಡೆಯಲಾರದೆ ಕೂಗಾಡಿ, ಶಿವನಿಂದ ರಾವಣನೆಂಬ ಹೆಸರನ್ನೂ ದಿವ್ಯಖಡ್ಗವನ್ನೂ ದೀರ್ಘಾಯುಷ್ಯವನ್ನೂ ಪಡೆದ [ಉತ್ತ. ೧೬] ಬೃಹಸ್ಪತಿಯ ಮೊಮ್ಮಗಳೂ, ಕುಶಧ್ವಜನ ಪುತ್ರಿಯೂ ಆದ ವೇದವತಿಯನ್ನು ಬಲಾತ್ಕರಿಸಿ, ಆಕೆ ಅಗ್ನಿಪ್ರವೇಶಮಾಡುವಾಗ " ನಾನು ಮತ್ತೊಂದು ಜನ್ಮದಲ್ಲಿ ನಿನ್ನನ್ನು ಕೊಲ್ಲಿಸು ತ್ತೇನೆ " ಎಂಬುದಾಗಿ ಶಾಪವನ್ನು ಪಡೆದ [ಉತ್ತ. ೧೭]. ರಾವಣ ಮರುತ್ತ ರಾಜನ ಯಜ್ಞಶಾಲೆಯನ್ನು ಹೊಕ್ಕು ವಿಘ್ನಮಾಡಿದ್ದು [ಉತ್ತ. ೧೮]. ಸೂರ್ಯ ವಂಶದ ಅನರಣ್ಯ ರಾಜನನ್ನು ಯುದ್ಧದಲ್ಲಿ ಕೊಂದ ಅನರಣ್ಯ ಸಾಯುವಾಗ " ನನ್ನ ವಂಶದಲ್ಲಿ ಅವತರಿಸುವ ದಶರಥಪುತ್ರನಾದ ರಾಮನಿಂದ ನೀನು ಮಡಿಯುವೆ " ಎಂದು ಶಾಪಕೊಟ್ಟ [ಉತ್ತ ೧೯]. ರಾವಣ ಯಮನನ್ನು ಯುದ್ಧದಲ್ಲಿ ಸೋಲಿ ಸಿದ [ಉತ್ತ. ೨೦-೨೨] ವರುಣನನ್ನು ಗೆದ್ದ [ಉತ್ತ ೨೩] ರಾವಣ ದಂಡಕಾರಣ್ಯ ದಲ್ಲಿ ಖರನನ್ನು ನಿಯಮಿಸಿ, ಶೂರ್ಪಣಖೆಯನ್ನೂ, ೧೪ ಸಾವಿರ ಮಂದಿ ರಾಕ್ಷಸ ಸೇನೆಯನ್ನೂ ಅವನೊಂದಿಗೆ ಜನಸ್ಥಾನಕ್ಕೆ ಕಳುಹಿದ [ಉತ್ತ. ೨೪]. ರಾವಣ ಮಧು ದಾನವನೊಂದಿಗೆ ಸ್ನೇಹಮಾಡಿದ್ದು [ಉತ್ತ. ೨೫]. ರಾವಣ ರಂಭೆಯನ್ನು ಬಲಾತ್ಕರಿಸಿ, ನಳಕೂಬರನ ಮೂಲಕ " ಪರಸ್ತ್ರೀಯನ್ನು ಇನ್ನೊಮ್ಮೆ ಬಲಾತ್ಕರಿಸಿ ದಲ್ಲಿ ಅದೇ ನಿನಗೆ ಮೃತ್ಯು " ಎಂದು ಶಾಪಹೊಂದಿದ [ಉತ್ತ. ೨೬]. ರಾವಣ ಇಂದ್ರನೊಂದಿಗೆ ಯುದ್ಧಮಾಡಿ ತನ್ನ ಮಗನಾದ ಮೇಘನಾದನ ಮೂಲಕ ಇಂದ್ರ

ನನ್ನು ಸೆರೆಹಿಡಿಸಿದ [ಉತ್ತ. ೨೮, ೨೯]. ಕಾರ್ತವೀರ್ಯನೊಂದಿಗೆ ಯುದ್ಧಮಾಡ ಹೋಗಿ, ಅವನಿಂದ ಬಂಧನಕ್ಕೆ ಗುರಿಯಾದ ಪುಲಸ್ತ್ಯ ರಾವಣನನ್ನು ಬಿಡಿಸಿದ [ಉತ್ತ. ೩೧-೩೩. ಭಾರ.-ಸಭಾ. ೯೬]. ರಾವಣ ವಾಲಿಯನ್ನು ಇದಿರಿಸಿ, ವಾಲಿಯ ಬಲಕ್ಕೆ ಸೋತು, ಅವನೊಂದಿಗೆ ಸ್ನೇಹಮಾಡಿಕೊಂಡ [ಉತ್ತ. ೩೪]. ರಾವಣ ಅಕಂಪನನೆಂಬ ರಾಕ್ಷಸನ ಮೂಲಕ ರಾಮನಿಂದ ಜನಸ್ಥಾನದಲ್ಲಿ ರಾಕ್ಷಸಸೇನೆ ಹತವಾದ ಸಮಾಚಾರವನ್ನು ತಿಳಿದ ಸೀತೆಯನ್ನು ಅಪಹರಿಸಲು ಮಾರೀಚನ ಸಹಾಯವನ್ನು ಕೇಳಿದ. ಮಾರೀಚ ರಾವಣನಿಗೆ ತಿಳಿಯಹೇಳಲಾಗಿ ರಾವಣ ಲಂಕೆಗೆ ಹಿಂದಿರುಗಿದ [ಅರ. ೩೧]. ಬಳಿಕ ಶೂರ್ಪಣಖಿ ರಾವಣನಲ್ಲಿ ಮೊರೆಯಿಟ್ಟಳು [ಅರ ೩೨-೩೪] ರಾವಣ ಮರಳಿ ಮಾರೀಚನಲ್ಲಿಗೆ ಹೋದದ್ದು, ರಾವಣ ಮಾರೀಚರ ಸಂವಾದ, ಮಾರೀಚ ರಾವಣನಿಗೆ ವಿವೇಕ ಹೇಳಿದ್ದು, ರಾವಣ ಮಾರೀಚನನ್ನು ಜಗ್ಗಿಸಿದ್ದು [ಅರ ೩೫-೪೪] ರಾವಣ ಸೀತೆಯ ಬಳಿಸಾರಿ, ಆಕೆಯ ಸಮಾಚಾರವನ್ನು ತಿಳಿದು, ತನ್ನ ವೃತ್ತಾಂತವನ್ನು ತಿಳಿಸಿ, ಸೀತೆಯನ್ನು ಅಪಹರಿಸಿದ [ಅರ. ೪೬-೪೯]. ಜಟಾಯುವನ್ನು ಸಂಧಿಸಿ, ಅವನನ್ನು ಕೊಂದು ಸೀತೆಯನ್ನು ತಂದು ಲಂಕೆಯಲ್ಲಿರಿಸಿದ [ಅರ. ೫೦-೫೬. ಭಾರ -ವನ ೨೭೯] ಜನಸ್ಥಾನದಲ್ಲಿ ರಾಕ್ಷಸರನ್ನು ಮರಳಿ ಕಾವಲಿಗಾಗಿ ಇರಿಸಿದ [ಅರ ೫೪] ರಾವಣನ ಅರಮನೆಯ ವರ್ಣನೆ [ಸುಂ. ೬-೯]. ರಾವಣನ ದೇಹವರ್ಣನೆ [ಸುಂ. ೧೦]. ರಾವಣನ ಅಶೋಕವನವರ್ಣನೆ [ಸುಂ ೧೪]. ರಾವಣ ಸೀತೆಯನ್ನು ಪ್ರಲೋಭಗೊಳಿಸಲು ಬಂದು ಸೀತೆಯಿಂದ ತಿರಸ್ಕೃತನಾದದ್ದು, ಸೀತೆಯನ್ನು ಹೆದರಿಸಿದ್ದು [ಸುಂ. ೧೮-೨೨]. ರಾವಣ ತ್ರಿಜಟೆಯಿಂದ ದುರ್ನಿಮಿತ್ತಗಳನ್ನು ಕೇಳಿ ತಿಳಿದದ್ದು [ಸುಂ ೨೭]. ಹನೂಮಂತನನ್ನು ಹಿಡಿತರುವುದಕ್ಕಾಗಿ ಜಂಬುಮಾಲಿ, ಸೇನಾಪತಿಗಳು, ಅಕ್ಷಕುಮಾರರನ್ನು ಕಳುಹಿದ್ದು, ಜಂಬುಮಾಲಿ ಮೊದಲಾದವರ ವಧೆ [ಸುಂ. ೪೩-೪೭]. ಮರಳಿ ಹನೂಮಂತನನ್ನು ಹಿಡಿತರಲು ರಾವಣ ಇಂದ್ರಜಿತ್ತನ್ನು ಕಳುಹಿದ್ದು [ಸುಂ. ೪೮] ರಾವಣ ಹನೂಮಂತನನ್ನು ಕಂಡು "ನೀನು ಯಾರು, ಎಲ್ಲಿಂದ ಬಂದೆ?" ಎಂದು ಮುಂತಾಗಿ ಕೇಳಿದ್ದು, ಹನೂಮಂತ ರಾವಣನಿಗೆ ನೀತಿಹೇಳಿದ್ದು [ಸುಂ. ೫೦-೫೧]. ರಾವಣ ಹನೂಮಂತನನ್ನು ಕೊಲ್ಲಹೇಳಿದ್ದು, ದೂತವಧೆ ನ್ಯಾಯವಲ್ಲವೆಂದು ವಿಭೀಷಣ ರಾವಣನಿಗೆ ಹೇಳಿದ್ದು, ಹನೂಮಂತನ ಬಾಲವನ್ನು ಸುಡುವಂತೆ ರಾವಣನ ಅಪ್ಪಣೆ [ಸುಂ. ೫೨, ೫೩]. ರಾವಣನ ಮಂತ್ರಾಲೋಚನೆ [ಯು. ೬-೮] ವಿಭೀಷಣ ರಾವಣನಿಗೆ ನೀತಿಹೇಳಿದ್ದು, ವಿಭೀಷಣನನ್ನು ತಿರಸ್ಕರಿಸಿದ್ದು [ಯು ೯-೧೦] ಕುಂಭಕರ್ಣ ರಾವಣನಿಗೆ ಸಲಹೆ ಕೊಟ್ಟದ್ದು [ಯು, ೧೨]. ಮಹಾಪಾರ್ಶ್ವನೆಂಬ ಪ್ರಧಾನ ಸೀತೆಯನ್ನು ಹಿಂದಕ್ಕೆ

ಕೊಡಬಾರದೆಂದು ಹೇಳಿದ್ದು, ರಾವಣನ ಶಾಪವೃತ್ತಾಂತ [ಯು. ೧೩]. ವಿಭೀಷಣ ಮರಳಿ ವಿವೇಕಹೇಳಿದ್ದು, ರಾವಣ ವಿಭೀಷಣನನ್ನು ಧಿಕ್ಕರಿಸಿದ್ದು [ಯು. ೧೪-೧೬]. ರಾಮನ ಸುಳಿವನ್ನು ತಿಳಿಯುವುದಕ್ಕಾಗಿ ರಾವಣ ಶುಕ ಸಾರಣರೆಂಬ ಗೂಢಚಾರರನ್ನು ಕಳುಹಿಸಿದ್ದು [ಯು ೨೦] ರಾಮ ಲಂಕೆಗೆ ಬಂದ ಸುದ್ದಿ ಕೇಳಿ ರಾವಣನ ಪರಿತಾಪ [ಯು. ೨೪] ಶುಕ ಸಾರಣರು ರಾವಣನಿಗೆ ವಿವೇಕಹೇಳಿದ್ದು [ಯು. ೨೫]. ಶುಕ ಸಾರಣರು ರಾವಣನಿಗೆ ವಾನರಸೇನೆಯನ್ನು ತೋರಿದ್ದು [ಯು ೨೬, ೨೭, ೨೮]. ಗೂಢಚಾರರು ರಾವಣನಿಗೆ ರಾಮನ ಸಾಮರ್ಥ್ಯವನ್ನೂ, ಕಪಿಸೈನಿಕರ ಪರಾಕ್ರಮ ವನ್ನೂ ವರ್ಣಿಸಿದ್ದು [ಯು ೨೯, ೩೦] ರಾವಣ ಸೀತೆಯಲ್ಲಿಗೆ ಹೋಗಿ ರಾಮನನ್ನು ಕೊಂದೆನೆಂದು ಹೇಳಿ ಆಕೆಯನ್ನು ದುಃಖಪಡಿಸಿದ್ದು [ಯು. ೩೧]. ಮಾಲ್ಯವಂತ ರಾವಣನಿಗೆ ನೀತಿಹೇಳಿದ್ದು, ರಾವಣ ಲಂಕೆಯನ್ನು ಭದ್ರಪಡಿಸಿದ್ದು [ಯು. ೩೫, ೩೬]. ರಾವಣ ಸುಗ್ರೀವರ ದ್ವಂದ್ವಯುದ್ಧ [ಯು ೪೦]. ರಾವಣ ಯುದ್ಧಕ್ಕೆ ಸನ್ನಾಹ ಮಾಡಿಕೊಂಡದ್ದು [ಯು ೪೨] ರಾವಣ ಧೂಮ್ರಾಕ್ಷನನ್ನು ಯುದ್ಧಕ್ಕೆ ಕಳು ಹಿದ್ದು, ಧೂಮ್ರಾಕ್ಷ ಹನೂಮಂತನಿಂದ ಮಡಿದದ್ದು [ಯು ೫೧, ೫೨]. ರಾಮ ರಾವಣರ ಮೊದಲನೆಯ ಯುದ್ಧ [ಯು. ೫೯]. ರಾವಣ ಕುಂಭಕರ್ಣನನ್ನು ಎಬ್ಬಿಸಿ ಯುದ್ಧಕ್ಕೆ ಪ್ರೋತ್ಸಾಹಗೊಳಿಸಿದ್ದು, ಕುಂಭಕರ್ಣನ ಹಿತೋಪದೇಶ [ಯು. ೬೦, ೬೨, ೬೩] ರಾವಣ ಕುಂಭಕರ್ಣನ ಕೊಲೆಗಾಗಿ ಹಂಬಲಿಸಿದ್ದು [ಯು ೬೮]. ರಾವಣ ಅತಿಕಾಯನಿಗಾಗಿ ಮರುಗಿದ್ದು [ಯು. ೭೨] ರಾವಣ ಇಂದ್ರಜಿತ್ತಗಾಗಿ ಪ್ರಲಾಪಿ ಸಿದ್ದು [ಯು ೯೩] ರಾವಣ ಮರಳಿ ಯುದ್ಧಕ್ಕೆ ಹೊರಟದ್ದು [ಯು. ೯೬]. ರಾಮ ರಾವಣರ ಯುದ್ಧ [ಯು. ೧೦೦]. ರಾವಣ ಶಕ್ತ್ಯಾಯುಧದಿಂದ ಲಕ್ಷ್ಮಣನನ್ನು ಮೂರ್ಛೆಕೆಡವಿದ್ದು [ಯು. ೧೦೧]. ರಾಮ ರಾವಣರ ಯುದ್ಧ, ರಾವಣ ರಾಮ ನನ್ನು ನಿಂದಿಸಿದ್ದು, ರಾವಣ ತನ್ನ ಸಾರಥಿಯನ್ನು ನಿಂದಿಸಿದ್ದು [ಯು. ೧೦೪-೧೦೬]. ರಾವಣನಿಗೆ ಅಪಶಕುನಗಳಾದದ್ದು [ಯು. ೧೦೮] ರಾಮ ರಾವಣರ ಕೊನೆಯ ಯುದ್ಧ [ಯು. ೧೦೯]. ರಾವಣನ ತಲೆಗಳು ಮರಳಿ ಮರಳಿ ಹುಟ್ಟುತ್ತಬಂದದ್ದು, ರಾವಣ ಮಡಿದುಬಿದ್ದದ್ದು [ಯು. ೧೧೦, ೧೧೧ ಭಾರ -ವನ. ೨೯೧. ಸಭಾ. ೫೦. ದ್ರೋ ೫೯]. ರಾವಣನಿಗಾಗಿ ವಿಭೀಷಣ ಹಂಬಲಿಸಿದ್ದು [ಯು ೧೧೨]. ಮಂಡೋ ದರಿ ಮೊದಲಾದ ಅಂತಃಪುರಸ್ತ್ರೀಯರು ರಾವಣನಿಗಾಗಿ ಪ್ರಲಾಪಿಸಿದ್ದು [ಯು. ೧೧೩]. ರಾವಣನ ಶವಸಂಸ್ಕಾರ [ಯು. ೧೧೪].

**ರಾಷ್ಟ್ರಗೋಪನಪ್ರಕಾರ.**—ರಾಷ್ಟ್ರವನ್ನು ಕಾಪಾಡುವ ರೀತಿ [ಶಾಂತಿ. ೮೭].

**ರಾಷ್ಟ್ರವರ್ಧನ.**—ದಶರಥನ ಆಸ್ಥಾನದಲ್ಲಿದ್ದ ಎಂಟು ಮಂದಿ ಪ್ರಧಾನರಲ್ಲಿ ಒಬ್ಬ. ನೋಡು—ದಶರಥ.

**ರಾಹು.**—ಒಬ್ಬ ರಾಕ್ಷಸ. ಸಿಂಹಿಕೆಯ ಮಗ. ನೋಡು—ಕೇತು. ನವಗ್ರಹ ಗಳಲ್ಲಿ ಎಂಟನೆಯವ [ಭಾರ.-ಆದಿ ೬೬. ಸಭಾ. ೧೧. ಭೀ. ೧೨]. ರಾಹು ಕೇತುಗಳು ಮೇರುಪರ್ವತವನ್ನು ಅಪ್ರದಕ್ಷಿಣವಾಗಿ ಸುತ್ತುತ್ತಾರೆ. ವಿಷ್ಣು ಇವನ ತಲೆಯನ್ನು ಕತ್ತರಿಸಿದ್ದು [ಆದಿ. ೧೯ ಮತ್ಸ್ಯ.-೨೫೧ ಭಾಗ.-೮, ೭-೯].

**ರಿಪುಂಜಯ.**—ಜರಾಸಂಧನ ವಂಶದಲ್ಲಿ ಜನಿಸಿದ ವಿಶ್ವಜಿತನೆಂಬ ರಾಜನ ಮಗ. ಇವನಿಗೆ ಪುರಂಜಯನೆಂಬುದು ನಾಮಾಂತರ. ಪೂರು ವಂಶ ಈತನೊಂದಿಗೆ ನಷ್ಟವಾಯಿತು. ಬಳಿಕ ಪ್ರದ್ಯೋತನ ವಂಶದವರು ೧೩೮ ವರ್ಷ ರಾಜ್ಯಭಾರಮಾಡಿದ ತರುವಾಯ ಶಿಶುನಾಗನ ವಂಶದವರು ೩೬೦ ವರ್ಷಗಳವರೆಗೆ ಆಳಿದರು. ಆ ಮುಂದೆ ಮೌರ್ಯ ವಂಶದ ಅರಸರು ೧೩೭ ವರ್ಷಗಳು ಆಳಿದರು ಅನಂತರ ಶುಂಗ ವಂಶದವರು ೧೧೨ ವರ್ಷಗಳೂ ಅವರ ಬಳಿಕ ಕಾಣ್ವ ವಂಶದವರು ೩೪೫ ಸಂವತ್ಸರಗಳೂ ರಾಜ್ಯಭಾರಮಾಡಿದರು. ಆ ಮುಂದೆ ಕ್ಷತ್ರಿಯ ವಂಶ ನಿರ್ಮೂಲವಾಯಿತು [ಭಾಗ.-೧೨-೧].

**ರುಕ್ಮಕೇತ, ರುಕ್ಮಬಾಹು, ರುಕ್ಮಮಾಲ, ರುಕ್ಮರಥ** —(i) ಈ ನಾಲ್ವರೂ ವಿದರ್ಭ ದೇಶಾಧಿಪತಿಯಾದ ಭೀಷ್ಮಕ ರಾಜನ ಮಕ್ಕಳು. ರುಕ್ಮಿಣಿಯ ಸಹೋದರರು. ದ್ರೌಪದೀಸ್ವಯಂವರ ಕಾಲದಲ್ಲಿ ಇವರೆಲ್ಲರೂ ದ್ರುಪದ ನಗರಿಗೆ ಹೋಗಿದ್ದರು. ರುಕ್ಮಿ ಇವರ ಅಣ್ಣ [ಭಾಗ.-೧೦-೫೨].

(ii) ದ್ರೋಣಾಚಾರ್ಯನ ರಥ ಚಿನ್ಹದ್ದು. ಆದ್ದರಿಂದ ಈ ಹೆಸರು ಆತನಿಗೂ ಸಲ್ಲುತ್ತದೆ [ಭಾರ.-ದ್ರೋ. ೧೩]

(iii) ಮದ್ರ ದೇಶಾಧಿಪತಿಯಾದ ಶಲ್ಯ ರಾಜನ ಹಿರಿಯ ಮಗ. ಇವನಿಗೆ ೯ ಮಂದಿ ಒಡಹುಟ್ಟಿದವರು [ಭಾರ.-ಆ. ೨೦೧. ಭೀ. ೪೭]. ಇವರೆಲ್ಲರೂ ಕೌರವನ ಪಕ್ಷವನ್ನು ಹಿಡಿದು ಹೋರಾಡಿದರು. ಕೆಲವರು ಹನ್ನೆರಡನೆಯ ದಿನದ ಯುದ್ಧದಲ್ಲಿ ಅಭಿಮನ್ಯುವಿನಿಂದ ಮಡಿದರು [ಭಾರ.-ದ್ರೋ. ೪೫] ಮತ್ತೆ ಕೆಲವರು ಸಹದೇವನಿಂದ ಹತರಾದರು [ಭಾರ.-ಕರ್ಣ. ೨]

**ರುಕ್ಮವತಿ.**—ರುಕ್ಮಿಯ ಮಗಳು. ಪ್ರದ್ಯುಮ್ನನ ಹೆಂಡತಿ. ನೋಡು—ಪ್ರದ್ಯುಮ್ನ, ರುಕ್ಮಿ

**ರುಕ್ಮಿಣಿ.**—ವಿದರ್ಭ ದೇಶಾಧಿಪತಿಯಾದ ಭೀಷ್ಮಕ ರಾಜನ ಮಗಳು. ನೋಡು —ರುಕ್ಮಕೇಶ. ಶ್ರೀ ಕೃಷ್ಣನ ಹಿರಿಯ ರಾಣಿ ರುಕ್ಮಿಣಿಯ ಅಣ್ಣನಾದ ರುಕ್ಮಿಯ ಹೊರತು ಮಿಕ್ಕವರೆಲ್ಲರೂ ರುಕ್ಮಿಣಿಯನ್ನು ಕೃಷ್ಣನಿಗೇ ಕೊಟ್ಟು ಮದುವೆಮಾಡ ಬೇಕೆಂದಿರುವಲ್ಲಿ, ರುಕ್ಮಿ ಮಾತ್ರ ಇವಳನ್ನು ಶಿಶುಪಾಲನಿಗೆ ಕೊಡಬೇಕೆಂದು ಹಠ ಹಿಡಿದಿದ್ದ. ಆಗ ರುಕ್ಮಿಣಿ ತನ್ನ ದುರವಸ್ಥೆಯನ್ನು ಒಬ್ಬ ಬ್ರಾಹ್ಮಣನ ಮೂಲಕ

ಕೃಷ್ಣನಿಗೆ ಹೇಳಿಕಳುಹಿದಳು. ಕೃಷ್ಣ ಅಲ್ಲಿಂದ ಹೊರಟುಬಂದು ಗೌರೀಪೂಜೆಗಾಗಿ ಬಂಧುಪರಿವಾರದೊಂದಿಗೆ ಊರಹೊರಗೆ ಗುಡಿಗೆ ಬರುತ್ತಿದ್ದ ರುಕ್ಮಿಣಿಯನ್ನು ಅಪಹರಿಸಿ ಕರೆದುಯ್ದು ಮದುವೆಯಾದದ್ದು [ಭಾಗ.-೧೦-೫೩, ೫೪. ವಿಷ್ಣು.-೫-೨೬. ಹರಿ.-೨-೫೯]. ರುಕ್ಮಿಣಿ ಕೃಷ್ಣನೊಂದಿಗೆ ಪ್ರೇಮಕಲಹ ಮಾಡಿದ್ದು [ಭಾಗ.-೧೦-೬೦]. ಪ್ರದ್ಯುಮ್ನ ಈಕೆಯ ಮಗ [ಭಾಗ.-೧೦-೫೫. ಹರಿ.-೨-೬೦. ವಿಷ್ಣು.-೫-೨೬]. ಶ್ರೀ ಕೃಷ್ಣನ ಮೂಲಕ ರುಕ್ಮಿಣಿಯಲ್ಲಿ ಚಾರುಮತಿಯೆಂಬ ಒಬ್ಬ ಮಗಳು ಹುಟ್ಟಿದಳು. ಕೃತವರ್ಮನ ಮಗನಾದ ಬಲಿಯೆಂಬವ ಇವಳನ್ನು ಮದುವೆಯಾದ [ಭಾಗ -೧೦-೬೧. ವಿಷ್ಣು.-೫-೮]. ರುಕ್ಮಿಣಿ ಮಹಾಲಕ್ಷ್ಮಿಯಿಂದ ಆಕೆಯ ವಾಸ ಮಾಡುವ ಸ್ಥಳಗಳನ್ನು ಕೇಳಿ ತಿಳಿದದ್ದು [ಭಾರ.-ಅನು. ೩೨]. ರುಕ್ಮಿಣಿ ತನ್ನ ವಿವಾಹವೃತ್ತಾಂತವನ್ನು ದ್ರೌಪದಿಗೆ ವಿವರಿಸಿ ಹೇಳಿದ್ದು [ಭಾಗ.-೧೦-೮೩]. ಕೃಷ್ಣ ನಿರ್ಯಾಣಾನಂತರ ರುಕ್ಮಿಣಿ ಅಗ್ನಿಪ್ರವೇಶಮಾಡಿದ್ದು [ಮೌಸ ೮].

**ರುಕ್ಮಿ.**—ಭೀಷ್ಮಕ ರಾಜನ ಹಿರಿಯಮಗ. ನೋಡು—ರುಕ್ಮಿಣಿ [ಭಾರ.-ಆ. ೬೮. ವನ. ೨೫೫. ಹರಿ.-೨-೫೯]. ಇವ ಕೃಷ್ಣನಿಂದ ಭಂಗಪಟ್ಟದ್ದು [ಭಾಗ.-೧೦-೫೪]. ಇವನ ಮಗಳಾದ ರುಕ್ಮವತಿಯೆಂಬವಳು ರುಕ್ಮಿಣಿಯ ಮಗನಾದ ಪ್ರದ್ಯುಮ್ನನನ್ನು ಮದುವೆಯಾದಳು. ರುಕ್ಮವತಿಗೆ ಶುಭಾಂಗಿಯೆಂಬುದು ನಾಮಾಂತರ [ಭಾಗ.-೧೦-೬೧. ಹರಿ.-೨-೬೧]. ರುಕ್ಮಿ ಭಾರತ ಯುದ್ಧಾರಂಭದಲ್ಲಿ ಕುರುಕ್ಷೇತ್ರಕ್ಕೆ ಹೋಗಿ ಪಾಂಡವರನ್ನು ಸೇರಿ ಅವರಿಗೆ ಸಹಾಯಮಾಡುವುದಾಗಿ ಹೇಳಿದ. ಪಾಂಡವರು ಇವನ ಒತ್ತಾಸೆಯನ್ನು ಒಲ್ಲೆವೆಂದರು. ಬಳಿಕ ದುರ್ಯೋಧನನಲ್ಲಿಗೆ ಹೋಗಿ ಅವನಿಂದಲೂ ತಿರಸ್ಕೃತನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದ [ಭಾರ.-ಉ. ೧೫೮]. ರುಕ್ಮಿ ಬಲರಾಮನೊಂದಿಗೆ ಪಗಡೆಯಾಡಿ, ಸೋತು, ತಾನೇ ಗೆದ್ದವನೆಂದು ಹೆಮ್ಮೆ ಹೇಳಿಕೊಂಡ. ಇದರಿಂದ ಕ್ರುದ್ಧನಾದ ಬಲರಾಮ ಮರಳಿ ಹತ್ತು ಕೋಟಿ ದ್ರವ್ಯವನ್ನು ಒಡ್ಡಿ ಆಡಿದ. ಆಗಲೂ ಬಲರಾಮನೇ ಗೆದ್ದ. ಆದರೂ ರುಕ್ಮಿ ಮಾತ್ರ ತಾನೇ ಗೆದ್ದವನೆಂದು ಮರಳಿ ಕೊಚ್ಚಿಕೊಂಡ. ಆಗ ಆಕಾಶವಾಣಿ "ಬಲರಾಮ ಧರ್ಮದಿಂದ ಈ ಪಣವನ್ನು ಗೆದ್ದ" ಎಂದು ನುಡಿಯಿತು. ಅಲ್ಲಿಗೂ ರುಕ್ಮಿ ಸುಮ್ಮನಾಗದೆ ಬಲರಾಮನನ್ನು ನಾನಾ ಪರಿಯಿಂದ ಜರಿದು ಮಾತನಾಡಲಾಗಿ, ಕ್ರುದ್ಧನಾದ ಬಲರಾಮ ರುಕ್ಮಿಯನ್ನು ಕೊಂದು, ಅವನ ಒತ್ತಾಸೆಗೆ ಬಂದ ಅರಸರಿಗೆಲ್ಲ ಶಿಕ್ಷೆಮಾಡಿದ [ಭಾಗ.-೧೦, ೬೧].

**ರುಚಿ.**—ಅಂಗ ದೇಶಾಧಿಪತಿಯಾದ ಚಿತ್ರರಥನೆಂಬ ರಾಜನ ಪತ್ನಿಯಾದ ಪ್ರಭಾವತಿಯ ಒಡಹುಟ್ಟಿದವಳು. ದೇವಶರ್ಮನೆಂಬ ಬ್ರಾಹ್ಮಣ ಈಕೆಯನ್ನು ಮದುವೆಯಾಗಿದ್ದ. ಈಕೆಯ ರೂಪಕ್ಕೆ ಮರುಳಾದ ಇಂದ್ರ ಬಹಳ ಕಾಲದಿಂದಲೂ ಹೊಂಚು

ಹಾಕುತ್ತಿದ್ದ ಒಮ್ಮೆ ದೇವಶರ್ಮ ಯಜ್ಞಾರ್ಥವಾಗಿ ಹೊರಟಾಗ ತನ್ನ ಶಿಷ್ಯನಾದ ವಿಪುಲನೆಂಬವನನ್ನು ರುಚಿಯ ಮೈಗಾವಲಿಗಾಗಿ ನಿಯಮಿಸಿದ ವಿಪುಲ ಯೋಗ ಬಲದಿಂದ ತನ್ನ ದೇಹವನ್ನು ಬಿಟ್ಟು ರುಚಿಯ ದೇಹವನ್ನು ಹೊಕ್ಕು ಆಕೆಯ ಮನೋವೃತ್ತಿಯನ್ನು ಸ್ತಿಮಿತಗೊಳಿಸುತ್ತಿದ್ದ. ಅಷ್ಟರಲ್ಲಿ ಇಂದ್ರ ಅಲ್ಲಿಗೆ ಬಂದು ವಿಪುಲನ ದೇಹ ಅಲುಗಾಡದಿದ್ದುದನ್ನು ಕಂಡು, ವಿಪುಲ ಗಾಢನಿದ್ರೆಯಲ್ಲಿರುವ ನೆಂದು ತಿಳಿದು, ರುಚಿಯ ಸಂಗಡ ಸರಸೋಕ್ತಿಗಳನ್ನಾಡಲಾರಂಭಿಸಿದ. ರುಚಿಯ ದೇಹದಲ್ಲಿದ್ದ ವಿಪುಲ ಇಂದ್ರನನ್ನು ತಿರಸ್ಕರಿಸಿ ಮಾತನಾಡಿದ ಇಂದ್ರ ತನ್ನ ಸರ ಸೋಕ್ತಿಗಳನ್ನು ಮತ್ತಷ್ಟು ಹೆಚ್ಚಿಸಿದ. ಆಗ ವಿಪುಲ ಕೂಡಲೇ ತನ್ನ ದೇಹ ವನ್ನು ಪ್ರವೇಶಿಸಿ, ಇಂದ್ರನನ್ನು ಗದ್ದರಿಸಿದ ಇಂದ್ರ ವಿಪುಲನ ಯೋಗಶಕ್ತಿಯನ್ನೂ ತಪಃಪ್ರಭಾವವನ್ನೂ ಕಂಡು ಹೆದರಿ ಅಲ್ಲಿಂದ ಮಾಯವಾದ [ಭಾರ.-ಅನು. ೭೫].

**ರುಚಿಪರ್ವ** —ಒಬ್ಬ ಅರಸು ಕೌರವ ಪಕ್ಷದಲ್ಲಿ ನಿಂತು ಹೋರಾಡಿ ಹನ್ನೆರಡ ನೆಯ ದಿನದ ಯುದ್ಧದಲ್ಲಿ ಪರ್ವತ ರಾಜನಾದ ಸುಪರ್ವನಿಂದ ಮಡಿದ [ದ್ರೋ. ೨೬].

**ರುದ್ರ**.—ಕಲ್ಪಾದಿಯಲ್ಲಿ ಬ್ರಹ್ಮನ ಭ್ರೂಮಧ್ಯದಿಂದ ಜನಿಸಿದವ ಇವ ಹುಟ್ಟು ತ್ತಲೇ ಅಳುತ್ತಿದ್ದನಾಗಿ ರುದ್ರನೆಂದು ಹೆಸರು. ಈ ರುದ್ರರು ಹನ್ನೊಂದು ಮಂದಿ. ಇವರ ಹೆಸರುಗಳು ಕಲ್ಪಭೇದದಿಂದ ಭಿನ್ನಭಿನ್ನವಾಗಿವೆ ನೋಡು—ಏಕಾದಶರುದ್ರ [ಲಿಂಗ.-೬೩. ವಿಷ್ಣು.-೧-೮, ೧೫. ಭಾಗ.-೬-೬ ಹರಿ.-೧-೩. ಭಾರ -ಆದಿ. ೬೬, ೧೩೨. ಶಾಂತಿ. ೨೦೭. ಅನು ೨೫೫]

**ರುದ್ರಸಾವರ್ಣಿ** —೧೪ ಮಂದಿ ಮನುಗಳಲ್ಲಿ ೧೨ ನೆಯವ ನೋಡು—ಮನು, ಮನ್ವಂತರ. ಈತನ ಆಧಿಪತ್ಯ ಇನ್ನೂ ನಡೆಯಲಿಲ್ಲ ಈತನ ರಾಜ್ಯಭಾರಕಾಲ ದಲ್ಲಿ ಸ್ವರ್ಗದಲ್ಲಿ ಋತಧಾಮನೆಂಬ ಹೆಸರಿನ ಇಂದ್ರನೂ, ಆತನ ಸಹಾಯಾರ್ಥವಾಗಿ ಸ್ವಧಾಮನೆಂಬ ವಿಷ್ಣುವೂ ರಾಜ್ಯಭಾರಮಾಡುವರು [ಭಾಗ.-೮-೧೩. ಮತ್ಸ್ಯ - ೯. ಲಿಂಗ.-೧೦೧. ವಿಷ್ಣು.-೩-೧]

**ರುಮಣ್ವಂತ** —ಜಮದಗ್ನಿ ಮಹರ್ಷಿಯಿಂದ ರೇಣುಕೆಯಲ್ಲಿ ಜನಿಸಿದ ಹಿರಿಯ ಮಗ. ಸುಷೇಣ, ವಸು, ವಿಶ್ವಾವಸು, ಪರಶುರಾಮ ಈ ನಾಲ್ಕು ಮಂದಿಯೂ ಇವನ ಸಹೋದರರು ನೋಡು—ಜಮದಗ್ನಿ [ಭಾರ.-ವನ. ೧೧೭].

**ರುಮಾ**.—ತಾರನೆಂಬ ವಾನರನ ಮಗಳು. ಸುಗ್ರೀವನ ಹೆಂಡತಿ. ನೋಡು—ಸುಗ್ರೀವ.

**ರುರು**.—ಚ್ಯವನ ಮುನಿಪುತ್ರನಾದ ರುರು ಎಂಬವನಿಂದ ಘೃತಾಚಿಯೆಂಬ ಅಪ್ಸರಸಿಯಲ್ಲಿ ಜನಿಸಿದವ. ನೋಡು—ಪ್ರಮದ್ವರಾ, ಡುಂಡುಭ. ಈತನ ಮಗ

ಶುನಕ ಮಹರ್ಷಿ [ಭಾರ.-ಆ. ೮, ೫೮. ಅನು. ೮] ರುರು ಮಹರ್ಷಿಯ ವಿವಾಹ [ಭಾರ.-ಆದಿ. ೯]. ಡುಂಡುಭದೊಂದಿಗೆ ಸಂವಾದ [ಭಾರ -ಆ. ೧೦-೧೨]

**ರೇಣು(ಕ).**—ನೋಡು—ಪ್ರಸೇನಜಿತ್, ರೇಣುಕಾ.

**ರೇಣುಕಾ.**—ಜಮದಗ್ನಿ ಮಹರ್ಷಿಯ ಹೆಂಡತಿ ಪ್ರಸೇನಜಿತನೆಂಬ ಅರಸನ ಮಗಳು [ಭಾರ.-ವನ. ೧೧೭]. ಈಕೆ ಕಮಲದಿಂದ ಜನಿಸಿದವಳು. ಅಯೋನಿಜೆ. ಪ್ರಸೇನಜಿತ ಈಕೆಯ ಸಾಕುತಂದೆ [ಅನು. ೫೩]. ರೇಣುಕೆ ಇಕ್ಷ್ವಾಕು ವಂಶದ ರೇಣು ರಾಜನ ಮಗಳು [ಭಾಗ -೯-೧೫ ಹರಿ.-೧-೨೭]. ಇವಳು ಸುವೇಣುವೆಂಬ ಮುನಿಯ ಮಗಳು. ಈಕೆಗೆ ಕಾಮಲಿಯೆಂಬುದು ನಾಮಾಂತರ [ವಾಯು.-೯೧]. ಈಕೆ ಹೆಂಗಸರೊಂದಿಗೆ ಗಂಗಾ ನದಿಗೆ ನೀರು ತರುವುದಕ್ಕೆ ಹೋಗಿ, ಅಲ್ಲಿ ದಿವ್ಯ ಮಾಲ್ಯಾಂಬರಧಾರಿಯಾಗಿ ತನ್ನ ಮಡದಿಯರ ಸಂಗಡ ಜಲಕ್ರೀಡೆಯಾಡುತ್ತಿದ್ದ ಚಿತ್ರರಥನೆಂಬ ಗಂಧರ್ವನನ್ನು ಕಂಡು ಮೋಹಪರವಶಳಾಗಿ, ಪತಿಯ ಹೋಮ ಕಾಲವನ್ನು ಮರೆತು ಅಲ್ಲಿಯೇ ತುಂಬ ಹೊತ್ತು ಕಳೆದು ಆಶ್ರಮಕ್ಕೆ ಹೋದಳು. ಕ್ರುದ್ಧನಾದ ಜಮದಗ್ನಿ ಇವಳ ಪಾತಿವ್ರತ್ಯಕ್ಕೆ ಭಂಗವಾಯಿತೆಂದು ತಿಳಿದು ಶಿರಶ್ಛೇದ ಶಿಕ್ಷೆಗೆ ಗುರಿಪಡಿಸಿದ. ಹಿರಿಯರು ನಾಲ್ಕು ಮಂದಿ ಪುತ್ರರೂ ಆ ಕಾರ್ಯವನ್ನು ನಿರ್ವಹಿಸುವುದಕ್ಕೆ ಸಮ್ಮತಿಸಲಿಲ್ಲ. ಜಮದಗ್ನಿ ಅವರನ್ನೂ ರೇಣುಕೆಯನ್ನೂ ಕೊಲ್ಲು ವಂತೆ ಪರಶುರಾಮನಿಗೆ ಹೇಳಿದ. ಆಗ ಪರಶುರಾಮ ತಂದೆಯ ಮಾತಿನಪ್ರಕಾರ ಇವಳನ್ನೂ ನಾಲ್ವರು ಅಣ್ಣಂದಿರನ್ನೂ ಕೊಂದು, ಮರಳಿ ಸಂತುಷ್ಟನಾದ ಜಮ ದಗ್ನಿಯ ವರದಿಂದ ಎಲ್ಲರನ್ನೂ ಬದುಕಿಸಿಕೊಂಡ [ಭಾರ.-ವನ. ೧೧೭. ಭಾಗ -೯- ೧೬]. ನೋಡು—ಕಾರ್ತವೀರ್ಯ, ಜಮದಗ್ನಿ, ಪರಶುರಾಮ. ಒಮ್ಮೆ ಈಕೆ ಬಿಸಿಲಿ ನಲ್ಲಿ ನಡೆಯಲಾರದೆ ಕಷ್ಟಪಡುತ್ತಿದ್ದಾಗ ಭೃಗು ಮಹರ್ಷಿ ಈಕೆಗಾಗಿ ಪಾದುಕೆ ಗಳನ್ನೂ ಛತ್ರವನ್ನೂ ನಿರ್ಮಿಸಿದ [ಭಾರ -ಅನು. ೧೪೪].

**ರೇಣುಕಾತೀರ್ಥ.**—ಇದು ಪಂಜಾಬಿನಲ್ಲಿ ನಹಾ (Nahan) ಎಂಬ ಪಟ್ಟ ಣಕ್ಕೆ ಉತ್ತರದಲ್ಲಿ ಸುಮಾರು ೧೬ ಮೈಲುಗಳ ದೂರದಲ್ಲಿದೆ [ವನ. ೮೦, ೮೩].

**ರೇಣುಮತಿ**—ಶಿಶುಪಾಲನ ಮಗಳು ಪಾಂಡು ಪುತ್ರನಾದ ನಕುಲನನ್ನು ಮದುವೆಯಾಗಿ ನಿರಮಿತ್ರನೆಂಬ ಮಗನನ್ನು ಪಡೆದಳು. ಇವಳಿಗೆ ಕರೇಣುಮತಿ ಯೆಂಬುದು ನಾಮಾಂತರ [ಭಾರ.-ಆದಿ. ೬೩].

**ರೇವತ.**—ನೋಡು—ಕುಕುದ್ಮಿ.

**ರೇವತಿ.**—(i) ಬಲರಾಮನ ಹೆಂಡತಿ. ನೋಡು—ಕುಕುದ್ಮಿ.

(ii) ದಕ್ಷಬ್ರಹ್ಮನ ಮಗಳು. ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು [ವಿಷ್ಣು.-೧-೧೫. ಭಾರ.-ಆದಿ. ೬೭].

(iii) ಒಂದು ನಕ್ಷತ್ರ. ನೋಡು—ದಕ್ಷ.

**ರೇವಾ.**—ನರ್ಮದಾ ನದಿಯ ನಾಮಾಂತರ.

**ರೈಭ್ಯ.**—ವಿಶ್ವಾಮಿತ್ರ ಬ್ರಹ್ಮರ್ಷಿಯಾದ ತರುವಾಯ ಜನಿಸಿದವ. ಭರದ್ವಾಜನೆಂಬ ಮುನಿಯ ಆಪ್ತಸ್ನೇಹಿತ. ಇವನಿಗೆ ಅರ್ವಾವಸು, ಪರಾವಸು ಎಂಬವರು ಇಬ್ಬರು ಪುತ್ರರು [ಭಾರ.-ವನ. ೧೩೭. ಸ. ೪. ಶಾಂತಿ. ೪೮]. ಯುಧಿಷ್ಠಿರ ತೀರ್ಥ ಯಾತ್ರೆ ಹೊರಟಿದ್ದಾಗ ಈತನ ಆಶ್ರಮಕ್ಕೆ ಹೋಗಿದ್ದ [ಭಾರ -ವನ. ೧೩೭]. ಈತನ ಮಗನಾದ ಪರಾವಸು ಜಿಂಕೆಯೆಂಬ ಭ್ರಾಂತಿಯಿಂದ ರೈಭ್ಯ ಮುನಿಯನ್ನು ಕೊಂದು ಮರಳಿ ಬದುಕಿಸಿದ ನೋಡು—ಯವಕ್ರೀತ [ಭಾರ.-ವನ. ೧೪೦].

**ರೈವತ.**—ಒಂದು ಪರ್ವತ. ದ್ವಾರಕೆಯ ಸಮೀಪದಲ್ಲಿದೆ. ಅರ್ಜುನ ತೀರ್ಥ ಯಾತ್ರೆಗೆ ಹೊರಟಾಗ ಇಲ್ಲಿಗೆ ಬಂದು ಸುಭದ್ರಾವಿವಾಹದ ಸುದ್ದಿಯನ್ನು ಕೇಳಿ ಕೃಷ್ಣ ನನ್ನು ಅಲ್ಲಿಗೆ ಬರಮಾಡಿಕೊಂಡು, ಅತನ ಸೂಚನೆಯ ಮೇರೆಗೆ ತ್ರಿದಂಡಿ ಸನ್ಯಾಸ ವನ್ನು ಗ್ರಹಿಸಿದ. ಆಗ ಬಲರಾಮ ಅರ್ಜುನನನ್ನು ಇಲ್ಲಿಂದಲೇ ತನ್ನ ಅರಮನೆಗೆ ಕರೆದುಯ್ದ [ಭಾರ.-ಆದಿ. ೨೩೮, ೨೩೯]. ಉದಂಕ ಮುನಿಗೆ ವರಪ್ರದಾನಮಾಡಿ ಹಿಂದಿರುಗುವಾಗ ಕೃಷ್ಣ ಇಲ್ಲಿಗೆ ಹೋಗಿದ್ದ [ಅಶ್ವ. ೫೯].

**ರೈವತಕ.**—ಒಂದು ಪರ್ವತ. ಇದು ಗುಜರಾತಿನಲ್ಲಿ ಜುನಾಗರ್ (Junagar) ಪಟ್ಟಣಕ್ಕೆ ಸಮೀಪದಲ್ಲಿ ಗಿರ್‌ನಾರ್ (Girnaur) ಎಂಬ ಹೆಸರಿನಿಂದ ಪ್ರಸಿದ್ಧಿಪಡೆದಿದೆ [ಭಾರ.-ಭೀ. ೧೧].

**ರೋಚನಾ.**—ನೋಡು—ರುಕ್ಮಿ [ಭಾಗ.-೧೦-೬೧].

**ರೋಚಮಾನ.**—(i) ಒಬ್ಬ ಅರಸು. ಉರಗಪುರಿಯ (ನಾಗಪಟ್ಟಣದ) ಅರಸು. ರಾಜಸೂಯ ಯಾಗಕ್ಕೆ ಮೊದಲು ಅರ್ಜುನನಿಂದ ಸೋತ [ಭಾರ.-ಸ. ೨೮].

(ii) ಚೇದಿ ವಂಶದ ಅರಸು. ಅಶ್ವಮೇಧಪುರ ಇವನ ರಾಜಧಾನಿ [ಭಾರ.-ಆದಿ. ೬೮, ೨೦೧]. ರಾಜಸೂಯಕ್ಕೆ ಮೊದಲು ಭೀಮನಿಂದ ಸೋತ [ಭಾರ.-ಸ. ೩೦]. ಇವ ಭಾರತ ಯುದ್ಧದಲ್ಲಿ ಪಾಂಡವರ ಕಡೆ ಸೇರಿದ್ದ [ಭಾರ.-ಉದ್ಯೋ. ೧೭೨]. ಈತನಿಗೆ ಹೇಮವರ್ಣನೆಂಬ ಮಗನಿದ್ದ [ದ್ರೋ. ೨೩]. ರೋಚಮಾನ ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಭಾರ.-ಕರ್ಣ.-೫೧].

**ರೋಮಪಾದ.**—ಚಂದ್ರ ವಂಶದ ಅರಸು. ದಶರಥನ ಸ್ನೇಹಿತ. ಲೋಮಪಾದ ನೆಂಬುದು ನಾಮಾಂತರ [ಭಾರ.-ವನ. ೧೧೧]. ಇವನಿಗೇ ದಶರಥನೆಂಬುದು ನಾಮಾಂತರ [ಹರಿ.-೧-೩೧].

ಅಥ ಚಿತ್ರರಥಸ್ಯಾಪಿ ಪುತ್ರೋ ದಶರಥೋಽಭವತ್ ।
ರೋಮಪಾದ ಇತಿ ಖ್ಯಾತೋ ಯಸ್ಯ ಶಾಂತಾಸುತಾಭವತ್ ॥
[ಹರಿ.-೧-೩೧. ಶ್ಲೋ. ೪೬].

ರೋಮಪಾದೋ ದಶರಥಃ ಋಷ್ಯಶೃಂಗಂ ಮಹಾಮುನಿಂ ॥
ಶಾಂತಾಮುಪ್ಯಾನಯಾಮಾಸ ಗಣಿಕಾಭಿಸ್ಸಹಾನಘ ॥ [ಹರಿ.-೨-೯೩, ೭].

ರೋಮಪಾದ ದಶರಥನ ಮಗಳಾದ ಶಾಂತಾದೇವಿಯನ್ನು ಸಾಕು ತೆಗೆದುಕೊಂಡು, ಋಷ್ಯಶೃಂಗ ಮುನಿಗೆ ಮದುವೆಮಾಡಿಕೊಟ್ಟ [ರಾಮಾ -ಬಾಲ. ೯-೧೧. ಭಾಗ.-೯-೨೩]. ಒಮ್ಮೆ ರೋಮಪಾದ ರಾಯನ ರಾಜ್ಯದಲ್ಲಿ ಅನಾವೃಷ್ಟಿ ಬಂತು. ಋಷ್ಯಶೃಂಗ ಆ ರಾಜ್ಯವನ್ನು ಹೊಕ್ಕಕೂಡಲೇ ಸುವೃಷ್ಟಿಯಾಯಿತು [ಭಾಗ.-೯-೨೩ ಭಾರ.-ವನ. ೧೧೧-೧೧೪].

**ರೋಮಹರ್ಷಣ** —ಒಬ್ಬ ಮಹರ್ಷಿ. ಕೃಷ್ಣದ್ವೈಪಾಯನನ ಶಿಷ್ಯ. ಪುರಾಣಗಳನ್ನು ಮುನಿಗಳಿಗೆ ಪ್ರವಚನಮಾಡಿದವ. ಈತನಿಗೆ ಸೂತನೆಂಬುದು ನಾಮಾಂತರ. ಈತನ ಮಗ ಉಗ್ರಶ್ರವ [ಭಾರ.-ಆ. ಸ ೪]. ಬಲರಾಮ ಈತನನ್ನು ಕೊಂದದ್ದು [ಭಾಗ -೧೦, ೭೮]. ನೋಡು—ಬಲರಾಮ.

**ರೋಹಿಣಿ.**—(i) ದಕ್ಷಬ್ರಹ್ಮನ ಮಗಳು. ಚಂದ್ರನ ೨೭ ಮಂದಿ ಪತ್ನಿಯರಲ್ಲಿ ಒಬ್ಬಳು [ಭಾರ.-ಶ ೩೬]. ಇವಳ ಮೂಲಕ ಚಂದ್ರ ಕ್ಷಯರೋಗಕ್ಕೆ ಗುರಿಯಾದ ನೋಡು—ಚಂದ್ರಭಾಗಾ, ದಕ್ಷ, ಚಂದ್ರ.

(ii) ಕಾಮಧೇನುವಿನ ಮಗಳು. ಗೋವುಗಳನ್ನು ಹೆತ್ತವಳು [ಭಾರ.-ಆದಿ. ೬೭, ೬೮].

(iii) ವಸುದೇವನ ಹೆಂಡತಿ. ಬಲರಾಮನ ಜನನಿ [ಭಾರ.-ಮೌಸ. ೮. ಭಾಗ -೯-೨೪ ಹರಿ.-೧೩೫].

**ರೋಹಿತಾಶ್ವ.**—ಹರಿಶ್ಚಂದ್ರನ ಮಗ. ವಿಶ್ವಾಮಿತ್ರನಿಂದ ಅನೇಕ ಕಷ್ಟಗಳಿಗೆ ಗುರಿಯಾಗಿ, ಭಗವದನುಗ್ರಹದಿಂದ ಪಾರಾದಬಳಿಕ ಅಯೋಧ್ಯೆಗೆ ಅರಸನಾದ [ಭಾಗ -೯-೭. ಮಾರ್ಕ.-೭-೯. ದೇ ಭಾ -೭, ೧೩-೨೭. ಹರಿ -೧-೧೩ ವಾಯು.-೮೮]. ರೋಹಿತನೆಂಬುದು ಇವನ ನಾಮಾಂತರ [ಭಾರ.-ವನ. ೭೭. ಸ. ೧೨].

**ರೋಹಿ.**—ಒಂದು ನದಿ ಅಫ್ಘಾನಿಸ್ಥಾನದಲ್ಲಿ ಹರಿಯುತ್ತದೆ. ರೋಹಾ ಎಂಬುದು ಇದರ ನಾಮಾಂತರ [ಭಾರ.-ಭೀ. ೯].

**ರೋಹೀತಕ.**—ಒಂದು ದೇಶ. ಡಿಲ್ಲಿಗೆ ೪೨ ಮೈಲುಗಳ ದೂರದಲ್ಲಿ (Rohtak) ರೋಹತಕವೆಂದು ಪ್ರಸಿದ್ಧವಾಗಿದೆ [ಭಾರ -ವನ. ೨೫೫. ಸ ೩೫].

**ರೌಚ್ಯ.**—ನೋಡು—ಮನು, ಮನ್ವಂತರ.

**ರೌದ್ರಾಶ್ವ.**—ಚಂದ್ರ ವಂಶದ ಪೂರು ರಾಜನಿಂದ ಪೌಷ್ಟಿಯೆಂಬವಳಲ್ಲಿ ಜನಿಸಿದವ. ಪ್ರವೀರ, ಈಶ್ವರರೆಂಬವರು ಇವನ ಒಡಹುಟ್ಟಿದವರು. ಈತ ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಋಚೇಯು (ಔಚೇಯು) ಕಕ್ಷೇಯು, ಸ್ಥಂಡಿಲೇಯು ಮೊದಲಾದ ಹತ್ತು ಮಂದಿ ಮಕ್ಕಳನ್ನು ಪಡೆದ [ಭಾರ.-ಆದಿ. ೮೮]

**ರೌರವ** —ನರಕಗಳಲ್ಲಿ ಒಂದು. ನೋಡು—ನರಕ [ಭಾರ.-ಅನು. ೨೦೩].

**ರೌಹಿಣ.**—ದೇವಲೋಕದಲ್ಲಿರುವ ದೊಡ್ಡ ಆಲದಮರ. ಗರುಡ ಅಮೃತಾಪಹರಣಾರ್ಥವಾಗಿ ಹೋಗಿದ್ದಾಗ ಇದರ ಕೊಂಬೆಯನ್ನು ಮುರಿದ [ಭಾರ.-ಆ. ೨೯-೩೦].

# ಲ

**ಲಕ್ಷಣಾ.**—(i) ದುಷ್ಯಂತ ರಾಜನ ಹಿರಿಯ ಹೆಂಡತಿ [ಭಾರ.-ಆದಿ. ೮೮]. ಈಕೆಗೆ ಲಾಕ್ಷಿಯೆಂಬ ಹೆಸರೂ ಇದೆ. ಈಕೆಯ ಮಗ ಜನಮೇಜಯನೆಂಬ ಅರಸು [ಭಾರ.-ಆದಿ. ೬೩]

(ii) ಮದ್ರ ರಾಜನ ಮಗಳು. ಶ್ರೀ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು [ಭಾಗ.-೧೦-೫೮ ಭಾರ.-ಸ. ೫೭]

(iii) ದುರ್ಯೋಧನನ ಮಗಳು. ಶ್ರೀ ಕೃಷ್ಣನಿಂದ ಜಾಂಬವತಿಯಲ್ಲಿ ಜನಿಸಿದ ಸಾಂಬ ಈಕೆಯನ್ನು ಮದುವೆಯಾದ [ಭಾಗ.-೧೦-೬೮].

**ಲಕ್ಷ್ಮಣ.**—(i) ದಶರಥನಿಂದ ಸುಮಿತ್ರೆಯಲ್ಲಿ ಜನಿಸಿದ ಅವಳಿಮಕ್ಕಳಲ್ಲಿ ಹಿರಿಯವ. ಶತ್ರುಘ್ನ ಇವನ ತಮ್ಮ. ಇವ ರಾಮ ಹುಟ್ಟಿದ ಮೂರನೆಯ ದಿನ ಆಶ್ಲೇಷಾ ನಕ್ಷತ್ರದ ಕಡೆಯ ಪಾದದಲ್ಲಿ ಕರ್ಕಾಟಕ ಲಗ್ನದಲ್ಲಿಯೇ ಜನಿಸಿದವ [ರಾಮಾ.-ಬಾಲ. ೧೮. ಭಾರ -ವನ. ೨೭೫ ಸ. ೮, ೫೦]. ಲಕ್ಷ್ಮಣ ರಾಮನೊಂದಿಗೆ ವಿಶ್ವಾಮಿತ್ರನ ಸಂಗಡ ಸಿದ್ಧಾಶ್ರಮಕ್ಕೆ ಹೋದದ್ದು. ನೋಡು—ರಾಮ [ರಾಮಾ.-ಬಾಲ. ೨೨]. ಇವ ಯಾವಾಗಲೂ ರಾಮನನ್ನು ಹಿಂಬಾಲಿಸಿಯೇ ಇರುತ್ತಿದ್ದ. ಈತ ಸೀರಧ್ವಜ ಜನಕನ ಔರಸಪುತ್ರಿಯಾದ ಊರ್ಮಿಳೆಯನ್ನು ಮದುವೆಯಾದ [ರಾಮಾ.-ಬಾಲ. ೭೩]. ರಾಮನನ್ನು ಬಲಾತ್ಕರಿಸಿ ಆತನ ಹಿಂದೆಯೇ ವನವಾಸಕ್ಕೆ ಹೋದ [ರಾಮಾ.-ಅಯೋ. ೩೧, ೩೨]. ಲಕ್ಷ್ಮಣ ಗುಹನಿಗೆ ತಮ್ಮ ವೃತ್ತಾಂತವನ್ನು ಹೇಳಿದ್ದು [ಅಯೋ. ೫೧]. ರಾಮನ ಬಳಿಗೆ ಬರುತ್ತಿದ್ದ ಭರತನ ಸೇನೆಯನ್ನು ಕಂಡು ಲಕ್ಷ್ಮಣ ಭರತನ ಮೇಲೆ ಸಿಟ್ಟಾದದ್ದು, ರಾಮ ಆತನನ್ನು ಸಮಾಧಾನಪಡಿಸಿದ್ದು [ಅಯೋ. ೯೬, ೯೭]. ಲಕ್ಷ್ಮಣ ಶೂರ್ಪಣಖೆಯನ್ನು ವಿರೂಪಗೊಳಿಸಿದ್ದು [ಅರ. ೧೮]. ರಾಮ ಮಾರೀಚನನ್ನು ಕೊಲ್ಲಹೋಗಿದ್ದಾಗ ಲಕ್ಷ್ಮಣ

ನಿಗೂ ಸೀತೆಗೂ ನಡೆದ ಸಂವಾದ [ಅರ. ೪೫]. ಸೀತೆಯನ್ನು ಒಂಟಿಯಾಗಿ ಬಿಟ್ಟು ಬಂದುದಕ್ಕಾಗಿ ರಾಮ ಲಕ್ಷ್ಮಣನನ್ನು ನಿಂದಿಸಿದ್ದು [ಅರ ೫೭-೫೯] ಸೀತಾವಿರಹ ತಪ್ತನಾದ ರಾಮನನ್ನು ಲಕ್ಷ್ಮಣ ಸಮಾಧಾನಪಡಿಸಿದ್ದು [ಅರ. ೬೫-೬೬]. ಲಕ್ಷ್ಮಣ ಹನೂಮಂತನಿಗೆ ತಮ್ಮ ವೃತ್ತಾಂತವನ್ನು ಹೇಳಿದ್ದು [ಕಿ. ೩]. ಲಕ್ಷ್ಮಣ ಸುಗ್ರೀವನ ಮೇಲೆ ಸಿಟ್ಟಾದದ್ದು, ತಾರಾದೇವಿ ಲಕ್ಷ್ಮಣನನ್ನು ಸಮಾಧಾನಪಡಿಸಿದ್ದು [ಕಿ. ೩೦, ೩೩, ೩೫]. ಲಕ್ಷ್ಮಣ ಸುಗ್ರೀವನನ್ನು ನಿಂದಿಸಿ, ಆತನನ್ನು ರಾಮನ ಬಳಿಗೆ ಕರೆತಂದದ್ದು [ಕಿ. ೩೪, ೩೬]. ಲಕ್ಷ್ಮಣ ಇಂದ್ರಜಿತ್ತನ ನಾಗಪಾಶಕ್ಕೆ ಕಟ್ಟುಬಿದ್ದು, ಮೂರ್ಛೆಹೊಂದಿ, ಗರುಡನಮೂಲಕ ಬಿಡುಗಡೆಹೊಂದಿದ್ದು [ಯು. ೪೪, ೪೫, ೪೬, ೫೦]. ಲಕ್ಷ್ಮಣ ಇಂದ್ರಜಿತ್ತನ ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟು ಬಿಡುಗಡೆಹೊಂದಿದ್ದು [ಯು. ೭೩, ೭೪]. ಮಾಯಾಸೀತೆಯನ್ನು ಹನನಮಾಡಿದುದರಿಂದ ದುಃಖಿತನಾದ ರಾಮನನ್ನು ಲಕ್ಷ್ಮಣ ಸಂತವಿಸಿದ್ದು [ಯು ೮೩]. ಲಕ್ಷ್ಮಣ ಇಂದ್ರಜಿತ್ತನ ಮೇಲೆ ಯುದ್ಧಮಾಡಹೊರಟದ್ದು, ಪರಸ್ಪರಯುದ್ಧ [ಯು. ೮೫, ೮೬, ೮೮-೯೦]. ಇಂದ್ರಜಿತ್ತನ್ನು ಕೊಂದದ್ದು [ಯು ೯೧. ಭಾರ -ವನ. ೨೯೦]. ಲಕ್ಷ್ಮಣ ರಾವಣನಿಂದ ಮೂರ್ಛೆಹೊಂದಿದ್ದು [ಯು ೧೦೧, ೧೦೨] ಸುಷೇಣನ ವೈದ್ಯದಿಂದ ಚೇತರಿಸಿಕೊಂಡದ್ದು ದೇವತೆಗಳೊಂದಿಗೆ ವಿಮಾನದಲ್ಲಿ ಕುಳಿತು ರಣರಂಗಕ್ಕೆ ಬಂದಿದ್ದ ದಶರಥನನ್ನು ಲಕ್ಷ್ಮಣ ಸಂದರ್ಶಿಸಿದ್ದು [ಯು. ೧೨೨]. ಲಕ್ಷ್ಮಣ ರಾಮನ ಅಪ್ಪಣೆಯ ಮೇರೆಗೆ ಸೀತೆಯನ್ನು ಗಂಗಾ ತೀರಕ್ಕೆ ಕರೆದುಯ್ದು ಬಿಟ್ಟು ಬಂದದ್ದು [ಉತ್ತ. ೪೪-೪೮] ಲಕ್ಷ್ಮಣ ಸೀತಾಪರಿತ್ಯಾಗಕ್ಕಾಗಿ ಮರುಗುತ್ತಿದ್ದ ರಾಮನನ್ನು ಸಮಾಧಾನಪಡಿಸಿದ್ದು [ಉತ್ತ. ೫೨] ಲಕ್ಷ್ಮಣ ರಾಮನಿಗೆ ಅಶ್ವಮೇಧ ಯಾಗವನ್ನು ಮಾಡಹೇಳಿದ್ದು [ಉತ್ತ. ೮೫]. ಲಕ್ಷ್ಮಣ ಅಶ್ವಮೇಧ ತುರಗ ರಕ್ಷಣೆಗಾಗಿ ಹೊರಟದ್ದು [ಉತ್ತ. ೯೧]. ಲಕ್ಷ್ಮಣ ತನ್ನ ಕುಮಾರರಾದ ಅಂಗದ, ಚಂದ್ರಕೇತುಗಳೆಂಬವರನ್ನು ತಾರಾಪಥ, ಚಂದ್ರಕಾಂತಪುರಿಗಳಲ್ಲಿ ಪ್ರತಿಷ್ಠೆಗೊಳಿಸುವಂತೆ ರಾಮನಿಗೆ ಸೂಚಿಸಿದ್ದು [ಉತ್ತ. ೧೦೧]. ಬ್ರಾಹ್ಮಣರೂಪದಿಂದ ಬಂದ ಯಮನೊಂದಿಗೆ ರಾಮ ಅಂತರಂಗದಲ್ಲಿ ಮಾತನಾಡುತ್ತಿದ್ದಾಗ ರಾಜದ್ವಾರಕ್ಕೆ ಬಂದ ದುರ್ವಾಸ ಮುನಿಯ ಬರವನ್ನು ರಾಮನಿಗೆ ತಿಳುಹಿ ಮರಣದಂಡನೆಗೆ ಗುರಿಯಾದದ್ದು [ಉತ್ತ. ೧೦೪]. ಲಕ್ಷ್ಮಣ ಸರಯೂ ತೀರದಲ್ಲಿ ಧ್ಯಾನಯೋಗದಿಂದಿದ್ದು, ಅದೃಶ್ಯನಾಗಿ ಸ್ವರ್ಗವನ್ನೈದಿದ್ದು [ಉತ್ತ. ೧೦೫]

(ii) ಧೃತರಾಷ್ಟ್ರನ ಹಿರಿಯಮಗನಾದ ದುರ್ಯೋಧನನ ಮಗ. ರಥಸತ್ತಮ [ಭಾರ.-ಉ. ೧೬೬]. ಭಾರತ ಯುದ್ಧದ ಎರಡನೆಯ ದಿನ ಇವ ಅಭಿಮನ್ಯುವನ್ನು ಇದಿರಿಸಿ ಹೋರಾಡಿದ [ಭಾರ.-ಭೀ. ೫೨]. ಅಂತೆಯೇ ಐದನೆಯ ದಿನದಲ್ಲಿ ಅಭಿ

ಮನ್ಯುವಿನಿಂದ ಸೋತ [ಭಾರ.-ಭೀ. ೭೩]. ಹದಿಮೂರನೆಯ ದಿನ ಅಭಿಮನ್ಯುವಿನಿಂದ ಮಡಿದ [ದ್ರೋ. ೪೬]. ಲಕ್ಷ್ಮಣನ ಶವವರ್ಣನೆ [ಭಾರ.-ಸ್ತ್ರೀ. ೨೦].

**ಲಕ್ಷ್ಮಣಾ.**—ದುರ್ಯೋಧನನ ಮಗಳು. ನೋಡು—ಲಕ್ಷಣಾ, ಸಾಂಬ.

**ಲಕ್ಷ್ಮಿ.**—ಶಕ್ತಿತ್ರಯದಲ್ಲಿ ಒಬ್ಬಳು. ವಿಷ್ಣುವಿನ ಹೆಂಡತಿ. ವಿಷ್ಣು ಲೋಕವನ್ನು ಮೋಹಗೊಳಿಸುವುದಕ್ಕಾಗಿ ಜಗತ್ತನ್ನು ಎರಡು ಭಾಗವಾಗಿ ವಿಂಗಡಿಸಿದ. ಬ್ರಾಹ್ಮಣರೂ, ವೇದಗಳೂ, ಲಕ್ಷ್ಮಿಯೂ ಒಂದು ಭಾಗ. ವೇದಬಾಹ್ಯರು, ಅಲಕ್ಷ್ಮಿ ಅಧರ್ಮಗಳು ಒಂದು ಭಾಗ. ಮೊದಲು ಅಲಕ್ಷ್ಮಿಯನ್ನು ಸೃಷ್ಟಿಮಾಡಿದ ಕಾರಣ ಆಕೆಗೆ ಜ್ಯೇಷ್ಠಾ ಎಂದು ಹೆಸರು. ದೇವ ದಾನವರು ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥನಮಾಡಿದಾಗ ಮೊದಲು ತೀವ್ರವಾದ ವಿಷ ಜನಿಸಿತು. ಒಡನೆಯೇ ಜ್ಯೇಷ್ಠಾದೇವಿ ಜನಿಸಿದಳು. ಬಳಿಕ ಲಕ್ಷ್ಮಿ ಪಾಲ್ಗಡಲಿಂದ ಹೊರಬಂದಳು. ಮೊದಲು ಬಂದವಳು ಅಮಂಗಳಕಾರಿಣಿಯಾದುದರಿಂದ ಅವಳಿಗೆ ಅಲಕ್ಷ್ಮಿಯೆಂದು ರೂಢಿಯಾಯಿತು. ದುಸ್ಸಹನೆಂಬ ಬ್ರಹ್ಮರ್ಷಿ ಜ್ಯೇಷ್ಠಾದೇವಿಯನ್ನು ಮದುವೆಯಾಗಿ ಅವಳೊಂದಿಗೆ ಲೋಕಗಳನ್ನು ಅಲೆಯತೊಡಗಿದ. ವಿಷ್ಣು ಲಕ್ಷ್ಮಿಯನ್ನು ಮದುವೆಯಾದ [ಲಿಂಗ.-ಉತ್ತ. ೬]. ಲಕ್ಷ್ಮಿ ಕ್ಷೀರಸಮುದ್ರದಿಂದ ಜನಿಸಿದಳು. ವಿಷ್ಣು ಆದಿತ್ಯನಾದಾಗ ಲಕ್ಷ್ಮಿ ತಾವರೆಯಿಂದ ಜನಿಸಿದಳು ಮೊದಲು ಭೃಗು ಮಹರ್ಷಿಯಿಂದ ಈಕೆ ಖ್ಯಾತಿದೇವಿಯಲ್ಲಿ ಜನಿಸಿದಳು. ವಿಷ್ಣು ಪರಶುರಾಮನಾದಾಗ ಈಕೆ ಭೂದೇವಿಯಾಗಿದ್ದಳು. ರಾಮಾವತಾರದಲ್ಲಿ ಸೀತೆ, ಕೃಷ್ಣಾವತಾರದಲ್ಲಿ ರುಕ್ಮಿಣಿ. ವಿಷ್ಣು ದೇವರೂಪದಿಂದಿದ್ದಾಗ ಈಕೆ ದೇವತೆ, ಮನುಷ್ಯನಾದಾಗ ಈಕೆ ಮಾನುಷಿ [ವಿಷ್ಣು.-೧-೯]. ಸಮುದ್ರಮಥನಮಾಡಿದಾಗ ಲಕ್ಷ್ಮಿ ಕ್ಷೀರಸಮುದ್ರದಿಂದ ಜನಿಸಿ ವಿಷ್ಣುವನ್ನು ಮದುವೆಯಾದಳು [ರಾಮಾ-ಬಾಲ ೪೫. ಭಾರ.-ಆದಿ. ೧೮. ಭಾಗ.-೮-೭. ಸ್ಕಾ. ಕೇದಾ. ೯-೧೩. ಶಿವ.-ಶತರು. ೧೬]. ಲಕ್ಷ್ಮಿಯ ಮತ್ತು ಅಲಕ್ಷ್ಮಿಯ ವಾಸಸ್ಥಾನಗಳು [ಲಿಂಗ.-ಉತ್ತ. ೬]

**ಲಙ್ಕಾ.**—(i) ರಾಕ್ಷಸರ ರಾಜಧಾನಿ. ನೋಡು—ರಾವಣ, ಮಾಲಿ, ಮಾಲ್ಯವಂತ, ಸುಮಾಲಿ, ಕುಬೇರ, ಹನೂಮಂತ [ಭಾರ.-ವನ. ೨೮೧]. ಪಾಂಡವರ ರಾಜಸೂಯಕ್ಕೆ ಮೊದಲು ವಿಭೀಷಣನಿಂದ ಕಪ್ಪವನ್ನು ತರುವುದಾಗಿ ಘಟೋತ್ಕಚ ಲಂಕೆಗೆ ಹೋಗಿದ್ದ [ಭಾರ.-ಸ. ೩೪].

(ii) ಲಂಕೆಯ ಅಭಿಮಾನದೇವತೆ.

**ಲತಾ.**—ಒಬ್ಬ ಅಪ್ಸರಸಿ. ಶಾಪದಿಂದ ಮೊಸಳೆಯಾಗಿದ್ದು ಅರ್ಜುನನಿಂದ ಮುಕ್ತಳಾದಳು. ನೋಡು—ನಾರೀತೀರ್ಥ.

**ಲಪಿತಾ.**—ಮಂದಪಾಲ ಮಹರ್ಷಿಯ ಹೆಂಡತಿ. ಶಾರ್ಙ್ಗ ಪಕ್ಷಿರೂಪದಿಂದಿದ್ದವಳು. ಜರಿತೆಯ ಸವತಿ [ಭಾರ.-ಆ. ೨೩೩].

**ಲಮ್ಪಾಕ.**—(ಲಂಪಾಕ) ಒಂದು ದೇಶ. ಕಾಬೂಲ್ ನದಿಯ ಉತ್ತರತೀರ ದಲ್ಲಿದೆ [ಭಾರ.-ದ್ರೋ. ೧೨೧].

**ಲವ.**—ಶ್ರೀ ರಾಮನ ಮಗ. ನೋಡು—ಕುಶ.

**ಲವಣ.**—ಮಧು ದಾನವನ ಮಗ ಶ್ರೀ ರಾಮನ ತಮ್ಮನಾದ ಶತ್ರುಘ್ನನಿಂದ ಮಡಿದ [ಭಾರ.-ಆದಿ. ೨೭. ಸ. ೫೦. ರಾಮಾ.-ಉತ್ತ. ೬೧-೭೦]. ನೋಡು—ಮಧು, ಮಾಂಧಾತ.

**ಲಾಕ್ಷೀ.**—ದುಷ್ಯಂತನ ಹೆಂಡತಿ. ನೋಡು—ಲಕ್ಷ್ಮಣಾ.

**ಲಿಖಿತ.**—ಒಬ್ಬ ಮಹರ್ಷಿ. ಈತನ ಅಣ್ಣ ಶಂಖನೆಂಬ ಮುನಿ. ನೋಡು—ಬಾಹುದಾ. ಇವರಿಬ್ಬರೂ ಧರ್ಮಶಾಸ್ತ್ರಪ್ರವರ್ತಕರು. ದ್ವಾಪರ ಯುಗದಲ್ಲಿ ಇವರ ಧರ್ಮಶಾಸ್ತ್ರಗಳಿಗೇ ಪ್ರಾಶಸ್ತ್ಯವೂ ಗೌರವವೂ ವಿಹಿತವಾಗಿದೆ. ಒಮ್ಮೆ ಶಂಖ ಮುನಿ ಆಶ್ರಮದಲ್ಲಿಲ್ಲದಿದ್ದಾಗ ಲಿಖಿತ ಮುನಿ ಅಲ್ಲಿದ್ದ ಕೆಲ ಹಣ್ಣುಗಳನ್ನು ತಿಂದು, ಅಣ್ಣ ಬಂದೊಡನೆಯೇ ಆ ವರ್ತಮಾನವನ್ನು ತಿಳಿಸಿದ. ಶಂಖ ತಾನು ಇಲ್ಲದ ವೇಳೆ ಯಲ್ಲಿ ಈ ರೀತಿ ಮಾಡಿದ್ದು ಕಳ್ಳತನವೆಂದು ನಿಶ್ಚಯಿಸಿ, ತಮ್ಮನನ್ನು ಸುದ್ಯುಮ್ನ ನೆಂಬ ರಾಜನಲ್ಲಿಗೆ ಕಳುಹಲಾಗಿ, ರಾಜ ಆತನ ಕೈಗಳನ್ನು ಕತ್ತರಿಸಿದ. ಬಳಿಕ ಲಿಖಿತ ಅಣ್ಣನಲ್ಲಿಗೆ ಬಂದು ತಾನು ಶಿಕ್ಷೆಯನ್ನು ಅನುಭವಿಸಿದೆನೆಂದು ಹೇಳಿದ. ಶಂಖ "ಇದೀಗ ಯುಕ್ತ" ಎಂದು, ನದಿಯಲ್ಲಿ ಸ್ನಾನಮಾಡಿ ಬರಹೇಳಿದ. ಲಿಖಿತ ಸ್ನಾನಮಾಡಿ ಮೇಲೆ ಬರುವಷ್ಟರಲ್ಲಿ ಆತನ ಕೈಗಳೆರಡೂ ಮೊದಲಿನಂತೆಯೇ ಆದುವು [ಭಾರ.-ಸ. ೭. ಶಾಂತಿ. ೨೩].

**ಲೀಲಾವತಿ.**—(i) ಒಬ್ಬ ಸೂಳೆ. ಕಡೆಗೆ ಭಕ್ತಿಭಾವದಿಂದ ಸುವರ್ಣನಿರ್ಮಿತ ಗಳಾದ ವೃಕ್ಷಗಳನ್ನೂ, ದೇವತಾವಿಗ್ರಹಗಳನ್ನೂ ದಾನಮಾಡಿ, ಶಿವಸಾಯುಜ್ಯ ವನ್ನು ಪಡೆದಳು [ಮತ್ಸ್ಯ.-೯೨].

(ii) ಮಯೂರಧ್ವಜನ ಹೆಂಡತಿ. ನೋಡು—ಮಯೂರಧ್ವಜ [ಜೈ. ಭಾರ.-೬೩].

**ಲೋಕಾಲೋಕ.**—ಒಂದು ಪರ್ವತ. ಈ ಪರ್ವತದ ಒಂದು ಭಾಗ ಕಾಣ ಬರುತ್ತದೆ. ಮತ್ತೊಂದು ಭಾಗ ಎಂದರೆ ಇದರ ಹಿಂಭಾಗ ಕಾಣಬರುವುದಿಲ್ಲ ವಾಗಿ ಇದಕ್ಕೆ ಲೋಕಾಲೋಕವೆಂದು ಹೆಸರು ಒಂದು ಭಾಗದಲ್ಲಿ ಪ್ರಕಾಶವಿರುವು ದೆಂತಲೂ ಮತ್ತೊಂದು ಭಾಗ ಅಂಧಕಾರದಿಂದ ಆವೃತವಾಗಿರುವುದೆಂತಲೂ

ತಿಳಿಯಬರುತ್ತದೆ—

ಅರ್ವಾಚೀನೇತು ತಸ್ಯಾರ್ಧೇ ಚರಂತಿ ರವಿರಶ್ಮಯಃ।

ಪರಾರ್ಧೇತು ತಮೋ ನಿತ್ಯಂ ಲೋಕಾಲೋಕಸ್ತತಸ್ಸ್ಮೃತಃ ॥ [ಲಿಂ.-೫೩].

ಈ ಪರ್ವತ ಎಲ್ಲಾ ದ್ವೀಪಗಳಿಗೂ ಸಮುದ್ರಕ್ಕೂ ಕೇವಲ ದಕ್ಷಿಣದಲ್ಲಿದೆ ಮೇರು ಪರ್ವತ ಎಲ್ಲಕ್ಕೂ ಉತ್ತರದಲ್ಲಿದೆ. ಲೋಕಾಲೋಕ ಪರ್ವತವರ್ಣನೆ [ಭಾಗ.-೫-೨೦].

**ಲೋಪಾಮುದ್ರಾ**.—ವಿದರ್ಭ ರಾಜನ ಮಗಳು ಅಗಸ್ತ್ಯ ಮುನಿಯ ಹೆಂಡತಿ. ಈಕೆಗೆ ಸತ್ಯವತಿಯೆಂಬ ನಾಮಾಂತರವೂ ಇದೆ [ಭಾರ -ವನ. ೯೪]. ಈಕೆಯನ್ನು ರಾಜಪುತ್ರರು ಯಾರೂ ವರಿಸದಿದ್ದರು ಆಗ ಅಗಸ್ತ್ಯ ಮುನಿ ಈಕೆಯ ತಂದೆಯ ಬಳಿಸಾರಿ ಲೋಪಾಮುದ್ರೆಯನ್ನು ತನಗೆ ಕೊಡಹೇಳಿದ. ಅರಸ ದಿಕ್ಕು ತೋರದೆ ಯೋಚಿಸುತ್ತಿರುವಲ್ಲಿ ಲೋಪಾಮುದ್ರೆ ತಂದೆಯ ಬಳಿಸಾರಿ ತನ್ನನ್ನು ಅಗಸ್ತ್ಯನಿಗೆ ಕೊಡಹೇಳಿದಳು ಬಳಿಕ ಅಗಸ್ತ್ಯ ಈಕೆಯನ್ನು ಮದುವೆಯೊದ [ಭಾರ.-ವನ. ೯೫]. ಈಕೆ ಅಗಸ್ತ್ಯನಿಂದ ದೃಢಸ್ಯುವೆಂಬ ಮಗನನ್ನು ಪಡೆದಳು [ಭಾರ.-ವನ. ೯೭].

**ಲೋಮಶ**—ಒಬ್ಬ ಬ್ರಹ್ಮರ್ಷಿ. ಅರ್ಜುನ ಪಾಶುಪತಾಸ್ತ್ರವನ್ನು ಸಂಪಾದಿಸಿದ ಬಳಿಕ ಸ್ವರ್ಗಕ್ಕೆ ಹೋಗಿದ್ದಾಗ ಇಂದ್ರ ಈತನ ಮೂಲಕ ಯುಧಿಷ್ಠಿರನಿಗೆ ಅರ್ಜುನನ ಕುಶಲವಾರ್ತೆಯನ್ನು ಹೇಳಿಕಳುಹಿದ [ಭಾರ.-ವನ. ೪೫, ೮೯]. ಪಾಂಡವರ ಅರಣ್ಯವಾಸ ಸಮಯದಲ್ಲಿ ಈತ ಯುಧಿಷ್ಠಿರನನ್ನು ಸಂಗಡ ಕರೆದುಕೊಂಡು ಅನೇಕ ತೀರ್ಥಗಳನ್ನು ಸುತ್ತಿ ಅವುಗಳ ಮಹಿಮೆಯನ್ನು ಬಣ್ಣಿಸಿದ [ಭಾರ -ವನ. ೯೦-೧೧೫, ೧೧೭-೧೫೭].

**ಲೋಹಿತಾಶ್ವ**—ನೋಡು—ರೋಹಿತಾಶ್ವ [ಭಾರ.-ವನ. ೭೭].

**ಲೌಹಿತ್ಯ**—(i) ಒಂದು ನದ. ಪ್ರಾಗ್ಜ್ಯೋತಿಷ ನಗರಕ್ಕೆ ಉತ್ತರದಲ್ಲಿ ಹರಿಯುವ ಬ್ರಹ್ಮಪುತ್ರೆಯ ಒಂದು ಭಾಗ [ಭಾರ.-ಸ. ೯].

(ii) ಒಂದು ತೀರ್ಥ [ಭಾರ.-ವನ. ೮೩].

(iii) ಒಂದು ನದಿ [ಭಾರ.-ಭೀ. ೯]. ಈ ನದಿಯಲ್ಲಿ ಸ್ನಾನಮಾಡಿ ಇದರ ಸಮೀಪದಲ್ಲಿಯೇ ವಾಸಮಾಡತಕ್ಕವರು ಸಕಲ ದುಃಖಗಳನ್ನೂ ನೀಗಿ ಸರ್ವದಾ ಸಂತೋಷದಿಂದಿರುತ್ತಾರೆ [ಭಾರ.-ಮಹಾ. ೧].

## ವ

**ವಕ್ರ**.—ಕರೂಶ ದೇಶಾಧಿಪತಿಯಾದ ವಕ್ರದಂತನ ಹೆಸರು. ನೋಡು—ದಂತವಕ್ರ [ಭಾರ.-ಸ. ೧೪].

**ವಙ್ಗ**.—(i) ಬಂಗಾಳ ದೇಶ. ಪಾಂಡವರ ಕಾಲದಲ್ಲಿ ಇಲ್ಲಿ ಸಮುದ್ರಸೇನ, ಚಂದ್ರಸೇನರೆಂಬ ಅರಸರು ರಾಜ್ಯಭಾರಮಾಡುತ್ತಿದ್ದರು [ಭಾರ.-ಸ. ೩೦].

(ii) ಬಲಿ ರಾಜನ ಹೆಂಡತಿಯಾದ ಸುದೇಷ್ಣೆಯಲ್ಲಿ ದೀರ್ಘತಮನೆಂಬ ಮುನಿಯಿಂದ ಜನಿಸಿದ ಐವರು ಮಕ್ಕಳಲ್ಲಿ ಎರಡನೆಯವ ನೋಡು—ಬಲಿ, ದೀರ್ಘತಮ [ಭಾರ.-ಆದಿ ೧೧೩]

**ವಜ್ರ**.—ಶ್ರೀ ಕೃಷ್ಣನ ಮರಿಮಗ ರುಕ್ಮಿಣೀಪುತ್ರನಾದ ಪ್ರದ್ಯುಮ್ನನಿಂದ ಜನಿಸಿದ ಅನಿರುದ್ಧನ ಮಗ ಇವನ ತಾಯಿ ಉಷಾದೇವಿ [ಭಾಗ.-೧-೧೫]. ಕೃಷ್ಣನಿರ್ಯಾಣಾನಂತರ ಅರ್ಜುನ ಇವನನ್ನು ಹಸ್ತಿನಾವತಿಗೆ ಕರೆದುಯ್ದು ಇಂದ್ರಪ್ರಸ್ಥದಲ್ಲಿ ಇವನಿಗೆ ಪಟ್ಟಗಟ್ಟಿದ [ಭಾರ -ಮೌಸ ೮] ಯಾದವರು ಸ್ವಯೂಥ ಕಲಹದಿಂದ ನಾಶವಾದಾಗ ಕೃಷ್ಣನ ವಂಶದಲ್ಲಿ ಇವನೊಬ್ಬನೇ ಉಳಿದವ

"ವಜ್ರಸ್ತಸ್ಯಾ ಭವದ್ಯಸ್ತು ಮೌಸಲಾದವಶೇಷಿತಃ" [ಭಾಗ -೧೦-೯೦].

**ವಜ್ರದತ್ತ**.—ಪ್ರಾಗ್ಜ್ಯೋತಿಷಪುರಾಧೀಶ್ವರನಾದ ಭಗದತ್ತನ ಮಗ ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ಅರ್ಜುನನ ಸಂಗಡ ಮೂರು ದಿನಗಳವರೆಗೆ ಹೋರಾಡಿ ಕಡೆಗೆ ಶರಣುಹೊಕ್ಕ [ಜೈ ಭಾರ -೭೫, ೭೬]

**ವಜ್ರಾಙ್ಗ**.—ದಿತಿಯ ಮಗ. ದಿತಿಯ ಮಕ್ಕಳೆಲ್ಲರೂ ವಿಷ್ಣುವಿನಿಂದಲೂ ಇಂದ್ರನಿಂದಲೂ ಹತರಾದರು. ಬಳಿಕ ದಿತಿ ಕಶ್ಯಪನಿಂದ ಗರ್ಭಧಾರಣಮಾಡಿದ್ದಾಗ ಇಂದ್ರ ಆ ಗರ್ಭವನ್ನು ೪೯ ಭಾಗವಾಗಿ ಕತ್ತರಿಸಿದ ನೋಡು—ಮರುತ್ತುಗಳು. ಬಳಿಕ ದಿತಿ ಕಶ್ಯಪನಿಂದ ಒಬ್ಬ ಮಗನನ್ನು ಪಡೆದಳು. ಅವನೇ ವಜ್ರಾಂಗ. ವಜ್ರಾಂಗ ಜನನಿಯ ಮೂಲಕ ಇಂದ್ರನ ಅಪಕಾರವನ್ನು ಕೇಳಿ ಅವನನ್ನು ತಾಯ ಬಳಿಗೆ ಎಳೆತಂದ ಅಷ್ಟರಲ್ಲಿ ಕಶ್ಯಪನೂ ಬ್ರಹ್ಮನೂ ಅಲ್ಲಿಗೆ ಬಂದು ಇಂದ್ರನನ್ನು ಬಿಡಿಸಿದರು. ಬಳಿಕ ಬ್ರಹ್ಮ ವರಾಂಗಿಯೆಂಬ ತರುಣಿಯನ್ನು ಸೃಷ್ಟಿಸಿ ವಜ್ರಾಂಗನಿಗೆ ಕೊಟ್ಟು ಮದುವೆಮಾಡಿದ ಬಳಿಕ ವಜ್ರಾಂಗ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ತನಗೆ ರಾಕ್ಷಸಬುದ್ಧಿ ತೊಲಗುವಂತೆ ಬೇಡಿದ. ವಜ್ರಾಂಗ ತಪಸ್ಸುಮಾಡುತ್ತಿದ್ದಾಗ ಇಂದ್ರ ವರಾಂಗಿಯನ್ನು ನಾನಾ ಪರಿಯಿಂದ ಪೀಡಿಸಿದ. ವಜ್ರಾಂಗ ತಪಸ್ಸಿನಿಂದ ಬಹಿರ್ಮುಖನಾಗಿ ನೋಡುವಲ್ಲಿ ವರಾಂಗಿ ಎಲ್ಲಿಯೋ ಒಂದು ಪರ್ವತದ ಗವಿಯಲ್ಲಿ ವಿಕೃತೆಯಾಗಿದ್ದಳು ಅದನ್ನು ಕಂಡು ಅವಳಿಂದ ಸಮಾಚಾರಗಳನ್ನೆಲ್ಲ ತಿಳಿದು ಮರಳಿ ತಪಸ್ಸುಮಾಡಿ, ದೇವತೆಗಳನ್ನು ಸದೆಬಡಿಯುವ ಸಾಮರ್ಥ್ಯವುಳ್ಳ ಮಗನನ್ನು ಪಡೆದ. ಇವನೇ ತಾರಕಾಸುರ. ನೋಡು—ತಾರಕ [ಮತ್ಸ್ಯ.-೧೪೬-೧೪೭].

**ವತ್ಸ**.—(i) ದಿವೋದಾಸನ ಮಗನಾದ ಪ್ರತರ್ದನನ ಮಗ ಪರಶುರಾಮ ಕ್ಷತ್ರಿಯ ಸಂಹಾರಮಾಡಿದಾಗ, ಇವನನ್ನು ಕರು(ವತ್ಸ)ಗಳ ಮಂದೆಗಳ ನಡುವೆ

ಬಚ್ಚಿಟ್ಟು ಬೆಳಸಿದ ಕಾರಣ ಇವನಿಗೆ ವತ್ಸನೆಂದು ಹೆಸರು [ವಾಯು.-೯೨. ಭಾರ.-ಶಾಂತಿ. ೪೮].

(ii) ಒಬ್ಬ ಅಸುರ ಬಲರಾಮಕೃಷ್ಣರು ಯಮುನಾ ತೀರದಲ್ಲಿ ಆಟವಾಡುತ್ತಿದ್ದಾಗ ಇವ ಒಂದು ಕರುವಿನ ರೂಪವನ್ನು ತಾಳಿ, ಕರುಗಳ ಮಂದೆಯನ್ನು ಹೊಕ್ಕ. ಕೃಷ್ಣ ಏನೂ ತಿಳಿಯದವನಂತೆ ಅದರ ಬಳಿಗೆ ಹೋಗಿ ಹಿಂಗಾಲುಗಳನ್ನು ಹಿಡಿದೆತ್ತಿ ಮೇಲಕ್ಕೆ ಎಸೆದು ಕೊಂದ [ಭಾಗ -೧೦-೧೧].

**ವತ್ಸಲಾ.**—ಬಲರಾಮನ ಮಗಳು. ಇವಳನ್ನು ಮೊದಲು ಅಭಿಮನ್ಯುವಿಗೆ ಕೊಡುವಂತೆ ಮಾತಾಗಿತ್ತು. ಪಾಂಡವರು ವನವಾಸಕ್ಕೆ ಹೋದಬಳಿಕ ಬಲರಾಮ ಇವಳನ್ನು ದುರ್ಯೋಧನನ ಮಗನಾದ ಲಕ್ಷ್ಮಣನಿಗೆ ಕೊಡಬೇಕೆಂದು ಗೊತ್ತುಮಾಡಿದ. ಅಷ್ಟರಲ್ಲಿ ಅಭಿಮನ್ಯು ಸುಭದ್ರೆಯನ್ನು ಸಂಗಡ ಕರೆದುಕೊಂಡು ಬಂದು ಘಟೋತ್ಕಚನ ಮಾಯಾಬಲದಿಂದ ಇವಳನ್ನು ಅಪಹರಿಸಿ ಮದುವೆಯಾದ [ಜೈ. ಭಾರ.-ವನ.].

**ವದಾನ್ಯ.**—ಒಬ್ಬ ಮಹರ್ಷಿ. ಈತ ಅಷ್ಟಾವಕ್ರ ಮುನಿಯನ್ನು ನಾನಾ ಪರಿಯಿಂದ ಪ್ರಲೋಭಗೊಳಿಸಿ, ಕಡೆಗೆ ಆತನ ಮನೋನಿಗ್ರಹಕ್ಕೆ ಮೆಚ್ಚಿ, ತನ್ನ ಮಗಳಾದ ಸುಪ್ರಭೆಯೆಂಬವಳನ್ನು ಅಷ್ಟಾವಕ್ರನಿಗೆ ಮದುವೆಮಾಡಿಕೊಟ್ಟ [ಭಾರ.-ಅನು. ೫೦].

**ವನಾಯು.**—(i) ಊರ್ವಶಿಯಲ್ಲಿ ಪುರೂರವನಿಂದ ಜನಿಸಿದ ಪುತ್ರರಲ್ಲಿ ಒಬ್ಬ [ಭಾರ.-ಆದಿ. ೭೯].

(ii) ಒಬ್ಬ ರಾಕ್ಷಸ. ನೋಡು—ದನು [ಭಾರ -ಆದಿ. ೬೬].

(iii) ಈಗಣ ಅರಬ್ಬೀ ದೇಶಕ್ಕೆ ಪೂರ್ವದ ಹೆಸರು [ಭಾರ.-ಭೀ. ೯].

**ವಪುಷ್ಟಮಾ.**—ಕಾಶೀರಾಜನಾದ ಸುವರ್ಣವರ್ಮನೆಂಬ ರಾಜನ ಮಗಳು. ಪಾಂಡವರ ಮರಿಮಗನಾದ ಜನಮೇಜಯನನ್ನು ಮದುವೆಯಾಗಿ ಶತಾನೀಕ, ಶಂಕುಕರ್ಣರೆಂಬ ಇಬ್ಬರು ಪುತ್ರರನ್ನು ಪಡೆದಳು [ಭಾರ.-ಆದಿ. ೬೩, ೪೪].

**ವರದಾ (ವರದಾನ).**—ಒಂದು ನದಿ. ಇದರ ಬಳಿಯಲ್ಲಿ ವಿಷ್ಣು ಬಹಳ ಕಾಲದವರೆಗೆ ತಪಸ್ಸುಮಾಡಿದ. ಇದನ್ನು ಈಗ ಬರೋಡಾ ಎನ್ನುತ್ತಾರೆ [ಭಾರ.-ವನ. ೮೦].

**ವರಾಂಗಿ.**—(i) ತ್ರಿಶಂಕುರಾಜನ ಮಗಳು. ಈಕೆ ಚಂದ್ರವಂಶದ ಪ್ರಾಚೀನ್ವಂತನ ಮಗನಾದ ಶರ್ಯಾತಿ ರಾಜನನ್ನು ಮದುವೆಯಾದಳು. ಈಕೆಯ ಮಗ ಅಹಂಯಾತಿ [ಭಾರ.-ಆದಿ. ೬೩].

(ii) ವಜ್ರಾಂಗನ ಹೆಂಡತಿ. ತಾರಕಾಸುರನ ಜನನಿ [ಮತ್ಸ್ಯ.-೧೪೭]. ನೋಡು—ವಜ್ರಾಂಗ.

**ವರಾಹ.**—ವಿಷ್ಣುವಿನ ಮೂರನೆಯ ಅವತಾರ. ಹಿರಣ್ಯಾಕ್ಷನನ್ನು ಸಂಹರಿಸು ವುದಕ್ಕಾಗಿ ವಿಷ್ಣು ಈ ಅವತಾರವನ್ನು ಕೈಕೊಂಡ ನೋಡು—ಯಜ್ಞವರಾಹ [ಭಾರ.-ಸ. ೪೫. ವನ. ೧೪೪, ೨೭೩. ಶಾಂತಿ. ೨೦೮. ಭಾಗ.-೩-೧೩. ವಾಯು.- ೬. ಪದ್ಮ.-೬-೨೬೪. ಲಿಂಗ -೯೪. ಮತ್ಸ್ಯ -೨೪೭, ೨೪೮. ಶಿವ.-ಯುದ್ಧಖಂ. ೫೧]. ವರಾಹ ಆತ್ಮಪಿಂಡಪ್ರದಾನಮಾಡಿದ್ದು, ಶ್ರಾದ್ಧಮಹಿಮೆ, ಪಿಂಡಪ್ರದಾನದ ಆವಶ್ಯ ಕತೆ ಮುಂತಾಗಿ [ಭಾರ.-ಶಾಂ. ೩೫೫].

**ವರಾಹಧ್ವಜ.**—ದುರ್ಯೋಧನನ ಮೈದುನನೂ ಸಿಂಧು ದೇಶಾಧಿಪತಿಯೂ ಆಗಿದ್ದ ಜಯದ್ರಥನ ರಥಧ್ವಜದಲ್ಲಿ ವರಾಹದ ಚಿಹ್ನವಿದ್ದ ಕಾರಣ ಈ ಹೆಸರು ಅವನಿಗೆ ಸಲ್ಲುತ್ತದೆ [ದ್ರೋ ೧೦೫].

**ವರುಣ.**—ಪಶ್ಚಿಮ ದಿಕ್ಕಿನ ಅಧಿಪತಿ. ಈತನಿಗೆ ಋದ್ಧಿ, ವಾರುಣಿಯೆಂಬುದಾಗಿ ಇಬ್ಬರು ಪತ್ನಿಯರು ವಾರುಣಿಗೆ ಗೌರಿಯೆಂಬುದು ನಾಮಾಂತರ [ಭಾರ.-ಸ. ೯, ೧೦]. ಈತ ಶುಕ್ರಾಚಾರ್ಯನ ಮಗಳಾದ ಜ್ಯೇಷ್ಠಾದೇವಿಯನ್ನು ಮದುವೆಯಾಗಿ ಅಧರ್ಮ, ಬಲ ಎಂಬ ಇಬ್ಬರು ಪುತ್ರರನ್ನೂ ಮದ್ಯಾಭಿಮಾನಿದೇವತೆಯಾದ ಸುರೆ ಯೆಂಬವಳನ್ನೂ ಪಡೆದ [ಭಾರ -ಆದಿ ೬೭]. ಈತನಿಗೆ ಪುಷ್ಕರನೆಂಬ ಮತ್ತೊಬ್ಬ ಮಗನಿದ್ದ [ಭಾರ.-ಉ. ೯೮]. ನಾರದ ವರುಣನ ಸಭೆಯನ್ನು ಯುಧಿಷ್ಠಿರನಿಗೆ ಬಣ್ಣಿಸಿ ಹೇಳಿದ್ದು [ಸಭಾ. ೯]. ಈತನಿಗೆ ಬಂದಿಯೆಂಬ ಮತ್ತೊಬ್ಬ ಮಗನಿದ್ದ ಈತ ಜನಕರಾಜನ ಆಸ್ಥಾನದಲ್ಲಿ ಕಹೋಳ ಮೊದಲಾದ ಅನೇಕ ಮಂದಿ ಬ್ರಾಹ್ಮಣ ರನ್ನು ಗೆದ್ದು, ನೀರಿನಲ್ಲಿ ಮುಳುಗಿಸಿದ್ದ [ಭಾರ.-ವನ. ೧೩೬]. ನೋಡು—ಕಹೋಳ, ಬಂದಿ, ಅಷ್ಟಾವಕ್ರ ವರುಣಲೋಕವರ್ಣನ [ಭಾರ.-ಉ ೯೮] ಅರ್ಜುನ ಇಂದ್ರ ಕೀಲಪರ್ವತದಲ್ಲಿ ತಪಸ್ಸುಮಾಡುತ್ತಿದ್ದಾಗ ವರುಣ ಆತನಲ್ಲಿಗೆ ಬಂದು ಅಸ್ತ್ರಪ್ರದಾನ ಮಾಡಿದ್ದು [ಭಾರ.-ವನ ೪೧]. ವರುಣ ಉಚಥ್ಯ ಮುನಿಯ ಎರಡನೆಯ ಹೆಂಡತಿ ಯಾದ ಭದ್ರೆಯೆಂಬವಳನ್ನು ಅಪಹರಿಸಿದ್ದು [ಅನು. ೨೫೯]. ಜಲಾಧಿಪತ್ಯದಲ್ಲಿ ವರುಣನಿಗೆ ಅಭಿಷೇಕ [ಶಲ್ಯ. ೪೮]. ಸೀತೆ ಅಗ್ನಿಪ್ರವೇಶಮಾಡಿದಾಗ ವರುಣ ಅಲ್ಲಿಗೆ ಬಂದು, ಆಕೆ ಪತಿವ್ರತೆಯೆಂದು ಹೇಳಿದ [ಭಾರ.-ವನ. ೨೯೧]. ಒಮ್ಮೆ ಕ್ಷೀರ ಸಮುದ್ರದಲ್ಲಿ ತನ್ನ ಸಖಿಯರೊಂದಿಗೆ ಕ್ರೀಡಿಸುತ್ತಿದ್ದ ಊರ್ವಶಿಯನ್ನು ಮೋಹಿಸಿ ವರುಣ ಆಕೆಯನ್ನು ಕರೆದ. ಊರ್ವಶಿ ಮಿತ್ರನಿಂದ ಮೊದಲೇ ವೃತಳಾಗಿದ್ದ ಕಾರಣ ವರುಣನನ್ನು ಕುರಿತು "ನನ್ನ ಚಿತ್ತ ನಿನ್ನ ಮೇಲಿದೆ. ದೇಹ ಮಿತ್ರನ ವಶದಲ್ಲಿದೆ" ಎಂದು ಮಿತ್ರನ ಬಳಿಗೆ ಹೋದಳು. ಆಗ ಕ್ರುದ್ಧನಾದ ವರುಣ ತನ್ನ ತೇಜಸ್ಸನ್ನು

ಅಲ್ಲಿದ್ದ ಒಂದು ಕುಂಭದಲ್ಲಿಟ್ಟು, ಊರ್ವಶಿಯನ್ನು ಕುರಿತು "ನೀನು ಭೂಲೋಕದಲ್ಲಿ ಮನುಷ್ಯನಿಗೆ ಪತ್ನಿಯಾಗು" ಎಂದು ಶಾಪವಿತ್ತ. ಅಂತೆಯೇ ಊರ್ವಶಿ ಪುರೂರವನಿಗೆ ಹೆಂಡತಿಯಾಗಿದ್ದಳು. ಬಳಿಕ ಮಿತ್ರನೂ ಅದೇ ಕುಂಭದಲ್ಲಿಯೇ ತನ್ನ ತೇಜಸ್ಸನ್ನೂ ಇಟ್ಟ. ಬಳಿಕ ಅದರಿಂದ ಅಗಸ್ತ್ಯನೂ, ತರುವಾಯ ವಸಿಷ್ಠನೂ ಜನಿಸಿದರು. ಅಗಸ್ತ್ಯ ಹುಟ್ಟುತಲೇ ಮಿತ್ರನನ್ನು ಕಂಡು "ನಾನು ನಿನ್ನ ವೀರ್ಯದಿಂದ ಜನಿಸಿದವನಲ್ಲ" ಎಂದ. ಇದರಿಂದ ಅಗಸ್ತ್ಯ ವರುಣನಿಂದ ಜನಿಸಿದವನೆಂತಲೂ ವಸಿಷ್ಠ ಮಿತ್ರನಿಂದ ಜನಿಸಿದವನೆಂತಲೂ ಸ್ಪಷ್ಟವಾಗುತ್ತದೆ. ಆದರೆ ಮಿತ್ರ, ವರುಣ ಇವರಿಬ್ಬರ ತೇಜಸ್ಸೂ ಒಂದೇ ಕುಂಭದಲ್ಲಿದ್ದುದರಿಂದ ಅಗಸ್ತ್ಯನಿಗೂ ವಸಿಷ್ಠನಿಗೂ ಮೈತ್ರಾವರುಣಿ, ಕುಂಭಸಂಭವ ಎಂಬ ವ್ಯವಹಾರವಿದೆ [ರಾಮಾ.-ಉತ್ತ. ೫೬, ೫೭].

**ವರ್ಗಾ.**—ಒಬ್ಬ ಅಪ್ಸರಸಿ. ಶಾಪದಿಂದ ಮೊಸಳೆಯಾಗಿದ್ದು ಅರ್ಜುನನಿಂದ ಮುಕ್ತಳಾದಳು. ನೋಡು—ನಾರೀತೀರ್ಥ [ಭಾರ.-ಆದಿ. ೨೩೬. ಸಭಾ. ೧೦].

**ವರ್ಚಸ್.**—ಸೋಮನ ಮಗ ದೇವತೆಗಳು ಭೂಭಾರವನ್ನಿಳಿಸಲು ತಂತಮ್ಮ ಅಂಶದಿಂದ ಭೂಲೋಕದಲ್ಲಿ ಜನಿಸಿದಾಗ ಈತ ಅಭಿಮನ್ಯುರೂಪದಿಂದ ಹುಟ್ಟಿದ [ಭಾರ -ಆದಿ. ೬೭, ೬೮].

**ವರ್ಧಮಾನಪುರ** —ಪ್ರತಿಷ್ಠಾನಪುರದ ನಾಮಾಂತರ. ಇದನ್ನು ಈಗ ಬರಡ್ವಾಣ ಎಂದು ಕರೆಯುತ್ತಾರೆ [ಭಾರ.-ಆದಿ ೯೬].

**ವಲಲ.**—ಅಜ್ಞಾತವಾಸ ಸಮಯದಲ್ಲಿ ಭೀಮ ಇಟ್ಟುಕೊಂಡಿದ್ದ ಹೆಸರು [ಭಾರ.-ವಿರಾ. ೩].

**ವಸಾತಿ.**—ದುರ್ಯೋಧನ ಪಕ್ಷದ ಅರಸು. ಅಭಿಮನ್ಯು ಚಕ್ರವ್ಯೂಹವನ್ನು ಹುಗುವಾಗ ಇವ ವೀರವಾದಮಾಡಿ ಅಭಿಮನ್ಯುವಿನಿಂದ ಹತನಾದ [ಭಾರ.-ದ್ರೋ. ೪೪].

**ವಶಿಷ್ಠ (ವಸಿಷ್ಠ).**—ಒಬ್ಬ ಮಹರ್ಷಿ. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸಪುತ್ರರಲ್ಲಿ ಒಬ್ಬ. ಈತ ಕರ್ದಮ ಮುನಿಯ ಏಳನೆಯ ಮಗಳಾದ ಊರ್ಜಾದೇವಿಯನ್ನು ಮದುವೆಯಾಗಿ ಚಿತ್ರಕೇತು, ಸುರೋಚಿ, ವಿರಜ, ಮಿತ್ರ, ಉಲ್ಬಣ, ವಸುಭೃದ್ಯಾನ, ದ್ಯುಮಂತರೆಂಬ ಏಳು ಮಂದಿ ಪುತ್ರರನ್ನು ಪಡೆದ [ಭಾಗ.-೪-೧]. ಈತ ಅರುಂಧತಿಯೆಂಬ ಮತ್ತೊಬ್ಬ ತರುಣಿಯನ್ನು ಮದುವೆಯಾಗಿ ಶಕ್ತಿ ಮಹರ್ಷಿಯನ್ನು ಪಡೆದ. ನೋಡು—ಅರುಂಧತಿ, ವಿಪಾಶಾ, ಪರಾಶರ [ಭಾರ.-ಆದಿ. ೧೮೯, ೧೯೦. ಸಭಾ. ೧೧]. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಮಿತ್ರಾವರುಣರ ಅಂಶದಿಂದ ಊರ್ವಶಿಯಲ್ಲಿ ಜನಿಸಿದವ. ನೋಡು—ವರುಣ [ಭಾಗ.-

೬-೧೮, ೯-೧೩. ರಾಮಾ -ಉತ್ತ. ೫೬, ೫೭]. ಈತ ವರುಣನ ಮಗ [ಭಾರ.-ಆದಿ. ೧೦೬]. ವಸಿಷ್ಠೋಪಾಖ್ಯಾನ [ಭಾರ.-ಆದಿ. ೧೯೦-೧೯೮]. ವಸಿಷ್ಠ ಇಕ್ಷ್ವಾಕು ವಂಶದ ಅರಸರಿಗೆ ಪುರೋಹಿತನಾದದ್ದು ಮುಂತಾಗಿ [ಭಾರ -ಆದಿ. ೧೯೦]. ವಸಿಷ್ಠ ವಿಶ್ವಾಮಿತ್ರರ ಯುದ್ಧ [ರಾಮಾ.-ಬಾಲ. ೫೧-೫೬. ಭಾರ.-ಆದಿ ೧೯೧ ಭಾಗ.-೯-೭. ದೇ ಭಾ.-೭-೧೩ ಮಾರ್ಕ -೭] ನೃಗ ಮಹಾರಾಜನೂ ವಸಿಷ್ಠನೂ ಒಬ್ಬರಿಗೊಬ್ಬರು ಶಾಪಕೊಟ್ಟದ್ದು ಮುಂತಾಗಿ ನೋಡು—ನೃಗ [ರಾಮಾ.-ಉತ್ತ. ೫೫-೫೭]. ವಸಿಷ್ಠ ವ್ಯಾಘ್ರಯೋನಿಯಲ್ಲಿ ಪುತ್ರನನ್ನು ಪಡೆದದ್ದು [ಭಾರ.-ಅನು ೫೩]. ವಸಿಷ್ಠ ಮಿತ್ರಾವರುಣರ ಮಗ ಈತ ನಾರದ ಮಹರ್ಷಿಯ ಸೋದರಿಯಾದ ಅರುಂಧತಿಯನ್ನು ಮದುವೆಯಾಗಿ ಶಕ್ತಿಮಹರ್ಷಿಯನ್ನು ಪಡೆದ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬ. ಗೋತ್ರಪ್ರವರ್ತಕ [ಮತ್ಸ್ಯ.-೨೦೧]. ಕಾರ್ತವೀರ್ಯಾರ್ಜುನ ವಸಿಷ್ಠನ ಆಶ್ರಮವನ್ನು ದಹಿಸಿದ್ದು ವಸಿಷ್ಠ ಅವನಿಗೆ ಶಾಪ ಕೊಟ್ಟದ್ದು [ಭಾರ.-ಶಾಂ ೪೮] ವಸಿಷ್ಠ ಕರಾಳಜನಕರ ಸಂವಾದ [ಭಾರ.-ಶಾಂ. ೩೮-೩೧೩]. ಋಷಿಗಳು ಭಿನ್ನಜಾತಿ ಸ್ತ್ರೀಯರಲ್ಲಿ ಜನಿಸಿದವರಾದರೂ ಅವರ ತಪಸ್ಸು, ವಿದ್ಯೆಗಳೇ ಅವರ ಮಹಿಮೆಗೆ ಕಾರಣಗಳೆಂಬುದಾಗಿ ವಸಿಷ್ಠ ನಿರೂಪಿಸಿದ್ದು [ಭಾರ.-ಅನು. ೫೩]. ವಸಿಷ್ಠ ಪರಶುರಾಮರ ಸಂವಾದ [ಭಾರ.-ಅನು. ೧೩೦]. ವಸಿಷ್ಠ ತನ್ನ ತೇಜಸ್ಸಿನಿಂದ ರಾಕ್ಷಸರನ್ನು ನಿಗ್ರಹಿಸಿ ಇಂದ್ರನನ್ನು ಕಾಪಾಡಿದ್ದು [ಭಾರ.-ಅನು. ೨೬೦]. ಗೋ ಮಹಿಮೆಯ ವಿಷಯವಾಗಿ ಕಲ್ಮಾಷಪಾದನ ಸಂಗಡ ವಸಿಷ್ಠ ಸಂವಾದಮಾಡಿದ್ದು [ಭಾರ.-ಅನು. ೧೧೩]. ಹರಿಶ್ಚಂದ್ರನ ಸತ್ಯಸಂಧತೆಯ ವಿಷಯವಾಗಿ ವಸಿಷ್ಠ ವಿಶ್ವಾಮಿತ್ರರ ವಾಗ್ವಾದ ಮುಂತಾಗಿ [ದೇ.ಭಾ -೭-೧೩, ೧೪]. ಸೌದಾಸನೂ ವಸಿಷ್ಠನೂ ಒಬ್ಬರಿಗೊಬ್ಬರು ಶಾಪಕೊಟ್ಟದ್ದು [ಭಾರ -ಆದಿ. ೧೨೮, ೧೯೩. ಹರಿ.-೧-೧೫. ರಾಮಾ.-ಉತ್ತ. ೬೫].

**ವಸು.**—ನೋಡು—ಅಷ್ಟವಸುಗಳು, ಗಂಗಾ, ಭೀಷ್ಮ, ಶಂತನು.

**ವಸುದಾನ.**—(i) ಪಾಂಚಾಲದೇಶದ ಅರಸು [ಭಾರ -ಸ ೪]. ಅತಿರಥ. ಪಾಂಡವರ ಪರವಾಗಿ ಹೋರಾಡಿದವ [ಭಾರ -ಉ. ೧೭೧]. ಹನ್ನೆರಡನೆಯ ದಿನದ ಯುದ್ಧದಲ್ಲಿ ದ್ರೋಣನಿಂದ ಹತನಾದ [ಭಾರ.-ದ್ರೋ. ೨೧].

(ii) ಕಾಶೀ ದೇಶದ ಅರಸು. ಪಾಂಡವರ ಪರವಾಗಿ ಹೋರಾಡಿ ಹದಿನೈದನೆಯ ದಿನ ದ್ರೋಣ ಸಾಯುವುದಕ್ಕೆ ಮುಂಚಿತವಾಗಿ ಹತನಾದ [ದ್ರೋ. ೧೯೧. ಕರ್ಣ. ೩].

**ವಸುದೇವ.**—ಯದು ವಂಶದ ಶೂರ ರಾಜನ ಮಗ ಕುಂತಿಯ ಒಡಹುಟ್ಟಿದವ [ಭಾರ.-ಸ. ೨೩. ಭಾಗ.-೧೦-೧]. ಈತನ ಜನನ ಕಾಲದಲ್ಲಿ ದೇವಕೆಗಳು ಆನಕ

(ತವುಟೆ) ಗಳನ್ನೂ ದುಂದುಭಿ(ನಗಾರಿ) ಗಳನ್ನೂ ಬಾರಿಸಿದ ಕಾರಣ ಈತನಿಗೆ ಆನಕ ದುಂದುಭಿಯೆಂದು ಹೆಸರು [ಭಾಗ.-೯-೨೪]. ಈತನಿಗೆ ಹದಿನೆಂಟು ಮಂದಿ ಪತ್ನಿಯರು [ಭಾಗ.-೧೦-೮೫]. ಈತನಿಗೆ ಹದಿನಾಲ್ಕು ಮಂದಿ ಪತ್ನಿಯರು ಪುರು ರಾಜನ ಪುತ್ರಿಯರಾದ ರೋಹಿಣಿ, ಇಂದಿರಾ, ವೈಶಾಖಿ, ಭದ್ರಾ, ಸುನಾಮ್ನಿ ಎಂಬ ಐದು ಮಂದಿ; ದೇವಕನ ಪುತ್ರಿಯರಾದ ಸಹದೇವಾ, ಶಾಂತಿದೇವಾ, ಶ್ರೀದೇವಾ, ದೇವ ರಕ್ಷಿತಾ, ವೃಕದೇವೀ, ಉಪದೇವೀ, ದೇವಕಿಯೆಂಬ ಏಳು ಮಂದಿ; ಸುತನು, ವಡವಾ ಎಂಬ ಇಬ್ಬರು ಭಿನ್ನಜಾತಿಯ ವಿಲಾಸಿನಿಯರು. ಇವರಲ್ಲಿ ರೋಹಿಣಿ ಹಿರಿಯ ಹೆಂಡತಿ ಈಕೆ ಬಲರಾಮನೇ ಮೊದಲಾದ ಒಂಬತ್ತು ಮಂದಿ ಪುತ್ರರನ್ನೂ ಚಿತ್ರಾ ಎಂಬ ಪುತ್ರಿಯನ್ನೂ ಪಡೆದಳು. ಚಿತ್ರೆಗೆ ಸುಭದ್ರೆಯೆಂಬುದು ನಾಮಾಂತರ [ಹರಿ.-೧-೩೫. ಭಾಗ.-೯-೨೪]. ವಸುದೇವ ಕಂಸನ ಸೆರೆಯಿಂದ ಮುಕ್ತನಾದದ್ದು [ಭಾಗ.-೧೦-೪]. ವಸುದೇವ ತನ್ನ ಬಂಧುಬಳಗಗಳ ಸಂಗಡ ಸ್ಯಮಂತಪಂಚಕಕ್ಕೆ ಸ್ನಾನಕ್ಕೆ ಹೋಗಿದ್ದಾಗ ಅಲ್ಲಿ ನೆರೆದಿದ್ದ ನಾರದಾದಿಗಳ ಸೂಚನೆಯ ಮೇರೆಗೆ ಯಜ್ಞಮಾಡಿ ಋಷಿಬೃಂದವನ್ನು ತೃಪ್ತಿಗೊಳಿಸಿದ್ದು [ಭಾಗ -೧೦-೮೪]. ಕೃಷ್ಣ ನಿರ್ಯಾಣವನ್ನು ಕೇಳಿ ವಸುದೇವ ತನ್ನ ಮಡದಿಯರೊಂದಿಗೆ ದೇಹತ್ಯಾಗಮಾಡಿದ್ದು [ಮೌಸಲ. ೮].

**ವಸುಮನಸ್.**—(i) ಸೂರ್ಯ ವಂಶದ ಅರಸು. ಅಯೋಧ್ಯಾಧಿಪತಿಯಾದ ಹರ್ಯಶ್ವ ರಾಜನಿಂದ ಚಂದ್ರ ವಂಶದ ಯಯಾತಿ ರಾಜನ ಮಗಳಾದ ಮಾಧವಿಯಲ್ಲಿ ಜನಿಸಿದವ. ಇವನಿಗೆ ವಸುಮಂತನೆಂಬುದು ನಾಮಾಂತರ [ಭಾರ.-ವನ. ೨೦೧. ಸಭಾ. ೮. ವಿರಾ. ೫೩ ಉ ೧೧೬]. ಈತ ಯಯಾತಿಯೊಂದಿಗೆ ಸಂವಾದಮಾಡಿದ್ದು [ಆದಿ. ೮೭]. ವಾಮದೇವ ಮುನಿಯೊಂದಿಗೆ ಸಂವಾದ [ಶಾಂ. ೯೨-೯೪].

(ii) ಕೋಸಲ ದೇಶದ ಮತ್ತೊಬ್ಬ ಅರಸು ಬೃಹಸ್ಪತ್ಯಾಚಾರ್ಯನಿಂದ ರಾಜನ ಗುಣ, ಧರ್ಮ ಮುಂತಾದುವುಗಳನ್ನು ಕೇಳಿ ತಿಳಿದ [ಶಾಂತಿ. ೬೭].

**ವಸುಷೇಣ.**—ಅಂಗ ರಾಜನಾದ ಕರ್ಣನ ನಾಮಾಂತರ [ಭಾರ.-ಆದಿ. ೬೮, ೧೨೦. ವನ. ೩೧೦]. ನೋಡು—ಕರ್ಣ.

**ವಸುಹೋಮ.**—ಬಹಳ ಕಾಲದ ಹಿಂದೆ ಅಂಗದೇಶವನ್ನು ಪಾಲಿಸುತ್ತಿದ್ದ ಒಬ್ಬ ಅರಸು. ಮಾಂಧಾತ ರಾಜನ ಸಂಗಡ ದಂಡನೀತಿಯ ಉತ್ಪತ್ತಿ ವಿಚಾರವಾಗಿ ಸಂವಾದಮಾಡಿದ [ಭಾರ.-ಶಾಂತಿ. ೧೨೨].

**ವಸೋರ್ಧಾರಾ.**—ಒಂದು ತೀರ್ಥ. ಯುಧಿಷ್ಠಿರ ತೀರ್ಥಯಾತ್ರಾ ಸಮಯದಲ್ಲಿ ಈ ತೀರ್ಥಕ್ಕೆ ಬಂದಿದ್ದ. ಇದು ಬದರಿಕಾಶ್ರಮಕ್ಕೆ ಸುಮಾರು ನಾಲ್ಕು ಮೈಲುಗಳ ದೂರದಲ್ಲಿದೆ. ಅಲಕನಂದಾ ನದಿ ಈ ತೀರ್ಥದಿಂದ ಹುಟ್ಟುತ್ತದೆ [ವನ. ೮೦].

**ವಸ್ತ್ರಾಪಹಾರ.**—ದುಶ್ಶಾಸನ ದ್ರೌಪದಿಯನ್ನು ಮಾನಭಂಗಗೊಳಿಸತೊಡಗಿದ್ದು [ಸಭಾ ೯೦]. ಹಂಸಗಳು ನಳ ರಾಜನ ವಸ್ತ್ರವನ್ನು ಅಪಹರಿಸಿದ್ದು. ವಸ್ತ್ರಹೀನನಾದ ನಳ ಮಹಾರಾಜ ದಮಯಂತಿಯು ಬಳಿಯಿದ್ದ ವಸ್ತ್ರಗಳನ್ನು ಅಪಹರಿಸಿದ್ದು [ವನ. ೫೮]. ಉತ್ತರಗೋಗ್ರಹಣ ಯುದ್ಧವಾದ ಬಳಿಕ ಉತ್ತರಕುಮಾರ ಕೌರವರ ವೈಮೋಲಣ ವಸ್ತ್ರಗಳನ್ನು ಅಪಹರಿಸಿದ್ದು [ಭಾರ.-ವಿರಾ ೬೭].

**ವಾತಾಪಿ.**—ಒಬ್ಬ ರಾಕ್ಷಸ [ಭಾರ.-ಆದಿ ೬೬]. ಇಲ್ವಲನ ತಮ್ಮ. ಇವ ಕುರಿಯ ರೂಪದಿಂದ ಅನೇಕ ಮಂದಿ ರಾಕ್ಷಸರನ್ನು ಕೊಂದು, ಅಂತೆಯೇ ಮಾಂಸ ರೂಪದಿಂದ ಅಗಸ್ತ್ಯ ಮುನಿಯ ಹೊಟ್ಟೆಯನ್ನು ಸೇರಿ ಅಲ್ಲಿಯೇ ಜೀರ್ಣನಾದ [ರಾಮಾ.-ಅರ ೧೧. ಭಾರ -ವನ ೯೮-೯೭]. ನೋಡು—ಇಲ್ವಲ.

**ವಾತ್ಸ್ಯ.**—ಒಂದು ದೇಶ. ವತ್ಸ ರಾಜ ರಾಜ್ಯಭಾರಮಾಡುತ್ತಿದ್ದನಾಗಿ ವಾತ್ಸ್ಯ ವೆಂಬ ಹೆಸರು ಈ ದೇಶ ಗಂಗಾ ಯಮುನಾ ನದಿಗಳ ನಡುವೆ ಕಾಶಿಪುರಕ್ಕೆ ದಕ್ಷಿಣ ವಾಗಿ ಕೌಶಾಂಬಿಗೆ ಉತ್ತರದಲ್ಲಿದೆ ಕೌಶಾಂಬಿ ಇದರ ರಾಜಧಾನಿ [ಭಾರ.-ದ್ರೋ. ೧೧].

**ವಾತ್ಸ್ಯಾಯನ.**—ಒಬ್ಬ ಮಹರ್ಷಿ.

**ವಾಮದೇವ.**—(i) ಒಬ್ಬ ಮಹರ್ಷಿ [ಭಾರ.-ಸ. ೭]. ಆತ್ರೇಯ ಮಹರ್ಷಿ ಈತನ ಶಿಷ್ಯ [ವನ. ೧೯೫] ಈತ ಕಾಪಾಡಿದ್ದ ಅಶ್ವಗಳನ್ನು ಶಲನೆಂಬ ಅರಸು ಅಪಹರಿಸಿದ್ದು. ನೋಡು—ದಲ [ವನ. ೧೯೫]. ವಸುಮನನೆಂಬ ರಾಜನ ಸಂಗಡ ದಂಡನೀತಿಯ ವಿಚಾರವಾಗಿ ಸಂವಾದಮಾಡಿದ್ದು [ಭಾರ.-ಶಾಂ. ೯೩-೯೪]. ಈತ ಉಪನಿಷತ್ತುಗಳಲ್ಲಿ ಕೂಡ ಪ್ರಸಿದ್ಧನಾದ ಒಬ್ಬ ಪುರಾತನ ಮಹರ್ಷಿ. ಶಿವಪುತ್ರ ನಾದ ಕುಮಾರಸ್ವಾಮಿಯ ಮೂಲಕ ಪ್ರಣವಾರ್ಥವನ್ನು ತಿಳಿದು ಋಷಿಸಮುದಾ ಯಕ್ಕೆ ಬೋಧಿಸಿದ [ಶಿವ.-ಕೈಲಾಸ. ೧೧-೧೩].

(ii) ಶ್ರೀ ರಾಮನ ಆಸ್ಥಾನದಲ್ಲಿದ್ದ ಒಬ್ಬ ಮಹರ್ಷಿ.

(iii) ಒಬ್ಬ ಅರಸು. ಮೋದಾಪುರದಲ್ಲಿ ರಾಜ್ಯಭಾರಮಾಡುತ್ತಿದ್ದ. ರಾಜ ಸೂಯ ಯಾಗಕ್ಕೆ ಮೊದಲು ಅರ್ಜುನ ದಿಗ್ವಿಜಯಕ್ಕೆ ಹೋಗಿದ್ದಾಗ ಇವನನ್ನು ಸೋಲಿಸಿದ [ಭಾರ.-ಸ. ೨೮].

**ವಾಮನ.**—(i) ಮಹಾವಿಷ್ಣುವಿನ ಐದನೆಯ ಅವತಾರ ಈ ಅವತಾರ ಈಗ ನಡೆಯುತ್ತಿರುವ ವೈವಸ್ವತಮನ್ವಂತರದ ಏಳನೆಯ ತ್ರೇತಾಯುಗದಲ್ಲಿ ನಡೆಯಿತು. ಈತ ಬಲಿಚಕ್ರವರ್ತಿಯ ಸೊಕ್ಕನ್ನು ಮುರಿಯುವುದಕ್ಕಾಗಿ ಅದಿತಿದೇವಿಯಲ್ಲಿ ಕಶ್ಯಪ ಮುನಿಯಿಂದ ಇಂದ್ರನಿಗೆ ತಮ್ಮನಾಗಿ ಜನಿಸಿದ ಕಾರಣ ಈತನಿಗೆ ಉಪೇಂದ್ರ ನೆಂಬ ಹೆಸರೂ ರೂಢಿಯಲ್ಲಿದೆ [ಮತ್ಸ್ಯ.-೪೭. ದೇ.ಭಾ.-೪-೧೬]. ನೋಡು—ಬಲಿ.

ವಾಮನ ಚರಿತ್ರೆ [ಭಾರ.-ಸ. ೪೭. ವನ. ೨೭೩. ಭಾಗ.-೮-೧೩. ಪದ್ಮ, ೪-೧, ೬-೨೭೬. ಮತ್ಸ್ಯ.-೨೪೪-೨೪೬].

(ii) ಅಷ್ಟದಿಗ್ಗಜಗಳಲ್ಲಿ ಒಂದು ದಕ್ಷಿಣದಿಕ್ಕಿನಲ್ಲಿದೆ.

**ವಾಯು.**—ಪಂಚಭೂತಗಳಲ್ಲಿ ಒಂದು, ಮತ್ತು ಭೂತಾಭಿಮಾನಿದೇವತೆಗೂ ಈ ಹೆಸರು ಸಲ್ಲುತ್ತದೆ ಸೀತೆ ಅಗ್ನಿಪ್ರವೇಶಮಾಡಿದ ಕಾಲದಲ್ಲಿ ವಾಯು ರಾಮನನ್ನು ಕುರಿತು ಆಕೆ ಪರಿಶುದ್ಧಳೆಂದು ಹೇಳಿದ [ಭಾರ.-ವನ. ೨೯೨]. ವಾಯುಗುಣನಿರೂಪಣ [ಭಾರ -ಶಾಂತಿ. ೨೬೧]. ವಾಯು ಕುಂತಿಯಲ್ಲಿ ಭೀಮ ನನ್ನು ಪಡೆದದ್ದು [ಆದಿ. ೬೮]. ವಾಯು ಧರ್ಮರಹಸ್ಯಗಳನ್ನು ಬೋಧಿಸಿದ್ದು [ಭಾರ.-ಅನು. ೧೯೧] ನೋಡು—ಅಂಜನಾ, ಕುಶನಾಭ. ಇಂದ್ರ ಹನೂಮಂತನನ್ನು ವಜ್ರಾಯುಧದಿಂದ ಹೊಡೆಯಲಾಗಿ ವಾಯು ಕೋಪಗೊಂಡದ್ದು [ಉತ್ತರರಾಮಾ. ೩೫, ೩೬]. ವಾಯು—ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬುದಾಗಿಯೂ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬುದಾಗಿಯೂ ಹತ್ತು ವಿಧ. ಮೊದಲಿನ ಐದೂ ಪ್ರಾಣವಾಯುಗಳೆಂತಲೂ, ಮಿಕ್ಕ ಐದು ಉಪವಾಯುಗಳೆಂತಲೂ ರೂಢಿ. ಪ್ರಧಾನವಾದ ಪ್ರಾಣವೆಂಬ ವಾಯು ಹೃದಯದಲ್ಲಿಯೂ, ಅಪಾನವೆಂಬ ವಾಯು ಗುದಸ್ಥಾನದಲ್ಲಿಯೂ, ಸಮಾನವೆಂಬ ವಾಯು ನಾಭಿಯಲ್ಲಿಯೂ, ಉದಾನ ವಾಯು ಕಂಠದಲ್ಲಿಯೂ, ವ್ಯಾನವಾಯು ಶರೀರದ ಸಕಲ ಭಾಗಗಳಲ್ಲಿಯೂ ವ್ಯಾಪಿಸಿರುವುದು. ನಾಗವೆಂಬ ಉಪವಾಯು ವಾಗಿಂದ್ರಿಯದಲ್ಲಿರುತ್ತದೆ ಕೂರ್ಮವೆಂಬ ಉಪವಾಯು ಉನ್ಮೀಲನ ಶಕ್ತಿಯನ್ನುಂಟುಮಾಡುತ್ತದೆ. ಕೃಕರವೆಂಬ ಉಪವಾಯು ಹಸಿವನ್ನುಂಟುಮಾಡುತ್ತದೆ ದೇವದತ್ತವೆಂಬ ಉಪವಾಯುವಿನಿಂದ ಆಕಳಿಕೆ, ಬಿಕ್ಕಳಿಕೆಗಳು ಉಂಟಾಗುತ್ತವೆ. ಧನಂಜಯವೆಂಬ ಉಪವಾಯು ದೇಹವನ್ನೆಲ್ಲ ಆವರಿಸಿಕೊಂಡು, ಜೀವ ದೇಹವನ್ನು ಬಿಟ್ಟಮೇಲೆ ಕೂಡ ಸ್ವಲ್ಪ ಹೊತ್ತಿನವರೆಗೆ ಇರುತ್ತದೆ. ನೋಡು—ಮರುತ್ತುಗಳು, ಕನ್ಯಾಕುಬ್ಜ.

**ವಾರಣಾವತ.**—ಒಂದು ಪಟ್ಟಣ. ಹಸ್ತಿನಾವತಿಗೆ ಸಮೀಪದಲ್ಲಿದೆ. ದ್ರೌಪದೀ ಸ್ವಯಂವರಾನಂತರ ಪಾಂಡವರು ಧೃತರಾಷ್ಟ್ರನ ಅಪ್ಪಣೆಯಮೇರೆಗೆ ಅಲ್ಲಿ ಕೆಲಕಾಲ ವಾಸವಾಗಿದ್ದರು [ಭಾರ.-ಆದಿ. ೧೫೫, ೧೫೮] ಪಾಂಡವರು ದುರ್ಯೋಧನನೊಂದಿಗೆ ಸಂಧಿಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದಾಗ, ತಮ್ಮ ಜೀವನಾರ್ಥವಾಗಿ ಬೇಡಿದ ಐದು ಗ್ರಾಮಗಳಲ್ಲಿ ಇದೂ ಒಂದು [ಭಾರ.-ಉದ್ಯೋ. ೩೧]. ಇದು ಈಗ ಮೀರಟ್ (Mirat) ನಗರಕ್ಕೆ ವಾಯುವ್ಯದಿಕ್ಕಿನಲ್ಲಿ ಹತ್ತೊಂಬತ್ತು ಮೈಲುಗಳ ದೂರದಲ್ಲಿ ಬರ್ಣವ (Barnava) ಎಂದು ರೂಢಿಯಲ್ಲಿದೆ. ದುರ್ಯೋಧನ ಅರಗಿನ ಮನೆಯನ್ನು ಕಟ್ಟಿಸಿ, ಪಾಂಡವರನ್ನು ಸುಡಿಸುವುದಕ್ಕೆ ಏರ್ಪಡಿಸಿದ್ದ ಸ್ಥಳ [ಭಾರ.-ಆದಿ. ೧೫೬].

**ವಾರಾಣಸೀ.**—ಕಾಶೀ ಪಟ್ಟಣ. ಇದು ವರುಣಾ ಮತ್ತು ಅಸಿಯೆಂಬ ಎರಡು ನದಿಗಳನ್ನು ಒಳಗೊಂಡಿರುವ ಕಾರಣ ವಾರಾಣಸಿಯೆಂದು ಪ್ರಖ್ಯಾತಿಗೊಂಡಿದೆ [ಭಾರ.-ವನ ೮೨]

**ವಾರಾಣಸೀ ಮಾಹಾತ್ಮ್ಯ.**—[ಮತ್ಸ್ಯ.-೧೮೦]

**ವಾರುಣಿ.**—ವರುಣನ ಮಗ ; ಅಗಸ್ತ್ಯ, ಭೃಗು, ವಸಿಷ್ಠ [ಭಾರ.-ಆದಿ, ೧೦೪, ೧೦೬].

**ವಾರುಣೀ.**—(1) ವರುಣನ ಹೆಂಡತಿ. ಈಕೆಗೆ ಗೌರೀ ಎಂಬುದು ನಾಮಾಂತರ. ನೋಡು—ವರುಣ [ಭಾರ.-ಸ. ೯].

(ii) ಮದ್ಯಾಭಿಮಾನಿದೇವತೆ.

**ವಾರ್ಕ್ಷೀ.**—ವೃಕ್ಷಗಳ ಮಗಳು ನೋಡು—ಮಾರಿಷೆ [ಭಾರ.-ಆದಿ ೨೧೧].

**ವಾರ್ಧಕ್ಷೇಮಿ**—ತ್ರಿಗರ್ತ ದೇಶದ ಅರಸನಾದ ವೃದ್ಧಕ್ಷೇಮನ ಮಗ. ನೋಡು—ಸುಶರ್ಮ [ಭಾರ -ಆ ೨೦೧ ಉದ್ಯೋ ೧೭೧ ದ್ರೋ ೨೧].

**ವಾರ್ಷ್ಣೇಯ**—(1) ನಲ ಮಹಾರಾಜನ ಸಾರಥಿ [ಭಾರ.-ವನ. ೫೨].

(ii) ವೃಷ್ಣಿ ವಂಶದಲ್ಲಿ ಜನಿಸಿದ ಕೃಷ್ಣ, ಸಾತ್ಯಕಿ ಮೊದಲಾದವರೆಲ್ಲರಿಗೂ ಈ ಹೆಸರು ಸಲ್ಲುತ್ತದೆ

**ವಾಲಖಿಲ್ಯರು**—ಮಹರ್ಷಿಗಳು [ಭಾರ.-ಸಭಾ. ೧೧]. ಸ್ವಾಯಂಭುವ ಮನ್ವಂತರದಲ್ಲಿ ಕ್ರತುವೆಂಬ ಮಹರ್ಷಿಯಿಂದ ಕ್ರಿಯಾದೇವಿಯಲ್ಲಿ ಜನಿಸಿದವರು. ಇವರು ಅರುವತ್ತು ಸಾವಿರ ಮಂದಿ [ಭಾಗ.-೪-೧. ವಿಷ್ಣು.-೧-೧೦]. ಇವರು ರೂಪದಲ್ಲಿ ತುಂಬ ಚಿಕ್ಕವರು ಒಮ್ಮೆ ಕಶ್ಯಪ ಮುನಿ ನೆರವೇರಿಸಿದ ಯಜ್ಞಕಾರ್ಯದಲ್ಲಿ ಇವರು ಒತ್ತಾಸೆಮಾಡಿ ತುಂಬ ಬಳಲಿದ್ದರು. ಆಗ ಇಂದ್ರ ಇವರನ್ನು ಪರಿಹಾಸ ಮಾಡಲಾಗಿ ಕ್ರುದ್ಧರಾದ ವಾಲಖಿಲ್ಯರು, ಕಶ್ಯಪನಿಂದ ಜನಿಸಿದ ಗರುಡ ಇಂದ್ರನ ಗರ್ವವನ್ನು ಮುರಿಯುವನೆಂದು ಶಾಪವಿತ್ತು, ಗರುಡನ ಉತ್ಪತ್ತಿಗಾಗಿ ತಪಸ್ಸು ಮಾಡಿದರು [ಭಾರ.-ಆದಿ. ೩೧]. ಪುಷ್ಕರವನ್ನು ತಾವು ಕದಿಯಲಿಲ್ಲವೆಂಬದಾಗಿ ವಾಲಖಿಲ್ಯರು ಮಾಡಿದ ಶಪಥಗಳು [ಭಾರ.-ಅನು. ೧೪೩].

**ವಾಲಿ.**—ಇಂದ್ರನ ಮಗ. ಸುಗ್ರೀವನ ಅಣ್ಣ [ಭಾರ.-ಸ. ೯]. ಹೆಂಡತಿ ತಾರೆಯೆಂಬವಳು. ಅಂಗದ ಈತನ ಮಗ [ಭಾರ.-ವನ ೨೮೧]. ನೋಡು—ಋಕ್ಷರಜ. ಇಂದ್ರನಿಂದ ಜನಿಸಿದವ. ಸುಗ್ರೀವ ಇವನ ತಮ್ಮ, ಋಕ್ಷರಜ ಮರಳಿ ಪುರುಷನಾದ ಬಳಿಕ ವಾಲಿ ಕಿಷ್ಕಿಂಧೆಗೆ ಅರಸನಾದ. ಸುಗ್ರೀವ ಯುವರಾಜನಾಗಿದ್ದ [ವಾ.ರಾ.-ಉ. ಪ್ರಕ್ಷಿ. ಸ ೧]. ದೇವದಾನವರು ಪಾಲ್ಗಡಲನ್ನು ಕಡೆದಾಗ ವಾಲಿ ನೋಡುವುದಕ್ಕೆ ಹೋಗಿದ್ದ ದೇವತೆಗಳು ಕಡಲನ್ನು ಕಡೆದು, ದಣಿದಿದ್ದಾಗ ವಿಷ್ಣು ಇಂದ್ರನ

ಮೂಲಕ ವಾಲಿಯನ್ನು ಬರಮಾಡಿಸಿ, ಇವನಿಗೆ ಇದಿರಾಗಿ ನಿಂತವನ ಸಾಮರ್ಥ್ಯ ದಲ್ಲಿ ಅರ್ಧಭಾಗ ಈತನಿಗೆ ಬರುವಂತೆ ವರವಿತ್ತು ದಿವ್ಯವಾದ ಕಾಂಚನ ಕಮಲ ಮಾಲೆಯನ್ನು ಕೊಡಿಸಿ, ಹಾಲ್ಗಡಲನ್ನು ಕಡೆಯುವುದರಲ್ಲಿ ದೇವತೆಗಳಿಗೆ ಸಹಾಯ ಮಾಡಹೇಳಿದ.

ಪುಚ್ಛಾಕರ್ಷಣಸಕ್ತಾನಾಂ ಸುರಾಣಾಂ ಕ್ಲೇಶಶಾಂತಯೇ ।
ಕ್ಷೀರಾಬ್ಧಿಮಥನಂ ದ್ರಷ್ಟುಂ ಬಲವನ್ತಂ ಸಮಾಗತಂ ॥
ಆಹೂಯ ವಾಲಿನಂ ವಿಷ್ಣುಃ ದದೌ ತತ್ಪ್ರೀತಯೇ ವರಂ ।
ಪ್ರತೀಪವರ್ತಿನೋ ಭೂಯಾತ್ ಬಲಸ್ಯಾರ್ಧಂ ತವೇಂದ್ರಜ ॥
ಇತಿ ದತ್ವಾ ವರಂ ದೇವಃ ಕಾಂಚನೀಂ ಕಮಲಸ್ರಜಂ ।
ಪ್ರದಾಯ ಚೇಂದ್ರದ್ವಾರೇಣ ಸಹಾಯೇ ತಮಯೋಜಯತ್ ॥
ತಯಾ ಭೂಷಿತಕಂಠಸ್ಯ ಬಲಂ ಪ್ರಜ್ಞಾನಮೇವ ಚ ।
ಶೋಭತೇ ವರ್ಧತೇ ನಿತ್ಯಂ ಕಾಂಚನಾಂಬುಜಧಾರಣಾತ್ ॥

[ತತ್ವಸಂ.ರಾ.-ಕಿ. ೫].

ವಾಲಿ ರಾವಣನನ್ನು ಸೋಲಿಸಿ ಅವನ ಬೇಡಿಕೆಯಂತೆ ರಾವಣನೊಂದಿಗೆ ಸ್ನೇಹ ಮಾಡಿದ್ದು [ರಾಮಾ.-ಉತ್ತ ೩೪]. ವಾಲಿ ಸುಗ್ರೀವರಿಗೆ ದ್ವೇಷ ಬರಲು ಕಾರಣ [ರಾ.-ಕಿ. ೯]. ನೋಡು—ದುಂದುಭಿ, ಮತಂಗ. ವಾಲಿ ಸುಗ್ರೀವರ ಯುದ್ಧ [ರಾ.-ಕಿ. ೧೨, ೧೪]. ತಾರೆ ವಾಲಿಗೆ ನೀತಿ ಹೇಳಿದ್ದು [ರಾಮಾ.-ಕಿ. ೧೫]. ವಾಲಿ ರಾಮ ನಿಂದ ಹತನಾದದ್ದು, ವಾಲಿ ರಾಮನನ್ನು ನಿಂದಿಸಿದ್ದು, ಅಂತೆಯೇ ರಾಮನನ್ನು ಹೊಗಳಿದ್ದು, ಅಂಗದನನ್ನು ರಾಮನಿಗೆ ಅರ್ಪಿಸಿದ್ದು ಮುಂತಾಗಿ [ರಾಮಾ.-ಕಿ. ೧೬-೧೮]. ತಾರೆ ವಾಲಿಯನ್ನು ನೋಡಿ ಹಂಬಲಿಸಿದ್ದು [ರಾಮಾ.-ಕಿ. ೧೯-೨೦, ೨೩]. ವಾಲಿಯ ಮರಣ [ರಾಮಾ.-ಕಿ. ೨೨. ಭಾರ.-ವನ. ೨೮೧]. ವಾಲಿಯ ಶವಸಂಸ್ಕಾರ [ರಾಮಾ.-ಕಿ. ೨೫].

**ವಾಲ್ಮೀಕಿ.**—ಒಬ್ಬ ಬ್ರಹ್ಮರ್ಷಿ. ಪ್ರಚೇತಸನ ಮಗ. ಈತ ಕಾಡಿನಲ್ಲಿ ಬೇಡರ ಸಂಗಡ ಸೇರಿ, ದಾರಿಗಳ್ಳನಾಗಿದ್ದ. ಒಮ್ಮೆ ಸಪ್ತರ್ಷಿಗಳನ್ನು ಇದಿರಿಸಿ, ಅವರ ಮೂಲಕ ಜ್ಞಾನವನ್ನು ಪಡೆದು ರಾಮಮಂತ್ರ ಜಪದಿಂದ ಮೈಮರೆತಿದ್ದಾಗ ಈತನ ಮೇಲೆ ಹುತ್ತ ಬೆಳೆದಿತ್ತು. ಮರಳಿ, ಸಪ್ತರ್ಷಿಗಳು ಬಂದು ಈತನನ್ನು ಎಚ್ಚರ ಗೊಳಿಸಿ ಈತನಿಗೆ ವಾಲ್ಮೀಕಿಯೆಂದು ಹೆಸರಿಟ್ಟರು [ಅಧ್ಯಾತ್ಮರಾ.-ಅರ. ಉತ್ತರ. ೭]. ವಾಲ್ಮೀಕಿ ತಮಸಾ ನದಿಗೆ ಸ್ನಾನಾರ್ಥವಾಗಿ ಹೋಗಿದ್ದಾಗ ಕ್ರೌಂಚ ಪಕ್ಷಿಗಳ ಯುಗ್ಮದಲ್ಲಿ ಗಂಡು ಹಕ್ಕಿಯನ್ನು ಕೊಂದ ಬೇಡನಿಗೆ ಶಾಪಕೊಡಹೋಗಿ ಈತನ ಬಾಯಿಂದ ಛಂದೋರೂಪವಾದ(ಶ್ಲೋಕ)ವಾಕ್ಯಗಳು ಹೊರಬಂದುವು. ವಾಲ್ಮೀಕಿ

ಚಿಂತಾಕ್ರಾಂತನಾಗಿ ಆಶ್ರಮವನ್ನು ಸೇರಿದ. ಆಗ ಬ್ರಹ್ಮ ಅಲ್ಲಿಗೆ ಬಂದು ರಾಮಾಯಣವನ್ನು ಬರೆಯಹೇಳಿದ ಬಳಿಕ ನಾರದ ರಾಮಾಯಣಸಾರವನ್ನು ವಾಲ್ಮೀಕಿಗೆ ಹೇಳಿದ. ವಾಲ್ಮೀಕಿ ರಾಮಾಯಣವನ್ನು ರಚಿಸಿದ [ರಾಮಾ.-ಬಾಲ. ೧]. ರಾಮನ ಸಭೆಯಲ್ಲಿ ಕುಶ ಲವರು ರಾಮಾಯಣವನ್ನು ಪಠಿಸಿದ್ದು [ಬಾಲ. ೩ ಭಾರ.-ಆದಿ. ೫೫. ಸ. ೭]. ರಾಮ ಸೀತಾ ಲಕ್ಷ್ಮಣರೊಂದಿಗೆ ಅರಣ್ಯವಾಸಕ್ಕೆ ಹೋದಾಗ ವಾಲ್ಮೀಕಿ ಅವರನ್ನು ಸತ್ಕರಿಸಿದ್ದು [ರಾಮಾ.-ಅಯೋ. ೫೬]. ಲಕ್ಷ್ಮಣ ರಾಮನ ಅಪ್ಪಣೆಯಂತೆ ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಹೋದ ಬಳಿಕ ವಾಲ್ಮೀಕಿ ಆಕೆಯನ್ನು ತನ್ನ ಆಶ್ರಮಕ್ಕೆ ಕರೆದುಯ್ದು ಋಷಿಪತ್ನಿಯರ ಮೂಲಕ ಆಕೆಯನ್ನು ಆದರಿಸಿದ್ದು [ರಾಮಾ -ಉತ್ತ. ೪೯]. ಶತ್ರುಘ್ನ ವಾಲ್ಮೀಕಿಯ ಆಶ್ರಮಕ್ಕೆ ಬಂದದ್ದು, ಅದೇ ರಾತ್ರಿಯೇ ಸೀತೆ ಅವಳಿ ಮಕ್ಕಳನ್ನು ಹೆತ್ತದ್ದು, ಲವ ಕುಶರ ನಾಮಕರಣ ಮುಂತಾದ್ದು [ರಾಮಾ.-ಉತ್ತ. ೬೬]. ವಾಲ್ಮೀಕಿ ಲವ ಕುಶರ ಸಂಗಡ ರಾಮನಲ್ಲಿಗೆ ಬಂದು ರಾಮಾಯಣವನ್ನು ಗಾನಮಾಡಿಸಿದ್ದು [ರಾಮಾ.-ಉತ್ತ. ೯೩, ೯೪]. ವಾಲ್ಮೀಕಿ ಸೀತೆಯನ್ನು ರಾಮನ ಬಳಿಗೆ ಕರೆತಂದದ್ದು [ರಾಮಾ.-ಉ. ೯೫]. ವಾಲ್ಮೀಕಿ ಬ್ರಹ್ಮಹತ್ಯೆಗೆ ಗುರಿಯಾಗಿ ಪರಮೇಶ್ವರನ ಮಹಿಮೆಯಿಂದ ಆ ಹತ್ಯೆಯನ್ನು ಹೋಗಲಾಡಿಸಿಕೊಂಡದ್ದು [ಭಾರ.-ಅನು. ೪೯].

**ವಾಸವೀ** —ಉಪರಿಚರವಸುವಿನ ಮಗಳಾದ ಸತ್ಯವತಿ. ನೋಡು—**ಸತ್ಯವತಿ** [ಭಾರ -ಆದಿ ೬೪].

**ವಾಸವೇಯ.**—ಮೇಲೆ ಹೇಳಿದ ವಾಸವಿಯ ಮಗ ಕೃಷ್ಣದ್ವೈಪಾಯನ [ಭಾರ.-ಆದಿ. ೧].

**ವಾಸುಕಿ** —ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವ ಸರ್ಪರಾಜ [ಭಾರ.-ಆದಿ. ೩೫, ೩೭, ೩೮, ೫೪, ೬೬ ಸ. ೯ ಉ. ೧೦೯]. ಈತನ ಹೆಂಡತಿ ಶತಶೀರ್ಷೆಯೆಂಬವಳು [ಭಾರ.-ಉ. ೧೧೭]. ಜರತ್ಕಾರು ಮುನಿಯ ಪತ್ನಿಯಾದ ಜರತ್ಕಾರು ಈತನ ಸೋದರಿ [ಭಾರ.-ಆದಿ. ೩೮]. ವಾಸುಕಿಯನ್ನು ಹಗ್ಗವಾಗಿ ಮಾಡಿ ದೇವ ದಾನವರು ಪಾಲ್ಗಡಲನ್ನು ಕಡೆದದ್ದು [ಭಾರ -ಆದಿ. ೧೮. ಭಾಗ -೮-೭. ಶಿವ.-ಶತರುದ್ರ. ೧೬. ರಾಮಾ.-೧-೪೫. ಸ್ಕಾ.-ಕೇದಾರ. ೯-೧೩]. ಜನಮೇಜಯನ ಸರ್ಪಯಾಗ ಸಂದರ್ಭದಲ್ಲಿ ವಾಸುಕಿಗೂ ತಂಗಿಯಾದ ಜರತ್ಕಾರುವಿಗೂ ಸಂವಾದ [ಆದಿ. ೪೮, ೫೩].

**ವಾಸುದೇವ.**—(i) ಸರ್ವವ್ಯಾಪಕನಾದ ಪರಮಾತ್ಮ [ಭಾರ.-ಉ. ೬೯. ಶಾಂ. ೩೫೦. ವಿಷ್ಣು.-೧-೪].

(ii) ಈ ಶಬ್ದ ಸಾಮಾನ್ಯವಾಗಿ ವಸುದೇವಪುತ್ರನಾದ ಕೃಷ್ಣನಲ್ಲಿ ರೂಢವಾಗಿದೆ. ನೋಡು—ಕೃಷ್ಣ. ಭಗವಂತನ ಮಹಿಮೆಯ ವಿಷಯವಾಗಿ ಕೃಷ್ಣದ್ವೈ

ಪಾಯನನೊಂದಿಗೆ ವಾಸುದೇವನ ಸಂವಾದ [ಭಾರ.-ಅನು. ೧೫]. ಬ್ರಾಹ್ಮಣನ ಮಹಿಮೆಯ ವಿಷಯವಾಗಿ ಭೂದೇವಿಯೊಂದಿಗೆ ಸಂವಾದ [ಭಾರ.-ಅನು. ೬೯]. ಗೃಹಸ್ಥಧರ್ಮ ವಿಷಯವಾಗಿ ಭೂದೇವಿಯೊಂದಿಗೆ ಸಂವಾದ [ಭಾರ.-ಅನು. ೧೫೪]. ವಾಸುದೇವನ ಮಹಿಮೆ [ಭಾರ.-ಭೀ. ೬೯].

**ವಿಕರ್ಣ.**—ಧೃತರಾಷ್ಟ್ರನ ನೂರು ಮಂದಿ ಪುತ್ರರಲ್ಲಿ ಒಬ್ಬ. ದುರ್ಯೋಧನನ ತಮ್ಮ [ಭಾರ.-ಆ. ೬೩, ೬೮, ೧೩೧, ೨೦೧]. ದ್ಯೂತಸಭೆಯಲ್ಲಿ ಯುಧಿಷ್ಠಿರ ತಾನು ಸೋತ ಬಳಿಕ ದ್ರೌಪದಿಯನ್ನು ಪಣವಾಗಿ ಒಡ್ಡಿ ಪಗಡೆಯಾಡಿದ್ದು ನ್ಯಾಯವಲ್ಲವೆಂಬುದಾಗಿ ವಿಕರ್ಣ ಸಭೆಯಲ್ಲಿ ವಾದಿಸಿದ್ದು, ಕರ್ಣ ಅವನನ್ನು ಮೂದಲಿಸಿದ್ದು [ಭಾರ.-ಸ. ೯೦]. ಉತ್ತರ ಗೋಗ್ರಹಣ ಸಮಯದಲ್ಲಿ ಇವನೂ ಯುದ್ಧಕ್ಕೆ ಬಂದಿದ್ದ [ಭಾರ.-ವಿ. ೩೭]. ಭಾರತಯುದ್ಧದ ಆರನೆಯ ದಿನದಲ್ಲಿ ಇವ ಯುದ್ಧಮಾಡಿದ್ದು [ಭಾರ.-ಭೀ. ೭೭, ೭೮]. ಹದಿನಾಲ್ಕನೆಯ ದಿವಸದ ಹಗಲು ಯುದ್ಧದಲ್ಲಿ ವಿಕರ್ಣ ನಕುಲನಿಂದ ಸೋತದ್ದು [ದ್ರೋ. ೧೦೭]. ಅದೇ ದಿನದಲ್ಲಿ ಭೀಮ ಕರ್ಣನನ್ನು ಸೋಲಿಸಿದಾಗ ಇವ ಕರ್ಣನಿಗೆ ಒತ್ತಾಸೆಮಾಡಬಂದು ಭೀಮನಿಂದ ಮಡಿದ [ಭಾರ.-ದ್ರೋ. ೧೩೭]. ವಿಕರ್ಣನ ಶವವರ್ಣನೆ [ಭಾರ.-ಸ್ತ್ರೀ. ೧೯].

**ವಿಕುಣ್ಠನ.**—ಚಂದ್ರವಂಶದ ಹಸ್ತಿರಾಜನ ಮಗ. ಇವ ಸುಂದರಾ ಎಂಬ ಸ್ತ್ರೀಯನ್ನು ಮದುವೆಯಾಗಿ ಅಜಮೀಢನೆಂಬ ತನಯನನ್ನು ಪಡೆದ. ನೋಡು—ಅಜಮೀಢ [ಭಾರ.-ಆದಿ ೬೩].

**ವಿಘ್ನೇಶ್ವರ.**—ಶಿವನ ಮಗನಾದ ಗಣಪತಿಯ ನಾಮಾಂತರ ನೋಡು—ಗಣಪತಿ, ಗಣೇಶ ಪೂರ್ವದಲ್ಲಿ ದೇವತೆಗಳೆಲ್ಲ ತಮ್ಮ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವುದಕ್ಕೂ ರಾಕ್ಷಸರ ಕಾರ್ಯಗಳು ವಿಘ್ನದಿಂದ ಹಾಳಾಗುವುದಕ್ಕೂ ಶಿವನನ್ನು ಮರೆಹೊಕ್ಕರು. ಶಿವ ಪ್ರತ್ಯಕ್ಷವಾದಕೂಡಲೇ ಬೃಹಸ್ಪತಿ ದೇವತೆಗಳ ಇಷ್ಟಾರ್ಥವನ್ನು ತಿಳಿಸಲಾಗಿ, ಶಿವ ಪಾರ್ವತಿಯಲ್ಲಿ ಗಜಾನನನಾಗಿ ತ್ರಿಶೂಲ ಪಾಶಧಾರಿಯಾಗಿ ಜನಿಸಿದ. ಆ ಬಾಲಕ ಜನಿಸಿದ ಕೂಡಲೇ ವಿಚಿತ್ರವಸ್ತ್ರಭೂಷಣಾಲಂಕೃತನಾಗಿ ನರ್ತನಮಾಡುತ್ತ ಶಿವನಲ್ಲಿಗೆ ಬಂದು ತಾಯ್ತಂದೆಗಳಿಗೆ ನಮಸ್ಕರಿಸಲಾಗಿ ಶಿವ ಆ ಬಾಲಕನನ್ನು ಬಿಗಿದಪ್ಪಿ ಮುದ್ದಾಡಿ, ಗಣಪತಿಯ ಕರ್ತವ್ಯಗಳನ್ನು ವಿವರಿಸಲಾಗಿ, ಗಣಪತಿ ಕೂಡಲೇ ವಿಘ್ನಗಣಗಳನ್ನು ಸೃಷ್ಟಿಮಾಡಿ, ಬ್ರಹ್ಮನ ಸೂಚನೆಯಮೇರೆಗೆ ರಾಕ್ಷಸರನ್ನು ಕೊಂದು ದೇವತೆಗಳ ತೊಡಕುಗಳನ್ನೆಲ್ಲ ನಿರ್ಮೂಲಗೊಳಿಸಿ ತ್ರಿಮೂರ್ತಿಗಳಿಂದಲೂ ಪೂಜೆಯನ್ನು ಕೈಕೊಳ್ಳುವಂತೆ ವರವನ್ನು ಪಡೆದ [ಲಿಂಗ.-೧೦೫].

ಪಾರ್ವತಿ ಶಿವನನ್ನು ಮದುವೆಯಾಗಿ ಕೈಲಾಸದಲ್ಲಿ ಶಿವನೊಂದಿಗೆ ಸಂಸಾರ ಮಾಡಿಕೊಂಡಿದ್ದಾಗ ಒಂದು ದಿನ ಗಿರಿಜೆಯ ಸಖಿಯರಾದ ಜಯಾ ವಿಜಯಾ ಎಂಬ

ವರು "ಎಲೌ ಸಖಿ, ಇಲ್ಲಿರುವ ನಂದಿ, ಭೃಂಗಿ ಮೊದಲಾದ ಲೆಕ್ಕವಿಲ್ಲದ ಭೃತ್ಯರೆಲ್ಲರೂ ಶಿವನಕಡೆಯವರೇ ಆಗಿದ್ದಾರೆ. ನಮ್ಮವನನ್ನು ಒಬ್ಬನನ್ನಾದರೂ ಇಟ್ಟುಕೊಳ್ಳ ಬೇಕು" ಎಂದರು. ಪಾರ್ವತಿ ಅದನ್ನು ಯುಕ್ತವೆಂತಲೇ ಭಾವಿಸಿದಳು. ಇಂತಿರಲು ಒಂದು ದಿನ ಪಾರ್ವತಿ ನಂದಿಯನ್ನು ಬಾಗಿಲು ಕಾವಲಿಗೆ ಇರಿಸಿ, ತಾನು ಮಿಾಯ ಹೋದಳು. ಅಷ್ಟರಲ್ಲಿ ಶಿವ ಬಂದು, ನಂದಿಯನ್ನು ಹೆದರಿಸಿ ಒಳಹೊಕ್ಕ. ಪಾರ್ವತಿ ನಾಚಿಕೆಗೊಂಡು ಥಟ್ಟನೆ ವಸ್ತ್ರಧಾರಣಮಾಡಿ, ತನ್ನ ಸಖಿಯರ ಮಾತಿಗೆ ಹೆಚ್ಚು ಗಮನ ಕೊಟ್ಟು ಮರುದಿನ ಸ್ನಾನಕ್ಕೆ ಹೋಗುವ ಮುಂಚೆ ತನ್ನ ದೇಹದ ಕೊಳೆ ಯಿಂದ ದಿವ್ಯಸುಂದರಾಕಾರನಾದ ಒಬ್ಬ ಬಾಲಕನನ್ನು ಸೃಷ್ಟಿಸಿ, ಅವನನ್ನು ನಾನಾ ಪರಿಯಿಂದ ಹರಸಿ, ದಿವ್ಯವಸ್ತ್ರಾಭರಣಗಳಿಂದ ಸಿಂಗರಿಸಿ, ಕೈಗೆ ಒಂದು ದಂಡವನ್ನೂ ಕೊಟ್ಟು ದ್ವಾರಪಾಲನನ್ನಾಗಿ ನಿಯಮಿಸಿ ತಾನು ಮಿಾಯುವುದಕ್ಕೆ ಹೋದಳು. ಶಿವ ಎಂದಿನಂತೆ ಒಳಹುಗುವ ವೇಳೆಗೆ ಈ ಬಾಲ ಆತನನ್ನು ಅಡ್ಡಗಿಸಿದ ಶಿವ ಎಷ್ಟು ವಿಧದಿಂದ ಹೇಳಿದರೂ ಒಳಗೆ ಬಿಡಲಿಲ್ಲ. ಬಲಾತ್ಕಾರದಿಂದ ನುಗ್ಗತೊಡಗಿದ ಶಿವನನ್ನು ಈ ಬಾಲ ದೊಣ್ಣೆಯಿಂದ ಬಲವಾಗಿ ಹೊಡೆದ. ಬಳಿಕ ಶಿವ ತನ್ನ ಪರಿವಾರವನ್ನು ಕಳುಹಲಾಗಿ, ದಂಡಪಾಣಿಯಾದ ಬಾಲಕ ಅವರನ್ನೂ ಸಡ್ಡೆಮಾಡದಿರಲಾಗಿ, ಅವ ರೆಲ್ಲರೂ ಈತನ ಮೇಲೆ ಬಿದ್ದು ಭಂಗಪಟ್ಟರು ಇದನ್ನು ಕಂಡು ಶಿವ ನಗುತ್ತ ಬ್ರಹ್ಮನನ್ನು ಕುರಿತು "ಕಂಡೆಯಾ, ಇವನಾವನೋ ಹುಡುಗ ! ನನ್ನ ಮನೆಯ ಬಾಗಿ ಲಲ್ಲಿ ನನ್ನ ಪರಿವಾರವನ್ನೆಲ್ಲ ಹಾಳುಮಾಡಿದ್ದಾನೆ. ನೀನಾದರೂ ಹೋಗಿ ಉಪಾಯ ವಾಗಿ ದಾರಿಬಿಡಿಸು" ಎಂದ ಬಳಿಕ ಬ್ರಹ್ಮ ಋಷಿಸಮೂಹದೊಂದಿಗೆ ಅಲ್ಲಿ ಹೋಗುತ್ತಿರುವಾಗಲೇ ಆ ಬಾಲಕ ಬ್ರಹ್ಮನ ಮೇಲೆ ಬಿದ್ದು, ಆತನ ಗಡ್ಡ ಮಿಾಸೆ ಗಳನ್ನು ಕೀಳತೊಡಗಿದ ಆಗ ಬ್ರಹ್ಮ "ಪ್ರಭೋ, ಕ್ಷಮಿಸು ನಾನು ಬ್ರಾಹ್ಮಣ. ಯುದ್ಧಕ್ಕೆ ಬಂದವನಲ್ಲ" ಎಂದು ಹೇಳುತ್ತಿರುವಾಗಲೇ ಆ ಬಾಲಕ ಪರಿಘಾಯುಧ ವನ್ನು ಕೈಕೊಳ್ಳಲಾಗಿ ಬ್ರಹ್ಮ ಹೆದರಿ ಓಡಿಹೋಗಿ ಶಿವನಲ್ಲಿ ಬಿನ್ನೈಸಲಾಗಿ ಶಿವ ಇಂದ್ರಾದಿ ಸಕಲ ದೇವತೆಗಳನ್ನೂ ಸೇನಾಸಮೇತರಾಗಿ ಕಳುಹಿದ. ಈ ಗೊಂದಲ ವನ್ನು ಕಂಡು ಕ್ರುದ್ಧಳಾದ ಗಿರಿಜೆ ತನ್ನ ದೂತನ ಸಹಾಯಕ್ಕಾಗಿ ಸಕಲಾಯುಧ ಯುಕ್ತರಾದ ಇಬ್ಬರು ಶಕ್ತಿಗಳನ್ನು ನಿರ್ಮಿಸಿದಳು. ದೇವತೆಗಳೆಲ್ಲರೂ ಸೋತು ದಿಕ್ಕುಪಾಲಾದರು. ಆಗ ನಾರದ ಅಲ್ಲಿಗೆ ಬಂದು "ಮಹಾಪ್ರಭೋ, ನಿನ್ನ ಮಾಯೆ ಯನ್ನು ಬಲ್ಲವರಾರು ? ಈ ನೆವದಿಂದ ನಿನ್ನ ಪರಿವಾರದವರ ಮತ್ತು ಇಂದ್ರಾದಿಗಳ ಸೊಕ್ಕನ್ನು ಮುರಿದೆ. ಈಗ ನೀನೇ ಈ ಬಾಲನನ್ನು ಶಾಸನಮಾಡಬೇಕೆಂದ. ಬಳಿಕ ವಿಷ್ಣುವನ್ನು ಕಳುಹಲಾಗಿ ಆತನೂ ಪರಾಙ್ಮುಖನಾದ. ಬಳಿಕ ಶಿವನೇ ಬಂದು ಬಹಳ ಹೊತ್ತು ಹೋರಾಡಿ, ಆಶ್ಚರ್ಯಪಟ್ಟು "ಇವನನ್ನು ಮೋಸದಿಂದ ಕೊಲ್ಲ

ಬೇಕು" ಎಂದು ನಿಶ್ಚಯಿಸಿ, ವಿಷ್ಣುವನ್ನು ಅವನ ಮೇಲೆ ಯುದ್ಧಕ್ಕೆ ಕಳುಹಿ, ಅವರಿಬ್ಬರೂ ಯುದ್ಧಮಾಡುತ್ತಿದ್ದಾಗ ತಾನು ಶೂಲದಿಂದ ಅವನ ಕುತ್ತಿಗೆಯನ್ನು ಕತ್ತರಿಸಿ ಬೀಳಿಸಿದ ಅದನ್ನು ಕಂಡು ದೇವತೆಗಳು ಸಂತೋಷದಿಂದ ಉಬ್ಬಿ ಮಹೋತ್ಸವವನ್ನು ನಡಸಿದರು. ಇದನ್ನು ಕಂಡು ಪುತ್ರಶೋಕವಿಹ್ವಲೆಯಾದ ಗಿರಿಜೆ ಲಕ್ಷಗಟ್ಟಳೆ ಶಕ್ತಿಗಳನ್ನು ಸೃಷ್ಟಿಮಾಡಲಾಗಿ, ಆ ಶಕ್ತಿಪರಿವಾರ ದೇವತೆಗಳನ್ನು ಸದೆಬಡಿಯುತ್ತ ಬಂತು. ಆಗ ದೇವತೆಗಳೆಲ್ಲರೂ ಒಟ್ಟುಗೂಡಿ ದಿಕ್ಕು ತೋರದೆ "ಗಿರಿಜೆಯನ್ನು ಸಮಾಧಾನಪಡಿಸಿದಲ್ಲದೆ ಈ ಪೀಡೆ ತೊಲಗುವುದಿಲ್ಲ" ಎಂಬುದಾಗಿ ಶಿವನಲ್ಲಿ ಅರಿಕೆಮಾಡಿದರು. ಗಿರಿಜೆಯ ಮುಂದೆ ಹೋಗಿ ನಿಲ್ಲಲು ಯಾರಿಗೂ ಧೈರ್ಯಸಾಹಸಗಳಿಲ್ಲವಾದುವು. ಆಗ ದೇವರ್ಷಿಗಳು ಶಿವನ ಸೂಚನೆಯಂತೆ ಆಕೆಯನ್ನು ಹೊಗಳಿದರು. ಆಗ ಗಿರಿಜೆ ಶಾಂತಿಯನ್ನು ಧರಿಸಿ, "ನನ್ನ ಮಗ ಬದುಕುವುದಾದರೆ ಅಂದಿಗೆ ಯುದ್ಧವಿಲ್ಲ, ಮತ್ತು ಈ ನನ್ನ ಮಗನನ್ನು ನೀವೆಲ್ಲರೂ ಪೂಜಿಸಬೇಕು" ಎಂದಳು. ಈ ಮಾತನ್ನು ಸುರಮುನಿಗಳ ಮೂಲಕ ತಿಳಿದ ಶಿವ "ಉತ್ತರ ದಿಕ್ಕಿಗೆ ಹೋಗಿ ಮೊದಲು ದೊರೆತ ಪ್ರಾಣಿಯ ರುಂಡವನ್ನು ಈ ಮುಂಡಕ್ಕೆ ಸೇರಿಸಿರಿ" ಎಂದ ಕೂಡಲೇ ಒಂದು ದಂತವಿದ್ದ ಆನೆಯನ್ನು ಕಂಡು ಅದರ ಕುತ್ತಿಗೆಯನ್ನು ತಂದು ಶುಭ್ರವಾಗಿ ತೊಳೆದು ವೇದಮಂತ್ರಗಳಿಂದ ಅಭಿಮಂತ್ರಿಸಿ ಆ ಮುಂಡಕ್ಕೆ ಸೇರಿಸಿದರು. ಒಡನೆಯೇ ಜೀವಯುಕ್ತನಾಗಿ ಆ ಬಾಲಕ ಎದ್ದುನಿಂತ. ಆಗ ದೇವತೆಗಳೆಲ್ಲರೂ ಆತನನ್ನು ಗಣಾಧ್ಯಕ್ಷಪದವಿಯಲ್ಲಿ ಅಭಿಷೇಕ ಮಾಡಿ, ಪೂಜಿಸಿ, ಮಹೋತ್ಸವವನ್ನು ಮಾಡಿದರು. ಆಗ ಗಿರಿಜೆ ತನ್ನ ಮಗನನ್ನು ಎತ್ತಿ ಮುದ್ದಾಡಿ ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿದಳು. ಅವನನ್ನು ಕಂಡು "ಮಗೂ, ನೀನು ಹುಟ್ಟಿದಕೂಡಲೇ ಇಷ್ಟೊಂದು ಕಷ್ಟಗಳನ್ನು ಅನುಭವಿಸಿದೆಯಾಗಿ ಇನ್ನು ಮುಂದೆ ಎಲ್ಲರೂ ನಿನ್ನನ್ನೇ ಮೊದಲು ಪೂಜಿಸಬೇಕು" ಎಂದು ಮರಳಿ ಮಹಾವಿಭವಭರಿತೆಯಾಗಿ ಆತನನ್ನು ಪೂಜಿಸಿದಳು. ಶಿವನೂ ಕೂಡ ಆತನ ತಲೆಯಮೇಲೆ ತನ್ನ ದಿವ್ಯಹಸ್ತವನ್ನಿಟ್ಟು "ಇವ ನನ್ನ ಮತ್ತೊಬ್ಬ ಮಗ" ಎಂದ. ಆಗ ಬಾಲಕ ಒಡನೆಯೇ ಎದ್ದು ಜನನೀಜನಕರಿಗೆ ನಮಸ್ಕರಿಸಿ ಸಕಲ ದೇವತೆಗಳನ್ನೂ ಕಂಡು ಗೌರವಿಸಿದ. ಬಳಿಕ ತ್ರಿಮೂರ್ತಿಗಳೂ ಆತನಿಗೆ ಅನೇಕ ವರಗಳನ್ನಿತ್ತು, ಸಂತೋಷಪಡಿಸಿದರು. ಆಗ ಮರಳಿ ಶಿವ ಆ ಬಾಲಕನನ್ನು ಕಂಡು "ನೀನು ಭಾದ್ರಪದ ಶುಕ್ಲ ಚತುರ್ಥಿಯ ದಿನ ಚಂದ್ರೋದಯ ಕಾಲದಲ್ಲಿ ಜನಿಸಿದೆಯಾಗಿ ಇಂದು ಮೊದಲು ಈ ದಿನದಲ್ಲಿ ನಿನ್ನ ವ್ರತವನ್ನು ಭಕ್ತಿಪುರಸ್ಸರವಾಗಿ ಆಚರಿಸತಕ್ಕವರಿಗೆ ನೀನು ಸಕಲ ಶುಭಸಂಪತ್ತುಗಳನ್ನೂ ಅನುಗ್ರಹಿಸು" ಎಂದು ಮುಂತಾಗಿ ಹೇಳಿದ. ಬಳಿಕ ಸಕಲ ದೇವತೆಗಳೂ ಗಣ

ಪತಿಯುನ್ನು ಪೂಜಿಸಿ, ಆತನ ಅನುಗ್ರಹವನ್ನು ಪಡೆದು ತೆರಳಿದರು [ಶಿವ.-ಕುಮಾರಖಂ. ೧೩-೨೦].

**ವಿಚಿತ್ರವೀರ್ಯ.**—ಚಂದ್ರ ವಂಶದ ಶಂತನು ರಾಜನಿಂದ ಸತ್ಯವತಿಯಲ್ಲಿ ಜನಿಸಿದವ. ಭೀಷ್ಮನ ಬಲತಮ್ಮ. ಕಾಶಿ ರಾಜನ ಪುತ್ರಿಯರಾದ ಅಂಬಿಕೆ, ಅಂಬಾಲಿಕೆಯರು ಈತನ ಪತ್ನಿಯರು. ಅಂಬಿಕೆಯಲ್ಲಿ ವ್ಯಾಸ ಮುನಿಯ ಅನುಗ್ರಹದಿಂದ ಧೃತರಾಷ್ಟ್ರನೂ, ಅಂಬಾಲಿಕೆಯಲ್ಲಿ ಪಾಂಡುವೂ, ಅಂಬಿಕೆಯ ದಾಸಿಯಲ್ಲಿ ವಿದುರನೂ ಜನಿಸಿದರು [ಭಾರ.-ಆದಿ. ೬೩, ೧೦೮]. ವಿಚಿತ್ರವೀರ್ಯನ ವಿವಾಹ [ಆದಿ. ೧೧೧]. ವಿಚಿತ್ರವೀರ್ಯನ ರಾಜ್ಯಾಭಿಷೇಕ [ಆದಿ. ೧೦೮]. ವಿಚಿತ್ರವೀರ್ಯನ ಮರಣ [ಭಾರ.-ಆದಿ. ೧೧೧].

**ವಿಜಯ.**—(i) ವಿಷ್ಣುವಿನ ದ್ವಾರಪಾಲಕರಲ್ಲಿ ಒಬ್ಬ ನೋಡು—ಜಯ.

(ii) ಪಾಂಡುಪುತ್ರನಾದ ಅರ್ಜುನನ ಹತ್ತು ಹೆಸರುಗಳಲ್ಲಿ ಒಂದು [ಭಾರ -ವಿರಾ. ೪೩].

**ವಿಜಯಾ.**—ಮದ್ರ ದೇಶಾಧಿಪತಿಯಾದ ಶಲ್ಯ ರಾಜನ ಮಗಳು. ಪಾಂಡು ಪುತ್ರನಾದ ಸಹದೇವನನ್ನು ಮದುವೆಯಾಗಿ ಸುಹೋತ್ರನೆಂಬ ಮಗನನ್ನು ಪಡೆದಳು [ಭಾರ.-ಆದಿ ೬೩].

**ವಿಜಿತಾಶ್ವ.**—ಪೃಥು ರಾಯನ ಹಿರಿಯಮಗ. ಅಂತರ್ಧಾನನೆಂಬುದು ಇವನ ಮೊದಲಿನ ಹೆಸರು. ಪೃಥು ರಾಜ ತೊಂಬತ್ತೊಂಬತ್ತು ಅಶ್ವಮೇಧಗಳನ್ನು ಮಾಡಿ ನೂರನೆಯ ಸಲ ಅಶ್ವಮೇಧಕ್ಕೆ ಸಂಕಲ್ಪಿಸಲಾಗಿ ಇಂದ್ರ ಪಾಷಂಡವೇಷದಿಂದ ಬಂದು ಕುದುರೆಯನ್ನು ಅಪಹರಿಸಿದ. ಅತ್ರಿ ಮುನಿ ಇದರ ಸುಳಿವನ್ನು ಪೃಥು ರಾಜನಿಗೆ ತಿಳಿಸಿದ ಪೃಥು, ತನ್ನ ಮಗನಿಗೆ ಹೇಳಲಾಗಿ ಅಂತರ್ಧಾನ ಇಂದ್ರನನ್ನು ಅಟ್ಟಿಕೊಂಡು ಹೋಗಲಾಗಿ ಇಂದ್ರ ಕುದುರೆಯನ್ನು ಅಲ್ಲಿಯೇ ಬಿಟ್ಟು ತನ್ನ ನಿಜರೂಪವನ್ನು ಧರಿಸಿ ಕಣ್ಮರೆಯಾದ. ಆಗ ಅಲ್ಲಿ ನೆರೆದಿದ್ದ ಋಷಿಗಳೆಲ್ಲರೂ ಅವನ ಸಾಮರ್ಥ್ಯಕ್ಕೆ ಮೆಚ್ಚಿ ವಿಜಿತಾಶ್ವನೆಂದು ಹೆಸರಿಟ್ಟರು [ಭಾಗ.-೪-೧೯].

**ವಿತಸ್ತಾ.**—ಭಾರತವರ್ಷದ ಒಂದು ನದಿ. ಹಿಮಾಲಯದಲ್ಲಿ ಹುಟ್ಟಿ ಪಶ್ಚಿಮ ಸಮುದ್ರವನ್ನು ಸೇರುತ್ತದೆ [ಭಾರ.-ವನ. ೮೦, ೧೩೨. ಭೀ. ೯]. ಇದನ್ನು ಈಗ ಜೀಲಮ್ (Jhelum) ಎಂದು ಕರೆಯುತ್ತಾರೆ.

**ವಿದರ್ಭ.**—(i) ಒಬ್ಬ ಅರಸು. ಯದು ವಂಶದ ಜ್ಯಾಮಘ ರಾಜನಿಂದ ಶೈಬ್ಯೆಯೆಂಬವಳಲ್ಲಿ ಜನಿಸಿದವ. ಶೈಬ್ಯೆಗೆ ಚೈತ್ರಾ ಎಂಬುದು ನಾಮಾಂತರ. ಜ್ಯಾಮಘ ಯುದ್ಧದಲ್ಲಿ ಜಯಶಾಲಿಯಾಗಿ ಒಂದು ಕನ್ಯಾರತ್ನವನ್ನು ಪಡೆದು ರಥದಲ್ಲಿ ಕುಳ್ಳಿರಿಸಿಕೊಂಡು ಕರೆತಂದ. ಆದರೆ ಚೈತ್ರೆಯ ಹೆದರಿಕೆಯಿಂದ ಆ ಹುಡುಗಿಯನ್ನು

ಮದುವೆಮಾಡಿಕೊಳ್ಳಲಿಲ್ಲ. ಚೈತ್ರೆ ಆ ಹುಡುಗಿಯನ್ನು ಕಂಡು, ಇವಳಾರೆಂದು ಕೇಳಲಾಗಿ, ಜ್ಯಾಮಘ "ಇವಳು ನಿನ್ನ ಸೊಸೆ" ಎಂದ. ಆಗ್ಗೆ ಜ್ಯಾಮಘ ಸಂತಾನಹೀನನಾಗಿದ್ದುದರಿಂದ ಖಿನ್ನಳಾದ ಚೈತ್ರೆ ತೀವ್ರನಿಯಮವನ್ನು ಕೈಕೊಂಡು ವಿದರ್ಭನೆಂಬ ಮಗನನ್ನು ಪಡೆದಳು. ವಿದರ್ಭ ಪ್ರಬುದ್ಧನಾದ ಬಳಿಕ ಆ ರಾಜ ಪುತ್ರಿಯನ್ನು ಮದುವೆಯಾಗಿ ಕ್ರಥ, ಕೈಶಿಕ, ರೋಮಪಾದರೆಂಬ ತನಯರನ್ನು ಪಡೆದ [ಮತ್ಸ್ಯ.-೪೪].

(ii) ಒಂದು ದೇಶ ವಿಂಧ್ಯಕ್ಕೆ ದಕ್ಷಿಣವಾಗಿ, ಗೋದಾವರೀ ನದಿಗೆ ಉತ್ತರದ ಕಡೆ ದಶಾರ್ಣ, ಸುರಾಷ್ಟ್ರ ದೇಶಗಳ ನಡುವೆ ಇದೆ [ಭಾರ.-ಭೀ. ೯]. ಈ ದೇಶವನ್ನು ಹಿಂದೆ ದಮಯಂತಿಯ ತಂದೆಯಾದ ಭೀಮ ರಾಜನೂ ಪಾಂಡವರ ಕಾಲ ದಲ್ಲಿ ರುಕ್ಮಿಣಿಯ ತಂದೆಯಾದ ಭೀಷ್ಮಕನೂ ಆಳುತ್ತಿದ್ದರು. ಭೀಮ ರಾಜನ ಕಾಲ ದಲ್ಲಿ ಕುಂಡಿನಪುರ ಇದರ ರಾಜಧಾನಿಯಾಗಿತ್ತು. ಭೀಷ್ಮಕ ರಾಜನ ಕಾಲದಲ್ಲಿ ಭೋಜಕಟಕ, ಅಮರಾವತಿಗಳು ರಾಜಧಾನಿಗಳಾಗಿದ್ದುವು ಈಗ ಇದನ್ನು ಬಿರಾರ್ (Berar) ಎಂದು ಕರೆಯುತ್ತಾರೆ [ಭಾರ.-ಸಭಾ. ೩೧].

**ವಿದುರ.**—ವಿಚಿತ್ರವೀರ್ಯನ ಹೆಂಡತಿಯಾದ ಅಂಬಿಕೆಯ ದಾಸಿಯಲ್ಲಿ ಕೃಷ್ಣ ದ್ವೈಪಾಯನನಿಂದ ಜನಿಸಿದವ. ಯಮನ ಅಂಶಸಂಭೂತ [ಭಾರ.-ಆದಿ ೬೩, ೬೪]. ವಿದುರನ ಉತ್ಪತ್ತಿಕಥೆ [ಭಾರ.-ಆದಿ. ೬೮, ೧೧೫] ಆಶ್ರ ೩೦]. ನೋಡು— ಯಮ, ಅಣಿಮಾಂಡವ್ಯ. ಪಾರಸವಿಯೆಂಬವಳು ಈತನ ಹೆಂಡತಿ [ಆದಿ. ೧೭೬]. ವಿದುರ ಕುಂತಿಯರ ಸಂವಾದ [ಆದಿ. ೧೪೪] ಪಾಂಡವರು ಧೃತರಾಷ್ಟ್ರನ ಅಪ್ಪಣೆಯ ಮೇರೆಗೆ ಹಸ್ತಿನಾವತಿಯನ್ನು ಬಿಟ್ಟು ವಾರಣಾವತಕ್ಕೆ ಹೊರಟಾಗ ವಿದುರ ಪಾಂಡವರಿಗೆ ಮ್ಲೇಚ್ಛ ಭಾಷೆಯಿಂದ ಅರಗಿನ ಮನೆಯ ಗುಟ್ಟನ್ನು ತಿಳಿಸಿದ್ದು [ಆದಿ. ೧೪೭]. ವಿದುರ ಕೌರವರಿಗೆ ತಿಳಿಯದಂತೆ ಅರಗಿನ ಮನೆಯಲ್ಲಿ ಸುರಂಗವನ್ನು ಮಾಡಿಸಿದ್ದು [ಆದಿ. ೧೪೯]. ಪಾಂಡವರು ವನವಾಸಕ್ಕೆ ಹೋದಬಳಿಕ ಧೃತರಾಷ್ಟ್ರ ನಿಗೆ ನೀತಿಹೇಳಿ, ಆತನಿಂದ ಯುಧಿಷ್ಠಿರನಲ್ಲಿಗೆ ಹೋದದ್ದು, ಯುಧಿಷ್ಠಿರನ ಒತ್ತಾಯದಿಂದ ಮರಳಿ ಧೃತರಾಷ್ಟ್ರನಲ್ಲಿಗೆ ಬಂದದ್ದು [ಭಾರ.-ವನ. ೪]. ಪಾಂಡವ ರೊಂದಿಗೆ ಸಂಧಿಮಾಡಿಕೊಳ್ಳುವಂತೆ ವಿದುರ ಧೃತರಾಷ್ಟ್ರನಿಗೆ ನೀತಿಯನ್ನು ವಿವರಿ ಸಿದ್ದು [ಉದ್ಯೋ. ೩೪-೪೦]. ಕೃಷ್ಣ ರಾಯಭಾರಿಯಾಗಿ ಬಂದಿದ್ದಾಗ ಈತನ ಮನೆ ಯಲ್ಲಿ ಇಳಿದು ಊಟಮಾಡಿದ [ಉದ್ಯೋ. ೯೧]. ವಿದುರ ಧರ್ಮವನ್ನು ಪ್ರಶಂಸಿ ಸಿದ್ದು [ಶಾಂತಿ. ೧೬೫]. ಧೃತರಾಷ್ಟ್ರ ಗಾಂಧಾರಿ ಕುಂತಿ ಸಂಜಯರ ಸಂಗಡ ಆಶ್ರಮಕ್ಕೆ ಹೋದಾಗ ವಿದುರನೂ ಅವರ ಸ್ಸಂಗಡಲೇ ಹೋದ [ಆಶ್ರಮ. ೧೭]. ವಿಧುರ ದೇಹತ್ಯಾಗಮಾಡಿದಾಗ ಆತನ ತೇಜಸ್ಸು ಯುಧಿಷ್ಠಿರನ ದೇಹವನ್ನು

ಸೇರಿತು [ಆಶ್ರ. ೨೮]. ಕುರು ಪಾಂಡವರ ಯುದ್ಧಾರಂಭವಾಗುವುದನ್ನು ತಿಳಿದು, ಜುಗುಪ್ಸೆಪಟ್ಟ ವಿದುರ ಆ ಸಮಯದಲ್ಲಿ ತೀರ್ಥಯಾತ್ರೆಗೆ ಹೋಗಿದ್ದ [ಭಾಗ - ೧-೧೩, ೩೧]. ವಿದುರ ಪ್ರಭಾಸಕ್ಷೇತ್ರದಲ್ಲಿ ಸ್ವಾತ್ಮಾರಾಮನಾಗಿ ಮೆರೆದು ದೇಹ ತ್ಯಾಗಮಾಡಿದ್ದು [ಭಾಗ.-೧-೧೫]. ಕೃಷ್ಣನ ರಾಯಭಾರಕ್ಕೆ ಮೊದಲು, ತನ್ನ ಮಕ್ಕಳ ದುರುಳತನಕ್ಕಾಗಿ ಮರುಗಿದ ಧೃತರಾಷ್ಟ್ರನಿಗೆ ವಿದುರ ನೀತಿಹೇಳಿದ್ದು [ಉದ್ಯೋ. ೩೪-೪೦]. ದ್ರೌಪದೀಸ್ವಯಂವರಾನಂತರ ಧೃತರಾಷ್ಟ್ರ ಭೀಷ್ಮಾದಿಗಳ ಅಪ್ಪಣೆಯಮೇರೆಗೆ ವಿದುರ ಪಾಂಡವರನ್ನು ಹಸ್ತಿನಾವತಿಗೆ ಕರೆದುಯ್ದುದ್ದು ಮುಂತಾಗಿ [ಆದಿ. ೨೧೭, ೨೩೨].

**ವಿದುಲಾ.**—ಸೌವೀರ ರಾಜನ ಹೆಂಡತಿ. ಈಕೆ ತನ್ನ ಮಗನಾದ ಸಂಜಯ ನೆಂಬವನ ಸಂಗಡ ಕ್ಷತ್ರಿಯನಿಗೆ ಯುದ್ಧವೇ ಮುಖ್ಯಕರ್ತವ್ಯವೆಂಬ ವಿಷಯವಾಗಿ ಸಂವಾದಮಾಡಿದ್ದು [ಭಾರ -ಉ ೧೩೩-೧೩೬. ಮಾರ್ಕಂ.-೧೧೯].

**ವಿದೂರಥ** —ಚಂದ್ರ ವಂಶದ ಅರಸು ಪರಶುರಾಮನಿಂದ ಹೆದರಿ ಕಾಡಿನಲ್ಲಿ ಅವಿತುಕೊಂಡಿದ್ದ [ಭಾರ -ಶಾಂ. ೪೯]

**ವಿದೇಹ.**—ಒಂದು ದೇಶ ಜನಕ ರಾಜನ ರಾಜಧಾನಿ. ನೋಡು—ನಿಮಿ, ಮಿಥಿ, ಜನಕ [ಭಾರ -ಭೀ. ೯] ಪೂರ್ವಕ್ಕೆ ಕೌಶಿಕೀ ನದಿ, ದಕ್ಷಿಣಕ್ಕೆ ಗಂಗಾ ನದಿ, ಪಶ್ಚಿಮಕ್ಕೆ ಗಂಡಕೀ ನದಿ, ಉತ್ತರಕ್ಕೆ ಹಿಮಾಲಯ— ಈ ನಾಲ್ಕು ಗಡಿಗಳ ನಡುವೆ ಇರುವ ದೇಶ.

**ವಿದ್ಯಾ.**—ಜ್ಞಾನ. ತಿಳಿವಳಿಕೆ [ಭಾರ.-ಉ. ೪೪]. ವಿದ್ಯೆಯ ಪ್ರಾಶಸ್ತ್ಯ [ಶಾಂತಿ ೧೭೪, ೨೮೩ ಅನು ೧೮೪] ವಿದ್ಯಾಹೀನನ ನಿಂದೆ [ಭಾರ.-ಉ ೩೯] ನೀಚನಿಂದಲಾದರೂ ವಿದ್ಯೆಯನ್ನು ಅವಶ್ಯವಾಗಿ ಗ್ರಹಿಸಲೇಬೇಕು [ಭಾರ.-ಶಾಂತಿ ೧೬೩]. ವಿದ್ಯೆಗಳು ೧೪ ಎಂತಲೂ, ೧೮ ಎಂತಲೂ ಕೆಲಕೆಲವರ ಅಭಿಪ್ರಾಯ. ನಾಲ್ಕು ವೇದಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಗಳೆಂಬ ಆರು ವೇದಾಂಗಗಳು, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರ (ಹದಿನೆಂಟು) ಪುರಾಣಗಳು (ಹದಿನೆಂಟು), ಸ್ಮೃತಿಗಳು ಮತ್ತು ನಿಬಂಧನ ಗ್ರಂಥಗಳೂ ಸೇರಿ ವಿದ್ಯೆಗಳು ಹದಿನಾಲ್ಕು [ವಿಷ್ಣು -೩-೬] ವಿದ್ಯೆಗಳು ಹದಿನೆಂಟು. ಮೇಲೆ ಹೇಳಿದ ಹದಿನಾಲ್ಕರ ಜತೆಗೆ ನಾಲ್ಕು ಉಪವೇದಗಳನ್ನೂ (ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ) ಸೇರಿಸಿದರೆ ಹದಿನೆಂಟಾಗುತ್ತವೆ [ಭಾಗ.-೫-೫]. ವಿದ್ಯಾದಾನ ಫಲ [ಭಾರ -ಅನು. ೨೩೫].

**ವಿದ್ಯುಜ್ಜಿಹ್ವ.**—(1) ದೇವಲೋಕದಲ್ಲಿ ಅಮೃತವನ್ನು ಕಾಯ್ದುಕೊಂಡಿರುವ ಎರಡು ಸರ್ಪಗಳಿಗೂ ಈ ಹೆಸರು ಸಲ್ಲುತ್ತದೆ [ಭಾರ -ಆದಿ, ೩೩].

(ii) ಶೂರ್ಪಣಖೆಯ ಗಂಡ. ರಾವಣ ದಿಗ್ವಿಜಯಕ್ಕೆ ಹೋಗಿದ್ದಾಗ ಕಾಲಕೇಯರನ್ನು ಸಂಹಾರಮಾಡುವಾಗ ಇವನನ್ನೂ ಕೊಂದ [ರಾಮಾ.-ಉತ್ತ. ೨೪]. ಲಂಕೆಯಲ್ಲಿದ್ದ ಮತ್ತೊಬ್ಬ ರಾಕ್ಷಸ. ರಾವಣ ಸೀತೆಯನ್ನು ಮೋಹಗೊಳಿಸುವುದಕ್ಕಾಗಿ ಇವನ ಮೂಲಕ ರಾಮನ ರುಂಡದಂತಿರುವ ರುಂಡವನ್ನೂ ಬಿಲ್ಲುಬಾಣಗಳನ್ನೂ ನಿರ್ಮಾಣಗೊಳಿಸಿ, ಅವನಿಗೆ ಅನೇಕ ವಸ್ತ್ರಾಭರಣಗಳನ್ನು ಕೊಟ್ಟ [ರಾಮಾ.-ಯುದ್ಧ. ೩೧].

**ವಿದ್ಯುತ್ಕೇಶ.**—ಒಬ್ಬ ರಾಕ್ಷಸ. ಸೃಷ್ಟ್ಯಾದಿಯಲ್ಲಿ ಚತುರ್ಮುಖನಿಂದ ಹೇತಿ, ಪ್ರಹೇತಿಯೆಂಬ ಇಬ್ಬರು ರಾಕ್ಷಸರು ಹುಟ್ಟಿದರು. ಪ್ರಹೇತಿ ಗೃಹಸ್ಥಾಶ್ರಮವನ್ನು ಒಲ್ಲದೆ ತಪಸ್ಸಿಗೆ ಹೋದ. ಹೇತಿಯೆಂಬ ರಕ್ಕಸ, ಕಾಲನ ಒಡಹುಟ್ಟಿದ ಭಯೆಯೆಂಬ ಕನ್ಯೆಯನ್ನು ಮದುವೆಯಾಗಿ ವಿದ್ಯುತ್ಕೇಶನೆಂಬ ಮಗನನ್ನು ಪಡೆದ. ವಿದ್ಯುತ್ಕೇಶ ಸಂಧ್ಯಾದೇವಿಯ ಮಗಳಾದ ಸಾಲಕಟಂಕಟೆಯೆಂಬವಳನ್ನು ಮದುವೆಯಾದ ಸಾಲಕಟಂಕಟೆ ಗರ್ಭವತಿಯಾಗಿ ಮಂದರ ಪರ್ವತದ ಗುಹೆಯಲ್ಲಿ ಪ್ರಸವಿಸಿ ಮಗುವನ್ನು ಅಲ್ಲಿಯೇ ಬಿಟ್ಟು ಪತಿಯ ಬಳಿಗೆ ಕ್ರೀಡಿಸಲು ಹೋದಳು. ಬಳಿಕ ಪಾರ್ವತೀ ಪರಮೇಶ್ವರರು ಆ ಮಾರ್ಗವಾಗಿ ಬಂದು ಅಳುತ್ತಿದ್ದ ಮಗುವನ್ನು ಕಂಡು ಕನಿಕರಗೊಂಡರು. ಆಗ ಪಾರ್ವತಿ "ರಾಕ್ಷಸಿಯರು ಗರ್ಭಧಾರಣಮಾಡಿದಕೂಡಲೇ ಪ್ರಸವಿಸಲಿ. ಅಂತು ಹುಟ್ಟಿದ ಮಕ್ಕಳು ಒಡನೆಯೇ ತಾಯಿಗೆ ಸಮಾನವಾದ ವಯಸ್ಸನ್ನು ಪಡೆಯಲಿ" ಎಂದು ವರವಿತ್ತಳು ಇಂತು ಹುಟ್ಟಿದ ಮಗುವೇ ಸುಕೇಶನೆಂಬ ರಕ್ಕಸ [ರಾಮಾ.-ಉತ್ತ. ೪]

**ವಿದ್ಯುನ್ಮಾಲಿ.**—ತಾರಕಾಸುರನ ಮಗ [ಭಾರ -ಕರ್ಣ. ೨೪]. ನೋಡು—ತಾರಕಾಸುರ.

**ವಿಧಾತ.**—ಭೃಗು ಮಹರ್ಷಿಯ ಮಗ [ಭಾರ.-ಆದಿ. ೬೭]. ಈತ ಮೇರುಪುತ್ರಿಯಾದ ನಿಯತಿಯನ್ನು ಮದುವೆಯಾಗಿ ವೇದಶಿರ, ಕವಿಯೆಂಬ ಇಬ್ಬರು ಪುತ್ರರನ್ನು ಪಡೆದ [ಭಾಗ.-೪-೧].

**ವಿಧಿ.**—ಅದೃಷ್ಟ, ದೈವ. ವಿಧಿಯೇ ಪ್ರಬಲವಾದುದೆಂಬ ವಿಷಯಸಮರ್ಥನ [ಭಾರ.-ವನ. ೩೦. ಅನು. ೨೧೪].

**ವಿನತಾ.**—(i) ದಕ್ಷನ ಪುತ್ರಿಯರಲ್ಲಿ ಒಬ್ಬಳು. ಕಶ್ಯಪ ಮುನಿಯಿಂದ ಗರುಡ, ಅರುಣರೆಂಬ ಇಬ್ಬರು ಪುತ್ರರನ್ನು ಪಡೆದಳು [ಭಾರ -ಆದಿ ೧೬, ೬೬, ೬೭]. ನೋಡು—ಕದ್ರೂ, ಗರುಡ, ಅರುಣ. ವಿನತಾ ಕದ್ರುಗಳ ಹೋರಾಟ [ಭಾರ.-ಆ. ೨೦-೩೪. ಅನು. ೨೦-೨೮]. ವಿನತೆ ಗರ್ಭಧಾರಣಮಾಡಿದ್ದು [ಭಾರ.-ಆ ೩೧]. ವಿನತೆಗೆ ದಾಸೀತ್ವ ಬರುವಂತೆ ಅರುಣ ಶಾಪಕೊಟ್ಟದ್ದು [ಭಾರ,-ಆ. ೧೬, ೨೩. ಅನು. ೨೦].

(ii) ಲಂಕೆಯಲ್ಲಿ ಸೀತೆಯ ಕಾವಲಿದ್ದ ಒಬ್ಬ ರಾಕ್ಷಸಿ [ರಾಮಾ.-ಸುಂ. ೧೪].

**ವಿನಶನ.**—ಒಂದು ತೀರ್ಥ. ಥಾನೇಶ್ವರದಿಂದ ಪಶ್ಚಿಮಕ್ಕೆ ಸರಸ್ವತೀ ನದಿ ಗುಪ್ತಗಾಮಿನಿಯಾಗಿ ಹರಿಯುವ ಮರಳುಕಾಡಿನಲ್ಲಿದೆ [ಭಾರ.-ವನ. ೮೦, ೮೨].

**ವಿನಾಯಕ.**—ನೋಡು—ವಿಘ್ನೇಶ್ವರ.

**ವಿನ್ದ.**—(1) ಅವಂತಿ ರಾಜಪುತ್ರ ಇವನ ತಮ್ಮ ಅನುವಿಂದ. ರಥಸತ್ತಮ [ಭಾರ.-ಸ. ೩೨. ಉ. ೧೬೬] ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ಹಗಲುಯುದ್ಧದಲ್ಲಿ ಅರ್ಜುನನಿಂದ ಹತನಾದ [ಭಾರ.-ದ್ರೋ. ೯೯].

(ii) ಕೇಕಯ ರಾಜಪುತ್ರ ಇವನ ತಮ್ಮ ಅನುವಿಂದ. ಕೌರವಪಕ್ಷವಾಗಿ ಯುದ್ಧಮಾಡಿ, ಹದಿನಾರನೆಯ ದಿನ ಸಾತ್ಯಕಿಯಿಂದ ಹತನಾದ [ಕರ್ಣ. ೧೦].

(iii) ದುರ್ಯೋಧನನ ತಮ್ಮಂದಿರಲ್ಲಿ ಒಬ್ಬ. ಹದಿನೈದನೆಯ ದಿನ ಭೀಮನಿಂದ ಸತ್ತ [ಆದಿ. ೬೮, ೧೩೧. ದ್ರೋ. ೧೨೭].

**ವಿನ್ಧ್ಯ.**—ಭರತಖಂಡದ ಪ್ರಸಿದ್ಧವಾದ ಒಂದು ಪರ್ವತ. ಒಮ್ಮೆ ವಿಂಧ್ಯ ಸೂರ್ಯನನ್ನು ನೋಡಿ "ನೀನು ಮೇರು ಪರ್ವತದ ಸುತ್ತಲೂ ತಿರುಗುವೆ. ನನ್ನ ಸುತ್ತ ಏಕೆ ತಿರುಗುವುದಿಲ್ಲ" ಎಂದ ಸೂರ್ಯ "ಅದು ದೇವಪರ್ವತ ಮತ್ತು ಅದನ್ನೇ ಸುತ್ತಲು ನನಗೆ ಭಗವಂತನ ಕಟ್ಟಳೆ" ಎಂದ ವಿಂಧ್ಯನಿಗೆ ಕೋಪಬಂತು. ಸೂರ್ಯನ ಗಮನವನ್ನು ಅಡ್ಡಗಿಸುವ ರೀತಿಯಲ್ಲಿ ಎತ್ತರವಾಗಿ ಬೆಳೆದ ಆಗ ಅಗಸ್ತ್ಯ ಅವನನ್ನು ಮಲಗಿಸಿದ. ಈತ ಅಗಸ್ತ್ಯನ ಶಿಷ್ಯ ನೋಡು—ಅಗಸ್ತ್ಯ [ರಾಮಾ.-ಅರ. ೧೧. ದೇ ಭಾ.-೧೦-೩ ಸ್ಕಾಂ -ಕಾಶೀಖಂ. ಪೂರ್ವಾ. ೪-೫. ಭಾರ.-ವನ. ೧೦೨. ಮತ್ಸ್ಯ.-೧೧೪] ಈ ಪರ್ವತದಿಂದ ತಪತಿ, ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಕ್ಷಿಪ್ರಾ, ಋಷಭಾ, ವೇಣಾ, ವೈತರಿಣೀ, ವಿಶ್ವಮಾಲಾ, ಕುಮುದ್ವತೀ, ಕರತೋಯಾ, ಮಹಾಗೌರೀ, ದುರ್ಗಮಾ, ಶೀಲಾ ಎಂಬ ನದಿಗಳು ಹರಿಯುತ್ತವೆ [ಮತ್ಸ್ಯ.-೧೧೪]

**ವಿನ್ಧ್ಯಾವಳಿ.**—ಬಲಿ ಚಕ್ರವರ್ತಿಯ ಹೆಂಡತಿ ನೋಡು—ಬಲಿ.

**ವಿನ್ಧ್ಯಾಶ್ವ.**—ಚಂದ್ರ ವಂಶದ ಅರಸು. ಈತ ಮೇನಕೆಯೆಂಬ ಅಪ್ಸರಸಿಯಲ್ಲಿ ಅಹಲ್ಯೆಯೆಂಬ (ಗೌತಮಪತ್ನಿ) ಕನ್ಯೆಯನ್ನೂ ದಿವೋದಾಸನೆಂಬ ಪುತ್ರನನ್ನೂ ಪಡೆದ. ಇವನಿಗೆ ವಧ್ರ್ಯಾಶ್ವನೆಂಬುದು ನಾಮಾಂತರ [ಭಾಗ.-೯-೨೨. ಹರಿ.-೧-೩೨].

**ವಿಪಾಶಾ.**—ಒಂದು ನದಿ. ಬೀಸ್ ಎಂಬುದು ಇದರ ಈಗಣ ಹೆಸರು [ಭಾರ.-ಸ. ೯. ವನ. ೧೩೨. ಭೀ. ೯]. ಪುತ್ರ (ಶಕ್ತಿಮುನಿಯ) ಶೋಕದಿಂದ ಪೀಡಿತನಾದ ವಸಿಷ್ಠ ಪಾಶಗಳನ್ನು ಬಿಗಿದುಕೊಂಡು ಆತ್ಮಹತ್ಯೆಮಾಡಿಕೊಳ್ಳುವ

ಉದ್ದೇಶದಿಂದ ಈ ನದಿಯಲ್ಲಿ ಬಿದ್ದ ಬ್ರಹ್ಮಹತ್ಯಾಭಯದಿಂದ ಹೆದರಿದ ವಿಪಾಶೆ ಆತನನ್ನು ದಡಕ್ಕೆ ತಂದುಹಾಕಿತು [ಭಾರ.-ಆ. ೧೯೩]

**ವಿಪುಲ.**—(i) ಒಬ್ಬ ಬ್ರಾಹ್ಮಣ. ನೋಡು—ದೇವಶರ್ಮ, ರುಚಿ.

(ii) ಸೌವೀರ ದೇಶದ ಅರಸು. ದ್ರೌಪದೀಸ್ವಯಂವರ ಸಮಯದಲ್ಲಿ ಅರ್ಜುನನಿಂದ ಮಡಿದ [ಭಾರ.-ಆದಿ. ೧೫೧].

**ವಿಪೃಥು.**—ಒಬ್ಬ ಯಾದವ ಅರ್ಜುನ ಸುಭದ್ರೆಯನ್ನು ಎತ್ತಿಕೊಂಡು ಹೋದಾಗ ಈತ ಅರ್ಜುನನನ್ನು ಇದಿರಿಸಿ ಸೋತ [ಭಾರ.-ಆದಿ. ೨೪೪].

**ವಿಪ್ರಚಿತ್ತಿ.**—ಒಬ್ಬ ರಾಕ್ಷಸ. ಕಶ್ಯಪ ಮುನಿಯಿಂದ ದನುವೆಂಬ ಪತ್ನಿಯಲ್ಲಿ ಜನಿಸಿದವ [ಭಾರ -ಆ. ೬೬. ಸ. ೯, ೫೧]. ಇವ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ತಂಗಿಯಾದ ಸಿಂಹಿಕೆಯನ್ನು ಮದುವೆಯಾದ [ವಿಷ್ಣು -೧-೧೮]. ಸಿಂಹಿಕೆ ವಿಪ್ರಚಿತ್ತಿಯಿಂದ ತ್ರ್ಯಂಶ, ಶಲ್ಯ, ನಭ, ವಾತಾಪಿ, ನಮುಚಿ, ಇಲ್ವಲ, ಖಸೃಮ, ಅಂಧಕ, ನರಕ, ಕಾಲನಾಭ, ಸ್ವರ್ಭಾನು (ರಾಹು) ವಕ್ತ್ರಯೋಧಿಗಳೆಂಬ ಪುತ್ರರನ್ನು ಪಡೆದಳು [ವಿಷ್ಣು.-೧-೨೧].

**ವಿಭ(ಭಾ)ಣ್ಡಕ.**—ಒಬ್ಬ ಮಹರ್ಷಿ. ಕಶ್ಯಪ ವಂಶದವ ಋಷ್ಯಶೃಂಗ ಈತನ ಮಗ [ರಾಮಾ.-ಬಾಲ ೯ ಭಾರ -ವನ ೧೧೧] ನೋಡು—ಋಷ್ಯಶೃಂಗ.

**ವಿಭಾವಸು.**—ಸುಪ್ರತೀಕನೆಂಬ ಋಷಿಯ ತಮ್ಮ, ಇವ ಶಾಪದಿಂದ ಆನೆಯ ರೂಪವನ್ನು ತಳೆದು ಗರುಡನಿಂದ ಭಕ್ಷಿತನಾದ [ಭಾರ -ಆದಿ ೨೯]. ನೋಡು—ಸುಪ್ರತೀಕ.

**ವಿಭೀಷಣ.**—ಪೌಲಸ್ತ್ಯ ಮಹಾಮುನಿಯಿಂದ ಕೈಕಸೆಯಲ್ಲಿ ಜನಿಸಿದ ನಾಲ್ಕನೆಯ ಮಗ. ರಾವಣ, ಕುಂಭಕರ್ಣರು ಇವನ ಅಣ್ಣಂದಿರು ಶೂರ್ಪಣಖೆ ಇವನ ಅಕ್ಕ. ಹೀಗಾಗಿ ಇವ ನಾಲ್ಕನೆಯ ಗರ್ಭದಲ್ಲಿ ಜನಿಸಿದವ. ಕೇಕಸೆ ಪೌಲಸ್ತ್ಯನಲ್ಲಿಗೆ ಸಂಧ್ಯಾ ಸಮಯದಲ್ಲಿ ಹೋಗಿ ಕ್ರೂರಕರ್ಮಿಗಳಾದ ರಾಕ್ಷಸರನ್ನು ಪಡೆಯುವಂತೆ ಕೇಳಿ, ಹೆದರಿ, ಆತನನ್ನು ಕುರಿತು "ಸ್ವಾಮಿ, ನಿನ್ನ ಮಕ್ಕಳು ನಿನಗೆ ಸಮಾನರಾಗಿ ತತ್ವಜ್ಞಾನಸಂಪನ್ನರಾಗಿರಬೇಕಲ್ಲದೆ ಕ್ರೂರಕರ್ಮಿಗಳಾದ ರಾಕ್ಷಸರು ಜನಿಸುವಂತೆ ಅನುಗ್ರಹಿಸುವುದು ನ್ಯಾಯವಲ್ಲ" ಎಂದು ಬೇಡಿಕೊಂಡಳು. ಆಗ ಪೌಲಸ್ತ್ಯ "ಎಲೌ ನನ್ನ ಮಾತು ವ್ಯರ್ಥವಾಗಲಾರದು. ಆದರೂ ನಿನ್ನ ನಾಲ್ಕನೆಯ ಗರ್ಭದಲ್ಲಿ ವಂಶೋದ್ಧಾರಕನೂ ಧರ್ಮಾತ್ಮನೂ, ಬ್ರಹ್ಮಜ್ಞಾನಿಯೂ ಆಗತಕ್ಕ ಮಗ ಜನಿಸುವ" ಎಂದ ಇಂತು ಉದಿಸಿದವನೇ ವಿಭೀಷಣ [ರಾ -ಉತ್ತ. ೯]. ವಿಭೀಷಣ ಗೋಕರ್ಣ ಕ್ಷೇತ್ರದಲ್ಲಿ ತಪಸ್ಸುಮಾಡಿ, ಪ್ರತ್ಯಕ್ಷನಾದ ಬ್ರಹ್ಮದೇವನಿಂದ "ಎಂತಹ ಕಷ್ಟಕಾಲದಲ್ಲಿಯೂ ಧರ್ಮದಲ್ಲಿ ಬುದ್ಧಿ ನೆಲಸಿರುವಂತೆಯೂ,

ಮಂತ್ರಾಭ್ಯಾಸಬಲವಿಲ್ಲದೆಯೇ ಬ್ರಹ್ಮಾಸ್ತ್ರ ತನಗೆ ಸ್ವಾಧೀನವಾಗುವಂತೆಯೂ, ಧರ್ಮ ಪರಿಪಾಲನ ಬುದ್ಧಿಯುಂಟಾಗುವಂತೆಯೂ ವರವನ್ನು ಪಡೆದ ಚತುರ್ಮುಖ ತಾನಾಗಿಯೇ ವಿಭೀಷಣನಿಗೆ ಚಿರಂಜೀವಿತ್ವವನ್ನು ಅನುಗ್ರಹಿಸಿದ [ರಾಮಾ.-ಉ. ೧೦] ವಿಭೀಷಣ ಶೈಲೂಷನೆಂಬ ಗಂಧರ್ವನ ಮಗಳಾದ ಸರಮೆಯೆಂಬವಳನ್ನು ಮದುವೆಯಾಗಿ ರಾವಣನೊಂದಿಗೇ ಇದ್ದ [ರಾಮಾ -ಉತ್ತ ೧೨] ವಿಭೀಷಣ ಪುಲಸ್ತ್ಯನ ಮಗನಾದ ವಿಶ್ರವಸನಿಂದ ಮಾಲಿನಿಯೆಂಬವಳಲ್ಲಿ ಜನಿಸಿದವ. ರಾವಣ ಕುಂಭಕರ್ಣರ ಬಲತಮ್ಮ [ಭಾರ.-ವನ. ೨೭೬. ಸ. ೫೦]. ಹನೂಮಂತ ಅಶೋಕವನವನ್ನು ನಾಶಮಾಡಿದ್ದಕ್ಕಾಗಿ ಅವನನ್ನು ಕೊಲ್ಲಬೇಕೆಂದು ರಾವಣ ಅಪ್ಪಣೆಮಾಡಿದಾಗ ವಿಭೀಷಣ ದೂತವಧೆ ಶಾಸ್ತ್ರಸಮ್ಮತವಲ್ಲವೆಂದು ಹೇಳಿ ಕೊಲೆಯಿಂದ ತಪ್ಪಿಸಿದ [ರಾಮಾ.-ಸುಂ ೫೨]. ವಿಭೀಷಣ ರಾವಣನಿಗೆ ನೀತಿ ಹೇಳಿ, ಅವನಿಂದ ತಿರಸ್ಕೃತನಾದ [ರಾಮಾ.-ಯು ೯-೧೦] ವಿಭೀಷಣ ಮರಳಿ ರಾವಣನಿಗೆ ತಿಳಿಯ ಹೇಳಿ, ತನ್ನ ಮಾತನ್ನು ಅಲ್ಲಗಳೆದ ಇಂದ್ರಜಿತ್ತನ್ನು ಹೆದರಿಸಿ, ಗದ್ದರಿಸಿ, ರಾವಣನನ್ನು ನಿಗ್ರಹಿಸಿದ ರಾವಣನಿಂದ ತಿರಸ್ಕೃತನಾಗಿ ಸಮುದ್ರದ ಆಚೆಯ ದಡದಲ್ಲಿದ್ದ ರಾಮನನ್ನು ಮರೆಹೊಕ್ಕ ರಾಮ ಅವನಿಗೆ ಅಭಯವಿತ್ತ [ರಾಮಾ.-ಯು. ೧೪-೧೯]. ರಾವಣನಿಂದ ಪ್ರೇರಿತರಾದ ಶಾರ್ದೂಲ ಮೊದಲಾದ ಬೇಹುಗಾರರು ರಾಮನ ಸೇನೆಯನ್ನು ಹೊಕ್ಕು ಒಳಸಂಚುಗಳನ್ನು ತಿಳಿದುಕೊಂಡು ಹೋಗಲು ಬಂದಿದ್ದಾಗ ವಿಭೀಷಣ ಅವರನ್ನು ದಂಡಿಸಿದ [ರಾ -ಯು ೨೯] ವಿಭೀಷಣ ಕುಂಭಕರ್ಣನ ವೃತ್ತಾಂತವನ್ನು ರಾಮನಿಗೆ ತಿಳಿಸಿದ [ರಾಮಾ.-ಯು ೬೧] ಇಂದ್ರಜಿತ್ತು ಮಾಯಾಸೀತೆಯನ್ನು ಸಂಹರಿಸಿದಾಗ ಅದನ್ನು ದಿಟವೆಂದು ನಂಬಿ ಪ್ರಲಪಿಸುತ್ತಿದ್ದ ರಾಮನನ್ನು ವಿಭೀಷಣ ಸಮಾಧಾನಪಡಿಸಿದ್ದು [ರಾಮಾ.-ಯು ೮೪]. ವಿಭೀಷಣ ಲಕ್ಷ್ಮಣನಿಗೆ ಇಂದ್ರಜಿತ್ತಿನ ಗುಟ್ಟನ್ನು ತಿಳಿಸಿ, ಲಕ್ಷ್ಮಣನನ್ನು ನಿಕುಂಭಿಳಾಯಾಗದ ಬಳಿಗೆ ಕರೆದುಕೊಂಡು ಹೋದ. ತನ್ನ ಗುಟ್ಟನ್ನು ಹೊರಗೆಡವಿದ್ದಕ್ಕಾಗಿ ಇಂದ್ರಜಿತ್ತು ವಿಭೀಷಣನನ್ನು ಗದ್ದರಿಸಿದ. ವಿಭೀಷಣ ಇಂದ್ರಜಿತ್ತನ್ನು ನಿಂದಿಸಿ ಧಿಕ್ಕರಿಸಿದ [ರಾಮಾ -ಯು. ೮೭]. ರಾವಣವಧಾನಂತರ ವಿಭೀಷಣ ಅಣ್ಣನಿಗಾಗಿ ದುಃಖಪಟ್ಟ. ರಾಮ ಆತನನ್ನು ಸಮಾಧಾನಪಡಿಸಿದ [ಯು. ೧೧೨] ವಿಭೀಷಣ ರಾವಣನಿಗೆ ಉತ್ತರಕ್ರಿಯೆಗಳನ್ನು ಮಾಡಿಸಿದ್ದು, ವಿಭೀಷಣನ ಪಟ್ಟಾಭಿಷೇಕ [ರಾಮಾ.-ಯು. ೧೧೪, ೧೧೫. ಭಾರ.-ವನ. ೨೮೪]. ವಿಭೀಷಣ ರಾಮನಿಗೆ ಪುಷ್ಪಕವಿಮಾನವನ್ನು ಅರ್ಪಿಸಿದ್ದು [ರಾಮಾ.-ಯು. ೧೨೪]. ವಿಭೀಷಣ ರಾಮನ ಪಟ್ಟಾಭಿಷೇಕಕ್ಕೆ ಅಯೋಧ್ಯೆಗೆ ತನ್ನನ್ನೂ ಕರೆದುಕೊಂಡುಹೋಗಬೇಕೆಂದು ರಾಮನನ್ನು ಬೇಡಿ, ಅನುಮತಿಪಡೆದದ್ದು [ರಾಮಾ.-ಯು. ೧೨೫]. ರಾಮಪಟ್ಟಾಭಿಷೇಕಾನಂತರ

ವಿಭೀಷಣ ಲಂಕೆಗೆ ಹಿಂದಿರುಗಿದ್ದು [ರಾಮಾ.-ಉತ್ತ. ೪೦]. ಯುಧಿಷ್ಠಿರನ ರಾಜಸೂಯಕ್ಕೆ ಮೊದಲು ದಕ್ಷಿಣ ದಿಗ್ವಿಜಯಕ್ಕೆ ಹೊರಟಿದ್ದ ಸಹದೇವ ವಿಭೀಷಣನಿಂದ ಕಪ್ಪವನ್ನು ತರುವಂತೆ ಘಟೋತ್ಕಚನನ್ನು ಕಳುಹಿದ್ದು, ವಿಭೀಷಣ ಆತನನ್ನು ಮನ್ನಿಸಿ ಕಪ್ಪ ಕೊಟ್ಟ [ಭಾರ.-ಸ ೩೨].

**ವಿರಾಟ.**—ಮತ್ಸ್ಯ ದೇಶದ ಅರಸು. ಮರುತ್ತುಗಳ ಅಂಶದಿಂದ ಜನಿಸಿದವ [ಭಾರ.-ಆದಿ. ೬೮, ೨೦೧]. ಈತ ಹಿರಿಯ ಹೆಂಡತಿಯಾದ ಸುರಥೆಯೆಂಬವಳಲ್ಲಿ ಶ್ವೇತ, ಶಂಖರೆಂಬ ಇಬ್ಬರು ಪುತ್ರರನ್ನು ಪಡೆದ ಕೇಕಯನೆಂಬ ಸೂತ ರಾಜನ ಪುತ್ರಿಯಾದ ಸುದೇಷ್ಣೆಯೆಂಬವಳಲ್ಲಿ ಭೂಮಿಂಜಯ ಅಥವಾ ಉತ್ತರಕುಮಾರನೆಂಬ ಮಗ ಜನಿಸಿದ [ಭಾರ.-ವಿರಾ. ೨೧] ಈತನಿಗೆ ಶತಾನೀಕ, ಮದಿರಾಶ್ವ ಅಥವಾ ಮದಿರಾಕ್ಷ, ಸೂರ್ಯದತ್ತ, ಶ್ರುತಾನೀಕ, ಶ್ರುತಧ್ವಜ, ಬಲಾನೀಕ, ಜಯಾನೀಕ, ಜಯಾಶ್ವ, ರಥವಾಹನ, ಚಂದ್ರೋದಯ, ಸಮರಥರೆಂಬ ಹನ್ನೊಂದು ಮಂದಿ ಸಹೋದರರಿದ್ದರು. ನೋಡು—ಕೀಚಕ [ಭಾರ.-ವಿರಾ. ೩೩. ದ್ರೋ. ೧೫೮]. ದಕ್ಷಿಣ ಗೋಗ್ರಹಣದಲ್ಲಿ ತ್ರಿಗರ್ತ ದೇಶಾಧಿಪತಿಯಾದ ಸುಶರ್ಮನೊಂದಿಗೆ ಯುದ್ಧಮಾಡಿ ವಿರಾಟ ಸೆರೆಸಿಕ್ಕಿದ. ಯುಧಿಷ್ಠಿರನ ಮಾತಿನ ಮೇರೆಗೆ ಭೀಮ ವಿರಾಟನನ್ನು ಬಿಡಿಸಿದ [ವಿರಾ.-೩೮, ೩೫]. ಈತನ ಮಗಳು ಉತ್ತರೆಯೆಂಬವಳು. ನೋಡು—ಉತ್ತರಾ, ಅಭಿಮನ್ಯು [ವಿರಾ -೬೩]. ವಿರಾಟ ಕಂಕ(ಯುಧಿಷ್ಠಿರ) ನೊಂದಿಗೆ ಪಗಡೆಯಾಡಿದ್ದು, ಬೃಹನ್ನಳೆಯೇ ಕೌರವರನ್ನು ಗೆದ್ದವನೆಂದು ಹೇಳಿದ ಕಂಕನ ಮಾತನ್ನು ಸಹಿಸಲಾರದೆ ವಿರಾಟ ಸಿಟ್ಟುಗೊಂಡು ಕಂಕನನ್ನು ದಾಳದಿಂದ ಹೊಡೆದದ್ದು [ವಿರಾ. ೭೦] ವಿರಾಟ ಪಾಂಡವರ ನಿಜಸ್ಥಿತಿಯನ್ನು ತಿಳಿದಬಳಿಕ ಹೆದರಿ ಮರೆಹೊಕ್ಕು ಉತ್ತರೆಯನ್ನು ಅರ್ಜುನನಿಗೆ ಕೊಡುವುದಾಗಿ ಹೇಳಿದ್ದು [ಭಾರ - ವಿರಾ. ೭೬]. ಈತ ಮಹಾರಥ. ಪಾಂಡವರ ಪರವಾಗಿ ಹೋರಾಡಿದವ [ಭಾರ.- ಉ. ೧೭೦]. ಭಾರತ ಯುದ್ಧದ ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ದ್ರೋಣನಿಂದ ಮಡಿದ [ಭಾರ -ದ್ರೋ ೧೮೭]. ಈತನ ದೇಶ ಡಿಲ್ಲೀ ನಗರಕ್ಕೆ ನೈಋತ್ಯ ಭಾಗದಲ್ಲಿ ೧೦೫ ಮೈಲುಗಳ ದೂರದಲ್ಲಿ, ಜಯಪುರದಿಂದ ಉತ್ತರಕ್ಕೆ ೪೧ ಮೈಲುಗಳ ದೂರದಲ್ಲಿದೆ. ನೋಡು—ಮತ್ಸ್ಯ.

**ವಿರಾಧ.**—ಒಬ್ಬ ರಾಕ್ಷಸ. ತುಂಬುರುವೆಂಬ ಗಂಧರ್ವ. ಒಮ್ಮೆ ಕುಬೇರನ ಬಳಿಗೆ ಹೋಗುತ್ತಿದ್ದ ರಂಭೆಯೆಂಬ ಅಪ್ಸರಸಿಯನ್ನು ಅಡ್ಡಗಟ್ಟಿ, ರಾಕ್ಷಸನಾಗಿ ಜನಿಸುವಂತೆ ಶಾಪ ಪಡೆದು, ದಂಡಕಾರಣ್ಯದಲ್ಲಿ ವಿರಾಧನೆಂಬ ಹೆಸರಿನಿಂದ ಲೋಕ ಕಂಟಕನಾಗಿದ್ದು, ಸೀತಾ ರಾಮ ಲಕ್ಷ್ಮಣರು ದಂಡಕಾರಣ್ಯವನ್ನು ಹೊಕ್ಕಕೂಡಲೇ

ಸೀತೆಯನ್ನು ಅಪಹರಿಸಿ, ರಾಮ ಲಕ್ಷ್ಮಣರಿಂದ ಛಿನ್ನಭುಜನಾಗಿ ಮಡಿದು, ತನ್ನ ಮೊದಲಿನ ಗಂಧರ್ವದೇಹವನ್ನು ಪಡೆದ [ರಾಮಾ.-ಅರ. ೬-೪. ಭಾರ.-ಸ. ೫೦].

**ವಿರೂಪಾಕ್ಷ.**—(i) ಒಬ್ಬ ರಾಕ್ಷಸ. ಮಹಿಷಾಸುರನ ಮಂತ್ರಿಗಳಲ್ಲಿ ಒಬ್ಬ [ದೇ.ಭಾ.-೫-೧೧].

(ii) ಲಂಕೆಯಲ್ಲಿದ್ದ ಒಬ್ಬ ರಾಕ್ಷಸ. ರಾವಣನ ಸೇನಾಪತಿಗಳಲ್ಲಿ ಒಬ್ಬ. ಅಶೋಕವನವನ್ನು ಮುರಿದ ಹನೂಮಂತನನ್ನು ಇದಿರಿಸಿ ಮಡಿದ [ರಾಮಾ.-ಸುಂ. ೪೬].

(iii) ಲಂಕೆಯಲ್ಲಿದ್ದ ಮತ್ತೊಬ್ಬ ರಾಕ್ಷಸ. ಲಕ್ಷ್ಮಣನಿಂದ ಮಡಿದ [ರಾಮಾ.-ಯು. ೪೩].

(iv) ಲಂಕೆಯಲ್ಲಿದ್ದ ಇನ್ನೊಬ್ಬ ರಾಕ್ಷಸ. ಸುಗ್ರೀವನಿಂದ ಮಡಿದ [ರಾಮಾ.-ಯು. ೯೭].

(v) ಭೀಮಸೇನನ ಮಗನಾದ ಘಟೋತ್ಕಚನ ಸಾರಥಿ [ಭಾರ.-ದ್ರೋ. ೧೭೬].

**ವಿರೋಚನ.**—ಪ್ರಹ್ಲಾದನ ಮಗ. ಬಲಿ ಚಕ್ರವರ್ತಿಯ ತಂದೆ [ಭಾರ.-ಆ. ೬೬. ಸ. ೫೧]. ನೋಡು—ಕೇಶಿನೀ, ಸುಧನ್ವ [ಭಾರ.-ಸ. ೯೦. ಉ. ೩೫].

**ವಿವಾಹ.**—ಮದುವೆ. ಅದರ ಒಳಭೇದಗಳು, ಅವುಗಳ ಸ್ವರೂಪ [ಭಾರ.-ಆ. ೯೪. ಅನು. ೭೯. ವಿಷ್ಣು. ೩-೧೦]. ವಿವಾಹಯೋಗ್ಯವಾದ ವಯಸ್ಸಿನ ನಿರ್ಣಯ [ಭಾರ.-ಅನು. ೭೯].

**ವಿಶಾಖ.**—ಕುಮಾರಸ್ವಾಮಿಯ ಅವತಾರ ವಿಶಾಖಾ ನಕ್ಷತ್ರದಲ್ಲಿ ನಡೆದುದರಿಂದ ಈ ಹೆಸರು [ಭಾರ.-ಸ. ೭].

**ವಿಶಾಖಾ.**—ದಕ್ಷನ ಮಗಳು. ಚಂದ್ರನ ೬೭ ಮಂದಿ ಪತ್ನಿಯರಲ್ಲಿ ಒಬ್ಬಳು. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು [ಭಾರ.-ಆದಿ. ೬೭. ವಿರಾ. ೧-೧೫].

**ವಿಶಾಲ.**—ಒಬ್ಬ ಅರಸು. ಇಕ್ಷ್ವಾಕು ರಾಜನಿಂದ ಅಲಂಬುಸೆಯೆಂಬ ಅಪ್ಸರಸಿಯಲ್ಲಿ ಜನಿಸಿದವ. ದಿತಿದೇವಿ ಪುತ್ರಪ್ರಾಪ್ತಿಗಾಗಿ ತಪಸ್ಸುಮಾಡಿದ ಮಹಾಪವಿತ್ರವಾದ ಪ್ರದೇಶದಲ್ಲಿ ಈತ ತನ್ನ ಹೆಸರಿನಿಂದ ವಿಶಾಲವೆಂಬ ಪಟ್ಟಣವನ್ನು ನಿರ್ಮಿಸಿದ. ವಿಶ್ವಾಮಿತ್ರ ರಾಮ ಲಕ್ಷ್ಮಣರನ್ನು ಮಿಥಿಲೆಗೆ ಕರೆದುಕೊಂಡು ಹೋಗುವಾಗ ಈ ಪಟ್ಟಣದಲ್ಲಿ ಒಂದು ರಾತ್ರಿ ನಿಂತು, ಆಗ್ಗೆ ಅಲ್ಲಿ ರಾಜ್ಯಭಾರಮಾಡುತ್ತಿದ್ದ ಸುಮತಿ ರಾಜನಿಂದ ಸತ್ಕೃತನಾದ [ರಾಮಾ.-ಬಾಲ. ೪೭. ಭಾರ.-ಸ. ೬೮].

**ವಿಶಾಲಾ.**—(i) ಮೇಲೆ ಹೇಳಿದ ವಿಶಾಲ ರಾಜ ನಿರ್ಮಿಸಿದ ಪಟ್ಟಣ. ನೋಡು—ವಿಶಾಲ.

(ii) ಬದರಿಕಾಶ್ರಮದ ನಾಮಾಂತರ. ಬಹಳ ವಿಶಾಲವಾದ ತಪೋವನವಾದುದರಿಂದ ಈ ಹೆಸರು [ಭಾರ.-೪-೫].

**ವಿಶಾಲಾಕ್ಷ**—(i) ವಿರಾಟರಾಜನ ಒಡಹುಟ್ಟಿದವ ವಿರಾಟನ ಸೇನಾಪತಿಯಾಗಿದ್ದ ಕೀಚಕ ಮಡಿದ ತರುವಾಯ ಇವ ಸೇನಾಪತಿಯಾದ [ಭಾರ.-ವಿರಾ. ೩೨].

(ii) ಒಬ್ಬ ಅರಸು. ಕೃಷ್ಣನ ತಂದೆಯಾದ ವಸುದೇವ ಸ್ಯಮಂತಪಂಚಕಕ್ಷೇತ್ರದಲ್ಲಿ ಯಜ್ಞಮಾಡಿದಾಗ ಈತ ಬಹಳವಾಗಿ ಒತ್ತಾಸೆಮಾಡಿದ [ಭಾಗ.-೧೦-೮೪].

. **ವಿಶಾಲಾಕ್ಷಿ**—ಕಾಶೀ ಕ್ಷೇತ್ರದಲ್ಲಿರುವ ದೇವಿಯ ಹೆಸರು.

**ವಿಶೋಕ.**—ಭೀಮಸೇನನ ಸಾರಥಿ [ಭಾರ.-ಸ. ೩೬. ಭೀ. ೭೭]. ಶ್ರೀ ಕೃಷ್ಣನಿಂದ ಕುಬ್ಜಾ ಅಥವಾ ತ್ರಿವಕ್ರೆಯೆಂಬವಳಲ್ಲಿ ಜನಿಸಿದವ. ಇವನಿಗೆ ಅಶೋಕನೆಂಬುದು ನಾಮಾಂತರ [ಭಾಗ.-೧೦-೧೦೩]. ಭಾರತಯುದ್ಧದ ಹದಿನೇಳನೆಯ ದಿನದಲ್ಲಿ ಕರ್ಣಾರ್ಜುನರು ದ್ವಂದ್ವಯುದ್ಧಕ್ಕೆ ಮೊದಲಿಟ್ಟಾಗ ವಿಶೋಕನಿಗೂ ಭೀಮನಿಗೂ ನಡೆದ ಸಂವಾದ [ಕರ್ಣ.-೮೦].

**ವಿಶ್ರವಸ್.**—ಪುಲಸ್ತ್ಯಮುನಿಯಿಂದ ತೃಣಬಿಂದುಮುನಿಯ ಮಗಳಾದ ಗೋ ಎಂಬವಳಲ್ಲಿ ಜನಿಸಿದನ. ಈತ ಭರದ್ವಾಜ ಪುತ್ರಿಯಾದ ದೇವವರ್ಣಿನಿಯನ್ನು ಮದುವೆಯಾಗಿ ಒಬ್ಬ ಪುತ್ರನನ್ನು ಪಡೆದ ಇವನೇ ಕುಬೇರ [ರಾಮಾ.-ಉತ್ತ. ೨, ೩] ದೇವವರ್ಣಿನಿಯೆಂಬುದು ಇಲಬಿಲೆಯ ನಾಮಾಂತರ ವಿಶ್ರವಸ ಇಲಬಿಲೆಯನ್ನು ಮದುವೆಯಾಗಿ ಕುಬೇರನನ್ನು ಪಡೆದ [ಭಾಗ-೯-೨] ವಿಶ್ರವಸ ಸುಮಾಲಿ ರಾಕ್ಷಸನ ಮಗಳಾದ ಕೇಕಸೆಯನ್ನು ಮದುವೆಯಾಗಿ ರಾವಣ, ಕುಂಭಕರ್ಣ, ಶೂರ್ಪಣಖಾ, ವಿಭೀಷಣರನ್ನು ಪಡೆದ [ರಾಮಾ.-ಉತ್ತ. ೯]. ಪುಲಸ್ತ್ಯನ ಮಗನಾದ ಪೌಲಸ್ತ್ಯನೇ ವಿಶ್ರವಸ ಈತ ಪುಷ್ಪೋತ್ಕಟೆಯೆಂಬವಳಲ್ಲಿ ರಾವಣನನ್ನೂ ಕುಂಭಕರ್ಣನನ್ನೂ ಮಾಲಿನಿಯೆಂಬವಳಲ್ಲಿ ವಿಭೀಷಣನನ್ನೂ ಪಡೆದ [ಭಾರ.-ವನ. ೨೭೬].

**ವಿಶ್ವಕರ್ಮ.**—ಪ್ರಭಾಸನೆಂಬ ವಸುವಿನ ಮಗ [ಭಾರ.-ಆದಿ. ೬೭]. ಬೃಹಸ್ಪತ್ಯಾಚಾರ್ಯನ ತಂಗಿಯಾದ ಬ್ರಹ್ಮವಾದಿನಿಯೆಂಬವಳು ಈತನ ಜನನಿ. ತ್ವಷ್ಟೃವೆಂಬುದು ಈತನ ನಾಮಾಂತರ. ದೇವತೆಗಳ ಬಡಗಿ [ವಿಷ್ಣು.-೧-೧೫. ಹರಿ. ೧-೩]. ಈತ ಪ್ರಹ್ಲಾದನ ಮಗಳಾದ ವಿರೋಚನೆಯೆಂಬವಳನ್ನು ಮದುವೆಯಾಗಿ ವಿಶ್ವರೂಪಾಚಾರ್ಯನೆಂಬ ಮಗನನ್ನು ಪಡೆದ. ಈ ವಿಶ್ವರೂಪಾಚಾರ್ಯನಿಗೆ ತ್ರಿಶಿರನೆಂಬುದು ನಾಮಾಂತರ. ನೋಡು—ತ್ರಿಶಿರಸ್ [ವಾಯು.-೨೪]. ವಿಶ್ವಕರ್ಮ ವಿರೋಚನನ ತಂಗಿಯಾದ ರಚನಾಯೆಂಬವಳನ್ನು ಮದುವೆಯಾಗಿದ್ದ [ಭಾಗ.-೬-೬]. ಈತನ

ಮಗಳಾದ ಸಂಜ್ಞಾದೇವಿ ಸೂರ್ಯನನ್ನು ಮದುವೆಯಾಗಿ ಅಶ್ವಿನೀದೇವತೆಗಳನ್ನು ಪಡೆದಳು [ಭಾರ.-ಆದಿ. ೬೭]. ಈತ ಪಾಂಡವರಿಗೆ ಇಂದ್ರಪ್ರಸ್ಥವನ್ನು ನಿರ್ಮಾಣ ಮಾಡಿಕೊಟ್ಟ [ಭಾರ.-ಆದಿ. ೨೨೭]. ಸುಂದೋಪಸುಂದರನ್ನು ಕೊಲ್ಲುವುದಕ್ಕಾಗಿ ತಿಲೋತ್ತಮೆಯೆಂಬ ಅಪ್ಸರಸಿಯನ್ನು ಸೃಷ್ಟಿಸಿದ [ಭಾರ.-ಆದಿ ೨೩೧]. ತ್ರಿಪುರಾಸುರನನ್ನು ಕೊಲ್ಲುವ ಕಾಲದಲ್ಲಿ ಶಿವನಿಗೆ ಲೋಕೋತ್ತರವಾದ ರಥವನ್ನು ನಿರ್ಮಿಸಿಕೊಟ್ಟ [ಭಾರ.-ಕರ್ಣ. ೨೬].

**ವಿಶ್ವರೂಪ.**—ವಿಶ್ವಕರ್ಮನಿಂದ ರಚನೆ ಅಥವಾ ವಿರೋಚನೆಯಲ್ಲಿ ಜನಿಸಿದವ [ಭಾರ.-೬೬. ವಾಯು.-೮೪]. ಈತ ದೇವತೆಗಳ ಪುರೋಹಿತನಾಗಿದ್ದ [ಭಾಗ -೬-೭]. ಈತನಿಗೆ ಮೂರು ತಲೆಗಳಿದ್ದುವು. ಒಂದರಿಂದ ಸೋಮಪಾನಮಾಡುತ್ತಿದ್ದ. ಎರಡನೆಯ ಶಿರಸ್ಸಿನಿಂದ ಸುರಾಪಾನಮಾಡುತ್ತಿದ್ದ ಮೂರನೆಯ ಶಿರಸ್ಸಿನಿಂದ ಆಹಾರವನ್ನು ಸೇವಿಸುತ್ತಿದ್ದ ಇವನ ಜನನಿ ರಾಕ್ಷಸಕುಲಪ್ರಸೂತೆಯಾದ ಕಾರಣ ಇವನಿಗೆ ರಾಕ್ಷಸರಲ್ಲಿ ಅಭಿಮಾನವಿತ್ತು ಯಜ್ಞಯಾಗಾದಿಗಳಲ್ಲಿ ರಹಸ್ಯವಾಗಿ ಅಸುರರಿಗೂ ಆಹುತಿಗಳನ್ನು ಕೊಡುತ್ತಿದ್ದ ಇದರಿಂದ ರಾಕ್ಷಸರೂ ಕ್ರಮಕ್ರಮವಾಗಿ ಪುಷ್ಟರಾಗುತ್ತ ಬಂದರು. ಈ ಗುಟ್ಟನ್ನು ತಿಳಿದ ಇಂದ್ರ ಈತನನ್ನು ಕೊಂದ. ಆಗ ವಿಶ್ವರೂಪಾಚಾರ್ಯನ ಸೋಮಪಾನಮಾಡುತ್ತಿದ್ದ ತಲೆ ಕಪಿಂಜರ ಪಕ್ಷಿರೂಪವನ್ನು ತಾಳಿತು. ಸುರಾಪಾನಮಾಡುತ್ತಿದ್ದ ತಲೆ ಕಲವಿಂಕ (ಗೊರವಂಕ) ಪಕ್ಷಿಯಾಯಿತು. ಅನ್ನವನ್ನು ತಿನ್ನುತ್ತಿದ್ದ ಮುಖ ತಿತ್ತಿರಿ ಪಕ್ಷಿರೂಪವನ್ನು ಧರಿಸಿತು [ಭಾಗ.-೬-೯. ಭಾರ.-ಉ ೯].

**ವಿಶ್ವಾಮಿತ್ರ.**—ಚಂದ್ರವಂಶದ ಕುಶಿಕರಾಜನ ವಂಶದವನಾದ ಗಾಧಿರಾಜನ ಮಗ. ಮೊದಲು ಕ್ಷತ್ರಿಯನಾಗಿ ಜನಿಸಿ, ತಪೋಮಹಿಮೆಯಿಂದ ಬ್ರಾಹ್ಮಣನಾದವ [ಭಾರ -ಆದಿ. ೧೯೧. ಸ. ೧೨ ಉ ೧೧೩ ಶಾಂತಿ ೪೮]. ನೋಡು—ಋಚೀಕ, ಚ್ಯವನ, ಪರಶುರಾಮ, ಗಾಲವ, ರಾಮ. ವಿಶ್ವಾಮಿತ್ರನ ಉತ್ಪತ್ತಿಕಥೆ [ಭಾರ.-ಆದಿ ೧೯೧. ಅನು. ೭, ೯೧. ಹರಿ -೧-೨೭. ವಾಯು.-೯೧. ಭಾಗ.-೯-೧೬]. ಈತ ಅರಸನಾಗಿದ್ದಾಗ ವಿಶ್ವರಥನೆಂಬುದು ಈತನ ಹೆಸರು [ಹರಿ.-೧-೨೭. ವಾಯು.-೯೧]. ಈತನ ಹೆಂಡತಿ ಹೈಮವತಿ [ಭಾರ -ಉ. ೧೧೭]. ಈತನಿಗೆ ಶಾಲಾವತಿ, ದೃಷದ್ವತಿ, ರೇಣು, ಮಾಧವಿ ಮೊದಲಾದ ಅನೇಕ ಮಂದಿ ಹೆಂಡತಿಯರು [ಹರಿ.-೧-೨೭, ೩೨. ವಾಯು.-೯೧]. ಮಧುಚ್ಛಂದಸೇ ಮೊದಲಾಗಿ ಅನೇಕ ಮಂದಿ ಪುತ್ರರಿದ್ದರು [ಭಾರ.-ಅನು ೭. ಭಾಗ.-೯-೧೬. ರಾಮಾ.-ಬಾಲ ೫೭]. ಕತಿ, ಪಾಣಿನ, ಯಾಜ್ಞವಲ್ಕ್ಯ, ಸಾಂಕೃತಿ, ಗಾಲವ, ಮುದ್ಗಲ, ದೇವಲ ಅಷ್ಟಕ, ದೇವರಾತ ಅಥವಾ ಶುನಶ್ಶೇಪ

ಮೊದಲಾದ ಅನೇಕ ಮಂದಿ ಪುತ್ರರಿದ್ದರು. ಶುನಶ್ಶೇಪ ಈತನ ಅಭಿಮಾನಪುತ್ರ [ಹರಿ.-೧-೨೭, ೩೨]. ಅರಸನಾಗಿದ್ದಾಗ ವಸಿಷ್ಠನ ಆಶ್ರಮಕ್ಕೆ ಹೋಗಿ ಆತನಿಂದ ಸತ್ಕೃತನಾಗಿ ನಂದಿನೀಧೇನುವನ್ನು ಬೇಡಿದ್ದು [ರಾಮಾ.-ಬಾಲ. ೫೧-೫೬. ಭಾರ.-ಆದಿ. ೧೯೧]. ವಿಶ್ವಾಮಿತ್ರ ಬ್ರಾಹ್ಮಣ್ಯವನ್ನು ಸಂಪಾದಿಸುವುದಕ್ಕಾಗಿ ತಪಸ್ಸು ಮಾಡಿದ್ದು [ರಾಮಾ.-ಬಾಲ. ೫೭-೬೫. ಭಾರ.-ಆದಿ. ೯೨]. ಈತ ತಪಸ್ಸಿಗೆ ಹೋಗಿದ್ದಾಗ ತ್ರಿಶಂಕು ರಾಜ ಈತನ ಹೆಂಡಿರುಮಕ್ಕಳನ್ನು ಕಾಪಾಡಿದ [ಹರಿ.-೧-೧೨]. ತಪಸ್ಸುಮಾಡುವಾಗ ಭಂಗಗೊಳಿಸಲು ಬಂದ ಮೇನಕೆಯೊಂದಿಗೆ ಸಂಸಾರಮಾಡಿಕೊಂಡಿದ್ದು ಶಕುಂತಲೆಯನ್ನು ಪಡೆದದ್ದು [ಭಾರ.-ಆದಿ. ೯೩]. ವಿಶ್ವಾಮಿತ್ರ ಬ್ರಾಹ್ಮಣನಾದದ್ದು [ರಾಮಾ.-ಬಾಲ. ೬೫. ಭಾರ.-ಆದಿ ೧೯೧. ಶಲ್ಯ. ೪೧]. ವಿಶ್ವಾಮಿತ್ರನ ಚರಿತ್ರೆ [ರಾಮಾ.-ಬಾಲ. ೫೧-೬೫. ಹರಿ. ೧-೨೭, ೩೨. ಭಾಗ.-೯-೧೬. ಸ್ಕಾಂ.-ನಾಗ. ೧೬೭-೧೬೮]. ಸರಸ್ವತೀ ನದಿಯ ನೀರು ರಕ್ತವಾಗುವಂತೆ ವಿಶ್ವಾಮಿತ್ರ ಶಾಪಕೊಟ್ಟದ್ದು [ಭಾರ.-ಶಲ್ಯ. ೪೩]. ಗಾಲವನೆಂಬ ಶಿಷ್ಯನಿಗೆ ಗುರುದಕ್ಷಿಣಾ ರೂಪವಾಗಿ ಒಂದು ಕಿವಿ ಮಾತ್ರವೇ ಕಪ್ಪಗಿರುವ ಎಂಟುನೂರು ಕುದುರೆಗಳನ್ನು ತಂದುಕೊಡಹೇಳಿದ್ದು [ಭಾರ.-ಉ ೧೧೪] ಯಯಾತಿ ಪುತ್ರಿಯಾದ ಮಾಧವಿಯಲ್ಲಿ ಅಷ್ಟಕನೆಂಬ ಪುತ್ರನನ್ನು ಪಡೆದದ್ದು. ನೋಡು—ಮಾಧವಿ [ಭಾರ -ಉ ೧೧೯]. ವಿಶ್ವಾಮಿತ್ರ ಧರ್ಮರಹಸ್ಯಗಳನ್ನು ವಿವರಿಸಿದ್ದು [ಭಾರ.-ಅನು. ೧೯೦]. ಹರಿಶ್ಚಂದ್ರನನ್ನು ಪೀಡಿಸಿದ್ದು [ಭಾರ.-ವನ. ೭೭. ದೇ. ಭಾಗ -೭-೧೮]. ಒಮ್ಮೆ ೧೨ ವರ್ಷ ಕಾಲ ಕ್ಷಾಮಬಂದಾಗ ಒಂದು ರಾತ್ರಿ ಚಂಡಾಲಗೃಹವನ್ನು ಕಳ್ಳತನದಿಂದ ಹೊಕ್ಕು ಅಲ್ಲಿದ್ದ ನಾಯ ಮಾಂಸವನ್ನು ಕದ್ದು ತಿನ್ನತೊಡಗಿದ್ದು ಚಂಡಾಲನೊಂದಿಗೆ ಸಂವಾದ. ಕೂಡಲೇ ಸುವೃಷ್ಟಿಯಾದದ್ದು [ಶಾಂತಿ. ೧೪೧] ಪುಷ್ಕರವನ್ನು ತಾನು ಕದಿಯಲಿಲ್ಲವೆಂದು ವಿಶ್ವಾಮಿತ್ರ ಪ್ರತಿಜ್ಞೆಮಾಡಿದ್ದು [ಭಾರ.-ಅನು ೧೪೩]. ವಿಶ್ವಾಮಿತ್ರ ವಂಶವರ್ಣನೆ [ಭಾರ.-ಅನು. ೭. ಹರಿ. ೧-೨೭. ರಾಮಾ -೧-೩೨, ೫೧. ವಾಯು.-೯೧]. ಈಗಣ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬ. ಈತ ಮಾತ್ರವೇ ಮಂತ್ರ ದ್ರಷ್ಟೃವಲ್ಲದೆ ಈತನ ವಂಶದಲ್ಲಿ ದೇವರಾತ, ಬಲ, ಮಧುಚ್ಛಂದ, ಅಘಮರ್ಷಣ, ಅಷ್ಟಕ, ಲೋಹಿತ, ಭೃತಕೀಲ, ದೇವಶ್ರವ, ಮಾಂಬುಧಿ, ದೇವರತ, ಶಿಶಿರ, ಶಾಲಂಕಾಯನ, ಧನಂಜಯರೆಂಬ ಹದಿಮೂರು ಮಂದಿಯೂ ಮಂತ್ರಪ್ರವರ್ತಕರು [ಮತ್ಸ್ಯ.-೧೪೬].

**ವಿಶ್ವಾವಸು.**—(i) ಕಶ್ಯಪ ಮುನಿಯಿಂದ ಪ್ರಾಧೆಯಲ್ಲಿ ಜನಿಸಿದ ದೇವಗಂಧರ್ವರಲ್ಲಿ ಒಬ್ಬ [ಭಾರ.-ಆದಿ. ೬೬. ಸ. ೭]. ಈತ ಸ್ಥೂಲಶಿರನೆಂಬ ಮುನಿಯ ಶಾಪದಿಂದ ಕಬಂಧನೆಂಬ ರಾಕ್ಷಸನಾಗಿ ಜನಿಸಿ, ರಾಮನ ಮೂಲಕ ವಿಮುಕ್ತಿಯನ್ನು

ಪಡೆದ [ರಾಮಾ.-ಬಾಲ. ೭೦-೭೨. ಭಾರ -ವನ. ೨೮೦]. ಯಾಜ್ಞವಲ್ಕ್ಯ ಮುನಿ ಯೊಂದಿಗೆ ಸಂವಾದ [ಭಾರ.-ಅನು. ೩೨೩].

(ii) ಜಮದಗ್ನಿ ಮಹರ್ಷಿಯ ಮಗ ನೋಡು—ಜಮದಗ್ನಿ, ರೇಣುಕಾ.

(iii) ಒಬ್ಬ ರಾಕ್ಷಸ. ಇವನ ಮಗಳಾದ ಅನಲೆಯ ಮಗಳು ಕುಂಭೀನಸಿ. ನೋಡು—ಲವಣಾಸುರ [ರಾಮಾ.-ಉ. ೬೧].

**ವಿಶ್ವೇದೇವತೆಗಳು**.—ಧರ್ಮನೆಂಬ ಮುನಿವರ್ಯನಿಂದ ದಕ್ಷಪುತ್ರಿಯಾದ ವಿಶ್ವಾ ಎಂಬವಳಲ್ಲಿ ಜನಿಸಿದವರು. ಇವರು ಕ್ರತು, ದಕ್ಷ, ವಸು, ಸತ್ಯ, ಕಾಲಕಾಮ, ಮುನಿ, ಕುರಜ, ಮನುಜ, ವೀಜ, ರೋಚಮಾನರೆಂಬುದಾಗಿ ಹತ್ತು ಮಂದಿ. ಇವರು ಹವ್ಯಕವ್ಯಗಳಲ್ಲಿ ಪೂಜನೀಯರು [ಮತ್ಸ್ಯ.-೨೦೩] ಇವರು ವಿಶ್ವಾಮಿತ್ರ ನಿಂದ ಶಾಪಹೊಂದಿದ್ದು [ಮಾರ್ಕಂ.-೭]. ನೋಡು—ಉಪಪಾಂಡವ

**ವಿಷಪಾನ**.—ಪಾಲ್ಗಡಲನ್ನು ಕಡೆದಾಗ ಶಿವ ವಿಷವನ್ನು ಪಾನಮಾಡಿದ್ದು [ಭಾರ -ಆ. ೧೮ ಭಾಗ.-೮-೭ ರಾಮಾ -ಬಾಲ ೪೫]

**ವಿಷಯಾ** —ಚಂದ್ರಹಾಸನ ಹೆಂಡತಿ ದುಷ್ಟಬುದ್ಧಿಯ ಮಗಳು.

**ವಿಷಹರವಿದ್ಯಾ**.—ವಿಷವನ್ನು ಹೋಗಲಾಡಿಸುವ ವಿದ್ಯೆ. ಈ ವಿದ್ಯೆಯನ್ನು ಬ್ರಹ್ಮ ಕಶ್ಯಪ ಮುನಿಗೆ ಉಪದೇಶಿಸಿದ ಕಶ್ಯಪ ಮುನಿ ಪರೀಕ್ಷಿತನನ್ನು ಬದುಕಿಸು ವುದಕ್ಕಾಗಿ ಪ್ರಯತ್ನಪಟ್ಟದ್ದು ನೋಡು—ಕಶ್ಯಪ, ತಕ್ಷಕ [ಭಾರ -ಆದಿ. ೨೦].

**ವಿಷ್ಣು**.—ತ್ರಿಮೂರ್ತಿಗಳಲ್ಲಿ ಒಬ್ಬ ಸತ್ವಪ್ರಧಾನವಾದ ಮೂರ್ತಿ ವಿಷ್ಣು ಶಿವ ಮಹಾತ್ಮ್ಯವನ್ನು ವರ್ಣಿಸಿದ್ದು [ಭಾರ.-ಅನು. ೪೯]. ವೃತ್ರಾಸುರನನ್ನು ಕೊಲ್ಲುವ ಸಂದರ್ಭದಲ್ಲಿ ವಿಷ್ಣು ದೇವತೆಗಳಿಗೆ ಯುಕ್ತಿಯನ್ನು ಹೇಳಿದ್ದು [ಭಾರ.-ಉ. ೧೦]. ವಿಷ್ಣುಶಬ್ದನಿರ್ವಚನ [ಭಾರ -ಉ. ೬೯ ಶಾಂತಿ. ೩೫೦] ವಿಷ್ಣುಪ್ರೀತಿಯನ್ನುಂಟು ಮಾಡುವ ಧರ್ಮಗಳು [ಅನು. ೧೮೯]. ಅಂಬರೀಷನ ಮಗಳಾದ ಶ್ರೀಮತಿಯನ್ನು ನಾರದ ವರಿಸಿದ್ದಾಗ ವಿಷ್ಣು ನಾರದನ ಮುಖವನ್ನು ಕಪಿಮುಖವನ್ನಾಗಿ ಮಾಡಿ ತಾನು ಶ್ರೀಮತಿಯನ್ನು ಅಪಹರಿಸಿದ, ಕ್ರುದ್ಧನಾದ ನಾರದ "ನೀನು ನನ್ನನ್ನು ಸ್ತ್ರೀವ್ಯಾಮೋಹದಿಂದ ಪಾಡುಪಡಿಸಿದೆಯಾಗಿ, ನೀನು ನನ್ನಂತೆಯೇ ಸ್ತ್ರೀವಿರಹದಿಂದ ಪೀಡಿತನಾಗು, ವಾನರರು ನಿನಗೆ ಸಹಾಯಕಾರಿಗಳಾಗಲಿ" ಎಂದು ಮುಂತಾಗಿ ಶಾಪಕೊಟ್ಟದ್ದು—

ಸ್ತ್ರೀ ಕೃತೇ ವ್ಯಾಕುಲಂ ವಿಷ್ಣೋ! ಮಾಮಕಾರ್ಷೀರ್ವಿಮೋಹಕಃ ।
ಅನ್ವಕಾರ್ಷೀಸ್ಸ್ವರೂಪೇಣ ಯೇನ ಕಾಪಟ್ಯಕಾರ್ಯಕೃತ್ ॥
ತದ್ರೂಪೇಣ ಮನುಷ್ಯಸ್ತ್ವಂ ಭವತದ್ದುಃಖಭಙ್ಗುರೇ! ।
ಯನ್ಮುಖಂ ಕೃತವಾನ್ ಮೇ ತ್ವಂ ತೇ ಭವಂತು ಸಹಾಯಿನಃ ॥

ತ್ವಂ ಸ್ತ್ರೀವಿಯೋಗಜಂ ದುಃಖಂ ಲಭಸ್ವ ಪರದುಃಖದಃ ।
ಮನುಷ್ಯಗತಿಕಃ ಪ್ರಾಯೋ ಭವಾಜ್ಞಾನವಿಮೋಹಿತಃ ॥
ಇತಿ ಶಪ್ತ್ವಾ ಹರಿಂ ಮೋಹಾನ್ನಾರದೋಽಜ್ಞಾನಮೋಹಿತಃ ॥
[ಶಿವ.-ರುದ್ರಸಂ. ಖಂ. ೧. ಅ. ೪].

ನೋಡು—ವೃಂದಾ, ರಾಮ ಸೃಷ್ಟಿಯ ಆದಿಯಲ್ಲಿ ವಿಷ್ಣು ಶಿವನ ವಾಮಾಂಗದಿಂದ ಜನಿಸಿದ. ಈತ ತಪಸ್ಸಿನಿಂದ ಬಳಲಿದ್ದಾಗ ಆತನ ದೇಹದಿಂದ ಸ್ವೇದೋದಕ ಹರಿಯತೊಡಗಿತು. ಬಳಲಿದ್ದ ವಿಷ್ಣು ಆ ಜಲಮಧ್ಯದಲ್ಲಿ ಶಯನಮಾಡಿದ. ಈ ಕಾರಣದಿಂದ ವಿಷ್ಣುವಿಗೆ ನಾರಾಯಣನೆಂದು ಹೆಸರು ಬಂತು. ನಾರ=ಜಲ, ಅಯನ=ಸ್ಥಾನ=ನಾರಾಯಣ(ಜಲಮಧ್ಯಶಾಯಿ) ಎಂದರ್ಥ [ಶಿವ -ಸೃ. ಖಂ. ೬]. ದೇವಕಂಟಕರನ್ನು ಸದೆಬಡಿದು ಧರ್ಮವನ್ನು ನೆಲೆಗೊಳಿಸಲು ಹತ್ತು ಅವತಾರಗಳನ್ನು ತಳೆದ. ಮತ್ಸ್ಯಾವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಆದಿಯಲ್ಲಿ ನಡೆಯಿತು [ಮತ್ಸ್ಯ.-೧. ಭಾಗ.-೮-೨೪]. ಕೂರ್ಮಾವತಾರ ಚಾಕ್ಷುಷ ಮನ್ವಂತರದಲ್ಲಿ ನಡೆಯಿತು [ಭಾಗ.-೧-೩] ವರಾಹಾವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಶ್ವೇತವರಾಹಕಲ್ಪದ ಆದಿಯಲ್ಲಿ ನಡೆಯಿತು [ಭಾಗ.-೩-೧೩]. ನೃಸಿಂಹಾವತಾರ ನಾಲ್ಕನೆಯ ಪರ್ಯಾಯದ ಕೃತಯುಗದಲ್ಲಿ ನಡೆಯಿತು [ಮತ್ಸ್ಯ.-೪೭]. ವಾಮನಾವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಏಳನೆಯ ತ್ರೇತಾಯುಗದಲ್ಲಿ ನಡೆಯಿತು. ಪರಶುರಾಮಾವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ನಡೆಯಿತು. ರಾಮಾವತಾರ ಈ ವೈವಸ್ವತ ಮನ್ವಂತರದ ಇಪ್ಪತ್ತನಾಲ್ಕನೆಯ ತ್ರೇತಾಯುಗದಲ್ಲಿ ನಡೆಯಿತು. ಕೃಷ್ಣಾವತಾರ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ನಡೆಯಿತು. ಬುದ್ಧಾವತಾರ ಈಗ ನಡೆಯುತ್ತಿರುವ ಇಪ್ಪತ್ತೆಂಟನೆಯ ಕಲಿಯುಗದ ಆರಂಭದಲ್ಲಿ ನಡೆಯಿತು. ಇದೇ ಕಲಿಯುಗದ ಅಂತ್ಯದಲ್ಲಿ ಕಲ್ಕ್ಯವತಾರ ನಡೆಯುತ್ತದೆ [ಮತ್ಸ್ಯ.-೪೭].

**ವೀತಹವ್ಯ.**—ಒಬ್ಬ ಅರಸು. ಸೂರ್ಯವಂಶದ ಶರ್ಯಾತಿ ರಾಜನ ಮಗ. ಈತನಿಗೆ ಹತ್ತು ಮಂದಿ ಪತ್ನಿಯರೂ ನೂರು ಜನ ಮಕ್ಕಳೂ ಇದ್ದರು. ಈತ ತಪಸ್ಸಿನಿಂದ ಬ್ರಾಹ್ಮಣನಾದ. ಈತ ಬ್ರಾಹ್ಮಣನಾದ ಬಳಿಕ ಜನಿಸಿದವ ಗೃತ್ಸಮದನೆಂಬ ಮಹರ್ಷಿ. ನೋಡು—ಪ್ರತರ್ದನ [ಭಾರ.-ಅನು. ೮].

**ವೀರಧನ್ವ.**—ತ್ರಿಗರ್ತ ದೇಶದ ಅರಸು. ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾಲ್ಕನೆಯ ದಿನದ ಹಗಲುಯುದ್ಧದಲ್ಲಿ ದ್ರುಪದಪುತ್ರನಾದ ಧೃಷ್ಟಕೇತುವಿನಿಂದ ಹತನಾದ [ಭಾರ.-ದ್ರೋ. ೧೦೭].

**ವೀರಬಾಹು**.—ಚೇದಿ ದೇಶದ ಅರಸು. ಸುಬಾಹುವಿನ ತಂದೆ. ನಳ ದಮಯಂತಿಯನ್ನು ಅಗಲಿದ ಬಳಿಕ ದಮಯಂತಿ ವರ್ತ್ತಕರ ಜತೆಯಲ್ಲಿ ಚೇದಿಪುರವನ್ನು ಸೇರಿ ಈತನ ಮನೆಯಲ್ಲಿ ಕೆಲಕಾಲ ವಾಸವಾಗಿದ್ದಳು [ಭಾರ.-ವನ. ೬೬].

**ವೀರಭದ್ರ**.—ರುದ್ರಾಂಶಸಂಭೂತ. ದಕ್ಷಯಾಗವನ್ನು ಧ್ವಂಸಗೊಳಿಸಲು ಅವತರಿಸಿದವ [ಭಾರ.-ಶಾಂ. ೨೮೦. ಭಾಗ.-೪-೫. ವಾಯು.-೩೦ ಕಾಳಿ.-೧೬. ಶಿವ.-ರುದ್ರಸಂ ೩೩. ಶಿವ.-ವಾಯುವೀಸಂ. ೧೯]. ನೋಡು—ದಕ್ಷ, ಬ್ರಹ್ಮ, ದಾಕ್ಷಾಯಣಿ.

**ವೀರವರ್ಮ**.—ಸಾರಸ್ವತ ನಗರದ ಅರಸು. ಈತ ತನ್ನ ಮಗಳಾದ ಮಾಲಿನಿಯನ್ನು ಯಮನಿಗೆ ಕೊಟ್ಟು ಮದುವೆಮಾಡಿದ. ಈತನಿಗೆ ಸುಭಾಲ, ಸುಲಭ, ಲೀಲ, ಕುವಲ, ಸರಲರೆಂಬ ಐವರು ಪುತ್ರರಿದ್ದರು. ಯುಧಿಷ್ಠಿರನ ಯಜ್ಞಾಶ್ವವನ್ನು ಮಕ್ಕಳ ಮೂಲಕ ಹಿಡಿತರಿಸಿ, ಅರ್ಜುನನನ್ನು ಇದಿರಿಸಿ, ಸೋತು, ಮರೆಹೊಕ್ಕು ಕೃಷ್ಣಾರ್ಜುನರನ್ನು ತನ್ನ ಅರಮನೆಗೆ ಕರೆತಂದು ಸತ್ಕರಿಸಿ, ಅನೇಕ ಕಪ್ಪಕಾಣಿಕೆಗಳನ್ನಿತ್ತು ತಾನೂ ಅವರ ಹಿಂದೆ ಅಶ್ವಮೇಧಕ್ಕೆ ನೆರವಾದ [ಜೈ.ಭಾರ.-ಅಶ್ವ. ೪೭-೪೯].

**ವೀರಸೇನ** —(I) ನಿಷಧ ದೇಶದ ಅರಸು. ದಮಯಂತಿಯ ಪತಿಯಾದ ನಳರಾಜನ ತಂದೆ [ಲಿಂಗ.-೬೬. ಭಾರ -ವನ. ೫೪].

(II) ಕಳಿಂಗ ದೇಶದ ಅರಸು. ಈತನ ಮಗಳಾದ ಮನೋರಮೆ ಇಕ್ಷ್ವಾಕು ವಂಶದ ಧ್ರುವಸಂಧಿ ಅಥವಾ ಪೌಷ್ಯ ರಾಜನ ಹೆಂಡತಿ. ನೋಡು—ಉತ್ತಂಕ [ಭಾರ.-ಆದಿ. ೩].

**ವೀರಿಣೀ**.—ಚತುರ್ಮುಖನ ಎಡಗಾಲಿನ ಹೆಬ್ಬೆಟ್ಟಿನಿಂದ ಜನಿಸಿದವಳು [ಭಾರ.-ಆ. ೬೭, ೬೯] ದಕ್ಷನ ಹೆಂಡತಿ. ವೀರಣನೆಂಬ ಬ್ರಹ್ಮನ ಮಗಳು ಈಕೆಗೆ ಅಸಿಕ್ನಿಯೆಂಬುದು ನಾಮಾಂತರ. ಈಕೆ ಅರುವತ್ತು ಮಂದಿ ಪುತ್ರಿಯರನ್ನು ಪಡೆದಳು [ವಿಷ್ಣು.-೧-೧೫]. ಸತೀದೇವಿ ಈಕೆಯ ಮಗಳು [ಕಾಳಿಕಾ ೮].

**ವೃಕ**.—ಪಾಂಚಾಲ ರಾಜಪುತ್ರ ಭಾರತ ಯುದ್ಧದ ಹನ್ನೆರಡನೆಯ ದಿನ ದ್ರೋಣನಿಂದ ಸತ್ತ [ಭಾರ.-ದ್ರೋ. ೨೧].

**ವೃಕದೇವಿ**.—ವಸುದೇವನ ಹೆಂಡತಿ. ಅವಗಾಹನ, ನಂದಕರೆಂಬವರು ಈಕೆಯ ಮಕ್ಕಳು. ನೋಡು—ವಸುದೇವ.

**ವೃಕಪ್ರಸ್ಥ**.—ಹಸ್ತಿನಾವತಿಯ ಸಮೀಪದಲ್ಲಿರುವ ಒಂದು ಪಟ್ಟಣ. ಭಾರತ ಯುದ್ಧಕ್ಕೆ ಮೊದಲು ಯುಧಿಷ್ಠಿರ ದುರ್ಯೋಧನನನ್ನು ಬೇಡಿದ ಐದು ಗ್ರಾಮಗಳಲ್ಲಿ ಒಂದು [ಭಾರ.-ಉ, ೩೧, ೮೬].

**ವೃಕರಥ.**—ಕರ್ಣನ ಬಲತಮ್ಮ. ಹದಿನೈದನೆಯ ದಿನದ ಯುದ್ಧದಲ್ಲಿ ಭೀಮನಿಂದ ಮಡಿದ [ಭಾರ.-ದ್ರೋಣ. ೧೫೮].

**ವೃಕೋದರ.**—ಭೀಮನ ನಾಮಾಂತರ [ಭಾರ -ಆ. ೧೪೭].

**ವೃತ್ರ.**—(i) ದನುಪುತ್ರರಾದ ಅಸುರರಲ್ಲಿ ಒಬ್ಬ [ಭಾರ.-ಆದಿ. ೬೬].

(ii) ತ್ವಷ್ಟೃವಿನಿಂದ ಇಂದ್ರನನ್ನು ಕೊಲ್ಲುವುದಕ್ಕಾಗಿ ಸೃಷ್ಟಿಸಲ್ಪಟ್ಟವ [ಭಾರ.-ಉ. ೯. ಭಾಗ -೬-೯. ಮಾರ್ಕ. ೫] ವೃತ್ರ ಇಂದ್ರನೊಂದಿಗೆ ಯುದ್ಧ ಮಾಡಿದ್ದು [ಭಾರ -ವನ. ೯೯ ಶಾಂತಿ. ೨೮೭ ಅನು. ೧೧]. ವೃತ್ರ ಇಂದ್ರನಿಂದ ಮಡಿದದ್ದು [ರಾಮಾ.-ಉತ್ತ. ೮೫. ಭಾರ.-ವನ ೧೦೦. ಉದ್ಯೋ. ೧೦. ಶಾಂತಿ. ೨೮೮ ಭಾಗ -೬-೧೨ ಪದ್ಮ -೨-೨೪, ೫-೧೯. ದೇ ಭಾ.-೬, ೧-೬. ಸ್ಕಾ. ಕೇದಾರ. ೧೬-೧೭]. ವೃತ್ರನಿಗೆ ಹಿಂದಣ ಜನ್ಮದಲ್ಲಿ ಚಿತ್ರಕೇತುವೆಂದು ಹೆಸರು. ಇವನ ಕಥೆ [ಭಾಗ -೬. ೧೪-೧೭] ವೃತ್ರ ಸನತ್ಕುಮಾರನಿಗೆ ವಿಷ್ಣುಮಾಹಾತ್ಮ್ಯೆಯನ್ನು ಬೋಧಿಸಿದ್ದು [ಭಾರ.-ಶಾಂ. ೨೮೬]

**ವೃದ್ಧಕನ್ಯಾ.**—ಕುಣಿಗಾರ್ಗ್ಯನೆಂಬ ಮಹರ್ಷಿಯ ಮಗಳು. ಗಾಲವ ಋಷಿಪುತ್ರನಾದ ಶೃಂಗವಂತನ ಹೆಂಡತಿ. ನೋಡು—ಕುಣಿಗಾರ್ಗ್ಯ

**ವೃದ್ಧಕ್ಷತ್ರ**—ಸಿಂಧು ದೇಶದ ಅರಸು. ದುರ್ಯೋಧನನ ತಂಗಿಯಾದ ದುಶ್ಶಲೆ ಇವನ ಮಗನಾದ ಜಯದ್ರಥನ ಹೆಂಡತಿ. ಈತ ಸಾಯಂಸಂಧ್ಯೆಯನ್ನು ಮಾಡುತ್ತಿದ್ದಾಗ ಅರ್ಜುನನ ಬಾಣದಿಂದ ಛಿನ್ನವಾದ ಜಯದ್ರಥನ ರುಂಡ ಇವನ ಬೊಗಸೆಯಲ್ಲಿ ಬಿತ್ತು. ವೃದ್ಧಕ್ಷತ್ರ ಅದನ್ನು ಜುಗುಪ್ಸೆಯಿಂದ ನೆಲದಮೇಲೆ ಬಿಸುಟ ಕಾರಣ ಇವನ ತಲೆ ಒಡೆದು ಸತ್ತ. ನೋಡು—ಜಯದ್ರಥ [ಭಾರ -ದ್ರೋ ೧೪೮].

**ವೃನ್ದಾ.**—ಕಾಲನೇಮಿಯೆಂಬ ರಾಕ್ಷಸನ ಮಗಳು. ಜಲಂಧರನ ಹೆಂಡತಿ. ಒಮ್ಮೆ ಜಲಂಧರ ಶಿವನ ರೂಪವನ್ನು ಧರಿಸಿ ಪಾರ್ವತಿಯನ್ನು ಮಾನಭಂಗಪಡಿಸಬೇಕೆಂದು ಯೋಚಿಸಿದ. ಇದನ್ನು ತಿಳಿದ ಪಾರ್ವತಿ ವಿಷ್ಣುವನ್ನು ಕುರಿತು '' ನೀನು ವೃಂದೆಯ ಪಾತಿವ್ರತ್ಯವನ್ನು ಕೆಡಿಸು '' ಎಂದಳು ಆಗ ಶಿವನೂ ಜಲಂಧರನೂ ಯುದ್ಧಮಾಡುತ್ತಿರಲಾಗಿ, ಒಂದು ದಿನ ರಾತ್ರಿ ವೃಂದೆಯ ಕನಸಿನಲ್ಲಿ, ಜಲಂಧರ ಕೋಣದ ಮೇಲೆ ಕುಳಿತು ದಕ್ಷಿಣ ದಿಕ್ಕಿಗೆ ಪ್ರಯಾಣಮಾಡಿದಂತೆಯೂ, ಜಲಂಧರನ ಪಟ್ಟಣ ಸುಟ್ಟುಹೋದಂತೆಯೂ ಕಾಣಿಸಿತು ಇದರಿಂದ ವೃಂದೆ ವ್ಯಥೆಪಟ್ಟು ಕಾಡಿಗೆ ಹೋಗಿ ಹುಚ್ಚಿಯಂತೆ ತಿರುಗಾಡುತ್ತಿದ್ದಳು ವಿಷ್ಣು ವೃದ್ಧತಾಪಸನ ವೇಷದಿಂದ ಅಲ್ಲಿಯೇ ಒಂದು ಮರದ ಕೆಳಗೆ ಕುಳಿತಿದ್ದ ವೃಂದೆ ಅವನ ಬಳಿಗೆ ಹೋಗಿ, ತನ್ನ ಗಂಡನ ಯೋಗಕ್ಷೇಮವನ್ನು ಪ್ರಶ್ನೆಮಾಡಲಾಗಿ ಆ ಮುದುಕ '' ನಿನ್ನ ಪತಿ ಮೃತನಾದ '' ಎಂದ. ವೃಂದೆ ಮೋಹದಿಂದ ನೆಲದಮೇಲೆ ಬಿದ್ದು ಚೇತರಿಸಿಕೊಂಡು

"ಸ್ವಾಮಿಾ, ತಾವು ಮಹಾಮಹಿಮರು. ಹೇಗಾದರೂ ನನ್ನ ಪತಿಯನ್ನು ಬದುಕಿಸಿ ಕೊಡಬೇಕು" ಎಂದು ಬೇಡಿದಳು. ವಿಷ್ಣು ಅಂತೆಯೇ ಆಗಲೆಂದು ಅಲ್ಲಿದ್ದ ಒಂದು ಕೊಳದಲ್ಲಿ ಸ್ನಾನಮಾಡಿ ಜಲಂಧರರೂಪದಿಂದ ವೃಂದೆಯ ಬಳಿಗೆ ಬಂದು ನಿಂತ. ವೃಂದೆ ಆನಂದಪರವಶಳಾಗಿ ಅವನೊಂದಿಗೆ ಕ್ರೀಡಿಸಿ, ಅವ ಜಲಂಧರನಲ್ಲವೆಂಬುದನ್ನು ತಿಳಿದು, ಆ ದೇಹವನ್ನು ಮರಳಿ ಧರಿಸಿರಲು ಒಲ್ಲದೆ ಕೋಪಶೋಕಭರದಿಂದ ವಿಷ್ಣುವನ್ನು ಕುರಿತು "ನೀನು ಹೀಗೆ ನನ್ನನ್ನು ಮೋಸಗೊಳಿಸಿದೆಯಾಗಿ ನೀನೂ ಭಾರ್ಯಾ ವಿಯೋಗವನ್ನು ಅನುಭವಿಸು" ಎಂದು ಶಾಪವಿತ್ತು, ಚಿತಿಯನ್ನು ಹೊಕ್ಕು ದೇಹ ತ್ಯಾಗಮಾಡಿದಳು [ಶಿವ.-ಯುದ್ಧಖಂ. ೧೪].

**ವೃಷಕ.**—ಒಬ್ಬ ಅರಸು. ಗಾಂಧಾರದೇಶದ ಅರಸನಾದ ಸುಬಲನ ಮಗ ಶಕುನಿಯ ಸಹೋದರ [ಭಾರ -ಆದಿ. ೨೦೧] ಇವ ಏಕರಥ [ಭಾರ -ಉ ೧೬೮] ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಎಂಟನೆಯ ದಿನದಲ್ಲಿ ಅರ್ಜುನನ ಮಗನಾದ ಇರಾವಂತನೊಂದಿಗೆ ಯುದ್ಧಮಾಡಿದ [ಭಾರ -ಭೀ. ೯೦]. ಹನ್ನೆರಡನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಮಡಿದ [ಭಾರ.-ದ್ರೋ. ೩೦. ಕರ್ಣ. ೨]

**ವೃಷಕೇತು.**—ಕರ್ಣನ ಮಗ ಯುಧಿಷ್ಠಿರನ ಅಶ್ವಮೇಧಕ್ಕೆ ಮೊದಲು ಭೀಮ ಯೌವನಾಶ್ವನ ರಾಜಧಾನಿಯಾದ ಭದ್ರಾವತೀ ನಗರಕ್ಕೆ ಹೋಗಿದ್ದಾಗ ಇವ ಭೀಮನ ಸಂಗಡ ಹೋಗಿ, ಯೌವನಾಶ್ವನನ್ನು ಯುದ್ಧದಲ್ಲಿ ಸೋಲಿಸಿ ಅವನ ಮೆಚ್ಚುಗೆಗೆ ಪಾತ್ರನಾದ ಕರ್ಣ ಮಡಿದ ತರುವಾಯ ಇವ ಪಾಂಡವರನ್ನೇ ಸೇರಿದ. ನೋಡು—ಮೇಘವರ್ಣ, ಯೌವನಾಶ್ವ [ಜೈ -ಅಶ್ವ ೧-೭].

**ವೃಷದರ್ಭ, ವೃಷಾದರ್ಭಿ.**—ಕಾಶೀ ದೇಶದ ಅರಸನಾದ ವೃಷದರ್ಭ ರಾಜನ ಮಗ. ಮರೆಹೊಕ್ಕವರನ್ನು ಕಾಪಾಡುವುದೆಂಬುದು ಈತನ ಮುಖ್ಯ ವ್ರತ. ಒಮ್ಮೆ ಇಂದ್ರನೂ ಅಗ್ನಿಯೂ ಗಿಡಗ, ಪಾರಿವಾಳಗಳ ರೂಪವನ್ನು ತಳೆದು ಈತನನ್ನು ಪರೀಕ್ಷಿಸುವ ಸಲುವಾಗಿ ಬಂದರು. ಪಾರಿವಾಳ ಮೊದಲು ರಾಜನನ್ನು ಮರೆಹೊಕ್ಕಿತು. ಗಿಡಗ ತನ್ನ ಆಹಾರವನ್ನು ತನಗೆ ಒಪ್ಪಿಸಬೇಕೆಂದು ಕೇಳಿತು. ರಾಜ ಪಾರಿವಾಳದ ತೂಕ ತನ್ನ ಶರೀರದ ಮಾಂಸವನ್ನು ಕೊಡುವುದಾಗಿ ಹೇಳಿ ಗಿಡಗವನ್ನು ಸಮ್ಮತಿ ಪಡಿಸಿ, ತನ್ನ ದೇಹದ ಮಾಂಸವನ್ನು ಕಡಿದು ತಕ್ಕಡಿಯಲ್ಲಿಟ್ಟ. ಆಗ ಇವನ ಶರಣಾಗತರಕ್ಷಣ ವ್ರತಕ್ಕೆ ಮೆಚ್ಚಿದ ಇಂದ್ರಾಗ್ನಿಗಳು ಇವನಿಗೆ ಮೈದೋರಿ ಅನೇಕ ವರಗಳನ್ನು ಕೊಟ್ಟು ಅಲ್ಲಿಂದ ತೆರಳಿದರು [ಭಾರ.-ಅನು ೬೭]. ಇವ ಚಂದ್ರ ವಂಶದ ಅನು ರಾಜನ ಸಂತತಿಯಲ್ಲಿ ಜನಿಸಿದ ಉಶೀನರ ರಾಜನ ಮಗನಾದ ಶಿಬಿ ಯೆಂಬ ರಾಜನ ಮಗ. ಈತನಿಗೇ ವೃಷದರ್ಭನೆಂಬುದು ನಾಮಾಂತರವೆಂದು

ತೋರುತ್ತದೆ [ಭಾಗ.-೯. ೨೩]. ಈತನ ಮಗನಾದ ಅನಿಲನೆಂಬವ ಸತ್ತಬಳಿಕ ಸಪ್ತರ್ಷಿಗಳು ಅವನ ಮಾಂಸವನ್ನು ಪಚನಮಾಡಿ ತಿನ್ನಲು ಯತ್ನಿಸಿದ್ದು [ಭಾರ.-ಅನು. ೧೪೧]. ಈತ ಸಪ್ತರ್ಷಿಗಳನ್ನು ಕೊಲ್ಲುವ ಸಲುವಾಗಿ ಕ್ಷುದ್ರದೇವತೆಯನ್ನು ಸೃಷ್ಟಿಸಿದ್ದು [ಭಾರ.-ಅನು. ೧೪೧].

**ವೃಷಪರ್ವ.**—ಒಬ್ಬ ರಾಕ್ಷಸ. ಕಶ್ಯಪ ಮುನಿಯಿಂದ ದನುವಿನಲ್ಲಿ ಜನಿಸಿದವ. ಈತನಿಗೆ ಶರ್ಮಿಷ್ಠಾ, ಚಂದ್ರಾ ಎಂಬ ಇಬ್ಬರು ಪುತ್ರಿಯರು ನೋಡು—ದೇವಯಾನಿ, ಯಯಾತಿ, ಶರ್ಮಿಷ್ಠಾ, ಶುಕ್ರ [ಭಾಗ.-೯-೧೮. ಭಾರ.-ಆ. ೬೬, ೭೨, ಮತ್ಸ್ಯ.-೨೯].

**ವೃಷಸೇನ.**—ಕರ್ಣನ ಮಗ. ಮಹಾರಥ [ಉ. ೧೬೭]. ಹದಿಮೂರನೆಯ ದಿನದಲ್ಲಿ ಅಭಿಮನ್ಯುವಿನಿಂದ ಸೋತ [ಭಾರ.-ದ್ರೋ. ೩೭]. ಕರ್ಣ ಭೀಮನನ್ನು ರಣರಂಗದಲ್ಲಿ ಹದಿನಾಲ್ಕನೆಯ ದಿನ ಇದಿರಿಸಿ ನಾನಾ ಪರಿಯಿಂದ ಹೀಯಾಳಿಸಿದ. ಇದರಿಂದ ಕುಪಿತನಾದ ಅರ್ಜುನ ಕರ್ಣನ ಮಕ್ಕಳನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದು [ಭಾರ -ದ್ರೋ. ೧೪೬] ಹದಿನೇಳನೆಯ ದಿನದ ಯುದ್ಧದಲ್ಲಿ ವೃಷಸೇನ ನಕುಲನನ್ನು ಇದಿರಿಸಿ ಸೋಲಿಸಿದ್ದು [ಕರ್ಣ. ೮೮]. ಅರ್ಜುನ ಇವನನ್ನು ಕೊಂದದ್ದು [ಭಾರ.-ಕರ್ಣ. ೯೦].

**ವೃಷಾದರ್ಭಿ.**—ನೋಡು—ವೃಷದರ್ಭ.

**ವೃಷ್ಣಿ.**—(i) ಚಂದ್ರ ವಂಶದ ಕಾರ್ತವೀರ್ಯಾರ್ಜುನನ ಮಗನಾದ ಮಧು ರಾಜನ ಮಗ [ವಾಯು.-೯೪].

(ii) ಚಂದ್ರ ವಂಶದ ಮತ್ತೊಬ್ಬ ಅರಸು ಶ್ರೀಕೃಷ್ಣನ ಮೂಲಪುರುಷ ಇವನಿಗೆ ಸುಮಿತ್ರ, ಯುಧಾಜಿತರೆಂಬ ಇಬ್ಬರು ಪುತ್ರರು [ಭಾಗ.-೯, ೨೪].

**ವೇಗವನ್ತ.**—ಒಬ್ಬ ರಾಕ್ಷಸ. ಕಶ್ಯಪ ಮುನಿಯಿಂದ ದನುಯೆಂಬವಳಲ್ಲಿ ಜನಿಸಿದವ [ಭಾರ.-ಆದಿ. ೬೬]. ಸಾಲ್ವ ರಾಜನ ಸ್ನೇಹಿತ. ಸಾಲ್ವ ರುಕ್ಮಿಣೀಸ್ವಯಂವರ ಕಾಲದಲ್ಲಿ ಶ್ರೀಕೃಷ್ಣನಿಂದ ಸೋತು, ಹೇಗಾದರೂ ಕೃಷ್ಣನಿಗೆ ಅಪಕಾರಮಾಡಬೇಕೆಂದು ಹೊಂಚುಹಾಕುತ್ತಿದ್ದ. ಶ್ರೀಕೃಷ್ಣ ಯುಧಿಷ್ಠಿರನ ರಾಜಸೂಯಯಾಗಕ್ಕಾಗಿ ಹಸ್ತಿನಾವತಿಗೆ ಹೋಗಿದ್ದಾಗ ಸಾಲ್ವನ ಪರಮಮಿತ್ರನಾದ ಶಿಶುಪಾಲನನ್ನು ಕೃಷ್ಣ ಕೊಲ್ಲಲಾಗಿ, ಸಾಲ್ವ ದ್ವಾರಕೆಯಮೇಲೆ ದಂಡೆತ್ತಿಬಂದ. ವೇಗವಂತ ಸಾಲ್ವನ ಬೆಂಬಲವಾಗಿ ಬಂದು ಯುದ್ಧಮಾಡಿದ ಜಾಂಬವತಿಯಲ್ಲಿ ಕೃಷ್ಣನಿಂದ ಜನಿಸಿದ ಸಾಂಬಕುಮಾರ ವೇಗವಂತನನ್ನು ಕೊಂದ [ಭಾರ.-ವನ. ೧೬. ಭಾಗ.-೧೦, ೭೬].

**ವೇಣೀಮಾಧವ.**—ಪ್ರಯಾಗಕ್ಷೇತ್ರದಲ್ಲಿರುವ ವಿಷ್ಣುಮೂರ್ತಿ.

**ವೇಣುದಾರಿ.**—ಅಶ್ಮಕವೆಂಬ ದೇಶದ ಅರಸು. ಯದು ವಂಶದವ [ಹರಿ.-೨-೬೧]. ಇವನೊಬ್ಬ ಯಾದವ [ಭಾರ.-ಸಭಾ. ೬೧]. ಕರ್ಣ ದಿಗ್ವಿಜಯಕ್ಕೆ ಹೋಗಿದ್ದಾಗ ಇವನನ್ನೂ ಇವನ ಮಗನನ್ನೂ ಸೋಲಿಸಿದ [ಭಾರ -ವನ ೨೫೫].

**ವೇತ್ರವತಿ.**—ಒಂದು ನದಿ. ಇದು ಪಾರಿಯಾತ್ರ ಪರ್ವತದಲ್ಲಿ ಹುಟ್ಟಿ ವಿದಿಶಾ ನದಿಯ ಸಮೀಪದಲ್ಲಿ ಹರಿದು ವತ್ಸ ದೇಶದಲ್ಲಿ ಯಮುನೆಗೆ ಬೀಳುತ್ತದೆ [ಭಾರ.-ಭೀ. ೯. ಮತ್ಸ್ಯ.-೧೧೪]. ಇದು ಈಗಣ ಮಾಳವ ದೇಶದ ಭೂಪಾಲ (Bhopal) ರಾಜ್ಯದಲ್ಲಿ (Betwa) ಬೆಟ್ವ ಎಂದು ಪ್ರಸಿದ್ಧವಾಗಿದೆ

**ವೇದ.**—ಅಪೌರುಷೇಯವಾದ ಗ್ರಂಥರಾಶಿ ಇದರಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದವೆಂದು ನಾಲ್ಕು ಭಾಗ. ಇದನ್ನು ಕೃಷ್ಣದ್ವೈಪಾಯನ (ವ್ಯಾಸ) ಮುನಿ ವಿಭಾಗಮಾಡಿ, ಶಿಷ್ಯರ ಮೂಲಕ ಲೋಕದಲ್ಲಿ ಪ್ರಚಾರಕ್ಕೆ ತಂದ [ಭಾರ.-ಆ. ೬೦. ಭಾಗ -೧೨, ೬ ವಾಯು -೬೦. ವಿಷ್ಣು -೩-೩] ಮಧು ಕೈಟಭರು ವೇದಗಳನ್ನು ಅಪಹರಿಸಿದ್ದು [ಭಾರ.-ಶಾಂತಿ ೩೫೭] ಸಿಟ್ಟಿನ ನಿಂದೆ, ಅತಿಥಿಯ ಪ್ರಶಂಸೆ ಈ ವಿಷಯವಾಗಿ ವೇದಗಳು ಸಂವಾದಮಾಡಿದ್ದು [ಭಾರ -ಅನು ೧೩]. ನೋಡು—ಅಥರ್ವವೇದ, ಉಪವೇದ, ಕೃಷ್ಣದ್ವೈಪಾಯನ, ಋಗ್ವೇದ, ಯಜುರ್ವೇದ, ಸಾಮವೇದ, ಯಾಜ್ಞವಲ್ಕ್ಯ, ಜೈಮಿನಿ, ಪೈಲ, ಇತ್ಯಾದಿ

**ವೇದವತಿ.**—ಬೃಹಸ್ಪತಿಯ ಮಗನಾದ ಕುಶಧ್ವಜನ ಮಗಳು ಮಹಾರೂಪವತಿ. ಕುಶಧ್ವಜ ಪಾರಾಯಣಮಾಡುತ್ತಿದ್ದ ವೇದವಾಕ್ಯಗಳೇ ಸ್ತ್ರೀರೂಪದಿಂದ ಬಂದುವು. ಶಂಖನೆಂಬ ದೈತ್ಯ ವೇದವತಿಯ ರೂಪಕ್ಕೆ ಮರುಳಾಗಿ ಆಕೆಯನ್ನು ತನಗೆ ಕೊಡಬೇಕೆಂದು ಕುಶಧ್ವಜನನ್ನು ಕೇಳಲಾಗಿ, ಕುಶಧ್ವಜ ತನ್ನ ಮಗಳನ್ನು ವಿಷ್ಣುವಿಗಲ್ಲದೆ ಮತ್ತಾರಿಗೂ ಕೊಡುವುದಿಲ್ಲವೆಂದ ಶಂಖ ಕುಶಧ್ವಜನನ್ನು ಸಂಹರಿಸಲಾಗಿ, ಆತನ ಪತ್ನಿ ಸಹಗಮನಮಾಡಿದಳು ವೇದವತಿ ನಾರಾಯಣನನ್ನೇ ಮದುವೆಯಾಗುವ ಉದ್ದೇಶದಿಂದ ತಪಸ್ಸುಮಾಡುತ್ತಿದ್ದಳು ದಿಗ್ವಿಜಯಕ್ಕೆ ಹೊರಟ ರಾವಣ ವೇದವತಿಯನ್ನು ಸಂಧಿಸಿ, ಆಕೆಯ ಪೂರ್ವೋತ್ತರಗಳನ್ನು ಕೇಳಿ ತಿಳಿದು, ಬಲಾತ್ಕರಿಸಹೋಗಿ, ಆಕೆಯ ಮುಂದಲೆ ಹಿಡಿದೆಳೆದ ಆಗ ವೇದವತಿ ಬಿಡಿಸಿಕೊಂಡು ಕ್ರೋಧಪರವಶಳಾಗಿ "ಎಲಾ, ನೀನು ಈ ರೀತಿ ನನ್ನನ್ನು ಭಂಗಗೊಳಿಸಿದೆ. ನಾನು ಈ ಜನ್ಮದಲ್ಲಿ ಪಾಪಲೇಶವನ್ನಾದರೂ ಮಾಡದಿದ್ದ ಪಕ್ಷದಲ್ಲಿ ಮುಂದಣ ಜನ್ಮದಲ್ಲಿ ಅಯೋನಿಜೆಯಾಗಿ ಜನಿಸಿ, ನಿನ್ನನ್ನು ಕೊನೆಗಾಣಿಸುವೆ" ಎಂದು ಶಾಪವಿತ್ತು, ಅಗ್ನಿಪ್ರವೇಶಮಾಡಿ ದೇಹವನ್ನು ತೊರೆದು ಜನಕನ ಸಾಕುಮಗಳು ಸೀತೆಯಾದಳು [ರಾ.-ಉತ್ತ. ೧೭]. ಇಂತು ಅಗ್ನಿಪ್ರವೇಶಮಾಡಿದ ವೇದವತಿ ಲಂಕೆಯೊಳಗಣ ಒಂದು ಸರೋವರದಲ್ಲಿ ಕಮಲದಿಂದ ಜನಿಸಿದಳು ರಾವಣ ಇದನ್ನು ಕಂಡು ಆಶ್ಚರ್ಯಪಡಲಾಗಿ, ಜೋಯಿಸರು

"ಇದು ಉತ್ಪಾತಸೂಚಕ"ವೆಂದರು ಆಗ ರಾವಣ ಆ ಮಗುವನ್ನು ಒಂದು ಪೆಟ್ಟಿಗೆಯಲ್ಲಿಟ್ಟು, ಮುಚ್ಚಿ ಸಮುದ್ರದಲ್ಲಿ ಬಿಟ್ಟ. ಅದು ತೇಲುತ್ತ ಮಿಥಿಲಾ ನಗರದ ಬಳಿ ಜನಕ ರಾಜನ ಕೈಸೇರಿತು. ಬಳಿಕ ಜನಕ ಇವಳನ್ನು ತನ್ನ ಮಗಳೆಂದು ಭಾವಿಸಿ ರಕ್ಷಿಸಿದ. ಇವಳೇ ಸೀತೆ [ದೇ ಭಾ.-೯, ೧೫-೧೬].

**ವೇನ.**—ಅಂಗದೇಶಾಧಿಪತಿಯಾದ ಅಂಗನೆಂಬ ರಾಜನಿಂದ ಸುನೀಥೆಯೆಂಬವಳಲ್ಲಿ ಜನಿಸಿದವ. ಇವ ಕೇವಲ ನಾಸ್ತಿಕನಾಗಿದ್ದುದರಿಂದ ಪ್ರಜೆಗಳೆಲ್ಲರೂ ಇವನನ್ನು ಕೊಂದರು. ನೋಡು—ಪೃಥು [ಭಾರ.-ದ್ರೋ ೬೯. ಶಾಂತಿ ೨೮, ೫೮. ಹರಿ -೧-೨. ವಿಷ್ಣು.-೧-೨೩. ಭಾಗ -೧-೧೩. ಮತ್ಸ್ಯ -೧೦].

**ವೈಕುಂಠವರ್ಣನ.**—[ಭಾಗ.-೩-೧೫].

**ವೈಜಯಂತ.**—(i) ಒಂದು ಬೆಟ್ಟ. ಕ್ಷೀರಸಮುದ್ರದ ನಡುವೆ ಇದೆ ಚತುರ್ಮುಖನ ವಾಸಸ್ಥಾನ [ಭಾರ -ಶಾಂತಿ. ೩೬೦].

(ii) ನಿಮಿ ರಾಜನ ರಾಜಧಾನಿಯ ಹೆಸರು

(iii) ಇಂದ್ರನ ಅರಮನೆಯ ಹೆಸರು

(iv) ವಿಷ್ಣುವಿನ ಕೊರಳಿನಲ್ಲಿರುವ ಮಾಲೆ

**ವೈತರಿಣೀ.**—(i) ಒಂದು ನದಿ [ಭಾರ -ಸ ೯. ವನ ೮೧, ೮೩. ಉದ್ಯೋ ೧೦೯. ಭೀ ೯] ಇದು ಓಢ್ರ ದೇಶದಲ್ಲಿ ಕಟಕ್ ಪಟ್ಟಣಕ್ಕೆ ಸಮೀಪವಾಗಿ (Betrani) ಬೆಟ್ರಾನಿಯೆಂದು ಪ್ರಸಿದ್ಧವಾಗಿದೆ

(ii) ಯಮಲೋಕಕ್ಕೆ ಹೋಗುವ ಹಾದಿಯಲ್ಲಿರುವ ಭೀಕರವಾದ ಒಂದು ನದಿ.

**ವೈದರ್ಭೀ.**—ವಿದರ್ಭ ರಾಜನ ಮಗಳು ಸಗರ ರಾಜನ ಪತ್ನಿಯಾದ ಕೇಶಿನಿಗೆ ಸಲ್ಲುತ್ತದೆ. ಈಕೆಯ ಮಕ್ಕಳು ಅರುವತ್ತು ಸಾವಿರ ಮಂದಿ [ಭಾರ.-ವನ. ೧೦೫]. ಲೋಪಾಮುದ್ರಾ, ದಮಯಂತಿ, ರುಕ್ಮಿಣಿ ಮೊದಲಾದವರೆಲ್ಲರೂ ವಿದರ್ಭ ರಾಜ ಪುತ್ರಿಯರಾದ ಕಾರಣ ಈ ಹೆಸರು ಅವರೆಲ್ಲರಿಗೂ ಸಲ್ಲುತ್ತದೆ [ಭಾರ -ಉ. ೧೧೭].

**ವೈನ್ಯ.**—ವೇನ ರಾಜನ ಮಗ ಪೃಥು ಚಕ್ರವರ್ತಿ. ನೋಡು—ಪೃಥು, ವೇನ [ಭಾರ.-ಸ. ೮. ವನ. ೧೮೮].

**ವೈರಾಗ್ಯ.**—ಇದು ಮುಕ್ತಿಗೆ ಸಾಧನ [ಭಾರ.-ಶಾಂತಿ. ೧೮೭]. ವೈರಾಗ್ಯ ಜ್ಞಾನೋತ್ಪತ್ತಿಗೆ ಕಾರಣ [ಭಾರ.-ಅನು. ೨೪೪]

**ವೈವಸ್ವತ.**—ವಿವಸ್ವಂತನೆಂಬ ಆದಿತ್ಯನಿಂದ ತ್ವಷ್ಟೃವಿನ ಮಗಳಾದ ಸಂಜ್ಞಾ ದೇವಿಯಲ್ಲಿ ಜನಿಸಿದವ. ಇವನಿಗೆ ಶ್ರಾದ್ಧದೇವ, ಮನುವೆಂಬುದು ಮೊದಲಿನ ಹೆಸರು. ವೈವಸ್ವತ ಮನುವೆಂಬುದು ರೂಢಿಯಲ್ಲಿದೆ. ನೋಡು—ಮತ್ಸ್ಯ, ಮನು, ಮನ್ವಂತರ.

ಇವನ ಜನನ [ಭಾರ.-ವನ. ೧೯೦. ಭಾಗ.-೮-೧೩. ಮಾರ್ಕಂ.-೧೧೪]. ವೈವಸ್ವತನ ವಂಶವರ್ಣನೆ [ಭಾರ.-ಆ ೬೯ ಭಾಗ.-೯-೧, ೧೩. ಹರಿ -೧-೧೦. ಬ್ರಹ್ಮ-೭. ವಾಯು.-೮೫-೮೯. ಮತ್ಸ್ಯ.-೯] ಈಗ ಪ್ರಚಾರದಲ್ಲಿರುವ ಮನುಧರ್ಮಶಾಸ್ತ್ರ ಈತನಿಂದ ರಚಿತವಾದುದು.

**ವೈಶಮ್ಪಾಯನ.**—(i) ಒಬ್ಬ ಮಹರ್ಷಿ. ಈಗ ನಡೆಯುತ್ತಿರುವ ಇಪ್ಪತ್ತೆಂಟನೆಯ ಮಹಾಯುಗದಲ್ಲಿ ವ್ಯಾಸನಾಗಿರುವ ಕೃಷ್ಣದ್ವೈಪಾಯನ ಮುನಿಯ ಶಿಷ್ಯ ಯಾಜ್ಞವಲ್ಕ್ಯ ಮುನಿ ಈತನ ಶಿಷ್ಯ ಮತ್ತು ಸೋದರಳಿಯ. ನೋಡು— ಕೃಷ್ಣದ್ವೈಪಾಯನ, ಯಾಜ್ಞವಲ್ಕ್ಯ, ಯಜುರ್ವೇದ [ಭಾರ.-ಶಾಂತಿ ೩೩೫ ವಿಷ್ಣು.-೩-೪. ದೇ ಭಾಗ.-೧-೪].

(ii) ಒಬ್ಬ ಮಹರ್ಷಿ. ವೈವಸ್ವತ ಮನ್ವಂತರದ ಒಂದನೆಯ ಮಹಾಯುಗದಲ್ಲಿ ಸ್ವಯಂಭುವೆಂಬ ವ್ಯಾಸನ ಶಿಷ್ಯ [ಭಾಗ -೧೨-೬] ಇವ ಜನಮೇಜಯನಿಗೆ ಮಹಾಭಾರತವನ್ನು ಹೇಳಿದ [ಭಾರ -ಆದಿ. ೧೨೫] ಇವನಿಗೆ ಬ್ರಹ್ಮಹತ್ಯೆ, ಬಾಲಹತ್ಯೆಗಳು ಬಂದದ್ದು [ಭಾರ -ಅನು. ೯]

**ವೈಶ್ರವಣ.**—ಒಬ್ಬ ಮಹರ್ಷಿ. ಪುಲಸ್ತ್ಯನ ಮಗನಾದ ವಿಶ್ರವಸನಿಂದ ಭರದ್ವಾಜಪುತ್ರಿಯಾದ ದೇವವರ್ಣಿನಿಯಲ್ಲಿ ಜನಿಸಿದವ ಇವ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಅಂತರಿಕ್ಷದಲ್ಲಿ ತಾನಾಗಿ ಸಂಚರಿಸುವ ಪುಷ್ಪಕವಿಮಾನವನ್ನೂ, ಲಂಕಾ ನಗರಾಧಿಪತ್ಯವನ್ನೂ ಪಡೆದ ಇವನೇ ಕುಬೇರ ದೇವತೆಗಳ ಧನಾಧಿಪತಿ. ಈಶ್ವರನ ಮಿತ್ರ. ಯಕ್ಷರ ಅರಸು. ಇವ ವೈವಸ್ವತ ಮನ್ವಂತರದವ [ದೇ. ಭಾಗ.-೧೨-೧೦. ಭಾರ -ವನ ೨೭೪] ಇವ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಉತ್ತರದಿಕ್ಕಿನ ಆಧಿಪತ್ಯವನ್ನು ಪಡೆದು, ತನ್ನ ತಂದೆಯಾದ ವಿಶ್ರವಸನ ಮೂಲಕ ಆ ಕಾಲದಲ್ಲಿ ಅನಾಯಕನಾಗಿದ್ದ ಲಂಕಾ ನಗರದ ಸುದ್ದಿಯನ್ನು ಕೇಳಿ ಅಲ್ಲಿ ನಿಂತ [ರಾಮಾ.-ಉತ್ತ. ೩]. ರಾವಣ ಲಂಕೆಯನ್ನು ಕಸುಗೊಂಡ ಬಳಿಕ ವೈಶ್ರವಣ ಕೈಲಾಸ ಪರ್ವತವನ್ನು ಸೇರಿದ [ರಾಮಾ -ಉತ್ತ ೧೧] ರಾವಣ ಕೈಲಾಸ ಪರ್ವತಕ್ಕೆ ಹೋಗಿ ಕುಬೇರನನ್ನು ಜಯಿಸಿ ಪುಷ್ಪಕವಿಮಾನವನ್ನು ಅಪಹರಿಸಿದ್ದು [ರಾಮಾ.-ಉತ್ತ. ೧೫]. ಮೊದಲನೆಯ ಸ್ವಾಯಂಭುವ ಮನ್ವಂತರದಲ್ಲಿ ಪುಲಸ್ತ್ಯಪುತ್ರನಾದ ವಿಶ್ರವಸನಿಂದ ಜನಿಸಿದವ. ಇವನ ಆಕಾರ ಹುಟ್ಟುವಾಗ ಮಹಾ ಭಯಂಕರವಾಗಿತ್ತು ಕು (ಕುತ್ಸಿತವಾದ) + ಬೇರ (ದೇಹ) ವುಳ್ಳವನಾದುದರಿಂದ ಇವನಿಗೆ ಕುಬೇರನೆಂದು ಹೆಸರಾಯಿತು. ಆ ತರುವಾಯ ವಿಶ್ರವಸ ಇವನನ್ನು ಸೋಮನೆಂದು ಕರೆಯಲಾಗಿ ಇವನ ಆಕಾರ ಸೌಮ್ಯವಾಯಿತು. ಇವನ ಹೆಂಡತಿ ಋದ್ಧಿ ಇವನ

ಮಗ ನಳಕೂಬರ. ಹೇಮಕೂಟ ಪರ್ವತದ ಮೇಲಿರುವ ಕೈಲಾಸವೆಂಬ ಶಿಖರ ಇವನ ವಾಸಸ್ಥಾನ. ನೋಡು—ಕುಬೇರ, ಧ್ರುವ, ಅಲಕಾ [ಭಾಗ.-೪, ೧೦].

**ವೈಷ್ಣವಧರ್ಮನಿರೂಪಣ.**—ವಿಷ್ಣುಭಕ್ತರು ಆಚರಿಸಬೇಕಾದ ಧರ್ಮಗಳು [ಭಾರ -ಅನು. ೩೬. ಅಶ್ವ. ೯೬-೧೧೮].

**ವೈಷ್ಣವಲಕ್ಷಣ.**—[ಭಾರ.-ಅಶ್ವ. ೧೦೪ ಲಿಂಗ.-ಉತ್ತ. ೪].

**ವೈಹಾರ.**—ಒಂದು ಪರ್ವತ. ಮಗಧ ದೇಶದಲ್ಲಿದೆ. ನೋಡು—ಜರಾಸಂಧ, ಗಿರಿವ್ರಜ.

**ವ್ಯಾಘ್ರ.**—ಹುಲಿ. ಅವುಗಳ ಉತ್ಪತ್ತಿ [ಭಾರ -ಆ. ೬೭].

**ವ್ಯಾಧಿ.**—ರೋಗ. ಇದು ಶಾರೀರಕವೆಂತಲೂ, ಮಾನಸವೆಂತಲೂ ಎರಡು ವಿಧ [ಭಾರ.-ಅಶ್ವ. ೧೨]. ವ್ಯಾಧಿಯ ಉತ್ಪತ್ತಿ. ನೋಡು—ಮೃತ್ಯು [ಭಾರ.-ಶಾಂತಿ. ೨೬೪].

**ವ್ಯಾಸ.**—ವೇದ ವಿಭಾಗವನ್ನು ಮಾಡಿದ ಮಹರ್ಷಿ. ಇದೊಂದು ಬಿರುದು ಕ್ರಮವಾಗಿ ಒಂದೊಂದು ಕಲ್ಪದಲ್ಲಿ ಒಬ್ಬೊಬ್ಬ ವ್ಯಾಸನಾಗಿ, ಪ್ರತಿಯೊಂದು ದ್ವಾಪರ ಯುಗದಲ್ಲಿಯೂ ಅವತರಿಸುತ್ತಾನೆ. ನೋಡು—ಕೃಷ್ಣದ್ವೈಪಾಯನ ; ಸ್ವಯಂಭು, ಪ್ರಜಾಪತಿ, ಉಶನ, ಬೃಹಸ್ಪತಿ, ಸವಿತೃ, ಮೃತ್ಯು, ಮಘವ, ವಸಿಷ್ಠ, ಸಾರಸ್ವತ, ತ್ರಿಧಾಮ, ತ್ರಿವೃಷ, ಭಾರದ್ವಾಜ, ಅಂತರಿಕ್ಷ, ಧರ್ಮ, ತ್ರಯ್ಯಾರುಣ, ಧನಂಜಯ, ಮೇಧಾತಿಥಿ, ವ್ರತಿ, ಅತ್ರಿ, ಗೌತಮ, ಉತ್ತಮ, ವೇನವಾಜಸ್ರಜಾಕ್ಷ, ಸೋಮ ನ್ಯೂಷಾಯಣ, ತೃಣಬಿಂದು, ಭಾರ್ಗವ, ಶಕ್ತಿ, ಜಾತೂಕರ್ಣ್ಯ ಎಂಬವರು ಕಳೆದ ೨೭ ಮಂದಿ ವ್ಯಾಸರು. ಈಗ ಕೃಷ್ಣದ್ವೈಪಾಯನ ವ್ಯಾಸಪಟ್ಟದಲ್ಲಿದ್ದಾನೆ. ಮುಂದಣ ೨೯ ನೆಯ ದ್ವಾಪರಯುಗದಲ್ಲಿ ಅಶ್ವತ್ಥಾಮ ವ್ಯಾಸನಾಗುವ [ದೇ ಭಾ.-೧-೪. ವಿಷ್ಣು.-೩, ೪. ಶಿವ.-ಉಮಾಖಂ. ೪೪].

**ವ್ಯುಷಿತಾಶ್ವ.**—ಪೂರು ವಂಶದ ಅರಸು. ಕಕ್ಷೀವಂತನ ಮಗಳಾದ ಭದ್ರೆ ಯೆಂಬವಳು ಈತನ ಹೆಂಡತಿ. ವ್ಯುಷಿತಾಶ್ವ ಭೂಮಂಡಲವನ್ನೆಲ್ಲ ಗೆದ್ದು ಅನೇಕ ಯಾಗ ಗಳನ್ನು ಮಾಡಿ ರೋಗದಿಂದ ದೇಹತ್ಯಾಗಮಾಡಿದ ಭದ್ರೆ ಇವನ ಶವದಮೇಲೆ ಬಿದ್ದು ನಾನಾಪರಿಯಿಂದ ಪ್ರಲಾಪಮಾಡುತ್ತಿದ್ದಳು. ಆಗ ವ್ಯುಷಿತಾಶ್ವ "ಎಲೆ ಭದ್ರೆ, ಈ ರೀತಿ ಹಂಬಲಿಸಬೇಡ. ನೀನು ಋತುಸ್ನಾನಮಾಡಿದ ಎಂಟನೆಯ ಮತ್ತು ಹದಿನಾಲ್ಕನೆಯ ದಿನದಲ್ಲಿ ನನ್ನ ಶಯನಗೃಹದಲ್ಲಿ ಮಲಗಿದೆಯಾದರೆ ನನ್ನ ಮೂಲಕ ನೀನು ಪುತ್ರರನ್ನು ಪಡೆಯುವೆ" ಎಂದು ಅಶರೀರವಾಕ್ಕಿನಿಂದ ನುಡಿದ. ಅಂತೆಯೇ ಭದ್ರೆ ಮೂವರು ಸಾಳ್ವದೇಶಾಧಿಪತಿಗಳನ್ನೂ ನಾಲ್ವರು ಮದ್ರದೇಶಾಧಿಪತಿಗಳನ್ನೂ ಹೆತ್ತಳು (ಇವರ ಹೆಸರುಗಳು ಮೂಲದಲ್ಲಿ ಕಾಣಬರುವುದಿಲ್ಲ). ಈ ಕಥೆಯನ್ನು

ಪುತ್ರಪ್ರಾಪ್ತಿಗಾಗಿ ಕಳವಳಿಸುತ್ತಿದ್ದ ಪಾಂಡುರಾಯನಿಗೆ ಕುಂತಿ ಹೇಳಿದಳು [ಭಾರ.-ಆದಿ. ೧೨೭].

**ವ್ಯೋಮ.**—ಮಯಾಸುರನ ವಂಶದ ಒಬ್ಬ ರಾಕ್ಷಸ. ಕಂಸನ ಪ್ರೇರಣೆಯಿಂದ ಬಲರಾಮ ಕೃಷ್ಣರನ್ನು ಕೊಲ್ಲುವುದಕ್ಕಾಗಿ ಗೋಕುಲಕ್ಕೆ ಬಂದು, ಕೆಲವುಂದಿ ಗೊಲ್ಲ ಹುಡುಗರನ್ನು ಎತ್ತಿಕೊಂಡುಹೋಗಿ, ಒಂದು ಪರ್ವತದ ಗವಿಯಲ್ಲಿಟ್ಟು, ಗವಿಯ ಬಾಗಿಲಿಗೆ ದೊಡ್ಡ ಬಂಡೆಯನ್ನೆಳೆದು, ತಿನ್ನಬೇಕೆಂದಿರುವಷ್ಟರಲ್ಲಿ ಕೃಷ್ಣ ಗವಿಯನ್ನು ಹೊಕ್ಕು ವ್ಯೋಮಾಸುರನನ್ನು ಕೊಂದು ಆ ಬಾಲಕರನ್ನು ಬಿಡಿಸಿದ [ಭಾಗ -೧೦-೩೭].

**ವ್ರಜ.**—ಒಂದು ಪಟ್ಟಣ ಉತ್ತರ ಮಧುರೆಗೆ (Matra) ಸಮೀಪದಲ್ಲಿ ಯಮುನಾ ನದಿಯ ಮತ್ತೊಂದು ದಡದಲ್ಲಿದೆ ಗೊಲ್ಲರ ಪಾಳೆಯಗಾರನಾದ (ಶ್ರೀಕೃಷ್ಣ ಬಲರಾಮರ ಸಾಕುತಂದೆಯಾದ) ನಂದ ಇದಕ್ಕೆ ಅರಸು. ಶ್ರೀ ಕೃಷ್ಣ ಜನಿಸಿದ ಕೂಡಲೇ ವಸುದೇವ ಬಾಲಕೃಷ್ಣನನ್ನು ಇಲ್ಲಿಗೆ ಎತ್ತಿಕೊಂಡುಹೋಗಿ ನಂದನ ಮನೆಯಲ್ಲಿಟ್ಟು, ನಂದನ ಪತ್ನಿಯಾದ ಯಶೋದೆ ಪ್ರಸವಿಸಿದ್ದ ಹೆಂಗೂಸನ್ನು ತಂದ [ಭಾಗ.-೧೦-೧೧].

**ವ್ರತಿ.**—ಒಬ್ಬ ಮಹರ್ಷಿ. ಕಳೆದ ಹದಿನೆಂಟನೆಯ ಮನ್ವಂತರದಲ್ಲಿ ವ್ಯಾಸನಾಗಿದ್ದ ನೋಡು—ವ್ಯಾಸ [ದೇ.ಭಾ.-೧-೪].

## ಶ

**ಶಂಯು.**—ಬೃಹಸ್ಪತ್ಯಾಚಾರ್ಯನಿಂದ ತಾರಾದೇವಿಯಲ್ಲಿ ಜನಿಸಿದ ಆರು ಮಂದಿ ಪುತ್ರರಲ್ಲಿ ಹಿರಿಯವ ಈತ ಸತ್ಯೆಯೆಂಬ ತರುಣಿಯನ್ನು ಮದುವೆಯಾಗಿ ಭರತ, ಭರದ್ವಾಜರೆಂಬ ಪುತ್ರರನ್ನು ಪಡೆದ ಇವರಿಬ್ಬರೂ ಅಗ್ನಿಯ ಅಧಿಕಾರದಲ್ಲಿದ್ದರು [ಭಾರ.-ವನ. ೨೨೧].

**ಶಕ.**—ಒಂದು ದೇಶ ಪಶ್ಚಿಮ ಸಮುದ್ರತೀರದಲ್ಲಿ ವಿದೇಹದೇಶಕ್ಕೆ ಪೂರ್ವ ದಿಕ್ಕಿನಲ್ಲಿದೆ. ಈ ದೇಶದ ಜನರೂ ಶಕರೆಂದು ರೂಢಿಯಲ್ಲಿದೆ [ಭಾರ.-ಸ. ೭೮. ಭೀ.೯].

**ಶಕಟ.**—ಒಬ್ಬ ರಾಕ್ಷಸ. ಕಂಸನ ಪರಿವಾರಕ್ಕೆ ಸೇರಿದವ. ಇವ ಕಂಸನ ಪ್ರೇರಣೆಯಿಂದ ಬಂಡಿಯ (ಶಕಟ) ರೂಪವನ್ನು ತಳೆದು, ಗೋಕುಲದಲ್ಲಿದ್ದ ಬಾಲ ಕೃಷ್ಣನನ್ನು ಕೊಲ್ಲಹೋಗಿ, ಕೃಷ್ಣನ ಅಂಗಾಲಿನ ಹೊಡೆತದಿಂದ ಮುರಿದುಬಿದ್ದು, ತನ್ನ ನಿಜರೂಪವನ್ನು ತಳೆದು ಅಲ್ಲಿಯೇ ಬಿದ್ದು ಸತ್ತ [ಭಾರ.-ಸಭಾ. ೫೨. ಭಾಗ.-೧೦-೭. ಹರಿ.-೨-೬. ವಿಷ್ಣು.-೫-೬].

**ಶಕುನಿ.**—ಗಾಂಧಾರ ದೇಶದ ಅರಸನಾದ ಸುಬಲ ರಾಜನ ಗಂಡುಮಕ್ಕಳಲ್ಲಿ ಹಿರಿಯುವ ಗಾಂಧಾರಿಯು ಒಡಹುಟ್ಟಿದವ ದುರ್ಯೋಧನನ ಸೋದರಮಾವ. ಇವ ಅನುಗಾಲವೂ ದುರ್ಯೋಧನನ ಬಳಿಯಲ್ಲಿಯೇ ಇರುತ್ತ, ಅವನನ್ನು ಬಹಳವಾಗಿ ಕೆಟ್ಟಹಾದಿ ಹಿಡಿಯುವಂತೆ ಪ್ರೋತ್ಸಾಹಗೊಳಿಸಿದ [ಭಾರ.-ಆದಿ ೬೪] ಇವ ದ್ವಾಪರಾಂಶದಿಂದ ಜನಿಸಿದವ [ಭಾರ -ಆ. ೬೮] ಇವನಿಗೆ ವೃಷಕ, ಬೃಹದ್ಬಲರೆಂಬವರು ಒಡಹುಟ್ಟಿದವರು [ಭಾರ -ಆದಿ ೨೦೧]. ಅಚಲನೆಂಬವ ಮತ್ತೊಬ್ಬ ತಮ್ಮ [ಭಾರ -ದ್ರೋ ೩೦] ಶರಭ, ಸುಭಗ, ವಿಭು, ಭಾನುದತ್ತರೆಂಬವರು ಇವನ ಒಡಹುಟ್ಟಿದವರು [ಭಾರ -ದ್ರೋ ೧೫೮] ಗಜ, ಗವಾಕ್ಷ, ಚರ್ಮವಂತ, ಆರ್ಜಯ, ಶುಕರೆಂಬವರೂ ಇವನ ತಮ್ಮಂದಿರು [ಭಾರ -ಭೀ ೯೦] ಗಾಂಧಾರಿ, ಸತ್ಯವ್ರತಾ, ಸತ್ಯಸೇನಾ, ಸುದೇಷ್ಣಾ, ಸಂಹಿತಾ, ತೇಜಶ್ರವಾ, ಸುಶ್ರವಾ, ನಿಕೃತಿ, ಶುಭಾ, ಶಮ್ಬರಾ, ದಶಾರ್ಣಾ—ಎಂಬುದಾಗಿ ಹನ್ನೊಂದು ಮಂದಿ ಇವನ ಅಕ್ಕತಂಗಿಯರು ಇವರೆಲ್ಲರೂ ಧೃತರಾಷ್ಟ್ರನನ್ನೇ ಮದುವೆಯಾಗಿದ್ದರು [ಭಾರ -ಆದಿ ೧೧೯] ಪಾಂಡವರ ರಾಜಸೂಯ ಯಾಗದಲ್ಲಿ ದುರ್ಯೋಧನ ಅಪಮಾನಪಟ್ಟು, ತನ್ನ ದುಃಖವನ್ನು ಧೃತರಾಷ್ಟ್ರನಲ್ಲಿ ತಿಳಿಸುವಂತೆ ಶಕುನಿಯನ್ನು ಪ್ರೇರಿಸಿದ. ಶಕುನಿ ಪಾಂಡವರನ್ನು ಪರಾಕ್ರಮದಿಂದ ಗೆಲ್ಲುವುದು ಅಸಾಧ್ಯವೆಂತಲೂ, ಜೂಜಿನಲ್ಲಿ ಮೋಸದಿಂದ ಸೋಲಿಸಿ, ಅವರನ್ನು ಭಂಗಗೊಳಿಸುವುದೇ ಶಕ್ಯವೆಂತಲೂ ಹೇಳಿದ [ಭಾರ -ಸ ೭೫, ೭೬]. ಯುಧಿಷ್ಠಿರ ಒಡ್ಡಿದ ಪಣಗಳನ್ನೆಲ್ಲ ಶಕುನಿ ಗೆದ್ದು, ಪರಿಹಾಸಮಾಡಿದ್ದು [ಭಾರ -ಸ ೮೫, ೯೮] ದ್ವೈತವನಕ್ಕೆ ಹೋಗಿ, ಪಾಂಡವರ ಮುಂದೆ ತಮ್ಮ ವೈಭವವನ್ನು ತೋರಿಸಿ, ಅವರಿಗೆ ಮತ್ತಷ್ಟು ದುಃಖವನ್ನುಂಟುಮಾಡಬೇಕೆಂಬುದಾಗಿ ಶಕುನಿ ದುರ್ಯೋಧನನಿಗೆ ಬೋಧಿಸಿದ್ದು [ಭಾರ -ವನ ೨೩೮, ೨೪೦] ಕೃಷ್ಣ ಸಂಧಿಗಾಗಿ ಹಸ್ತಿನಾವತಿಗೆ ಹೋಗಿದ್ದಾಗ ಶಕುನಿ ದುರ್ಯೋಧನನನ್ನು ಸಂಗಡ ಕರೆದುಕೊಂಡು ವಿದುರನ ಮನೆಯಲ್ಲಿ ಇಳಿದಿದ್ದ ಕೃಷ್ಣನನ್ನು ಸಂದರ್ಶಿಸಿ ರಾಜಸಭೆಗೆ ಬರಬೇಕೆಂದು ಪ್ರಾರ್ಥಿಸಿದ್ದು [ಭಾರ -ಉ. ೯೪] ಕರ್ಣ ಕೃಷ್ಣನನ್ನು ಸಂಧಿಸಿದಾಗ, ಇಷ್ಟೊಂದು ಅನರ್ಥಕ್ಕೂ ಶಕುನಿ, ದುಶ್ಶಾಸನರೇ ಮೂಲಕಾರಣರೆಂಬುದಾಗಿ ಕೃಷ್ಣನಿಗೆ ಹೇಳಿದ್ದು [ಭಾರ.-ಉ. ೧೪೩]. ಶಕುನಿಯ ಯುದ್ಧ [ಭಾರ -ದ್ರೋ ೧೪] ಹದಿನಾಲ್ಕನೆಯ ದಿನದ ಹಗಲಿನ ಯುದ್ಧದಲ್ಲಿ ನಕುಲ, ಸಹದೇವರೊಂದಿಗೆ ಪ್ರತ್ಯೇಕವಾಗಿ ದ್ವಂದ್ವಯುದ್ಧಮಾಡಿ ಸೋತ [ಭಾರ.-ದ್ರೋ ೯೬]. ಹದಿನಾರನೆಯ ದಿನದ ಯುದ್ಧದಲ್ಲಿ ಭೀಮಸೇನನ ಮಗನಾದ ಶ್ರುತಸೋಮನ ಸಂಗಡ ಯುದ್ಧಮಾಡಿ ಸೋತ [ಭಾರ.-ಕರ್ಣ. ೧೬]. ಹದಿನೇಳನೆಯ ದಿನ ಭೀಮನಿಂದ ಸೋತ [ಕರ್ಣ. ೮೧]. ಹದಿನೆಂಟನೆಯ ದಿನ ಸಹದೇವನಿಂದ ಮಡಿದ [ಶಲ್ಯ ೨೭]. ಶಕುನಿಯ ಶವವರ್ಣನೆ [ಸ್ತ್ರೀ. ೨೪].

**ಶಕುನಿ ಕಥೆ.**—ಜ್ಞಾತಿವಿರೋಧ ಕೇಡನ್ನು ತಪ್ಪದೆ ಒದಗಿಸುವುದೆಂಬ ವಿಷಯದಲ್ಲಿ ದೃಷ್ಟಾಂತರೂಪದಿಂದ ವಿದುರ ಧೃತರಾಷ್ಟ್ರನಿಗೆ ಹೇಳಿದ್ದು [ಉದ್ಯೋ ೬೪].

**ಶಕುನ್ತಲಾ** —ಬ್ರಾಹ್ಮಣ್ಯವನ್ನು ಸಂಪಾದಿಸುವುದಕ್ಕಾಗಿ ತಪಸ್ಸುಮಾಡುತ್ತಿದ್ದ ವಿಶ್ವಾಮಿತ್ರನಿಂದ ಮೇನಕೆಯೆಂಬ ಅಪ್ಸರಸಿಯಲ್ಲಿ ಜನಿಸಿದವಳು ಮೇನಕೆ ಆ ಕೂಸನ್ನು ಅಲ್ಲಿಯೇ ಬಿಟ್ಟು ದೇವಲೋಕಕ್ಕೆ ಹೋದಳು. ವಿಶ್ವಾಮಿತ್ರನೂ ತಪಸ್ಸಿಗೆ ಹೋದ. ಆಗ ಶಿಶುವನ್ನು ಶಕುಂತ(ಹಕ್ಕಿ)ಗಳು, ಲಾ (ಕೈಕೊಂಡು) ಪೋಷಿಸುತ್ತಿದ್ದುವು ಈ ಕಾರಣದಿಂದ ಶಕುಂತಲೆಯೆಂದು ಹೆಸರು ಇವಳು ದುಷ್ಯಂತ ರಾಜನ ಎರಡನೆಯ ಹೆಂಡತಿ ಭರತ ಈಕೆಯ ಮಗ ನೋಡು—ಭರತ, ದುಷ್ಯಂತ [ಭಾರ -ಆದಿ ೬೩, ೮೮, ೯೨, ೯೩] ತನ್ನ ವಿವಾಹ ವಿಷಯವಾಗಿ ಶಕುಂತಲೆ ದುಷ್ಯಂತನೊಂದಿಗೆ ವಿವಾದಮಾಡಿದ್ದು [ಭಾರ.-ಆದಿ. ೯೨] ದುಷ್ಯಂತನನ್ನು ಗಾಂಧರ್ವ ವಿಧಿಯಿಂದ ಮದುವೆಯಾದದ್ದು [ಭಾರ -ಆದಿ ೯೪]. ತಾನು ದುಷ್ಯಂತನನ್ನು ಮದುವೆಯಾದ ವಿಷಯವಾಗಿ ಕಣ್ವ ಮುನಿಯೊಂದಿಗೆ ಸಂವಾದ [ಭಾರ.-ಆ. ೯೪]. ಭರತನೆಂಬ ಮಗನನ್ನು ಪಡೆದದ್ದು [ಭಾರ -ಆ ೯೫]. ದುಷ್ಯಂತನ ಮನೆಗೆ ಹೋಗುವುದಕ್ಕೆ ತವಕಗೊಂಡ ಶಕುಂತಲೆ ಕಣ್ವನೊಂದಿಗೆ ವಿವಾದಮಾಡಿದ್ದು [ಭಾರ - ಆದಿ ೯೬] ಶಕುಂತಲೆ ಕಣ್ವ ಮುನಿಯ ಶಿಷ್ಯರನ್ನು ಸಂಗಡ ಕರೆದುಕೊಂಡು ಭರತನ ಕೂಡ ಹಸ್ತಿನಾವತಿಗೆ ಬಂದದ್ದು, ದುಷ್ಯಂತನೊಂದಿಗೆ ವಿವಾದ ಮುಂತಾಗಿ [ಭಾರ - ಆದಿ ೯೭-೧೦೦[

**ಶಕ್ತಿ** —ವಸಿಷ್ಠ ಮಹರ್ಷಿಯಿಂದ ಅರುಂಧತಿಯಲ್ಲಿ ಜನಿಸಿದವ. ಇವನ ಹೆಂಡತಿಯಾದ ಅದೃಶ್ಯಂತಿಯೆಂಬವಳು ಇವ ಸಾಯುವಾಗ್ಗೆ ಗರ್ಭಿಣಿಯಾಗಿದ್ದು ಬಹಳ ಕಾಲದಮೇಲೆ ಪರಾಶರನೆಂಬ ಮಗನನ್ನು ಹೆತ್ತಳು ನೋಡು— ಕಲ್ಮಾಷಪಾದ, ಪರಾಶರ, ಅದೃಶ್ಯಂತಿ, ವ್ಯಾಸ [ಭಾರ -ಆದಿ ೧೯೨]

**ಶಕ್ರ.**—ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಸ್ವರ್ಗಾಧಿಪತಿಯಾದ ಇಂದ್ರನ ಹೆಸರು ಇವ ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ [ಭಾರ.-ಆ. ೬೬]. ನೋಡು—ಇಂದ್ರ, ಜೀವ [ಶಿವ -ಶತರುದ್ರ. ೩೦]

**ಶಕ್ರದೇವ.**—ಕಳಿಂಗ ದೇಶದ ಅರಸನಾದ ಭಾನುಮಂತನ ಮಗ ದುರ್ಯೋಧನನ ಹೆಂಡತಿಯಾದ ಭಾನುಮತಿಯ ಒಡಹುಟ್ಟಿದವ. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಎರಡನೆಯ ದಿನದ ಯುದ್ಧದಲ್ಲಿ ಭೀಮನಿಂದ ಹತನಾದ [ಭಾರ.-ಭೀ. ೫೪].

**ಶಙ್ಕುಕರ್ಣ.**—(1) ರಾವಣನ ಅಶೋಕವನದಲ್ಲಿ ಸೀತೆಯ ಕಾವಲುಗಾರನಾಗಿದ್ದ ಒಬ್ಬ ರಾಕ್ಷಸ [ರಾ.-ಸುಂ. ೧೮].

(ii) ಪರೀಕ್ಷಿದ್ರಾಜನ ಮಗನಾದ ಜನಮೇಜಯನಿಂದ ಕಾಶೀ ದೇಶದ ಅರಸನಾದ ಸುವರ್ಣವರ್ಮನ ಮಗಳಾದ ವಪುಷ್ಟಮೆಯೆಂಬವಳಲ್ಲಿ ಜನಿಸಿದ ಇಬ್ಬರು ಪುತ್ರರಲ್ಲಿ ಕಿರಿಯವ ಇವನ ಅಣ್ಣ ಶತಾನೀಕ [ಭಾರ -ಆದಿ. ೪೪, ೬೩].

**ಶಙ್ಖ.**—(i) ಒಬ್ಬ ಮಹರ್ಷಿ. ಇವನ ತಮ್ಮ ಲಿಖಿತನೆಂಬ ಮಹರ್ಷಿ [ಭಾರ.-ಶಾಂತಿ. ೨೩]. ನೋಡು—ಲಿಖಿತ

(ii) ವಿರಾಟ ರಾಜನಿಂದ ಸುರಥೆಯೆಂಬ ಪತ್ನಿಯಲ್ಲಿ ಜನಿಸಿದವ [ಭಾರ.-ಆದಿ. ೨೦೧ ಸ. ೭]. ಇವ ರಥೋದಾರ [ಭಾರ.-ಉ. ೧೭೧] ಶ್ವೇತನೆಂಬವ ಇವನ ಸಹೋದರ [ವಿರಾ. ೨೧]. ದಕ್ಷಿಣ ಗೋಗ್ರಹಣ ಸಮಯದಲ್ಲಿ ಯುದ್ಧ ಮಾಡಿದ [ಭಾರ -ವಿರಾ ೩೪] ಭಾರತಯುದ್ಧದ ಮೊದಲನೆಯ ದಿನ ಭಯಂಕರ ರೀತಿಯಿಂದ ಯುದ್ಧಮಾಡಿದ [ಭೀಷ್ಮ ೪೯]. ಏಳನೆಯ ದಿನದ ಯುದ್ಧದಲ್ಲಿ ದ್ರೋಣನಿಂದ ಹತನಾದ [ಭೀಷ್ಮ ೮೨]

(iii) ಸರ್ಪ ರಾಜರಲ್ಲಿ ಒಬ್ಬ [ಆದಿ. ೩೫ ಉ ೧೦೩]

(iv) ವರುಣನ ಸಭೆಯಲ್ಲಿರುವ ಒಬ್ಬ ರಾಕ್ಷಸ [ಸಭಾ. ೯]

(v) ಕುಬೇರನ ನವನಿಧಿಗಳಲ್ಲಿ ಒಂದು.

**ಶಙ್ಖಚೂಡ.**—(i) ಕುಬೇರನ ಅನುಚರರಾದ ಯಕ್ಷರಲ್ಲಿ ಒಬ್ಬ. ಬಲರಾಮ ಕೃಷ್ಣರು ಗೋಕುಲದಲ್ಲಿ ಗಾನಲೋಲರಾಗಿದ್ದಾಗ ಇವ ಗೋಪಸ್ತ್ರೀಯರನ್ನು ಮಾಯೆಯಿಂದ ದೂರವಾಗಿ ಕರೆದುಯ್ದು ಆ ಸುಳಿವನ್ನು ತಿಳಿದ ಕೃಷ್ಣನಿಂದ ಹತನಾದ [ಭಾಗ.-೧೦-೩೪].

(ii) ಒಬ್ಬ ರಾಕ್ಷಸ. ಮೂಲಶಕ್ತಿಪಂಚಕದಲ್ಲಿ ಒಬ್ಬಳಾದ ರಾಧೆಯ ಶಾಪದಿಂದ ಕೃಷ್ಣಭಕ್ತನಾದ ಸುದಾಮನೇ ದಂಭಾಸುರನ ಮಗನಾಗಿ ಶಂಖಚೂಡನೆಂಬ ಹೆಸರಿನಿಂದ ಹುಟ್ಟಿದ. ಇವ ಜೈಗೀಷವ್ಯ ಮುನಿಯ ಉಪದೇಶದಿಂದ ವಿಷ್ಣುಕವಚವೆಂಬ ಮಂತ್ರವನ್ನು ಪಡೆದು, ಅದರ ಮಹಿಮೆಯಿಂದ ದೇವ ರಾಜ್ಯವನ್ನು ಆಕ್ರಮಿಸಿ, ಧರ್ಮನೀತಿಗಳಿಗೆ ತಪ್ಪದೆ ರಾಜ್ಯಭಾರಮಾಡುತ್ತಿದ್ದ. ದೇವತೆಗಳೆಲ್ಲರೂ ಬ್ರಹ್ಮ, ವಿಷ್ಣು ಸಮೇತರಾಗಿ ಶಂಕರನಲ್ಲಿ ಮೊರೆಯಿಡಲಾಗಿ, ಶಿವ ಈತನನ್ನು ಇದಿರಿಸಿದ. ಶಂಖಚೂಡನನ್ನು ಕೊಲ್ಲುವುದು ಕಷ್ಟವಾಗಲು, ಅಶರೀರವಾಣಿಯ ಮಾತಿನಂತೆ ವಿಷ್ಣು ಬ್ರಾಹ್ಮಣ ರೂಪದಿಂದ ಶಂಖಚೂಡನಲ್ಲಿಗೆ ಹೋಗಿ, ಅವನಲ್ಲಿದ್ದ ಕವಚವನ್ನು ಅಪಹರಿಸಿ, ಅವನ ಪತ್ನಿಯಾದ ತುಳಸಿಯಲ್ಲಿಗೆ ಶಂಖಚೂಡನ ರೂಪದಿಂದ ಹೋಗಿ ಅವಳ ಪಾತಿವ್ರತ್ಯವನ್ನು ಕೆಡಿಸಲಾಗಿ, ಶಂಖಚೂಡ ಶಿವನಿಂದ ಹತನಾಗಿ ವಿಷ್ಣುಸಾನ್ನಿಧ್ಯವನ್ನು ಪಡೆದ. ಅವನ ಹೆಂಡತಿ ತುಲಸೀಗಿಡವಾದಳು. ಈ ರಾಧಾ

ಕೃಷ್ಣರು ದ್ವಾಪರಯುಗದವರಲ್ಲ. ವೈಕುಂಠದ ಅಧಿಪತಿಯಾದ ಕೃಷ್ಣ. ಆತನ ರಾಣಿ ರಾಧೆ [ದೇ.ಭಾಗ -೯, ೧೭-೨೫, ಶಿವ.-ಯುದ್ಧ ಖಂ.೨೭-೪೧].

**ಶಙ್ಖಲಿಖಿತ** —ನೋಡು—ಲಿಖಿತ, ಶಂಖ

**ಶಚಿ** —ಪುಲೋಮನೆಂಬ ಅಸುರನ ಮಗಳು. ಈಗಣ ಇಂದ್ರನ ಹೆಂಡತಿ ಜಯಂತ ಈಕೆಯ ಮಗ [ಭಾರ.-ಸಭಾ. ೭, ೧೧]. ನಹುಷ ಇಂದ್ರನಾಗಿದ್ದಾಗ ಇವಳನ್ನು ಕಾಮಿಸಿ, ಅಗಸ್ತ್ಯಶಾಪದಿಂದ ಹೆಬ್ಬಾವಿನ ರೂಪವನ್ನು ಪಡೆದದ್ದು. ನೋಡು—ನಹುಷ [ಭಾರ -ವನ. ೧೮೦-೧೮೩. ಉ ೧೧, ೧೭. ಅನು. ೧೫೭]. ಪತಿವ್ರತಾ ಸ್ತ್ರೀಯರ ಮಾಹಾತ್ಮ್ಯವಿಷಯವಾಗಿ ಶಚಿ ಸೂರ್ಯನೊಂದಿಗೆ ಸಂವಾದಮಾಡಿದ್ದು [ಭಾರ.-ಅನು. ೧೪].

**ಶಣ್ಡ** —ಶುಕ್ರಾಚಾರ್ಯನ ಮಗ ಅಮರ್ಕನೆಂಬವ ಇವನ ಒಡಹುಟ್ಟಿದವ ಶುಕ್ರಾಚಾರ್ಯ ತಪಸ್ಸಿಗೆ ಹೋಗಿದ್ದಾಗ ಇವ ಹಿರಣ್ಯಕಶಿಪುವಿನಲ್ಲಿ ಪುರೋಹಿತನಾಗಿದ್ದು, ಪ್ರಹ್ಲಾದನ ಗುರುವಾಗಿಯೂ ಇದ್ದ [ಭಾಗ.-೭-೫ ಮತ್ಸ್ಯ -೩೩. ವಿಷ್ಣು.-೧-೧೭]

**ಶತದ್ಯುಮ್ನ.**—ಒಬ್ಬ ರಾಜರ್ಷಿ. ಮುದ್ಗಲನೆಂಬ ಮಹರ್ಷಿಗೆ ಗೃಹದಾನ ಮಾಡಿ, ಅದರ ಫಲವಾಗಿ ಉತ್ತಮಗತಿಯನ್ನೈದಿದ [ಶಾಂ ೨೪೦ ಅನು. ೨೦೦].

**ಶತದ್ರು.**—ಒಂದು ನದಿ. ಹೈಮವತಿಯೆಂಬುದು ಇದರ ಮೊದಲಿನ ಹೆಸರು. ಪುತ್ರಶೋಕಪೀಡಿತನಾದ ವಸಿಷ್ಠ ಆತ್ಮಹತ್ಯೆಮಾಡಿಕೊಳ್ಳುವುದಕ್ಕಾಗಿ ಈ ನದಿಯಲ್ಲಿ ಬಿದ್ದ ಬ್ರಹ್ಮಹತ್ಯೆಯ ಭಯದಿಂದ ಹೆದರಿದ ಹೈಮವತಿ ನೂರಾರು ಭಾಗವಾಗಿ ಹರಿದುಹೋದ ಕಾರಣ "ಶತದ್ರು" (Sutlej) ಎಂದು ಹೆಸರು ಬಂತು [ಭಾರ.-ಆದಿ. ೧೯೩. ಸ. ೯ ಭೀ ೯].

**ಶತಧನ್ವ.**—ಯದು ವಂಶದ ಹೃದಿಕನ ಐವರು ಮಕ್ಕಳಲ್ಲಿ ಒಬ್ಬ. ಸತ್ರಾಜಿತ ತನ್ನ ಮಗಳಾದ ಸತ್ಯಭಾಮೆಯನ್ನು ಇವನಿಗೆ ಕೊಡುವುದಾಗಿ ವಾಗ್ದಾನ ಮಾಡಿದ್ದ. ಆದರೆ ಸ್ಯಮಂತಕಮಣಿಯ ಮೂಲಕ ಕೃಷ್ಣನಿಗೂ ಸತ್ರಾಜಿತನಿಗೂ ವೈಮನಸ್ಯವುಂಟಾದ ಕಾರಣ ಸತ್ರಾಜಿತ ಸತ್ಯಭಾಮೆಯನ್ನು ಕೃಷ್ಣನಿಗೇ ಕೊಟ್ಟು ಆತನ ಸ್ನೇಹವನ್ನು ಸಂಪಾದಿಸಿದ ಇದರಿಂದ ತನಗೆ ಅಪಮಾನವಾಯಿತೆಂದು ತಿಳಿದ ಶತಧನ್ವ ಸತ್ರಾಜಿತನನ್ನು ಕೊಂದ. ಸತ್ಯಭಾಮೆ ಕೃಷ್ಣನಲ್ಲಿ ಮೊರೆಯಿಡಲಾಗಿ ಕೃಷ್ಣ ಶತಧನ್ವನ ಮೇಲೆ ಯುದ್ಧಕ್ಕೆ ಹೊರಟ. ಶತಧನ್ವ ಅಕ್ರೂರ, ಕೃತವರ್ಮರನ್ನು ತನಗೆ ಸಹಾಯಮಾಡ ಕೇಳಿದ ಅವರೊಬ್ಬರೂ ಕೃಷ್ಣನನ್ನು ಇದಿರಿಸಲು ಸಮ್ಮತಿಸಲಿಲ್ಲ. ಕೊನೆಗೆ ಶತಧನ್ವ ಕೃಷ್ಣನಿಂದ ಮಡಿದ [ಭಾಗ -೧೦, ೫೬, ೫೭]. ಇವ ಕಳಿಂಗ ರಾಜನ ಮಗಳ ಸ್ವಯಂವರಕ್ಕೆ ಹೋಗಿದ್ದ [ಭಾರ.-ಶಾಂತಿ. ೪].

**ಶತಪರ್ವಾ.**—ಶುಕ್ರಾಚಾರ್ಯನ ಹೆಂಡತಿ [ಉದ್ಯೋ. ೧೧೭].

**ಶತಶೃಙ್ಗ.**—ಒಂದು ಪರ್ವತ. ಪಾಂಡುರಾಯ ತನ್ನ ಪತ್ನಿಯರೊಂದಿಗೆ ಅರಣ್ಯದಲ್ಲಿ ವಾಸವಾಗಿದ್ದಾಗ ಕುಂತಿಯ ಮಡಿಲಿನಿಂದ ಜಾರಿದ ಭೀಮ ಇದರ ಮೇಲೆ ಬಿದ್ದನಾಗಿ ಇದು ನೂರು ತುಂಡಾದ ಕಾರಣ ಶತಶೃಂಗವೆಂಬ ಹೆಸರಾಯಿತು [ಭಾರ.-ಆದಿ. ೧೨೪, ೧೨೯].

**ಶತಾನನ್ದ.**—(i) ಸಪ್ತರ್ಷಿಗಳಲ್ಲಿ ಒಬ್ಬನಾದ ಗೌತಮ ಮುನಿಯಿಂದ ಬ್ರಹ್ಮ ಮಾನಸ ಪುತ್ರಿಯಾದ ಅಹಲ್ಯೆಯಲ್ಲಿ ಜನಿಸಿದವ ವಿದೇಹ ವಂಶದ ಅರಸರ ಪುರೋಹಿತ [ಭಾರ -ಅನು ೬೫ ರಾಮಾ.-ಬಾಲ.೫೧]. ಶತಾನಂದ ವಿಶ್ವಾಮಿತ್ರನ ಚರಿತ್ರೆಯನ್ನು ಜನಕ ರಾಜನೆದುರಿಗೆ ರಾಮ ಲಕ್ಷ್ಮಣರಿಗೆ ಹೇಳಿದ್ದು [ರಾಮಾ.-ಬಾಲ. ೫೧-೬೫].

(ii) ಒಬ್ಬ ಋಷಿ. ಈತನ ತಂದೆಯಾದ ಗೌತಮ ವಿಂಧ್ಯಾಶ್ವನೆಂಬ ರಾಜನ ಮಗಳಾದ ಅಹಲ್ಯೆಯನ್ನು ಮದುವೆಯಾಗಿದ್ದ. ಚಿರಕಾರಿಯೆಂಬವ ಈತನ ತಮ್ಮ ಶತಾನಂದನ ಮಗನಾದ ಸತ್ಯಧೃತಿಯೆಂಬ ಮುನಿ ಕೃಪಾಚಾರ್ಯನ ವಂಶಕ್ಕೆ ಮೂಲ ಪುರುಷ [ಭಾಗ.-೯-೨೧]

**ಶತಾನೀಕ**—(i) ಪಾಂಡು ಪುತ್ರನಾದ ನಕುಲನಿಂದ ದ್ರೌಪದಿಯಲ್ಲಿ ಜನಿಸಿದವ [ಆದಿ. ೬೩, ೨೪೭]. ಭಾರತಯುದ್ಧ ಮುಗಿದ ರಾತ್ರಿ ಅಶ್ವತ್ಥಾಮನಿಂದ ಹತನಾದ [ಸೌಪ್ತಿ. ೮].

(ii) ವಿರಾಟ ರಾಜನ ತಮ್ಮ [ವಿರಾ ೩೩] ಭಾರತಯುದ್ಧದ ಹತ್ತನೆಯ ದಿನ ಭೀಷ್ಮನಿಂದ ಹತನಾದ [ಭೀಷ್ಮ ೧೧೮].

(iii) ಮತ್ತೊಬ್ಬ ಅದೇ ವಂಶದ ಅರಸು. ಹನ್ನೊಂದನೆಯ ದಿವದ ಯುದ್ಧದಲ್ಲಿ ದ್ರೋಣನೊಂದಿಗೆ ಹೋರಾಡಿದ. ಶಲ್ಯನೊಂದಿಗೆ ಯುದ್ಧಮಾಡಿದ [ದ್ರೋ. ೨೧]. ಹದಿನಾಲ್ಕನೆಯ ದಿನದ ರಾತ್ರಿಯುದ್ಧದಲ್ಲಿ ದ್ರೋಣನಿಂದ ಮಡಿದ [ದ್ರೋ. ೧೬೮].

(iv) ಮತ್ತೊಬ್ಬ ರಾಜರ್ಷಿ [ಭಾರ.-ಆದಿ. ೨೪೭].

**ಶತಾಯು.**—ಪುರೂರವನಿಂದ ಊರ್ವಶಿಯಲ್ಲಿ ಜನಿಸಿದವ ನೋಡು—ಊರ್ವಶಿ [ಭಾರ.-ಆದಿ. ೬೯].

**ಶತ್ರುಘ್ನ.**—ದಶರಥನಿಂದ ಸುಮಿತ್ರೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಕಿರಿಯವ. ಲಕ್ಷ್ಮಣನ ತಮ್ಮ [ಭಾರ.-ವನ ೨೭೫ ಸ. ೫೦]. ರಾಮ ಜನಿಸಿದ ಮೂರನೆಯ ದಿನ ಆಶ್ಲೇಷಾ ನಕ್ಷತ್ರದ ನಾಲ್ಕನೆಯ ಪಾದ ಕರ್ಕಾಟಕ ಲಗ್ನದಲ್ಲಿ ಜನಿಸಿದವ [ರಾಮಾ.-ಬಾಲ. ೧೮]. ಇವ ಕುಶಧ್ವಜ ಜನಕನ ಕಿರಿಯಮಗಳಾದ ಶ್ರುತಕೀರ್ತಿ ಯನ್ನು ಮದುವೆಯಾದ [ಬಾಲ. ೭೩]. ಭರತನ ಸಂಗಡ ಯುಧಾಜಿತನೊಂದಿಗೆ

ಕೇಕಯ ರಾಜ್ಯಕ್ಕೆ ಹೋದದ್ದು. ಇವ ಯಾವಾಗಲೂ ಭರತನನ್ನೇ ಅನುಸರಿಸಿದ್ದ [ಅಯೋ. ೧]. ಶತ್ರುಘ್ನನನ್ನು ರಾಮ ಲವಣಾಸುರನ ಸಂಹಾರಕ್ಕೆ ಕಳುಹಿದ್ದು. ಶತ್ರುಘ್ನನ ಪಟ್ಟಾಭಿಷೇಕ, ಶತ್ರುಘ್ನ ಲವಣಾಸುರನನ್ನು ಕೊಲ್ಲಹೊರಟದ್ದು [ರಾ - ಉತ್ತರ ೬೨-೬೪] ಶತ್ರುಘ್ನ ಲವಣಾಸುರನನ್ನು ಇದಿರಿಸಿ ಕೊಂದದ್ದು [ರಾಮಾ.- ಉತ್ತ. ೬೮, ೬೯] ಶತ್ರುಘ್ನನ ರಾಜ್ಯಪರಿಪಾಲನೆ, ವಾಲ್ಮೀಕಿಯ ಆಶ್ರಮಕ್ಕೆ ಹೋಗಿ ಸತ್ಕೃತನಾದದ್ದು, ರಾಮನನ್ನು ಸಂದರ್ಶಿಸಿ, ಏಳು ರಾತ್ರಿಗಳು ರಾಮನೊಂದಿಗೆ ಇದ್ದು ಮರಳಿ ಮಧುರಾಪುರಿಗೆ ಹೋದದ್ದು [ರಾಮಾ -ಉತ್ತ. ೭೦-೭೨]. ಶತ್ರುಘ್ನ ಮಹಾಪ್ರಸ್ಥಾನ ಮಾಡಿದ್ದು [ಉತ್ತ ೧೦೯] ಇವನಿಗೆ ಸುಬಾಹು, ಶತ್ರುಘಾತಿ ಎಂಬ ಇಬ್ಬರು ಮಕ್ಕಳಿದ್ದರು ಸುಬಾಹು ಶತ್ರುಘ್ನ ಪಾಲಿಸುತ್ತಿದ್ದ ಮಧುರೆಗೆ ಅರಸನಾದ ಶತ್ರುಘಾತಿ ವೈದಿಶ ನಗರದಲ್ಲಿ ರಾಜ್ಯಭಾರಮಾಡುತ್ತಿದ್ದ [ಉತ್ತ ೧೦೮]

**ಶತ್ರುಜಿತ**.—ಧ್ರುವಸಂಧಿ ರಾಜನ ಮಗ ನೋಡು—ಮನೋರಮಾ [ದೇಭಾಗ -೩-೧೪-೨೫]

**ಶತ್ರುಞ್ಜಯ** —(I) ದ್ರುಪದ ರಾಜನ ಮಗ ಅಶ್ವತ್ಥಾಮನಿಂದ ಹದಿನಾಲ್ಕನೆಯ ದಿನದ ರಾತ್ರಿಯುದ್ಧದಲ್ಲಿ ಹತನಾದ [ಭಾರ -ದ್ರೋ. ೧೫೭]

(II) ಕರ್ಣನ ತಮ್ಮ, ಹನ್ನೆರಡನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಮಡಿದ [ಭಾರ -ದ್ರೋ. ೩೨].

**ಶನಿ** —ವಿವಸ್ವಂತನೆಂಬ ಸೂರ್ಯನಿಂದ ಛಾಯಾದೇವಿಯಲ್ಲಿ ಜನಿಸಿದವ ವೈವಸ್ವತ ಮನುವಿನ ತಮ್ಮ ಈತ ತಪತಿಯ ಸಹೋದರ ಗ್ರಹಸಮುದಾಯದಲ್ಲಿ ಒಬ್ಬ [ಭಾಗ -೬-೬ ಹರಿ ೧-೯]. ಶನಿಮಂಡಲ, ರಥಾದಿವರ್ಣನ [ಮತ್ಸ್ಯ -೧೨೭. ಲಿಂಗ -೬೧]. ನೋಡು—ಛಾಯಾ, ಸಂಜ್ಞಾ, ಯಮ.

**ಶನ್ತನು** —ಚಂದ್ರ ವಂಶದ ಪ್ರತೀಪ ರಾಜನಿಂದ ಸುನಂದೆಯಲ್ಲಿ ಜನಿಸಿದವ. ದೇವಾಪಿ, ಬಾಹ್ಲೀಕರೆಂಬವರು ಇವನ ಒಡಹುಟ್ಟಿದವರು [ಆದಿ. ೬೩, ೧೦೧]. ನೋಡು—ಶಂತನು

**ಶಬರೀ**.—ಒಬ್ಬ ಬೇಡಿತಿ. ರಾಮಭಕ್ತಳು ಸೀತಾಪಹಾರಾನಂತರ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಪಂಪಾತೀರದ ಬಳಿಗೆ ಹೋಗುತ್ತಿದ್ದಾಗ, ತನ್ನ ಆಶ್ರಮಕ್ಕೆ ಬಂದ ರಾಮ ಲಕ್ಷ್ಮಣರನ್ನು ಪೂಜಿಸಿ, ರಾಮನ ಇದಿರಿನಲ್ಲಿಯೇ ಅಗ್ನಿಪ್ರವೇಶಮಾಡಿ, ಪುಣ್ಯಲೋಕಕ್ಕೆ ಹೋದಳು [ರಾಮಾ.-ಅರ. ೭೪].

**ಶಬಲಾಶ್ವ** —(I) ದಕ್ಷನಿಂದ ಅಸಿಕ್ನಿಯಲ್ಲಿ ಎರಡನೆಯಬಾರಿ ಜನಿಸಿದ ಪುತ್ರರು. ದಕ್ಷ ಇವರನ್ನು ಸೃಷ್ಟಿಕಾರ್ಯದಲ್ಲಿ ನಿಯಮಿಸಿದ. ಇವರು ನಾರದನಿಂದ ಉಪದಿಷ್ಟರಾಗಿ ತಪಸ್ಸಿಗೆ ಹೋದರು. ನೋಡು—ದಕ್ಷ, ನಾರದ.

(ii) ಚಂದ್ರವಂಶದ ಅವಿಕ್ಷಿತರಾಜನ ಮಗ [ಭಾರ.-ಆದಿ. ೧೦೧].

**ಶಮೀಕ.**—ಶೃಂಗಿ ಮುನಿಯ ತಂದೆ. ಈತ ಸಮಾಧಿಯಲ್ಲಿ ಲೀನನಾಗಿದ್ದಾಗ ಪರೀಕ್ಷಿದ್ರಾಜ ಈತನ ಕೊರಳಿಗೆ ಸತ್ತ ಹಾವನ್ನು ಮಾಲೆಹಾಕಿ ಹೋದ. ನೋಡು—ಪರೀಕ್ಷಿತ್ [ಭಾರ.-ಆ. ೪೧, ೪೨. ಭಾಗ.-೧-೧೮]. ಈತನ ಶಿಷ್ಯ ಗೌರಮುಖ [ಆದಿ. ೪೨].

**ಶಮೀವೃಕ್ಷ**—ಪಾಂಡವರು ಅಜ್ಞಾತವಾಸವನ್ನು ಕೈಕೊಳ್ಳುವುದಕ್ಕೆ ಮೊದಲು ತಮ್ಮ ಆಯುಧಗಳನ್ನು ವಿರಾಟನಗರದ ಹೊರಭಾಗದ ಸ್ಮಶಾನದಲ್ಲಿದ್ದ ಒಂದು ಬನ್ನಿಯ ಮರದಲ್ಲಿಟ್ಟಿದ್ದರು [ವಿರಾ.-೭].

**ಶಮ್ಪಾಕ.**—ಹಸ್ತಿನಾವತಿಯಲ್ಲಿದ್ದ ಒಬ್ಬ ಬ್ರಾಹ್ಮಣ. ಈತ ಜ್ಞಾನಿಯಾಗಿದ್ದುದರಿಂದ ಭೀಷ್ಮಾಚಾರ್ಯನಿಗೆ ಈತನಲ್ಲಿ ಹೆಚ್ಚು ಗೌರವವಿತ್ತು. ಇವರಿಬ್ಬರೂ ಅನೇಕವೇಳೆ ಸಂವಾದಮಾಡುತ್ತಿದ್ದರು [ಶಾಂತಿ. ೧೭೬].

**ಶಮ್ಬರ.**—ಒಬ್ಬ ರಾಕ್ಷಸ ಶ್ರೀ ಕೃಷ್ಣನ ಮಗನಾದ ಪ್ರದ್ಯುಮ್ನನಿಂದ ತಾನು ಸಾಯುವೆನೆಂಬುದನ್ನು ತಿಳಿದು ಆತನನ್ನು ಕೊಲ್ಲುವುದಕ್ಕಾಗಿ ಪ್ರಯತ್ನಿಸಿ, ತಾನೇ ಆತನಿಂದ ಹತನಾದ. ನೋಡು—ಪ್ರದ್ಯುಮ್ನ [ಭಾಗ -೧೦-೫೫. ಹರಿ.-೨-೧೦೭]. ಇಂದ್ರನ ಸಂಗಡ ಬ್ರಾಹ್ಮಣಮಹಿಮೆಯ ವಿಷಯವಾಗಿ ವಿವಾದಮಾಡಿದ [ಭಾರ.-ಅನು. ೭೧].

**ಶಮ್ಬೂಕ.**—ಶೂದ್ರತಾಪಸ. ಇವನ ತಪಸ್ಸಿನಿಂದ ಒಬ್ಬ ಬ್ರಾಹ್ಮಣನ ಮಗ ಮಡಿದನೆಂಬ ಕಾರಣದಿಂದ ರಾಮ ಇವನನ್ನು ಕೊಂದು ಬ್ರಾಹ್ಮಣಪುತ್ರನನ್ನು ಬದುಕಿಸಿದ [ಭಾರ.-ಶಾಂತಿ. ೧೫೩. ರಾಮಾ.-ಉತ್ತ. ೭೬].

**ಶಮ್ಭಲ.**—ತಾಮ್ರಪರ್ಣೀ ತೀರದಲ್ಲಿರುವ ಒಂದು ಗ್ರಾಮ. ಈ ಗ್ರಾಮದಲ್ಲಿ ವಾಸಮಾಡುವ ವಿಷ್ಣುಯಶನೆಂಬ ಬ್ರಾಹ್ಮಣನ ಧರ್ಮಪತ್ನಿಯಾದ ಸುಮತಿಯೆಂಬವಳಲ್ಲಿ ವಿಷ್ಣು ವಿಷ್ಣುವರ್ಮನೆಂಬ ಹೆಸರಿನಿಂದ ಜನಿಸಿ, ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ದಿವ್ಯವಾದ ಕುದುರೆಯನ್ನೂ ಖಡ್ಗವನ್ನೂ ಪಡೆದು, ಕಲಿಯನ್ನು ಸಂಹರಿಸುವನು. ನೋಡು—ಕಲ್ಕಿ [ಭಾರ.-ವನ. ೧೯೩].

**ಶಮ್ಭುತಾ.**—ಗಾಂಧಾರಿಯ ಒಡಹುಟ್ಟಿದವಳು. ನೋಡು—ಧೃತರಾಷ್ಟ್ರ, ಗಾಂಧಾರಿ, ಶಕುನಿ [ಭಾರ.-ಆದಿ ೧೯೯].

**ಶರದ್ವನ್ತ.**—ವಿಂಧ್ಯಾಶ್ವ ರಾಜಪುತ್ರಿಯಾದ ಅಹಲ್ಯೆಯ ಪತಿಯಾದ ಗೌತಮ ವಂಶದ ಸತ್ಯಧೃತಿಯ ಮಗ [ಭಾಗ.-೯-೨೧]. ಈತ ತಪಸ್ಸುಮಾಡುತ್ತಿದ್ದಾಗ ಜಾಲವತಿಯೆಂಬ ಅಪ್ಸರಸಿಯ ದರ್ಶನದಿಂದ ಎದೆಗುಂದಿದ. ಈತನ ತೇಜಸ್ಸು

ಜಂಬುಹುಲ್ಲಿನಲ್ಲಿ ಬೀಳಲಾಗಿ ಅಲ್ಲಿ ಕೃಪಾಚಾರ್ಯನೂ, ದ್ರೋಣಾಚಾರ್ಯನ ಪತ್ನಿಯಾದ ಕೃಪಿಯೂ ಜನಿಸಿದರು. ನೋಡು—ಕೃಪ, ಕೃಪಿ, ಶಂತನು [ಭಾರ.-ಆದಿ ೬೪]

**ಶರಭ.**—(i) ನೃಸಿಂಹಾವತಾರವನ್ನು ಶಾಂತಿಗೊಳಿಸಲು ಧರಿಸಿದ ಶಿವನ ರೂಪಾಂತರ [ಶಿವ.-ಶತರು. ೧೨].

(ii) ರಾಮಸೇನೆಯಲ್ಲಿದ್ದ ವಾನರವೀರ [ರಾಮಾ.-ಯುದ್ಧ. ೨೬, ೩೦].

(iii) ಶಕುನಿಯ ಸೋದರರಲ್ಲಿ ಒಬ್ಬ. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಭೀಮನಿಂದ ಮಡಿದ [ಭಾರ.-ದ್ರೋ. ೧೫೭].

(iv) ಶಿಶುಪಾಲನ ಮಕ್ಕಳಲ್ಲಿ ಒಬ್ಬ. ಯುಧಿಷ್ಠಿರನ ಅಶ್ವಮೇಧ ಯಜ್ಞಾಶ್ವವನ್ನು ಅಡ್ಡಗಿಸಿ, ಮರೆಹೊಕ್ಕ [ಭಾರ.-ಅಶ್ವ ೮೩].

**ಶರಭಂಗ.**—ಗೌತಮ ವಂಶದ ಒಬ್ಬ ಮಹರ್ಷಿ. ದಂಡಕಾರಣ್ಯದಲ್ಲಿ ತಪಸ್ಸು ಮಾಡುತ್ತಿದ್ದು, ಅರಣ್ಯವಾಸಕ್ಕೆ ಬಂದ ಸೀತಾರಾಮ ಲಕ್ಷ್ಮಣರನ್ನು ಸತ್ಕರಿಸಿ, ದೇಹ ತ್ಯಾಗಮಾಡಿ ಸದ್ಗತಿಯನ್ನೈದಿದ [ಭಾರ -ವನ. ೮೩. ರಾಮಾ.-ಅರ. ೫] ಈತನ ಆಶ್ರಮ ಗೋದಾವರೀ ತೀರದಲ್ಲಿತ್ತು [ಭಾರ.-ವನ ೨೮೮].

**ಶರವಣ**—ಒಂದು ವನ ಪಾರ್ವತೀ ಪರಮೇಶ್ವರರು ಈ ವನದಲ್ಲಿ ಒಮ್ಮೆ ಕ್ರೀಡಾಸಕ್ತರಾಗಿದ್ದಾಗ ಕೆಲಮಂದಿ ಗಂಡಸರು ಅಲ್ಲಿಗೆ ಬರಲಾಗಿ " ಇಲ್ಲಿಗೆ ಬಂದವರು ಹೆಂಗಸರಾಗಲಿ " ಎಂದು ಪಾರ್ವತಿ ಶಾಪವಿತ್ತಳು ವೈವಸ್ವತಮನು ಪುತ್ರನಾದ ಇಲ ರಾಜ ಬೇಟೆಯ ನಿಮಿತ್ತ ಇಲ್ಲಿಗೆ ಬಂದು, ಸ್ತ್ರೀ ರೂಪವನ್ನು ತಳೆದು ಚಂದ್ರ ಪುತ್ರನಾದ ಬುಧನಿಂದ ಪುರೂರವನೆಂಬ ಪುತ್ರನನ್ನು ಪಡೆದ [ಭಾಗ.-೯-೧ ಮತ್ಸ್ಯ - ೧೧].

**ಶರಾವತೀ**—ಒಂದು ನದಿ [ಭಾರ -ಭೀ. ೯]. ಗುಜರಾತಿನಲ್ಲಿ ಪ್ರಯಾಗದ ಬಳಿ ಹರಿಯುವ ಶಬರ್ಮತಿಯೆಂದು ಪ್ರಸಿದ್ಧವಾಗಿರುವ ನದಿಯೇ ಶರಾವತಿಯಾಗಿರಬಹುದೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಅಯೋಧ್ಯೆಯ ಬಳಿ ಫೈಜಾಬಾದಿನಲ್ಲಿ ಹರಿಯುವ ಸರಸ್ವತಿಯೆಂಬ ನದಿಗೆ ಶರಾವತಿಯೆಂದು ಹೇಳುತ್ತಾರೆ.

**ಶರ್ಮಿಷ್ಠಾ.**—ರಾಕ್ಷಸ ರಾಜನಾದ ವೃಷಪರ್ವನ ಮಗಳು ಯಯಾತಿ ರಾಜನ ಕಿರಿಯಹೆಂಡತಿ. ಯದು, ದ್ರುಹ್ಯು, ಅನು, ಪೂರು ಎಂಬವರು ಇವಳ ಮಕ್ಕಳು [ಭಾರ.-ಆದಿ. ೬೩, ೬೯]. ಇವಳು ಶುಕ್ರಾಚಾರ್ಯನ ಮಗಳಾದ ದೇವಯಾನಿಯನ್ನು ಬಾವಿಯಲ್ಲಿ ತಳ್ಳಿದ್ದು ಮುಂತಾಗಿ [ಭಾರ.-ಆ. ೭೨]. ತನಗೆ ಸಂತಾನವಾಗಬೇಕೆಂಬ ಆಸೆಯಿಂದ ಶರ್ಮಿಷ್ಠೆ ಯಯಾತಿಯನ್ನು ಬೇಡಿದ್ದು ಮುಂತಾಗಿ [ಭಾರ -ಆದಿ. ೭೬]. ಶರ್ಮಿಷ್ಠೆಯ ಕಥೆ [ಭಾರ -ಆದಿ. ೭೨-೭೬. ಭಾಗ.-೯, ೧೮. ಮತ್ಸ್ಯ.-೨೭-೩೨]. ನೋಡು—ದೇವಯಾನಿ, ಯಯಾತಿ.

**ಶರ್ಯಾತಿ.**—(i) ಸೂರ್ಯ ವಂಶದ ವೈವಸ್ವತ ಮನುವಿನ ಮಗ. ಈತ ತನ್ನ ಮಗಳಾದ ಸುಕನ್ಯೆಯೆಂಬವಳನ್ನು ಚ್ಯವನ ಮುನಿಗೆ ಕೊಟ್ಟ [ಭಾರ.-ವನ. ೧೨೩-೧೨೬]. ನೋಡು—ಸುಕನ್ಯಾ, ಚ್ಯವನ.

(ii) ಚಂದ್ರ ವಂಶದ ಪ್ರಾಚೀನ್ವಂತನೆಂಬ ರಾಜನಿಂದ ಯದು ವಂಶದ ಅಶ್ಮಕಿಯೆಂಬವಳಲ್ಲಿ ಜನಿಸಿದವ. ಇವ ತ್ರಿಶಂಕುಪುತ್ರಿಯಾದ ಸತ್ಯವ್ರತೆಯಲ್ಲಿ ಅಹಂಯಾತಿಯೆಂಬ ಮಗನನ್ನು ಪಡೆದ [ಭಾರ -ಆದಿ. ೬೩].

**ಶಲ** —(i) ಇಕ್ಷ್ವಾಕು ವಂಶದ ಪರೀಕ್ಷಿತನ ಮೂವರು ಪುತ್ರರಲ್ಲಿ ಹಿರಿಯವ. ನೋಡು—ದಲ, ಬಲ [ಭಾರ.-ವನ ೧೯೫]. ಇವ ಬೇಟೆಗೆ ಹೋಗಿದ್ದಾಗ ವಾಮದೇವನೆಂಬ ಮುನಿಯ ಆಶ್ರಮಕ್ಕೆ ಹೋಗಿ ಆತನಿಂದ ಕುದುರೆಗಳನ್ನು ಎರವಾಗಿ ಪಡೆದು ಹಿಂದಕ್ಕೆ ಕೊಡದೆ ಭಂಗಪಟ್ಟದ್ದು ಮುಂತಾಗಿ. ಸೋಡು—ದಲ, ವಾಮದೇವ.

(ii) ಚಂದ್ರ ವಂಶದ ಬಾಹ್ಲೀಕ ರಾಜನ ಮಗನಾದ ಸೋಮದತ್ತ ರಾಜನ ಮಗ. ಭೂರಿ, ಭೂರಿಶ್ರವರೆಂಬವರು ಇವನ ಒಡಹುಟ್ಟಿದವರು [ಭಾರ.-ಆದಿ ೨೦೧]. ಭಾರತ ಯುದ್ಧದಲ್ಲಿ ಹದಿನಾಲ್ಕನೆಯ ದಿನ ಹಗಲಿನಲ್ಲಿ ದ್ರೌಪದೀಪುತ್ರರಿಂದ ಹತನಾದ [ದ್ರೋ. ೧೦೮. ಭಾಗ -೯-೨೨] ಇವನ ಮಗನನ್ನು ನಾಲ್ಕನೆಯ ದಿನದ ಯುದ್ಧದಲ್ಲಿ ಧೃಷ್ಟದ್ಯುಮ್ನ ಕೊಂದ [ಭಾರ.-ಭೀ. ೬೧] ಶಲನ ಶವವರ್ಣನೆ [ಸ್ತ್ರೀ. ೨೪].

**ಶಲ್ಯ.**—ಮದ್ರದೇಶಾಧಿಪತಿಯಾದ ಋತಾಯನನೆಂಬ ಅರಸನ ಮಗ ಪಾಂಡು ರಾಜನ ಕಿರಿಯ ಹೆಂಡತಿಯಾದ ಮಾದ್ರಿ ಇವನ ಸಹೋದರಿ. ಇವ ಸಂಹ್ರಾದನೆಂಬ ಅಸುರನ ಅಂಶದಿಂದ ಜನಿಸಿದವ. ಇವನಿಗೆ ರುಕ್ಮಾಂಗದ, ರುಕ್ಮರಥರೆಂಬ ಇಬ್ಬರು ಪುತ್ರರು [ಭಾರ -ಆ ೬೮, ೨೦೧]. ದ್ರೌಪದೀಸ್ವಯಂವರ ಕಾಲದಲ್ಲಿ ಭೀಮನೊಂದಿಗೆ ಯುದ್ಧಮಾಡಿ ಸೋತ [ಭಾರತ.-ಆದಿ. ೨೦೫]. ಇವ ಅತಿರಥ [ಉದ್ಯೋ ೧೬೫]. ಭಾರತ ಯುದ್ಧದಲ್ಲಿ ಇವ ಪಾಂಡವರಿಗೆ ಸಹಾಯಮಾಡಬೇಕೆಂದು ಬಂದ ದುರ್ಯೋಧನ ಮೋಸದಿಂದ ಇವನ ಸಾಹಾಯ್ಯವನ್ನು ಪಡೆದ [ಉದ್ಯೋ ೮]. ಹನ್ನೊಂದನೆಯ ದಿನ ಯುದ್ಧಮಾಡಿದ್ದು [ದ್ರೋ ೧೫]. ಅದೇ ದಿನ ಭೀಮನನ್ನು ಇದಿರಿಸಿ ಸೋತ [ದ್ರೋ. ೧೫]. ದುರ್ಯೋಧನನ ಬೇಡಿಕೆಯ ಮೇರೆಗೆ ಶಲ್ಯ ಕರ್ಣನಿಗೆ ಸಾರಥಿಯಾಗಲು ಸಮ್ಮತಿಸಿದ್ದು [ಕರ್ಣ. ೨೩]. ಕರ್ಣನ ಉತ್ಸಾಹವನ್ನು ಮುರಿಯುವುದಕ್ಕಾಗಿ ಶಲ್ಯ ಕರ್ಣನನ್ನು ಹೀಯಾಳಿಸಿದ್ದು [ಭಾರ.-ಕರ್ಣ. ೩೧]. ಕರ್ಣ ಶಲ್ಯನನ್ನೂ ಮದ್ರದೇಶದವರನ್ನೂ ಅಲ್ಲಗಳೆದದ್ದು [ಕರ್ಣ. ೩೭]. ಕರ್ಣನನ್ನು ಯುದ್ಧದಲ್ಲಿ ಪ್ರೋತ್ಸಾಹಿಸಿದ್ದು [ಕರ್ಣ. ೮೩]. ಕರ್ಣ ಮಡಿದ ತರುವಾಯ ಶಲ್ಯನಿಗೆ ಸೇನಾಧಿಪತ್ಯದಲ್ಲಿ ಪಟ್ಟಗಟ್ಟಿದ್ದು [ಶಲ್ಯ. ೬]. ಶಲ್ಯ ಪರಾಕ್ರಮವರ್ಣನೆ [ಶಲ್ಯ. ೧೨]. ಭೀಮನೊಂದಿಗೆ ಗದಾಯುದ್ಧಮಾಡಿ ಸೋತದ್ದು [ದ್ರೋ. ೧೫, ಶಲ್ಯ. ೧೧]. ಯುಧಿಷ್ಠಿರ

ಶಲ್ಯನನ್ನೂ ಇವನ ತಮ್ಮಂದಿರನ್ನೂ ಕೊಂದದ್ದು [ಶಲ್ಯ. ೧೬]. ಶಲ್ಯವಧಕಥಾ ಸಂಗ್ರಹ [ಶಲ್ಯ. ೧].

**ಶವವರ್ಣನ**—ಭಾರತಯುದ್ಧದಲ್ಲಿ ಮಡಿದವರನ್ನು ಗಾಂಧಾರಿ ವರ್ಣಿಸಿದ್ದು [ಸ್ತ್ರೀ. ೧೬-೨೨].

**ಶಶಬಿನ್ದು.**—ಯದು ವಂಶದ ಒಬ್ಬ ರಾಜರ್ಷಿ [ಭಾರ.-ಸ. ೮. ಶಾಂತಿ. ೨೮]. ಇವ ವೃಷ್ಣಿ ವಂಶದ ಚಿತ್ರರಥನ ಮಗ [ಭಾಗ -೯-೨೩]. ಇವನಿಗೆ ಲಕ್ಷ ಮಂದಿ ಪತ್ನಿಯರು. ಒಬ್ಬೊಬ್ಬಳೂ ಸಾವಿರಗಟ್ಟಲೆ ಮಕ್ಕಳನ್ನು ಪಡೆದರು [ದ್ರೋ ೬೫] ಶಶಬಿಂದುವಿನ ಕಥೆ [ಭಾರ -ದ್ರೋ. ೬೫. ಶಾಂತಿ ೨೮, ೨೦೭]. ಇವನ ಮಗಳು ಬಿಂದುಮತಿಯೆಂಬವಳು ಮಾಂಧಾತ ರಾಜನ ಹೆಂಡತಿ. ನೋಡು—ಮಾಂಧಾತ [ಭಾಗ.-೯-೬ ವಾಯು.-೮೮] ಚೈತ್ರರಥನೆಂಬುದು ಇವನ ನಾಮಾಂತರ [ಭಾರ.-ಶಾಂತಿ ೨೯]

**ಶಶಾದ.**—ಇಕ್ಷ್ವಾಕು ರಾಜನ ಮಗನಾದ ವಿಕುಕ್ಷಿಯ ನಾಮಾಂತರ. ಇವನ ಮಗ ಕುಕುತ್ಸ್ಥ [ಭಾರ -ವನ ೨೦೫] ಇಕ್ಷ್ವಾಕು ಒಮ್ಮೆ ಶ್ರಾದ್ಧ ಮಾಡುವುದಕ್ಕೆ ಯೋಗ್ಯವಾದ ಮಾಂಸವನ್ನು ತರುವಂತೆ ವಿಕುಕ್ಷಿಗೆ ಹೇಳಿದ. ಇವ ಅರಣ್ಯಕ್ಕೆ ಹೋಗಿ ಒಂದು (ಶಶ) ಮೊಲವನ್ನು ತಿಂದು, ಅದರ ಶೇಷವನ್ನು ತಂದುಕೊಟ್ಟ ವಸಿಷ್ಠ ಯೋಗಶಕ್ತಿಯಿಂದ ಇದನ್ನು ತಿಳಿದು ಹೇಳಲಾಗಿ ಇಕ್ಷ್ವಾಕು ಆಚಾರಹೀನನಾದ ತನ್ನ ಮಗನನ್ನು ದೇಶದಿಂದ ಹೊರಡಿಸಿದ ಇಂತು ಶಶ(ಮೊಲ)ವನ್ನು (ಅದ) ತಿಂದವನಾದುದರಿಂದ ಅಂದಿನಿಂದ ಇವನಿಗೆ ಶಶಾದನೆಂಬ ಹೆಸರೇ ರೂಢಿಯಲ್ಲಿ ಬಂತು [ಭಾಗ.-೯-೬].

**ಶಶಿಕಲಾ**—ಇಕ್ಷ್ವಾಕು ವಂಶದ ಸುದರ್ಶನ ರಾಜನ ಹೆಂಡತಿ ನೋಡು—ಸುದರ್ಶನ.

**ಶಾಕದ್ವೀಪ**—ಸಪ್ತಮಹಾದ್ವೀಪಗಳಲ್ಲಿ ಒಂದು ಇದು ಕ್ಷೀರಸಮುದ್ರದ ಹೊರಭಾಗದಲ್ಲಿ ಗುಂಡಾಗಿದೆ ಪ್ರಿಯವ್ರತ ರಾಜನ ಮಗನಾದ ಮೇಧಾತಿಥಿ ಇದನ್ನು ಆಳುತ್ತಿದ್ದ [ಭಾಗ.-೫, ೨೦. ದೇ.ಭಾ.-೮, ೧೩. ಭಾರ.-ಭೀ. ೯. ಮತ್ಸ್ಯ.-೧೨೨].

**ಶಾಕಲ.**—ಒಂದು ಪಟ್ಟಣ. ಮದ್ರ ದೇಶದ ರಾಜಧಾನಿ. ಚಂದ್ರಭಾಗಾ ನದಿಗೂ ಇರಾವತೀ ನದಿಗೂ ಮಧ್ಯದಲ್ಲಿ ಇದೆ [ಭಾರ.-ಸ ೩೫. ಕರ್ಣ ೩೭].

**ಶಾಕಲದ್ವೀಪ.**—ಒಂದು ದೇಶ. ಯುಧಿಷ್ಠಿರನ ರಾಜಸೂಯಯಾಗ ಸಂದರ್ಭದಲ್ಲಿ ಅರ್ಜುನ ಇದರ ಅರಸನಾದ ಪ್ರತಿವಿಂಧ್ಯನೊಂದಿಗೆ ಯುದ್ಧಮಾಡಿ ಅವನಿಂದ ಕಪ್ಪವನ್ನು ಪಡೆದ [ಭಾರ.-ಸಭಾ. ೨೭].

**ಶಾಣ್ಡಿಲಿ.**—ಶಾಂಡಿಲ್ಯನೆಂಬ ಮುನಿಯ ಮಗಳು. ಮಯಾಸುರನ ಹೆಂಡತಿಯಾದ ಹೇಮೆಯೆಂಬ ಅಪ್ಸರಸಿಯ ಗೆಳತಿ. ಹೇಮೆ ದೇವಲೋಕಕ್ಕೆ ಹೋದ ತರುವಾಯ ಶಾಂಡಿಲಿ ಋಷಭಕೂಟ ಪರ್ವತದಲ್ಲಿದ್ದ ಹೇಮೆಯ ದಿವ್ಯಗುಹೆಯಲ್ಲಿ ವಾಸವಾಗಿದ್ದಳು [ಭಾರ.-ಉ. ೧೧೩. ಭೀಷ್ಮ ೮]. ಕಪಿವೀರರು ಸೀತೆಯನ್ನು ಹುಡುಕುವುದಕ್ಕೆ ದಕ್ಷಿಣ ದಿಕ್ಕಿಗೆ ಹೋಗಿದ್ದಾಗ ಈ ಗುಹೆಯನ್ನು ಹೊಕ್ಕರು. ಶಾಂಡಿಲಿ ಅವರಿಗೆ ಸಹಾಯಮಾಡಿದಳು. ಇವಳಿಗೆ ಸ್ವಯಂಪ್ರಭೆಯೆಂಬುದು ನಾಮಾಂತರ [ರಾಮಾ.-ಕಿಷ್ಕಿಂ. ೫೧]. ಶಾಂಡಿಲಿ ಪತಿವ್ರತಾಮಾಹಾತ್ಮ್ಯ ವಿಷಯವಾಗಿ ಸುಮನೆಯೆಂಬ ರಾಜಕನ್ಯೆಯೊಂದಿಗೆ ಸಂವಾದಮಾಡಿದ್ದು [ಭಾರ.-ಅನು. ೧೮೫]. ಗರುಡ ಈಕೆಗೆ ಕೇಡನ್ನು ಬಗೆದು ಗರಿಗಳನ್ನು ಸುಟ್ಟುಕೊಂಡು ಮರಳಿ ಆಕೆಯ ಅನುಗ್ರಹದಿಂದ ರೆಕ್ಕೆಗಳನ್ನು ಪಡೆದದ್ದು ಮುಂತಾಗಿ [ಭಾರ -ಉ.೧೧೩. ಸ್ಕಾಂ.-ನಾಗರ. ೮೧, ೮೨].

**ಶಾಣ್ಡಿಲ್ಯ.**—ಕಶ್ಯಪ ವಂಶದ ಒಬ್ಬ ಮಹರ್ಷಿ. ಅಗ್ನಿ ಈತನ ವಂಶದಲ್ಲಿ ವೈಶ್ವಾನರನೆಂಬ ಹೆಸರಿನಿಂದ ಜನಿಸಿದ [ಭಾರ -ಸಭಾ. ೪. ಶಾಂತಿ ೪೬].

**ಶಾನ್ತನು.**—ಶಂತನು ಚಕ್ರವರ್ತಿಯ ನಾಮಾಂತರ [ಭಾರ.-ಆದಿ ೧೦೩]. ಹಿಂದಣ ಜನ್ಮದಲ್ಲಿ ಇವ ಸೂರ್ಯ ವಂಶದ ಮಹಾಭಿಷನೆಂಬ ಅರಸು [ಭಾರ.-ಆದಿ. ೧೦೩] ಇವನೇ ಕೃಪಾಚಾರ್ಯನನ್ನೂ ಕೃಪಿಯನ್ನೂ ಕಾಪಾಡಿದವ. ನೋಡು—ಕೃಪ, ಕೃಪಿ [ಭಾರ -ಆದಿ. ೧೪೦]. ಇವ ಗಂಗೆಯನ್ನು ಮದುವೆಯಾದದ್ದು, ಭೀಷ್ಮನನ್ನು ಪಡೆದದ್ದು ಮುಂತಾಗಿ [ಭಾರ.-ಆದಿ. ೧೦೪. ದೇ.ಭಾಗ.-೨, ૩]. ದಾಶ ರಾಜನ ಕನ್ಯೆಯಾದ ಸತ್ಯವತಿಯನ್ನು ಮದುವೆಯಾದದ್ದು. ನೋಡು—ಮತ್ಸ್ಯಗಂಧಾ, ಯೋಜನಗಂಧಾ, ಪರಾಶರ [ಭಾರ.-ಆದಿ ೧೦೮]. ಈತನಿಗೆ ಗಂಗೆಯಲ್ಲಿ ಜನಿಸಿದ ಮಗ ಭೀಷ್ಮ [ಆದಿ. ೬೩]. ಸತ್ಯವತಿಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯರೆಂಬ ಇಬ್ಬರು ಪುತ್ರರು ಜನಿಸಿದರು [ಭಾರ.-ಆದಿ. ೬೩, ೧೦೮]. ಈತನಿಗೆ ಭೀಷ್ಮ ಶ್ರಾದ್ಧಮಾಡುವಾಗ ದರ್ಭೆಗಳ ಮೇಲೆಯೇ ಪಿಂಡವನ್ನು ಹಾಕುತ್ತಿದ್ದ [ಹರಿ.-೧-೧೬]. ಶಂತನುವಿನ ಕಥೆ [ಭಾಗ.-೯-೨೨. ಭಾರ.-ಆದಿ ೧೦೩-೧೦೮] ಈತನ ರಾಜ್ಯಭಾರ ಕಾಲದಲ್ಲಿ ಅನಾವೃಷ್ಟಿ ಪ್ರಾಪ್ತವಾಗಿ, ಸುಭಿಕ್ಷವಾದದ್ದು [ವಿಷ್ಣು.-೪-೨೦].

**ಶಾನ್ತಾ.**—ಅಂಗ ದೇಶಾಧಿಪತಿಯಾದ ರೋಮಪಾದನ ಮಗಳು. ಋಷ್ಯಶೃಂಗನ ಹೆಂಡತಿ [ಭಾರ.-ವನ. ೧೧೪]. ದಶರಥನ ಮಗಳು. ರೋಮಪಾದ ರಾಜ ಈಕೆಯ ಸಾಕುತಂದೆ [ಭಾಗ.-೯-೨೩. ರಾಮಾ.-ಹರಿ. ೧-೩೧,೨-೯೩]. ಇವಳು ಲೋಮಪಾದನ ಮಗಳು. ಲೋಮಪಾದನಿಗೆ ದಶರಥನೆಂಬುದು ನಾಮಾಂತರ [ಹರಿ.-೧-೩೧].

**ಶಾರದಣ್ಡಾಯನಿ.**—ಕೇಕಯ ದೇಶದ ಅರಸು ಸಂತಾನವಿರಲಿಲ್ಲವಾಗಿ ಹೇಗಾದರೂ ಮಕ್ಕಳನ್ನು ಹೆರುವಂತೆ ತನ್ನ ಹೆಂಡತಿಯಾದ ಶ್ರುತಸೇನೆಯನ್ನು ಪ್ರೇರಿಸಿದ. ಆಕೆ ದುರ್ಜಯ ಮೊದಲಾದ ಪುತ್ರರನ್ನು ಪಡೆದದ್ದು ಪಾಂಡುರಾಯ ಸಂತಾನಾರ್ಥವಾಗಿ ಕುಂತಿಯೊಂದಿಗೆ ಸಂವಾದಮಾಡುನಾಗ ಈ ಕಥೆ ಉದಾಹೃತವಾಗಿದೆ [ಭಾರ.-ಆದಿ. ೧೨೬].

**ಶಾರ್ದೂಲೀ.**—ಕಶ್ಯಪನಿಂದ ಕ್ರೋಧವಶಾಯೆಂಬ ಪತ್ನಿಯಲ್ಲಿ ಜನಿಸಿದವಳು. ಕ್ರೂರಜಂತುಗಳ ಜನನಿ [ಭಾರ.-ಆದಿ. ೬೭].

**ಶಾಲಗ್ರಾಮ.**—ಒಂದು ಕ್ಷೇತ್ರ. ಗಂಡಕೀ ನದಿಯ ತೀರದಲ್ಲಿದೆ ಸಾಮಾನ್ಯವಾಗಿ ಬ್ರಾಹ್ಮಣರು ಪೂಜಿಸುವ ಸಾಲಿಗ್ರಾಮಗಳು ಉತ್ಪತ್ತಿಯಾಗುವ ಸ್ಥಳ [ಭಾರ.-ವನ. ೮೨].

**ಶಾಲಿಹೋತ್ರ.**—ಕಪಿಲ ಮಹರ್ಷಿಯ ಮಗ ಅಶ್ವಶಾಸ್ತ್ರವನ್ನು ಬರೆದವ. ಈತ ತನ್ನ ತಪೋಮಹಿಮೆಯಿಂದ ಒಂದು ಕೊಳವನ್ನೂ ಒಂದು ವೃಕ್ಷವನ್ನೂ ಕಲ್ಪಿಸಿದ್ದ ಆ ಕೊಳದ ನೀರು ಹಸಿವು ಬಾಯಾರಿಕೆಗಳನ್ನು ನೀಗಿಸುತ್ತಿತ್ತು. ಆ ಮರದ ನೆರಳು ಬಿಸಿಲು, ಚಳಿ, ಮಳೆ, ಗಾಳಿಗಳ ಭಯವನ್ನು ದೂರಮಾಡುತ್ತಿತ್ತು. ಪಾಂಡವರ ವನವಾಸ ಸಮಯದಲ್ಲಿ ಈತ ಅವರನ್ನು ಕೆಲವು ಕಾಲ ಉಪಚರಿಸಿದ [ಭಾರ.-ವನ. ೬೯. ಆದಿ. ೧೬೮]

**ಶಾಲ್ಮಲಿ**—ಸಪ್ತ ಮಹಾದ್ವೀಪಗಳಲ್ಲಿ ಒಂದು. ಇದು ನಾಲ್ಕು ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು ಇದರ ಸುತ್ತಲೂ ಸುರಾ ಸಮುದ್ರವಿದೆ ಪ್ರಿಯವ್ರತ ರಾಜನ ಪುತ್ರನಾದ ಯಜ್ಞಬಾಹು ಇದನ್ನು ಪಾಲಿಸುತ್ತಿದ್ದ [ಭಾರ -ಭೀ. ೧೨ ವಿ. ೨೪. ಭಾಗ.-೫-೨೦ ದೇ ಭಾ.-೮-೧೨. ಮತ್ಸ್ಯ.-೧೨೩].

**ಶಿಂಶುಮಾರ.**—ಧ್ರುವ ಮಂಡಲವೇ ಮೊದಲಾದ ಸಕಲ ಮಂಡಲಗಳಿಗೂ ಆಶ್ರಯಭೂತವಾಗಿ, ಕಣದೊಳಗಣ ಮೇಟಿಯ ಮರದಂತೆ ಇದೆ ಇದರ ಸ್ವರೂಪ ಮತ್ತು ಕಥೆ [ಭಾಗ.-೫-೨೩. ವಿಷ್ಣು -೨-೯].

**ಶಿಖಣ್ಡಿ.**—ಪಾಂಚಾಲ ರಾಜನಾದ ದ್ರುಪದನ ಹಿರಿಯ ಮಗ. ಇವ ಹೆಂಗಸಾಗಿ ಜನಿಸಿ ಬಳಿಕ ಗಂಡಸಾದ [ಭಾರ.-ಆದಿ. ೬೪, ೧೧೦]. ರಥಮುಖ್ಯ. ಇವನ ಕಥೆ [ಭಾರ.-ಉ. ೧೭೨]. ಇವ ದ್ರೋಣಾಚಾರ್ಯನಿಂದ ಧನುರ್ವಿದ್ಯೆಯನ್ನು ಕಲಿತು ದಶಾರ್ಣದೇಶಾಧಿಪತಿಯಾದ ಹಿರಣ್ಯವರ್ಮನ ಮಗಳನ್ನು ಮದುವೆಯಾದ [ಭಾರ.-ಉ. ೧೮೯]. ಇವ ಗಂಡಸಾದದ್ದು [ಭಾರ.-ಉ. ೧೯೨]. ಇವನಿಗೆ ಕ್ಷತ್ರದೇವ, ಋಕ್ಷದೇವರೆಂಬುದಾಗಿ ಇಬ್ಬರು ಪುತ್ರರು [ದ್ರೋ ೧೩೭]. ಭಾರತಯುದ್ಧದ ಹತ್ತನೆಯ ದಿನ ಇವ ಭೀಷ್ಮನನ್ನು ಇದಿರಿಸಿದ್ದು, ಭೀಷ್ಮ ಶಸ್ತ್ರಸನ್ಯಾಸಮಾಡಿದ್ದು

[ಭೀ. ೧೦೮]. ಹದಿನಾರನೆಯ ದಿನದ ಯುದ್ಧದಲ್ಲಿ ಇವ ಕೃತವರ್ಮನಿಂದ ಸೋತದ್ದು [ಭಾರ.-ಕರ್ಣ. ೧೭]. ನೋಡು—ಭೀಷ್ಮ, ಸ್ಥೂಣಾಕರ್ಣ, ಅಂಬಾ. ಭಾರತಯುದ್ಧ ಮುಗಿದ ರಾತ್ರಿ ಶಿಬಿರದಲ್ಲಿ ಮಲಗಿರುವಾಗ ಅಶ್ವತ್ಥಾಮನಿಂದ ಹತನಾದ [ಭಾ.-ಸೌಪ್ತಿ. ೮].

**ಶಿಖಿಧ್ವಜ.**—ಒಬ್ಬ ಅರಸು. ಚೂಡಾಲೆಯ ಪತಿ. ನೋಡು—ಚೂಡಾಲಾ.

**ಶಿನಿ.**—ಯದು ವಂಶದ ಅರಸು ಇವನ ಮಗ ಸತ್ಯಕ. ಇವ ಭಾರತಯುದ್ಧದ ಹದಿನಾಲ್ಕನೆಯ ದಿನದ ಹಗಲಿನಲ್ಲಿ ಸೋಮದತ್ತನೊಂದಿಗೆ ಯುದ್ಧಮಾಡಿದ [ಭಾರ.-ದ್ರೋ. ೧೪೪]. ಇವ ಯದು ವಂಶದ ಅನಮಿತ್ರನ ಮಗ [ಭಾಗ -೯-೨೪].

**ಶಿಬಿ.**—(i) ಹಿರಣ್ಯಕಶಿಪುವಿನ ಮಗ [ಭಾರ.-ಆದಿ. ೬೬]

(ii) ಪಾಂಡವಪಕ್ಷದ ಒಬ್ಬ ಅರಸು ದ್ರೋಣನಿಂದ ಹತನಾದ [ದ್ರೋ. ೧೫೬].

(iii) ಚಂದ್ರ ವಂಶದ ಉಶೀನರ ರಾಜನ ಮಗ. ಯಯಾತಿ ರಾಜನ ಮಗಳಾದ ಮಾಧವಿ ಇವನ ಜನನಿ ನೋಡು—ಮಾಧವಿ, ಯಯಾತಿ [ಭಾರ -ವನ. ೨೦೧. ಸ. ೮. ವಿ. ೫೩. ಉ. ೧೧೮. ಶಾಂ ೨೮] ಶಿಬಿಯ ಕಥೆ ನೋಡು—ವೃಷದರ್ಭ [ವನ. ೧೩೨. ದ್ರೋ. ೫೮] ಯಯಾತಿ ಸ್ವರ್ಗದಿಂದ ಚ್ಯುತನಾಗಿ ಭೂಲೋಕಕ್ಕೆ ಬಂದಾಗ ಶಿಬಿ ಯಯಾತಿಯೊಂದಿಗೆ ಸಂವಾದಮಾಡಿದ್ದು, ಮರಳಿ ಯಯಾತಿಯನ್ನು ಸ್ವರ್ಗಕ್ಕೆ ಕಳುಹಿದ್ದು [ಭಾರ -ಆದಿ. ೮೭] ವೃಷದರ್ಭ, ಸುವೀರ, ಮದ್ರ, ಕೇಕಯ, ಬೃಹದ್ಗರ್ಭ, ಎಂಬ ಐವರು ಇವನ ಮಕ್ಕಳು [ಭಾರ.-ವನ. ೨೦೧]. ವೃಷಾದರ್ಭ, ಸುವೀರ, ಮದ್ರ, ಕೇಕಯರೆಂಬವರು ಇವನ ಮಕ್ಕಳು [ಭಾಗ.-೯-೨೩]. ಈತನ ಮಗ ಗೋಪತಿಯೆಂಬವ [ಭಾರ.-ಶಾಂತಿ. ೪೮] ಪುಷ್ಕರವನ್ನು ತಾನು ಕದಿಯಲಿಲ್ಲವೆಂಬುದಾಗಿ ಈತ ಪ್ರತಿಜ್ಞೆಮಾಡಿದ್ದು [ಅನು. ೧೪೩].

**ಶಿಲಾದ**—ಒಬ್ಬ ಮಹರ್ಷಿ. ಪುತ್ರಪ್ರಾಪ್ತಿಗಾಗಿ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ನಂದೀಶ್ವರನೆಂಬ ಅಯೋನಿಜನಾದ ಪುತ್ರನನ್ನು ಪಡೆದ. ಬಳಿಕ ನಂದಿ ಅಲ್ಪಾಯುಷ್ಕನೆಂಬುದನ್ನು ಕುರಿತು ಪರಿತಾಪಪಟ್ಟು ನಂದಿಯನ್ನು ತಪಸ್ಸಿಗೆ ಕಳುಹಿಸಿದ. ನೋಡು—ನಂದಿ [ಶಿವ. ಪು.-ಶತರು. ೬. ಲಿಂಗ.-ಪೂ. ೪೨].

**ಶಿವ.**—ತ್ರಿಮೂರ್ತಿಗಳಲ್ಲಿ ಒಬ್ಬ. ಶಂಭು, ಶಂಕರ ಮುಂತಾದ ಅನೇಕ ಹೆಸರುಗಳುಂಟು. ಸಮುದ್ರಮಥನ ಕಾಲದಲ್ಲಿ ವಿಷಪಾನಮಾಡಿದ [ಭಾರ.-ಆ. ೧೮]. ಜಯದ್ರಥನಿಗೆ ಶ್ರೀ ಕೃಷ್ಣನ ಮಹಿಮೆಯನ್ನು ಹೇಳಿದ [ಭಾರ.-ವನ. ೨೭೩]. ಶಿವ ಮಹಿಮೆ [ಭಾರ -ದ್ರೋ. ೨೦೩. ಸೌ. ೧೭. ಅನು. ೪೫]. ಈತನಿಗೆ ಸ್ಮಶಾನವಾಸ, ನೀಲಕಂಠನಾಗುವಿಕೆ, ವೃಷವಾಹನ, ಚಂದ್ರಕಲಾಧಾರಣ ಮುಂತಾದುವುಗಳಿಗೆ

ಕಾರಣಗಳು [ಭಾರ.-ಅನು. ೨೦೭]. ಶಿವ ದಕ್ಷಯಜ್ಞವನ್ನು ಧ್ವಂಸಗೊಳಿಸಿದ್ದು [ಭಾರ.-ಅನು. ೨೩೫. ಶಿವ.-ಸತೀಖಂ. ೨೬-೪೩] ಶಿವನಿಗೆ ಮೂರನೆಯ ಕಣ್ಣು ಹುಟ್ಟಿದ್ದು [ಭಾರ.-ಅನು. ೨೦೫] ಶಿವ ಸನತ್ಕುಮಾರನೊಂದಿಗೆ ತತ್ತ್ವಸೃಷ್ಟಿ ವಿಷಯ ವಾಗಿ ಸಂವಾದಮಾಡಿದ್ದು [ಭಾರ -ಅನು ೧೬೫]. ಶಿವ ಪಾರ್ವತಿಗೆ ವರ್ಣಾಶ್ರಮ ಧರ್ಮಗಳನ್ನು ವಿವರಿಸಿದ್ದು [ಅನು ೨೦೮]. ಶಿವ ಪಾರ್ವತಿಯ ಮೂಲಕ ಸ್ತ್ರೀಧರ್ಮ ರಹಸ್ಯಗಳನ್ನು ಕೇಳಿದ್ದು [ಅನು. ೨೪೯-೨೫೦]. ಶಿವ ಬ್ರಹ್ಮನ ಹಣೆಯಿಂದ ಜನಿಸಿ ದವ [ಶಾಂತಿ ೩೬೦]. ಶಿವನ ಅನೇಕ ಹೆಸರುಗಳ ನಿರ್ವಚನ [ಭಾರ -ಶಾಂತಿ. ೩೫೨]. ಶಿವ ವಿಷ್ಣುವಿನೊಂದಿಗೆ ಯುದ್ಧಮಾಡಿದ್ದು [ಭಾರ.-ಶಾಂತಿ ೩೫೨]. ಶಿವ ಕೃಷ್ಣನಿಗೆ ವರಪ್ರದಾನಮಾಡಿದ್ದು [ಭಾರ.-ಅನು. ೪೬]. ಕೃಷ್ಣಾರ್ಜುನರು ಶಿವ ನನ್ನು ಸ್ತುತಿಸಿದ್ದು [ಭಾರ.-ದ್ರೋ. ೮೦]. ದಕ್ಷ ಶಿವನನ್ನು ಹೊಗಳಿದ್ದು [ಶಾಂತಿ. ೩೯೦]. ದಕ್ಷ ಶಿವನನ್ನು ನಿಂದಿಸಿದ್ದು [ಭಾಗ.-೪, ೨]. ತಂಡಿ ಶಿವನನ್ನು ಸ್ತುತಿ ಸಿದ್ದು [ಅನು. ೪೭]. ಅಶ್ವತ್ಥಾಮ ಸ್ತುತಿಸಿದ್ದು [ಭಾರ.-ಸೌ. ೭]. ಮರುತ್ತ ರಾಜ ಸ್ತುತಿಸಿದ್ದು [ಅಶ್ವ ೮] ಶಿವ ಪಾರ್ವತಿಯೊಂದಿಗೆ ಕ್ರೀಡಿಸಿದ್ದು [ಭಾರ.- ಅನು. ೧೩೦. ಶಿವ -ಕುಮಾರ. ೧] ಶಿವ ಕೈಲಾಸದಲ್ಲಿ ನಿಂತು ಕುಬೇರನ ಮಿತ್ರ ನಾದದ್ದು [ಶಿವ -ರುದ್ರ. ಸಂ. ೧೭]. ಶಿವಸಹಸ್ರನಾಮಸ್ತೋತ್ರ [ಅನು. ೪೮. ಲಿಂ.- ೬೫, ೯೮. ಶಿವ.-ಕೋಟಿರುದ್ರ. ೩೫] ಶಿವ ಷಣ್ಮುಖನನ್ನು ಪಡೆದದ್ದು [ಶಿವ.- ಕುಮಾರಖಂ. ೨]. ಶಿವ ಅಶ್ವತ್ಥಾಮರೂಪದಿಂದ ಅವತರಿಸಿದ್ದು [ಶಿವ.-ಶತರು. ೩೬]. ಶಿವ ಸತಿ(ದಾಕ್ಷಾಯಣಿ)ಯನ್ನು ಮದುವೆಯಾದದ್ದು [ಶಿವ.-ಸತೀಖಂ. ೧೭-೨೧]. ಶಿವನ ವಾಸಸ್ಥಾನಗಳು [ಲಿಂಗ -೫೧]. ಶಿವ ಕಿರಾತರೂಪದಿಂದ ಅರ್ಜುನನನ್ನು ಇದಿರಿಸಿ, ಆತನ ಭಕ್ತಿಸಾಮರ್ಥ್ಯಗಳಿಗೆ ಮೆಚ್ಚಿ ಪಾಶುಪತಾಸ್ತ್ರ ವನ್ನು ಅನುಗ್ರಹಿಸಿದ್ದು [ಶಿವ -ಶತರು ೪೦-೪೪] ಶಿವ ಲಿಂಗರೂಪದಿಂದ ಅವತರಿ ಸಿದ್ದು [ಲಿಂಗ.-ಪೂರ್ವ. ೧೭. ಶಿವ.-ಸೃಷ್ಟಿ ಖಂ. ೭] ಶಿವ ಪಶುಪತಿಯೆಂಬ ಹೆಸರನ್ನು ಪಡೆದದ್ದು, ಪಶುಪಾಶವಿಮೋಚನ ಮುಂತಾದ್ದು [ಲಿಂಗ -ಉ. ೯. ಲಿಂಗ.-ಪೂ. ೮೧]. ಶಿವನ ಅಷ್ಟಮೂರ್ತಿ ಸ್ವರೂಪವರ್ಣನ [ಲಿಂಗ.-ಉ. ೧೨]. ಶಿವ ಮಾಯಾ, ಅಹಂಕಾರ, ಬಂಧ ರಹಿತ [ಶಿವ.-ವಾಯುವೀ. ಉತ್ತ ೬]. ಶಿವಪೂಜಾ ದೀಪಾ ರಾಧನಾದಿಗಳ ಫಲ [ಲಿಂಗ.-೭೯]. ಒಂದೊಂದು ಯುಗದಲ್ಲಿಯೂ ಶಿವ ಬೇರೆ ಬೇರೆ ರೂಪದಿಂದ ಅವತರಿಸಿದ್ದು [ಶಿವ.-ವಾಯುವೀ. ಉತ್ತ. ೯] ತ್ರಿಪುರದಹನ ಮಾಡಿದ್ದು [ಲಿಂಗ.-೭೧-೭೩. ಶಿವ.-ಯುದ್ಧ. ೧-೧೨] ಶಿವ ವಿಷ್ಣುವಿಗೆ ವರಪ್ರದಾನಮಾಡಿದ್ದು [ಲಿಂಗ.-ಪೂ. ೧೯]. ಶಿವನ ವಾಮಪಾರ್ಶ್ವದಿಂದ ದಾಕ್ಷಾಯಣೀ ಪಾರ್ವತಿಯರು ಜನಿಸಿದ್ದು [ಲಿಂಗ.-ಪೂರ್ವಾ. ೯೯]. ವಿಷ್ಣುವಿನ ಮೋಹಿನೀರೂಪಕ್ಕೆ ಮರುಳಾ

ದದ್ದು [ಭಾಗ.-೮-೧೨]. ಶಿವ ಪಾರ್ವತೀ ವಿವಾಹ [ಲಿಂಗ.-ಪೂ. ೧೦೩. ಶಿವ.-ಪಾರ್ವ. ೩೧-೫೪]. ಹಾಲಿಗಾಗಿ ಅತ್ತು ತಪಸ್ಸುಮಾಡಿದ ಉಪಮನ್ಯುವಿಗೆ ಶಿವ ಕ್ಷೀರಸಮುದ್ರದ ಆಧಿಪತ್ಯವನ್ನು ಕೊಟ್ಟದ್ದು [ಲಿಂಗ.-ಪೂ. ೧೦೭]. ಶಿವನ ಭಿನ್ನ ಭಿನ್ನ ಮೂರ್ತಿಸ್ವರೂಪವರ್ಣನ, ಆ ಆ ಮೂರ್ತಿಗಳ ಪತ್ನೀಪುತ್ರರು ಮುಂತಾಗಿ [ಲಿಂಗ.-ಉತ್ತ. ೧೩]. ಶಿವ ಬ್ರಹ್ಮಚಾರಿ ರೂಪದಿಂದ ಬಂದು ಪಾರ್ವತಿಯನ್ನು ಮೋಹಗೊಳಿಸಿ, ಅನುಗ್ರಹಿಸಿದ್ದು [ಶಿವ.-ಪಾರ್ವ. ೩೦. ೨೬-೩೦]. ಶಿವ ಮನ್ಮಥನನ್ನು ದಹಿಸಿದ್ದು ಮುಂತಾಗಿ [ಶಿವ.-ಸತೀ. ೧೯]. ನೋಡು—ಉಪಮನ್ಯು, ಕಾಮ, ಕುಮಾರ, ಜೀವ, ದಕ್ಷ,. ದಾಕ್ಷಾಯಣಿ, ಜಲಂಧರ, ಪಾರ್ವತಿ, ಶಂಖಚೂಡ, ಅರ್ಜುನ, ದಿವೋದಾಸ, ವೃಕ, ರಾವಣ, ರಾಮ, ಕೃಷ್ಣ, ಇತ್ಯಾದಿ.

**ಶಿವಾ.**—(i) ಪಾರ್ವತಿ ಶಿವನ ಅರ್ಧದೇಹವನ್ನು ಸೂರೆಗೊಂಡವಳು. ನೋಡು —ಪಾರ್ವತಿ.

(ii) ಅಂಗಿರಸನೆಂಬ ಮುನಿಯ ಹೆಂಡತಿ [ಭಾರ.-ವನ. ೨೨೭]

(iii) ಅನಿಲನೆಂಬ ವಸುವಿನ ಹೆಂಡತಿ [ಭಾರ.-ಆ ೬೭]

(iv) ಒಂದು ನದಿ [ಭಾರ.-ಭೀ. ೯]

**ಶಿಶುಪಾಲ.**—ಒಬ್ಬ ಅರಸು. ಯದು ವಂಶದ ಜ್ಯಾಮಘನ ಸಂತತಿಯಲ್ಲಿ ಜನಿಸಿದ ದಮಘೋಷನಿಂದ ವಸುದೇವನ ತಂಗಿಯಾದ ಶ್ರುತಶ್ರವೆಯಲ್ಲಿ ಜನಿಸಿದವ [ಭಾರ.-ವನ ೧೫ ಸಭಾ. ೬೬] ಪಾಂಡವರ ಜನನಿಯಾದ ಕುಂತಿಯೂ, ಶಿಶುಪಾಲನ ಜನನಿಯಾದ ಶ್ರುತಶ್ರವೆಯೂ ಅಕ್ಕತಂಗಿಯರು [ಭಾಗ.-೭-೧, ೯-೨೪]. ಇವನಿಗೆ ಸುನೀಥನೆಂಬುದು ನಾಮಾಂತರ [ಸಭಾ. ೩೯, ೪೨]. ಚೇದಿ ದೇಶದ ಅರಸನಾದ ಕಾರಣ ಚೈದ್ಯನೆಂಬ ಹೆಸರೂ ರೂಢಿಯಲ್ಲಿದೆ. ಇವ ಹಿರಣ್ಯಕಶಿಪುವಿನ ಅಂಶದಿಂದ ಜನಿಸಿದವ. ನೋಡು—ಜಯ, ವಿಜಯ. ಹುಟ್ಟುವಾಗ ಇವನಿಗೆ ನಾಲ್ಕು ತೋಳುಗಳೂ ಮೂರು ಕಣ್ಣುಗಳೂ ಇದ್ದುವು ಈ ವಿಕಾರರೂಪವನ್ನು ಕಂಡು ತಾಯ್ತಂದೆಗಳು ಹೆದರಿರುವಲ್ಲಿ "ಒಬ್ಬ ಮಹಾಮಹಿಮನ ದೇಹಸ್ಪರ್ಶದಿಂದ ಹಣೆಗಣ್ಣೂ ಎರಡು ತೋಳುಗಳೂ ಇಂಗಿಹೋಗುವುವು ಆ ಮಹಾಪುರುಷನೇ ಇವನಿಗೆ ಮೃತ್ಯು" ಎಂಬುದಾಗಿ ಆಕಾಶವಾಣಿ ನುಡಿಯಿತು. ಇದನ್ನು ಕೇಳಿ ಶಿಶುಪಾಲನ ತಾಯ್ತಂದೆಗಳು ತಮ್ಮ ಮನೆಗೆ ಬಂದವರ ಕೈಗೆಲ್ಲ ಮಗುವನ್ನು ಕೊಡುತ್ತ ಬಂದರು. ಒಮ್ಮೆ ಕೃಷ್ಣ ಇವನನ್ನು ಎತ್ತಿಕೊಂಡ. ಕೂಡಲೇ ಇವನ ಹಣೆಗಣ್ಣೂ ಎರಡು ತೋಳುಗಳೂ ಮಾಯವಾದುವು ಶ್ರುತಶ್ರವೆ ಒಂದು ವಿಧದಲ್ಲಿ ಸಂತೋಷಪಟ್ಟಳಾದರೂ ಕೃಷ್ಣನೇ ತನ್ನ ಮಗನಿಗೆ ಶತ್ರುವೆಂಬುದನ್ನು ತಿಳಿದು ಹೆದರಿ, ತನ್ನ ಮಗನ ನೂರು ಅಪರಾಧಗಳನ್ನು ಮನ್ನಿಸುವಂತೆ ಬೇಡಿದಳು. ಕೃಷ್ಣನೂ ಅದಕ್ಕೆ

ಸಮ್ಮತಿಸಿದ [ಭಾರ -ಸ ೬೬]. ರಾಜಸೂಯ ಮುಗಿದಾಗ ಭೀಷ್ಮ ಕೃಷ್ಣನಿಗೆ ಅಗ್ರ ಪೂಜೆ ಮಾಡಿಸಿದ್ದರಿಂದ ರೋಷಭರಿತನಾದ ಶಿಶುಪಾಲ ಭೀಷ್ಮನನ್ನು ನಿಂದಿಸಿದ [ಭಾರ -ಸ. ೬೪]. ಇದರಿಂದ ಕುಪಿತನಾದ ಭೀಮ ಶಿಶುಪಾಲನನ್ನು ಕೊಲ್ಲಹೋದದ್ದು [ಸಭಾ. ೬೫] ಶಿಶುಪಾಲ ಕೃಷ್ಣನನ್ನು ನಿಂದಿಸಿದ್ದು [ಸಭಾ. ೩೯, ೪೦] ಇವ ಬಭ್ರುವಿನ (ಅಕ್ರೂರನ) ಹೆಂಡತಿಯನ್ನು ಅಪಹರಿಸಿದ್ದು [ಸಭಾ. ೬೮]. ಕೃಷ್ಣನಿಂದ ಶಿಶುಪಾಲ ಮಡಿದದ್ದು [ಸಭಾ ೭೦. ಭಾಗ.-೧೦, ೭೪]. ಇವನ ಪುತ್ರರಲ್ಲಿ ಸುಕೇತು ವೆಂಬವ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ದ್ರೋಣನಿಂದ ಮಡಿದ [ಭಾರ.-ಕರ್ಣ ೩]. ಧೃಷ್ಟಕೇತುವೆಂಬ ಮತ್ತೊಬ್ಬ ಪುತ್ರನೂ ಪಾಂಡವರಲ್ಲಿ ಸೇರಿ ಹೋರಾಡಿ ಹದಿನಾಲ್ಕನೆಯ ದಿನದ ಹಗಲಿನ ಯುದ್ಧದಲ್ಲಿ ದ್ರೋಣನಿಂದ ಹತನಾದ [ಭಾರ -ದ್ರೋ ೧೨೫]. ಇವನ ಇನ್ನೊಬ್ಬ ಮಗನಾದ ಶರಭನೆಂಬವನು, ಯುಧಿಷ್ಠಿರನ ಅಶ್ವಮೇಧ ಸಂದರ್ಭದಲ್ಲಿ ದಕ್ಷಿಣ ದಿಕ್ಕಿಗೆ ವಿಜಯಯಾತ್ರೆಗೆ ಹೋಗಿದ್ದ ಅರ್ಜುನನನ್ನು ಸಂಧಿಸಿ ಕಪ್ಪವಿತ್ತು ಕಳುಹಿದ [ಭಾರ -ಅಶ್ವ. ೮೪] ಮಾದ್ರೀ ಪುತ್ರನಾದ ನಕುಲ ಶಿಶುಪಾಲನ ಮಗಳಾದ ರೇಣುಮತಿ ಅಥವಾ ಕರೇಣುಮತಿ ಯೆಂಬವಳನ್ನು ಮದುವೆಯಾಗಿದ್ದ [ಭಾರ -ಆದಿ. ೬೩].

**ಶಿಶುಲೀಲೆ.**—ವಿಷ್ಣು ಶಿಶುರೂಪದಿಂದ ಸಮುದ್ರ ಮಧ್ಯದಲ್ಲಿ ಮಲಗಿ ಕ್ರೀಡಿಸುತ್ತಿದ್ದದ್ದು, ಮಾರ್ಕಂಡೇಯ ಆ ಲೀಲೆಯನ್ನು ಕಂಡದ್ದು [ಭಾಗ.-೧೨-೯. ಭಾರ.-ವನ. ೧೯೧].

**ಶುಕ.**—(i) ರಾವಣನ ಗೂಢಚಾರ ನೋಡು—ರಾಮ, ರಾವಣ, ವಿಭೀಷಣ [ಭಾರ.-ವನ ೨೮೪].

(ii) ಗಾಂಧಾರ ರಾಜನಾದ ಸುಬಲನ ಮಗ ಶಕುನಿಯ ಒಡಹುಟ್ಟಿದವ. ಎಂಟನೆಯ ದಿನದ ಯುದ್ಧದಲ್ಲಿ ಅರ್ಜುನ ಪುತ್ರನಾದ ಇರಾವಂತನಿಂದ ಹತನಾದ [ಭಾರ.-ಭೀ. ೯೦].

(iii) ಒಬ್ಬ ಮಹಾಮಹಿಮನಾದ ಯೋಗಿ ಕೃಷ್ಣದ್ವೈಪಾಯನ ಮುನಿ ನಿಯಮದಲ್ಲಿದ್ದಾಗ ಶುಕೀ (ಹೆಣ್ಣುಗಿಳಿ) ರೂಪದಿಂದ ಬಂದ ಘೃತಾಚಿಯೆಂಬ ಅಪ್ಸರಸಿಯಲ್ಲಿ ಜನಿಸಿದವ [ಭಾರ.-ಆದಿ ೬೪. ಸಭಾ. ೪. ಶಾಂತಿ. ೩೩೨. ದೇ.ಭಾ.-೧-೧೪]. ಗಂಧರ್ವರಿಗೆ ಈತ ಭಾರತ ಕಥೆಯನ್ನು ಹೇಳಿದ್ದು [ಭಾರ.-ಆ. ೧]. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಕುರಿತು ಕೃಷ್ಣದ್ವೈಪಾಯನನೊಂದಿಗೆ ಸಂವಾದ [ಶಾಂತಿ. ೨೩೮]. ಕೃಷ್ಣದ್ವೈಪಾಯನ ಈತನಿಗೆ ಧರ್ಮರಹಸ್ಯಗಳನ್ನು ತಿಳಿಯ ಹೇಳಿದ್ದು [ಶಾಂತಿ. ೩೨೯]. ತನ್ನ ತಂದೆಯ ಬಳಿ ವಿದ್ಯಾಭ್ಯಾಸಮಾಡಿದ ತರುವಾಯ ಆತನ ಅನುಮತಿಯ ಮೇರೆಗೆ ಶುಕ ಬ್ರಹ್ಮವಿದ್ಯಾರಹಸ್ಯಗಳನ್ನು ತಿಳಿಯಲು ಜನಕ

ರಾಜನಲ್ಲಿಗೆ ಹೋಗಿದ್ದು [ಶಾಂತಿ. ೩೩೩]. ಶುಕ ನಾರದನಿಂದ ಉಪದೇಶಹೊಂದಿ, ವೈರಾಗ್ಯಭರಿತನಾದದ್ದು [ಭಾರ.-ಶಾಂತಿ. ೩೩೭-೩೩೯]. ಶುಕ ಪಿತೃದೇವತೆಗಳ ಪುತ್ರಿಯಾದ ಪೀವರಿಯನ್ನು ಮದುವೆಯಾಗಿ ಕೃಷ್ಣ, ಗೌರಪ್ರಭ, ಭೂರಿ, ದೇವಶ್ರುತ ರೆಂಬ ನಾಲ್ವರು ಪುತ್ರರನ್ನು ಪಡೆದ. ಈತನಿಗೆ ಕೀರ್ತಿಯೆಂಬ ಮಗಳಿದ್ದಳು. ಈಕೆ ಅಣುಹನೆಂಬವನನ್ನು ಮದುವೆಯಾದಳು [ದೇ.ಭಾ.-೧, ೧೯] ಪಿತೃಕನ್ಯೆಯಾದ ಪೀವರಿ ಈತನ ಹೆಂಡತಿ. ಈತನ ಮಗಳಾದ ಕೃತ್ವಿಯೆಂಬ ಕನ್ಯೆ ಅಣುಹನನ್ನು ಮದುವೆಯಾಗಿ ಬ್ರಹ್ಮದತ್ತನೆಂಬ ಮಗನನ್ನು ಪಡೆದಳು [ಭಾಗ -೯, ೨೧. ಮತ್ಸ್ಯ.-೧೫. ಹರಿ.-೧, ೧೯ ೨೦] ಶುಕ ಮುನಿ ಭಾಗವತ ಕಥೆಯನ್ನು ವ್ಯಾಸ ಮುನಿಯಿಂದ ಕೇಳಿ ತಿಳಿದದ್ದು—

ಇದಂ ಭಾಗವತಂ ನಾಮ ಪುರಾಣಂ ವೇದಸಮ್ಮಿತಂ।
ಅಧೀತವಾ೯ ದ್ವಾಪರೇಽಸ್ಮಿ೯ ಪಿತುರ್ದ್ವೈಪಾಯನಾದಹಂ॥

ಶುಕ ಮುನಿ ಭಾಗವತವನ್ನು ಪರೀಕ್ಷಿದ್ರಾಜನಿಗೆ ಹೇಳಿದ [ಭಾಗ.-೧-೧೯]. ಶುಕ ವಿದೇಹಮುಕ್ತಿಯನ್ನು ಪಡೆದು ಕೈಲಾಸವನ್ನು ಏರಿಹೋದದ್ದು [ಭಾರ.-ಶಾಂತಿ. ೩೩೯].

**ಶುಕಿ.**—ಕಶ್ಯಪ ಪತ್ನಿಯಾದ ತಾಮ್ರಾಯೆಂಬವಳ ಮಗಳು. ಶುಕ ಜಾತಿಯನ್ನು ಸೃಷ್ಟಿಸಿದವಳು [ಆದಿ. ೬೭].

**ಶುಕ್ತಿಮತಿ**—(I) ಒಂದು ನದಿ ಶುಕ್ತಿಮಂತವೆಂಬ ಪರ್ವತದಿಂದ ಹುಟ್ಟಿ ಹರಿಯುತ್ತದೆ ಒರಿಸ್ಸಾ ದೇಶದಲ್ಲಿ ಹರಿಯುವ ಸುವರ್ಣರೇಖಾ ನದಿಗೂ, ಮಾಳವ ದೇಶದಲ್ಲಿ ಹರಿಯುವ ವೇತ್ರವತೀ ನದಿಗೂ ಈ ಹೆಸರು ಸಲ್ಲುತ್ತದೆ [ಮತ್ಸ್ಯ.-೧೧೪. ಭಾರ.-ಆ. ೬೪. ಭೀ. ೯].

(II) ಒಂದು ಪಟ್ಟಣ. ಚೇದಿ ದೇಶದ ರಾಜಧಾನಿ. ಇದು ಶುಕ್ತಿಮತೀ ತೀರ ದಲ್ಲಿದೆ. ಪಾಂಡವರ ಕಾಲದಲ್ಲಿ ಶಿಶುಪಾಲನೂ ಅವನ ತರುವಾಯ ಅವನ ಮಗ ಧೃಷ್ಟ ಕೇತು ರಾಜನೂ ಇಲ್ಲಿ ರಾಜ್ಯಭಾರಮಾಡುತ್ತಿದ್ದರು [ಭಾರ.-ವನ. ೫೦] ನೋಡು— ಗಿರಿಕಾ [ಭಾರ -ಆದಿ. ೬೪]

**ಶುಕ್ತಿಮನ್ತ**—ಒಂದು ಉಪ ಪರ್ವತ. ಇದು ಭಲ್ಲಾಟ ದೇಶದ ಪರ್ವತಶ್ರೇಣಿ ಯನ್ನು ಅನುಸರಿಸಿಕೊಂಡಿದೆ. ಈ ಪರ್ವತದಿಂದ ಕಾಶಿಕಾ, ಸುಕುಮಾರಿ, ಮಂದಗಾ, ಮಂದವಾಹಿನಿ, ಕೃಪಾ, ಪಾಶಿನಿ ಎಂಬ ನದಿಗಳು ಹುಟ್ಟಿ ಹರಿಯುತ್ತವೆ. ನೋಡು— ಶುಕ್ತಮತಿ. ಇದು ಉಜ್ಜಯಿನಿಯ ಬಳಿ ವಿಂಧ್ಯಪರ್ವತ ಶ್ರೇಣಿಗೆ ಹಬ್ಬಿದೆ [ಭಾರ.-ಸ. ೩೧. ಭೀ. ೯].

**ಶುಕ್ರ.**—ವರುಣ ಪುತ್ರನಾದ ಭೃಗು ಮಹರ್ಷಿಯಿಂದ ಪುಲೋಮೆಯಲ್ಲಿ ಜನಿಸಿದವ. ಚ್ಯವನ ಮಹರ್ಷಿಯ ಅಣ್ಣ [ಭಾರ -ಆದಿ. ೬೭ ಸ. ೧೧]. ದೇವಯಾನಿ ಈತನ ಮಗಳು [ಆದಿ. ೭೦]. ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಮೃತಸಂಜೀವಿನೀ ವಿದ್ಯೆಯನ್ನು ಪಡೆದ [ಶಿವ.-ಯುದ್ಧ ಖಂ. ೫೧]. ಶುಕ್ರನ ಕಥೆ [ಭಾರ.-ಆದಿ. ೬೬-೭೭. ಶಾಂತಿ. ೨೯೫]. ಈತನ ಹೆಂಡತಿ ಶತಪರ್ವಾಯೆಂಬವಳು [ಉದ್ಯೋ ೧೧೭]. ಈತ ಪ್ರಿಯವ್ರತ ರಾಜನ ಪುತ್ರಿಯಾದ ಊರ್ಜಸ್ವತಿಯೆಂಬವಳನ್ನು ಮದುವೆಯಾಗಿ ದೇವಯಾನಿಯೆಂಬ ಪುತ್ರಿಯನ್ನು ಪಡೆದ [ಭಾಗ.-೫-೧] ಇಂದ್ರನ ಮಗಳಾದ ಜಯಂತಿಯೆಂಬವಳನ್ನು ಮದುವೆಯಾಗಿ ದೇವಯಾನಿಯೆಂಬ ಮಗಳನ್ನು ಪಡೆದ [ಮತ್ಸ್ಯ -೪೭] ಈತನ ಮತ್ತೊಬ್ಬ ಮಗಳಾದ ದೇವಿಯೆಂಬವಳನ್ನು ವರುಣ ಮದುವೆಯಾದ [ಭಾರ.-ಆದಿ ೬೭]. ಇವನ ಜನನಿಯಾದ ಖ್ಯಾತಿಯೆಂಬವಳನ್ನು ವಿಷ್ಣು ಕೊಂದದ್ದು [ವಾಯು -೯೭. ದೇ ಭಾಗ -೪-೧೧ ಮತ್ಸ್ಯ -೪೭]. ಈತನಿಗೆ ಶಂಡ, ಅಮರ್ಕರೆಂಬ ಇಬ್ಬರು ಮಕ್ಕಳು [ಭಾಗ -೭-೫] ಶುಕ್ರ ಕುಬೇರನಿಂದ ಹಣವನ್ನು ಅಪಹರಿಸಿದ್ದು [ಭಾರ -ಶಾಂ ೨೯೫] ಈತ ಶಿವನ ಶುಕ್ರ(ವೀರ್ಯ)ದಿಂದ ಜನಿಸಿದವನಾಗಿ ಈತನಿಗೆ ಶುಕ್ರನೆಂದು ಹೆಸರು [ಭಾರ -ಶಾಂ ೨೯೫]. ಪುಷ್ಕರವನ್ನು ತಾನು ಅಪಹರಿಸಲಿಲ್ಲವೆಂಬ ವಿಷಯವಾಗಿ ಈತ ಮಾಡಿದ ಪ್ರತಿಜ್ಞೆ [ಭಾರ -ಅನು. ೧೪೩] ಭಗವಂತನನ್ನು ಪೂಜಿಸುವಾಗ ಪುಷ್ಪ, ಧೂಪ, ದೀಪಗಳನ್ನು ಅರ್ಪಿಸುವ ವಿಷಯವಾಗಿ ಶುಕ್ರ ಬಲಿ ಚಕ್ರವರ್ತಿಯೊಂದಿಗೆ ಸಂವಾದಮಾಡಿದ್ದು [ಭಾರ.-ಅನು ೧೫೫] ನೋಡು—ಕಚ, ದೇವಯಾನಿ, ಬೃಹಸ್ಪತಿ, ಯಯಾತಿ, ವಾಮನ, ಜಯಂತ, ಬಲಿ.

(ii) ಶರ್ಯಾತಿ ರಾಜನ ಮಗ. ಪಾಂಡವರಲ್ಲಿ ಧನುರ್ವಿದ್ಯೆಯನ್ನು ಕಲಿತವ [ಭಾರ.-ಆ ೧೩೩].

(iii) ಪಾಂಚಾಲ ದೇಶದ ಅರಸು. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನೇಳನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಭಾರ.-ಕರ್ಣ. ೫೧].

**ಶುನಕ.**—ಒಬ್ಬ ಮಹರ್ಷಿ. ಚ್ಯವನ ಮಹರ್ಷಿಯ ಮಗನಾದ ಪ್ರಮತಿಯೆಂಬವನಿಂದ ಘೃತಾಚಿಯೆಂಬ ಅಪ್ಸರಸಿಯಲ್ಲಿ ಜನಿಸಿದವ. ಈತ ಮೇನಕೆಯೆಂಬ ಅಪ್ಸರಸಿಯ ಪುತ್ರನಾದ ಸ್ಥೂಲಕೇಶನೆಂಬ ಮುನಿಯಿಂದ ಪೋಷಿತೆಯಾದ ಪ್ರಮದ್ವರೆಯೆಂಬವಳನ್ನು ಮದುವೆಯಾಗಿ ಶೌನಕನೆಂಬ ಮಗನನ್ನು ಪಡೆದ [ಭಾರ -ಆ. ೮. ಸಭಾ. ೪. ಅನು. ೮].

**ಶುನಶ್ಶೇಪ.**—ಒಬ್ಬ ಋಷಿ. ಭೃಗು ವಂಶದ ರುಚೀಕ ಮುನಿಯ ಮಧ್ಯಮ ಪುತ್ರ. ಋಚೀಕ ಮುನಿ ಇವನನ್ನು ಹರಿಶ್ಚಂದ್ರ ಮಹಾರಾಜನಿಗೆ ಯಜ್ಞಪಶು ವಾಗಿ ಮಾರಿದ ಶುನಶ್ಶೇಪ ವಿಶ್ವಾಮಿತ್ರನ ಮಂತ್ರಬಲದಿಂದ ಬದುಕಿ, ಮರಳಿ ತನ್ನ ತಾಯ್ತಂದೆಗಳ ಬಳಿಗೆ ಹೋಗಲೊಲ್ಲದೆ ವಿಶ್ವಾಮಿತ್ರನನ್ನೇ ಸೇರಿ, ಆತನ ಅಭಿಮಾನಪುತ್ರನೆನಿಸಿದ ಅಂದಿನಿಂದ ಇವನಿಗೆ ದೇವರಾತನೆಂದು ಹೆಸರಾಯಿತು. ನೋಡು—ಋಚೀಕ, ವಿಶ್ವಾಮಿತ್ರ [ಭಾರ.-ಅನು ೬].

**ಶುನಶ್ಶೇಪನ ಕಥೆ** —[ರಾಮಾ -ಬಾಲ ೬೧. ದೇ.ಭಾ -೭, ೧೬ ಭಾಗ -೯, ೭. ಹರಿ.-೧-೩೭]. (ಋಚೀಕನಿಗೆ ಅಜೀಗರ್ತನೆಂಬುದು ನಾಮಾಂತರವೆಂದು ತೋರುತ್ತದೆ).

**ಶುಂಭ.**—ಒಬ್ಬ ರಾಕ್ಷಸ. ನಿಶುಂಭನೆಂಬವ ಇವನ ತಮ್ಮ. ನೋಡು—ನಿಶುಂಭ [ದೇ.ಭಾಗ -೫, ೨೧-೩೧ ಶಿವ.- ಉಮಾಸಂ ೪೭. ಮಾರ್ಕಂ.-೮೩-೮೫].

**ಶೂದ್ರ.**—ನಾಲ್ಕು ವರ್ಣಗಳಲ್ಲಿ ಒಂದು. ಶೂದ್ರಲಕ್ಷಣ, ಧರ್ಮ ಮುಂತಾದುವು [ಭಾರ.-ಶಾಂತಿ ೧೮೭]. ಶೂದ್ರನಿಗೂ ಕುಲಪತಿಗೂ ನಡೆದ ಸಂವಾದ ಮತ್ತು ಕಥೆ [ಭಾರ.-ಅನು. ೩೧] ಇವರಿಗೆ ವೇದಾಧ್ಯಯನವಿಲ್ಲ [ಭಾರ.-ಅನು. ೩೧. ಅಶ್ವ. ೧೧೮] ಶೂದ್ರಧರ್ಮಗಳು [ಭಾರ -ಅನು ೧೪೬, ೧೪೭. ಅಶ್ವ ೧೧೮].

**ಶೂರ** —(1) ಯದು ವಂಶದ ದೇವಮೀಢನಿಂದ ಮಾರಿಷೆಯೆಂಬವಳಲ್ಲಿ ಜನಿಸಿದವ. ವಸುದೇವ ಮುಂತಾದವರು ಇವನ ಮಕ್ಕಳು [ಭಾರ.-ಆದಿ. ೬೮, ೧೨೦]. ಕುಂತಿ, ಶ್ರುತದೇವಾ (ದಂತವಕ್ರನ ತಾಯಿ), ಶ್ರುತಕೀರ್ತಿ (ಕೇಕಯ ರಾಜನ ಹೆಂಡತಿ), ರಾಜಾಧಿದೇವಿ (ವಿಂದಾನುವಿಂದರ ಜನನಿ), ಶ್ರುತಶ್ರವಾ (ಶಿಶುಪಾಲನ ತಾಯಿ) ಎಂಬ ಐವರು ಇವನ ಪುತ್ರಿಯರು [ಭಾಗ.-೯, ೨೪ ವಿಷ್ಣು -೪-೧೪. ಹರಿ.-೧-೩೪].

(11) ಮಗಧ ದೇಶದ ಅರಸು ದಶರಥನ ಎರಡನೆಯ ಪತ್ನಿಯಾದ ಸುಮಿತ್ರೆ ಈತನ ಮಗಳು [ಭಾರ.-ವನ ೨೭೫]

**ಶೂರತರ** —ಮಹಾ ಬಲಶಾಲಿಯಾದ ಒಬ್ಬ ಅರಸು. ಪಟಚ್ಚರನೆಂಬ ರಾಕ್ಷಸನನ್ನು ಕೊಂದ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿದ. ಈತನ ರಥದ ಕುದುರೆಗಳು ವಜ್ರದ ಬಣ್ಣದ್ದು [ಭಾರ.-ದ್ರೋ. ೨೩].

**ಶೂರಸೇನ.**—(1) ಪಾಂಚಾಲ ರಾಜಪುತ್ರರಲ್ಲಿ ಒಬ್ಬ ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ಹದಿನಾರನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಭಾರ.-ಕರ್ಣ. ೪೩].

(ii) ಒಂದು ದೇಶ. ಕಂಸ ಇದಕ್ಕೆ ಅರಸನಾಗಿದ್ದ ಮಧುರೆ ಇದರ ರಾಜಧಾನಿ [ಭಾರ -ಭೀ. ೯].

(iii) ಕಾರ್ತವೀರ್ಯನ ಮಕ್ಕಳಲ್ಲಿ ಒಬ್ಬ. ಪರಶುರಾಮ ಕಾರ್ತವೀರ್ಯನ ಮಕ್ಕಳನ್ನು ಕೊಲ್ಲಹೋದಾಗ, ಇವ ಅರಣ್ಯಕ್ಕೆ ಓಡಿಹೋಗಿ, ಅವಿತುಕೊಂಡು, ಬದುಕಿಕೊಂಡ [ಮತ್ಸ್ಯ.-೪೩].

**ಶೂರ್ಪಣಖಾ** —ಒಬ್ಬ ರಾಕ್ಷಸಿ ಪುಲಸ್ತ್ಯ ಪುತ್ರನಾದ ವಿಶ್ರವಸನಿಂದ ಕೈಕಸಿ ಯೆಂಬ ರಕ್ಕಸಿಯಲ್ಲಿ ಜನಿಸಿದವಳು ರಾವಣ, ಕುಂಭಕರ್ಣರು ಇವಳ ಅಣ್ಣಂದಿರು ವಿಭೀಷಣ ಇವಳ ತಮ್ಮ ರಾವಣ ಇವಳನ್ನು ವಿದ್ಯುಜ್ಜಿಹ್ವನೆಂಬ ರಾಕ್ಷಸನಿಗೆ ಕೊಟ್ಟು ಮದುವೆಮಾಡಿದ್ದ ಒಮ್ಮೆ ರಾವಣ ದಿಗ್ವಿಜಯಕ್ಕೆ ಹೋಗಿದ್ದಾಗ ವಿದ್ಯುಜ್ಜಿಹ್ವ ಶತ್ರುಪಕ್ಷವನ್ನು ಸೇರಿದ್ದನಾಗಿ ರಾವಣ ಇವನನ್ನು ಕೊಂದ ಬಳಿಕ ಶೂರ್ಪಣಖೆ ರಾವಣನಲ್ಲಿ ಮೊರೆಯಿಡಲಾಗಿ, ರಾವಣ ಹದಿನಾಲ್ಕು ಸಾವಿರ ಸೇನೆಯೊಡನೆ ಇವಳನ್ನು ದಂಡಕಾರಣ್ಯಕ್ಕೆ ಕಳುಹಿ, ಇವಳ ಒತ್ತಾಸೆಗಾಗಿ ಖರಾಸುರನನ್ನು ಕಳುಹಿದ [ರಾಮಾ -ಉತ್ತ ೨೪] ಸೀತಾ ರಾಮ ಲಕ್ಷ್ಮಣರು ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದಾಗ, ಶೂರ್ಪಣಖೆ ಅವರಲ್ಲಿಗೆ ಹೋಗಿ, ರಾಮನನ್ನು ಮೋಹಿಸಿ, ಸೀತೆಯನ್ನು ನುಂಗಹೋಗಿ, ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕುಯಿಸಿಕೊಂಡಳು [ರಾಮಾ.-ಅರಣ್ಯ ೧೭-೧೮] ಶೂರ್ಪಣಖೆ ಖರನಲ್ಲಿಗೆ ಹೋಗಿ ರಾಮನನ್ನು ದೂರಿ, ರಾಮನಮೇಲೆ ಯುದ್ಧಮಾಡುವುದಕ್ಕೆ ಖರನನ್ನು ಕಳುಹಿದ್ದು ಮುಂತಾಗಿ [ರಾಮಾ -ಅರಣ್ಯ. ೧೯-೩೦]. ಶೂರ್ಪಣಖೆ ರಾವಣನಲ್ಲಿಗೆ ಹೋಗಿ, ಖರಾದಿಗಳು ಮಡಿದ ವಾರ್ತೆಯನ್ನು ತಿಳುಹಿ, ಸೀತೆಯನ್ನು ಅಪಹರಿಸುವಹಾಗೆ ರಾವಣನಿಗೆ ಹೇಳಿದ್ದು ಮುಂತಾಗಿ [ರಾಮಾ.-ಅರ. ೩೨-೩೪].

**ಶೂರ್ಪಾರಕ** —ಒಂದು ದೇಶ ಪರಶುರಾಮ ಇಲ್ಲಿ ಕೆಲಕಾಲ ವಾಸವಾಗಿದ್ದ [ಭಾರ.-ಸ ೩೨ ವನ ೮೩ ಶಾಂತಿ. ೪೮] ಇದು ಈಗ ಬೊಂಬಾಯಿ ಆಧಿಪತ್ಯಕ್ಕೆ ಸೇರಿದ ಬಿಜಾಪುರ ಜಿಲ್ಲೆಯಲ್ಲಿ (Shurapalya) ಶೂರಪಾಳ್ಯವೆಂದು ಪ್ರಸಿದ್ಧವಾಗಿದೆ ಕೆಲವರು ಇದನ್ನು ಕೊಂಕಣದೇಶವೆಂದು ಹೇಳುತ್ತಾರೆ

**ಶೃಙ್ಗಬೇರ**.—ಒಂದು ಪಟ್ಟಣ ಗಂಗಾ ನದಿಗೂ ಅಯೋಧ್ಯೆಗೂ ನಡುವೆ ಇದೆ. ರಾಮನ ಆಪ್ತಮಿತ್ರನೂ ಬೆಸ್ತರ ಅರಸನೂ ಆದ ಗುಹ ಇಲ್ಲಿ ರಾಜ್ಯಭಾರ ಮಾಡುತ್ತಿದ್ದ ರಾಮ ಅರಣ್ಯವಾಸಕ್ಕೆ ಹೋಗುವಾಗಲೂ, ಭರತ ರಾಮನನ್ನು ಅರಣ್ಯದಿಂದ ಕರೆತರಬೇಕೆಂದು ಹೊರಟಾಗಲೂ ಇಲ್ಲಿ ಇಳಿದಿದ್ದರು ನೋಡು—ಗುಹ [ರಾ. ಅಯೋ. ೫೦, ೮೩. ಭಾರ.-ವನ. ೮೩]. ಇದು ಈಗ ಅಲಹಾಬಾದಿಗೆ ವಾಯುವ್ಯ

ದಿಕ್ಕಿನಲ್ಲಿ ಹದಿನೆಂಟು ಮೈಲುಗಳ ದೂರದಲ್ಲಿ ಗಂಗೆಯ ಒಡ್ಡಿನಲ್ಲಿದೆ. ಇದನ್ನು ಈಗ ಶ್ರೀನಗರ (Srinagar) ಎನ್ನುತ್ತಾರೆ.

**ಶೃಙ್ಗವನ್ತ.**—ಒಬ್ಬ ಋಷಿ. ಗಾಲವ ಮುನಿಯ ಮಗ ಈತ ವೃದ್ಧಕನ್ಯೆಯನ್ನು ಮದುವೆಯಾದ. ನೋಡು—ಕುಣಿಗಾರ್ಗ್ಯ, ವೃದ್ಧಕನ್ಯಾ [ಭಾರ.-ಶಲ್ಯ.೫೩].

**ಶೃಙ್ಗಿ.**—ಒಬ್ಬ ಋಷಿ. ಅಂಗಿರಸ ವಂಶದ ಶಮೀಕ ಮುನಿಯ ಮಗ. ಗೋವಿನ ಹೊಟ್ಟೆಯಲ್ಲಿ ಜನಿಸಿದವ [ಭಾರ.-ಆದಿ. ೪೦, ೫೦]. ಪರೀಕ್ಷಿದ್ರಾಜನಿಗೆ ಏಳು ದಿನಗಳಿಗೆ ಹಾವು ಕಚ್ಚಿ ಸಾಯುವಂತೆ ಶಾಪಕೊಟ್ಟ [ಭಾಗ.-೧, ೧೮]. ತಾನು ಕೊಟ್ಟ ಶಾಪದ ಯುಕ್ತಾಯುಕ್ತತೆಯ ವಿಚಾರವಾಗಿ ಶೃಂಗಿ ತನ್ನ ತಂದೆಯಾದ ಶಮೀಕ ಮುನಿಯ ಸಂಗಡ ವಿವಾದಮಾಡಿದ್ದು [ಭಾರ.-ಆದಿ. ೪೨]. ನೋಡು—ಪರೀಕ್ಷಿತ್, ಶಮೀಕ.

**ಶೃಙ್ಗಾಟಕವ್ಯೂಹ.**—ಪಟ್ಟಣದ ನಾಲ್ಕು ಬೀದಿಗಳು ಸೇರುವ ಚೌಕಕ್ಕೆ ಶೃಂಗಾಟಕವೆಂದು ಹೆಸರು. ಶೃಂಗಾಟಕದಂತೆ ಸೇನೆಯನ್ನು ಏರ್ಪಡಿಸುವಿಕೆ. ಭಾರತಯುದ್ಧದ ಎಂಟನೆಯ ದಿನದಲ್ಲಿ ಧೃಷ್ಟದ್ಯುಮ್ನ ಪಾಂಡವಸೇನೆಯನ್ನು ಈ ರೀತಿ ಏರ್ಪಡಿಸಿದ್ದ [ಭಾರ.-ಭೀ. ೮೭].

**ಶೇಷ.**—ಸರ್ಪರಾಜ ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವ. ಈತನಿಗೆ ಸಾವಿರ ಹೆಡೆಗಳಿವೆ ತನ್ನ ಒಡಹುಟ್ಟಿದವರು ತಮ್ಮ ಬಲತಾಯಿಯಾದ ವಿನತೆಯ ವಿಷಯದಲ್ಲಿ ಮಾಡಿದ ಅಪಚಾರಕ್ಕೆ ನೊಂದು, ಒಡಹುಟ್ಟಿದವರ ಸಹವಾಸವನ್ನು ದೂರ ಮಾಡಿ, ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಭೂಭಾರವನ್ನು ಹೊರತಕ್ಕ ಸಾಮರ್ಥ್ಯವನ್ನು ಪಡೆದು, ಒಂದು ಅಂಶದಿಂದ ಪಾತಾಳದಲ್ಲಿದ್ದು, ಮತ್ತೊಂದು ಅಂಶದಿಂದ ವಿಷ್ಣುವಿನ ಹಾಸುಗೆಯಾದ [ಭಾರ.-ಆದಿ. ೩೫, ೩೬].

**ಶೈಖಾವತ್ಯ.**—ಒಬ್ಬ ಮಹರ್ಷಿ. ಅಂಬೆ ಭೀಷ್ಮನಿಂದಲೂ ಸಾಲ್ವನಿಂದಲೂ ತಿರಸ್ಕೃತಳಾದ ಬಳಿಕ ಭೀಷ್ಮನನ್ನು ಕೊಲ್ಲುವ ಉದ್ದೇಶದಿಂದ ಈತನ ಆಶ್ರಮದ ಬಳಿ ತಪಸ್ಸುಮಾಡಿ ಶಿಖಂಡಿಯಾಗಿ ಜನಿಸಿದಳು [ಭಾರ.-ಉದ್ಯೋ. ೧೯೫].

**ಶೈಬ್ಯ.**—(i) ಶಿಬಿಯ ವಂಶದವರಿಗೆಲ್ಲ ಈ ಹೆಸರು ಸಲ್ಲುತ್ತದೆ. ನೋಡು—ಕೋಟಿಕಾಸ್ಯ, ವೃಷಾದರ್ಭಿ, ಇತ್ಯಾದಿ.

(ii) ಶ್ರೀಕೃಷ್ಣನ ರಥಕ್ಕೆ ಹೂಡುವ ನಾಲ್ಕು ಕುದುರೆಗಳಲ್ಲಿ ಒಂದು [ಭಾರ.-ವನ. ೨೦. ಅಶ್ವ. ೧೧೮].

**ಶೈಬ್ಯಾ.**—(i) ಶ್ರೀಕೃಷ್ಣನ ಪತ್ನಿಯರಲ್ಲಿ ಒಬ್ಬಳಾದ ಮಿತ್ರವಿಂದೆಗೆ ಈ ಹೆಸರು ಸಲ್ಲುತ್ತದೆ [ಭಾರ.-ಮೌಸ. ೮].

(ii) ಸೂರ್ಯ ವಂಶದ ಸಗರ ರಾಜನ ಹೆಂಡತಿಯಾದ ಸುಮತಿ. ಅಸಮಂಜನ ಜನನಿ [ಭಾರ.-ವನ. ೧೦೫].

(iii) ದ್ಯುಮತ್ಸೇನನ ಹೆಂಡತಿ. ಸತ್ಯವಂತನ ಜನನಿ [ಅನು. ೧೩೮].

**ಶೈಲೂಷ.**—ಒಬ್ಬ ಗಂಧರ್ವ ಈತ ಋಷಭ ಪರ್ವತದಲ್ಲಿ ವಾಸವಾಗಿದ್ದ ಈತನ ಮಗಳಾದ ಸರಮೆ ವಿಭೀಷಣನನ್ನು ಮದುವೆಯಾದಳು [ಸಭಾ. ೧೦. ರಾಮಾ.-ಉತ್ತ. ೧೨].

**ಶೋಣ**—ಭಾರತ ವರ್ಷದ ಒಂದು ನದ (Sone). ಇದು ಮಗಧ ದೇಶಕ್ಕೆ ಪಶ್ಚಿಮದ ಸರಹದ್ದು [ಭೀ. ೯].

**ಶೋಣಾಶ್ವ.**—ದ್ರೋಣಾಚಾರ್ಯನ ರಥದ ಕುದುರೆಗಳು ಶೋಣ (ಕೆಂಪು) ಬಣ್ಣದ್ದು. ಆದರಿಂದ ಈ ಹೆಸರು ಭಾರತದಲ್ಲಿ ದ್ರೋಣಾಚಾರ್ಯನಿಗೆ ಅನ್ವಯಿಸುತ್ತದೆ [ಭಾರ.-ವಿರಾ. ೫೬. ದ್ರೋ. ೧೨೫].

**ಶೋಣಿತಪುರ.**—ಬಾಣಾಸುರನ ರಾಜಧಾನಿ [ಭಾಗ.-೧೦-೬೨].

**ಶೌನಕ.**—ಭೃಗು ವಂಶದ ಮಹರ್ಷಿ ನೈಮಿಶಾರಣ್ಯದಲ್ಲಿ ವಾಸವಾಗಿದ್ದ ಕುಲಪತಿ. ಸೂತಪೌರಾಣಿಕನಿಂದ ಪುರಾಣಗಳನ್ನೂ ಇತಿಹಾಸಗಳನ್ನೂ ಕೇಳಿದ ಮಹರ್ಷಿಗಳಲ್ಲಿ ಮುಖ್ಯ. ನೋಡು—ಶುನಕ [ಭಾಗ.-೧, ೪. ಭಾರ.-ಆದಿ. ೧, ೪. ಶಾಂತಿ. ೩೪೮]. ಶೌನಕ ವಂಶವರ್ಣನ [ಭಾರ.-ಆದಿ. ೫].

(ii) ಮತ್ತೊಬ್ಬ ಮಹರ್ಷಿ. ಈತನಿಗೆ ಇಂದ್ರೋತನೆಂಬುದು ನಾಮಾಂತರ. ಪೂರು ಪುತ್ರನಾದ ಜನಮೇಜಯ ರಾಜ ಬ್ರಹ್ಮಹತ್ಯೆಗೆ ಗುರಿಯಾಗಿದ್ದಾಗ ಈತ ಜನಮೇಜಯನಿಂದ ಅಶ್ವಮೇಧ ಯಾಗವನ್ನು ಮಾಡಿಸಿ, ಆತನ ಬ್ರಹ್ಮಹತ್ಯಾಪಾಪವನ್ನು ತೊಲಗಿಸಿದ [ಭಾರ.-ಶಾಂ. ೧೪೯-೧೫೧].

**ಶ್ಯೇನಜಿತ್.**—ಇಕ್ಷ್ವಾಕು ವಂಶದ ಪರೀಕ್ಷಿತನ ಮಗನಾದ ದಲ ರಾಜನ ಮಗ. ನೋಡು—ದಲ. ದಲನ ತರುವಾಯ ಅರಸನಾದ [ಭಾರ.-ವನ. ೧೯೫].

**ಶ್ಯೇನವ್ಯೂಹ**—ಸೇನೆಯನ್ನು ಗಿಡಿಗದ ಆಕಾರದಲ್ಲಿ ಏರ್ಪಡಿಸುವುದು. ಭಾರತ ಯುದ್ಧದ ಐದನೆಯ ದಿನ ಧೃಷ್ಟದ್ಯುಮ್ನ ಪಾಂಡವ ಸೇನೆಯನ್ನು ಈ ರೂಪದಿಂದ ಏರ್ಪಡಿಸಿದ್ದ [ಭೀ. ೬೯].

**ಶ್ಯೇನಿ.**—ಕಶ್ಯಪ ಮುನಿಯಿಂದ ತಾಮ್ರಾಯೆಂಬವಳಲ್ಲಿ ಜನಿಸಿದವಳು. ವಿನತೆಯ ಮಗನಾದ ಅರುಣನ ಹೆಂಡತಿ. ಸಂಪಾತಿ, ಜಟಾಯುಗಳು ಈಕೆಯ ಮಕ್ಕಳು [ಭಾರ.-ಆದಿ. ೬೭].

**ಶ್ರದ್ಧಾ.**—(i) ಸ್ವಾಯಂಭುವ ಮನ್ವಂತರದ ದಕ್ಷಬ್ರಹ್ಮನ ಮಗಳು. ಧರ್ಮಋಷಿಯ ಪತ್ನಿ [ಆದಿ. ೬೭].

(ii) ಸೂರ್ಯನ ಮಗಳು [ಶಾಂ. ೨೭೦].

**ಶ್ರವಣ.**—ಒಂದು ನಕ್ಷತ್ರ. ಚಂದ್ರನ ಹೆಂಡತಿ. ದಕ್ಷನ ಮಗಳು [ಆದಿ. ೬೭].

**ಶ್ರಾದ್ಧ.**—ಪಿತೃಪ್ರೀತಿಗಾಗಿ ಮಾಡತಕ್ಕ ಕರ್ಮವಿಶೇಷ. ದೌಹಿತ್ರ, ಕುಶ, ತಿಲ ಗಳೆಂಬ ಮೂರು ವಸ್ತುಗಳು ಶ್ರಾದ್ಧಕ್ಕೆ ಪವಿತ್ರಕರಗಳು [ಭಾರ.-ಆದಿ. ೮೭]. ಶ್ರಾದ್ಧ ದಲ್ಲಿ ಉಪಯೋಗಿಸಲಾಗದ ಧಾನ್ಯಗಳು [ಅನು. ೧೩೮] ಶ್ರಾದ್ಧಕ್ಕೆ ಅನರ್ಹರಾದ ಬ್ರಾಹ್ಮಣರು [ಅನು. ೬೧]. ಶ್ರಾದ್ಧ ದಿನದ ನಿಯಮಗಳು [ಅನು. ೧೮೮]. ಶ್ರಾದ್ಧ ಪ್ರಕರಣ [ಭಾರ.-ಅನು ೧೩೪-೧೩೯, ೧೮೮, ೨೩೮. ಹರಿ -೧. ೧೬-೨೪. ಗರುಡ.- ೨೧೮-೨೨೦ ಮಾರ್ಕಂ -೨೮-೩೧ ಮತ್ಸ್ಯ.-೧೬-೨೨]. ಯುಧಿಷ್ಠಿರ ಭಾರತಯುದ್ಧ ದಲ್ಲಿ ಮಡಿದ ತನ್ನ ಬಂಧುಗಳಿಗೆ ಶ್ರಾದ್ಧಮಾಡಿದ್ದು [ಸ್ತ್ರೀ. ೨೬-೨೭].

**ಶ್ರಾವಸ್ತ.**—ಸೂರ್ಯವಂಶದ ಯುವನಾಶ್ವರಾಜನ ಮಗ. ಇವ ಶ್ರಾವಸ್ತಿ ಯೆಂಬ ಪಟ್ಟಣವನ್ನು ಕಟ್ಟಿದ. ಇವನ ಮಗ ಬೃಹದಶ್ವ [ವನ. ೨೦೫]

**ಶ್ರಾವಸ್ತಿ**—ಮೇಲೆ ಹೇಳಿದ ಶ್ರಾವಸ್ತ ನಿರ್ಮಿಸಿದ ಪಟ್ಟಣ. ಇದು ಕೋಸಲ ದೇಶಕ್ಕೆ ರಾಜಧಾನಿಯಾಗಿತ್ತು. ಶ್ರೀರಾಮ ಅವತಾರವನ್ನು ಪೂರ್ತಿಗೊಳಿಸಿದ ತರುವಾಯ ಆತನ ಮಗನಾದ ಲವ ಇಲ್ಲಿ ರಾಜ್ಯಭಾರಮಾಡಿದ. ಇದಕ್ಕೆ ಉತ್ತರ ಕೋಸಲವೆಂಬ ನಾಮಾಂತರವೂ ಇದೆ [ರಾಮಾ.-ಉತ್ತ ೧೦೬].

**ಶ್ರೀ.**—ಮಹಾಲಕ್ಷ್ಮಿ. ನೋಡು—ಲಕ್ಷ್ಮಿ. ಮಹಾವಿಷ್ಣುವಿನ ಪತ್ನಿ. ಕ್ಷೀರ ಸಮುದ್ರದಿಂದ ಜನಿಸಿದವಳು [ವಿಷ್ಣು.-೧, ೯. ಭಾರ -ಆದಿ. ೧೮. ಭಾಗ.-೮, ೮]. ನೋಡು—ಭೃಗು, ಭಾರ್ಗವಿ [ಆದಿ.-೬೭. ಭಾಗ.-೪ ೧]. ಲಕ್ಷ್ಮಿ ತಾನು ವಾಸ ಮಾಡತಕ್ಕ ಸ್ಥಳಗಳನ್ನು ರುಕ್ಮಿಣಿಗೆ ಹೇಳಿದ್ದು [ಭಾರ -ಅನು ೩೨]. ಬಲಿಚಕ್ರವರ್ತಿ ಯನ್ನು ವಾಮನಮೂರ್ತಿ ನಿಗ್ರಹಿಸಿದ ಬಳಿಕ ಲಕ್ಷ್ಮಿ ಬಲಿಯ ದೇಹದಿಂದ ಹೊರ ಬಂದದ್ದು, ಬಲಿಗೂ ಲಕ್ಷ್ಮಿಗೂ ಸಂವಾದ [ಶಾಂತಿ -೨೩೨].

**ಶ್ರೀದೇವಾ.**—ವಸುದೇವನ ಪತ್ನಿಯರಲ್ಲಿ ಒಬ್ಬಳು. ನೋಡು—ವಸುದೇವ.

**ಶ್ರೀಮತಿ.**—ಅಂಬರೀಷರಾಜನ ಮಗಳು. ಪರ್ವತ, ನಾರದರಿಬ್ಬರೂ ಈಕೆ ಯನ್ನು ಮೋಹಿಸಿರಲಾಗಿ ವಿಷ್ಣು ಈಕೆಯನ್ನು ಅಪಹರಿಸಿ ನಾರದನಿಂದ ಶಾಪ ಪಡೆದ. ನೋಡು—ವಿಷ್ಣು [ಶಿವ.-ಸೃ. ೩].

**ಶ್ರುತ.**—ದ್ರುಪದ ರಾಜನ ಮಗ. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಅಶ್ವತ್ಥಾಮನಿಂದ ಮಡಿದ [ಭಾರ.-ದ್ರೋ. ೧೫೭].

**ಶ್ರುತಕರ್ಮಾ.**—ಅರ್ಜುನನಿಂದ ದ್ರೌಪದಿಯಲ್ಲಿ ಜನಿಸಿದವ. ಉಪಪಾಂಡವರಲ್ಲಿ ಒಬ್ಬ. ಇವನಿಗೆ ಶ್ರುತಕೀರ್ತಿಯೆಂಬುದು ನಾಮಾಂತರ [ಆದಿ. ೨೪೭]. ಭಾರತ ಯುದ್ಧದ ಹದಿನಾರನೆಯ ದಿನ ಶಲ್ಯನೊಂದಿಗೆ ಯುದ್ಧಮಾಡಿ ಸೋತ [ಭಾರ.-ಕರ್ಣ.

೧೩]. ಭಾರತಯುದ್ಧ ಮುಗಿದ ರಾತ್ರಿ ಶಿಬಿರದಲ್ಲಿ ಮಲಗಿರುವಾಗ ಅಶ್ವತ್ಥಾಮನು ಇವನನ್ನು ಕೊಂದ [ಸೌಪ್ತಿ. ೮]

**ಶ್ರುತಕೀರ್ತಿ.**—(i) ದ್ರೌಪದಿಯಲ್ಲಿ ಅರ್ಜುನನಿಂದ ಜನಿಸಿದವ. ನೋಡು—ಶ್ರುತಕರ್ಮ.

(ii) ಶತ್ರುಘ್ನನ ಹೆಂಡತಿ. ಜನಕ ರಾಜನ ತಮ್ಮನಾದ ಕುಶಧ್ವಜನ ಮಗಳು. ನೋಡು—ಶತ್ರುಘ್ನ.

(iii) ಯದು ವಂಶದ ಶೂರ ರಾಜನ ಮಗಳು. ವಸುದೇವನ ತಂಗಿ. ಕೇಕಯ ದೇಶದ ಅರಸನಾದ ಧೃಷ್ಟಕೇತು ರಾಜನ ಹೆಂಡತಿ ಇವಳಿಗೆ ಸಂತರ್ದನನೇ ಮೊದಲಾದ ಐವರು ಪುತ್ರರು [ಹರಿ.-೧-೩೪. ಭಾಗ.-೯-೨೪. ವಿಷ್ಣು.-೪-೧೪]

**ಶ್ರುತಞ್ಜಯ.**—ತ್ರಿಗರ್ತ ದೇಶದ ಅರಸು ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನಾರನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಹತನಾದ [ಭಾರ.-ಕರ್ಣ. ೧೮].

**ಶ್ರುತದೇವ.**—ಒಬ್ಬ ಬ್ರಾಹ್ಮಣ ಮಿಥಿಲಾ ನಗರದಲ್ಲಿ ವಾಸವಾಗಿದ್ದ ಕೃಷ್ಣ ಈತನ ಸಚ್ಚಾರಿತ್ರಕ್ಕೆ ಮೆಚ್ಚಿ, ಮಿಥಿಲೆಗೆ ಹೋಗಿ ಈತನಲ್ಲಿ ಕೆಲವು ಕಾಲ ವಾಸವಾಗಿದ್ದ. ನೋಡು—ಬೃಹದಶ್ವ [ಭಾಗ.-೧೦-೮೬]

**ಶ್ರುತದೇವಾ**—ಯದು ವಂಶದ ಶೂರ ರಾಜನ ಮಗಳು. ಕುಂತಿಯ ತಂಗಿ. ಕರೂಶ ದೇಶಾಧಿಪತಿಯಾದ ವೃದ್ಧಶರ್ಮನನ್ನು ಮದುವೆಯಾಗಿ ದಂತವಕ್ರನನ್ನು ಹೆತ್ತಳು [ಹರಿ.-೧-೩೪ ಭಾಗ.-೯-೨೪. ವಿಷ್ಣು.-೪-೧೪].

**ಶ್ರುತರ್ವ.**—ಒಬ್ಬ ಅರಸು ಅಗಸ್ತ್ಯ ಮುನಿ ಈತನಲ್ಲಿಗೆ ಒಮ್ಮೆ ದ್ರವ್ಯವನ್ನು ಬೇಡಹೋದ ಈತನಲ್ಲಿ ಹಣವಿರಲಿಲ್ಲ. ಋಷಿಯನ್ನು ಬ್ರಧ್ನಾಶ್ವನಲ್ಲಿಗೆ ಕರೆದುಯ್ದ. ನೋಡು—ಬ್ರಧ್ನಾಶ್ವ [ಭಾರ.-ವನ. ೯೬].

**ಶ್ರುತಶ್ರವಸ್.**—ಪಾಂಡವರ ಮರಿಮಗನಾದ ಜನಮೇಜಯನ ಪುರೋಹಿತನಾದ ಸೋಮಶ್ರವಸನಿಂದ ಸರ್ಪಿಣಿಯಲ್ಲಿ (ನಾಗರಹಾವಿನಲ್ಲಿ) ಜನಿಸಿದವ [ಭಾರ.-ಆದಿ. ೩, ೫೩].

**ಶ್ರುತಶ್ರವಾ.**—ಶೂರ ರಾಜನ ಮಗಳು. ಕುಂತಿಯ ತಂಗಿ. ಚೇದಿ ರಾಜನಾದ ದಮಘೋಷನ ಹೆಂಡತಿ ಶಿಶುಪಾಲನ ಜನನಿ ನೋಡು—ಶಿಶುಪಾಲ.

**ಶ್ರುತಸೇನ.**—(i) ಪಾಂಡು ಪುತ್ರನಾದ ಸಹದೇವನಿಂದ ದ್ರೌಪದಿಯಲ್ಲಿ ಜನಿಸಿದವ [ಭಾರ.-ಆದಿ. ೬೩, ೬೪, ೨೪೭] ಯುದ್ಧ ಮುಗಿದ ರಾತ್ರಿ ಅಶ್ವತ್ಥಾಮನಿಂದ ಮಡಿದ [ಸೌಪ್ತಿ. ೮].

(ii) ಅಭಿಮನ್ಯುಪುತ್ರನಾದ ಪರೀಕ್ಷಿದ್ರಾಜನ ಮಗ. ಜನಮೇಜಯನ ತಮ್ಮ [ಆದಿ. ೩].

**ಶ್ರುತಸೇನಾ.**—ಕೇಕಯ ರಾಜನಾದ ಶಾರದಂಡಾಯನಿಯೆಂಬ ಅರಸನ ಹೆಂಡತಿ. ದುರ್ಜಯ ಮೊದಲಾದವರು ಈಕೆಯ ಪುತ್ರರು [ಆದಿ. ೧೨೬].

**ಶ್ರುತಾಯು.**—ಕಳಿಂಗ ದೇಶದ ಅರಸು. ಅಶ್ರುತಾಯುವೆಂಬವ ಇವನ ತಮ್ಮ [ಕರ್ಣ. ೭೬]. ದುರ್ಯೋಧನನ ಪರವಾಗಿ ಹೋರಾಡಿ ಭಾರತಯುದ್ಧದ ಎರಡನೆಯ ದಿನ ಭೀಮನಿಂದ ಸೋತ [ಭೀಷ್ಮ ೫೪]. ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಇವನೂ ಇವನ ಮಕ್ಕಳು ದೀರ್ಘಾಯು, ನಿಯತಾಯು ಎಂಬವರೂ ಕೂಡ ಅರ್ಜುನನಿಂದ ಮಡಿದರು [ಭಾರ.-ದ್ರೋ. ೯೩]

**ಶ್ರುತಾಯುಧ.**—ಕಳಿಂಗದೇಶದ ಅರಸು. ವರುಣನಿಂದ ಪರ್ಣಾಶಾ ನದಿಯಲ್ಲಿ ಜನಿಸಿದವ. ದುರ್ಯೋಧನ ಪಕ್ಷದವ. ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಕೃಷ್ಣನನ್ನು ಕೊಲ್ಲುವುದಕ್ಕಾಗಿ ಗದೆಯನ್ನು ಎಸೆದ ಆ ಗದೆ ಹಿಂದಿರುಗಿ ಇವನನ್ನೇ ಕೊಂದಿತು [ದ್ರೋ. ೯೨].

**ಶ್ರುತಾವತಿ.**—ಭರದ್ವಾಜನೆಂಬ ಬ್ರಾಹ್ಮಣನ ಮಗಳು ಈಕೆ ಇಂದ್ರನನ್ನೇ ಮದುವೆಯಾಗಬೇಕೆಂದು ತಪಸ್ಸುಮಾಡಿದಳು. ಇಂದ್ರ ಬ್ರಾಹ್ಮಣರೂಪದಿಂದ ಇವಳಲ್ಲಿಗೆ ಬಂದು ಕೆಲವು ಬೋರೆಕಾಯಿಗಳನ್ನು ತಂದುಕೊಟ್ಟು "ಇವುಗಳನ್ನು ಬೇಯಿಸು" ಎಂದ. ಇವಳು ಎಷ್ಟು ಪಾಡುಪಟ್ಟರೂ ಅವು ಬೇಯಲಿಲ್ಲ ಸೌದೆಯೆಲ್ಲ ಮುಗಿದುಹೋಯಿತು. ಆಗ ಶ್ರುತಾವತಿ ತನ್ನ ಎರಡು ಕಾಲುಗಳನ್ನೂ ಒಲೆಯೊಳಗೆ ಸುಟ್ಟು ಅವುಗಳನ್ನು ಬೇಯಿಸಿದಳು ಇಂದ್ರ ಇವಳ ಪಾತಿವ್ರತ್ಯಕ್ಕೆ ಮೆಚ್ಚಿ, ನಿಜ ರೂಪವನ್ನು ತೋರಿ ಆಕೆಯನ್ನು ಸ್ವರ್ಗಕ್ಕೆ ಕರೆದುಯ್ದು ಮದುವೆಯಾದ [ಭಾರ - ಶಲ್ಯ. ೪೯].

**ಶ್ರೇಣಿಮನ್ತ.**—(i) ಒಬ್ಬ ಅರಸು. ಗೋಶೃಂಗ ಪರ್ವತದ ಶಿಖರದಲ್ಲಿ ವಾಸವಾಗಿದ್ದವ. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿದ [ಭಾರ -ಆದಿ. ೬೮, ೨೦೧. ಸಭಾ. ೩೨]. ಅತಿರಥ [ಉದ್ಯೋ. ೧೫೧, ೧೭೧]. ಹನ್ನೊಂದನೆಯ ದಿನದ ಯುದ್ಧದಲ್ಲಿ ಕೌರವರಿಗೆ ಸೆರೆಸಿಕ್ಕಿದ [ದ್ರೋಣ ೨೩].

(ii) ಕುಮಾರ ದೇಶದ ಅರಸು. ರಾಜಸೂಯ ದಿಗ್ವಿಜಯ ಸಮಯದಲ್ಲಿ ಭೀಮನಿಂದ ಸೋತ [ಭಾರ.-ಸ. ೩೨].

**ಶ್ಲೇಷ್ಮಾತಕ.**—ಒಂದು ತಪೋವನ. ರಾವಣನ ತಂದೆಯಾದ ವಿಶ್ರವಸ ಮುನಿ ಇಲ್ಲಿ ಬಹಳಕಾಲ ತಪಸ್ಸುಮಾಡುತ್ತಿದ್ದ. ಇದು ನರ್ಮದಾ ನದಿಯ ತೀರದಲ್ಲಿದೆ.

ರಾವಣ ಲಂಕೆಯನ್ನು ಜಯಿಸಿದ ಬಳಿಕ ವಿಶ್ರವಸ ರಾವಣನ ಸಂಗಡ ಲಂಕೆಗೆ ಹೋದ [ರಾಮಾ.-ಉತ್ತ. ೧೦].

**ಶ್ವಫಲ್ಕ.**— ಯದು ವಂಶದ ವೃಷ್ಣಿಯ ಮಗ. ಅಕ್ರೂರನ ತಂದೆ. ನೋಡು— ಗಾಂದಿನಿ [ಭಾಗ.-೧೦-೫೭].

**ಶ್ವೇತ.**—(I) ಮತ್ಸ್ಯ ದೇಶಾಧಿಪತಿಯಾದ ವಿರಾಟನ ಹಿರಿಯ ಹೆಂಡತಿಯಾದ ಸುರಥೆಯೆಂಬವಳಲ್ಲಿ ಜನಿಸಿದವ. ಉತ್ತರ ಕುಮಾರನ ಬಲತಮ್ಮ [ಭಾರ.-ವಿರಾ. ೨೧. ಭೀ. ೪೭] ಶಂಖನೆಂಬವನೂ ಇವನೂ ಒಬ್ಬ ತಾಯಿಮಕ್ಕಳು [ವಿರಾ. ೨೧]. ಭಾರತಯುದ್ಧದ ಮೊದಲನೆಯ ದಿನವೇ ಭೀಷ್ಮನಿಂದ ಹತನಾದ [ಭಾರ.-ಭೀ. ೪೮].

(II) ಬಹಳ ಪುರಾತನಕಾಲದ ಒಬ್ಬ ಅರಸು. ವಿದರ್ಭದೇಶದ ಸುದೇವ ರಾಯನ ಮಗ. ಬಹಳಕಾಲದವರೆಗೆ ರಾಜ್ಯಭಾರಮಾಡಿ, ಕಡೆಗೆ ತನ್ನ ತಮ್ಮನಾದ ಸುರಥನಿಗೆ ರಾಜ್ಯಾಧಿಕಾರವನ್ನು ಒಪ್ಪಿಸಿ, ಒಂದು ನಿರ್ಜನಪ್ರದೇಶದಲ್ಲಿ ತಪಸ್ಸು ಮಾಡಿ ಬ್ರಹ್ಮಲೋಕವನ್ನು ಪಡೆದ. ಆದರೆ ಪ್ರತಿದಿನವೂ ತಾನು ತಪಸ್ಸುಮಾಡಿದ ಕೊಳದ ಬಳಿಗೆ ಬಂದು ತನ್ನ ಶವವನ್ನೇ ತಿಂದು ಹೋಗುತ್ತಿದ್ದ. ಇಂತಿರಲು ಒಂದು ದಿನ ಅಗಸ್ತ್ಯ ಮುನಿ ಆ ಪ್ರದೇಶಕ್ಕೆ ತಪಸ್ಸಿಗಾಗಿ ಹೋಗಿರುವಲ್ಲಿ ಆತ ಈ ವಿಚಿತ್ರ ವನ್ನು ಕಂಡು, ಆತನನ್ನು ಪ್ರಶ್ನೆಮಾಡಿ, ಆತನ ಮೂಲಕ ವಿವರವನ್ನು ತಿಳಿದು, ಆತನಿತ್ತ ಆಭರಣವನ್ನು ಸ್ವೀಕರಿಸಿದ ಕೂಡಲೇ ಆ ಶವ ಮಾಯವಾಯಿತು ಶ್ವೇತ ರಾಯ ಸಂತೋಷದಿಂದ ಬ್ರಹ್ಮಲೋಕಕ್ಕೆ ಹೋದ [ರಾಮಾ -ಉತ್ತ ೭೬, ೭೭. ಭಾರ.-ವಿರಾ. ೫೩].

**ಶ್ವೇತಕಿ.**—ಅನುಗಾಲವೂ ಯಜ್ಞಮಾಡುವುದರಲ್ಲಿಯೇ ಆಸಕ್ತನಾಗಿದ್ದ ಒಬ್ಬ ಅರಸು. ಈತ ಮಾಡಿದ ಯಜ್ಞಗಳಲ್ಲಿ ಅಗ್ನಿದೇವನಿಗೆ ಅಜೀರ್ಣವಾದದ್ದು [ಆದಿ. ೨೪೯]. ನೋಡು—ಖಾಂಡವ.

**ಶ್ವೇತಕೇತು.**—ಒಬ್ಬ ಋಷಿ. ಗೌತಮ ವಂಶದ ಉದ್ದಾಲಕನ ಮಗ. ಇವ ನಿಗೆ ಆರುಣಿಯೆಂಬುದು ನಾಮಾಂತರ ನಚಿಕೇತ ಮುನಿ ಈತನ ತಮ್ಮ ಕಹೋಡ ಮುನಿ ಪತ್ನಿಯಾದ ಸುಜಾತೆ ಈತನ ಒಡಹುಟ್ಟಿದವಳು. ಈತ ಸ್ತ್ರೀಪುರುಷರ ನಡೆ ವಳಿಗಳಿಗೆ ಕಟ್ಟುಪಾಡುಗಳನ್ನು ಏರ್ಪಡಿಸಿದ [ಭಾರ.-ಆದಿ ೧೨೮] ಈತ ಜನಮೇ ಜಯನ ಸರ್ಪಯಾಗದಲ್ಲಿ ಸದಸ್ಯನಾಗಿದ್ದ [ಭಾರ -ಆದಿ ೫೩]. ಈತ ದೇವಲ ಮುನಿ ಪುತ್ರಿಯಾದ ಸುವರ್ಚಲೆಯೊಂದಿಗೆ, ಜ್ಞಾನಿಯಾದವನಿಗೆ ಪುರುಷಾರ್ಥಗಳು ಸಿದ್ಧಿ ಸುವ ವಿಷಯವಾಗಿ ಸಂವಾದಮಾಡಿ ಬಳಿಕ ಆಕೆಯನ್ನೇ ಮದುವೆಯಾದ [ಶಾಂತಿ. ೬೪]. ಈತ ಅಷ್ಟಾವಕ್ರನ ಸೋದರಮಾವ [ವನ. ೧೩೪]. ಈತ ಅಷ್ಟಾವಕ್ರನ

ಸಂಗಡ ಜನಕರಾಜನ ಯಜ್ಞಕ್ಕೆ ಹೋಗಿದ್ದ [ಭಾರ.-ವನ. ೧೩೪]. ನೋಡು—ಅಷ್ಟಾವಕ್ರ.

**ಶ್ವೇತದ್ವೀಪ**—ವಿಷ್ಣುವಿನ ವಾಸಸ್ಥಾನ. ಅನಂತಾಸನ, ವೈಕುಂಠ, ಶ್ವೇತದ್ವೀಪಗಳು ಮೂರೂ ವಿಷ್ಣುವಿನ ವಾಸಸ್ಥಾನಗಳು. ಅದರ ವರ್ಣನೆ [ಶಾಂತಿ. ೩೪೩]. ಶ್ವೇತದ್ವೀಪದಲ್ಲಿರುವ ವಿಷ್ಣುವಿನ ಮಹಿಮಾನುವರ್ಣನ [ಶಾಂತಿ -೩೪೬-೩೫೩] ನಾರದ ಅಲ್ಲಿಗೆ ಹೋದದ್ದು. ಶ್ವೇತದ್ವೀಪವನ್ನು ವರ್ಣಿಸಿದ್ದು [ಭಾರ.-ಶಾಂ. ೩೪೩].

**ಶ್ವೇತಪರ್ವತ.**—ಉತ್ತರ ದಿಕ್ಕಿನಲ್ಲಿದೆ [ಭಾರ.-ವನ. ೨೨೭. ಭೀ. ೬]. ರಾಜಸೂಯಯಾಗ ಸಮಯದಲ್ಲಿ ದಿಗ್ವಿಜಯಕ್ಕೆ ಹೋಗಿದ್ದ ಅರ್ಜುನ ಇಲ್ಲಿಗೆ ಹೋಗಿದ್ದ [ಸಭಾ. ೨೮]

**ಶ್ವೇತವರಾಹಕಲ್ಪ**—ಹಿರಣ್ಯಾಕ್ಷನನ್ನು ಕೊಲ್ಲುವುದಕ್ಕಾಗಿ ವಿಷ್ಣು ಈಗ ನಡೆಯುತ್ತಿರುವ ಕಲ್ಪದಲ್ಲಿ ಶ್ವೇತವರಾಹರೂಪದಿಂದ ಅವತರಿಸಿದನಾಗಿ ಈ ಹೆಸರು. ನೋಡು—ಕಲ್ಪ, ವರಾಹ, ಯಜ್ಞವರಾಹ.

**ಶ್ವೇತವಾಹನ.**—ಅರ್ಜುನನ ಕುದುರೆಗಳು ಬಿಳಿಯುವು ಆದುದರಿಂದ ಈ ಹೆಸರು ಆತನಿಗೆ ಸಲ್ಲುತ್ತದೆ [ವಿರಾ. ೪೩.]

**ಶ್ವೇತಾರಣ್ಯ.**—ಕಾವೇರೀ ತೀರದಲ್ಲಿರುವ ಒಂದು ತಪೋವನ. ಮಾರ್ಕಂಡೇಯ ಇಲ್ಲಿ ತಪಸ್ಸುಮಾಡುತ್ತಿದ್ದಾಗ, ಯಮ ಆತನನ್ನು ಎಳೆದುಯ್ಯಬಂದು ಶಿವನಿಂದ ತಿರಸ್ಕೃತನಾದ [ರಾಮಾ.-ಅರ. ೩೦].

## ಷ

**ಷಡಾನನ**—ಕುಮಾರಸ್ವಾಮಿ. ನೋಡು—ಕುಮಾರ, ಗುಹ, ಕಾರ್ತಿಕೇಯ [ಮತ್ಸ್ಯ -೧೫೮. ಶಿವ.-ಕುಮಾರ ೨-೧೦] ಶರವಣದಲ್ಲಿ ಕುಮಾರನ ಉತ್ಪತ್ತಿ [ಶಿವ.-ಕುಮಾರ. ೨]. ಕೃತ್ತಿಕೆಗಳ ಸ್ತನ್ಯವನ್ನು ಪಾನಮಾಡಿ ಕಾರ್ತಿಕೇಯನೆಂಬ ಹೆಸರು ಪಡೆದದ್ದು [ಶಿವ.-ಕುಮಾರ. ೩]. ತಾರಕಾಸುರನ ವಧೆ [ಶಿವ.-ಕುಮಾರ. ೭-೧೦].

**ಷಣ್ಮುಖ.**—ನೋಡು—ಷಡಾನನ.

**ಷಷ್ಠೀ.**—ಕುಮಾರಸ್ವಾಮಿಯ ಹೆಂಡತಿ [ದೇ.ಭಾಗ -೯-೪೬].

**ಷಾಣ್ಮಾತುರ.**—ನೋಡು—ಷಡಾನನ, ಕಾರ್ತಿಕೇಯ.

**ಷೋಡಶಮಹಾದಾನಗಳು.**—ತುಲಾಭಾರ, ಹಿರಣ್ಯಗರ್ಭ, ತಿಲಪರ್ವತ, ಸುವರ್ಣಮೇದಿನೀ, ಕಲ್ಪಪಾದಪ, ಗಣೇಶೇಶ, ಸುವರ್ಣಧೇನು, ಲಕ್ಷ್ಮೀ, ತಿಲಧೇನು, ಗೋಸಹಸ್ರ, ಹಿರಣ್ಯಾಶ್ವ, ಕನ್ಯಾ, ಹಿರಣ್ಯವೃಷಭ, ಗಜ, ಲೋಕಪಾಲಾಷ್ಟಕ, ತ್ರಿಮೂರ್ತಿಪ್ರತಿಮಾದಾನಗಳೆಂಬುದಾಗಿ ಹದಿನಾರು [ಲಿಂಗ.-ಉತ್ತ. ೨೮-೪೪].

**ಷೋಡಶಮಹಾರಾಜರು.**—ಅಭಿಮನ್ಯುವಧೆಯಿಂದ ದುಃಖಿತನಾದ ಯುಧಿಷ್ಠಿರನಿಗೆ ವ್ಯಾಸ ಹೇಳಿದ ೧೬ ಮಂದಿ ರಾಜರ ಕಥೆಗಳು ಮರುತ್ತ, ಸುಹೋತ್ರ, ಅಂಗ, ಶಿಬಿ, ಶ್ರೀರಾಮ, ಭಗೀರಥ, ದಿಲೀಪ, ಮಾಂಧಾತ, ಯಯಾತಿ, ನಭಗನ ಮಗನಾದ ಅಂಬರೀಷ, ಶಶಬಿಂದು, ಗಯ, ರಂತಿದೇವ, ದುಷ್ಯಂತ ಪುತ್ರನಾದ ಭರತ, ವೇನ ರಾಜನ ಮಗನಾದ ಪೃಥು, ಪರಶುರಾಮ ಇವರು ಹದಿನಾರು ಮಂದಿಯೂ ಮಹಾರಾಜರು [ಭಾರ.-ದ್ರೋ ೫೫-೭೦]. ಯುಧಿಷ್ಠಿರನಿಗೆ ಕೃಷ್ಣ ಹೇಳಿದ್ದು [ಶಾಂತಿ ೨೮] ಇದರಲ್ಲಿ ಪರಶುರಾಮನಿಗೆ ಪ್ರತಿಯಾಗಿ ಸಗರ ಚಕ್ರವರ್ತಿಯ ಕಥೆ ವರ್ಣಿತವಾಗಿದೆ.

## ಸ

**ಸಂಜ್ಞಾ.**—ವಿಶ್ವಕರ್ಮನ ಮಗಳು ಇವಳಿಗೆ ಸುರೇಣುವೆಂಬುದು ನಾಮಾಂತರ. ಸೂರ್ಯನನ್ನು ಮದುವೆಯಾಗಿ, ವೈವಸ್ವತ, ಯಮನೆಂಬ ಪುತ್ರರನ್ನೂ ಯಮುನೆಯೆಂಬ ಮಗಳನ್ನೂ ಪಡೆದಳು. ಬಳಿಕ ಸಂಜ್ಞಾದೇವಿ ಸೂರ್ಯನ ತೇಜಸ್ಸನ್ನು ಸಹಿಸಲಾರದೆ ತನ್ನಂತೆಯೇ ಒಬ್ಬ ಸ್ತ್ರೀ ವ್ಯಕ್ತಿಯನ್ನು ಕಲ್ಪಿಸಿ, ಸೂರ್ಯನ ಬಳಿ ಬಿಟ್ಟು ತಾನು ತನ್ನ ತಂದೆಯ ಮನೆಗೆ ಹೋದಳು. ಬಳಿಕ ಛಾಯಾದೇವಿ ಸೂರ್ಯನೊಂದಿಗೆ ಸಂಸಾರಮಾಡಿಕೊಂಡಿದ್ದು, ಸಾವರ್ಣಮನುವನ್ನೂ ಶನೈಶ್ಚರನನ್ನೂ ಪಡೆದಳು. ಛಾಯೆಗೆ ತಾನು ಹೆತ್ತ ಮಕ್ಕಳಲ್ಲಿ ಹೆಚ್ಚು ಮಮತೆಯಿತ್ತು ಯಮ ಇದನ್ನು ಸಹಿಸಲಾರದೆ ತಂದೆಗೆ ಹೇಳಿದ ಸೂರ್ಯ ತನ್ನ ಮನೆಯಲ್ಲಿಯೂ ಹೀಗಾದುದಕ್ಕೆ ತುಂಬ ಪರಿತಾಪಪಟ್ಟು, ಛಾಯಾದೇವಿಯನ್ನು ಕುರಿತು " ಇದೇನು, ಮಕ್ಕಳಲ್ಲಿ ಹೀಗೆ ಪ್ರೀತಿತಾರತಮ್ಯವೇ ? " ಎಂದು ಪ್ರಶ್ನೆಮಾಡಿದ. ಆಕೆ ಯಾವ ಉತ್ತರವನ್ನೂ ಕೊಡಲಿಲ್ಲ. ಸಂಶಯಗ್ರಸ್ತನಾದ ಸೂರ್ಯ ಧ್ಯಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು ಅವಳಿಗೆ ಶಾಪಕೊಡುವುದಕ್ಕಾಗಿ ಮುಂದಲೆಯನ್ನು ಹಿಡಿದ. ಅವಳು ನಡೆದದ್ದನ್ನೆಲ್ಲ ವಿವರಿಸಿದಳು. ಆಗ ಸೂರ್ಯ ಕೋಪಪರವಶನಾಗಿ ತ್ವಷ್ಟೃವಿನ ಬಳಿಗೆ ಹೋದ. ವಿಶ್ವಕರ್ಮ ನಯದಿಂದ ವಿಷಯವನ್ನು ತಿಳುಹಿ, ಸೂರ್ಯನ ತೇಜಸ್ಸನ್ನು ಕುಗ್ಗಿಸಿ, ಮನೋಹರನಾಗುವಂತೆ ಮಾಡಿ ಉತ್ತರ ಕುರುದೇಶದಲ್ಲಿ ಹೆಣ್ಣುಕುದುರೆಯ ರೂಪ

ದಿಂದ ಸಂಚರಿಸುತ್ತಿದ್ದ ಸಂಜ್ಞೆಯಲ್ಲಿಗೆ ಕಳುಹಿದ. ಸೂರ್ಯ ಗಂಡುಕುದುರೆಯ ರೂಪದಿಂದ ಆಕೆಯನ್ನು ಸೇರಿದ. ಕುದುರೆಯ ರೂಪದಿಂದಿದ್ದ ಸಂಜ್ಞಾದೇವಿ ಸೂರ್ಯನೆಂದು ಗುರುತಿಸದೆ ಆತನ ತೇಜಸ್ಸನ್ನು ಮೂಗಿನ ಹೊಳ್ಳೆಗಳಿಂದ ಹೊರಚೆಮ್ಮಲಾಗಿ, ಒಡನೆಯೇ ಅಶ್ವಿನೀದೇವತೆಗಳು ಜನಿಸಿದರು. ಒಡನೆಯೇ ಸೂರ್ಯ ನಿಜರೂಪವನ್ನು ಧರಿಸಿ, ಆಕೆಯನ್ನು ಸಂತೋಷಪಡಿಸಿ ಕರೆತಂದ [ಶಿವ.-ಉಮಾ. ೩೫. ಹರಿ.-೧, ೯. ಮಾರ್ಕಂ. ೧೦೯].

**ಸಂನ್ಯಾಸ.**—ನಾಲ್ಕನೆಯ ಆಶ್ರಮ. ಮೋಕ್ಷಸಂಪಾದನೆಗೆ ಇದು ಸಾಧಕವಾದದ್ದು [ಭಾರ.-ಅಶ್ವ. ४೭].

**ಸಂನ್ಯಾಸಿ.**—ಸಂನ್ಯಾಸವನ್ನು ಸ್ವೀಕರಿಸಿದವ. ನೋಡು—ಯತಿ.

**ಸಂಯಮಿನಿ.**—ಮಾನಸೋತ್ತರ ಪರ್ವತಕ್ಕೆ ದಕ್ಷಿಣದಲ್ಲಿರುವ ಒಂದು ಪಟ್ಟಣ. ಯಮನ ರಾಜಧಾನಿ [ಭಾರ.-ವನ. ೧೬೩].

**ಸಂಯೋಧಕಂಟಕ**—ಕುಬೇರನ ಸೇವಕ. ರಾವಣ ಕುಬೇರನ ಮೇಲೆ ದಂಡೆತ್ತಿ ಬಂದಾಗ, ಇವ ರಾವಣನನ್ನು ಇದಿರಿಸಿ ಸೋತ [ರಾಮಾ.-ಉತ್ತ. ೧४]

**ಸಂವರಣ.**—ಪುರು ವಂಶದ ಅಜಮೀಢನ ಸಂತತಿಯವನಾದ ಋಕ್ಷ ರಾಜನ ಮಗ. ಸೂರ್ಯ ಪುತ್ರಿಯಾದ ತಪತಿಯನ್ನು ಮದುವೆಯಾಗಿ ಕುರು ರಾಜನನ್ನು ಪಡೆದ. ನೋಡು—ತಪತಿ, ಕುರು [ಭಾರ.-ಆ. ೬೩, ೧೦೧, ೧४೭, ೧४೯].

**ಸಂವರ್ತ.**—ಒಬ್ಬ ಋಷಿ. ಅಂಗಿರಸನ ಮಗ. ಉಚಥ್ಯ, ಬೃಹಸ್ಪತಿಗಳಿಬ್ಬರೂ ಈತನ ಒಡಹುಟ್ಟಿದವರು [ಭಾರ.-ಆ. ೬೭. ಸ. ೭. ಅನು. ೧೩೨]. ಈತ ಬೃಹಸ್ಪತಿಯ ಬಾಧೆಯನ್ನು ತಪ್ಪಿಸಿಕೊಳ್ಳಲಾರದೆ ಅರಣ್ಯಕ್ಕೆ ಹೋದ [ಭಾರ.-ಅಶ್ವ. ೫]. ಈತ ಮರುತ್ತ ರಾಜನಿಂದ ಯಜ್ಞಮಾಡಿಸಿದ್ದು [ಅಶ್ವ. ೯]. ಅದೇ ಸಂದರ್ಭದಲ್ಲಿ ತನ್ನನ್ನು ಕೊಲ್ಲಬಂದ ಇಂದ್ರನ ತೋಳನ್ನು ಸ್ತಂಭನಮಾಡಿದ್ದು [ಭಾರ.-ಅಶ್ವ. ೧೦]. ನೋಡು—ಮರುತ್ತ.

**ಸಂಶಪ್ತಕ.**—ಯುದ್ಧದಲ್ಲಿ ಶಪಥಮಾಡಿ (ಆಣೆಯಿಟ್ಟು) ಯುದ್ಧಮಾಡತಕ್ಕವರಿಗೆಲ್ಲ ಈ ಹೆಸರು ಸಲ್ಲುತ್ತದೆ. ಸಾಮಾನ್ಯವಾಗಿ ಭಾರತಯುದ್ಧದಲ್ಲಿ ತ್ರಿಗರ್ತ ರಾಜನಾದ ಸುಶರ್ಮ, ಅವನ ತಮ್ಮಂದಿರಾದ ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ ಇವರೈವರಿಗೂ ಈ ಹೆಸರು ರೂಢಿಯಲ್ಲಿದೆ. ಇವರು ಒಂಬತ್ತು ಕೋಟಿ ಸೈನ್ಯದೊಂದಿಗೆ ಶಪಥಪೂರ್ವಕವಾಗಿ ಯುದ್ಧಮಾಡಿ, ಅರ್ಜುನನನ್ನು ಇದಿರಿಸಿ ಮಡಿದರು [ಭಾರ.-ಆ. ೨. ದ್ರೋ. ೧೭-೨೭. ಕರ್ಣ. ೧೮, ४೮, ೫೫].

**ಸಂಸಾರ.**—ಸಂಸಾರವನ್ನು ಅರಣ್ಯವಾಗಿ ಬಣ್ಣಿಸಿದ್ದು [ಭಾರ.-ಸ್ತ್ರೀ. ೫]. ಸಂಸಾರವನ್ನು ನದೀ ರೂಪವಾಗಿ ವರ್ಣನೆ [ಶಾಂತಿ, ೨೫೬]. ಪುರಂಜನೋಪಾಖ್ಯಾನ

ಸಂದರ್ಭದಲ್ಲಿ ಸಂಸಾರವನ್ನು ಪರೋಕ್ಷರೂಪದಿಂದ ವರ್ಣನೆಮಾಡಿದ್ದು [ಭಾಗ.-೪, ೨೫-೨೯].

**ಸಂಹ್ರಾದ.**—ಹಿರಣ್ಯಕಶಿಪುವಿನ ಮಗ [ಆದಿ. ೬೬] ಇವ ಹಿರಣ್ಯಕಶಿಪುವಿನಿಂದ ಕಯಾಧುವಿನಲ್ಲಿ ಜನಿಸಿದವ. ಪ್ರಹ್ಲಾದನ ತಮ್ಮ ಕೃತಿಯೆಂಬ ತರುಣಿಯಲ್ಲಿ ಪಂಚಜನನೆಂಬ ಪುತ್ರನನ್ನು ಪಡೆದ [ಭಾಗ.-೧೦, ೪೫].

**ಸಕ್ತುಪ್ರಸ್ಥ.**—ಉಂಛವೃತ್ತಿಯಿಂದ ಜೀವಿಸುತ್ತಿದ್ದ ಒಬ್ಬ ಬ್ರಾಹ್ಮಣ. ಯುಧಿಷ್ಠಿರನ ಅಶ್ವಮೇಧಯಾಗ ಮುಗಿದ ಬಳಿಕ ಒಂದು ಅಣಿಲು ಹೊರಬಂದು ಯುಧಿಷ್ಠಿರ ಮಾಡಿದ ಯಜ್ಞವನ್ನು ಅಲ್ಲಗಳೆದು ಸಕ್ತುಪ್ರಸ್ಥಮಾಡಿದ ಯಜ್ಞವನ್ನು ಕೊಂಡಾಡಿತು [ಭಾರ.-ಅಶ್ವ. ೯೨].

**ಸಗರ.**—ಇಕ್ಷ್ವಾಕು ವಂಶದ ಅಸಿತ ಅಥವಾ ಬಾಹುಕ ರಾಜನ ಮಗ. ಈತನಿಗೆ ಇಬ್ಬರು ಪತ್ನಿಯರು ಒಬ್ಬಳು ವಿದರ್ಭ ರಾಜಪುತ್ರಿ, ಇನ್ನೊಬ್ಬಳು ಶಿಬಿ ರಾಜಪುತ್ರಿ. ವೈದರ್ಭಿ ಅರುವತ್ತು ಸಾವಿರ ಪುತ್ರರನ್ನೂ, ಶೈಬ್ಯೆ ಅಸಮಂಜನೆಂಬ ಒಬ್ಬ ಮಗನನ್ನೂ ಹೆತ್ತರು [ಭಾರ.-ವನ. ೧೦೫]. ಇವ ಯಮ ಸಭೆಯಲ್ಲಿದ್ದಂತೆ ವರ್ಣನೆ [ಸಭಾ. ೮]. ಉತ್ತರಗೋಗ್ರಹಣ ಸಮಯದಲ್ಲಿ ಇಂದ್ರನ ವಿಮಾನದಲ್ಲಿ ಕುಳಿತು ಯುದ್ಧವನ್ನು ನೋಡಬಂದಿದ್ದ [ವಿರಾ. ೫೩]. ಈತನಿಗೆ ಇಬ್ಬರು ಪತ್ನಿಯರು. ಕಶ್ಯಪನ ಮಗಳಾದ ಸುಮತಿಯೊಬ್ಬಳು, ವಿದರ್ಭ ರಾಜಪುತ್ರಿಯಾದ ಕೇಶಿನಿಯೆಂಬವಳೊಬ್ಬಳು. ನೋಡು—ಕೇಶಿನಿ [ವಿಷ್ಣು -೪, ೪]. ಮುಕ್ತಿಸಾಧನಗಳ ವಿಷಯವಾಗಿ ಅರಿಷ್ಟನೇಮಿಯೊಂದಿಗೆ ಸಂವಾದ [ಶಾಂ. ೨೯೪] ಇವ ಅಶ್ವಮೇಧಯಾಗಮಾಡಿದ್ದು [ವನ. ೧೦೬. ರಾ.-ಬಾಲ. ೩೮]. ಸಗರನ ತಂದೆಯಾದ ಬಾಹುಕ ರಾಜ ವಿಷಯಲಂಪಟನೂ ದ್ಯೂತಾಸಕ್ತನೂ ಆಗಿದ್ದ ಕಾರಣ ಹೈಹಯ ವಂಶದವರು ಇವನ ರಾಜ್ಯವನ್ನು ಕಿತ್ತುಕೊಂಡರು. ಬಾಹುಕ ರಾಜ ತನ್ನ ಇಬ್ಬರು ಪತ್ನಿಯರ ಸಂಗಡ ಕಾಡಿಗೆ ಹೋಗಿ ಸತ್ತ. ಆಗ್ಗ ಸಗರನ ಜನನಿಯಾದ ಯಾದವಿ ಗರ್ಭಿಣಿಯಾಗಿದ್ದಳು. ಇವಳ ಸವತಿ ಯಾದವಿಗೆ ವಿಷವನ್ನು ಕೊಟ್ಟಿದ್ದಳು. ಯಾದವಿ ಸಹಗಮನಮಾಡುವ ಉದ್ದೇಶದಿಂದ ಚಿತಿಯನ್ನು ಏರಿದ್ದಳು. ಆಗ ಭಾರ್ಗವ ಮುನಿ ಯಾದವಿಯನ್ನು ತಡೆದು ನಿಲ್ಲಿಸಿದ. ಯಾದವಿ ಭಾರ್ಗವನ ಆಶ್ರಮದಲ್ಲಿಯೇ ಪ್ರಸವಿಸಿದಳು. ಇವ ಹುಟ್ಟುವಾಗಲೇ ಸ+ಗರ = ಸಗರನಾಗಿ (ವಿಷಸಹಿತವಾಗಿ) ಜನಿಸಿದ ಕಾರಣ ಭಾರ್ಗವ ಮುನಿ ಇವನಿಗೆ ಸಗರನೆಂದು ಹೆಸರಿಟ್ಟು ಸಕಲ ವೇದಶಾಸ್ತ್ರಗಳನ್ನೂ ಪಾಠ ಹೇಳಿ ದಿವ್ಯವಾದ ಆಗ್ನೇಯಾಸ್ತ್ರವನ್ನು ಅನುಗ್ರಹಿಸಿದ. ಅದರ ಬಲದಿಂದ ಸಗರ ತನ್ನ ತಂದೆಯ ರಾಜ್ಯವನ್ನು ಮರಳಿ ಪಡೆದ [ಹರಿ.-೧, ೧೪, ೧೫]. ಸಗರನ ಕಥೆ

[ರಾಮಾ.-ಬಾಲ. ೩೮. ವಿಷ್ಣು.-೪, ೩. ಭಾಗ -೯, ೮ ಬ್ರಹ್ಮ-೮. ವಾಯು.-೮೮] ನೋಡು—ಕಪಿಲ, ಅಸಮಂಜ, ಅಂಶುಮಂತ, ಭಗೀರಥ.

**ಸಙ್ಕರ್ಷಣ.**—ಬಲರಾಮ. ಮೊದಲು ದೇವಕೀದೇವಿಯ ಗರ್ಭವನ್ನು ಹೊಕ್ಕು ಬಳಿಕ ರೋಹಿಣಿಯ ಗರ್ಭಕ್ಕೆ ಸಂಕ್ರಮಿಸಿ ಜನಿಸಿದವನಾದುದರಿಂದ ಸಂಕರ್ಷಣ ನೆಂದು ಹೆಸರು. ನೋಡು—ಬಲರಾಮ [ಭಾರ.-ಸ. ೨೩]

**ಸಞ್ಜಯ.**—ಧೃತರಾಷ್ಟ್ರನ ಮಂತ್ರಿಯೂ ಸಾರಥಿಯೂ ಆಗಿದ್ದ ಗವಲ್ಗಣನ ಮಗ. ಇವ ಅನುಗಾಲವೂ ಧೃತರಾಷ್ಟ್ರನ ಸಂಗಡಲೇ ಇರುತ್ತಿದ್ದ [ಭಾ.-ಆದಿ ೬೪]. ಪಾಂಡವರು ಪಗಡೆಯಾಟದಲ್ಲಿ ಸೋತಾಗ ಈತ ಧೃತರಾಷ್ಟ್ರನಿಗೆ ಹಿತೋಪದೇಶ ಮಾಡಿದ [ಸಭಾ. ೧೦೩]. ಪಾಂಡವರು ಉಪಪ್ಲಾವ್ಯ ನಗರದಲ್ಲಿದ್ದಾಗ ಧೃತರಾಷ್ಟ್ರ ಈತನನ್ನು ಪಾಂಡವರಲ್ಲಿಗೆ ಸಂಧಿಗಾಗಿ ಕಳುಹಿಸಿದ್ದ [ಉದ್ಯೋ. ೨೩]. ಪಾಂಡವರ ಸುದ್ದಿಯನ್ನು ಧೃತರಾಷ್ಟ್ರನಿಗೆ ಹೇಳಿದ [ಉದ್ಯೋ. ೪೭-೪೮]. ವ್ಯಾಸ ಮುನಿಯ ಅನುಗ್ರಹದಿಂದ ದಿವ್ಯದೃಷ್ಟಿಯನ್ನು ಪಡೆದು, ಧೃತರಾಷ್ಟ್ರನ ಸಮೀಪದಲ್ಲಿಯೇ ಇರುತ್ತ, ಭಾರತ ರಣರಂಗದಲ್ಲಿ ನಡೆಯುವ ಸಮಾಚಾರಗಳನ್ನೆಲ್ಲ ಪೂರ್ವಭಾವಿಯಾಗಿಯೇ ಧೃತರಾಷ್ಟ್ರನಿಗೆ ತಿಳಿಸುತ್ತಿದ್ದ [ಭಾರ -ಭೀ ೨] ಸಂಜಯ ಧೃತರಾಷ್ಟ್ರನನ್ನು ಹೀಯಾಳಿಸಿದ್ದು [ದ್ರೋಣ. ೮೬] ಹದಿನೆಂಟನೆಯ ದಿನ ಇವ ದುರ್ಯೋಧನನ ಪರವಾಗಿ ಯುದ್ಧಮಾಡಿದ್ದು [ಶಲ್ಯ. ೨೪] ಸಾತ್ಯಕಿ ಸಂಜಯನನ್ನು ಕೊಲ್ಲತೊಡಗಿದ್ದು, ವ್ಯಾಸ ಮುನಿ ತಪ್ಪಿಸಿದ್ದು [ಶಲ್ಯ. ೨೯] ಭಾರತ ಯುದ್ಧ ಮುಗಿದಕೂಡಲೇ ವ್ಯಾಸ ಮುನಿ ಅನುಗ್ರಹಿಸಿದ್ದ ದಿವ್ಯದೃಷ್ಟಿ ಮಾಯವಾದದ್ದು [ಸೌಪ್ತಿ. ೯]. ಇವ ಧೃತರಾಷ್ಟ್ರನ ಸಂಗಡ ಅರಣ್ಯಕ್ಕೆ ಹೋಗಿ ಆತನ ಸಂಗಡಲೇ ಇದ್ದ. ಧೃತರಾಷ್ಟ್ರ ಗಾಂಧಾರೀ ಕುಂತಿಯರ ಸಂಗಡ ಕಾಳ್ಗಿಚ್ಚನ್ನು ಹೊಕ್ಕು ದೇಹತ್ಯಾಗಮಾಡಿದ ತರುವಾಯ ಹಿಮವತ್ಪರ್ವತದ ಕಡೆಗೆ ಹೋದ [ಆಶ್ರಮ ೩೯].

(ii) ಸೌವೀರ ದೇಶದ ಅರಸನಾದ ವೃದ್ಧಕ್ಷತ್ರನ ಮಗ ಜಯದ್ರಥನ ಒಡಹುಟ್ಟಿದವ [ಭಾರ.-ವನ. ೨೬೬. ಉದ್ಯೋ. ೧೩೩-೧೩೪].

**ಸತೀ.**—ದಕ್ಷಬ್ರಹ್ಮನ ಮಗಳು. ಶಿವನ ಹೆಂಡತಿ. ನೋಡು—ದಾಕ್ಷಾಯಣಿ [ಶಿವ.-ಸತೀ. ಖಂಡ ೧].

**ಸತ್ಯ.**—(i) ಯಥಾರ್ಥಭಾಷಣ, ಸತ್ಯಪ್ರಶಂಸೆ [ಭಾರ.-ಆದಿ. ೯೯. ಶಾಂತಿ. ೧೬೦. ಅನು. ೧೧೦]. ಸತ್ಯಸ್ವರೂಪ [ಅನು. ೧೦೯].

(ii) ಸತ್ಯಸ್ವರೂಪನಾದ ಪರಮಾತ್ಮ [ಉದ್ಯೋ. ೬೯].

(iii) ಕಳಿಂಗ ರಾಜನ ಸೇನಾಪತಿ. ಎರಡನೆಯ ದಿನದ ಯುದ್ಧದಲ್ಲಿ ಭೀಮನಿಂದ ಮಡಿದ [ಭೀಷ್ಮ. ೫೪].

(iv) ಉಂಛವೃತ್ತಿಯಿಂದ ಜೀವಿಸುತ್ತಿದ್ದ ಒಬ್ಬ ಬ್ರಾಹ್ಮಣ. ಈತನ ಹೆಂಡತಿ ಪುಷ್ಕರಮಾಲಿನಿ. ಇವರ ಕಥೆ [ಶಾಂತಿ ೨೭೮]

**ಸತ್ಯಕ.**—ಯದು ವಂಶದ ಶಿನಿಯೆಂಬವನ ಮಗ ಈತನ ಮಗ ಸಾತ್ಯಕಿ, ಯುಯುಧಾನ [ಭಾ -೯. ೨೩೯. ಸ. ೪].

**ಸತ್ಯಕರ್ಮ.**—ತ್ರಿಗರ್ತ ದೇಶದ ಅರಸು. ಕೌರವ ಪಕ್ಷಪಾತಿ ಹದಿನೆಂಟನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಮಡಿದ [ಶಲ್ಯ. ೨೬]

**ಸತ್ಯಜಿತ್** —ದ್ರುಪದ ರಾಜನ ಮಗ [ಆದಿ. ೧೪೮]. ಅತಿರಥ [ಉದ್ಯೋ.೧೭೧]. ಹನ್ನೊಂದನೆಯ ದಿನದ ಯುದ್ಧದಲ್ಲಿ ದ್ರೋಣನಿಂದ ಹತನಾದ [ದ್ರೋ. ೧೭, ೨೧].

**ಸತ್ಯತಪಸ್** —ಒಬ್ಬ ಬ್ರಹ್ಮರ್ಷಿ. ಈತನ ಕಥೆ [ದೇ ಭಾಗ -೩-೧೧].

**ಸತ್ಯದೇವ** —(i) ತ್ರಿಗರ್ತ ದೇಶದ ಅರಸು. ಹದಿನಾರನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಮಡಿದ [ಭಾರ -ಕರ್ಣ ೧೮]

(ii) ಕಳಿಂಗ ರಾಜನ ಸೇನಾಪತಿ ನೋಡು—ಸತ್ಯ

**ಸತ್ಯಧೃತಿ.**—ಒಬ್ಬ ಅರಸು. ಸುಚಿತ್ತನೆಂಬ ಅರಸನ ಮಗನಾದುದರಿಂದ ಸೌಚಿತ್ತಿಯೆಂಬುದು ಇವನ ನಾಮಾಂತರ [ಆದಿ. ೨೩೮]. ಪಾಂಡವ ಪಕ್ಷಪಾತಿ, ರಥೋದಾರ [ಉದ್ಯೋ ೧೭೧]. ಇವನ ವಧೆ [ಭಾರ.-ಕರ್ಣ. ೩].

**ಸತ್ಯಭಾಮಾ** —ಯದು ವಂಶದ ಸತ್ರಾಜಿತನ ಮಗಳು. ಶ್ರೀ ಕೃಷ್ಣನ ಅಷ್ಟ ಮಹಿಷಿಯರಲ್ಲಿ ಒಬ್ಬಳು [ಭಾಗ.-೧೦-೫೬. ವಿಷ್ಣು -೪, ೧೩. ಹರಿ.-೧-೩೮]. ಒಮ್ಮೆ ಸತ್ಯಭಾಮೆಯೊಂದಿಗೆ ಶ್ರೀ ಕೃಷ್ಣ ಸರಸ ಸಲ್ಲಾಪಗಳಲ್ಲಿದ್ದಾಗ, ಇತ್ತ ಅರ್ಜುನ ಪ್ರಭಾಸತೀರ್ಥಕ್ಕೆ ಬಂದು, ಸುಭದ್ರೆಯ ವೃತ್ತಾಂತವನ್ನು ಕೇಳಿ, ಚಿಂತಾತುರನಾಗಿ ಶ್ರೀ ಕೃಷ್ಣನನ್ನು ಧ್ಯಾನಮಾಡಲಾಗಿ, ಕೃಷ್ಣ ಅಕಸ್ಮಾತ್ತಾಗಿ ನಕ್ಕ ಸತ್ಯಭಾಮೆ ಹಾಗೆ ನಗುವುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಲಾಗಿ, ಕೃಷ್ಣ ಅರ್ಜುನನ ವಿಚಾರವನ್ನು ಆಕೆಗೆ ತಿಳುಹಿದ [ಭಾರ -೮ ೨೩೮]. ಶ್ರೀ ಕೃಷ್ಣ ನರಕಾಸುರನನ್ನು ಕೊಂದು, ಅವ ಅಪಹರಿಸಿದ್ದ ಅದಿತಿಯ ಕುಂಡಲಗಳನ್ನು ಆಕೆಗೆ ಕೊಡುವುದಕ್ಕಾಗಿ ಸ್ವರ್ಗಕ್ಕೆ ಹೋಗಿದ್ದಾಗ ಈಕೆಯೂ ಸಂಗಡ ಹೋಗಿದ್ದಳು [ಭಾರ.-ಸಭಾ. ೫೬. ಭಾಗ.-೧೦, ೫೯. ಹರಿ -೨-೬೪. ವಿಷ್ಣು.-೫, ೩೦]. ಪಾಂಡವರು ಅರಣ್ಯವಾಸಕ್ಕೆ ಹೋದಾಗ ಈಕೆಯೂ ತನ್ನ ಮಿಕ್ಕ ಸವತಿಯರೊಂದಿಗೆ ಕೃಷ್ಣನ ಸಂಗಡ ಕಾಮ್ಯಕ ವನಕ್ಕೆ ಹೋಗಿದ್ದಳು [ಭಾರ.-ವನ. ೧೮೫] ಸತ್ಯಭಾಮೆ ತಾನು ಕೃಷ್ಣನನ್ನು ಮದುವೆಯಾದ ಕಥೆಯನ್ನು ದ್ರೌಪದಿಗೆ ಹೇಳಿದ್ದು [ಭಾಗ.-೧೦-೮೩]. ಪತಿಯನ್ನು ವಶಪಡಿಸಿಕೊಳ್ಳುವ ಉಪಾಯವೇನೆಂದು ಸತ್ಯಭಾಮೆ ದ್ರೌಪದಿಯನ್ನು ಪ್ರಶ್ನೆ ಮಾಡಿದ್ದು [ಭಾರ.-ವನ. ೨೩೪]. ಒಮ್ಮೆ ಕೃಷ್ಣ ಪತ್ನೀ ಪುತ್ರ ಸೋದರ ಪರಿವಾರ

ದೊಂದಿಗೆ ರೈವತಕ ಪರ್ವತಕ್ಕೆ ಹೋಗಿದ್ದಾಗ ರುಕ್ಮಿಣಿ ಒಂದು ಉಪವಾಸವ್ರತ ಮಾಡಿದಳು. ಬ್ರಾಹ್ಮಣಸಂತರ್ಪಣೆ ನಡೆದ ಬಳಿಕ ಕೃಷ್ಣ ನೆರೆದಿದ್ದವರಿಗೆಲ್ಲ ದಾನ ಧರ್ಮಗಳನ್ನು ಮಾಡುತ್ತ ರುಕ್ಮಿಣಿಯ ಸಮೀಪದಲ್ಲಿಯೇ ಇದ್ದ. ಆಗ ನಾರದ ಅಲ್ಲಿಗೆ ಬಂದು ಪಾರಿಜಾತವನ್ನು ತಂದು ಕೃಷ್ಣನಿಗೆ ಕೊಡಲಾಗಿ, ಆತ ಅದನ್ನು ರುಕ್ಮಿಣಿಗೆ ಕೊಟ್ಟ. ಇದರಿಂದ ಸಿಟ್ಟುಗೊಂಡ ಸತ್ಯಭಾಮೆ ಕ್ರೋಧಾಗಾರವನ್ನು ಹೊಕ್ಕಳು ಕೃಷ್ಣ ಆಕೆಯನ್ನು ಸಮಾಧಾನಪಡಿಸಿ ಪಾರಿಜಾತ ವೃಕ್ಷವನ್ನು ಸ್ವರ್ಗ ದಿಂದ ಕಿತ್ತುತಂದು ಸತ್ಯಭಾಮೆಯ ಮನೆಯಲ್ಲಿ ಇರಿಸಿದ [ಹರಿ.-೨-೬೫, ೬೬].

**ಸತ್ಯರಥ.**—ನೋಡು—ಸಂಶಪ್ತಕ.

**ಸತ್ಯವತಿ.**—(i) ಗಾಧಿ ರಾಜನ ಮಗಳು. ವಿಶ್ವಾಮಿತ್ರನ ಒಡಹುಟ್ಟಿದವಳು. ಋಚೀಕ ಮುನಿಯನ್ನು ಮದುವೆಯಾಗಿ ಜಮದಗ್ನಿ ಮಹರ್ಷಿಯನ್ನು ಹೆತ್ತಳು [ಭಾರ.-ವನ. ೧೧೬. ಶಾಂತಿ ೪೮ ಅನು ೭. ರಾಮಾ.-ಬಾಲ. ೩೪. ಭಾಗ.-೯-೧೫]. ನೋಡು—ಋಚೀಕ.

(ii) ಸೂರ್ಯ ವಂಶದ ತ್ರಿಶಂಕು ರಾಜನ ಹೆಂಡತಿ. ಕೇಕಯ ರಾಜನ ಮಗಳು. ಹರಿಶ್ಚಂದ್ರ ಈಕೆಯ ಮಗ [ಭಾರ.-ಸ. ೧೨].

(iii) ಅಗಸ್ತ್ಯ ಮುನಿ ಪತ್ನಿಯಾದ ಲೋಪಾಮುದ್ರೆಯ ನಾಮಾಂತರ [ಭಾರ.-ವನ. ೯೪].

(iv) ಉಪರಿಚರವಸುವಿನ ಮಗಳು. ಮತ್ಸ್ಯದಿಂದ ಜನಿಸಿದವಳಾಗಿ ಮತ್ಸ್ಯಗಂಧಿಯೆಂದು ಹೆಸರು. ದಾಶ ರಾಜನಿಂದ ಪೋಷಿತಳು [ಭಾರ -ಆದಿ. ೬೦, ೬೪]. ಈಕೆಗೆ ಕಾಳಿ, ಮತ್ಸ್ಯಗಂಧಾ, ಯೋಜನಗಂಧಾ ಎಂಬ ಹೆಸರುಗಳು ರೂಢಿ ಯಲ್ಲಿವೆ ಪರಾಶರ ಮುನಿಯಿಂದ ಕೃಷ್ಣದ್ವೈಪಾಯನನನ್ನು ಪಡೆದಳು [ಭಾರ.-ಆದಿ ೬೪]. ತನ್ನ ಕನ್ಯಾಧರ್ಮ ಲುಪ್ತವಾಗದಂತೆ ಪರಾಶರನನ್ನು ಬೇಡಿ ವರವನ್ನು ಪಡೆದಳು. ಒಮ್ಮೆ ಪರಾಶರ ನದಿಯನ್ನು ದಾಟಬೇಕಾಗಿ ಬಂತು. ದಾಶ ರಾಜ ಊಟಮಾಡುತ್ತಿದ್ದ ಕಾರಣ ತನ್ನ ಪಾಲಿತಪುತ್ರಿಯಾದ ಸತ್ಯವತಿಯನ್ನು ಕರೆದು ಮುನಿಯನ್ನು ಆಚೆಯ ದಡಕ್ಕೆ ಸೇರಿಸಹೇಳಿದ ಆಗ ಪರಾಶರ ಈಕೆಯ ರೂಪಾತಿ ಶಯಕ್ಕೆ ಬೆರಗಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದ. ಆಗ, ಸತ್ಯವತಿ—

ಜಾನತೇ ನ ಪಿತಾ ಮಾತಾ ನ ವಾನ್ಯೇ ಭುವಿ ಮಾನವಾಃ ।
ಕನ್ಯಾಧರ್ಮೋ ನ ಮೇ ಹನ್ಯಾದ್ಯದಿ ಸ್ವೀಕುರು ಮಾಂ ತದಾ ॥
ಪುತ್ರಶ್ಚ ತ್ವತ್ಸಮೋ ನಾಥ ! ಭವೇದದ್ಭುತಶಕ್ತಿಮಾ೯ ।
ಸೌಗಂಧ್ಯಂ ಸರ್ವದಾಂಗೇ ಮೇ ತಾರುಣ್ಯಂ ಚ ನವಂ ನವಂ ॥

[ಶಿವ. ಉಮಾ. ೪೪].

ಪೂರ್ವಜನ್ಮದಲ್ಲಿ ಈಕೆ ಬರ್ಹಿಷದರೆಂಬ ಪಿತೃದೇವತೆಗಳ ಮಗಳು. ಆಗ ಈಕೆಗೆ ಅಚ್ಛೋದೆಯೆಂದು ಹೆಸರು. ಶಾಪದಿಂದ ಭೂಮಿಯಲ್ಲಿ ಜನಿಸಿದವಳು [ಭಾರ.-ಆದಿ. ೬೪]. ಈಕೆ ಶಂತನು ರಾಜನನ್ನು ಮದುವೆಯಾಗಿ ಚಿತ್ರಾಂಗದ ವಿಚಿತ್ರವೀರ್ಯರೆಂಬ ಪುತ್ರರನ್ನು ಪಡೆದಳು [ಆದಿ. ೧೦೮]. ತಾನು ಪರಾಶರನಿಂದ ವ್ಯಾಸನನ್ನು ಪಡೆದ ವೃತ್ತಾಂತವನ್ನು ಈಕೆ ಭೀಷ್ಮನಿಗೆ ಹೇಳಿದ್ದು [ಭಾರ.-ಆದಿ. ೧೧೪]. ಚಿತ್ರಾಂಗದ ವಿಚಿತ್ರವೀರ್ಯರು ಪುತ್ರಸಂತಾನಹೀನರಾಗಿ ಮಡಿದ ಬಳಿಕ, ವಂಶಾಭಿವೃದ್ಧಿಗಾಗಿ ಸತ್ಯವತಿ ಭೀಷ್ಮನನ್ನು ಕೇಳಿದಳು. ಭೀಷ್ಮ ಸಮ್ಮತಿಸಲಿಲ್ಲ [ಆದಿ. ೧೧೨]. ಬಳಿಕ ಸತ್ಯವತಿ ಭೀಷ್ಮನ ಸೂಚನೆಯ ಮೇರೆ ವ್ಯಾಸನನ್ನು ಬರಮಾಡಿ ಅಂಬಿಕಾ, ಅಂಬಾಲಿಕೆಯರಿಗೆ ಸಂತಾನವನ್ನು ಅನುಗ್ರಹಿಸಹೇಳಿದ್ದು [ಆದಿ. ೧೧೪]. ತನ್ನ ಸೊಸೆಯರನ್ನು ಸಂಗಡ ಕರೆದುಕೊಂಡು ಸತ್ಯವತಿ ತಪೋವನಕ್ಕೆ ಹೋದದ್ದು [ಆದಿ. ೧೩೭].

(v) ನಾರದನೆಂಬ ಒಬ್ಬ ಮುನಿಯ ಹೆಂಡತಿ. ಈ ನಾರದ ಅರುಂಧತಿಯ ಒಡಹುಟ್ಟಿದವ [ಲಿಂಗ.-೬೩. ಭಾರ.-ಉದ್ಯೋ. ೧೧೭].

**ಸತ್ಯವರ್ಮ.**—ನೋಡು—ಸಂಶಪ್ತಕ.

**ಸತ್ಯವನ್ತ.**—(i) ಸಾಲ್ವ ದೇಶಾಧಿಪತಿಯಾದ ದ್ಯುಮತ್ಸೇನನ ಮಗ ಅಶ್ವಪತಿ ಪುತ್ರಿಯಾದ ಸಾವಿತ್ರಿಯ ಪತಿ. ಇವನಿಗೆ ಚಿತ್ರಾಶ್ವನೆಂಬುದು ನಾಮಾಂತರ. ಇವನ ವಿವಾಹ [ಭಾರ.-ವನ. ೨೯೫, ೨೯೬]. ಸತ್ಯವಂತ ಸೌದೆಯನ್ನು ತರುವುದಕ್ಕಾಗಿ ಸಾವಿತ್ರಿಯನ್ನು ಸಂಗಡ ಕರೆದುಕೊಂಡು ಕಾಡಿಗೆ ಹೋದದ್ದು. ಯಮ ಇವನ ಪ್ರಾಣಗಳನ್ನು ಕೊಂಡುಯ್ದದ್ದು, ಸಾವಿತ್ರಿ ಬದುಕಿಸಿಕೊಂಡದ್ದು [ವನ. ೨೯೮]. ಇವನ ತಂದೆಗೆ ಕಣ್ಣುಗಳು ಬಂದದ್ದು, ಸತ್ಯವಂತ ರಾಜ್ಯವನ್ನು ಪಡೆದದ್ದು [ಭಾರ.-ವನ. ೩೦೦]. ಪ್ರಜೆಗಳನ್ನು ಕಾಪಾಡುವ ವಿಷಯವಾಗಿ ಸತ್ಯವಂತ ತನ್ನ ತಂದೆಯೊಂದಿಗೆ ಸಂವಾದಮಾಡಿದ್ದು [ಶಾಂತಿ. ೨೭೩].

(ii) ದುರ್ಯೋಧನನ ಸೇನಾಪತಿಗಳಲ್ಲಿ ಒಬ್ಬ. ಮಹಾರಥ [ಭಾರ.-ಉ. ೧೬೭].

**ಸತ್ಯವ್ರತ.**—ನೋಡು—ವೈವಸ್ವತ ಮನು.

**ಸತ್ಯವ್ರತಾ.**—ಗಾಂಧಾರಿಯ ಒಡಹುಟ್ಟಿದವಳು. ಧೃತರಾಷ್ಟ್ರನ ಹೆಂಡತಿ. ನೋಡು—ಗಾಂಧಾರಿ, ಧೃತರಾಷ್ಟ್ರ [ಆದಿ. ೧೧೯].

**ಸತ್ಯಸೇನ.**—ಕರ್ಣನ ಮಗ. ಹದಿನೇಳನೆಯ ದಿನದಲ್ಲಿ ಇವ ಯುದ್ಧಮಾಡಿದ ಭಾರ.-ಕರ್ಣ. ೪೩]. ಹದಿನೆಂಟನೆಯ ದಿನ ನಕುಲನಿಂದ ಮಡಿದ [ಶಲ್ಯ. ೯].

**ಸತ್ಯಸೇನಾ.**—ಗಾಂಧಾರಿಯ ಒಡಹುಟ್ಟಿದವಳು. ಧೃತರಾಷ್ಟ್ರನ ಹೆಂಡತಿ [ಆದಿ. ೧೧೯].

**ಸತ್ಯಾ.**—(i) ಬೃಹದ್ರಥನ ಹಿರಿಯ ಹೆಂಡತಿ. ಜರಾಸಂಧನ ಅರ್ಧ ದೇಹವನ್ನು ಹೆತ್ತವಳು [ಭಾರ.-ಆ. ೨೦೧. ಸಭಾ. ೧೭].

(ii) ಶ್ರೀ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳಾದ ನೀಲೆಯ ನಾಮಾಂತರ [ಭಾಗ.-೧೦-೬೧].

**ಸತ್ಯೇಯು.**—ಚಂದ್ರ ವಂಶದ ಪೂರು ರಾಜನ ಮಗನಾದ ರೌದ್ರಾಶ್ವನಿಂದ ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ ಜನಿಸಿದವ [ಭಾರ -ಆದಿ. ೮೮].

**ಸತ್ಯೇಷು** —ತ್ರಿಗರ್ತ ರಾಜನಾದ ಸುಶರ್ಮನ ಒಡಹುಟ್ಟಿದವ ಈತ " ಹೇಗಾದರೂ ಅರ್ಜುನನನ್ನು ಕೊಂದಲ್ಲದೆ ಹಿಂದಿರುಗುವುದಿಲ್ಲ ಒಂದು ವೇಳೆ ಸೋತೆನಾದರೆ ಗೋಹತ್ಯೆ, ಸ್ತ್ರೀಹತ್ಯೆ, ಶಿಶುಹತ್ಯೆ, ಗುರುಹತ್ಯೆಗಳಿಗೆ ಭಾಗಿಯಾಗುವೆನು " ಎಂದು ಪ್ರತಿಜ್ಞೆಮಾಡಿ, ಯುದ್ಧಕ್ಕೆ ಹೊರಟು, ತನ್ನ ತಮ್ಮಂದಿರೊಂದಿಗೆ ತಾನೂ ಅರ್ಜುನನಿಂದ ಹತನಾದ ನೋಡು—ಸಂಶಪ್ತಕ [ಭಾರ.-ಶಲ್ಯ. ೩೬].

**ಸತ್ರಾಜಿತ** —ಯದು ವಂಶದ ನಿಮ್ನನ ಮಗ. ಸೂರ್ಯನ ಭಕ್ತನೂ ಮಿತ್ರನೂ ಆಗಿದ್ದು ಸೂರ್ಯನಿಂದ ಸ್ಯಮಂತಕವೆಂಬ ರತ್ನವನ್ನು ಪಡೆದ. ಅದು ದಿನದಿನವೂ ಎಂಟು ಭಾರ ಚಿನ್ನವನ್ನು ಕೊಡುತ್ತಿತ್ತು. ಅಶುಚಿಯಾದ ಸಮಯದಲ್ಲಿ ಧರಿಸಿದರೆ, ಆ ರತ್ನ ಧರಿಸಿದವನನ್ನು ಕೊಲ್ಲುತ್ತದೆಂದು ಸೂರ್ಯ ಹೇಳಿದ್ದ ಕೃಷ್ಣ ಇದರ ಮಹಿಮೆಗೆ ಮರುಳಾಗಿ ಆ ರತ್ನವನ್ನು ತನಗೆ ಕೊಡು ಎಂದು ಸತ್ರಾಜಿತನನ್ನು ಕೇಳಿದ. ಆದರೆ ಅವ ಕೊಡಲಿಲ್ಲ ಒಂದು ದಿನ ಸತ್ರಾಜಿತನ ತಮ್ಮನಾದ ಪ್ರಸೇನ ಈ ರತ್ನವನ್ನು ಧರಿಸಿ ಕೃಷ್ಣನ ಸಂಗಡ ಬೇಟೆಗೆ ಹೋಗಿದ್ದಾಗ ಒಂದು ಸಿಂಹ ಪ್ರಸೇನನನ್ನು ಕೊಂದಿತು. ಕೃಷ್ಣನ ಮೇಲೆ ಅಪವಾದ ಬಂದ ಕಾರಣ ಆತ ಅರಣ್ಯಕ್ಕೆ ಹೋಗಿ, ಪ್ರಸೇನನ ಶವವನ್ನು ಗುರುತಿಸಿ, ಮುಂದೆ ನಡೆದು ಕಡೆಗೆ ಜಾಂಬವಂತನ ಸಂಗಡ ಯುದ್ಧಮಾಡಿ ಆ ರತ್ನವನ್ನು ತಂದು ಸತ್ರಾಜಿತನಿಗೆ ಕೊಟ್ಟ [ಭಾಗ -೧೦, ೫೬]. ನೋಡು—ಸತ್ಯಭಾಮಾ, ಪ್ರಸೇನ, ಜಾಂಬವಂತ, ಕೃಷ್ಣ.

**ಸದಾನೀರಾ.**—ಒಂದು ನದಿ. ವಿಂಧ್ಯಪರ್ವತದಿಂದ ಹುಟ್ಟಿ ಹರಿಯುತ್ತದೆ. ಇದಕ್ಕೆ ಕರತೋಯಾ ಎಂಬುದು ನಾಮಾಂತರ. ಅಯೋಧ್ಯೆಯ ಬಳಿ ರಂಗಪುರ, ದಿನಾಜಪುರ ಜಿಲ್ಲೆಗಳಲ್ಲಿ ಹರಿಯುತ್ತದೆ [ಭಾರ.-ಭೀ. ೯. ಮತ್ಸ್ಯ.-೧೧೪].

**ಸನಕ, ಸನತ್ಕುಮಾರ, ಸನತ್ಸುಜಾತ, ಸನನ್ದನ**—ಸೃಷ್ಟಿಯ ಆದಿಯಲ್ಲಿ ಬ್ರಹ್ಮಮಾನಸಪುತ್ರರು. ಇವರು ಯಾವಾಗಲೂ ಕೌಮಾರಾವಸ್ಥೆಯಲ್ಲಿಯೇ ಇರ

ತಕ್ಕವರು. ಮಹಾತಪಸ್ವಿಗಳೂ ಜ್ಞಾನಸಂಪನ್ನರೂ ಆದವರು. ನೋಡು—ಜಯ ವಿಜಯ [ಭಾರ.-ಸಭಾ. ೧೧. ಭಾಗ.-೩, ೧೫, ೧೬].

**ಸನತ್ಕುಮಾರ.**—ಪರಮಾತ್ಮನ ಸ್ವರೂಪ ವಿಷಯವಾಗಿ ಸಂವಾದಮಾಡಿದ್ದು [ಭಾರ.-ಶಾಂತಿ ೨೨೭]. ವೃತ್ರಾಸುರನಿಗೆ ವಿಷ್ಣುವಿನ ಮಾಹಾತ್ಮ್ಯವನ್ನು ವಿವರಿಸಿದ್ದು [ಶಾಂತಿ ೨೮೬]. ತತ್ತ್ವಸೃಷ್ಟಿ ಮೊದಲಾದ ವಿಷಯಗಳನ್ನು ಕುರಿತು ನಾರದನ ಸಂಗಡ ಸಂವಾದ [ಅನು. ೩೮]. ಜಗತ್ತಿನ ಸೃಷ್ಟಿ ವಿಷಯವಾಗಿ ಪರಮೇಶ್ವರನೊಂದಿಗೆ ಸಂವಾದ [ಅನು. ೧೬೫-೧೬೯].

**ಸನತ್ಸುಜಾತ.**—ಧೃತರಾಷ್ಟ್ರನಿಗೆ ತತ್ತ್ವೋಪದೇಶಮಾಡಿದ್ದು. ಇದಕ್ಕೆ ಸನತ್ಸುಜಾತೀಯವೆಂದು ರೂಢಿ [ಭಾಗ -ಉ. ೪೧-೪೬].

**ಸನ್ನತೇಯ.**—ಸತ್ಯೇಯುವಿನ ತಮ್ಮ. ನೋಡು—ಮಿಶ್ರಕೇಶೀ.

**ಸಪ್ತಗೋದಾವರ** —ಒಂದು ಕ್ಷೇತ್ರ. ಇಲ್ಲಿ ಗೋದಾವರಿ ಏಳು ಮುಖವಾಗಿ ಸಮುದ್ರವನ್ನು ಸೇರುತ್ತದೆ ರಾಜಮಹೇಂದ್ರಪುರದ ಸಮೀಪದಲ್ಲಿದೆ. ಪಾಂಡವರಿಗೆ ವನವಾಸ ಕಾಲದಲ್ಲಿ ನಾರದ ಇದರ ಮಹಿಮೆಯನ್ನು ತಿಳಿಸಿದ [ಭಾರ.-ವನ ೮೩].

**ಸಪ್ತಜನಾಶ್ರಮ(ಯ)** —ಏಳು ಮಂದಿ ಋಷಿಗಳು ಜಲಮಧ್ಯದಲ್ಲಿ ತಪಸ್ಸು ಮಾಡುತ್ತಿದ್ದ ಪ್ರದೇಶ. ಇದರ ವರ್ಣನೆಯನ್ನು ಸುಗ್ರೀವ ರಾಮನಿಗೆ ಹೇಳಿದ [ಕಿಷ್ಕಿಂ. ೧೩].

**ಸಪ್ತರ್ಷಿಗಳು** —ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ [ಭಾರ.-ಶಲ್ಯ.೪೯]. ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ [ಶಾಂತಿ. ೩೪೩]. ಇವರು ಕಲ್ಪಭೇದದಿಂದ ಭಿನ್ನಭಿನ್ನರಾಗಿರುತ್ತಾರೆ. ಸಪ್ತರ್ಷಿಗಳು ವೃಷಾದರ್ಭಿಯೊಂದಿಗೆ ದುಷ್ಪ್ರತಿಗ್ರಹ ಮೊದಲಾದ ವಿಷಯವಾಗಿ ಸಂವಾದಮಾಡಿದ್ದು [ಭಾರ -ಅನು. ೧೪೧]. ಸಂನ್ಯಾಸಿ ರೂಪದಿಂದ ಬಂದ ಇಂದ್ರನಿಗೆ ಸಪ್ತರ್ಷಿಗಳು ದರ್ಶನವಿತ್ತು ಅನುಗ್ರಹಿಸಿದ್ದು [ಅನು. ೧೪೨]. ಸಪ್ತರ್ಷಿಗಳ ಪತ್ನಿಯರನ್ನು ಅಗ್ನಿದೇವ ಕಾಮಿಸಿದ್ದು [ಭಾರ.-ವನ. ೨೨೬]. ಅಗ್ನಿಪತ್ನಿಯಾದ ಸ್ವಾಹಾದೇವಿ ಅರುಂಧತಿಯ ಹೊರತು ಮಿಕ್ಕ ಆರು ಮಂದಿ ಋಷಿಪತ್ನಿಯರ ರೂಪವನ್ನು ಧರಿಸಿ ಅಗ್ನಿಯನ್ನು ತೃಪ್ತಿಪಡಿಸಿದ್ದು, ವಸಿಷ್ಠನ ಹೊರತು ಮಿಕ್ಕ ಆರು ಮಂದಿ ಮುನಿಗಳೂ ಲೋಕಾಪವಾದದಿಂದ ತಮ್ಮ ಪತ್ನಿಯರನ್ನು ಪರಿತ್ಯಾಗಮಾಡಿದ್ದು ಮುಂತಾಗಿ [ಭಾರ.-ವನ. ೨೨೬, ೨೨೭].

**ಸಪ್ತಸಾರಸ್ವತ.**—ಸರಸ್ವತೀ ನದಿ. ಸುಪ್ರಭಾ, ಕಾಂಚನಾಕ್ಷಿ, ವಿಶಾಲಾ, ಮನೋರಮಾ, ಓಘವತೀ, ಸುರೇಣು, ವಿಮಲೋದಕಾ ಎಂಬ ಏಳು ವಿಧವಾಗಿ ಹರಿಯುವ ಸ್ಥಳ. ಒಂದು ದಿವ್ಯತೀರ್ಥ. ಬಲರಾಮನ ತೀರ್ಥಯಾತ್ರಾ ಪ್ರಸಂಗದಲ್ಲಿ ವರ್ಣಿತ

ವಾಗಿದೆ [ಶಲ್ಯ. ೩೯]. ಮಜ್ಜಣನೆಂಬ ಮುನಿ ಇದರ ಬಳಿ ಆಶ್ರಮವನ್ನು ಕಲ್ಪಿಸಿ ಕೊಂಡು ತಪಸ್ಸುಮಾಡುತ್ತಿದ್ದ [ವನ. ೮೧].

**ಸಭಾ.**—ಮಯಾಸುರ ಪಾಂಡವರಿಗೆ ನಿರ್ಮಿಸಿಕೊಟ್ಟದ್ದು. ಯುಧಿಷ್ಠಿರ ಅದನ್ನು ಹೊಕ್ಕದ್ದು [ಸಭಾ. ೧೨೪].

**ಸಭಾವರ್ಣನೆ.**—ಯುಧಿಷ್ಠಿರನ [ಸಭಾ. ೪].

,, —ಇಂದ್ರನ [ಸಭಾ. ೭].

,, —ಯಮನ [ಸಭಾ. ೮].

,, —ವರುಣನ [ಸಭಾ. ೯].

,, —ಕುಬೇರನ [ಸಭಾ. ೧೦].

,, —ಚತುರ್ಮುಖನ [ಸಭಾ. ೧೧].

**ಸಭಾಸದ ಲಕ್ಷಣ.**—[ಶಾಂತಿ. ೮೩].

**ಸಮಙ್ಗ.**—ಮೊದಲು ಅಷ್ಟಾವಕ್ರನಾಗಿದ್ದು ಸಮಂಗಾ ನದಿಯಲ್ಲಿ ಸ್ನಾನ ಮಾಡಿದ ತರುವಾಯ ಆತನಿಗೆ ಸಮಂಗನೆಂದು ಹೆಸರು. ಜ್ಞಾನ ಸಕಲ ದುಃಖ ಗಳನ್ನೂ ತೊಲಗಿಸುವುದೆಂಬ ವಿಷಯವಾಗಿ ಸಮಂಗ ನಾರದನೊಂದಿಗೆ ಸಂವಾದ ಮಾಡಿದ್ದು [ಭಾರ.-ಶಾಂತಿ. ೨೯೨].

**ಸಮಙ್ಗಾ.**—ಒಂದು ನದಿ. ನೋಡು—ಅಷ್ಟಾವಕ್ರ [ಭಾರ.-ವನ. ೧೩೬].

**ಸಮನ್ತಪಂಚಕ.**—ಒಂದು ಕ್ಷೇತ್ರ. ಪರಶುರಾಮ ಇದನ್ನು ನಿರ್ಮಿಸಿದ [ಭಾರ.-ಆದಿ. ೧. ಶಲ್ಯ. ೩೪]. ಇದಕ್ಕೆ ಕಾಲಾಂತರದಲ್ಲಿ ಕುರುಕ್ಷೇತ್ರವೆಂದು ಹೆಸ ರಾಯಿತು [ಭಾರ.-ಆದಿ ೨]. ಇದರ ಬಳಿ ಪರಶುರಾಮ ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಐದು ಮಡುಗಳನ್ನು ಕಲ್ಪಿಸಿದ [ಭಾರ.-ವನ. ೧೧೮]. ಜಯ ದ್ರಥನ ತಂದೆಯಾದ ವೃದ್ಧಕ್ಷತ್ರ ಇದರ ಬಳಿ ತಪಸ್ಸುಮಾಡುತ್ತಿದ್ದ. ನೋಡು— ಜಯದ್ರಥ [ಭಾರ.-ದ್ರೋ ೧೪೮].

**ಸಮಾಧಿ**—ಒಬ್ಬ ವೈಶ್ಯ. ಮಹಾಧನಿಕನಾಗಿದ್ದ. ಧನಲೋಭದಿಂದ ಹೆಂಡಿರು ಮಕ್ಕಳು ಇವನನ್ನು ಕಾಡಿಗೆ ಅಟ್ಟಲಾಗಿ ಸುಮೇಧಸನೆಂಬ ಮುನಿಯ ಆಶ್ರಮದ ಬಳಿ, ತನ್ನಂತೆಯೇ ರಾಜ್ಯಭ್ರಷ್ಟನಾದ ಸುರಥನೆಂಬ ಅರಸನನ್ನು ಕಂಡು, ಇಬ್ಬರೂ ಕಲೆತು ಸುಮೇಧಸನನ್ನು ಮರೆಹೊಕ್ಕು ಆತನ ಮೂಲಕ ದೇವೀಮಾಹಾತ್ಮ್ಯವನ್ನು ಕೇಳಿ, ಅದರಂತೆ ದೇವಿಯನ್ನು ಮೂರು ವರ್ಷಗಳ ಕಾಲ ಪೂಜಿಸಿ, ಆಕೆಯ ಅನು ಗ್ರಹದಿಂದ ವೈರಾಗ್ಯಸಂಪನ್ನನಾಗಿ ಮುಕ್ತಿಯನ್ನು ಪಡೆದ [ದೇ. ಭಾಗ.-೫-೩೧-೩೫. ಶಿವ.-ಉಮಾ. ೪೫-೫೧. ಮಾರ್ಕಂ.-೭೬-೮೯].

**ಸಮೀಚೀ**—ಒಬ್ಬ ಅಪ್ಸರಸಿ. ಶಾಪದಿಂದ ಮೊಸಳೆಯಾಗಿದ್ದು, ಅರ್ಜುನನಿಂದ ಬಿಡುಗಡೆ ಹೊಂದಿದಳು. **ನೋಡು**—ನಾರೀತೀರ್ಥ [ಭಾರ.-ಆದಿ. ೨೩೬ .ಸ. ೧೦].

**ಸಮುದ್ರ**—ಏಳು ವಿಧ. ಲವಣ, ಇಕ್ಷು(ಕಬ್ಬಿನ ಹಾಲು), ಸುರಾ (ಮದ್ಯ), ಸರ್ಪಿಸ್ (ತುಪ್ಪ), ದಧಿ (ಮೊಸರು), ಕ್ಷೀರ, ಜಲ (ಸೀನೀರು) [ಭಾರ.-ಆ. ೧೮. ವನ. ೧೮೯]. ಗಂಗೆ ಸಮುದ್ರ ರಾಜನ ಮುಖ್ಯಪತ್ನಿ [ಉದ್ಯೋ. ೧೧೭]. ಸಮುದ್ರ ವರ್ಣನೆ [ಆದಿ. ೨೧]. ಸಮುದ್ರವನ್ನು ಅಗಸ್ತ್ಯ ಪಾನಮಾಡಿದ್ದು [ವನ. ೧೦೪]. ಸಮುದ್ರವನ್ನು ಉಚಥ್ಯ ಮುನಿ ಕುಡಿದದ್ದು [ಅನು. ೨೫೯]. ಸಮುದ್ರವನ್ನು ತುಂಬಿದ್ದು [ವನ. ೧೮೯]. ಸಮುದ್ರಮಥನ [ಆದಿ. ೧೮. ಭಾಗ.-೮, ೭-೯. ರಾಮಾ.-ಬಾಲ. ೪೫. ಸ್ಕಾಂ.-ಕೇದಾರ. ೯-೧೩. ಶಿವ.-ಶತ. ೧೬].

**ಸಮುದ್ರಸೇನ**.—ಪಾಂಡವ ಪಕ್ಷದ ಅರಸು [ಭಾರ.-ಆದಿ. ೬೮, ೨೦೧. ಸಭಾ. ೩೧ ಉದ್ಯೋ. ೪]. ಈತ ಪಾಂಡವ ಪಕ್ಷದವನಾದ ಚಿತ್ರಸೇನನನ್ನೇ ಕೊಂದದ್ದು [ಕರ್ಣ. ೩]. ಸಮುದ್ರಸೇನನ ಮಗನಾದ ಚಂದ್ರಸೇನ ಅಶ್ವತ್ಥಾಮನಿಂದ ಮಡಿದ [ದ್ರೋ. ೨೩, ೧೫೭].

**ಸಮ್ಪಾತಿ**.—ಅರುಣನ ಮಗ. ಜಟಾಯು ಇವನ ತಮ್ಮ. ಶ್ಯೇನಿ ಇವರ ಜನನಿ [ಭಾರ.-ಆದಿ. ೬೭. ವನ. ೨೮೦, ೨೮೩]. ಈತನ ಮಗ ಸುಪಾರ್ಶ್ವ [ರಾಮಾ.-ಕಿ. ೫೯]. ಸಂಪಾತಿಯ ಕಥೆ [ರಾಮಾ.-ಕಿಷ್ಕಿಂ. ೫೬-೬೩].

**ಸಮ್ಪ್ರಿಯಾ**.—ಮಗಧ ರಾಜನ ಮಗಳು. ಕುರು ರಾಜನ ಮಗನಾದ ವಿದೂರಥನ ಹೆಂಡತಿ [ಆದಿ. ೬೩].

**ಸಮ್ಭಲಗ್ರಾಮ**.—ನೋಡು—ಶಂಭಲಗ್ರಾಮ, ಕಲ್ಕಿ.

**ಸಮ್ಮೋಹನಾಸ್ತ್ರ**—ಉತ್ತರಗೋಗ್ರಹಣ ಸಮಯದಲ್ಲಿ ಅರ್ಜುನ ಕುರು ಸೇನೆಯ ಮೇಲೆ ಪ್ರಯೋಗಿಸಿದ್ದು [ವಿರಾ. ೬೭].

**ಸಂಯಮಿನೀ**.—ಯಮನ ರಾಜಧಾನಿ [ಭಾರ.-ವನ. ೧೬೩].

**ಸರಮಾ**.—(i) ಶೈಲೂಷನೆಂಬ ಗಂಧರ್ವನ ಮಗಳು ವಿಭೀಷಣನ ಹೆಂಡತಿ. ವಿಭೀಷಣನಂತೆಯೇ ಸದ್ಗುಣವತಿ [ರಾಮಾ.-ಉತ್ತ. ೧೨]. ರಾಮ ರಾವಣರ ಯುದ್ಧ ಮೊದಲಾದಾಗ ಈಕೆ ಆಗಿಂದಾಗ್ಗೆ ರಾಮ ಲಕ್ಷ್ಮಣರ ಕುಶಲವಾರ್ತೆಯನ್ನು ಸೀತೆಗೆ ಅರುಹಿ, ಆಕೆಯನ್ನು ಸಮಾಧಾನಪಡಿಸುತ್ತಿದ್ದಳು [ರಾಮಾ.-ಯು. ೩೩].

(ii) ದೇವಲೋಕದ ನಾಯಿ [ಭಾರ.-ಆ. ೩. ಸಭಾ. ೧೧]. ಸರಮೆ ಜನಮೇಜಯನಿಗೆ ಶಾಪಕೊಟ್ಟದ್ದು ನೋಡು—ಜನಮೇಜಯ [ಆದಿ. ೩].

**ಸರಯೂ.**—ಒಂದು ನದಿ. ಅಯೋಧ್ಯೆಯ ಬಳಿ ಹರಿಯುತ್ತದೆ. ಅಯೋಧ್ಯೆ ಇದರ ದಡದಲ್ಲಿದೆ. ಇದನ್ನು ಈಗ (Gogra) ಗೋಗ್ರ ಎಂದು ಕರೆಯುತ್ತಾರೆ [ಭಾರ.-ಸಭಾ. ೯. ಭೀ. ೯]. ಇದು ಹಿಮಾಲಯ ಪರ್ವತದ ಒಂದು ಸರೋವರದಿಂದ ಹುಟ್ಟಿ ಪ್ರವಹಿಸುತ್ತದೆಯಾಗಿ ಇದಕ್ಕೆ "ಸರಯು" ಎಂದು ಹೆಸರು. ರಾಮ ಲಕ್ಷ್ಮಣರು ವಿಶ್ವಾಮಿತ್ರನ ಯಾಗಸಂರಕ್ಷಣೆಗಾಗಿ ಆತನ ಹಿಂದೆ ಹೋಗುವಾಗ ಈ ನದಿಯಲ್ಲಿ ಸ್ನಾನಮಾಡಿ ಮಂತ್ರೋಪದೇಶವನ್ನು ಪಡೆದರು [ರಾಮಾ.-ಬಾಲ. ೨೪] ಶ್ರೀರಾಮ ಅವತಾರವನ್ನು ಪೂರ್ತಿಗೊಳಿಸುವಾಗ ತನ್ನ ಪರಿವಾರದೊಂದಿಗೆ ಸರಯೂ ನದಿಯಲ್ಲಿ ಮುಳುಗಿದ [ರಾಮಾ.-ಉತ್ತ. ೧೧೯].

**ಸರಸ್ವತಿ.**—(i) ಒಂದು ನದಿ [ಭಾರ.-ಸ.೯.ವನ. ೮೮. ಭೀ. ೯]. ಸ್ವಾಯಂಭುವ ಮನುವಿನ ಹೆಂಡತಿಯಾದ ಶತರೂಪಾಯೆಂಬವಳ ನಾಮಾಂತರ [ಭಾರ.-ಶಾಂತಿ. ೧೨೨]. ವಸಿಷ್ಠ ವಿಶ್ವಾಮಿತ್ರರ ಯುದ್ಧದಲ್ಲಿ ವಿಶ್ವಾಮಿತ್ರ ಸರಸ್ವತೀ ನದಿಯನ್ನು ನಿರ್ಮಿಸಿದ. ಸರಸ್ವತಿ ಪ್ರವಾಹರೂಪದಿಂದ ಹರಿದು ವಸಿಷ್ಠನನ್ನು ತೇಲಿಸಿಕೊಂಡು ವಿಶ್ವಾಮಿತ್ರನಲ್ಲಿಗೆ ತಂದಳು. ವಿಶ್ವಾಮಿತ್ರ ವಸಿಷ್ಠನನ್ನು ಕೊಲ್ಲುವುದಕ್ಕೆ ಆಯುಧಗಳನ್ನು ಹವಣಿಸುವಷ್ಟರಲ್ಲಿ ಸರಸ್ವತಿಯ ಪ್ರವಾಹ ಉಕ್ಕಿಬಂದ ಕಾರಣ ವಸಿಷ್ಠ ದೂರವಾಗಿ ತೇಲಿಹೋದ. ವಿಶ್ವಾಮಿತ್ರ ಕುಪಿತನಾಗಿ, ಸರಸ್ವತಿ ವಸಿಷ್ಠನ ತಂತ್ರಕ್ಕೆ ಒಳಬಿದ್ದಳೆಂದು ತಿಳಿದು, ಸರಸ್ವತಿಯ ನೀರು ರಕ್ತಮಯವಾಗುವಂತೆ ಶಾಪವಿತ್ತ. ಅಂದಿನಿಂದ ಸರಸ್ವತಿಗೆ ಅರುಣಾಯೆಂದು ಹೆಸರಾಯಿತು. ಬಳಿಕ ಸರಸ್ವತಿ ಏಳು ಭಾಗವಾಗಿ ಹರಿದುಹೋದಳು. ನೋಡು—ಸಪ್ತಸಾರಸ್ವತ [ಭಾರ.-ಶಲ್ಯ. ೩೯-೪೩].

(ii) ಚಂದ್ರವಂಶದ ಅಂತ್ಯನಾರನ ಹೆಂಡತಿ. ಈಕೆಯ ಮಗ ತ್ರಸ್ನು [ಭಾರ.-ಆದಿ. ೬೩].

(iii) ಸಾತ್ಯಕಿಯ ಹೆಂಡತಿ [ಭಾರ -ಮೌ. ೮].

**ಸರ್ಪ.**—ದಕ್ಷಪುತ್ರಿಯಾದ ಕದ್ರುವಿನಲ್ಲಿ ಕಶ್ಯಪ ಮುನಿಯಿಂದ ಜನಿಸಿದುವು ನೋಡು—ಅನಂತ, ಕಾಳಿಯ, ತಕ್ಷಕ, ವಾಸುಕಿ, ಶೇಷ, ಶಂಖ, ಗರುಡ, ಕದ್ರೂ, [ಭಾರ.-ಆದಿ. ೫೭]. ಅವುಗಳ ಉತ್ಪತ್ತಿ, ಜನಮೇಜಯನ ಸರ್ಪಯಾಗದಲ್ಲಿ ಆಹುತಿಯಾಗುವಂತೆ ಮಾತೃಶಾಪ [ಆದಿ. ೧೫, ೧೬, ೨೦. ಅನು. ೨೩].

**ಸರ್ಪಯಾಗ.**—ಜನಮೇಜಯ ಸರ್ಪನಾಶಕ್ಕಾಗಿ ಮಾಡಿದ ಯಜ್ಞ. ಅಲ್ಲಿ ಋತ್ವಿಜರು, ಸದಸ್ಯರು ಮೊದಲಾದವರು [ಆದಿ. ೫೩]. ಆಸ್ತೀಕ ಅಲ್ಲಿಗೆ ಬಂದದ್ದು [ಆದಿ. ೫೪]. ಆಗ ಬೆಂಕಿಯಲ್ಲಿ ಸುಟ್ಟುಹೋದ ಸರ್ಪಗಳು, ಅವುಗಳ ಸಂತತಿ [ಆದಿ. ೫೭]. ಇಂದ್ರ ತಕ್ಷಕನ ಸಂಗಡ ಅಗ್ನಿಯಲ್ಲಿ ಬೀಳಬಂದದ್ದು [ಆದಿ. ೫೬].

ಸರ್ಪಸತ್ರ ನಿಂತುಹೋದದ್ದು [ಆದಿ. ೫೮]. ಕೃಷ್ಣದ್ವೈಪಾಯನ ಅಲ್ಲಿಗೆ ಬಂದದ್ದು [ಆದಿ. ೬೦]. ಸರ್ಪಗಳಿಗೆ ಎರಡು ನಾಲುಗೆಗಳುಂಟಾಗಲು ಕಾರಣ [ಆದಿ. ೩೪]. ಸರ್ಪಭೀತಿಯನ್ನು ಹೋಗಲಾಡಿಸುವ ಉಪಾಯ [ಆದಿ. ೫೮].

**ಸರ್ವಕರ್ಮ.**—ಸೂರ್ಯ ವಂಶದ ಋತುಪರ್ಣ ರಾಜನ ಮಗನಾದ ಸೌದಾಸನ ಮಗ. ಇವ ಪರಶುರಾಮನಿಗೆ ಹೆದರಿ ಪರಾಶರನನ್ನು ಮರೆಹೊಕ್ಕು ಆತನ ಆಶ್ರಮದಲ್ಲಿ ಸಕಲ ಕರ್ಮಗಳನ್ನೂ ನಿರ್ವಹಿಸುತ್ತಿದ್ದನಾಗಿ ಸರ್ವಕರ್ಮನೆಂದು ಹೆಸರು. ಕಶ್ಯಪ ಪರಶುರಾಮನಿಂದ ಭೂಮಂಡಲವನ್ನು ದಾನವಾಗಿ ಪಡೆದ ಬಳಿಕ ಅದನ್ನು ಭೂದೇವಿಯ ಸೂಚನೆಯ ಮೇರೆಗೆ ಸರ್ವಕರ್ಮನಿಗೆ ಕೊಟ್ಟ [ಶಾಂತಿ. ೪೮].

**ಸರ್ವದಮನ.**—ದುಶ್ಯಂತ ಪುತ್ರನಾದ ಭರತನ ನಾಮಾಂತರ.

**ಸವ್ಯಸಾಚಿ.**—ಅರ್ಜುನ ಎಡಗೈಯಿಂದಲೂ ಬಾಣಪ್ರಯೋಗಮಾಡುತ್ತಿದ್ದನಾಗಿ ಈ ಹೆಸರು ಬಂತು [ವಿರಾ. ೪೩].

**ಸಹದೇವ.**—ಪಾಂಡುರಾಯನ ಕಿರಿಯ ಹೆಂಡತಿಯಾದ ಮಾದ್ರಿಯಲ್ಲಿ ಅಶ್ವಿನೀ ದೇವತೆಗಳಿಂದ ಜನಿಸಿದ ಅವಳಿಮಕ್ಕಳಲ್ಲಿ ಕಿರಿಯವ [ಭಾರ.-ಆ ೬೩, ೧೧೩]. ದ್ರೌಪದೀಸ್ವಯಂವರ ಕಾಲದಲ್ಲಿ ದುಶ್ಶಾಸನನೊಂದಿಗೆ ಯುದ್ಧಮಾಡಿ ಆತನನ್ನು ಸೋಲಿಸಿದ [ಆದಿ. ೨೦೫] ಈತ ದ್ರೌಪದಿಯಲ್ಲಿ ಶ್ರುತಸೇನನೆಂಬ ಪುತ್ರನನ್ನು ಪಡೆದ [ಆದಿ. ೬೪] ಮದ್ರದೇಶಾಧಿಪತಿಯಾದ ಶಲ್ಯನ ಮಗಳಾದ ವಿಜಯೆಯನ್ನು ಮದುವೆಯಾಗಿ ಸುಹೋತ್ರನೆಂಬ ಮಗನನ್ನು ಪಡೆದ [ಭಾರ.-ಆದಿ ೬೩]. ಭಾನುರಾಜನ ಮಗಳಾದ ಭಾನುಮತಿಯೆಂಬವಳು ಈತನ ಮೂರನೆಯ ಹೆಂಡತಿ [ಹರಿ.-೨-೯೦]. ರಾಜಸೂಯ ಸಮಯದಲ್ಲಿ ದಕ್ಷಿಣ ದಿಗ್ವಿಜಯಕ್ಕೆ ಹೊರಟು ಅನೇಕ ದೇಶಗಳನ್ನು ಗೆದ್ದು, ಘಟೋತ್ಕಚನ ಮೂಲಕ ವಿಭೀಷಣನಿಂದ ಕಪ್ಪವನ್ನು ತರಿಸಿದ [ಭಾರ.-ಸ. ೩೨]. ಭೀಷ್ಮನ ಸೂಚನೆಯಂತೆ ರಾಜಸೂಯ ಮುಗಿದಾಗ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದ [ಸಭಾ. ೩೯]. ದ್ಯೂತಸಭೆಯಲ್ಲಿ ಈತ ಶಕುನಿಯನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದು [ಸಭಾ. ೯೯]. ವಿರಾಟರಾಜನಲ್ಲಿ ಅಜ್ಞಾತವಾಸ ಮಾಡುವಾಗ ಇವನಿಗೆ ತಂತ್ರೀಪಾಲನೆಂದು ಹೆಸರು [ವಿರಾ. ೪]. ಅದೇ ಸಮಯದಲ್ಲಿ ಇವನಿಗೆ ಜಯದ್ಬಲನೆಂಬುದು ಗೂಢವಾದ ಹೆಸರು [ವಿರಾ. ೭]. ಇವ ವಿರಾಟನ ರಾಜಧಾನಿಯನ್ನು ಹೊಕ್ಕದ್ದು [ವಿರಾ. ೧೩] ಹದಿನಾಲ್ಕನೆಯ ದಿನದ ರಾತ್ರಿಯುದ್ಧದಲ್ಲಿ ಕರ್ಣನಿಂದ ಸೋತ [ದ್ರೋ. ೧೬೮]. ಇವ ಹದಿನೆಂಟನೆಯ ದಿನ ಶಕುನಿಯನ್ನು ಕೊಂದ [ಶಲ್ಯ. ೨೭] ಮಹಾಪ್ರಸ್ಥಾನ ಸಮಯದಲ್ಲಿ ಸಹದೇವ ದೇಹತ್ಯಾಗಮಾಡಿದ್ದು [ಮಹಾ. ೨].

(ii) ಜರಾಸಂಧನ ಮಗ. ಇವನಿಗೆ ರಾಜ್ಯಾಭಿಷೇಕವಾದದ್ದು [ಸಭಾ. ೨೫]. ಇವನ ಕುದುರೆಗಳು ಚಿತ್ರವರ್ಣದ್ದು [ದ್ರೋ. ೨೩]. ಹದಿನಾಲ್ಕನೆಯ ದಿನ ರಾತ್ರಿ ಯುದ್ಧದಲ್ಲಿ ದ್ರೋಣನಿಂದ ಮಡಿದ [ಭಾರ.-ದ್ರೋ. ೧೨೫].

**ಸಹಸ್ರಪಾದ.**—ಒಬ್ಬ ಋಷಿ. ನೋಡು—ಖಗಮ, ಡುಂಡುಭ.

**ಸಹ್ಯ.**—ಒಂದು ಪರ್ವತ. ಇದನ್ನು ಈಗ ಸಹ್ಯಾದ್ರಿಯೆಂದು ಕರೆಯುತ್ತಾರೆ. ಸಪ್ತ ಕುಲಪರ್ವತಗಳಲ್ಲಿ ಒಂದು [ಭಾರ.-ಭೀ. ೯]. ಈ ಪರ್ವತದಿಂದ ಗೋದಾವರಿ, ಭೀಮರಥಿ, ಕೃಷ್ಣಾ, ವೇಣೀ, ಮಂಜುಲಾ, ತುಂಗಭದ್ರಾ, ಸುಪ್ರಯೋಗಾ, ಬಾಹ್ಯಾ, ಕಾವೇರಿಯೆಂಬ ನದಿಗಳು ಹರಿಯುತ್ತವೆ [ಮತ್ಸ್ಯ.-೧೧೪].

**ಸಾಙ್ಕಾಶ್ಯ.**—ಒಂದು ಪಟ್ಟಣ. ಇಕ್ಷುಮತೀ ನದೀತೀರದಲ್ಲಿದೆ. ಇದು ಇಂದ್ರ ದೇಶದ ರಾಜಧಾನಿ. ದಶರಥನ ಕಾಲದಲ್ಲಿ ಸುಧನ್ವನೆಂಬ ಅರಸು ಇಲ್ಲಿ ರಾಜ್ಯಭಾರ ಮಾಡುತ್ತಿದ್ದ. ಶ್ರೀ ರಾಮನ ಮಾವನಾದ ಸೀರಧ್ವಜ ಜನಕ ಸುಧನ್ವನನ್ನು ಯುದ್ಧ ದಲ್ಲಿ ಕೊಂದು, ತನ್ನ ತಮ್ಮನಾದ ಕುಶಧ್ವಜ ಜನಕನಿಗೆ ಆ ರಾಜ್ಯದಲ್ಲಿ ಪಟ್ಟಗಟ್ಟಿದ [ರಾ.-ಬಾಲ. ೭೦]

**ಸಾಙ್ಕೃತಿ.**—ಪುರು ವಂಶದ ಸಂಕೃತಿರಾಯನ ಮಗನಾದ ರಂತಿದೇವನಿಗೆ ಈ ಹೆಸರು ಸಲ್ಲುತ್ತದೆ.

**ಸಾಂಖ್ಯಶಾಸ್ತ್ರನಿರೂಪಣ.**—[ಭಾರ.-ಶಾಂತಿ. ೩೦೭, ೩೧೧, ೩೨೦. ಅನು. ೨೪೫].

**ಸಾಙ್ಖ್ಯಾಯನ.**—ಪೂರ್ವಕಾಲದ ಒಬ್ಬ ಮಹರ್ಷಿ. ಸನಕಾದಿಗಳ ಶಿಷ್ಯನಾಗಿದ್ದು, ಪರಮಹಂಸಧರ್ಮವನ್ನು ಕೈಕೊಂಡು ಲೋಕದಲ್ಲಿ ಸಂನ್ಯಾಸಾಶ್ರಮವನ್ನು ಪ್ರಚಾರ ಗೊಳಿಸಿದವ [ಭಾಗ.-೩-೮].

**ಸಾತ್ಯಕಿ.**—ಯದು ವಂಶದ ಶಿನಿ ರಾಜನ ಮಗನಾದ ಸತ್ಯಕನ ಮಗನಾದ ಯುಯುಧಾನನಿಗೆ ಈ ಹೆಸರು ಸಲ್ಲುತ್ತದೆ. ನೋಡು—ಯುಯುಧಾನ.

**ಸಾಧ್ಯ.**—ದೇವತೆಗಳಲ್ಲಿ ಒಂದು ಪಂಗಡದವರು. ದಕ್ಷಪುತ್ರಿಯಾದ ಸಾಧ್ಯಾ ಯೆಂಬವಳಲ್ಲಿ ಧರ್ಮಮಹರ್ಷಿಯಿಂದ ಜನಿಸಿದವರು [ಭಾರ.-ಸಭಾ. ೭]. ಇವರ ಹೆಸರು ಗಳು ಮುಂತಾಗಿ [ಮತ್ಸ್ಯ.-೨೦೩].

**ಸಾನ್ದೀಪಿನಿ.**—ಒಬ್ಬ ಬ್ರಾಹ್ಮಣ. ಅವಂತೀ ಪಟ್ಟಣದಲ್ಲಿ ವಾಸವಾಗಿದ್ದ. ಬಲ ರಾಮ, ಕೃಷ್ಣ, ಸುದಾಮರು ಈತನಲ್ಲಿ ವಿದ್ಯಾಭ್ಯಾಸಮಾಡಿದ್ದು [ಭಾರ.-ಸಭಾ. ೭. ಭಾಗ.-೧೦-೪೫. ವಿಷ್ಣು.-೫-೨೧]. ಈತನ ಮೃತನಾದ ಮಗನನ್ನು ಕೃಷ್ಣ ಮರಳಿ ಕರೆತಂದು ಒಪ್ಪಿಸಿದ್ದು. ನೋಡು—ಪಂಚಜನ [ಭಾಗ.-೧೦-೪೫].

**ಸಾಮ್ಬ.**—ಜಾಂಬವಂತನ ಮಗಳಾದ ಜಾಂಬವತಿಯಲ್ಲಿ ಕೃಷ್ಣನಿಂದ ಜನಿಸಿದವ [ಭಾರ.-ಆ. ೨೦೧, ೨೩೯. ಸ. ೪]. ದುರ್ಯೋಧನ ಪುತ್ರಿಯಾದ ಲಕ್ಷ್ಮಣೆ ಈತನ ಹೆಂಡತಿ ನೋಡು—ಬಲರಾಮ, ಲಕ್ಷ್ಮಣಾ [ಭಾಗ.-೧೦-೬೮]. ಕ್ಷೇಮಧೂರ್ತಿಯ ಸಂಗಡ ಯುದ್ಧ [ಭಾರ.-ವನ. ೧೬]. ಯಾದವರು ಈತನಿಗೆ ಗರ್ಭಿಣೀವೇಷವನ್ನು ಹಾಕಿ, ದ್ವಾರಕೆಗೆ ಬಂದಿದ್ದ ಕಣ್ವನಲ್ಲಿಗೆ ಕರೆದುಯ್ದು, ಎಂತಹ ಮಗುವನ್ನು ಹೆರುವ ಳೆಂದು ಕೇಳಿದ್ದು, ಕಣ್ವ ಮುಸಲವನ್ನು ಹೆರುವಳೆಂದದ್ದು ಮುಂತಾಗಿ. ನೋಡು—ಕಣ್ವ [ಭಾರ.-ಮೌ. ೨]. ಸಾಂಬನ ಮರಣ [ಮೌಸಲ. ೪].

**ಸಾಮವೇದ.**—ಬ್ರಹ್ಮನ ಪಶ್ಚಿಮ ಮುಖದಿಂದ ಹೊರಟದ್ದು. ಗಾಂಧರ್ವವೇದ ಇದರ ಉಪವೇದ. ನೋಡು—ವೇದ ಕೃಷ್ಣದ್ವೈಪಾಯನ.

**ಸಾರಣ.**—ರಾವಣನ ಗೂಢಚಾರರಲ್ಲಿ ಒಬ್ಬ. ನೋಡು—ಶುಕ, ರಾಮ, ವಿಭೀಷಣ [ಭಾರ.-ವನ. ೨೮೪].

**ಸಾರಸ್ವತ.**—ಅಥರ್ವಣ ಮುನಿ ಪುತ್ರನಾದ ದಧೀಚಿ ಅಲಂಬುಸೆಯೆಂಬ ಅಪ್ಸರಸಿಯನ್ನು ಕಂಡು ಎದೆಗುಂದಲಾಗಿ ಆತನ ವೀರ್ಯ ಸರಸ್ವತೀ ನದಿಯಲ್ಲಿ ಬೀಳಲಾಗಿ ಜನಿಸಿದವ. ದಧೀಚ ಈತನಿಗೆ ಸಾರಸ್ವತನೆಂದು ಹೆಸರಿಟ್ಟು, ಎಂತಹ ದುರ್ಭಿಕ್ಷ ಕಾಲದಲ್ಲಿಯಾದರೂ ನಿರುಪಾಧಿಕವಾಗಿ ಜನಗಳನ್ನು ಕಾಪಾಡಲು ಶಕ್ತನೆಂದು ಹೇಳಿ ಮರಳಿ ಸರಸ್ವತೀ ನದಿಗೆ ಒಪ್ಪಿಸಿದ. ಕೆಲವು ಕಾಲದ ತರುವಾಯ ಲೋಕದಲ್ಲಿ ಅನಾವೃಷ್ಟಿ ತಲೆದೋರಲಾಗಿ ಸಾರಸ್ವತ ಮುನಿಬೃಂದವನ್ನು ಕಾಪಾಡಿದ [ಭಾರ.-ಶಲ್ಯ. ೫೨].

(ii) ಒಬ್ಬ ಬ್ರಹ್ಮರ್ಷಿ. ಮಹಾವಿಷ್ಣುವಿನ ವಾಗಂಶದಿಂದ ಜನಿಸಿದವ. ಈತನಿಗೆ ಅಪಾಂತರತಮ, ಪ್ರಾಚೀನಗರ್ಭ, ವೇದಾಚಾರ್ಯ ಎಂಬ ನಾಮಾಂತರಗಳೂ ಇವೆ [ಭಾರ.-ಶಾಂತಿ. ૩೫೯].

**ಸಾರಿಸೃಕ್ವ.**—ಶಾರ್ಙ್ಗಕವೆಂಬ ಹೆಸರಿನ ಹಕ್ಕಿ. ಮಂದಪಾಲನೆಂಬ ಮುನಿ ಶಾರ್ಙ್ಗಕ ಪಕ್ಷಿರೂಪವನ್ನು ಧರಿಸಿದ್ದಾಗ ಜರಿತೆಯೆಂಬ ಹೆಸರಿನ ಶಾರ್ಙ್ಗಕ ಹೆಣ್ಣು ಪಕ್ಷಿಯಲ್ಲಿ ಜನಿಸಿದ್ದು, ಖಾಂಡವವನದಲ್ಲಿ ವಾಸಮಾಡುತ್ತಿದ್ದು, ಅಗ್ನಿ ಖಾಂಡವ ವನವನ್ನು ದಾಹಮಾಡಿದಾಗ ಅಗ್ನಿಯನ್ನು ಹೊಗಳಿ ಬಿಡುಗಡೆಹೊಂದಿತು. ನೋಡು—ಜರಿತಾ, ಮಂದಪಾಲ [ಭಾರ.-ಆದಿ. ೨೫೮].

**ಸಾರ್ವಭೌಮ.**—ಒಬ್ಬ ಅರಸು. ಚಂದ್ರ ವಂಶದ ಅಹಂಯಾತಿ ರಾಜನಿಂದ ಯದು ವಂಶದ ಕೃತವೀರ್ಯ ರಾಜನ ಮಗಳಾದ ಭಾನುಮತಿಯಲ್ಲಿ ಜನಿಸಿದವ. ಈತ ಕೇಕಯ ರಾಜಪುತ್ರಿಯಾದ ಸುನ್ದರಾ ಎಂಬ ತರುಣಿಯನ್ನು ಮದುವೆಯಾಗಿ ಜಯತ್ಸೇನನೆಂಬ ಪುತ್ರನನ್ನು ಪಡೆದ [ಭಾರ.-ಆದಿ. ೬೩].

**ಸಾಲಕಟಂಕಟಾ.**—ಸಂಧ್ಯಾದೇವಿಯ ಮಗಳು. ಹೇತಿಯೆಂಬ ರಾಕ್ಷಸನ ಮಗನಾದ ವಿದ್ಯುತ್ಕೇಶನೆಂಬ ರಕ್ಕಸನನ್ನು ಮದುವೆಯಾಗಿ ಸುಕೇಶನೆಂಬ ಮಗನನ್ನು ಪಡೆದಳು. ನೋಡು—ಸುಕೇಶ, ವಿದ್ಯುತ್ಕೇಶ [ರಾಮಾ -ಉತ್ತ. ೪].

**ಸಾಲಕಟಂಕಟೀ.**—ಹಿಡಿಂಬಾಸುರನ ತಂಗಿಯಾದ ಹಿಡಿಂಬೆ ಅಥವಾ ಕಮಲಪಾಲಿಕೆಯ ನಾಮಾಂತರ [ಭಾರ.-ಆದಿ. ೧೬೭].

**ಸಾಲ್ವ.**—(i) ಒಬ್ಬ ಅರಸು. ನೋಡು—ಬ್ರಹ್ಮದತ್ತ, ಕೃಷ್ಣ.

(ii) ಮ್ಲೇಚ್ಛದೇಶದ ಅರಸು. ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಹದಿನೆಂಟನೆಯ ದಿನದ ಯುದ್ಧದಲ್ಲಿ ಸಾತ್ಯಕಿಯಿಂದ ಮಡಿದ [ಭಾರ.-ಶಲ್ಯ. ೧೯].

**ಸಾವರ್ಣಿ.**—(i) ಕೃತಯುಗದ ಒಬ್ಬ ಮಹರ್ಷಿ. ಈತ ಅರುವತ್ತು ಸಾವಿರ ವರ್ಷ ತಪಸ್ಸುಮಾಡಿ ಶಿವನನ್ನು ಮೆಚ್ಚಿಸಿದ [ಭಾರ -ಅನು. ೪೫].

(ii) ಎಂಟನೆಯ ಮನು. ಸೂರ್ಯನಿಂದ ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯಾದೇವಿಯಲ್ಲಿ ಜನಿಸಿದವ. ಈತ ಹಿಂದಣ ಜನ್ಮದಲ್ಲಿ ಸುರಥನೆಂಬ ಅರಸು. ನೋಡು—ಸುರಥ, ಮನು, ಸಂಜ್ಞಾ [ಭಾಗ.-೮, ೧೩. ಮಾರ್ಕಂ.-೭೫].

**ಸಾವರ್ಣ್ಯ.**—ಒಬ್ಬ ರಾಜರ್ಷಿ. ಮಣ್ಣಿನ ಹೆಣ್ಣುಬೊಂಬೆಯಲ್ಲಿ ಸೂರ್ಯನಿಂದ ಜನಿಸಿದವ [ಭಾರ.-ಅನು ೫೩].

**ಸಾವಿತ್ರೀ**—(i) ಒಬ್ಬ ದೇವತೆ. ಗಾಯತ್ರೀದೇವಿಯ ರೂಪಾಂತರ [ಭಾರ.-ವನ. ೨೯೪].

(ii) ಆದಿಶಕ್ತಿಯ ಪಂಚಪ್ರಕೃತಿಗಳಲ್ಲಿ ಒಬ್ಬಳು [ದೇ.ಭಾ.-೫-೧].

(iii) ಮದ್ರ ದೇಶಾಧಿಪತಿಯಾದ ಅಶ್ವಪತಿ ರಾಜನ ಮಗಳು. ಮಾಳವ ರಾಜಪುತ್ರಿ ಈಕೆಯ ಜನನಿ. ಸಾಳ್ವ ರಾಜನಾಗಿದ್ದ ದ್ಯುಮತ್ಸೇನನ ಮಗನಾದ ಸತ್ಯವಂತನನ್ನು ವರಿಸಿ ಮದುವೆಯಾದಳು [ಭಾರ.-ವನ ೨೯೩, ೨೯೪]. ಸತ್ಯವಂತನೊಂದಿಗೆ ಅರಣ್ಯಕ್ಕೆ ಸೌದೆಯನ್ನು ತರಹೋಗಿ ಅಲ್ಲಿ ಸತ್ತ ತನ್ನ ಗಂಡನನ್ನು ಎಳೆದುಯ್ದ ಯಮನೊಂದಿಗೆ ಸಂವಾದಮಾಡಿ, ಆತನನ್ನು ಮೆಚ್ಚಿಸಿ, ತನ್ನ ಮಾವನಿಗೆ ಮರಳಿ ಕಣ್ಣು ಬರುವಂತೆಯೂ, ಶತ್ರುಗಳು ಅಪಹರಿಸಿದ್ದ ರಾಜ್ಯ ದೊರೆಯುವಂತೆಯೂ, ತನಗೂ ತನ್ನ ತಂದೆಗೂ ಪುತ್ರಸಂತಾನವಾಗುವಂತೆಯೂ ವರಗಳನ್ನು ಪಡೆದು, ಸತ್ಯವಂತನನ್ನು ಬದುಕಿಸಿಕೊಂಡು ಬಂದು ಅತ್ತೆ ಮಾವಂದಿರ ಗೌರವಕ್ಕೆ ಪಾತ್ರಳಾದಳು. ಪತಿವ್ರತೆಯರಲ್ಲಿ ಅಗ್ರಗಣ್ಯೆ [ಭಾರ.-ವನ. ೨೯೪-೩೦೦. ಮತ್ಸ್ಯ.-೨೦೮-೨೧೪].

**ಸಾವಿತ್ರೀಕಲ್ಪ.**—ನೋಡು—ಕಲ್ಪ.

**ಸಿಂಹ.**—ಮೃಗರಾಜ ಕಶ್ಯಪ ಪತ್ನಿಯಾದ ಕ್ರೋಧವಶೆಯೆಂಬವಳಲ್ಲಿ ಜನಿಸಿದ ಶಾರ್ದೂಲಿಯೆಂಬವಳಿಂದ ಜನಿಸಿದ್ದು [ಭಾರ.-ಆದಿ. ೬೭].

**ಸಿಂಹಪುರ.**—ಒಂದು ಪಟ್ಟಣ. ಕಾಶ್ಮೀರ ದೇಶದಲ್ಲಿದೆ. ಯುಧಿಷ್ಠಿರನ ರಾಜ ಸೂಯ ಸಮಯದಲ್ಲಿ ಅರ್ಜುನ ಇಲ್ಲಿಗೆ ಬಂದಿದ್ದ [ಸಭಾ. ೨೮].

**ಸಿಂಹಸೇನ.**—ಪಾಂಚಾಲ ದೇಶದ ಗೋಪತಿಯೆಂಬ ಅರಸನ ಮಗ. ಪಾಂಡವ ಪಕ್ಷಪಾತಿ. ಹನ್ನೊಂದನೆಯ ದಿನದಲ್ಲಿ ದ್ರೋಣನಿಂದ ಮಡಿದ [ದ್ರೋ. ೧೬, ೨೩].

**ಸಿಂಹಿಕಾ.**—(i) ದಕ್ಷನ ಮಗಳು. ಕಾಶ್ಯಪನಿಂದ ರಾಹು, ಸುಚಂದ್ರ, ಚಂದ್ರ ಹರ್ತಾ, ಚಂದ್ರಮರ್ದನರೆಂಬ ನಾಲ್ವರು ಪುತ್ರರನ್ನು ಪಡೆದಳು [ಭಾರ.-ಆದಿ. ೬೬]. ನೋಡು—ವಿಪ್ರಚಿತ್ತಿ, ವಾತಾಪಿ, ಇಲ್ವಲ.

(ii) ಹನೂಮಂತ ಸೀತೆಯನ್ನು ಹುಡುಕುವುದಕ್ಕಾಗಿ ಸಮುದ್ರವನ್ನು ದಾಟುತ್ತಿದ್ದಾಗ ಇವಳು ಜಲಚರ ರೂಪದಿಂದ ಸಮುದ್ರದಲ್ಲಿದ್ದು ಹನೂಮಂತನ ನೆರಳಿನಿಂದಲೇ ಅವನನ್ನು ಆಕರ್ಷಿಸಿ, ಹತಳಾದಳು [ರಾಮಾ.-ಸುಂ. ೧].

**ಸಿದ್ಧಾಶ್ರಮ.**—ಒಂದು ಆಶ್ರಮ ಮಲದ, ಕರೂಶ ದೇಶಗಳ ನಡುವೆ ಇದೆ. ಪೂರ್ವ ಕಾಲದಲ್ಲಿ ಅದಿತಿ, ಕಶ್ಯಪ, ವಾಮನ ಮುಂತಾದವರು ಇಲ್ಲಿ ತಪಸ್ಸುಮಾಡಿ ಸಿದ್ಧಿಯನ್ನು ಪಡೆದ ಕಾರಣ ಇದಕ್ಕೆ ಸಿದ್ಧಾಶ್ರಮವೆಂದು ಹೆಸರು. ವಿಶ್ವಾಮಿತ್ರ ಇಲ್ಲಿಯೇ ತಪಸ್ಸುಮಾಡುತ್ತಿದ್ದ ಮಾರೀಚ, ಸುಬಾಹುಗಳನ್ನು ರಾಮ ನಿಗ್ರಹಿ ಸಿದ್ದೂ ಇಲ್ಲಿಯೇ [ರಾಮಾ -ಬಾಲ. ೨೯].

**ಸಿನ್ಧು.**—(i) ಒಂದು ನದಿ ಹಿಮವತ್ಪರ್ವತದಿಂದ ಹರಿಯುತ್ತದೆ (Indus) [ಭಾರ.-ಸ. ೯. ಭೀ. ೯].

(ii) ಒಂದು ದೇಶ. ಸೌವೀರ ದೇಶಕ್ಕೆ ಸಮೀಪದಲ್ಲಿದೆ. ಪಾಂಡವರ ಕಾಲದಲ್ಲಿ ವೃದ್ಧಕ್ಷತ್ರ, ಜಯದ್ರಥರು ಇಲ್ಲಿ ಅರಸರಾಗಿದ್ದರು [ಭಾರ.-ಭೀ. ೯].

**ಸಿನ್ಧುದ್ವೀಪ.**—(i) ಸೂರ್ಯ ವಂಶದ ಜಹ್ನುರಾಯನ ಮಗ. ಕ್ಷತ್ರಿಯನಾಗಿ ಜನಿಸಿ, ತಪಸ್ಸಿನಿಂದ ಬ್ರಾಹ್ಮಣ್ಯವನ್ನು ಪಡೆದು, ಮಂತ್ರದ್ರಷ್ಟೃವಾದ [ಭಾರ.-ಶಲ್ಯ. ೪೧].

(ii) ಋತುಪರ್ಣ ರಾಜನ ಅಜ್ಜ [ಹರಿ.-೧, ೧೫. ಭಾಗ.-೯-೯].

**ಸೀತಾ.**—(i) ಒಂದು ನದಿ. ಪೂರ್ವ ತುರ್ಕಿಸ್ಥಾನದಲ್ಲಿದೆ [ಭಾರ.-ಭೀ. ೯].

(ii) ನೋಡು—ವೇದವತಿ [ರಾಮಾ.-ಉತ್ತ. ೧೭]. ಸೀರಧ್ವಜ ಜನಕನ ಪ್ರೇಮಪುತ್ರಿ. ರಾಮನ ಹೆಂಡತಿ. ಅಯೋನಿಜೆ. ಲವ, ಕುಶರು ಈಕೆಯ ಮಕ್ಕಳು [ಭಾರ.-ಸಭಾ. ೫೦. ವನ. ೨೭೯]. ಸೀತೆಯ ಉತ್ಪತ್ತಿ [ರಾಮಾ -ಬಾಲ.

೬೭. ಉತ್ತ. ೧೭]. ಜನಕ ಸಂತಾನಾರ್ಥವಾಗಿ ಯಜ್ಞಮಾಡಲು ಭೂಮಿಯನ್ನು ಶುದ್ಧಿಮಾಡುತ್ತಿದ್ದಾಗ ಸೀತೆ(ನೇಗಿಲಿನಿಂದ ಉತ್ತಭೂಮಿ)ಯಿಂದ ಹೊರಬಿದ್ದ ಕಾರಣ ಸೀತೆಯೆಂದು ಹೆಸರು. ಜನಕ ತನ್ನ ಮನೆಯಲ್ಲಿ ನ್ಯಾಸವಾಗಿದ್ದ ಶಿವಧನುಸ್ಸಿಗೆ ಹೆದೆಯನ್ನು ಏರಿಸಿದವನಿಗೆ ತನ್ನ ಮಗಳನ್ನು ಕೊಡುವುದಾಗಿ ಪಣವನ್ನು ಏರ್ಪಡಿಸಿದ್ದ. ರಾಮ ಆ ಪಣವನ್ನು ಗೆದ್ದು ಸೀತೆಯನ್ನು ಮದುವೆಯಾದ [ರಾ.-ಬಾಲ. ೬೭]. ಸೀತಾವಿವಾಹ [ರಾಮಾ.-ಬಾಲ. ೭೩]. ಸೀತೆ ರಾಮನ ಅರಣ್ಯವಾಸ ವೃತ್ತಾಂತವನ್ನು ಕೇಳಿ ತಾನೂ ಸಂಗಡ ಬರುವೆನೆಂದು ಬಲಾತ್ಕರಿಸಿ, ರಾಮನ ಅನುಮತಿಯನ್ನು ಪಡೆದದ್ದು [ರಾಮಾ.-ಅಯೋ. ೨೬-೨೯]. ಸೀತೆ ಅರಣ್ಯಕ್ಕೆ ಹೊರಡುವ ಮೊದಲು ತನ್ನ ಆಭರಣಾದಿಗಳನ್ನು ದಾನಮಾಡಿದಳು [ಅಯೋ. ೩೨] ಸೀತೆ ರಾಮನೊಂದಿಗೆ ಕಾಡಿಗೆ ಹೊರಟಾಗ ಸೀತೆಗೆ ಕೌಸಲ್ಯಾದಿಗಳು ಬುದ್ಧಿಹೇಳಿದ್ದು [ಅಯೋ. ೩೯]. ಕೌಸಲ್ಯೆ ಮೊದಲಾದವರು ಸೀತೆಯನ್ನು ಚಿತ್ರಕೂಟದಲ್ಲಿ ಕಂಡು ದುಃಖಪಟ್ಟದ್ದು [ಅಯೋ. ೧೦೪]. ಸೀತೆ ಅತ್ರಿ ಮುನಿಯ ಪತ್ನಿಯಾದ ಅನಸೂಯೆಯಿಂದ ಪಾತಿವ್ರತ್ಯಧರ್ಮಗಳನ್ನು ತಿಳಿದು, ಆಕೆಯಿಂದ ದಿವ್ಯವಾದ ಅಂಗರಾಗವನ್ನೂ, ಪುಷ್ಪಮಾಲೆಯನ್ನೂ, ದಿವ್ಯಾಭರಣಗಳನ್ನೂ ಪಡೆದದ್ದು [ಅಯೋ. ೧೧೮]. ವಿರಾಧ ಸೀತೆಯನ್ನು ಅಪಹರಿಸಿದ್ದು ಮುಂತಾಗಿ [ಅರ ೨] ಸೀತಾದೇವಿ ರಾಮನೊಂದಿಗೆ ಕ್ಷತ್ರಿಯಧರ್ಮ ವಿಷಯವಾಗಿ ಸಂವಾದಮಾಡಿದ್ದು [ಅರ. ೯, ೧೦]. ಸೀತೆ ಮಾಯಾ ಮೃಗವನ್ನು ಕಂಡು ಮೋಹಗೊಂಡದ್ದು [ಅರ. ೪೨, ೪೩] ಸೀತೆ ಲಕ್ಷ್ಮಣನನ್ನು ಚುಚ್ಚುಮಾತುಗಳಿಂದ ಹೀಯಾಳಿಸಿದ್ದು [ಅರ. ೪೫]. ರಾವಣ ಸೀತೆಯ ಬಳಿಗೆ ಬಂದದ್ದು, ಸೀತೆ ತನ್ನ ವೃತ್ತಾಂತವನ್ನು ರಾವಣನಿಗೆ ತಿಳುಹಿದ್ದು ಮುಂತಾಗಿ [ಅರ ೪೬-೪೮]. ರಾವಣ ಸೀತೆಯನ್ನು ಅಪಹರಿಸಿದ್ದು [ಅರ ೪೯] ರಾಮ ಮಾರೀಚನ ಸಂಹಾರಕ್ಕೆ ಹೋದಾಗ ಮಾಯಾಸೀತೆಯನ್ನು ಕಲ್ಪಿಸಿ, ತನ್ನ ಆಶ್ರಮದ ಸುತ್ತಲೂ ಯಾರೂ ಅತಿಕ್ರಮಿಸಿ ಒಳಹುಗದಂತೆ ಮಂಡಲವನ್ನು ಏರ್ಪಡಿಸಿದ್ದ. ರಾವಣ ಅದನ್ನು ದಾಟಿ, ಶಾಪಭೀತಿಯಿಂದ ಸೀತೆ ನಿಂತಿದ್ದ ಭೂಮಿಯಿಂದ ದೊಡ್ಡ ಮಣ್ಣುಹೆಂಟೆಯನ್ನು ತ್ರಿಶೂಲದಿಂದ ಬಗಿದು, ರಥದಲ್ಲಿಟ್ಟು ಕೊಂಡುಯ್ದ ಆ ಪರ್ಣಶಾಲೆಯೂ ಅಲ್ಲಿನ ಹಳ್ಳವೂ ಈಗಲೂ ಕಾಣಬರುತ್ತವೆ.

ಭೂಮೌ ತಾಂ ಪತಿತಾಂ ದೃಷ್ಟ್ವಾ ಶಾಪಭೀತೋಽತಿದಾರುಣಃ ।
ನಾಸ್ಪೃಶತ್ ಸ್ವತ್ರಿಶೂಲೇನ ಲೋಷ್ಟಮುದ್ಧೃತ್ಯ ತಾವತಾ ॥
ಸ್ವರಥೇ ಸ್ಥಾಪಯಾಮಾಸ ರಾವಣಃ ಕಾಲಚೋದಿತಃ ।
ಸಾ ಪರ್ಣಶಾಲಾ ತದ್ಗರ್ತಮದ್ಯಾಪಿ ಪ್ರದೃಶ್ಯತೇ ॥

[ತತ್ವಸಂ. ರಾಮಾ.-ಅರ. ೧೫].

ರಾವಣ ಸೀತೆಯನ್ನು ಅಪಹರಿಸಿದ್ದು [ವಾ ರಾಮಾ -ಅರ ೫೬] ರಾವಣ ಮಾರೀಚ ನನ್ನು ಮಾಯಾಮೃಗರೂಪದಿಂದ ಕಳುಹಿ ತಾನು ಅವಿತುಕೊಂಡಿದ್ದ ಆಗ ರಾಮ ಆ ಮೃಗವನ್ನು ಕಂಡು, ರಾವಣನ ತಂತ್ರವೆಂದು ನಿಶ್ಚಯಿಸಿ, ಸೀತೆಯನ್ನು ಕುರಿತು "ನೀನು ನಿನ್ನ ಪ್ರತಿಬಿಂಬವನ್ನು ಇಲ್ಲಿರಿಸಿ, ಒಂದು ವರ್ಷಕಾಲ ಅಗ್ನಿ ಯಲ್ಲಿರು ರಾವಣವಧಾನಂತರ ನಾನು ನಿನ್ನನ್ನು ಸಂಗ್ರಹಿಸುವೆ" ಎಂದ ಸೀತೆ ಅಂತೆಯೇ ಮಾಡಲಾಗಿ ರಾವಣ ಮಾಯಾಸೀತೆಯನ್ನು ಅಪಹರಿಸಿದ [ಅಧ್ಯಾ ಅರ ೭] ಸೀತೆ ರಾವಣನನ್ನು ನಿಂದಿಸಿದ್ದು [ವಾ ರಾ -ಅರ ೫೩] ತನ್ನ ಸಮಾಚಾರ ವನ್ನು ಇವರಾದರೂ ರಾಮನಿಗೆ ತಿಳುಹಲೆಂಬ ಉದ್ದೇಶದಿಂದ ಸೀತೆ ತನ್ನ ಸೆರಗನ್ನು ಹರಿದು, ಆಭರಣಗಳನ್ನು ಅದರಲ್ಲಿ ಗಂಟುಕಟ್ಟಿ ಋಷ್ಯಮೂಕಪರ್ವತದ ಮೇಲೆ ಕುಳಿತಿದ್ದ ಸುಗ್ರೀವ, ಹನೂಮಂತರ ಮುಂದೆ ಬಿಸುಟದ್ದು [ವಾ ರಾ ಅರ ೫೪] ಇಂತು ಸೀರೆಯ ಸೆರಗನ್ನು ಹರಿದ ಸೀತೆಯನ್ನು ಕಂಡು ದ್ರಾವಿಡ ದೇಶದ ಸ್ತ್ರೀಯರು ಪರಿಹಾಸಮಾಡಲಾಗಿ, ಸಿಟ್ಟುಗೊಂಡ ಸೀತೆ ಆ ಸ್ತ್ರೀಯರನ್ನು ಕುರಿತು "ನಿಮಗೆ ಕರ್ಣಕುಂಡಲಗಳೂ ಉತ್ತರೀಯವೂ (ಸೀರೆಯ ಸೆರಗೂ) ಇರಕೂಡದು" ಎಂದು ಶಾಪಕೊಟ್ಟದ್ದು

ಶಪ್ತಾ ದ್ರವಿಡದೇಶಸ್ಥಾ ಸ್ತ್ರಿಯೋ ಹಾಸಪ್ರಕಾರಣಾತ್ ।
ತ್ಯಕ್ತೋತ್ತರೀಯಾಸ್ಸತತಂ ಕರ್ಣಾಲಂಕಾರವರ್ಜಿತಾ ॥

[ತತ್ವ ರಾ -ಅರ ೧೫]

ಸೀತೆ ಅಶೋಕವನದಲ್ಲಿ ರಾಕ್ಷಸಿಯ ಕಾವಲಿನಲ್ಲಿದ್ದದ್ದು [ವಾ -ಅರ ೫೬] ಸೀತೆ ಲಂಕೆಯಲ್ಲಿದ್ದಾಗ ಚತುರ್ಮುಖನ ಸೂಚನೆಯಂತೆ ಇಂದ್ರ ದಿವ್ಯಪಾಯಸವನ್ನು ತಂದುಕೊಟ್ಟದ್ದು ಅದನ್ನು ತಿಂದಮಾತ್ರದಿಂದಲೇ ಸೀತೆ ಒಂದು ವರ್ಷದವರೆಗೆ ಹಸಿವು ನೀರಡಿಕೆ ಬೆವರು ನಿದ್ರೆಗಳಿಲ್ಲದೆಯೂ, ಅಂಗಕಾಂತಿ ಕುಂದದೆಯೂ ದಿವ್ಯಸೌಂದರ್ಯಭರಿತೆಯಾಗಿದ್ದದ್ದು [ತತ್ವ ರಾಮಾ -ಅರ ೧೫ ವಾ ರಾ -ಕಿ ೬೩] ರಾವಣ ಸೀತೆಯನ್ನು ಲಂಕೆಯಲ್ಲಿ ಇರಿಸಿದಕೂಡಲೇ ಚತುರ್ಮುಖ ಇಂದ್ರನನ್ನು ಕರೆದು "ಇನ್ನು ಭಯವಿಲ್ಲ, ದೇವತೆಗಳು ಧನ್ಯರಾದರು ಮೂಲೋಕವೂ ಇನ್ನು ಮುಂದೆ ಸುಖಪಡುತ್ತದೆ ರಾವಣ ಸೀತೆಯನ್ನು ಬಲಾತ್ಕಾರದಿಂದ ಅಪಹರಿಸಿದ್ದಾನೆ ಇದೇ ಅವನಿಗೆ ಕಡೆಗಾಲ ಆದರೆ ಈಗ ಸೀತೆ ಆಹಾರವಿಲ್ಲದಿದ್ದರೆ ದಿನದಿನಕ್ಕೂ ಕೃಶಳಾಗಬಹುದು ಆಗ ರಾವಣ ಅವಳನ್ನು ಅಷ್ಟಾಗಿ ಮೋಹಿಸಲಾರ ಅಥವಾ ಸೀತೆಯಾದರೂ ಆಹಾರವನ್ನು ಕೈಕೊಳ್ಳದೆ ಸಾಯಲೂಬಹುದು ಹೀಗಾದಲ್ಲಿ ಕೆಲಸ ಕೆಡುವುದು ಇದಕ್ಕಾಗಿ ಸೀತೆಗೆ ದಿವ್ಯಹವಿಸ್ಸನ್ನು ಕೊಟ್ಟು ಬಾ" ಎಂದ ಒಡ ನಯೇ ಇಂದ್ರ ನಿದ್ರಾದೇವಿಯನ್ನು ಸಂಗಡ ಕರೆದುಕೊಂಡು ಲಂಕೆಗೆ ಹೋಗಿ,

ರಾಕ್ಷಸಿಯರಿಗೆ ನಿದ್ದೆಯನ್ನು ಕಲ್ಪಿಸಿ, ತಾನು ಸೀತೆಯನ್ನು ಕಂಡು ನಮಸ್ಕರಿಸಿ, ರಾಮ ಲಕ್ಷ್ಮಣರ ಕುಶಲವಾರ್ತೆಯನ್ನು ಅರುಹಿ, ಬ್ರಹ್ಮ ಕಳುಹಿದ ಹವಿಸ್ಸನ್ನು ಆಕೆಯ ಮುಂದೆ ಇರಿಸಿ ಬೇಡಿಕೊಂಡ. ಸೀತೆ "ನಿನ್ನನ್ನು ದೇವೇಂದ್ರನೆಂದು ನಾನು ನಂಬುವ ಬಗೆ ಹೇಗೆ? ನಾನು ಹಿಂದೆ ರಾಮ ಲಕ್ಷ್ಮಣರ ಸಂಗಡ ಇದ್ದಾಗ ನಿನ್ನನ್ನು ಶರಭಂಗ ಮುನಿಯ ಆಶ್ರಮದಲ್ಲಿ ಯಾವ ರೂಪದಿಂದ ಕಂಡೆನೋ ಆ ಗುರುತುಗಳನ್ನು ತೋರು" ಎನಲು, ದೇವೇಂದ್ರ ಆಕೆಗೆ ನಂಬುಗೆಯನ್ನುಂಟು ಮಾಡಿದ. ಆಗ ಸೀತೆ ಆ ಹವಿಸ್ಸನ್ನು ಸ್ವೀಕರಿಸಿ, ಮೊದಲು ರಾಮನಿಗೆ ಮನಸಾ ಅರ್ಪಣಮಾಡಿ ಬಳಿಕ ತಾನು ಪ್ರಾಶನಮಾಡಿದಳು. ಬಳಿಕ ಇಂದ್ರ ಆಕೆಯನ್ನು ಬೀಳ್ಕೊಂಡು ನಿದ್ರಾದೇವಿಯನ್ನು ಸಂಗಡ ಕರೆದುಕೊಂಡು ದೇವಲೋಕಕ್ಕೆ ಹೋದ [ವಾಲ್ಮೀ ರಾ.-ಅರ. ಪ್ರಕ್ಷಿಪ್ತ ೫೬. ರ ತರುವಾಯ]. ಸೀತೆಗಾಗಿ ರಾಮ ಹಂಬಲಿಸಿದ್ದು [ಅರ. ೬೦-೬೩]. ಸೀತೆಯ ಆಭರಣಗಳನ್ನು ಕಂಡು ರಾಮ ಪ್ರಲಾಪಿಸಿದ್ದು [ಕಿಷ್ಕಿ ೬] ಸೀತೆಯನ್ನು ಹುಡುಕುವುದಕ್ಕೆ ಕಪಿಗಳನ್ನು ಸುಗ್ರೀವ ಕಳುಹಿಸಿದ್ದು [ಕಿಷ್ಕಿ. ೪೦-೪೩]. ಸೀತಾದೇವಿ ರಾಕ್ಷಸರ ಕಾವಲಲ್ಲಿದ್ದದ್ದು, ಹನೂಮಂತ ಆಕೆಯನ್ನು ಕಂಡದ್ದು, ರಾವಣ ಸೀತೆಯನ್ನು ಲೋಭಗೊಳಿಸಿದ್ದು, ಸೀತೆ ರಾವಣನನ್ನು ಧಿಕ್ಕರಿಸಿದ್ದು, ರಾವಣ ಸೀತೆಯನ್ನು ಹೆದರಿಸಿದ್ದು, ರಾಕ್ಷಸ ಸ್ತ್ರೀಯರು ಸೀತೆಗೆ ಒಡಂಬಡಿಕೆ ಹೇಳಿದ್ದು, ಸೀತೆಯ ಪ್ರಲಾಪ [ರಾಮಾ.-ಸುಂದರ ೧೭-೨೬]. ಸೀತೆಗೆ ಶುಭಸೂಚನೆಗಳಾದದ್ದು, ಸೀತೆಗೆ ಹನೂಮಂತ ಇದಿರುನಿಂತು ಮಾತನಾಡಿದ್ದು, ಸೀತೆ ಸಂದೇಹ ಪಟ್ಟದ್ದು, ಹನೂಮಂತ ರಾಮನ ಸೌಂದರ್ಯವನ್ನು ವರ್ಣಿಸಿ, ರಾಮನ ಉಂಗುರವನ್ನು ಆಕೆಗೆ ಕೊಟ್ಟದ್ದು, ಮುಂತಾಗಿ [ರಾಮಾ.-ಸುಂ. ೨೮-೪೦]. ಹನೂಮಂತ ಲಂಕೆಯನ್ನು ಸುಟ್ಟು, ಸೀತೆಗಾಗಿ ಹಂಬಲಿಸಿದ್ದು. ಸೀತೆ ಸುಖವಾಗಿರುವಳೆಂಬುದಾಗಿ ಚಾರಣರ ಮಾತಿನಿಂದ ತಿಳಿದು ಆಕೆಯ ಬಳಿಸಾರ್ದು, ಬೀಳ್ಕೊಂಡದ್ದು [ರಾಮಾ.-ಸುಂ. ೫೫]. ಸೀತೆ ಬದುಕಿರುವಳೆಂಬುದಾಗಿ ಹನೂಮಂತ ರಾಮನಿಗೆ ಹೇಳಿದ್ದು [ರಾಮಾ.-ಸುಂ. ೬೪-೬೮] ರಾವಣ ಸೀತೆಗೆ ರಾಮನನ್ನು ಕೊಂದಂತೆ ಹೇಳಿದ್ದು, ಸೀತೆಯ ಪ್ರಲಾಪ, ಸರಮೆ ಸೀತೆಗೆ ಧೈರ್ಯಹೇಳಿ, ವಾಸ್ತವಸ್ಥಿತಿಯನ್ನು ತಿಳಿಸಿದ್ದು [ಯುದ್ಧ. ೩೧-೩೪]. ಇಂದ್ರಜಿತ್ತಿನ ನಾಗಪಾಶದಿಂದ ಬದ್ಧರಾದ ರಾಮ ಲಕ್ಷ್ಮಣರನ್ನು ತೋರಿಸಲು ರಾಕ್ಷಸಿಯರು ಸೀತೆಯನ್ನು ಪುಷ್ಪಕವಿಮಾನದಲ್ಲಿ ಕರೆತಂದದ್ದು, ಸೀತೆ ರಾಮ ಲಕ್ಷ್ಮಣರನ್ನು ಕಂಡು ದುಃಖಿಸಿದ್ದು, ತ್ರಿಜಟೆ ಸೀತೆಗೆ ಧೈರ್ಯಹೇಳಿದ್ದು [ರಾಮಾ.-ಯು. ೪೭-೪೮]. ಸೀತೆ ಹನೂಮಂತನಿಂದ ರಾಮನೇ ರಾವಣನನ್ನು ಕೊಂದು ಜಯಶಾಲಿಯಾದನೆಂಬ ವೃತ್ತಾಂತವನ್ನು ಕೇಳಿದ್ದು [ಯು. ೧೧೬]. ಸೀತಾದೇವಿ ರಾಮನ ಬಳಿಗೆ ಬಂದದ್ದು [ಯು. ೧೧೭]. ಸೀತಾದೇವಿ ರಾಮನ

ಚುಚ್ಚು ಮಾತುಗಳನ್ನು ಕೇಳಿ ಅಗ್ನಿಪ್ರವೇಶಮಾಡಿದ್ದು, ದೇವತೆಗಳು ಸೀತೆಯ ಪಾತಿವ್ರತ್ಯವನ್ನು ಕೊಂಡಾಡಿದ್ದು, ರಾಮ ಸೀತೆಯನ್ನು ಪರಿಗ್ರಹಿಸಿದ್ದು [ಯುದ್ಧ ೧೧೬-೧೨೧] ಸೀತೆ ಮರಳಿ ದಂಡಕಾರಣ್ಯವನ್ನು ನೋಡಿ ಅಲ್ಲಿ ಕೆಲವು ಕಾಲ ವಾಸ ಮಾಡಬೇಕೆಂದು ಕೋರಿದ್ದು [ಉತ್ತ ೪೨] ಸೀತೆಯಿಂದುಂಟಾದ ಅಪಮಾನವನ್ನು ಕೇಳಿ ಮನನೊಂದ ರಾಮ ಲಕ್ಷ್ಮಣನ ಮೂಲಕ ದಂಡಕಾರಣ್ಯಕ್ಕೆ ಕಳುಹಿದ್ದು, ಲಕ್ಷ್ಮಣ ಸೀತೆಯನ್ನು ಗಂಗಾ ತೀರದಲ್ಲಿ ಬಿಟ್ಟುಹೋದದ್ದು [ಉತ್ತ ೪೩,೪೫-೪೮] ಸೀತೆ ವಾಲ್ಮೀಕಿಯ ಮೂಲಕ ಆಶ್ರಮವನ್ನು ಸೇರಿ ಮುನಿಪತ್ನಿಗಳ ಆದರಣೆಯಲ್ಲಿದ್ದದ್ದು [ಉತ್ತ ೪೯] ಸೀತೆ ರಾಮನನ್ನು ಅಗಲುವುದಕ್ಕೆ ಕಾರಣ [ಉತ್ತ ೫೧] ಸೀತೆ ಅವಳಿ ಮಕ್ಕಳನ್ನು ಹೆತ್ತದ್ದು [ಉತ್ತ ೬೬] ನೋಡು—ಕುಶ, ಲವ ಸೀತೆ ವಾಲ್ಮೀಕಿಯ ಮೂಲಕ ರಾಮನ ಎದಿಗೆ ಬಂದದ್ದು, ತನ್ನ ಪಾತಿವ್ರತ್ಯವನ್ನು ಪ್ರಕಟಗೊಳಿಸಿ, ನಾಗಲೋಕಕ್ಕೆ ಹೋದದ್ದು [ವಾ ರಾಮಾ -ಉತ್ತ ೯೪ ೯೭]

**ಸುಕನ್ಯಾ**—ಶರ್ಯಾತಿ ರಾಜನ ಮಗಳು ಒಮ್ಮೆ ಶರ್ಯಾತಿ ರಾಜ ಬೇಟೆಗಾಗಿ ಅರಣ್ಯಕ್ಕೆ ಹೋಗಿದ್ದಾಗ ಸುಕನ್ಯೆಯೂ ಸಂಗಡ ಹೋಗಿದ್ದು ತನ್ನ ಸಖಿಯರ ಸಂಗಡ ಆಟವಾಡುತ್ತ ಒಂದು ಹುತ್ತದ ಬಳಿ ಬಂದು, ಅದರಲ್ಲಿ ಎರಡು ಬಿಲಗಳನ್ನು ಕಂಡು, ಇಣಿಕಿನೋಡಿದಳು ಆ ಎರಡು ಕಂಡಿಗಳಿಂದಲೂ ಏನೋ ಒಂದು ಬಗೆಯ ಬೆಳಕು ಮಿನುಗುಟ್ಟುವಂತೆ ಕಂಡುಬಂತು ಚ್ಯವನ ಮುನಿ ತಪೋನಿರತನಾಗಿದ್ದಾಗ ಆತನ ಮೈಮೇಲೆ ಹುತ್ತ ಬೆಳೆದು ಕಣ್ಣುಗಳು ಮಾತ್ರ ಕಾಣಬರುತ್ತಿದ್ದುವು ಇದರ ಗುಟ್ಟನ್ನು ತಿಳಿಯದ ಸುಕನ್ಯೆ ಒಂದು ಮುಳ್ಳಿನ ತುದಿಯಿಂದ ಅವನ ಎರಡು ಕಣ್ಣುಗಳನ್ನೂ ತಿವಿದು, ಬಿಡಾರಕ್ಕೆ ಬಂದುಬಿಟ್ಟಳು ಒಡನೆಯೇ ಸೈನ್ಯದವರಿಗೂ ಇತರ ಪರಿವಾರದವರಿಗೂ ಮಲಮೂತ್ರಗಳು ಬಂಧಿಸಿ, ಬಹಳ ಸಂಕಟವಾಯಿತು ಕಡೆಗೆ ಅರಸ ಚ್ಯವನ ಮುನಿಯ ಬಳಿಸಾರ್ದು, ಸಮಾಚಾರವನ್ನು ತಿಳಿದು, ಖಿನ್ನನಾಗಿ, ತನ್ನ ಮಗಳ ಅಪರಾಧವನ್ನು ಮನ್ನಿಸಬೇಕೆಂದು ಬೇಡಲಾಗಿ ಚ್ಯವನ "ನಾನು ಮುದುಕ ಇಷ್ಟರಮೇಲೆ ಈಗ ಕುರುಡನಾದೆ ನನ್ನ ಶುಶ್ರೂಷೆಗಾಗಿ ನಿನ್ನ ಮಗಳನ್ನು ನನಗೆ ಕೊಟ್ಟು ಮದುವೆಮಾಡುವುದಾದರೆ ನಿನ್ನ ಪರಿವಾರದವರೆಲ್ಲ ಕೂಡಲೇ ಸುಖವಾಗಿರುವರು" ಎಂದ ಆಗ ಸುಕನ್ಯೆ ಈ ಸಂಗತಿಯನ್ನು ಕೇಳಿ, ತನ್ನ ಒಬ್ಬಳ ಸಲುವಾಗಿ ಸೈನಿಕರೂ ಪರಿವಾರದವರೂ ಸಾಯುವುದು ಯುಕ್ತವಲ್ಲವೆಂದು ತಿಳಿದು ಸಮ್ಮತಿಯಿಂದ ಚ್ಯವನನನ್ನು ಮದುವೆಯಾದಳು ಕೆಲವು ಕಾಲದ ಬಳಿಕ ಸುಕನ್ಯೆ ಸರೋವರದಲ್ಲಿ ಮಿಂದು, ಹೊರಬರುವಾಗ ಅಲ್ಲಿಗೆ ಬಂದ ಅಶ್ವಿನೀದೇವತೆಗಳು ಸುಕನ್ಯೆಯನ್ನು ಕಂಡು ಮೋಹಪರವಶರಾಗಿ ತಮ್ಮ ಮನೋಗತವನ್ನು ಹೊರಗೆಡಹಿದರು ಆಗ ಸುಕನ್ಯೆ ತನ್ನ ಪಾತಿವ್ರತ್ಯಮಹಿಮೆಯಿಂದ ಅವರನ್ನು ಮಾರ್ಪಡಿಸಿ, ಅವರ

ಮೂಲಕ ತನ್ನ ಪತಿಗೆ ಯೌವನವನ್ನು ಸಂಪಾದಿಸಿಕೊಟ್ಟು, ಆತನ ಮೂಲಕ ಪ್ರಮತಿ ಯೆಂಬ ಪುತ್ರನನ್ನು ಪಡೆದಳು [ಭಾಗ.-೯-೩. ಭಾರ.-ಆದಿ. ೮. ವನ. ೧೨೩-೧೨೬].

**ಸುಕುಮಾರ.**—(i) ಪುಲಿಂದ ನಗರದ ಅರಸು. ಯುಧಿಷ್ಠಿರನ ರಾಜಸೂಯ ಸಮಯದಲ್ಲಿ ಭೀಮಸೇನನನ್ನು ಇದಿರಿಸಿ, ಸೋತು, ಮರೆಹೊಕ್ಕ [ಭಾರ.-ಸ ೩೦].

(ii) ಮತ್ಸ್ಯದೇಶದ ಸಮೀಪದಲ್ಲಿ ರಾಜ್ಯಭಾರಮಾಡುತ್ತಿದ್ದ ಒಬ್ಬ ಅರಸು. ಯುಧಿಷ್ಠಿರನ ರಾಜಸೂಯ ಸಮಯದಲ್ಲಿ ಸಹದೇವನಿಂದ ಸೋತು, ಕಪ್ಪ ವನ್ನು ಕೊಟ್ಟು ಶರಣಾಗತನಾದ [ಭಾರ.-ಸಭಾ. ೩೨].

(iii) ಪಾತಾಳ ಲೋಕದಲ್ಲಿರುವ ಸರ್ಪರಾಜರಲ್ಲಿ ಒಬ್ಬ [ಭಾರ.-ಆದಿ. ೫೭].

**ಸುಕುಮಾರಿ**—(i) ಒಬ್ಬ ರಾಜಪುತ್ರಿ. ಚಂದ್ರ ವಂಶದ ಅನಶುಷನೆಂಬ ರಾಜ ನಿಂದ ಬಾಹುಕಾ ಅಥವಾ ಸುವೇಷಾ ಎಂಬ ನಾಮಾಂತರವುಳ್ಳ ತರುಣಿಯಲ್ಲಿ ಜನಿ ಸಿದ ಭೀಮಸೇನನೆಂಬ ರಾಜನನ್ನು ಮದುವೆಯಾಗಿ ಪ್ರತೀಪನೆಂಬ ಮಗನನ್ನು ಪಡೆ ದಳು. ಈ ಪ್ರತೀಪನಿಗೆ ಪಂಶ್ರವನೆಂಬುದು ನಾಮಾಂತರ ಈ ಪ್ರತೀಪನೇ ಭೀಷ್ಮಾ ಚಾರ್ಯನ ಪಿತಾಮಹ [ಭಾರ.-ಆದಿ ೬೩]

(ii) ಶೈಬ್ಯ ರಾಜನ ಮಗನಾದ ಸೃಂಜಯನೆಂಬ ಅರಸನಿಂದ ಕೇಕಯ ರಾಜ ಪುತ್ರಿಯಲ್ಲಿ ಜನಿಸಿದವಳು ಈಕೆ ನಾರದ ಮಹರ್ಷಿಯನ್ನು ಮದುವೆಯಾದಳು. ನೋಡು—ಸುವರ್ಣಷ್ಠೀವಿ, ನಾರದ [ಭಾರ -ದ್ರೋ ೫೫ ಶಾಂತಿ ೨೯]

**ಸುಕೇತು**—(i) ಒಬ್ಬ ಅರಸು. ಪಾಂಚಾಲ ದೇಶಾಧಿಪತಿಯಾಗಿದ್ದ ದ್ರುಪದನ ಮಕ್ಕಳಲ್ಲಿ ಒಬ್ಬನಾದ ಚಿತ್ರಕೇತು ರಾಜನ ಮಗ. ಭಾರತ ಯುದ್ಧದ ಹದಿನಾರನೆಯ ದಿನ ಕೃಪಾಚಾರ್ಯನಿಂದ ಹತನಾದ [ಭಾರ.-ಆದಿ ೨೦೧. ಕರ್ಣ. ೪೯].

(ii) ಚೇದಿ ದೇಶಾಧಿಪತಿಯಾದ ಶಿಶುಪಾಲನ ಮಗ. ಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ, ದ್ರೋಣನಿಂದ ಮಡಿದ [ಭಾರ.-ಕರ್ಣ. ೩].

(iii) ಒಬ್ಬ ಯಕ್ಷ ಇವ ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ, ಸಾವಿರ ಆನೆಗಳ ಬಲವುಳ್ಳ ಒಬ್ಬ ಮಗಳನ್ನು ಪಡೆದ. ಇವಳೇ ತಾಟಕೆ. ಸುಕೇತು ಇವ ಳನ್ನು ಜರ್ಝನೆಂಬ ಯಕ್ಷನ ಮಗನಾದ ಸುಂದನೆಂಬವನಿಗೆ ಕೊಟ್ಟು ಮದುವೆ ಮಾಡಿದ. ನೋಡು—ತಾಟಕಾ, ಉಪಸುನ್ದ, ಸುನ್ದ [ವಾ.ರಾಮಾ -ಬಾಲ. ೨೫].

**ಸುಕೇಶ.**—ಒಬ್ಬ ರಾಕ್ಷಸ. ವಿದ್ಯುತ್ಕೇಶನೆಂಬ ರಾಕ್ಷಸನಿಂದ ಸಂಧ್ಯಾದೇವಿಯ ಪುತ್ರಿಯಾದ ಸಾಲಕಟಂಕಟಿಯೆಂಬವಳಲ್ಲಿ ಜನಿಸಿದವ. ನೋಡು—ವಿದ್ಯುತ್ಕೇಶ, ಮಾಲಿ, ಮಾಲ್ಯವಂತ, ಸುಮಾಲಿ [ರಾಮಾ. ಉತ್ತ. ೪].

**ಸುಕೇಶಿ.**—(i) ಗಾಂಧಾರ ರಾಜಪುತ್ರಿ. ಶ್ರೀ ಕೃಷ್ಣನ ಪತ್ನಿಯರಲ್ಲಿ ಒಬ್ಬಳು [ಭಾರ.-ಸಭಾ. ೫೭].

(11) ದೇವಲೋಕದ ವಾರವಿಲಾಸಿನಿಯರಲ್ಲಿ ಒಬ್ಬಳು [ಭಾರ.-ಅನು. ೫೦].

**ಸುಗ್ರೀವ.**—(1) ಸೂರ್ಯನ ಮಗ. ವಾಲಿಯ ತಮ್ಮ. ತಾರನೆಂಬ ವಾನರನ ಮಗಳಾದ ರುಮೆಯೆಂಬವಳು ಇವನ ಹೆಂಡತಿ [ಭಾರ.-ಸ. ೫೦] ಕಪಿರಾಜನಾದ ಋಕ್ಷರಜ ಒಂದು ಕೊಳದಲ್ಲಿ ಸ್ನಾನಮಾಡಿ ಒಂದು ದಿನದ ಮಟ್ಟಿಗೆ ಹೆಂಗಸಾಗಿದ್ದಾಗ, ಆ ಸ್ತ್ರೀವ್ಯಕ್ತಿಯನ್ನು ಕಂಡು ಅಸ್ತೋನ್ಮುಖನಾದ ಸೂರ್ಯನೂ, ಇಂದ್ರನೂ ಇಬ್ಬರೂ ಮೋಹಗೊಂಡರು. ಸೂರ್ಯನ ತೇಜಸ್ಸು ಆ ಸ್ತ್ರೀವ್ಯಕ್ತಿಯ (ಗ್ರೀವಾ) ಕುತ್ತಿಗೆಯ ಮೇಲೆ ಬಿದ್ದು, ಒಬ್ಬ ವಾನರ ಜನಿಸಿದ. ಇವನೇ ಸುಗ್ರೀವ ಇಂದ್ರನ ತೇಜಸ್ಸು (ವಾಲ) ಬಾಲದ ಮೇಲೆ ಬಿದ್ದು ವಾಲಿ ಜನಿಸಿದ. ಋಕ್ಷರಜ ಒಡನೆಯೇ ಆ ಇಬ್ಬರು ಪುತ್ರರನ್ನೂ ಸಂಗಡ ಕರೆದುಕೊಂಡು ಬ್ರಹ್ಮನಲ್ಲಿಗೆ ಹೋಗಿ ನಡೆದ ಸಂಗತಿಯನ್ನು ಅರಿಕೆಮಾಡಿದ ಆತನ ಅಪ್ಪಣೆಯ ಮೇರೆಗೆ ಕಿಷ್ಕಿಂಧೆಗೆ ಹೋಗಿ, ತನ್ನ ಮೊದಲಿನ ಪುರುಷರೂಪವನ್ನೇ ಪಡೆದು ವಾನರ ರಾಜ್ಯಾಧಿಪತ್ಯವನ್ನು ಕೈಕೊಂಡ. ಋಕ್ಷರಜನ ತರುವಾಯ ಹಿರಿಯವನಾದ ವಾಲಿಯೇ ಕಿಷ್ಕಿಂಧೆಗೆ ಅರಸನಾದ. ಸುಗ್ರೀವ ವಾಲಿಯ ಅನುಮತಿಯಂತೆ ಯುವರಾಜನಾದ. ಬಹಳ ಕಾಲದವರೆಗೆ ಅಣ್ಣತಮ್ಮಂದಿರು ಬಹಳವಾಗಿ ಅನ್ಯೋನ್ಯವಾಗಿದ್ದರು. ಇಂತಿರಲು ಒಂದು ದಿನ ಮಾಯಾವಿ ಎಂಬ ರಾಕ್ಷಸ ವಾಲಿಯ ಮೇಲೆ ಯುದ್ಧಕ್ಕೆ ಬಂದ. ಆಗ ಸುಗ್ರೀವ ಎಷ್ಟೋ ವಿಧದಿಂದ ಬೇಡಿಕೊಂಡರೂ ಅದಕ್ಕೆ ಸಮ್ಮತಿಸದೆ ವಾಲಿಯೂ ಮಾಯಾವಿಯ ಮೇಲೆ ಯುದ್ಧಕ್ಕೆ ಹೊರಟ. ಸುಗ್ರೀವನೂ ಅವನ ಹಿಂದೆಯೇ ಹೋದ. ಮಾಯಾವಿ ತನ್ನನ್ನು ಹಿಂದಟ್ಟಿಬರುತ್ತಿದ್ದ ವಾಲಿಯನ್ನೂ ಸುಗ್ರೀವನನ್ನೂ ಕಂಡು ಹೆದರಿ ದವನಾಗಿ ದಿಕ್ಕುತೋರದೆ ಒಂದು ಬೆಟ್ಟವನ್ನು ಹತ್ತಿ ಅದರಲ್ಲಿದ್ದ ಒಂದು ಗುಹೆಯನ್ನು ಹೊಕ್ಕ ವಾಲಿ ಮಾಯಾವಿಯೊಡನೆ ಯುದ್ಧಮಾಡಲು ಗವಿಯೊಳಕ್ಕೆ ಹೋಗುವಾಗ ಸುಗ್ರೀವನನ್ನು ಕರಿತು '' ನಾನು ಬರುವವರೆಗೂ ನೀನು ಇಲ್ಲಿಯೇ ಗವಿಯ ಬಾಗಿಲಲ್ಲಿ ಕಾದಿರು '' ಎಂದು ಹೇಳಿ ಒಳಹೊಕ್ಕ. ಎಷ್ಟೋ ಕಾಲವಾದರೂ ವಾಲಿ ಹಿಂದಿರುಗಿ ಬರಲಿಲ್ಲ. ಕಡೆಗೆ ಆ ಗವಿಯಿಂದ ನೊರೆಯಿಂದ ಕೂಡಿದ ಮಾಂಸವೂ ರಕ್ತವೂ ಪ್ರವಾಹರೂಪವಾಗಿ ಹರಿದುಬಂತು ಅದನ್ನು ಕಂಡ ಸುಗ್ರೀವ ಚಿಂತಾಕ್ರಾಂತನಾಗಿ ದಿಕ್ಕುತೋರದೆ, ವಾಲಿ ಮಾಯಾವಿಯಿಂದ ಹತನಾಗಿರಬಹುದೆಂದು ನಿಶ್ಚಯಿಸಿ, ಆ ಗುಹೆಯ ಬಾಗಿಲಿಗೆ ಒಂದು ದೊಡ್ಡ ಬಂಡೆಯನ್ನು ಎಳೆದು ಕಿಷ್ಕಿಂಧೆಯನ್ನು ಹೊಕ್ಕು, ವಾಲಿ ಹತನಾದನೆಂದು ಹೇಳಿ, ಅವನಿಗೆ ಉತ್ತರಕ್ರಿಯೆಗಳನ್ನು ಮಾಡಿ, ಮಂತ್ರಿಗಳ ನಿರ್ಬಂಧದಿಂದ ರಾಜ್ಯಭಾರವನ್ನು ಕೈಕೊಂಡಿದ್ದ. ಅಷ್ಟರಲ್ಲಿ ವಾಲಿ ಹೊರಬಂದು ಸುಗ್ರೀವನನ್ನು ಕಾಣದೆ ಕ್ರೋಧಾಂಧನಾಗಿ ಕಿಷ್ಕಿಂಧೆಯನ್ನು ಹೊಕ್ಕು ಸುಗ್ರೀವನನ್ನು ಬಲವಾಗಿ ಹೀಯಾಳಿಸಿದ. ಸುಗ್ರೀವ, ಹನೂಮಂತ ಮೊದಲಾದ ಕೆಲವು ಮಂದಿ

ಆಪ್ತರೊಡನೆ ಋಷ್ಯಮೂಕ ಪರ್ವತವನ್ನು ಸೇರಿದ [ರಾಮಾ.-ಕಿಷ್ಕಿಂ. ೯, ೧೦]. ಸುಗ್ರೀವ ರಾಮನನ್ನು ಮರೆಹೊಕ್ಕದ್ದು, ರಾಮನ ಬಲವನ್ನು ಪರೀಕ್ಷಿಸಿದ್ದು [ರಾಮಾ.-ಕಿಷ್ಕಿಂ. ೧೦, ೧೧]. ವಾಲಿ ಸುಗ್ರೀವರ ಯುದ್ಧ [ಕಿಷ್ಕಿ. ೧೨, ೧೪] ಸುಗ್ರೀವನಿಗೆ ಕಿಷ್ಕಿಂಧೆಯಲ್ಲಿ ಪಟ್ಟಾಭಿಷೇಕ [ಕಿಷ್ಕಿ. ೨೬]. ರಾಮ ಸುಗ್ರೀವರ ಸ್ನೇಹಕಾಲದಲ್ಲಿ ನಡೆದ ಒಪ್ಪಂದದಂತೆ ನಡೆದುಕೊಳ್ಳಲು ಸುಗ್ರೀವನಿಗೆ ಹನೂಮಂತ ತಿಳಿಯ ಹೇಳಿದ್ದು [ಕಿಷ್ಕಿ. ೨೯]. ರಾಮ ಸುಗ್ರೀವನ ಮೇಲೆ ಕೋಪಿಸಿದ್ದು [ಕಿಷ್ಕಿ. ೩೦]. ಲಕ್ಷ್ಮಣ ಸುಗ್ರೀವನನ್ನು ಹೆದರಿಸಿ ನಿಂದಿಸಿದ್ದು [ಕಿಷ್ಕಿ. ೩೪]. ಸುಗ್ರೀವ ಲಕ್ಷ್ಮಣನ ಸಂಗಡ ರಾಮನಲ್ಲಿಗೆ ಬಂದದ್ದು [ಕಿಷ್ಕಿ ೩೬]. ಸುಗ್ರೀವ ಕಪಿಸೇನೆಯನ್ನು ಕೂಡಿಸಿದ್ದು, ರಾಮನನ್ನು ಸಂದರ್ಶಿಸಿದ್ದು [ಕಿಷ್ಕಿ. ೩೭, ೩೮]. ಸುಗ್ರೀವ ಸೀತೆಯನ್ನು ಹುಡುಕುವುದಕ್ಕೆ ಕಪಿವೀರರನ್ನು ಕಳುಹಿದ್ದು [ಕಿಷ್ಕಿ ೪೦-೪೩]. ವಾಲಿಯ ಹೆದರಿಕೆಯಿಂದ ದಿಕ್ಕುತೋರದೆ ಕಿಷ್ಕಿಂಧೆಯಿಂದ ಹೊರಬಿದ್ದ ಸುಗ್ರೀವ ಭೂಪ್ರದಕ್ಷಿಣೆ ಮಾಡಿದ ವೃತ್ತಾಂತವರ್ಣನೆ [ಕಿಷ್ಕಿ. ೪೬]. ಸುಗ್ರೀವ ದಧಿಮುಖನ ಮೂಲಕ, ಹನೂಮಂತ ಮೊದಲಾದವರು ಹಿಂದಿರುಗಿಬಂದ ಸುದ್ದಿಯನ್ನು ಕೇಳಿದ್ದು [ಸುಂದರ. ೬೨] ಸುಗ್ರೀವ ರಾಮ ಲಕ್ಷ್ಮಣರಿಗೆ ಕಪಿವೀರರು ಸೀತೆಯನ್ನು ಕಂಡುಬಂದರೆಂದು ತಿಳಿಸಿದ್ದು [ಸುಂದರ ೬೩]. ಸುಗ್ರೀವ ರಾಮನಿಗೆ ಧೈರ್ಯ ಹೇಳಿದ್ದು [ಯುದ್ಧ. ೨]. ಸುಗ್ರೀವ ರಾವಣನ ಸಂಗಡ ದ್ವಂದ್ವಯುದ್ಧ ಮಾಡಿದ್ದು [ಯುದ್ಧ. ೪೦]. ಸುಗ್ರೀವ ಕುಂಭಕರ್ಣನ ಬಾಹುಪಾಶಕ್ಕೆ ಸಿಕ್ಕಿಬಿದ್ದು ನರಳಿದ್ದು, ಕುಂಭಕರ್ಣನ ಮೂಗನ್ನು ಹಲ್ಲುಗಳಿಂದ ಕಚ್ಚಿ, ಬಿಡುಗಡೆಹೊಂದಿ, ಓಡಿ ಬಂದದ್ದು [ಯುದ್ಧ. ೬೭]. ಸುಗ್ರೀವ ಕುಂಭನನ್ನು ಕೊಂದದ್ದು [ಯುದ್ಧ. ೭೬]. ಸುಗ್ರೀವ ರಾಮನ ಪಟ್ಟಾಭಿಷೇಕ ಮಹೋತ್ಸವಕ್ಕೆ ಅಯೋಧ್ಯೆಗೆ ಬರುವುದಕ್ಕೆ ರಾಮನ ಅನುಮತಿಯನ್ನು ಪಡೆದದ್ದು. ಕಿಷ್ಕಿಂಧಾ ಪಟ್ಟಣದ ಬಳಿಗೆ ಪುಷ್ಪಕ ವಿಮಾನ ಬಂದಕೂಡಲೇ ಸುಗ್ರೀವ ರಾಮನ ಅಪ್ಪಣೆಯ ಮೇರೆಗೆ ತನ್ನ ಪರಿವಾರವನ್ನೆಲ್ಲ ಅಯೋಧ್ಯೆಗೆ ಬರಹೇಳಿ, ತನ್ನ ಪಟ್ಟದರಸಿಯಾದ ತಾರೆಯನ್ನು ಕರೆತಂದದ್ದು [ರಾಮಾ.-ಯುದ್ಧ. ೧೨೫-೧೨೬]. ಸುಗ್ರೀವ ರಾಮನ ಪಟ್ಟಾಭಿಷೇಕಕ್ಕೆ ಕಪಿನಾಯಕರ ಮೂಲಕ ನಾಲ್ಕು ಸಮುದ್ರಗಳ ಉದಕವನ್ನು ತರಿಸಿದ್ದು [ರಾಮಾ.-ಯುದ್ಧ. ೧೩೧]. ರಾಮ ಪಟ್ಟಾಭಿಷೇಕ ನೆರವೇರಿದ ತರುವಾಯ ಸುಗ್ರೀವ ರಾಮನನ್ನು ಬೀಳ್ಕೊಂಡು ತನ್ನ ಪಟ್ಟಣಕ್ಕೆ ಹೋದದ್ದು [ರಾ.-ಉತ್ತ. ೪೦]. ರಾಮಾವತಾರ ಮುಗಿದ ಸಮಯದಲ್ಲಿ ರಾಮ ವೈಕುಂಠಕ್ಕೆ ತೆರಳುವಾಗ ಸುಗ್ರೀವ ಕಿಷ್ಕಿಂಧೆಯಲ್ಲಿ ಅಂಗದನಿಗೆ ಪಟ್ಟಗಟ್ಟಿ, ರಾಮನ ಸಂಗಡ ಮಹಾಪ್ರಸ್ಥಾನಕ್ಕೆ ಸಿದ್ಧನಾದದ್ದು [ರಾಮಾ.-ಉತ್ತರ. ೧೦೭]. ಸುಗ್ರೀವ ಕಪಿನಾಯಕರೊಡನೆ

ಮಹಾಪ್ರಸ್ಥಾನಮಾಡಿದ್ದು, ದಿವ್ಯದೇಹವನ್ನು ಧರಿಸಿ ಸದ್ಗತಿಯನ್ನೈದಿದ್ದು [ಉತ್ತ. ೧೦೮-೧೦೯].

(ii) ಒಬ್ಬ ರಾಕ್ಷಸ. ಶುಂಭ ನಿಶುಂಭರ ದೂತ. ಶುಂಭ ನಿಶುಂಭರು ತ್ರಿಪುರ ಸುಂದರಿಯ ರೂಪಲಾವಣ್ಯಗಳನ್ನು ಕೇಳಿ, ಆಕೆಯನ್ನು ಮದುವೆಯಾಗುವ ಉದ್ದೇಶ ದಿಂದ ಇವನನ್ನು ಆಕೆಯ ಬಳಿಗೆ ದೂತನಾಗಿ ಕಳುಹಿದ್ದು. ನೋಡು—ನಿಶುಂಭ [ದೇ ಭಾಗ -೫, ೨೨, ೨೩ ಮಾರ್ಕಂ.-೮೦].

(iii) ಶ್ರೀ ಕೃಷ್ಣನ ರಥಕ್ಕೆ ಹೂಡಿದ ನಾಲ್ಕು ಕುದುರೆಗಳಲ್ಲಿ ಒಂದು [ಭಾರ -ವನ ೨೦. ಅಶ್ವ. ೧೧೮]

**ಸುಘೋಷ.**—ಮಾದ್ರೀ ಪುತ್ರನಾದ ನಕುಲನ ಶಂಖ [ಭೀ ೨೫].

**ಸುಚಂದ್ರ.**—ಸಿಂಹಿಕೆಯ ಮಗ. ರಾಹುವಿನ ಒಡಹುಟ್ಟಿದವ. ನೋಡು—ಸಿಂಹಿಕಾ [ಭಾರ.-ಆದಿ. ೬೬].

**ಸುಜಾತಾ.**—ಉದ್ದಾಲಕ ಮುನಿಯ ಮಗಳು ಕಹೋಳ ಮುನಿಯ ಹೆಂಡತಿ. ಅಷ್ಟಾವಕ್ರ ಈಕೆಯ ಮಗ. ನೋಡು—ಅಷ್ಟಾವಕ್ರ [ಭಾರ.-ವನ. ೧೩೪].

**ಸುತನು.**—ಯದು ವಂಶದ ಆಹುಕನ ಮಗಳು. ಅಕ್ರೂರನ ಹೆಂಡತಿ [ಭಾರ. ಸಭಾ. ೧೪].

**ಸುತಸೋಮ.**—ಪಾಂಡು ಪುತ್ರನಾದ ಭೀಮಸೇನನಿಂದ ದ್ರೌಪದಿಯಲ್ಲಿ ಜನಿಸಿ-ದವ. ಉಪಪಾಂಡವರಲ್ಲಿ ಒಬ್ಬ [ಭಾರ -ಆದಿ. ೬೩, ೬೪, ೨೪೭] ಭಾರತ ಯುದ್ಧದ ಹದಿನಾರನೆಯ ದಿನದಲ್ಲಿ ಶಕುನಿಯೊಂದಿಗೆ ಯುದ್ಧಮಾಡಿದ [ಕರ್ಣ. ೧೬]. ಹದಿ ನೆಂಟನೆಯ ದಿನದ ರಾತ್ರಿ ಶಿಬಿರದಲ್ಲಿ ಮಲಗಿರುವಾಗ ಅಶ್ವತ್ಥಾಮನಿಂದ ಮಡಿದ [ಸೌಪ್ತಿಕ. ೮].

**ಸುತೀಕ್ಷ್ಣ.**—ದಂಡಕಾರಣ್ಯದಲ್ಲಿ ತಪಸ್ಸುಮಾಡುತ್ತಿದ್ದ ಒಬ್ಬ ಮಹರ್ಷಿ. ಸೀತಾ ಲಕ್ಷ್ಮಣರೊಂದಿಗೆ ರಾಮ ದಂಡಕಾರಣ್ಯವನ್ನು ಹೊಕ್ಕಾಗ ಈತನನ್ನು ಸಂದರ್ಶಿಸಿ ಈತನ ಸೂಚನೆಯಂತೆ ಅಗಸ್ತ್ಯನ ಆಶ್ರಮಕ್ಕೆ ಹೋದ [ರಾಮಾ.-ಅರ. ೭, ೮].

**ಸುದಕ್ಷಿಣ**—ಕಾಂಭೋಜ ದೇಶದ ಅರಸು [ಆದಿ. ೨೦೧. ಉ. ೧೯]. ಏಕರಥ. ದುರ್ಯೋಧನ ಪಕ್ಷಪಾತಿ [ಉದ್ಯೋ. ೧೬೬]. ಮೊದಲನೆಯ ದಿನದ ಯುದ್ಧದಲ್ಲಿ ಅರ್ಜುನ ಪುತ್ರನಾದ ಶ್ರುತಕರ್ಮನ ಸಂಗಡ ಯುದ್ಧಮಾಡಿದ [ಭೀಷ್ಮ. ೪೫]. ಹದಿ ನಾಲ್ಕನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಹತನಾದ [ದ್ರೋ ೯೨]. ಹದಿನೇಳ ನೆಯ ದಿನದ ಯುದ್ಧದಲ್ಲಿ ಇವನ ತಮ್ಮನೂ ಅರ್ಜುನನಿಂದ ಹತನಾದ [ಕರ್ಣ ೫೧].

**ಸುದಕ್ಷಿಣಾ.**—ದಿಲೀಪನ ಹೆಂಡತಿ. ನೋಡು—ದಿಲೀಪ.

**ಸುದರ್ಶನ.**—(i) ಇಕ್ಷ್ವಾಕು ವಂಶದ ದುರ್ಯೋಧನನೆಂಬ ರಾಜನ ಮಗಳಾದ ಸುದರ್ಶನೆಯೆಂಬವಳಲ್ಲಿ ಅಗ್ನಿದೇವನಿಂದ ಜನಿಸಿದವ. ಈತ ಓಘವಂತನ ಮಗಳಾದ ಓಘವತಿಯನ್ನು ಮದುವೆಯಾದ [ಅನು. ೨].

(ii) ಧ್ರುವಸಂಧಿ ರಾಜನ ಮಗ. ನೋಡು—ಮನೋರಮಾ.

(iii) ದುರ್ಯೋಧನ ಪಕ್ಷದ ಒಬ್ಬ ಅರಸು [ಸಭಾ. ೪]. ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಸಾತ್ಯಕಿಯಿಂದ ಮಡಿದ [ದ್ರೋ ೧೧೮].

(iv) ವಿಷ್ಣುವಿನ ಚಕ್ರದ ಹೆಸರು.

**ಸುದರ್ಶನಾ.**—(i) ನೋಡು—ಸುದರ್ಶನ (i).

(ii) ಮಾಹಿಷ್ಮತಿಯ ಅರಸನಾದ ನೀಲ ರಾಜನ ಮಗಳು ಅಗ್ನಿಯನ್ನು ಮದುವೆಯಾಗಿದ್ದಳು [ಭಾರ.-ಸಭಾ ೩೨].

**ಸುದಾಮ.**—(i) ದಶಾರ್ಣ ದೇಶದ ಅರಸು ಚೇದಿ ದೇಶದ ಅರಸನಾದ ಸುಬಾಹುವಿನ ಜನನಿಯೂ, ನಳನ ಪತ್ನಿಯಾದ ದಮಯಂತಿಯ ಜನನಿಯೂ ಈತನ ಮಕ್ಕಳು [ಭಾರ.-ವನ. ೬೬].

(ii) ಕರ್ಣನ ಮಗ. ವೃಷಸೇನನ ತಮ್ಮ. ದ್ರೌಪದೀಸ್ವಯಂವರ ಸಮಯದಲ್ಲಿ ಅರ್ಜುನನಿಂದ ಮಡಿದ [ಭಾರ -ಆದಿ. ೨೧೮].

(iii) ಶ್ರೀಕೃಷ್ಣನ ವಿದ್ಯಾಭ್ಯಾಸ ಕಾಲದಲ್ಲಿ ಮಿತ್ರನಾಗಿದ್ದ ಕುಚೇಲನಿಗೂ ಈ ಹೆಸರು ರೂಢಿಯಲ್ಲಿದೆ.

**ಸುದೇವ**—(i) ವಿದರ್ಭ ದೇಶದಲ್ಲಿದ್ದ ಒಬ್ಬ ಬ್ರಾಹ್ಮಣ ನಳ ಜೂಜಿನಲ್ಲಿ ರಾಜ್ಯವನ್ನು ಸೋತು ಕಾಡುಪಾಲಾದನೆಂಬ ಸುದ್ದಿಯನ್ನು ಕೇಳಿದ ಭೀಮರಾಜ ತನ್ನ ಮಗಳನ್ನೂ ಅಳಿಯನನ್ನೂ ಹುಡುಕುವುದಕ್ಕಾಗಿ ಈತನನ್ನು ಕಳುಹಿದ್ದ [ಭಾರ.-ವನ. ೬೫, ೬೮].

(ii) ಕಾಶೀ ರಾಜನಾದ ಹರ್ಯಶ್ವನ ಮಗ ವೀತಹವ್ಯನಿಂದ ಸೋತ. ಈತನ ಮಗ ದಿವೋದಾಸ [ಅನು. ೮]

(iii) ಅಂಬರೀಷ ರಾಜನ ಸೇನಾಪತಿ [ಶಾಂತಿ ೯೮]

(iv) ವಿದರ್ಭ ದೇಶದ ಅರಸು ಶ್ವೇತ ರಾಜನ ತಂದೆ ನೋಡು—ಶ್ವೇತ [ರಾಮಾ -ಉತ್ತ. ೭೭]

**ಸುದೇಷ್ಣಾ.**—(i) ಚಂದ್ರ ವಂಶದ ಶಿಬಿ ರಾಜನ ಮಗನಾದ ಬಲಿ ರಾಜನ ಹೆಂಡತಿ. ದೀರ್ಘತಮನೆಂಬ ಮುನಿಯಿಂದ ಅಂಗ, ವಂಗ, ಕಳಿಂಗ, ಪುಂಡ್ರ, ಸುಹ್ಮರೆಂಬ ಐವರು ಪುತ್ರರನ್ನು ಪಡೆದಳು. ನೋಡು—ದೀರ್ಘತಮ, ಬಲಿ [ಭಾರ.-ಆದಿ. ೧೧೩ ಭಾಗ.-೯-೨೩. ಹರಿ.-೧-೩೧].

(ii) ಗಾಂಧಾರ ರಾಜನಾದ ಸುಬಲನ ಪುತ್ರಿಯರಲ್ಲಿ ಒಬ್ಬಳು. ಗಾಂಧಾರಿಯ ತಂಗಿ. ಧೃತರಾಷ್ಟ್ರನನ್ನೇ ಮದುವೆಯಾಗಿದ್ದಳು [ಭಾರ.-ಆದಿ. ೧೧೯].

(iii) ಮತ್ಸ್ಯ ದೇಶಾಧಿಪತಿಯಾದ ವಿರಾಟನ ಹೆಂಡತಿ ಕೀಚಕನೂ ಈಕೆಯೂ ಅಕ್ಕತಂಗಿಯರ ಮಕ್ಕಳು. ಕೇಕಯ ದೇಶಾಧಿಪತಿಯಾದ ರಥಕಾರನೆಂಬ ಅರಸನ ಕಿರಿಯ ಹೆಂಡತಿಯಾದ ಮಾಳವಿಯ ಮಗಳು ಕೀಚಕ ಮೊದಲಾದವರು ಹಿರಿಯ ಹೆಂಡತಿಯ ಮಕ್ಕಳು [ಭಾರ -ವಿರಾ ೨೧]. ಉತ್ತರನೂ ಉತ್ತರೆಯೂ ಈಕೆಯ ಮಕ್ಕಳು [ವಿರಾ. ೨೧]. ದ್ರೌಪದಿ ಈಕೆಯ ಬಳಿಯಲ್ಲಿಯೇ ಮಾಲಿನಿ ಯೆಂಬ ಹೆಸರಿನಿಂದ ದಾದಿಯಾಗಿದ್ದಳು [ವಿರಾ. ೧೪].

**ಸುದ್ಯುಮ್ನ** —ಚಂದ್ರ ವಂಶದ ಅರಸು. ಸೇನಜಿತನ ಮಗ ಈತನ ಮಗ ಯುವನಾಶ್ವ [ಭಾರ -ವನ. ೧೨೭ ಸ ೮] ಲಿಖಿತ ಮುನಿ ಈತನಲ್ಲಿಗೆ ಬಂದು ಕಳ್ಳ ತನದ ಶಿಕ್ಷೆಯ ರೂಪವಾಗಿ ತನ್ನ ಕೈಗಳನ್ನು ಕತ್ತರಿಸಿಕೊಂಡು ಹೋದ. ನೋಡು —ಲಿಖಿತ [ಭಾರ -ಶಾಂ. ೨೩].

**ಸುಧನ್ವ** —(i) ಅಂಗಿರಸನೆಂಬ ಮುನಿಯಮಗ [ಭಾರ.-ಅನು.೩೨] ಪ್ರಹ್ಲಾದ ಪುತ್ರನಾದ ವಿರೋಚನನೂ ಇವನೂ ಇಬ್ಬರೂ ಕೇಶಿನಿಯೆಂಬ ಕನ್ಯೆಯ ಸಲುವಾಗಿ ವಿವಾದಮಾಡಿ, ಬ್ರಾಹ್ಮಣ, ಕ್ಷತ್ರಿಯರಲ್ಲಿ ಯಾರು ಶ್ರೇಷ್ಠರೆಂಬ ವಿಷಯವನ್ನು ನಿರ್ಣಯಗೊಳಿಸಲು, ಪ್ರಹ್ಲಾದನಲ್ಲಿಗೆ ಹೋದರು. ಪ್ರಹ್ಲಾದ ನಿಷ್ಪಕ್ಷಪಾತಬುದ್ಧಿ ಯಿಂದ ಅವರ ವಿವಾದವನ್ನು ನಿರ್ಣಯಿಸಿದ [ಭಾರ.-ಸ. ೯೦. ಉ. ೩೫].

(ii) ಪಾಂಚಾಲ ರಾಜ ಪಾಂಡವರ ಪರವಾಗಿ ಹೋರಾಡಿದವ [ಭಾರ - ದ್ರೋ ೨೩]. ಹದಿನಾಲ್ಕನೆಯ ದಿನದ ಹಗಲು ಯುದ್ಧದಲ್ಲಿ ದ್ರೋಣನಿಂದ ಮಡಿದ [ದ್ರೋ ೧೨೨].

(iii) ಒಬ್ಬ ಬ್ರಾಹ್ಮಣ. ರಾಮ ಲಕ್ಷ್ಮಣಾದಿಗಳಿಗೆ ಧನುರ್ವಿದ್ಯೆಯನ್ನು ಕಲಿಸಿದವ [ರಾಮಾ.-ಅಯೋ ೧೦೦]

(iv) ಸಾಂಕಾಶ್ಯ ದೇಶದ ಅರಸು. ಸೀತೆಯನ್ನು ತನಗೆ ಮದುವೆಮಾಡಿ ಕೊಡಬೇಕೆಂದು ಜನಕನಿಗೆ ಹೇಳಿಕಳುಹಿದ. ಜನಕ ಅದಕ್ಕೆ ಸಮ್ಮತಿಸಲಿಲ್ಲ. ಆಗ ಸುಧನ್ವ ಅವನ ಮೇಲೆ ದಂಡೆತ್ತಿಹೋಗಿ ಯುದ್ಧದಲ್ಲಿ ಹತನಾದ. ಬಳಿಕ ಜನಕ ಅವನ ರಾಜ್ಯದಲ್ಲಿ ತನ್ನ ತಮ್ಮನಾದ ಕುಶಧ್ವಜನಿಗೆ ಪಟ್ಟಗಟ್ಟಿದ. ನೋಡು— ಸಾಙ್ಕಾಶ್ಯ, ಕುಶಧ್ವಜ [ರಾಮಾ.-ಬಾಲ ೭೦].

(v) ಚಂಪಕಾವತಿಯ ಅರಸನಾದ ಹಂಸಧ್ವಜನ ಮಕ್ಕಳಲ್ಲಿ ಒಬ್ಬ. ಹಂಸ ಧ್ವಜ ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಹಿಡಿದ. ಅರ್ಜುನನಿಗೂ ಹಂಸ

ಧ್ವಜನಿಗೂ ಯುದ್ಧವಾಗುವ ಪ್ರಸಂಗ ಬಂತು. ಹಂಸಧ್ವಜ ಸುಧನ್ವನನ್ನು ಯುದ್ಧಕ್ಕೆ ಹೊರಡಹೇಳಿ ತಾನು ಅರ್ಜುನನನ್ನು ಇದಿರಿಸ ಹೊರಟ. ಸುಧನ್ವ ಹೆಂಡತಿಗೆ ಹೇಳಿಬರುವುದಕ್ಕಾಗಿ ಅಂತಃಪುರಕ್ಕೆ ಹೋಗಿ, ಅಲ್ಲಿಯೇ ಸ್ವಲ್ಪಕಾಲವಿದ್ದು, ಬಳಿಕ ರಣಭೂಮಿಗೆ ಹೋದ. ಕುಪಿತನಾದ ಹಂಸಧ್ವಜ ಸುಧನ್ವನನ್ನು ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ತಳ್ಳಿಸಿದ. ಸುಧನ್ವ ಸ್ವಲ್ಪವೂ ಅಲುಗದೆ ಸಂತೋಷ ದಿಂದ ಕೊಪ್ಪರಿಗೆಯಲ್ಲಿ ಕುಳಿತಿದ್ದ. ಆಗ ಹಂಸಧ್ವಜ ಇವನ ಭಕ್ತಿಪರವಶತೆಗೆ ಮೆಚ್ಚಿ ಇವನನ್ನು ಸೇನಾಪತಿಯ ಸ್ಥಾನದಲ್ಲಿ ನಿಯಮಿಸಲಾಗಿ, ಸುಧನ್ವ ಅರ್ಜುನ ನೊಂದಿಗೆ ಯುದ್ಧಮಾಡಿ ಮಡಿದ [ಜೈ.ಭಾರ.-೧೭-೨೧].

**ಸುಧರ್ಮ.**—(i) ದುರ್ಯೋಧನನ ಪುರೋಹಿತ [ಶಾಂತಿ. ೩೯, ೪೩].

(ii) ದಶಾರ್ಣದೇಶದ ಅರಸು. ರಾಜಸೂಯದಿಗ್ವಿಜಯ ಸಮಯದಲ್ಲಿ ಭೀಮ ಈತನೊಂದಿಗೆ ಯುದ್ಧಮಾಡಿ, ಇವನ ಪರಾಕ್ರಮಕ್ಕೆ ಮೆಚ್ಚಿ, ತನ್ನ ಸೇನಾಪತಿಯನ್ನಾಗಿ ನಿಯಮಿಸಿದ [ಸಭಾ. ೩೦].

(iii) ಇಂದ್ರನ ಸಾರಥಿಯಾದ ಮಾತಲಿಯ ಹೆಂಡತಿ. ಈಕೆಯ ಮಗಳಾದ ಗುಣಕೇಶಿಯೆಂಬವಳನ್ನು ಸುಮುಖನೆಂಬ ನಾಗನು ಮದುವೆಯಾದ. ನೋಡು—ಗುಣಕೇಶಿ, ಮಾತಲಿ [ಭಾರ.-ಉ. ೯೭].

(iv) ಇಂದ್ರನ ಸಭೆ. ನೋಡು—ಇಂದ್ರ.

**ಸುಧಾಮ.**—ಸೀರಧ್ವಜ ಜನಕನ ಮಂತ್ರಿ [ರಾ.-ಬಾಲ. ೭೦].

**ಸುನನ್ದಾ.**—(i) ಮಗಧ ರಾಜಪುತ್ರಿ. ಚಂದ್ರವಂಶದ ಪೂರು ರಾಜನ ಮಗನಾದ ಜನಮೇಜಯನೆಂಬ ಅರಸನನ್ನು ಮದುವೆಯಾಗಿ ಪ್ರಾಚೀನ್ವಂತನೆಂಬ ಪುತ್ರನನ್ನು ಪಡೆದಳು [ಭಾರ.-ಆದಿ. ೬೩].

(ii) ಚೇದಿ ದೇಶಾಧಿಪತಿಯಾದ ಸುಬಾಹು ರಾಜನ ಒಡಹುಟ್ಟಿದವಳು. ನಳ ದಮಯಂತಿಯನ್ನು ಅರಣ್ಯದಲ್ಲಿ ಬಿಟ್ಟುಹೋದ ತರುವಾಯ, ದಮಯಂತಿ ವರ್ತಕರ ಗುಂಪನ್ನು ಸೇರಿ, ಚೇದಿ ಪಟ್ಟಣವನ್ನು ಹೊಕ್ಕು ಈಕೆಯ ಬಳಿಸಾರ್ದು, ಕೆಲವು ಕಾಲ ದಾಸಿಯಾಗಿದ್ದಳು [ಭಾರ.-ವನ. ೬೨].

(iii) ದುಷ್ಯಂತ ಪುತ್ರನಾದ ಭರತನ ಮೂವರು ಪತ್ನಿಯರಲ್ಲಿ ಮುಖ್ಯಳು. ಈಕೆಯ ಮಗ ಭುಮನ್ಯು. ನೋಡು—ಭರತ [ಭಾರ.-ಆದಿ. ೬೩].

(iv) ನೀಲಧ್ವಜ ರಾಜನ ಹೆಂಡತಿ [ಜೈ.ಭಾ.-ಅಶ್ವ. ೬೧].

**ಸುನಾಭ.**—(i) ಕಟ ದೇಶದ ಅರಸು. ರಾಜಸೂಯ ದಿಗ್ವಿಜಯ ಸಮಯದಲ್ಲಿ ಅರ್ಜುನನನ್ನು ಇದಿರಿಸಿ ಮಡಿದ [ಭಾರ.-ಸಭಾ ೨೭].

(ii) ಲಂಕೆಯೊಳಗಣ ಒಂದು ಬೆಟ್ಟ [ರಾಮಾ.-ಸುಂ. ೫೬].

**ಸುನಾಮ.**—ಕಂಸನ ಒಡಹುಟ್ಟಿದವ. ಶ್ರೀಕೃಷ್ಣ ಕಂಸನನ್ನು ಕೊಂದಾಗ ಬಲರಾಮನಿಂದ ಹತನಾದ [ಭಾರ.-ಸ. ೧೪, ೫೪].

**ಸುನೀತಿ.**—ಉತ್ತಾನಪಾದ ರಾಜನ ಹಿರಿಯಹೆಂಡತಿ. ಧ್ರುವನ ಜನನಿ [ವಿಷ್ಣು.-೧-೧೧. ಲಿಂಗ.-೬೨. ಮತ್ಸ್ಯ.-೪. ಭಾಗ.-೪-೮. ಸ್ಕಾಂ.-ಕಾಶೀಖಂ ಪೂ. ೨೦].

**ಸುನೀಥ.**—ಶಿಶುಪಾಲನ ನಾಮಾಂತರ [ಭಾರ.-ಸ ೮, ೪೨].

**ಸುನ್ದ.**—ನಿಕುಂಭನೆಂಬ ರಾಕ್ಷಸನ ಮಗ. ಉಪಸುಂದ ಇವನ ತಮ್ಮ [ಭಾರ.-ಆದಿ. ೨೫, ೨೭]. ಇವ ಉಪಸುಂದನ ಗದಾಪ್ರಹಾರದಿಂದ ಮಡಿದ [ಭಾರ.-ಆದಿ. ೨೩೨]. ನೋಡು—ಉಪಸುಂದ, ತಿಲೋತ್ತಮಾ, ಮಾರೀಚ, ತಾಟಕಾ. ತಾಟಕೆ ಇವನನ್ನು ಮದುವೆಯಾಗಿ ಮಾರೀಚನೆಂಬ ಮಗನನ್ನು ಪಡೆದಳು [ರಾ.-ಬಾಲ. ೨೫].

**ಸುನ್ದರಾ.**—ಕೇಕಯ ರಾಜಪುತ್ರಿ. ಚಂದ್ರ ವಂಶದ ಅಹಂಯಾತಿ ರಾಜನ ಮಗನಾದ ಸಾರ್ವಭೌಮನೆಂಬವನನ್ನು ಮದುವೆಯಾಗಿ ಜಯತ್ಸೇನನೆಂಬ ಪುತ್ರನನ್ನು ಪಡೆದಳು [ಭಾರ.-ಆದಿ. ೬೩]

**ಸುಪರ್ಣ.**—ಗರುಡನ ನಾಮಾಂತರ.

**ಸುಪರ್ಣಲೋಕ.**—ಗರುಡಲೋಕ. ಇಂದ್ರಸಾರಥಿಯಾದ ಮಾತಲಿ ತನ್ನ ಮಗಳಿಗೆ ವರನನ್ನು ಹುಡುಕುವಾಗ ಇಲ್ಲಿಗೆ ಹೋದದ್ದು [ಭಾರ.-ಉ. ೧೦೧].

**ಸುಪರ್ಣವ್ಯೂಹ.**—ಸೇನೆಯನ್ನು ಗರುಡಾಕಾರವಾಗಿ ಏರ್ಪಡಿಸುವುದು. ಭಾರತ ಯುದ್ಧದ ಹನ್ನೊಂದನೆಯ ದಿನದಲ್ಲಿ ದ್ರೋಣ ಕೌರವಸೇನೆಯನ್ನು ಗರುಡಾಕಾರವಾಗಿ ಏರ್ಪಡಿಸಿದ್ದ [ಭಾರ.-ದ್ರೋ. ೨೦].

**ಸುಪರ್ಶ್ವ.**—ಪರ್ವತ ರಾಜ. ಭಾರತಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ಹನ್ನೊಂದನೆಯ ದಿನ ರುಚಿಪರ್ವನನ್ನು ಕೊಂದ [ದ್ರೋಣ. ೨೬].

**ಸುಪ್ರತೀಕ.**—(i) ಅಷ್ಟದಿಗ್ಗಜಗಳಲ್ಲಿ ಒಂದು. ಈಶಾನ್ಯ ದಿಕ್ಕಿನಲ್ಲಿರುವುದು [ಭಾರ.-ಭೀ. ೧೨].

(ii) ನರಕಾಸುರನ ಮಗನಾದ ಭಗದತ್ತನ ಆನೆ [ಭೀ. ೯೫].

(iii) ಒಬ್ಬ ಋಷಿ. ವಿಭಾವಸು ಮುನಿಯ ಸಹೋದರ. ಈತ ಶಾಪದಿಂದ ಗಜರೂಪವನ್ನು ಪಡೆದಿದ್ದು ಗರುಡನಿಗೆ ಆಹಾರವಾದ [ಭಾರ.-ಆದಿ. ೨೯].

**ಸುಪ್ರಭಾ.**—(i) ಅಷ್ಟಾವಕ್ರ ಮಹರ್ಷಿಯ ಹೆಂಡತಿ. ವದಾನ್ಯ ಮಹರ್ಷಿಯ ಮಗಳು [ಭಾರ.-ಅನು. ೫೦].

(ii) ಸರಸ್ವತೀ ನದಿಯ ಏಳು ಶಾಖೆಗಳಲ್ಲಿ ಒಂದು [ಭಾರ.-ಶಲ್ಯ. ೩೯].

**ಸುಬಲ.**—ಒಬ್ಬ ಅರಸು. ಸಿಂಧು ದೇಶದ ಅಧಿಪತಿ. ಗಾಂಧಾರಿ, ಶಕುನಿ ಮೊದಲಾದವರು ಈತನ ಮಕ್ಕಳು [ಭಾರ.-ಆದಿ. ೬೪, ೧೧೯].

**ಸುಬಾಹು.**—(i) ಚೇದಿ ದೇಶದ ರಾಜ. ವೀರಬಾಹು ರಾಜನ ಮಗ. ದಮಯಂತಿಯ ಚಿಕ್ಕಮ್ಮನ ಮಗ. ದಮಯಂತಿ ಕೆಲವು ಕಾಲ ಇವನ ಅರಮನೆಯಲ್ಲಿ ದಾಸಿಯಾಗಿದ್ದಳು [ಭಾರ.-ವನ. ೬೫, ೬೬].

(ii) ಒಬ್ಬ ರಾಕ್ಷಸ. ತಾಟಕೆಯ ಮಗ ಮಾರೀಚನ ತಮ್ಮ. ಇವನ ತಂದೆ ಸುನ್ದ [ಭಾರ.-ಸಭಾ. ೫೦] ನೋಡು—ತಾಟಕಾ, ಮಾರೀಚ, ರಾಮ. ವಿಶ್ವಾಮಿತ್ರ ಸಿದ್ಧಾಶ್ರಮದಲ್ಲಿ ಯಜ್ಞಮಾಡತೊಡಗಿದಾಗ ಇವ ತುಂಬ ಹಾವಳಿಮಾಡುತ್ತಿದ್ದನಾಗಿ, ವಿಶ್ವಾಮಿತ್ರ ರಾಮನ ಮೂಲಕ ಆಗ್ನೇಯಾಸ್ತ್ರದಿಂದ ಇವನನ್ನು ಕೊಲ್ಲಿಸಿದ [ರಾಮಾ.-ಬಾಲ. ೩೦].

(iii) ಬೇಡರ ಪಾಳೆಯಗಾರ. ಪಾಂಡವರು ಗಂಧಮಾದನ ಪರ್ವತಕ್ಕೆ ಹೋಗಿ ಹಿಂದಿರುಗುವಾಗ ಇವ ಅವರನ್ನು ಸತ್ಕರಿಸಿ ಕೈಲಾಸ ಪರ್ವತದ ಹಾದಿಯನ್ನು ತೋರಿ ಒತ್ತಾಸೆಮಾಡಿದ [ಭಾರ ವನ. ೧೭೯]

(iv) ಒಬ್ಬ ಅರಸು ಕೌರವರ ಪರವಾಗಿ ಹೋರಾಡಿದ. ಧೃತರಾಷ್ಟ್ರನ ದಾಸೀ ಪುತ್ರನಾದ ಯುಯುತ್ಸು ಭಾರತಯುದ್ಧದ ಹನ್ನೊಂದನೆಯ ದಿನ ಇವನ ಎರಡು ತೋಳುಗಳನ್ನೂ ಕಡಿದ [ಭಾರ.-ದ್ರೋ ೨೫].

(v) ಸಂಶಪ್ತಕರಲ್ಲಿ ಒಬ್ಬ

**ಸುಭಗ.**—ಗಾಂಧಾರ ರಾಜನಾದ ಸುಬಲನ ಮಗ. ಶಕುನಿಯ ಸಹೋದರ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಭೀಮನಿಂದ ಮಡಿದ [ಭಾರ.-ದ್ರೋ. ೧೫೮]

**ಸುಭದ್ರಾ.**—ವಸುದೇವನಿಂದ ದೇವಕಿಯಲ್ಲಿ ಜನಿಸಿದವಳು ಅರ್ಜುನನ ಹೆಂಡತಿ. ಅಭಿಮನ್ಯುವಿನ ಜನನಿ [ಆದಿ. ೬೩]. ಸುಭದ್ರೆಯನ್ನು ಅಪಹರಿಸುವುದರಲ್ಲಿ ಕೃಷ್ಣ ಅರ್ಜುನನಿಗೆ ಒತ್ತಾಸೆಮಾಡಿದ್ದು [ಭಾರ.-ಆದಿ. ೨೩೯] ಅರ್ಜುನ ಯತಿರೂಪದಿಂದ ಸುಭದ್ರೆಯ ಅಂತಃಪುರದಲ್ಲಿ ವಾಸಮಾಡಿದ್ದು [ಭಾಗ.-೧೦-೮೬. ಭಾರ -ಆ ೨೪೧]. ಅರ್ಜುನ ಸುಭದ್ರೆಯನ್ನು ಅಪಹರಿಸಿದಾಗ ಆಕೆ ಸಾರಥ್ಯವನ್ನು ಮಾಡಿದ್ದು [ಆದಿ. ೨೪೪, ೨೪೫]. ಸುಭದ್ರೆಯ ವಿವಾಹ [ಭಾರ.-ಆದಿ. ೬೧, ೨೪೨]. ಸುಭದ್ರೆ ಗೊಲ್ಲತಿಯ ವೇಷದಿಂದ ದ್ರೌಪದಿಯ ಬಳಿಗೆ ಹೋದದ್ದು [ಭಾರ.-ಆದಿ. ೨೪೬]. ಅಭಿಮನ್ಯುವನ್ನು ಪಡೆದದ್ದು [ಆದಿ. ೨೪೭]. ಪಾಂಡವರು ಅರಣ್ಯವಾಸದಲ್ಲಿದ್ದಾಗ ಅವರನ್ನು ಕಾಣಲು ಬಂದ ಕೃಷ್ಣನ ಸಂಗಡ, ಸುಭದ್ರೆ ದ್ವಾರಕೆಗೆ ಹೋದದ್ದು [ಭಾರ.-ವನ. ೨೨]. ಅಭಿಮನ್ಯುವಿನ ವಿವಾಹಸಮಯದಲ್ಲಿ ಸುಭದ್ರೆ ಉಪಪ್ಲಾವ್ಯ ನಗರದಲ್ಲಿದ್ದ ಪಾಂಡವರಲ್ಲಿಗೆ ಬಂದದ್ದು [ಭಾರ.-ವಿರಾ. ೭೮]. ಅಭಿಮನ್ಯುವಿನ ಕೊಲೆ

ಗಾಗಿ ಸುಭದ್ರೆ ಪ್ರಲಾಪಿಸಿದ್ದು [ಭಾರ.-ದ್ರೋ. ೭೮]. ಭಾರತಯುದ್ಧ ಮುಗಿದು ಅಶ್ವಮೇಧಯಾಗ ನೆರವೇರಿದ ಬಳಿಕ ಮರಳಿ ಕೃಷ್ಣನ ಸಂಗಡ ಹಸ್ತಿನಾವತಿಯಿಂದ ದ್ವಾರಕೆಗೆ ಹೋದದ್ದು [ಭಾರ.-ಅಶ್ವ ೫೨].

**ಸುಮತಿ.**—(i) ಸಗರ ಚಕ್ರವರ್ತಿಯ ಹಿರಿಯ ಹೆಂಡತಿ. ಈಕೆ ಅರುವತ್ತು ಸಾವಿರ ಮಂದಿ ಪುತ್ರರನ್ನು ಪಡೆದಳು. ನೋಡು—ಸಗರ.

(ii) ಪ್ರಿಯವ್ರತ ವಂಶದ ವೃಷಭದೇವ ರಾಜನ ಮಗನಾದ ಭರತ ರಾಜನಿಂದ ಪಂಚಜನಿಯೆಂಬ ತರುಣಿಯಲ್ಲಿ ಜನಿಸಿದ ಐವರು ಪುತ್ರರಲ್ಲಿ ಹಿರಿಯವ. ಈತ ಧ್ರುವಸೇನೆಯೆಂಬ ತರುಣಿಯನ್ನು ಮದುವೆಯಾಗಿ ದೇವಜಿತನೆಂಬ ಮಗನನ್ನು ಪಡೆದ [ಭಾಗ.-೫, ೧೫].

**ಸುಮನಾ.**—ಕೇಕಯ ದೇಶದ ಒಬ್ಬ ಹೆಂಗಸು. ಪತಿವ್ರತಾಮಾಹಾತ್ಮ್ಯವಿಷಯನಾಗಿ ಶಾಂಡಿಲಿಯೆಂಬ ಮುನಿಪುತ್ರಿಯೊಂದಿಗೆ ಸಂವಾದಮಾಡಿದಳು [ಅನು. ೧೮೫].

**ಸುಮನ್ತು.**—ಒಬ್ಬ ಮಹರ್ಷಿ. ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ಕೃಷ್ಣದ್ವೈಪಾಯನಮುನಿಯ ಮೂಲಕ ಅಥರ್ವಣವೇದವನ್ನು ಮೊತ್ತಮೊದಲು ಉಪದೇಶಹೊಂದಿದ [ಭಾರ -ಆದಿ ೬೪ ಸ ೪ ಶಾಂತಿ. ೪೬]. ನೋಡು —ವ್ಯಾಸ, ವೇದ, ಕೃಷ್ಣದ್ವೈಪಾಯನ.

**ಸುಮನ್ತ್ರ** —(i) ದಶರಥನ ಮಂತ್ರಿ. ದಶರಥ ಪುತ್ರಕಾಮೇಷ್ಟಿಮಾಡಿದಾಗ ಋಷ್ಯಶೃಂಗ ಮುನಿಯನ್ನು ಕರೆತಂದ [ಬಾಲ ೭-೮] ರಾಮ ಅರಣ್ಯವಾಸಕ್ಕೆ ಹೋದಾಗ ರಥವನ್ನು ತಾನೇ ನಡೆಯಿಸಿದ [ಅಯೋ ೪೦]. ಭರತ ರಾಮನನ್ನು ಕರೆತರಲು ಹೋಗಿದ್ದಾಗ ಈತನೂ ಹೋಗಿದ್ದ [ಅಯೋ ೮೨]

(ii) ಸೌವೀರ ದೇಶದ ಅರಸು ಪಾಂಡವರು ದಿಗ್ವಿಜಯಕ್ಕೆ ಹೊರಟಾಗ ಅರ್ಜುನನಿಂದ ನಿಗ್ರಹವನ್ನು ಪಡೆದ [ಆದಿ ೧೫೧] ಯುಧಿಷ್ಠಿರನ ಸಭೆಯಲ್ಲಿ ಸಭಾಸದನಾಗಿದ್ದ [ಸಭಾ. ೪, ೩೨].

(iii) ಭೃಗು ವಂಶದ ಒಬ್ಬ ಮಹರ್ಷಿ. ಈತನಿಗೆ ಫೇನಪನೆಂಬುದು ನಾಮಾಂತರ. ಗೋ ಮಹಿಮೆಯ ವಿಷಯವಾದ ಈತನ ಕಥೆ [ಭಾ.-ಅನು.೧೨೦].

(iv) ಅಭಿಮನ್ಯುವಿನ ಸಾರಥಿ [ಭಾರ -ದ್ರೋ. ೩೫].

(v) ಪುಲಿನ್ದ ನಗರದ ಅರಸು. ರಾಜಸೂಯದಿಗ್ವಿಜಯ ಸಮಯದಲ್ಲಿ ಭೀಮ ಇವನನ್ನು ವಶಪಡಿಸಿಕೊಂಡ [ಭಾರ.-ಸ. ೩೦].

(vi) ದ್ರುಪದ ರಾಜನ ಮಕ್ಕಳಲ್ಲಿ ಒಬ್ಬ ದ್ರೌಪದೀ ವಿವಾಹಾನಂತರ ನಡೆದ ಯುದ್ಧದಲ್ಲಿ ಜಯದ್ರಥನಿಂದ ಮಡಿದ. ಇವನಿಗೆ ಸೌಮಿತ್ರನೆಂಬುದು ನಾಮಾಂತರ [ಭಾರ.-ಆ. ೨೧೮].

**ಸುಮಾಲಿ.**—ಒಬ್ಬ ರಾಕ್ಷಸ. ನೋಡು—ಮಾಲಿ, ಮಾಲ್ಯವಂತ. ಈತ ನರ್ಮದೆಯೆಂಬ ಗಂಧರ್ವಸ್ತ್ರೀಯ ಮಗಳಾದ ಕೇತುಮತಿಯನ್ನು ಮದುವೆಯಾಗಿ ಪ್ರಹಸ್ತ, ಅಕಂಪನ, ಧೂಮ್ರಾಕ್ಷ, ಸುಪಾರ್ಶ್ವರೆಂಬ ಪುತ್ರರನ್ನೂ, ಪುಷ್ಪೋತ್ಕಟಾ, ಕೈಕಸಿ, ಕುಂಭೀನಸಿ, ಬಾಲೆ ಎಂಬ ಪುತ್ರಿಯರನ್ನೂ ಪಡೆದ. ಇಂದ್ರನೊಡನೆ ಯುದ್ಧಮಾಡಿ ಸೋತು, ಪಾತಾಳಲೋಕದಲ್ಲಿ ವಾಸವಾಗಿದ್ದ. ರಾವಣ ಕುಬೇರನಿಂದ ಲಂಕೆಯನ್ನು ಅಪಹರಿಸಿದ ತರುವಾಯ ಮರಳಿ ರಾವಣನ ಸಂಗಡ ಲಂಕೆಯನ್ನು ಸೇರಿದ [ರಾಮಾ.-ಉತ್ತ. ೫-೮].

**ಸುಮಿತ್ರಾ.**—ಮಗಧ ದೇಶಾಧಿಪತಿಯಾದ ಶೂರ ರಾಜನ ಮಗಳು. ದಶರಥನ ಎರಡನೆಯ ಹೆಂಡತಿ. ಲಕ್ಷ್ಮಣ, ಶತ್ರುಘ್ನರೆಂಬ ಅವಳಿ ಮಕ್ಕಳನ್ನು ಹೆತ್ತವಳು [ಭಾರ -ವನ. ೨೭೫]. ರಾಮ ಜನಿಸಿದ ಮೂರನೆಯ ದಿನ ಆಶ್ಲೇಷಾ ನಕ್ಷತ್ರದ ನಾಲ್ಕನೆಯ ಪಾದ ಕರ್ಕಾಟಕ ಲಗ್ನದಲ್ಲಿ ಸುಮಿತ್ರೆ ಲಕ್ಷ್ಮಣ, ಶತ್ರುಘ್ನರನ್ನು ಪಡೆದಳು [ರಾ.-ಬಾಲ. ೧೮]. ಸೀತಾ ರಾಮ ಲಕ್ಷ್ಮಣರು ಅರಣ್ಯವಾಸಕ್ಕೆ ಹೊರಟಾಗ ಸುಮಿತ್ರೆ ಲಕ್ಷ್ಮಣನಿಗೆ ಬುದ್ಧಿಹೇಳಿದ್ದು [ಅಯೋ. ४೦] ಭರತ ರಾಮನನ್ನು ಕರೆತರಲು ಚಿತ್ರಕೂಟ ಪರ್ವತಕ್ಕೆ ಹೊರಟಾಗ ಈಕೆಯೂ ಆತನ ಸಂಗಡ ಹೋಗಿದ್ದಳು. ಸೀತೆ ಅರಣ್ಯದಲ್ಲಿ ಕಷ್ಟಪಡುವುದನ್ನು ಕಂಡು ಮರುಗಿದಳು [ಅಯೋ. ೧೦೪].

**ಸುಮೀಢ**—ಒಬ್ಬ ಅರಸು. ಚಂದ್ರ ವಂಶದ ಸುಹೋತ್ರ ರಾಜನ ಮಗ. ಅಜಮೀಢ, ಪುರುಮೀಢರೆಂಬವರು ಇವನ ಒಡಹುಟ್ಟಿದವರು [ಭಾರ.-ಆದಿ. ೧೦೧].

**ಸುಮುಖ.**—ಒಬ್ಬ ನಾಗ. ಇವ ಮಾತಲಿಯ ಮಗಳಾದ ಗುಣಕೇಶಿಯೆಂಬವಳನ್ನು ಮದುವೆಯಾದ [ಉದ್ಯೋ ೧೦೪]

**ಸುಮೇಧ.**—ಒಬ್ಬ ಋಷಿ. ಮಾರ್ಕಂಡೇಯ ಪುರಾಣವನ್ನು ಸುರಥ, ಸಮಾಧಿಗಳಿಗೆ ಹೇಳಿದವನು. ನೋಡು—ಸುರಥ.

**ಸುಯೋಧನ.**—ಬಹಳ ಚೆನ್ನಾಗಿ ಯುದ್ಧಮಾಡತಕ್ಕವನಾದುದರಿಂದ ಈ ಹೆಸರು ದುರ್ಯೋಧನನಿಗೆ ರೂಢಿಯಲ್ಲಿದೆ [ಭಾರ.-ದ್ರೋ. ೧೧೧].

**ಸುರಥ.**—ಕೃಪಾಚಾರ್ಯನ ವಶದಲ್ಲಿದ್ದ ಒಬ್ಬ ಸೇನಾಪತಿ [ಭಾರ.-ವಿರಾ. ೬೧].

(ii) ಒಬ್ಬ ಅರಸು. ದುರ್ಯೋಧನನ ತಂಗಿಯಾದ ದುಶ್ಯಲೆಯಲ್ಲಿ ಜಯದ್ರಥನಿಂದ ಜನಿಸಿದವ. ಅರ್ಜುನ ಅಶ್ವಮೇಧದ ಕುದುರೆಯ ಸಂಗಡ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿದ ಮಾತ್ರದಿಂದಲೇ ಸತ್ತ [ಭಾರ.-ಅಶ್ವ. ೭೮].

(iii) ದ್ರುಪದ ರಾಜನ ಮಕ್ಕಳಲ್ಲಿ ಒಬ್ಬ. ಹದಿನಾಲ್ಕನೆಯ ದಿನದ ರಾತ್ರಿ ಯುದ್ಧದಲ್ಲಿ ಅಶ್ವತ್ಥಾಮನಿಂದ ಹತನಾದ [ಭಾರ -ದ್ರೋ. ೧೫೭].

(v) ಸ್ವಾರೋಚಿಷ ಮನ್ವಂತರದ ಒಬ್ಬ ಅರಸು. ಮ್ಲೇಚ್ಛರು ರಾಜ್ಯವನ್ನು ಆಕ್ರಮಿಸಲಾಗಿ ಈತ ಅರಣ್ಯವನ್ನು ಸೇರಿ ಸುಮೇಧನೆಂಬ ಮುನಿಯ ಆಶ್ರಮವನ್ನು ಹೊಕ್ಕು, ಆತನಿಂದ ಭಗವತಿಯ ಮಹಿಮೆಯನ್ನು ಕೇಳಿ, ಜಿತೇಂದ್ರಿಯನಾಗಿ ಮೂರು ವರ್ಷಗಳವರೆಗೆ ದೇವಿಯನ್ನು ಆರಾಧಿಸಿ, ಆಕೆಯ ಅನುಗ್ರಹದಿಂದ ತನ್ನ ರಾಜ್ಯವನ್ನು ಸಂಪಾದಿಸಿ, ಮುಂದಣ ಜನ್ಮದಲ್ಲಿ ಸಾವರ್ಣ್ಣಮನುವಾಗಿ ಜನಿಸಿದ [ಶಿವ.-ಉಮಾ ೪೫. ದೇ.ಭಾಗ.-೫, ೩೨-೩೫. ಮಾರ್ಕಂ -೭೬-೮೯] ನೋಡು— ಸಮಾಧಿ.

**ಸುರಧಾ.**—ವಿರಾಟ ರಾಜನ ಹಿರಿಯ ಹೆಂಡತಿ. ಶಂಖ, ಶ್ವೇತರೆಂಬ ಪುತ್ರರನ್ನು ಪಡೆದಳು [ವಿರಾ ೨೧]

**ಸುರಭಿ**—ದಕ್ಷಬ್ರಹ್ಮನ ಮಗಳು. ಕಶ್ಯಪನ ಹೆಂಡತಿ ವಸಿಷ್ಠ ಮುನಿಯ ಹೋಮಧೇನುವಾದ ನಂದಿನೀ ಧೇನುವಿನ ತಾಯಿ [ಭಾರ -ಆದಿ. ೬೭, ೧೦೬ ಸ. ೧೧]. ಸುರಭಿಯ ಕಥೆ [ಭಾರ -ವನ. ೯] ಗರುಡ ಗಾಲವ ಮಹರ್ಷಿಗೆ ಸುರಭಿ ಲೋಕವನ್ನು ವರ್ಣ್ಣಿಸಿದ್ದು [ಭಾರ -ಉ. ೧೦೨]. ಪುಷ್ಕರವನ್ನು ತಾನು ಕದಿಯಲಿಲ್ಲವೆಂಬ ವಿಷಯವಾಗಿ ಸುರಭಿ ಮಾಡಿದ ಪ್ರತಿಜ್ಞೆಗಳು [ಅನು. ೧೪೩]

**ಸುರಸಾ.**—ದಕ್ಷಬ್ರಹ್ಮನ ಮಗಳು ಕಶ್ಯಪನ ಹೆಂಡತಿ ನಾಗರನ್ನು ಹೆತ್ತವಳು [ಭಾರ.-ಆದಿ. ೬೭. ಸ. ೧೧. ಉದ್ಯೋ ೧೦೩] ಹನೂಮಂತ ಸಮುದ್ರವನ್ನು ದಾಟುತ್ತಿದ್ದಾಗ, ಸುರಸೆ ದೇವತೆಗಳ ಸೂಚನೆಯಂತೆ ಹನೂಮಂತನ ದಾರಿಯನ್ನು ಅಡ್ಡಗಟ್ಟಿ ನುಂಗಹೋದಳು ಹನೂಮಂತನೂ ಸುರಸೆಯೂ ಒಬ್ಬರನ್ನೊಬ್ಬರು ಮೀರುವಹಾಗೆ ಬೆಳೆದರು ಆಗ ಹನೂಮಂತ ಥಟ್ಟನೆ ಸೂಕ್ಷ್ಮರೂಪವನ್ನು ತಾಳಿ ಆಕೆಯ ದೇಹವನ್ನು ಹೊಕ್ಕು ಹೊರಬಂದು, ಆಕೆಯ ಅನುಮತಿಯನ್ನು ಪಡೆದು, ಮುಂದೆ ಹೊರಟ [ರಾಮಾ.-ಸುಂದ. ೧].

**ಸುರಾ**—ಮದ್ಯದ ಅಭಿಮಾನಿದೇವತೆ. ಕ್ಷೀರಸಮುದ್ರ ಮಥನಕಾಲದಲ್ಲಿ ಜನಿಸಿದವಳು [ಭಾರ.-ಆದಿ ೧೮]

**ಸುರಾಷ್ಟ್ರ.**—ಒಂದು ದೇಶ. ಈಗಣ ಸೂರತ್ (Surat) ದೇಶ [ಭಾರ.-ಸ. ೩೨]. ಈ ದೇಶದವರೆಲ್ಲರೂ ಸಂಕರಜಾತಿಯವರೆಂಬುದಾಗಿ, ರಣರಂಗದಲ್ಲಿ ಕರ್ಣಶಲ್ಯರು ಒಬ್ಬರನ್ನೊಬ್ಬರು ಬಯ್ದಾಡಿದ ಸಂದರ್ಭದಲ್ಲಿ ವರ್ಣ್ಣಿತವಾಗಿದೆ [ಭಾರ.- ಕರ್ಣ. ೩೮].

**ಸುರುಚಿ.**—ಉತ್ತಾನಪಾದ ರಾಜನ ಕಿರಿಯ ಹೆಂಡತಿ. ಉತ್ತಮನ ಜನನಿ. ಧ್ರುವನನ್ನು ಧಿಕ್ಕರಿಸಿ ಮಾತನಾಡಿದವಳು. ನೋಡು—ಧ್ರುವ, ಸುನೀತಿ, ಉತ್ತಾನಪಾದ, ಉತ್ತಮ.

**ಸುರೇಣು.**—ಸರಸ್ವತೀ ನದಿಯ ಏಳು ಪ್ರವಾಹಗಳಲ್ಲಿ ಒಂದು [ಭಾರ.-ಶ. ೩೯].

**ಸುಲಭಾ.**—ಪ್ರಧಾನನೆಂಬ ರಾಜರ್ಷಿಯ ಮಗಳು. ಈಕೆ ಸಂನ್ಯಾಸಧರ್ಮ ವನ್ನು ಕೈಕೊಂಡು ಧರ್ಮಧ್ವಜ ಜನಕನ ಆಸ್ಥಾನಕ್ಕೆ ಹೋಗಿ, ಬ್ರಹ್ಮವಿದ್ಯಾವಿಚಾರ ವಾಗಿ ಸಂವಾದಮಾಡಿದ್ದು [ಶಾಂತಿ. ೩೨೫].

**ಸುವರ್ಚಲಾ.**—ದೇವಲ ಮಹರ್ಷಿಯ ಮಗಳು. ಶ್ವೇತಕೇತು ಮಹರ್ಷಿಯ ಹೆಂಡತಿ. ನೋಡು—ಶ್ವೇತಕೇತು. ಶ್ವೇತಕೇತುವಿನ ಸಂಗಡ ಅಧ್ಯಾತ್ಮವಿಚಾರವಾಗಿ ಸಂವಾದಮಾಡಿದಳು [ಶಾಂತಿ ೨೨೪, ೨೨೮].

**ಸುವರ್ಚಸ್.**—(i) ಒಬ್ಬ ಅರಸು. ಸೂರ್ಯ ವಂಶದ ಕರಂಭ ರಾಜನ ಮಗ ನಾದ ಖನೀನೇತ್ರನ ಮಗ. ಈತನ ಮಗ ಕರಂಧಮ. ನೋಡು—ಖನೀನೇತ್ರ, ಕರಂಧಮ [ಭಾರ.-ಅಶ್ವ. ೪].

(ii) ದುರ್ಯೋಧನ ಪಕ್ಷದ ಒಬ್ಬ ಅರಸು ಹನ್ನೊಂದನೆಯ ದಿನದ ಯುದ್ಧದಲ್ಲಿ ಅಭಿಮನ್ಯುವಿನಿಂದ ಮಡಿದ [ದ್ರೋ. ೪೮].

**ಸುವರ್ಣ.**—(i) ಒಬ್ಬ ಮಹರ್ಷಿ. ಧೂಪ, ದೀಪಾದಿಗಳನ್ನು ಭಗವಂತನಿಗೆ ಅರ್ಪಿಸುವ ವಿಷಯವಾಗಿ ಮನು ಚಕ್ರವರ್ತಿಯೊಂದಿಗೆ ಸಂವಾದಮಾಡಿದ [ಅ.೧೧೫].

(ii) ಚಿನ್ನ. ಲೋಹಗಳಲ್ಲಿ ಅತ್ಯುತ್ತಮವಾದದ್ದು ಮತ್ತು ಹೆಚ್ಚು ಬೆಲೆ ಯುಳ್ಳದ್ದು. ಅದರ ಉತ್ಪತ್ತಿ [ಅನು. ೧೩೦] ಸುವರ್ಣದಾನಮಹಿಮೆ [ಅನು. ೨೩೫].

**ಸುವರ್ಣ ಕದಳೀವನ**—ಹೊಂಬಾಳೆಯ ತೋಟ. ಗಂಧಮಾದನ ಪರ್ವತದ ಬಳಿ ಇದೆ. ಇದು ಹನೂಮಂತನ ವಾಸಸ್ಥಾನ [ಭಾರ.-ವನ. ೧೪೮].

**ಸುವರ್ಣವರ್ಮ.**—ಒಬ್ಬ ಅರಸು. ಕಾಶೀದೇಶಾಧಿಪತಿ. ಈತನ ಮಗಳಾದ ವಪುಷ್ಟಮೆಯೆಂಬವಳು ಅಭಿಮನ್ಯು ಪೌತ್ರನಾದ ಜನಮೇಜಯನನ್ನು ಮದುವೆ ಯಾದಳು [ಆದಿ. ೪೪].

**ಸುವರ್ಣಷ್ಠೀವಿ.**—ಒಬ್ಬ ರಾಜಪುತ್ರ. ಶೈಬ್ಯ ರಾಜನ ಮಗನಾದ ಸೃಂಜಯ ರಾಜನಿಗೆ ನಾರದನ ವರದಿಂದ ಜನಿಸಿದವ. ಇವ ಉಗುಳಿದ್ದೆಲ್ಲ ಚಿನ್ನವಾಗುತ್ತಿದ್ದ ಕಾರಣ ಇವನಿಗೆ ಸುವರ್ಣಷ್ಠೀವಿಯೆಂದು ಹೆಸರು ಇವನ ಮಲಮೂತ್ರಗಳೂ ಕೂಡ ಚಿನ್ನವಾಗಿರಬಹುದೆಂಬ ಭ್ರಾಂತಿಯಿಂದ ಕಳ್ಳರು ಇವನನ್ನು ಅಪಹರಿಸಿ ಕೊಂದರು [ಭಾರ.-ದ್ರೋ. ೫೫]. ಈತನ ಸಹೋದರಿಯಾದ ದಮಯಂತಿಯೆಂಬವಳನ್ನು ನಾರದ ಮಹರ್ಷಿ ಮದುವೆಯಾಗಿದ್ದ. ನೋಡು—ನಾರದ [ಭಾರ.-ಶಾಂತಿ. ೨೯-೩೦. ದೇ. ಭಾ.-೬-೨೭].

**ಸುವೇಗ.**—ಒಬ್ಬ ಅರಸು. ಭದ್ರಾವತೀ ನಗರಾಧೀಶ್ವರನಾದ ಯುವನಾಶ್ವನ ಮಗ. ಯುವನಾಶ್ವ ಭೀಮನ ಸಂಗಡ ಯುದ್ಧಮಾಡಿ ಸೋತಬಳಿಕ ಇವ ಗದಾ

ಯುದ್ಧದಲ್ಲಿ ಸೋತು, ಭೀಮನನ್ನು ಮರೆಹೊಕ್ಕು, ಅಶ್ವಮೇಧದ ಕುದುರೆಯನ್ನು ಕೊಟ್ಟು ಕಳುಹಿದ [ಜೈ.ಭಾರ.-ಅಶ್ವ. ೧-೭].

**ಸುವೇಲ.**—ಲಂಕೆಯ ಒಂದು ಪರ್ವತ. ಶ್ರೀರಾಮ ಮೊದಲು ಸೈನ್ಯವನ್ನು ಇಲ್ಲಿ ಬಿಡಾರಮಾಡಿದ [ರಾಮಾ.-ಯು. ೩೮-೪೧]

**ಸುವೇಷಾ.**—ಚಂದ್ರವಂಶದ ಅನಶುಷ ರಾಜನ ಮಗನಾದ ಪರೀಕ್ಷಿತನೆಂಬ ರಾಜನ ಹೆಂಡತಿ. ಇವಳಿಗೆ ಬಾಹುಕಾಯೆಂಬುದು ನಾಮಾಂತರ. ಈಕೆ ಭೀಮಸೇನನೆಂಬ ಮಗನನ್ನು ಪಡೆದಳು [ಭಾರ.-ಆದಿ. ೬೩].

**ಸುಶರ್ಮ.**—ಒಬ್ಬ ಅರಸು. ತ್ರಿಗರ್ತದೇಶಾಧಿಪತಿ. ದುರ್ಯೋಧನನ ಆಪ್ತಮಿತ್ರ [ಭಾರ-ಆದಿ. ೨೦೧]. ದುರ್ಯೋಧನ ದಕ್ಷಿಣಗೋಗ್ರಹಣಕ್ಕೆ ಇವನನ್ನು ಪ್ರೇರಿಸಿ ಕಳುಹಿಸಿದ್ದು [ಭಾರ.-ವಿರಾ ೩೨] ಇವ ಕೃಷ್ಣಪಕ್ಷದ ಅಷ್ಟಮಿಯ ದಿನ ಗೋವುಗಳನ್ನು ಹಿಡಿದ [ವಿರಾ. ೩೨] ವಿರಾಟ ಸುಶರ್ಮರ ಯುದ್ಧ [ವಿರಾ. ೩೪]. ಇವ ವಿರಾಟನನ್ನು ಸೆರೆಹಿಡಿಯಲಾಗಿ ವಲಲ (ಭೀಮ) ಯುಧಿಷ್ಠಿರನ ಸೂಚನೆಯಂತೆ ಸುಶರ್ಮನನ್ನು ಇದಿರಿಸಿ, ವಿರಾಟನನ್ನು ಬಿಡಿಸಿದ [ವಿರಾ. ೩೫]. ಭಾರತಯುದ್ಧದ ಹನ್ನೊಂದನೆಯ ದಿನ ಸುಶರ್ಮ ಯುದ್ಧಮಾಡಿದ [ದ್ರೋ. ೧೮]. ಹದಿನೆಂಟನೆಯ ದಿನ ಅರ್ಜುನನಿಂದ ಮಡಿದ [ಶಲ್ಯ. ೨೬].

(ii) ಕರ್ಣನ ಮಗ. ಹದಿನೆಂಟನೆಯ ದಿನ ನಕುಲನಿಂದ ಹತನಾದ [ಶಲ್ಯ. ೯].

(iii) ಪಾಂಚಾಲ ರಾಜಪುತ್ರರಲ್ಲಿ ಒಬ್ಬ. ಹದಿನಾರನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಕರ್ಣ. ೫೧].

**ಸುಶೋಭನಾ.**—ಆಯುವೆಂಬ ಮಂಡೂಕ ರಾಜನ ಮಗಳು. ಇಕ್ಷ್ವಾಕು ವಂಶದ ಪರೀಕ್ಷಿತನೆಂಬ ಅರಸನ ಹೆಂಡತಿ. ನೋಡು—ಪರೀಕ್ಷಿತ್ [ಭಾರ.-ವ. ೧೯೫].

**ಸುಶ್ರವಾ**—ಗಾಂಧಾರ ರಾಜನಾದ ಸುಬಲನ ಮಗಳು. ಧೃತರಾಷ್ಟ್ರನನ್ನೇ ಮದುವೆಯಾಗಿದ್ದಳು [ಭಾರ.-ಆ ೧೧೯].

(ii) ಚಂದ್ರವಂಶದ ಜಯತ್ಸೇನ ರಾಜನ ಹೆಂಡತಿ. ಪರಾಚೀನನೆಂಬ ಮಗನನ್ನು ಹೆತ್ತಳು [ಭಾರ-ಆದಿ. ೬೩].

**ಸುಷೇಣ.**—(i) ಜಮದಗ್ನಿ ಮಹರ್ಷಿಯ ಮಗ. ನೋಡು—ಜಮದಗ್ನಿ [ಭಾರ.-ವನ. ೧೧೭].

(ii) ಕಪಿಸೇನಾಪತಿ. ವಾಲಿಯ ಮಾವ [ವನ. ೨೮೪]. ರಾಮ ರಾವಣರ ಯುದ್ಧದಲ್ಲಿ ಲಕ್ಷ್ಮಣ ರಾವಣನ ಶಕ್ತ್ಯಾಯುಧದಿಂದ ಮೂರ್ಛೆಬಿದ್ದಾಗ, ಸುಷೇಣ

ರಾಮನಿಗೆ ಧೈರ್ಯಹೇಳಿ, ಹನೂಮಂತನ ಮೂಲಕ ಸರ್ವೌಷಧಿಪರ್ವತವನ್ನು ತರಿಸಿ ಲಕ್ಷ್ಮಣನನ್ನು ಬದುಕಿಸಿದ [ರಾಮಾ.-ಯುದ್ಧ. ೧೦೨].

(iii) ಕರ್ಣನ ಮಕ್ಕಳಲ್ಲಿ ಒಬ್ಬ [ಕರ್ಣ. ೪೩]. ಹದಿನೇಳನೆಯ ದಿನದ ಯುದ್ಧದಲ್ಲಿ ಭೀಮನಿಂದ ಹತನಾದ [ಕರ್ಣ. ೭೯].

**ಸುಹೋತ್ರ.**—(i) ಒಬ್ಬ ಅರಸು. ಚಂದ್ರವಂಶದ ಭುಮನ್ಯು ರಾಜನ ಮಗ. ಈತ ಜಯಂತಿಯೆಂಬವಳನ್ನು ಮದುವೆಯಾಗಿ ಅಜಮೀಢನೆಂಬ ತನಯನನ್ನು ಪಡೆದ. ಹಸ್ತಿನಾವತಿಯನ್ನು ನಿರ್ಮಿಸಿದ ಹಸ್ತಿ ರಾಜ ಈತನ ಮಗ ಸುಹೋತ್ರ ಮಹಾಧಾರ್ಮಿಕನಾಗಿದ್ದುದರಿಂದ ಈತನ ಕಾಲದಲ್ಲಿ ಸುವರ್ಣವೃಷ್ಟಿಯಾಗುತ್ತಿತ್ತು. ಈತ ಅನೇಕ ಯಾಗಗಳನ್ನು ಮಾಡಿದ ಅದರ ಫಲರೂಪನಾಗಿ ಸುವರ್ಣ ವೃಷ್ಟಿ ಸುರಿಯಲಾಗಿ, ಆ ಚಿನ್ನವನ್ನೇ ಯಜ್ಞದಲ್ಲಿ ನೆರೆದಿದ್ದ ಬ್ರಾಹ್ಮಣರಿಗೆಲ್ಲ ದಕ್ಷಿಣಾದ್ರವ್ಯವನ್ನಾಗಿ ಹಂಚಿಕೊಟ್ಟ [ಭಾರ -ಆದಿ ೬೩, ೧೦೧ ವನ. ೧೯೭].

(ii) ಮಾದ್ರೀಪುತ್ರನಾದ ಸಹದೇವನಿಂದ ಶಲ್ಯ ರಾಜಪುತ್ರಿಯಾದ ವಿಜಯೆಯೆಂಬವಳಲ್ಲಿ ಜನಿಸಿದವ [ಭಾರ.-ಆದಿ. ೬೩].

(iii) ಷೋಡಶ ಮಹಾರಾಜರಲ್ಲಿ ಒಬ್ಬ. ಭಾರತಯುದ್ಧದಲ್ಲಿ ಅಭಿಮನ್ಯುವಿನ ವಧೆಯಿಂದ ದುಃಖಿತನಾಗಿದ್ದ ಯುಧಿಷ್ಠಿರನಿಗೆ ಕೃಷ್ಣದ್ವೈಪಾಯನ ಇವನ ಕಥೆಯನ್ನು ಹೇಳಿದ [ಭಾರ -ದ್ರೋ೯ ೫೬. ಶಾಂತಿ ೨೮]

**ಸುಹ್ಮ.**—ಒಬ್ಬ ಅರಸು. ಶಿಬಿ ರಾಜನ ಮಗನಾದ ಬಲಿಯೆಂಬ ಅರಸನ ಪತ್ನಿಯಾದ ಸುದೇಷ್ಣೆಯೆಂಬವಳಲ್ಲಿ ದೀರ್ಘತಮನೆಂಬ ಮುನಿಯಿಂದ ಜನಿಸಿದ ಪುತ್ರರಲ್ಲಿ ಒಬ್ಬ. ನೋಡು—ದೀರ್ಘತಮ [ಭಾರ.-ಆದಿ. ೧೧೩].

**ಸೂತ.**—ಒಬ್ಬ ಮಹರ್ಷಿ ನೈಮಿಶಾರಣ್ಯವಾಸಿಗಳಾದ ಮಹರ್ಷಿಗಳಿಗೆ ಅನೇಕ ಪುರಾಣಗಳನ್ನೂ ಇತಿಹಾಸಗಳನ್ನೂ ತಿಳಿಸಿದ. ಇವನಿಗೆ ರೋಮಹರ್ಷಣನೆಂಬುದು ನಾಮಾಂತರ. ನೋಡು—ಬಲರಾಮ, ರೋಮಹರ್ಷಣ [ಭಾರ -ಆದಿ. ೧]. ಸೂತ ಮುನಿಯ ತೀರ್ಥಯಾತ್ರಾವರ್ಣನೆ [ಶಿವ.-ಕೈಲಾಸಸಂ. ೧೦, ೧೧]. ಕೀಚಕನ ತಂದೆಯೂ ಸೂತನಾಗಿದ್ದ ಕಾರಣ ಈ ಹೆಸರು ಅವನಿಗೂ ಸಲ್ಲುತ್ತದೆ [ಭಾರ.-ವಿರಾ. ೨೧]. ಕರ್ಣನ ಸಾಕುತಂದೆಯಾದ ಅಧಿರಥ ಧೃತರಾಷ್ಟ್ರನ ಸಾರಥಿಯಾಗಿದ್ದ ಕಾರಣ ಅಧಿರಥನನ್ನು ಸೂತನೆಂತಲೂ, ಅವನ ಸಾಕುಮಗನಾದ ಕರ್ಣನನ್ನು ಸೂತಪುತ್ರನೆಂತಲೂ ಕರೆಯುವ ವಾಡಿಕೆಯಿದೆ [ಭಾರ.-ಆದಿ. ೨೨೧].

**ಸೂತಪುತ್ರ.**—ಕರ್ಣನ ನಾಮಾಂತರ. ನೋಡು—ಸೂತ.

**ಸೂನೃತಾ.**—ಉತ್ತಾನಪಾದ ರಾಜನ ಹಿರಿಯ ಹೆಂಡತಿಯೂ ಧ್ರುವನ ಜನನಿಯೂ ಎನಿಸಿದ ಸುನೀತಿಯ ನಾಮಾಂತರ.

**ಸೂರ್ಯ.**—ಕಶ್ಯಪ ಮುನಿಯಿಂದ ಅದಿತಿಯಲ್ಲಿ ಜನಿಸಿದವ. ಆದಿತ್ಯ. ನೋಡು—ಸಂಜ್ಞಾ [ಭಾರ.-ಆದಿ. ೬೬, ೬೭]. ತ್ವಷ್ಟೃವಿನ ಮಗಳಾದ ಸಂಜ್ಞಾದೇವಿಯನ್ನು ಮದುವೆಯಾಗಿ ಯಮ, ಮನು, ಯಮುನೆಯೆಂಬ ಮೂವರು ಮಕ್ಕಳನ್ನು ಪಡೆದ. ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯಾದೇವಿಯಲ್ಲಿ ಸಾವರ್ಣಿ, ಶನೈಶ್ಚರರೆಂಬ ಇಬ್ಬರು ಪುತ್ರರನ್ನು ಪಡೆದ ಸಂಜ್ಞಾದೇವಿ ಕುದುರೆಯ ರೂಪದಿಂದಿದ್ದಾಗ ಈತನಿಂದ ಜನಿಸಿದವರು ಅಶ್ವಿನೀದೇವತೆಗಳು [ಭಾಗ.-೬-೬, ೮, ೧೩ ಹರಿ.-೧-೯. ವಿ.-೩, ೨. ವರಾ. ೨೦. ಬ್ರಹ್ಮ-೬ ವಾಯು ೮೪. ಪದ್ಮ-೫-೮ ಮತ್ಸ್ಯ -೧೧. ಶಿವ -ಉಮಾಖಂ. ೩೫]. ಈತನ ಅಂಶದಿಂದ ಸುಗ್ರೀವ ಜನಿಸಿದ್ದು [ರಾಮಾ -ಉತ್ತ. ಪ್ರಕ್ಷಿಪ್ತ ಸ. ೧]. ನೋಡು—ಋಕ್ಷರಜ ಸೂರ್ಯನಿಂದ ಕುಂತಿ ಕರ್ಣನನ್ನು ಪಡೆದಳು [ಭಾರ -ಆದಿ. ೧೨೦]. ರಾಹುವಿನ ಕೋಟಲೆಯನ್ನು ಸಹಿಸಲಾರದೆ ಕೋಪಿಸಿಕೊಂಡದ್ದು [ಭಾರ -ಆದಿ. ೨೦]. ದೇವತೆಗಳು ಸೂರ್ಯನಿಗೆ ಅರುಣನನ್ನು ಸಾರಥಿಯಾಗಿ ನೇಮಿಸಿಕೊಟ್ಟದ್ದು [ಭಾರ.-ಆದಿ ೨೪]. ವಸಿಷ್ಠ ಸೂರ್ಯನನ್ನು ಸ್ತುತಿಸಿದ್ದು [ಆದಿ. ೧೭೯] ಅಕ್ಷಯ ಪಾತ್ರೆಯನ್ನು ಪಡೆಯುವುದಕ್ಕಾಗಿ ಯುಧಿಷ್ಠಿರ ಸೂರ್ಯನನ್ನು ಸ್ತುತಿಸಿದ್ದು [ವನ. ೩]. ಸೂರ್ಯಾಷ್ಟೋತ್ತರಸ್ತೋತ್ರ—ಯುಧಿಷ್ಠಿರಕೃತ [ವನ. ೩]. ಶ್ರೀ ರಾಮ ರಾವಣನ ವಧೆಗೆ ಮುಂಚಿತವಾಗಿ ಸೂರ್ಯನನ್ನು ಹೊಗಳಿದ್ದು. ಇದನ್ನೇ ಆದಿತ್ಯ ಹೃದಯವೆನ್ನುತ್ತಾರೆ [ರಾಮಾ.-ಯುದ್ಧ. ೧೦೫]. ಯಾಜ್ಞವಲ್ಕ್ಯ ಮುನಿ ತನ್ನ ಗುರುವಾದ ವೈಶಂಪಾಯನನಿಂದ ಶಾಪವನ್ನು ಪಡೆದು, ಆತನಲ್ಲಿ ಕಲಿತ ವಿದ್ಯೆಯನ್ನೆಲ್ಲ ವಮನಮಾಡಿದ ತರುವಾಯ ಮರಳಿ ವೇದಾಭ್ಯಾಸಕ್ಕಾಗಿ ಸೂರ್ಯನನ್ನು ಹೊಗಳಿದ್ದು [ವಿಷ್ಣು.-೩-೫] ಸೂರ್ಯ ಕರ್ಣನಿಗೆ ಸ್ವಪ್ನದಲ್ಲಿ ವೈದೋರಿ "ಇಂದ್ರ ಅರ್ಜುನನಿಗೆ ಹಿತವನ್ನು ಮಾಡುವ ಉದ್ದೇಶದಿಂದ ಬ್ರಾಹ್ಮಣರೂಪವನ್ನು ಧರಿಸಿ, ನಿನ್ನಲ್ಲಿಗೆ ಬಂದು ನಿನ್ನ ಜನ್ಮಸಿದ್ಧವಾದ ಕವಚವನ್ನೂ ಕರ್ಣಕುಂಡಲವನ್ನೂ ಬೇಡುವನು. ನೀನು ಅದನ್ನು ಅವನಿಗೆ ಕೊಡಲಾಗದು" ಎಂದು ಮುಂತಾಗಿ ಉಪದೇಶಿಸಿದ್ದು [ಭಾರ.-ವನ. ೩೦೧-೩೦೩]. ಸೂರ್ಯಸಂಚಾರ, ರಥ, ಚಕ್ರ, ತುರಗಾದಿ ವರ್ಣನೆ [ಭಾರ.-ವನ. ೧೬೪ ಲಿಂಗ -೫೩-೫೭. ಮತ್ಸ್ಯ.-೧೨೫-೧೨೮]. ರೇಣುಕೆ ಬಿಸಿಲಿನಲ್ಲಿ ನಡೆಯಲಾರದೆ ತಲ್ಲಣಿಸುತ್ತಿದ್ದಾಗ, ಅದನ್ನು ಕಂಡು ಭೃಗು ಮಹರ್ಷಿ ಛತ್ರವನ್ನೂ ಪಾದುಕೆಗಳನ್ನೂ ಸೃಷ್ಟಿಸಲಾಗಿ, ಛತ್ರ ಪಾದುಕೆಗಳ ವಿಷಯವಾಗಿ ಸೂರ್ಯನಿಗೂ ಜಮದಗ್ನಿ ಮಹರ್ಷಿಗೂ ಸಂವಾದ [ಭಾರ.-ಅನು. ೧೪೪-೧೪೫. ಮತ್ಸ್ಯ -೧೧]. ಬ್ರಾಹ್ಮಣಮಹಿಮೆ ಮತ್ತು ಪತಿವ್ರತೆಯರ ಮಹಿಮೆಯ ವಿಷಯವಾಗಿ ಸೂರ್ಯನಿಗೂ ಶಚೀದೇವಿಗೂ ಸಂವಾದ [ಭಾರ.-ಅನು. ೧೪]. ಸೂರ್ಯ ಊರ್ವಶಿಯನ್ನು ಕಂಡು ಎದೆಗುಂದಿ ವಸಿಷ್ಠನನ್ನು ಪುತ್ರನನ್ನಾಗಿ ಪಡೆದದ್ದು. ತನ್ನ

ಬಯಕೆಯನ್ನು ಅಂಗೀಕರಿಸದ ಕಾರಣ ಊರ್ವಶಿ ಭೂಲೋಕದ ಮನುಷ್ಯರಿಗೆ ಪತ್ನಿಯಾಗುವಂತೆ ಶಾಪಕೊಟ್ಟದ್ದು. ನೋಡು—ಪುರೂರವ [ರಾಮಾ.-ಉತ್ತ. ೫೬, ೫೭]. ಭಾರತಯುದ್ಧದ ಹದಿನಾಲ್ಕನೆಯ ದಿನದ ಯುದ್ಧದಲ್ಲಿ ಜಯದ್ರಥನ ವಧೆಗೆ ಸ್ವಲ್ಪ ಮುಂಚಿತವಾಗಿ ಶ್ರೀಕೃಷ್ಣ ತನ್ನ ಚಕ್ರಾಯುಧದಿಂದ ಸೂರ್ಯಮಂಡಲವನ್ನು ಮರೆಮಾಡಿದ್ದು [ಭಾರ-ದ್ರೋ. ೧೪೭]. ಸೂರ್ಯಮಂಡಲದೊಳಗಣ ಅದ್ಭುತಗಳು, ಅವುಗಳ ವರ್ಣನೆ [ಭಾರ-ಭೀಷ್ಮ ೧೨. ಭಾರ.-ಶಾಂತಿ. ೩೭೨].

**ಸೂರ್ಯವಂಶವರ್ಣನೆ**—[ಭಾಗ.-೯-೨-೧೩ ವಿಷ್ಣು-೪, ೧-೫. ವಾಯು -೮೫-೮೯. ಬ್ರಹ್ಮ-೭-೮ ರಾಮಾ-ಬಾಲ ೭೦. ಮತ್ಸ್ಯ-೨೩. ಲಿಂಗ.-೬೫].

**ಸೃಗಾಲ.**—(I) ನರಿ. ಇಂದ್ರ ನರಿಯ ರೂಪದಿಂದ ಬಂದು ಕಶ್ಯಪಮುನಿಯ ಸಂಗಡ, ಸಂತಾನವೇ ಸಕಲ ವಿಧವಾದ ಸುಖಸಾಧನಗಳಿಗಿಂತಲೂ ಮಿಗಿಲಾದದ್ದೆಂಬ ವಿಷಯವಾಗಿ ಸಂವಾದಮಾಡಿದ್ದು [ಭಾರ-ಶಾಂತಿ ೧೭೮]. ಬ್ರಾಹ್ಮಣನಿಗೆ ಆಸೆದೋರಿ, ಕೊಡದಿರುವುದು ಅನರ್ಥಪ್ರದವೆಂಬ ವಿಷಯವಾಗಿ ನರಿ ವಾನರದೊಂದಿಗೆ ಸಂವಾದಮಾಡಿದ್ದು [ಭಾರ ಅನು. ೩೦].

(II) ಒಬ್ಬ ಅರಸು ಕರವೀರಪುರವನ್ನು ಆಳುತ್ತಿದ್ದ ಇವನಿಗೆ ಸೃಗಾಲ ವಾಸುದೇವನೆಂಬುದು ನಾಮಾಂತರ [ಭಾರ.-ಶಾಂತಿ. ೪. ಹರಿ.-೨-೪೪].

**ಸೃಞ್ಜಯ.**—ಒಬ್ಬ ಅರಸು. ಶೈಬ್ಯರಾಜನ ಮಗ. ಈತ ಕೇಕಯ ರಾಜಪುತ್ರಿಯನ್ನು ಮದುವೆಯಾಗಿ ಸುವರ್ಣಷ್ಠೀವಿಯೆಂಬ ಪುತ್ರನನ್ನೂ ದಮಯಂತಿ ಅಥವಾ ಸುಕುಮಾರಿಯೆಂಬ ಹೆಸರಿನ ಮಗಳನ್ನೂ ಪಡೆದ [ಭಾರ.-ಸಭಾ.-೮] ಸುವರ್ಣಷ್ಠೀವಿಯ ದೇಹದಿಂದ ಬೇಕಾದಷ್ಟು ಚಿನ್ನ ದಿನದಿನವೂ ಹೊರಡುತ್ತಿದ್ದ ಕಾರಣ ಇವನ ದೇಹವೆಲ್ಲ ಚಿನ್ನವಾಗಿರಬಹುದೆಂಬ ಭಾವನೆಯಿಂದ ಕಳ್ಳರು ಇವನನ್ನು ಕೊಂದರು ಸೃಂಜಯ ಪುತ್ರಶೋಕದಿಂದ ಮರುಗುತ್ತಿರುವಾಗ ನಾರದ ಅವನಿಗೆ ಷೋಡಶಮಹಾರಾಜರ ಚರಿತ್ರೆಯನ್ನು ವಿವರಿಸಿದ [ಭಾರ-ದ್ರೋ. ೫೫-೭೦]. ಈತನ ಮಗಳಾದ ಸುಕುಮಾರಿಯನ್ನು ನಾರದ ಮದುವೆಯಾಗಿದ್ದ ನೋಡು—ದಮಯಂತಿ, ನಾರದ, ಸುಕುಮಾರಿ [ಭಾರ.-ಶಾಂತಿ ೨೯. ದೇ.ಭಾಗ.-೬-೨೭].

**ಸೃಷ್ಟಿನಿರೂಪಣ.**—ಪ್ರಪಂಚದ ಉತ್ಪತ್ತಿಕ್ರಮವರ್ಣನೆ [ಭಾರ.-ಸಭಾ. ೩. ಶಾಂತಿ. ೧೮೦, ೩೪೭. ಭಾಗ-೩-೧೩ ವಿಷ್ಣು.-೧, ೨, ೪-೧೫].

**ಸೇಕ.**—ಒಂದು ದೇಶ ಚರ್ಮಣ್ವತಿ ಮತ್ತು ಪಾಟಲಾವತೀ ನದಿಗಳ ನಡುವೆ ಇದೆ. ಯುಧಿಷ್ಠಿರನ ರಾಜಸೂಯಕ್ಕೆ ಮೊದಲು ದಕ್ಷಿಣದಿಕ್ಕನ್ನು ಜಯಿಸಲು ಹೊರಟ ಸಹದೇವ ಇಲ್ಲಿಗೆ ಬಂದಿದ್ದ [ಭಾರ.-ಸಭಾ. ೩೨].

**ಸೇತು.**—ಶ್ರೀರಾಮ ರಾವಣನ ಮೇಲೆ ದಂಡೆತ್ತಿ ಹೊರಟಾಗ ಸಮುದ್ರದಲ್ಲಿ ಕಟ್ಟಿದ್ದು [ರಾ.-ಯು. ೨೨. ಅಧ್ಯಾ. ರಾ.-ಯುದ್ಧ. ೪. ಭಾರ.-ಸಭಾ. ೫೦. ವ ೨೮೪].

**ಸೇನಜಿತ್.**—ಒಬ್ಬ ಅರಸು. ಚಂದ್ರ ವಂಶದ ಪೂರು ರಾಜನ ಸಂತತಿಯಲ್ಲಿ ಜನಿಸಿದ ವಿಶದನೆಂಬ ಅರಸನ ಮಗ. ಈತನಿಗೆ ರುಚಿರಾಶ್ವ, ಧೃಢಹನು, ಕಾಶ್ಯ, ವತ್ಸರೆಂಬುದಾಗಿ ನಾಲ್ವರು ಪುತ್ರರಿದ್ದರು. ಈತ ತನ್ನ ನಾಲ್ವರು ಮಕ್ಕಳಿಗೂ ರಾಜ ನೀತಿರಹಸ್ಯಗಳನ್ನು ವಿವರಿಸಿ ಹೇಳಿದ್ದು [ಭಾರ.-ಶಾಂತಿ ೨೫].

**ಸೇನಾನಿ** —ಕುಮಾರಸ್ವಾಮಿಯ ನಾಮಾಂತರ. ನೋಡು—ಕುಮಾರ

**ಸೇನಾಬಿನ್ದು.**—ಪಾಂಚಾಲದೇಶದ ಅರಸು. ಪಾಂಡವ ಪಕ್ಷಪಾತಿ [ಭಾರ -ಆದಿ. ೬೮, ೨೦೧ ಸ ೨೮] ಈತ ರಥಸತ್ತಮ [ಭಾರ -ಉದ್ಯೋ. ೧೭೨]. ಸೇನಾಬಿನ್ದು ಹನ್ನೊಂದನೆಯ ದಿನ ಯುದ್ಧಮಾಡಿದ [ಭಾರ.-ದ್ರೋ ೨೩] ಹದಿನಾರನೆಯ ದಿನದ ಯುದ್ಧದಲ್ಲಿ ಕರ್ಣನಿಂದ ಮಡಿದ [ಭಾರ -ಕರ್ಣ ೪೩].

**ಸೈನ್ಧವ.**—ಸಿಂಧು ದೇಶದ ಅರಸು ಆದರೆ ಈ ಹೆಸರು ಭಾರತದಲ್ಲಿ ಸಾಮಾನ್ಯ ವಾಗಿ ಸಿಂಧು ದೇಶಾಧಿಪತಿಯಾದ ವೃದ್ಧಕ್ಷತ್ರನ ಮಗನೂ ಗಾಂಧಾರೀ ಧೃತರಾಷ್ಟ್ರರ ಮಗಳಾದ ದುಶ್ಶಲೆಯ ಗಂಡನೂ ಆಗಿದ್ದ ಜಯದ್ರಥನಿಗೆ ಅನ್ವಯಿಸುತ್ತದೆ. ನೋಡು— ಜಯದ್ರಥ.

**ಸೈರಂಧ್ರಿ.**—ಸಾಮಾನ್ಯವಾಗಿ ಹೆಂಗಸರಿಗೆ ಅಲಂಕಾರಾದಿಗಳನ್ನು ಮಾಡುವ ದಾದಿಗೆ ಈ ಹೆಸರು ಸಲ್ಲುತ್ತದೆ ಪಾಂಡವರ ಅಜ್ಞಾತವಾಸ ಕಾಲದಲ್ಲಿ ದ್ರೌಪದಿ ವಿರಾಟನ ರಾಣಿಯಾದ ಸುದೇಷ್ಣೆಯ ಬಳಿ ಶಿಲ್ಪಕಾರಿಣಿಯಾಗಿದ್ದುದರಿಂದ ಭಾರತದಲ್ಲಿ ಈ ಹೆಸರು ಮಾಲಿನಿಯೆಂದು ಹೆಸರಿಟ್ಟುಕೊಂಡಿದ್ದ ದ್ರೌಪದಿಗೆ ಅನ್ವಯಿಸುತ್ತದೆ ನೋಡು—ಕೀಚಕ, ಸುದೇಷ್ಣಾ [ಭಾರ.-ವಿರಾ. ೧೪]

**ಸೋಮ.**—(1) ಚಂದ್ರ. ಅಷ್ಟವಸುಗಳಲ್ಲಿ ಒಬ್ಬ. ಮನಸ್ವಿನಿಯೆಂಬವಳು ಇವನ ಜನನಿ ಈತನ ಮಗ ವರ್ಚಸ್ ಎಂಬವ ನೋಡು—ಚಂದ್ರ [ಭಾರ.-ಆದಿ. ೬೭. ಮತ್ಸ್ಯ.-೨೩. ಲಿಂಗ.-೬೫]

(ii) ಸೋಮನೆಂಬುದು ಕುಬೇರನ ನಾಮಾಂತರ ಆದುದರಿಂದಲೇ ಉತ್ತರ ದಿಕ್ಕಿಗೆ ಸೌಮ್ಯೆಯೆಂದು ಹೆಸರು. ನೋಡು—ವೈಶ್ರವಣ.

(iii) ಒಂದು ಬಳ್ಳಿ. ಯಜ್ಞದಲ್ಲಿ ಇದನ್ನು ಉಪಯೋಗಿಸುತ್ತಾರೆ [ಭಾರ.-ಶಾಂತಿ. ೧೬೩].

(iv) ಈಶ್ವರನ ನಾಮಾಂತರ.

**ಸೋಮಕ.**—ಒಬ್ಬ ಅರಸು. ಚಂದ್ರ ವಂಶದ ಪಾಂಚಾಲ ರಾಜನಾದ ಸಹದೇವ ನೆಂಬವನ ಮಗ [ಭಾರ -ವನ. ೧೨೬. ಸ ೮ ವಿರಾ. ೫೩]. ಈತನಿಗೆ ನೂರು ಮಂದಿ

ಪತ್ನಿಯರು ಹಿರಿಯವಳು ಜಂತುವೆಂಬ ಮಗನನ್ನು ಹೆತ್ತಳು. ಒಮ್ಮೆ ಜಂತುವನ್ನು ಇರುವೆ ಕಚ್ಚಿದ್ದರಿಂದ ಬಹಳವಾಗಿ ದುಃಖಪಡುತ್ತಿರುವಲ್ಲಿ ಸೋಮಕ ತನ್ನ ಪುರೋಹಿತನ ಸೂಚನೆಯ ಮೇರೆಗೆ ಜಂತುಕುಮಾರನನ್ನೇ ಪಶುವಾಗಿಟ್ಟು ಒಂದು ಯಜ್ಞವನ್ನು ಮಾಡಲಾಗಿ, ಸೋಮಕನಿಗೆ ನೂರು ಮಂದಿ ಮಕ್ಕಳಾದರು [ವನ. ೧೨೭, ೧೨೮]. ಸೋಮಕ ದಿವೋದಾಸನ ಪೌತ್ರ. ಈತನ ಮಗ ಪೃಷತ [ಭಾಗ.-೯-೨೨ ಹರಿ -೧-೩೨].

**ಸೋಮತೀರ್ಥ**.—ಪ್ರಭಾಸತೀರ್ಥದ ನಾಮಾಂತರವೆಂದು ತೋರುತ್ತದೆ [ವನ. ೮೧, ೧೧೪. ಶಲ್ಯ. ೪೪, ೫೧].

**ಸೋಮದತ್ತ** —ಒಬ್ಬ ಅರಸು ಚಂದ್ರವಂಶದ ಪ್ರತೀಪ ರಾಜನ ಮಗನಾದ ಬಾಹ್ಲೀಕ ರಾಜನ ಮಗ ಈತನಿಗೆ ಭೂರಿ, ಭೂರಿಶ್ರವ, ಶಲ ಎಂಬುದಾಗಿ ಮೂವರು ಪುತ್ರರು [ಭಾರ -ಆದಿ ೨೦೧ ಭಾಗ -೯-೨೨] ಈತ ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನೈದನೆಯ ದಿನ ಸಾತ್ಯಕಿಯೊಂದಿಗೆ ಯುದ್ಧಮಾಡಿ ಸೋತು, ಮರಳಿ ಆತನನ್ನು ಕೆಣಕಿ ಮಡಿದ [ಭಾರ -ದ್ರೋ ೧೫೭, ೧೬೩]

**ಸೋಮಶ್ರವ**.—ಒಬ್ಬ ಬ್ರಾಹ್ಮಣ. ಪಾಂಡವರ ಮರಿಮಗನಾದ ಜನಮೇಜಯ ರಾಜನ ಪುರೋಹಿತ ಶ್ರುತಶ್ರವಸನೆಂಬ ಮಹರ್ಷಿಯಿಂದ ಸರ್ಪಿಣಿಯಲ್ಲಿ ಜನಿಸಿದವ [ಭಾರ -ಆದಿ. ೩].

**ಸೌಗಂಧಿಕ**.—ಒಂದು ಬಗೆಯ ತಾವರೆ. ಲೋಕೋತ್ತರವಾದ ಪರಿಮಳವನ್ನು ಬೀರತಕ್ಕದ್ದು ಪಾಂಡವರು ಅರಣ್ಯವಾಸಮಾಡುತ್ತಿದ್ದಾಗ ಒಂದು ದಿನ ಅಕಸ್ಮಾತ್ತಾಗಿ ಒಂದು ತಾವರೆಯ ಹೂ ಗಾಳಿಗೆ ಹೊಡೆದುಕೊಂಡು ಬರಲಾಗಿ, ಅದರ ಪರಿಮಳಕ್ಕೆ ಮನಸೋತ ದ್ರೌಪದಿ ತನಗೆ ಅಂತಹ ಹೂಗಳನ್ನು ಹೇರಳವಾಗಿ ತಂದು ಕೊಡಬೇಕೆಂದು ಭೀಮನನ್ನು ಬೇಡಿಕೊಂಡಳು ಭೀಮ ಅದಕ್ಕೆ ಸಮ್ಮತಿಸಿ ಹೊರಟು, ನಡುದಾರಿಯಲ್ಲಿ ಹನೂಮಂತನನ್ನು ಸಂಧಿಸಿ, ಆತನ ಪೂರ್ವೋತ್ತರಗಳನ್ನು ಕೇಳಿ ತಿಳಿದು, ಆತನಿಂದ ಅನೇಕ ವರಗಳನ್ನು ಪಡೆದು, ಗಂಧಮಾದನ ಪರ್ವತವನ್ನು ಸೇರಿ, ಸೌಗಂಧಿಕ ಸರೋವರವನ್ನು ಕಂಡು, ಹೂಗಳನ್ನು ಕುಯ್ಯುವ ಸಲುವಾಗಿ, ಕೊಳವನ್ನು ಹೊಕ್ಕ ಅದರ ಕಾವಲುಗಾರರಾಗಿದ್ದ ಕ್ರೋಧರೆಂಬ ಹೆಸರಿನ ರಾಕ್ಷಸರು ಅಡ್ಡಗಟ್ಟಲಾಗಿ ಅವರನ್ನು ಹೆದರಿಸಿದ ಅವರು ಕುಬೇರನಲ್ಲಿ ಅರಿಕೆ ಮಾಡಿದರು. ಕುಬೇರ ಅನುಮತಿಯನ್ನಿತ್ತ ಬಳಿಕ ಭೀಮ ಹೂಗಳನ್ನು ಕುಯ್ದುಕೊಂಡು ಕುಬೇರನಿಂದ ಸಮ್ಮಾನಿತನಾಗಿ ಹಿಂದಿರುಗಿ ಬಂದ [ಭಾರ.-ವ. ೧೪೮-೧೫೬].

**ಸೌಗಂಧಿಕವನ** —ಕುಬೇರನ ಉದ್ಯಾನದಲ್ಲಿರುವ ಅತ್ಯುತ್ತಮವಾದ ತಾವರೆಗಳನ್ನೊಳಕೊಂಡ ಸರೋವರ [ಭಾರ.-ವನ. ೮೨].

**ಸೌಚಿತ್ತಿ.**—ಒಬ್ಬ ಅರಸು. ಸುಚಿತ್ತಿಯೆಂಬ ರಾಜನ ಮಗನಾದುದರಿಂದ ಇವನಿಗೆ ಸೌಚಿತ್ತಿಯೆಂದು ಹೆಸರು ಸತ್ಯಧೃತಿಯೆಂಬುದು ಇವನ ಹೆಸರು. ಈತ ರಥೋದಾರ [ಭಾರ.-ಉದ್ಯೋ. ೧೭೧, ೧೯೬]. ದ್ರೌಪದೀಸ್ವಯಂವರ ಕಾಲದಲ್ಲಿ ದ್ರುಪದ ರಾಜಧಾನಿಗೆ ಹೋಗಿದ್ದ [ಭಾರ -ಆದಿ. ೨೦೧]. ಮಹಾಭಾರತ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿ ಸತ್ತ [ಭಾರ.-ಕರ್ಣ ೩].

**ಸೌತಿ.**—ಒಬ್ಬ ಮಹರ್ಷಿ. ರೋಮಹರ್ಷಣನ ಮಗ ಉಗ್ರಶ್ರವನೆಂಬುದು ಈತನ ನಾಮಾಂತರ. ಸೂತಪೌರಾಣಿಕನ ಮಗನಾದುದರಿಂದ ಸೌತಿಯೆಂದು ರೂಢಿ. ಈತ ನೈಮಿಶಾರಣ್ಯವಾಸಿಗಳಾಗಿದ್ದ ಮಹರ್ಷಿಗಳಿಗೆ ಅನೇಕ ಪುರಾಣೇತಿಹಾಸಗಳನ್ನೂ ಮಹಾಭಾರತಕಥೆಯನ್ನೂ ಹೇಳಿದ [ಭಾರ.-ಆದಿ ೧]. ಈತ ಶೌನಕ ಮೊದಲಾದ ಮಹರ್ಷಿಗಳೊಂದಿಗೆ ಸಂವಾದಮಾಡಿದ್ದ [ಭಾರ.-ಆದಿ. ೪]. ಸೌತಿಯ ಉತ್ಪತ್ತಿ ಕಥೆ. ನೋಡು—ಬಲರಾಮ [ಭಾಗ.-೧೦-೭೮].

**ಸೌತ್ರಾಮಣಿ**—ದ್ರುಪದ ರಾಜನ ಹೆಂಡತಿ. ಈಕೆಗೆ ಕೌಸವಿಯೆಂಬುದು ನಾಮಾಂತರ [ಭಾರ.-ಆದಿ. ೧೪೯].

**ಸೌದಾಸ.**—ಒಬ್ಬ ಅರಸು. ಸೂರ್ಯ ವಂಶದ ಋತುಪರ್ಣ ರಾಜನ ಮಗನಾದ ಸುದಾಸನ ಮಗ ನೋಡು—ಕಲ್ಮಾಷಪಾದ [ಭಾರ -ಆದಿ. ೧೨೮-೧೯೩]. ಮಿತ್ರಸಹನೆಂಬುದು ಇವನ ನಾಮಾಂತರ [ಹರಿ -೧-೧೫]. ದಶರಧ ಪುತ್ರನಾದ ಶತ್ರುಘ್ನ ಲವಣನೆಂಬ ರಾಕ್ಷಸನನ್ನು ಕೊಲ್ಲುವುದಕ್ಕಾಗಿ ಶ್ರೀ ರಾಮನಿಂದ ಪ್ರೇರಿತನಾದ. ವಿಶೇಷವಾದ ಸೇನಾಪರಿವಾರದೊಡನೆ ಹೊರಟು, ಒಂದು ತಿಂಗಳ ಕಾಲ ಪ್ರಯಾಣ ಮಾಡಿ, ವಾಲ್ಮೀಕಿ ಮಹರ್ಷಿಯ ಆಶ್ರಮವನ್ನು ಹೊಕ್ಕು, ಆತನಿಂದ ಸತ್ಕೃತನಾಗಿ ಆ ರಾತ್ರಿ ಅಲ್ಲಿಯೇ ನಿಂತ ಆ ಆಶ್ರಮದ ಸುತ್ತಮುತ್ತಣ ಸನ್ನಿವೇಶಗಳನ್ನು ಕಂಡು ಆಶ್ಚರ್ಯಭರಿತನಾಗಿ ವಾಲ್ಮೀಕಿ ಮಹರ್ಷಿಯನ್ನು ಕುರಿತು "ಸ್ವಾಮಿ, ನಿಮ್ಮ ಆಶ್ರಮದ ಸಮೀಪದಲ್ಲಿರುವ ಈ ಭೂಭಾಗವೆಲ್ಲವೂ ಯಜ್ಞಭೂಮಿಯಂತೆ ಕಾಣುತ್ತದೆ. ಇಲ್ಲಿ ಪಯಿರುಪಚ್ಚೆಗಳು ಹೇರಳವಾಗಿ ಬೆಳೆದಿವೆ ಇದು ಯಾರ ಆಶ್ರಮ? ಪೂರ್ವದಲ್ಲಿ ಈ ಪ್ರದೇಶದಲ್ಲಿ ಯಜ್ಞಮಾಡಿದ ಮಹಾಪುರುಷನಾರು?" ಎಂದು ಮುಂತಾಗಿ ಪ್ರಶ್ನೆಮಾಡಿ, ಸೌದಾಸನ ಕಥೆಯನ್ನು ಕೇಳಿ ತಿಳಿದ ನೋಡು —ಮಿತ್ರಸಹ, ವಸಿಷ್ಠ [ರಾಮಾ -ಉತ್ತ. ೬೪, ೬೫]. ಸೌದಾಸನ ಕಥೆ. ನೋಡು —ಶಕ್ತಿ, ಮದಯಂತಿ, ಉದಂಕ, ಕಲ್ಮಾಷಪಾದ [ರಾಮಾ.-ಉತ್ತ. ೬೪, ೬೫. ವಿಷ್ಣು.-೪-೪. ಶಿವ.-ಉಮಾಸಂಹಿತಾ. ೬. ಭಾಗ -೯-೯].

**ಸೌಂದರ್ಯವರ್ಣನೆ**—ದ್ರೌಪದಿಯದು [ಭಾರ -ಆದಿ. ೬೮, ೧೪೯ ಸ. ೮೮. ವಿ. ೧೪, ೧೬, ೨೦]. ಊರ್ವಶಿಯ ಸೌಂದರ್ಯವರ್ಣನೆ [ಭಾರ.-ವನ. ೪೪].

**ಸೌಬಲ.**—ಸುಬಲನ ಮಕ್ಕಳು. ಶಕುನಿ ಮುಂತಾದವರು.

**ಸೌಭ.**—ಒಂದು ಪಟ್ಟಣ. ಮಯ ತನ್ನ ಶಿಲ್ಪಚಾತುರ್ಯದಿಂದ ಇದನ್ನು ಸಾಳ್ವರಾಜನಿಗೆ ನಿರ್ಮಿಸಿಕೊಟ್ಟ. ಇದು ವಿಮಾನದಹಾಗೆ ಆಕಾಶದಲ್ಲಿ ಸಂಚರಿಸುತ್ತದೆ [ಭಾರ.-ವನ. ೧೪, ೧೫].

**ಸೌಭದ್ರ.**—ನೋಡು—ಅಭಿಮನ್ಯು, ನಾರೀತೀರ್ಥ.

**ಸೌಭರಿ.**—ಒಬ್ಬ ಮಹರ್ಷಿ. ಈತ ಜಲಮಧ್ಯದಲ್ಲಿ ತಪಸ್ಸುಮಾಡುತ್ತಿದ್ದಾಗ ಅಲ್ಲಿ ಕ್ರೀಡಿಸುತ್ತಿದ್ದ ಮತ್ಸ್ಯದಂಪತಿಗಳನ್ನು ಕಂಡು ತಾನೂ ಗೃಹಸ್ಥನಾಗಬೇಕೆಂಬ ಅಭಿಲಾಷೆ ಹುಟ್ಟಿತು ಬಳಿಕ ಮಾಂಧಾತರಾಜನಲ್ಲಿಗೆ ಹೋಗಿ ಒಬ್ಬ ಕನ್ಯೆಯನ್ನು ಬೇಡಿದ ಮಾಂಧಾತ "ನಿನ್ನನ್ನು ಯಾರು ವರಿಸಿದರೆ ಅವಳನ್ನು ವಿವಾಹಮಾಡಿಕೊ" ಎಂದು ಹೇಳಿದ ಸೌಭರಿ ತಪೋಮಹಿಮೆಯಿಂದ ದಿವ್ಯ ಸೌಂದರ್ಯದಿಂದೊಪ್ಪುವ ರೂಪವನ್ನು ತಳೆದು ಕನ್ಯಾಂತಃಪುರವನ್ನು ಹೊಕ್ಕ. ಮಾಂಧಾತನ ಐವತ್ತು ಮಂದಿ ಪುತ್ರಿಯರನ್ನೂ ತನ್ನ ರೂಪದಿಂದ ಮೋಹಗೊಳಿಸಿ, ಮದುವೆಯಾಗಿ ಅವರಿಗೆಲ್ಲ ಬೇರೆ ಬೇರೆ ದಿವ್ಯಭವನಗಳನ್ನು ಕಲ್ಪಿಸಿ, ಬಹುಕಾಲ ಅವರೊಂದಿಗೆ ಸುಖದಿಂದಿದ್ದು ಕಡೆಗೆ ವೈರಾಗ್ಯವನ್ನು ತಳೆದು ಗೃಹಸ್ಥಾಶ್ರಮವನ್ನು ತ್ಯಾಗಮಾಡಲಾಗಿ, ಆತನ ಐವತ್ತು ಮಂದಿ ಪತ್ನಿಯರೂ ಆತನಂತೆಯೇ ಉಗ್ರವಾದ ತಪಸ್ಸಿನಿಂದ ದೇಹವನ್ನು ಶೋಷಿಸಿ, ಪರಮಾತ್ಮನನ್ನು ಮೆಚ್ಚಿಸಿ ಸದ್ಗತಿಯನ್ನೈದಿದರು [ಭಾಗ -೯, ೬].

**ಸೌಮಿತ್ರಿ.**—ಸುಮಿತ್ರೆಯ ಮಗ ಲಕ್ಷ್ಮಣ.

**ಸೌರಭೇಯಿ.**—ಒಬ್ಬ ಅಪ್ಸರಸಿ. ಶಾಪದಿಂದ ಮೊಸಳೆಯಾಗಿದ್ದು ಅರ್ಜುನನಿಂದ ಬಿಡುಗಡೆಹೊಂದಿದಳು. ನೋಡು—ನಾರೀತೀರ್ಥ [ಭಾರ -ಆದಿ ೨೩೬. ಸ. ೧೦].

**ಸೌವೀರ.**—ಒಂದು ದೇಶ. ಸಿಂಧು ಮತ್ತು ಜೀಲಂ ನದಿಗಳ ನಡುವೆ ಇದೆ [ಭಾರ.-ಭೀ. ೯].

**ಸ್ಕನ್ದ.**—ಸುಬ್ರಹ್ಮಣ್ಯಸ್ವಾಮಿ. ನೋಡು—ಕುಮಾರ, ಗುಹ, ಷಣ್ಮುಖ, ತಾರಕ [ಭಾರ -ವನ. ೨೨೭. ಶಾಂತಿ. ೪೫. ಅನು. ೧೩೩] ಈತನಿಗೆ ಅನೇಕ ಮಂದಿ ತಾಯಿಯರು [ವನ. ೨೩೩]. ಈತನ ಪರಿವಾರ [ಶಲ್ಯ. ೪೬-೪೮]. ಸ್ಕನ್ದ ಧರ್ಮರಹಸ್ಯಗಳನ್ನು ವಿವರಿಸಿದ್ದು [ಅನು. ೧೯೭]. ತಾರಕನನ್ನು ಕೊಂದದ್ದು [ಭಾರ.-ಶ. ೪೭]. ಕ್ರೌಂಚಪರ್ವತವನ್ನು ಸೀಳಿದ್ದು [ಶಲ್ಯ. ೪೭].

**ಸ್ತಮ್ಬಮಿತ್ರ.**—ಒಂದು ಹಕ್ಕಿ. ಮಂದಪಾಲಮುನಿಯಿಂದ ಶಾಙ್ಗೀಯೆಂಬ ಹಕ್ಕಿಯಲ್ಲಿ ಜನಿಸಿದವ. ಖಾಂಡವವನದಾಹ ಸಮಯದಲ್ಲಿ ಬದುಕಿಕೊಂಡ [ಭಾರ.-ಆದಿ. ೨೫೮]. ನೋಡು—ಜರಿತಾ, ಶಾಙ್ಗೀ, ಮಂದಪಾಲ.

**ಸ್ತ್ರೀಯರು.**—ಅಬಲೆಯರು. ಇವರಲ್ಲಿ ಗುಟ್ಟು ನಿಲ್ಲುವುದಿಲ್ಲ [ಭಾರ.-ಆದಿ ೧೨೮, ೧೨೯]. ಇವರಿಗೆ ಸ್ವಾತಂತ್ರ್ಯವಿಲ್ಲ [ಭಾರ -ಆದಿ ೯೪]. ಸ್ತ್ರೀಯರಿಗೆ ಅಳಿಯನಲ್ಲಿ ಹೆಚ್ಚು ಮಮತೆ [ಭಾರ.-ಆದಿ. ೧೩೦]. ಚ್ಯವನ ಇಂದ್ರನನ್ನು ಕೊಲ್ಲುವುದಕ್ಕಾಗಿ ಕಲ್ಪಿಸಿದ ಕ್ಷುದ್ರದೇವತೆಯನ್ನು ಸ್ತ್ರೀಯರಲ್ಲಿ ಇರಿಸಿದ [ಭಾರ.-ವನ. ೧೨೬]. ಇಂದ್ರ ವೃತ್ರನನ್ನು ಕೊಂದು ಬ್ರಹ್ಮಹತ್ಯೆಗೆ ಗುರಿಯಾಗಿ ಅದನ್ನು ಸ್ತ್ರೀಯರಲ್ಲಿ ಭಾಗ ಮಾಡಿಟ್ಟ [ಭಾರ.-ಉದ್ಯೋ. ೯]. ಸ್ತ್ರೀಧರ್ಮರಹಸ್ಯಗಳನ್ನು ಪಾರ್ವತಿ ಶಿವನಿಗೆ ತಿಳಿಸಿದ್ದು [ಭಾರ.-ಅನು. ೨೪೯-೨೫೦]. ಸ್ತ್ರೀಯರಿಗೆ ಒಂದೇ ಮದುವೆ [ಭಾರ.-ಆದಿ. ೧೧೩]. ಸ್ತ್ರೀಯರಲ್ಲಿ ಗುಟ್ಟು ನಿಲ್ಲಬಾರದೆಂದು ಯುಧಿಷ್ಠಿರ ಶಾಪ ಕೊಟ್ಟದ್ದು [ಭಾರ.-ಸ್ತ್ರೀ. ೨೭]. ಸ್ತ್ರೀಯರು ವಸ್ತ್ರರಹಿತರಾಗಿರುವಾಗ ಅವರನ್ನು ನೋಡಬಾರದು [ಭಾರ.-ಶಾಂತಿ ೨೧೬]. ಸ್ತ್ರೀಯರೆಂಬ ಸುದ್ದಿಯನ್ನೂ ಕೂಡ ಕೇಳಬಾರದು [ಭಾರ.-ಶಾಂತಿ. ೨೧೬]. ಸ್ತ್ರೀಯರಿಗೆ ಸಹಜವಾದ ದೋಷಗಳು [ಭಾರ.-ಅನು. ೭೩, ೭೪, ೨೨೨]. ಸ್ತ್ರೀಯರ ಸ್ವಭಾವವಿಷಯವಾಗಿ ಪಂಚಚೂಡೆಯೆಂಬ ಅಪ್ಸರಸಿಗೂ ನಾರದ ಮುನಿಗೂ ನಡೆದ ಸಂವಾದ [ಭಾರ.-ಅನು. ೭೩]. ಸ್ತ್ರೀಯರ ಸ್ವಭಾವವನ್ನು ಕುರಿತು ಅಷ್ಟಾವಕ್ರನಿಗೂ ಮುದುಕಿಗೂ ಸಂವಾದ [ಅನು ೫೦] ಸ್ತ್ರೀಯರನ್ನು ಕಾಪಾಡುವುದು ಅಸಾಧ್ಯವೆಂಬ ವಿಷಯವಾಗಿ ದೇವಶರ್ಮನೆಂಬ ಮುನಿಗೂ ಆತನ ಶಿಷ್ಯನಾದ ವಿಪುಲನಿಗೂ ನಡೆದ ಸಂವಾದ [ಅನು ೭೫-೭೮] ಸ್ತ್ರೀಯರ ಪಾತಿವ್ರತ್ಯ, ದುಷ್ಟ ಚಾರಿತ್ರಗಳನ್ನು ಕುರಿತ ಕಥೆ [ಅನು ೪೯]. ಸ್ತ್ರೀಯರು ಪರಪುರುಷನನ್ನು ಸೇರಿದರೆ ಪ್ರಾಯಶ್ಚಿತ್ತ [ಅನು ೪೯]. ಸ್ತ್ರೀಪ್ರಶಂಸೆ [ಅನು. ೮೧]. ಎಂತಹ ಕಷ್ಟಕಾಲದಲ್ಲಿಯೂ ಸ್ತ್ರೀಯರನ್ನು ಕೈಬಿಡಬಾರದು [ಅನು ೪೯] ಸ್ತ್ರೀಯರು ಹೀನಕುಲದವರಾದರೂ ಅವರನ್ನು ಪರಿಗ್ರಹಿಸಬಹುದು [ಶಾಂತಿ. ೧೬೩]. ಸ್ತ್ರೀಯರಿಗೆ ಕಾಮ ಅಧಿಕ [ಅನು. ೫೦, ೧೨೮]. ಅವರು ಚಂಚಲಸ್ವಭಾವದವರು [ಅನು. ೫೨]. ಸುಂದರ ಪುರುಷ ಸಂದರ್ಶನದಿಂದ ಸ್ತ್ರೀಯರು ವಿಕಾರಗೊಳ್ಳುವರು [ವಿರಾ. ೧೮]. ಸ್ತ್ರೀಜನ್ಮ ಅವರ ಕರ್ಮವನ್ನು ಅನುಸರಿಸಿರುತ್ತದೆ [ಅನು ೨೨೬]. ಸ್ತ್ರೀಯರೇ ಹೆಚ್ಚು ಸುಖವನ್ನು ಅನುಭವಿಸತಕ್ಕವರು [ಅನು ೩೪].

**ಸ್ಥಪತಿ.**—ಶಿಲ್ಪಕಲೆಯನ್ನು ಬಲ್ಲವ. ಜನಮೇಜಯನ ಸಾರಥಿ. ಇವನಿಗೆ ಲೋಹಿತಾಕ್ಷನೆಂದು ಹೆಸರು [ಭಾರ.-ಆದಿ. ೫೧-೫೮].

**ಸ್ಥಾಣು.**—ಶಿವನ ನಾಮಾಂತರ. ಏಕಾದಶರುದ್ರರಲ್ಲಿ ಒಬ್ಬ [ಭಾರ.-ಆದಿ ೬೭]. ಸ್ಥಾಣು ಬ್ರಹ್ಮನೊಂದಿಗೆ ಉಂಛವೃತ್ತಿ, ಶ್ರೇಯಸ್ಸಾಧನ ಮುಂತಾದ ವಿಷಯವಾಗಿ ಸಂವಾದಮಾಡಿದ್ದು [ಶಾಂತಿ. ೩೬೩].

**ಸ್ಥೂಣಾಕರ್ಣ.**—ಒಬ್ಬ ಯಕ್ಷ. ಕುಬೇರನ ಅನುಚರ. ದ್ರುಪದ ರಾಜಪುತ್ರನಾದ ಶಿಖಂಡಿ ಮೊದಲು ಹೆಂಗಸಾಗಿ ಜನಿಸಿದ. ಅವನನ್ನು ಗಂಡಸೆಂತಲೇ ಹೇಳಿ ಅಸ್ತ್ರವಿದ್ಯಾಭ್ಯಾಸಗಳನ್ನು ಮಾಡಿಸಿ, ಮದುವೆಮಾಡಿದರು. ಕಾಲಕ್ರಮದಲ್ಲಿ ಇವ ಹೆಂಗಸೆಂಬುದನ್ನು ತಿಳಿದ, ಶಿಖಂಡಿಯ ಮಾವನಾದ ದಶಾರ್ಣ ದೇಶಾಧಿಪತಿಯಾದ ಹಿರಣ್ಯವರ್ಮ ದ್ರುಪದನ ಮೇಲೆ ದಂಡೆತ್ತಿಬರಲಾಗಿ, ಶಿಖಂಡಿ ಚಿಂತಾಕ್ರಾಂತನಾಗಿ ಕುಬೇರನ ಉದ್ಯಾನವನವನ್ನು ಹೊಕ್ಕು, ಸ್ಥೂಣಾಕರ್ಣನಿಗೆ ತನ್ನ ವೃತ್ತಾಂತವನ್ನು ಅರಿಕೆಮಾಡಿ, ಕೆಲವು ಕಾಲದವರೆಗೆ ತನ್ನ ಸ್ತ್ರೀತ್ವವನ್ನು ಅವನಿಗೆ ಕೊಟ್ಟು ಅವನ ಪುಂಸ್ತ್ವವನ್ನು ತಾನು ಪಡೆದು ಶಿಖಂಡಿ ತನ್ನ ಪಟ್ಟಣಕ್ಕೆ ಬಂದ. ಇಷ್ಟರಲ್ಲಿ ಕುಬೇರ ಉದ್ಯಾನವನಕ್ಕೆ ಬಂದು ಸ್ಥೂಣಾಕರ್ಣನ ಸ್ಥಿತಿಯನ್ನು ಕಂಡು ಕುಪಿತನಾಗಿ ಸ್ಥೂಣಾಕರ್ಣ ಅನುಗಾಲವೂ ಹೆಂಗಸಾಗಿಯೇ ಇರುವಂತೆ ಶಾಪವಿತ್ತ. ಶಿಖಂಡಿ ಮರಳಿ ಸ್ಥೂಣಾಕರ್ಣನಲ್ಲಿಗೆ ಬಂದು, ನಡೆದ ಸಮಾಚಾರವನ್ನು ಕೇಳಿ, ತನ್ನ ಮನೆಗೆ ಹೋದ. ನೋಡು—ಅಂಬಾ, ಕುಬೇರ, ಶಿಖಂಡಿ [ಭಾರ.-ಉದ್ಯೋ. ೧೯೧, ೧೯೨].

**ಸ್ಥೂಲಕೇಶ**—ಒಬ್ಬ ಮಹರ್ಷಿ. ಈತ ವಿಶ್ವಾವಸುವೆಂಬ ಗಂಧರ್ವನಿಂದ ಮೇನಕೆಯೆಂಬ ಅಪ್ಸರಸಿಯಲ್ಲಿ ಜನಿಸಿದ ಪ್ರಮದ್ವರೆಯೆಂಬ ಕನ್ಯೆಯನ್ನು ಕಾಪಾಡಿ ಆಕೆಯನ್ನು ಪ್ರಮತಿಪುತ್ರನಾದ ರುರು ಮಹರ್ಷಿಗೆ ಕೊಟ್ಟು ಮದುವೆಮಾಡಿದ. ನೋಡು—ರುರು [ಭಾರ.-ಆದಿ. ೮. ಅನು. ೮].

**ಸ್ಥೂಲಶಿರ.**—ಒಬ್ಬ ಮಹರ್ಷಿ. ವಿಶ್ವಾವಸುವೆಂಬ ಗಂಧರ್ವ ಈತನನ್ನು ಪರಿಹಾಸಮಾಡಿ, ರಾಕ್ಷಸನಾಗಿ ಜನಿಸುವಂತೆ ಶಾಪವನ್ನು ಪಡೆದು, ಕಬಂಧನೆಂಬ ಹೆಸರಿನ ರಾಕ್ಷಸನಾಗಿ ಹುಟ್ಟಿ, ಶ್ರೀರಾಮನಿಂದ ಮಡಿದು, ತನ್ನ ಪೂರ್ವದೇಹವನ್ನು ಪಡೆದ [ರಾಮಾ.-ಅರ. ೭೧. ಭಾರ.-ವನ ೧೩೭].

**ಸ್ಯಮನ್ತಕ.**—ಒಂದು ರತ್ನ ಇದು ದಿನ ಒಂದಕ್ಕೆ ಎಂಟು ಭಾರ ತೂಕ ಚಿನ್ನವನ್ನು ಕೊಡುತ್ತಿತ್ತು. ಸೂರ್ಯನ ಮಿತ್ರನಾದ ಸತ್ರಾಜಿತ ಸೂರ್ಯನನ್ನು ತಪಸ್ಸಿನಿಂದ ಮೆಚ್ಚಿಸಿ, ಈ ರತ್ನವನ್ನು ಪಡೆದ. ನೋಡು—ಕೃಷ್ಣ, ಜಾಂಬವಂತ, ಪ್ರಸೇನ, ಸತ್ಯಭಾಮಾ, ಸತ್ರಾಜಿತ್ [ಭಾರ.-ಸಭಾ. ೧೪. ಭಾಗ.-೧೦-೫೬. ಹರಿ.-೧-೩೮].

**ಸ್ಯಮನ್ತಪಞ್ಚಕ.**—ಒಂದು ಮಡು. ನೋಡು—ಸ್ಯಮಂತಪಂಚಕ, ಕುರುಕ್ಷೇತ್ರ, ಪರಶುರಾಮ.

**ಸ್ಯಾನನ್ದೂರು.**—ಒಂದು ಪಟ್ಟಣ ಕೇರಳದೇಶದಲ್ಲಿದೆ. ಇದನ್ನು ಈಗ ಅನಂತಶಯನ (Trivandrum) ಎಂದು ಕರೆಯುತ್ತಾರೆ. ಅರ್ಜುನ ತೀರ್ಥಯಾತ್ರಾ

ಸಮಯದಲ್ಲಿ ಇಲ್ಲಿಗೆ ಹೋಗಿದ್ದ [ಭಾರ.-ಆದಿ. ೨೩೭]. ಇಲ್ಲಿ ಸುಪ್ರಸಿದ್ಧವಾದ ಅನಂತಪದ್ಮನಾಭಸ್ವಾಮಿಯ ಮಂದಿರವಿದೆ ಯಾತ್ರಾಸ್ಥಳ.

**ಸ್ಯೂಮರಶ್ಮಿ.**—ಒಬ್ಬ ಮಹರ್ಷಿ. ಈತ ತನ್ನ ತಪೋಮಹಿಮೆಯಿಂದ ಗೋ ರೂಪವನ್ನು ಹೊಂದಿ ಪಾತಾಳಲೋಕವನ್ನು ಸೇರಿ, ಅಲ್ಲಿ ತಪಸ್ಸುಮಾಡುತ್ತಿದ್ದ ಕಪಿಲ ಮಹರ್ಷಿಯನ್ನು ಸಂದರ್ಶಿಸಿ, ಆತನ ಸಂಗಡ ನಿಷ್ಕಾಮಕರ್ಮ ವಿಷಯ ವಾಗಿ ಸಂವಾದಮಾಡಿದ ಈ ಸಂವಾದಕ್ಕೆ ಕಪಿಲ ಗೋ ಸಂವಾದವೆಂದು ಹೆಸರು. ನೋಡು—ಕಪಿಲ [ಭಾರ.-ಶಾಂತಿ. ೨೭೪-೨೭೬]

**ಸ್ವಯಂಪ್ರಭಾ.**—ಒಬ್ಬ ತಾಪಸಿ. ಶಾಂಡಿಲ್ಯ ಮುನಿಯ ಮಗಳಾದುದರಿಂದ ಈಕೆಗೆ ಶಾಂಡಿಲಿಯೆಂಬುದು ನಾಮಾಂತರ. ದೇವಶಿಲ್ಪಿಯಾದ ಮಯ ತನ್ನ ಮಾಯಾ ಚಾತುರ್ಯದಿಂದ ಸುವರ್ಣಮಯವಾದ ಒಂದು ವನವನ್ನು ನಿರ್ಮಿಸಿ, ಅದರಲ್ಲಿ ದಿವ್ಯವಾದ ಒಂದು ಗುಹೆಯನ್ನು ಕಲ್ಪಿಸಿ, ಅಲ್ಲಿ ತನ್ನ ಪತ್ನಿಯಾದ ಹೇಮೆ ಯೆಂಬ ಅಪ್ಸರಸಿಯೊಂದಿಗೆ ಕೆಲವು ಕಾಲ ವಾಸನಾಗಿದ್ದ ಹೇಮೆ ದೇವಲೋಕಕ್ಕೆ ತೆರಳಿದ ತರುವಾಯ ಮಯ ತನ್ನ ಮಗಳಾದ ಮಂಡೋದರಿಯ ಸಂಗಡ ಆ ಗುಹೆ ಯನ್ನು ಬಿಟ್ಟು ತೆರಳಿದ ಬಳಿಕ ಹೇಮೆಯ ಸಖಿಯಾದ ಸ್ವಯಂಪ್ರಭೆ ಆ ಗುಹೆಯನ್ನು ಸೇರಿ ಅಲ್ಲಿ ವಾಸಮಾಡತೊಡಗಿದಳು [ಭಾರ -ಉ. ೧೧೩. ಭೀ. ೮] ಹನೂಮದಾದಿಗಳು ಸೀತೆಯನ್ನು ಹುಡುಕುವುದಕ್ಕಾಗಿ ತೆಂಕಣ ದಿಕ್ಕಿಗೆ ತೆರಳಿದಾಗ ನೀರಡಿಕೆಯಿಂದ ಬಳಲಿ ಈ ಗುಹೆಯನ್ನು ಹೊಕ್ಕರು. ಅಲ್ಲಿ ಸ್ವಯಂಪ್ರಭೆಯನ್ನು ಕಂಡು, ಆಕೆ ಯಿಂದ ಸತ್ಕೃತರಾಗಿ ಹೊರಬಂದರು [ವಾ.ರಾಮಾ -ಕಿ ೫೦, ೫೧]. ಗರುಡ ಈಕೆಗೆ ಕೇಡನ್ನು ಬಗೆದು ರೆಕ್ಕೆಗಳನ್ನು ಉದುರಿಸಿಕೊಂಡು, ಮರಳಿ ಆಕೆಯ ಅನುಗ್ರಹದಿಂದ ಗರಿಗಳನ್ನು ಪಡೆದ [ಭಾರ.-ಉ ೧೧೩ ಸ್ಕಾಂದ.-ನಾಗರ. ೮೧, ೮೨]. ಸ್ವಯಂಪ್ರಭೆ ಸುಮನೆಯೆಂಬ ರಾಜಪುತ್ರಿಯೊಂದಿಗೆ ಪತಿವ್ರತಾಮಾಹಾತ್ಮ್ಯ ವಿಷಯವಾಗಿ ಸಂವಾದ ಮಾಡಿದಳು. ನೋಡು—ಶಾಂಡಿಲಿ [ಭಾರ -ಅನು ೧೮೫]

**ಸ್ವರ್ಗ.**—ಒಂದು ಲೋಕ. ಪುಣ್ಯಶಾಲಿಗಳು ದೇಹತ್ಯಾಗಮಾಡಿದ ಬಳಿಕ, ಅದುವರೆಗೆ ತಾವು ಸಂಪಾದಿಸಿದ ಪುಣ್ಯದ ಫಲವನ್ನು ಅನುಭವಿಸುವುದಕ್ಕಾಗಿ ಈ ಲೋಕಕ್ಕೆ ತೆರಳುತ್ತಾರೆ. ಸ್ವರ್ಗಲೋಕದಲ್ಲಿನ ಸುಖಗಳು ಮತ್ತು ದೋಷಗಳ ವರ್ಣನೆ [ಭಾರ.-ವನ. ೨೬೨].

**ಸ್ವಭಾರ್ನವಿ.**—ಒಬ್ಬ ರಾಜಪುತ್ರಿ. ಚಂದ್ರ ವಂಶದ ಪುರೂರವ ರಾಜನಿಂದ ದೇವ ವಿಲಾಸಿನಿಯಾದ ಊರ್ವಶಿಯಲ್ಲಿ ಜನಿಸಿದ ಆಯು ಕುಮಾರನನ್ನು ಮದುವೆಯಾಗಿ ನಹುಷ ಚಕ್ರವರ್ತಿಯನ್ನು ಪಡೆದಳು [ಭಾರ.-ಆದಿ. ೬೯].

**ಸ್ವರ್ಭಾನು.**—ಒಬ್ಬ ಅಸುರ. ಕಶ್ಯಪ ಮುನಿಯಿಂದ ದನುವೆಂಬ ಹೆಂಡತಿಯಲ್ಲಿ ಜನಿಸಿದವ. ರಾಹುವೆಂಬುದು ಇವನ ನಾಮಾಂತರ. ನೋಡು—ರಾಹು [ಭಾರ.-ಆದಿ. ೬೬].

**ಸ್ವಾತಿ.**—(i) ದಕ್ಷಬ್ರಹ್ಮನ ಮಗಳು. ಚಂದ್ರನ ಇಪ್ಪತ್ತೇಳು ಮಂದಿ ಪತ್ನಿಯರಲ್ಲಿ ಒಬ್ಬಳು. ನೋಡು—ದಕ್ಷ [ಭಾರ.-ಆದಿ. ೬೭, ೬೯. ಭಾಗ.-೬, ೫. ವಿಷ್ಣು.-೧-೧೫].

(ii) ಒಂದು ನಕ್ಷತ್ರ [ಭಾರ.-ಆ. ೬೭, ೬೯. ಭಾಗ.-೬-೫. ವಿಷ್ಣು.-೧-೧೫].

**ಸ್ವಾಹಾ**—(i) ದಕ್ಷನ ಮಗಳು. ಅಗ್ನಿಯ ಹೆಂಡತಿ [ಭಾರ.-ವನ. ೨೨೬, ೨೩೧]. ಅಗ್ನಿ ಸಪ್ತರ್ಷಿಗಳ ಪತ್ನಿಯರನ್ನು ಮೋಹಿಸಿದಾಗ ಸ್ವಾಹಾದೇವಿ ಅರುಂಧತಿಯ ಹೊರತು ಮಿಕ್ಕ ಆರು ಮಂದಿ ಮುನಿಪತ್ನಿಯರ ರೂಪವನ್ನು ತಳೆದು ಅಗ್ನಿಯನ್ನು ಸೇರಿ ಆತನ ಮನೋರಥವನ್ನು ಪೂರ್ತಿಗೊಳಿಸಿದಳು [ಭಾರ.-ವನ. ೨೨೭]. ಸ್ವಾಹಾದೇವಿ ಸ್ಕಂದನೆಂಬ ಪುತ್ರನನ್ನು ಹೆತ್ತು ಆತನಿಂದ ವರಗಳನ್ನು ಪಡೆದಳು [ಭಾರ.-ವನ. ೨೩೧].

(ii) ಬೃಹಸ್ಪತಿಯ ಮಗಳು. ಈಕೆ ಅಗ್ನಿದೇವನನ್ನು ಮದುವೆಯಾಗಿ ಕಾಮ, ಅಮೋಘ, ಉಕ್ಥ್ಯರೆಂಬ ಮೂವರು ಪುತ್ರರನ್ನು ಪಡೆದಳು. ಈ ಮೂವರೂ ಅಗ್ನಿಯ ಅಧಿಕಾರವನ್ನು ಮಾಡಿದರು [ಭಾರ.-ವನ. ೨೨೧]

## ಹ

**ಹಂಸ.**—(i) ಒಬ್ಬ ರಾಜ. ಕರೂಶ ದೇಶವನ್ನು ಆಳುತ್ತಿದ್ದ. ಡಿಬಿಕನೆಂಬವ ಇವನ ತಮ್ಮ. ಡಿಬಿಕ ಕೃಷ್ಣನ ಮೂಲಕ ಯಮುನೆಯಲ್ಲಿ ಬಿದ್ದು ಸಾಯಲಾಗಿ, ಬಲರಾಮ ಹಂಸನನ್ನು ಕೊಂದ. ನೋಡು—ಡಿಬಿಕ, ಬಲರಾಮ [ಭಾರ.-ಸಭಾ. ೧೪].

(ii) ದೇವಗಂಧರ್ವರಲ್ಲಿ ಒಬ್ಬ. ಕಶ್ಯಪ ಮುನಿಯಿಂದ ಅರಿಷ್ಟೆಯೆಂಬ ಪತ್ನಿಯಲ್ಲಿ ಜನಿಸಿದವ. ದುರ್ಯೋಧನನ ತಂದೆಯಾದ ಧೃತರಾಷ್ಟ್ರ ಇವನ ಅಂಶದಿಂದ ಜನಿಸಿದವ [ಭಾರ.-ಆದಿ ೬೮].

**ಹಂಸಕಥೆ.**—ಯುಧಿಷ್ಠಿರನ ರಾಜಸೂಯ ಸಭೆಯಲ್ಲಿ ಭೀಷ್ಮ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡುವಂತೆ ಸಹದೇವನಿಗೆ ಹೇಳಿದ್ದನ್ನು ಕೇಳಿ, ಶಿಶುಪಾಲ ಕೋಪಾವಿಷ್ಟನಾಗಿ ಈ ಕಥೆಯನ್ನು ಭೀಷ್ಮನಿಗೆ ಹೇಳಿದ [ಭಾರ.-ಸಭಾ. ೬೪].

**ಹಂಸ ಕಾಗೆಗಳ ಕಥೆ.**—ಹದಿನೇಳನೆಯ ದಿನದ ಯುದ್ಧದಲ್ಲಿ ಶಲ್ಯ ಕರ್ಣನಿಗೆ ಸಾರಥಿಯಾಗಿದ್ದು, ಕರ್ಣನ ಕೆಚ್ಚನ್ನು ಮುರಿಯುವುದಕ್ಕಾಗಿ ಅವನನ್ನು ಅಲ್ಲಗಳೆಯುತ್ತ ಅರ್ಜುನನನ್ನು ಹಂಸ ಪಕ್ಷಿಗೂ, ಕರ್ಣನನ್ನು ಕಾಗೆಗೂ ಹೋಲಿಸಿ ಹೇಳಿದ ಕಥೆ [ಭಾರ.-ಕರ್ಣ ೩೫].

**ಹಂಸಧ್ವಜ**—ಚಂಪಕಾವತೀ ನಗರಿಯ ಅರಸು ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ತನ್ನ ಮಗನಾದ ಸುಧನ್ವನನ್ನು ಅರ್ಜುನನ ಮೇಲೆ ಯುದ್ಧಕ್ಕೆ ಕಳುಹಿ, ಸುಧನ್ವ ರಾಣಿವಾಸಕ್ಕೆ ಹೋಗಿ ತಾಯಿಯಿಂದ ಶತ್ರೋತ್ಸೇಪ ದೇಶವನ್ನು ಹೊಂದಿ, ರಣರಂಗಕ್ಕೆ ಹೋಗಿ ಅರ್ಜುನನಿಂದ ಸತ್ತ. ಬಳಿಕ ಹಂಸಧ್ವಜ ಪುತ್ರಶೋಕದಿಂದ ಮರುಗಿ ತಾನೂ ಅರ್ಜುನನ ಸಂಗಡ ಯುದ್ಧಮಾಡಿ ಸೋತು, ಕಡೆಗೆ ಅರ್ಜುನನನ್ನು ಮರೆಹೊಕ್ಕು ಅವನ ಹಿಂದೆ ತಾನೂ ನೆರವಾದ [ಜೈ.ಭಾರ.-ಅಶ್ವ. ೧೭-೨೧].

**ಹಂಸಸಾಧ್ಯ ಸಂವಾದ.**—ಮೋಕ್ಷಸಾಧನಗಳಾವುವೆಂಬ ವಿಷಯವನ್ನು ಕುರಿತು ಹೇಳುವಾಗ ಭೀಷ್ಮ ಈ ಸಂವಾದವನ್ನು ವಿವರಿಸಿದ್ದು [ಶಾಂತಿ. ೩೦೫].

**ಹಂಸಿ.**—ಸೂರ್ಯ ವಂಶದ ಭಗೀರಥ ರಾಜನ ಮಗಳು. ಈಕೆ ವರತಂತು ಮಹರ್ಷಿಯ ಶಿಷ್ಯನಾದ ಕೌತ್ಸನೆಂಬ ಮುನಿಯನ್ನು ಮದುವೆಯಾದಳು [ಭಾರ.-ಅನು. ೨೦೦].

**ಹಠವಾದ.**—ಒಂದೇ ವಿಷಯವನ್ನು ಹಿಡಿದು ಹಠದಿಂದ ವಾದಿಸುವಿಕೆ. ಪಾಂಡವರು ಜೂಜಿನಲ್ಲಿ ಸೋತು, ದ್ವೈತವನವನ್ನು ಹೊಕ್ಕಕೂಡಲೇ ದ್ರೌಪದಿ ಯುಧಿಷ್ಠಿರನನ್ನು ಕುರಿತು " ಈಗಲೇ ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಕೊಂದು ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗು " ಎಂದು ಹೇಳಿ ವಾದಮಾಡಿದಳು. ಇದನ್ನೇ ಹಠವಾದವೆಂದು ಭಾರತದಲ್ಲಿ ವರ್ಣಿಸಿರುತ್ತಾರೆ [ಭಾರ -ವನ ೩೨].

**ಹನೂಮನ್ತ.**—ಒಬ್ಬ ವಾನರ ಅಂಜನೆಯೆಂಬವಳಲ್ಲಿ ಈಶ್ವರಾಂಶದಿಂದ ವಾಯುವಿನ ಮೂಲಕ ಜನಿಸಿದವ. ನೋಡು—ಅಂಜನಾ, ಆಂಜನೇಯ.

ಪಾರ್ವತೀ ಪರಮೇಶ್ವರರು ಕೈಲಾಸಪರ್ವತದಲ್ಲಿ ಕ್ರೀಡಿಸುತ್ತಿದ್ದಾಗ ಒಂದು ವಾನರಯುಗ್ಮವನ್ನು ಕಂಡರು. ಪಾರ್ವತಿ ಶಿವನೊಂದಿಗೆ ಕಲೆತು ಗರ್ಭವನ್ನು ಧರಿಸಿ ಅದನ್ನು ತಾಳಲಾರದೆ ಶಿವನಲ್ಲಿ ವಿಜ್ಞಾಪಿಸಲಾಗಿ, ಶಿವ ಆ ಗರ್ಭವನ್ನು ಪಾರ್ವತಿಯ ನಾಭಿದೇಶದಿಂದ ಹೊರಬೀಳುವಂತೆ ಮಾಡಿದ. ಭೂದೇವಿ ಅದನ್ನು ಧರಿಸಲಾರದೆ ಕಂಗೆಟ್ಟಳು. ಅದೇ ಸಮಯದಲ್ಲಿ ಗೌತಮ ಪುತ್ರಿಯಾದ ಅಂಜನೆ ಪುತ್ರಕಾಂಕ್ಷೆಯಿಂದ ತೀವ್ರನಿಯಮವನ್ನು ಕೈಕೊಂಡಿದ್ದಳು. ಆಗ ವಾಯುದೇವ ಆಕೆಯ ರೂಪಕ್ಕೆ ಮರುಳಾಗಿ, ಆ ಗರ್ಭವನ್ನು ಕೊಂಡುಯ್ದು ಆಕೆಯ ಅಂಗೈಯಲ್ಲಿಟ್ಟ,

ಆಕೆ ಅದನ್ನು ನುಂಗಲಾಗಿ ನವಮಾಸಗಳು ತುಂಬಿದ ಬಳಿಕ ಸರ್ವಾಭರಣಭೂಷಿತ ನಾದ ಒಬ್ಬ ವಟು ಜನಿಸಿದ. ಬಳಿಕ ಆ ಕುಮಾರ ಫಲಾಭಿಲಾಷೆಯಿಂದ ಸೂರ್ಯ ನನ್ನು ನುಂಗಹೋದ. ಇಂದ್ರನ ವಜ್ರಾಯುಧದ ಪೆಟ್ಟಿನಿಂದ ಮೂರ್ಛೆಬಿದ್ದು, ದೇವತೆ ಗಳ ಮೂಲಕ ಅನೇಕ ವರಗಳನ್ನು ಪಡೆದು, ಸೂರ್ಯನಲ್ಲಿ ವಿದ್ಯಾಭ್ಯಾಸಮಾಡಿ, ಸುಗ್ರೀವನಿಗೆ ಮಂತ್ರಿಯಾಗಿ ಶ್ರೀರಾಮನ ದೂತನಾದ [ತತ್ವಸಂ.ರಾ.-ಕಿ. ೧೬, ೧೩]. ವಿಷ್ಣುವಿನ ಮೋಹಿನೀರೂಪವನ್ನು ಕಂಡು ಶಿವ ಎದೆಗುಂದಲಾಗಿ, ಸಪ್ತರ್ಷಿಗಳು ಶಿವನ ತೇಜಸ್ಸನ್ನು ಒಂದು ಎಲೆಯಲ್ಲಿರಿಸಿದರು. ಬಳಿಕ ಅವರು ಮುಂದಣ ಕಾರ್ಯ ಭಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಆ ವೀರ್ಯವನ್ನು ಗೌತಮ ಪುತ್ರಿಯಾದ ಅಂಜನೆಯ ಕಿವಿಯಲ್ಲಿ ಸುರಿದರು ಇಂತು ಶಿವನೇ ಕಪಿ ರೂಪದಿಂದ ಹನೂಮಂತ ನೆಂಬ ಹೆಸರಿನಿಂದ ಜನಿಸಿದ. ಬಳಿಕ ಸೂರ್ಯನನ್ನು ಪೀಡಿಸಿ, ದೇವತೆಗಳಿಂದ ವರವನ್ನು ಪಡೆದು ಜನನಿಯ ಬಳಿಸಾರ್ದು, ನಡೆದ ವೃತ್ತಾಂತವನ್ನೆಲ್ಲ ಸಂತೋಷದಿಂದ ಹೇಳಿದ. ಜನನಿಯ ಅಪ್ಪಣೆಯಂತೆ ಸೂರ್ಯನ ಮೂಲಕ ಸಕಲ ಶಾಸ್ತ್ರಗಳನ್ನೂ ಕಲಿತು, '' ವಾಲಿ ಸುಗ್ರೀವನ ಹೆಂಡತಿಯನ್ನು ಅಪಹರಿಸಿ ಅವನನ್ನು ರಾಜ್ಯದಿಂದ ಓಡಿಸಿರುವನಾಗಿ ನೀನು ನನ್ನ ಪುತ್ರನಾದ ಸುಗ್ರೀವನಿಗೆ ಒತ್ತಾಸೆಮಾಡು '' ಎಂಬುದಾಗಿ ಸೂರ್ಯ ನಿಂದ ಅಪ್ಪಣೆ ಪಡೆದು, ಋಷ್ಯಮೂಕ ಗಿರಿಯಲ್ಲಿದ್ದ ಸುಗ್ರೀವನನ್ನು ಸೇರಿ, ಆತನ ಮುಖ್ಯಮಂತ್ರಿಯಾಗಿದ್ದು, ರಾಮಕಾರ್ಯಸಾಧಕನಾದ [ಶಿವ -ಶತರುದ್ರ ೨೦]. ಪುಂಜಿಕ ಸ್ಥಲಿಯೆಂಬ ಅಪ್ಸರಸಿ ಶಾಪದಿಂದ ವಾನರಜನ್ಮವನ್ನು ಪಡೆದು ಕುಂಜರನೆಂಬ ಕಪಿನಾಯಕನ ಮಗಳಾಗಿ ಅಂಜನೆಯೆಂಬ ಹೆಸರಿನಿಂದ ಜನಿಸಿ, ಕೇಸರಿಯೆಂಬ ವಾನರನನ್ನು ಮದುವೆಯಾದಳು ವಾಯುದೇವ ಈಕೆಯ ರೂಪಾತಿಶಯಕ್ಕೆ ಮರು ಳಾಗಿ ಆಕೆಯೊಡನೆ ಬಲಾತ್ಕಾರದಿಂದ ಕ್ರೀಡಿಸಲಾಗಿ, ಅಂಜನೆ ಗರ್ಭವತಿಯಾಗಿ ಒಬ್ಬ ಪುತ್ರನನ್ನು ಪಡೆದಳು ಆ ಮಗು ಜನಿಸಿದಕೂಡಲೇ ಆಗತಾನೇ ಉದಯಿಸುತ್ತಿದ್ದ ಸೂರ್ಯಬಿಂಬವನ್ನು ಕಂಡು, ಫಲವೆಂಬ ಭ್ರಾಂತಿಯಿಂದ ಅಂತರಿಕ್ಷಕ್ಕೆ ನೆಗೆದು ಸೂರ್ಯ ನನ್ನು ಪೀಡಿಸಿತು. ಇಂದ್ರ ವಜ್ರಾಯುಧದಿಂದ ಇವನನ್ನು ಹೊಡೆಯಲಾಗಿ ಒಂದು ಕೆನ್ನೆ ಗಾಯವಾಗಿ ಸೊಟ್ಟಗಾಯಿತು. ಈ ಕಾರಣದಿಂದಲೇ ಇವನಿಗೆ ಹನೂ ಮಂತನೆಂದು ಹೆಸರು. ಇಂತು ತನ್ನ ಮಗ ಗಾಯಪಟ್ಟುದನ್ನು ಕಂಡು ವಾಯು ದೇವ ಸಂಚಾರವನ್ನು ನಿಲ್ಲಿಸಿದ. ಆಗ ಇಂದ್ರಾದಿ ದೇವತೆಗಳು ವಾಯುವನ್ನು ಸಂತೈಸಿ, ಹನೂಮಂತನಿಗೆ ಸ್ವೇಚ್ಛಾಮರಣವನ್ನೂ, ವಾಯುವಿಗೆ ಸಮನಾದ ವೇಗ ವನ್ನೂ ಬಲವನ್ನೂ ಅನುಗ್ರಹಿಸಿದರು [ರಾ -ಕಿಷ್ಕಿ. ೬೬]. ಹನೂಮಂತ ಸುಗ್ರೀವನ ಅಪ್ಪಣೆಯಂತೆ ರಾಮ ಲಕ್ಷ್ಮಣರಲ್ಲಿಗೆ ಬಂದು ಅವರ ವೃತ್ತಾಂತವನ್ನು ತಿಳಿದು, ಅವ ರಿಬ್ಬರನ್ನೂ ಸುಗ್ರೀವನಲ್ಲಿಗೆ ಕರೆದುಯ್ದು, ರಾಮ ಸುಗ್ರೀವರಿಗೆ ಸ್ನೇಹವನ್ನು ಬೆಳಸಿದ್ದು

[ಕಿಷ್ಕಿ. ೨-೪]. ಹನೂಮಂತ ಸುಗ್ರೀವನಿಗೆ ರಾಜನೀತಿ ಹೇಳಿದ್ದು [ಕಿ. ೩೨]. ಹನೂಮಂತ ರಾಮನ ಮೂಲಕ ಸೀತಾದೇವಿಯ ನಂಬುಗೆಗಾಗಿ ಮುದ್ರೆಯ ಉಂಗುರ ವನ್ನು ಪಡೆದು ತೆಂಕಣ ದಿಕ್ಕಿಗೆ ಹೊರಟದ್ದು [ಕಿಷ್ಕಿ ೪೪] ಹನೂಮಂತ ಸ್ವಯಂ ಪ್ರಭೆಯ ಗುಹೆಯನ್ನು ಹೊಕ್ಕು, ಆಕೆಯ ಆತಿಥ್ಯವನ್ನು ಕೈಕೊಂಡು, ತೆಂಕಣ ಸಮುದ್ರತೀರವನ್ನು ಸೇರಿದ್ದು [ಕಿಷ್ಕಿ ೫೦-೫೩]. ಸಮುದ್ರವನ್ನು ದಾಟಲಾರದೆ ಚಿಂತಾಕ್ರಾಂತನಾಗಿದ್ದ ಅಂಗದನಿಗೆ ಹನೂಮಂತ ವಿವೇಕವನ್ನು ಹೇಳಿದ್ದು [ಕಿಷ್ಕಿ. ೫೪]. ಜಾಂಬವಂತ ಹನೂಮಂತನ ಜನ್ಮವೃತ್ತಾಂತವನ್ನು ಹೇಳಿ, ಸಮುದ್ರವನ್ನು ದಾಟಲು ಹನೂಮಂತನನ್ನು ಹುರಿದುಂಬಿಸಿದ್ದು [ಕಿಷ್ಕಿ ೬೨-೬೬] ಹನೂಮಂತ ಸಮುದ್ರವನ್ನು ದಾಟಲು ಸನ್ನುತಿಸಿದ್ದು [ಕಿಷ್ಕಿ ೬೭] ಹನೂಮಂತ ಸಮುದ್ರ ವನ್ನು ದಾಟಿದ್ದು, ಸಿಂಹಿಕೆಯೆಂಬ ರಕ್ಕಸಿಯನ್ನು ಕೊಂದದ್ದು, ನಾಗಮಾತೆಯಾದ ಸುರಸೆಯನ್ನು ಮೆಚ್ಚಿಸಿದ್ದು, ಮೈನಾಕನಿಂದ ಸತ್ಕೃತನಾದದ್ದು [ಸುಂದರ. ೧]. ಹನೂಮಂತ ಲಂಕೆಯನ್ನು ಹೊಕ್ಕದ್ದು [ಸುಂ ೨೦] ಹನೂಮಂತ ಲಂಕಾಭಿಮಾನಿ ದೇವತೆಯನ್ನು ನಿಗ್ರಹಿಸಿದ್ದು [ಸುಂ ೩] ರಾವಣನ ಅಂತಃಪುರವನ್ನು ಹೊಕ್ಕು, ಸೀತೆಯನ್ನು ಹುಡುಕಿದ್ದು [ಸುಂ ೩-೧೨]. ಸೀತೆಯನ್ನು ಕಾಣದೆ ಹಂಬಲಿಸಿದ್ದು [ಸುಂ. ೧೩]. ಸೀತೆಯನ್ನು ಅಶೋಕವನದಲ್ಲಿ ಕಂಡದ್ದು [ಸುಂ ೧೫] ಹನೂಮಂತ ಸೀತೆಯೊಡನೆ ಮಾತನಾಡಿ, ಆಕೆಗೆ ಭರವಸೆಯಿತ್ತು ರಾಮನ ಮುದ್ರೆಯುಂಗುರವನ್ನು ಕೊಟ್ಟದ್ದು [ಸುಂ ೩೦-೩೬] ಅಶೋಕವನವನ್ನು ಮುರಿದು, ರಾಕ್ಷಸರನ್ನು ಕೊಂದು, ಇಂದ್ರಜಿತನ ಬ್ರಹ್ಮಾಸ್ತ್ರಕ್ಕೆ ಕಟ್ಟುಪಟ್ಟು ರಾವಣನ ಸಭೆಯನ್ನು ಹೊಕ್ಕದ್ದು [ಸುಂ. ೪೧-೫೨] ಹನೂಮಂತ ಲಂಕೆಯನ್ನು ಸುಟ್ಟು, ಮರಳಿ ಸೀತೆಯನ್ನು ಸಂದರ್ಶಿಸಿ, ಜಾಂಬವಾದಿಗಳಲ್ಲಿಗೆ ಬಂದು, ಲಂಕೆಯಲ್ಲಿ ನಡೆದ ಸಮಾಚಾರವನ್ನು ಹೇಳಿದ್ದು [ಸುಂ. ೫೩-೫೮] ಸೀತೆಯನ್ನು ಕಂಡ ವೃತ್ತಾಂತವನ್ನು ರಾಮನಿಗೆ ಹೇಳಿದ್ದು [ಸುಂ. ೬೪]. ಚೂಡಾಮಣಿಯನ್ನು ರಾಮನಿಗೆ ಅರ್ಪಿಸಿದ್ದು ಸೀತೆಯ ವೃತ್ತಾಂತವನ್ನು ತಿಳಿಸಿದ್ದು [ಸುಂ. ೬೫-೬೮] ಹನೂಮಂತ ರಾಮನಿಗೆ ಲಂಕೆಯ ವರ್ಣನೆಯನ್ನು ತಿಳಿಸಿದ್ದು [ಯು ೩] ರಾಮನನ್ನು ಮರೆಹೊಕ್ಕ ವಿಭೀಷಣನನ್ನು ಹನೂಮಂತ ರಾಮನಲ್ಲಿಗೆ ಕರೆತಂದು, ಅವನ ಸ್ವಭಾವವನ್ನು ತಿಳಿಸಿದ್ದು [ಯುದ್ಧ ೧೭]. ಹನೂಮಂತ ಧೂಮ್ರಾಕ್ಷನೆಂಬ ರಾಕ್ಷಸನನ್ನು ಕೊಂದದ್ದು [ಯುದ್ಧ ೫೨]. ಹನೂಮಂತ ನಿಕುಂಭನೆಂಬ ರಕ್ಕಸನನ್ನು ಕೊಂದದ್ದು [ಯುದ್ಧ ೭೭] ಹನೂಮಂತ ಮಹೌಷಧಿ ಪರ್ವತವನ್ನು ತಂದದ್ದು [ಯುದ್ಧ ೧೦೨] ಹನೂಮಂತ ಸೀತೆಗೆ ರಾಮನ ವಿಜಯ ವಾರ್ತೆಯನ್ನು ತಿಳಿಸಿದ್ದು [ಯುದ್ಧ. ೧೧೬]. ಹನೂಮಂತ ಭರತನಿಗೆ ಸಂಗ್ರಹ ವಾಗಿ ರಾಮಾಯಣ ಕಥೆಯನ್ನು ಹೇಳಿದ್ದು [ಯುದ್ಧ ೧೨೮, ೧೨೯] ಹನೂ

ಮಂತನ ಉತ್ಪತ್ತಿ ವರ್ಣನೆ [ಭಾರ.-ವನ. ೧೪೯]. ಭೀಮ ಸೌಗಂಧಿಕಪುಷ್ಪವನ್ನು ತರುವುದಕ್ಕಾಗಿ ಕುಬೇರನ ಪಟ್ಟಣಕ್ಕೆ ತೆರಳಿದಾಗ, ಹನೂಮಂತ ನಡುದಾರಿಯಲ್ಲಿ ಕಾಣಿಸಿಕೊಂಡದ್ದು, ಭೀಮ ಹನೂಮಂತರ ಸಂವಾದ. ಹನೂಮಂತ ತನ್ನ ಮಹಿಮೆಯನ್ನು ಭೀಮನಿಗೆ ಹೇಳಿದ್ದು [ಭಾರ.-ವನ. ೧೪೮, ೧೪೯]. ಹನೂಮಂತ ವಿಶ್ವರೂಪವನ್ನು ತೋರಿದ್ದು [ವನ. ೧೫೨] ಹನೂಮಂತ ಶ್ರೀ ರಾಮನಿಂದ ಕಲ್ಪಾಂತರದವರೆಗೆ ಭೂಲೋಕದಲ್ಲಿ ಜೀವಿಸಿಕೊಂಡಿರುವಂತೆ ಅಪ್ಪಣೆಯನ್ನು ಪಡೆದದ್ದು [ರಾ.-ಉತ್ತ. ೧೦೭]. ಹನೂಮಂತ ಸೀತೆಯಿಂದ ಬ್ರಹ್ಮವಿದ್ಯೆಯನ್ನು ಪಡೆದದ್ದು [ಮುಕ್ತಿಕೋಪನಿಷತ್ತು—ಅಧ್ಯಾತ್ಮರಾ -ಬಾಲ. ೨].

**ಹಯಗ್ರೀವ** —(i) ವಿಷ್ಣುವಿನ ನಾಮಾಂತರ. ಒಮ್ಮೆ ಮಹಾವಿಷ್ಣು ಲಕ್ಷ್ಮಿಯೊಂದಿಗೆ ಕ್ರೀಡಿಸುತ್ತ ಆಕೆಯನ್ನು ನೋಡಿ ನಕ್ಕ ತನ್ನ ಸೌಂದರ್ಯವನ್ನು ಹೀಯಾಳಿಸಿದನೆಂಬ ಭಾವನೆಯಿಂದ ಕುಪಿತೆಯಾದ ಲಕ್ಷ್ಮಿ ವಿಷ್ಣುವಿನ ತಲೆ ಉರುಳಿ ಬೀಳುವಂತೆ ಶಾಪವಿತ್ತಳು. ಕೆಲವು ಕಾಲದ ಬಳಿಕ ವಿಷ್ಣು ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿ ತನ್ನ ಶಾರ್ಙ್ಗವೆಂಬ ಬಿಲ್ಲನ್ನೇ ತಲೆದಿಂಬಾಗಿಟ್ಟುಕೊಂಡು ನಿದ್ರಿಸುತ್ತಿದ್ದ ಆಗ ಮಧುಕೈಟಭರೆಂಬ ರಾಕ್ಷಸರು ಲೋಕಕಂಟಕರಾಗಲು ದೇವತೆಗಳು ವಿಷ್ಣುವಿನಲ್ಲಿಗೆ ಬಂದು ಆತ ನಿದ್ರಿಸುತ್ತಿದ್ದುದನ್ನು ಕಂಡು, ಗೆದ್ದಲನ್ನು ಸೃಷ್ಟಿಮಾಡಿ, ಅದಕ್ಕೆ ಯಜ್ಞದಲ್ಲಿ ಹವಿರ್ಭಾಗವನ್ನು ಕೊಡುವಂತೆ ಅಭಯವಿತ್ತು, ವಿಷ್ಣುವಿನ ಧನುಸ್ಸಿನ ಬುಡವನ್ನು ಕತ್ತರಿಸಹೇಳಿದರು. ಗೆದ್ದಲುಹುಳು ಅಂತೆಯೇ ಬಿಲ್ಲಿನ ಬುಡವನ್ನು ತಿನ್ನಲಾಗಿ, ಬಿಗಿದಿದ್ದ ಹೆದೆ ಸಡಿಲವಾಗಿ, ಬಿಲ್ಲಿನ ತುದಿ ಹಾರಿ ವಿಷ್ಣುವಿನ ಕೊರಳನ್ನೂ ಹಾರಿಸಿತು. ಬಳಿಕ ದೇವತೆಗಳೆಲ್ಲರೂ ಒಂದು ಕುದುರೆಯ ರುಂಡವನ್ನು ವಿಷ್ಣುವಿನ ಮುಂಡಕ್ಕೆ ಸೇರಿಸಿದರು ಇಂತು ವಿಷ್ಣು ಹಯಗ್ರೀವನಾದ [ದೇ.ಭಾ.-೧-೫. ಭಾರ.-ಉ. ೧೩೦].

(ii) ಒಬ್ಬ ರಕ್ಕಸ. ಇವ ತಪಸ್ಸಿನಿಂದ ಆದಿಶಕ್ತಿಯನ್ನು ಮೆಚ್ಚಿಸಿ, ತನಗೆ ಸಾವಿಲ್ಲದಹಾಗೆ ವರವನ್ನು ಬೇಡಿದ. ದೇವಿ "ಇದು ಸಾಧ್ಯವಲ್ಲ. ಹುಟ್ಟಿದವನಿಗೆ ಸಾವು ತಪ್ಪಿದುದಲ್ಲ" ಎಂದಳು ಆಗ ಹಯಗ್ರೀವ "ನನಗೆ ಸಾವು ಬರುವುದಾದರೆ ನನ್ನ ಹೆಸರಿನವನಿಂದಲೇ ಬರಲಿ" ಎಂದು ಬೇಡಿದ. ದೇವಿ ಸಮ್ಮತಿಸಿ ಕಣ್ಮರೆಯಾದಳು. ಬಳಿಕ ಹಯಗ್ರೀವ ವರಬಲದಿಂದ ಕೊಬ್ಬಿ ಲೋಕವನ್ನು ತಲ್ಲಣಗೊಳಿಸತೊಡಗಿದ. ಆಗ ವಿಷ್ಣು ಹಯಗ್ರೀವನಾಗಿ ಇವನನ್ನು ಕೊಂದ [ದೇ.ಭಾ.-೧-೫. ಭಾರ.-ಶಾಂತಿ. ೧೨೨, ೩೪೭, ೩೫೭].

(iii) ಮತ್ತೊಬ್ಬ ರಾಕ್ಷಸ. ಇಂದ್ರ ವೃತ್ರಾಸುರವನ್ನು ಕೊಂದ ಬಳಿಕ ಮಯ, ತಾರಕರೆಂಬ ರಕ್ಕಸರು ದೇವತೆಗಳ ಮೇಲೆ ದಂಡೆತ್ತಿದರು. ದೇವತೆಗಳು

ವಿಷ್ಣುವನ್ನು ಮರೆಹುಗಲಾಗಿ, ವಿಷ್ಣು ದೇವತೆಗಳಿಗೆ ಅಭಯವಿತ್ತು ಸಂತವಿಸಿದ. ಈ ಮಾತನ್ನು ಕೇಳಿ ವೃತ್ರಾಸುರನ ಪರಿವಾರಕ್ಕೆ ಸೇರಿದ ಮಯ, ವಿರೋಚನ, ಹಯ ಗ್ರೀವ, ವಾರಾಹ, ಖರ, ತ್ವಷ್ಟ್ಯ, ಲಂಬ, ಮೊದಲಾದ ದಾನವರು ದೇವತೆಗಳ ಮೇಲೆ ಯುದ್ಧಕ್ಕೆ ಬಂದು ಪರಾಜಿತರಾಗಿ ಓಡಿಹೋದರು [ಮತ್ಸ್ಯ.-೧೭೩. ಭಾಗ.-೬-೧೦].

**ಹರಿಕೇಶ.**—ಪೂರ್ಣಭದ್ರನೆಂಬ ಯಕ್ಷನ ಮಗ. ಇವ ಹುಟ್ಟಿದ್ದು ಮೊದಲ್ಗೊಂಡು ಶಿವನಲ್ಲಿ ಅನನ್ಯವಾದ ಭಕ್ತಿಯನ್ನಿಟ್ಟಿದ್ದ ಪೂರ್ಣಭದ್ರ ಇದನ್ನು ಕಂಡು ಕ್ರೋಧ ಭರಿತನಾಗಿ, ಮಗನನ್ನು ನಾನಾ ಪರಿಯಿಂದ ಹೀಯಾಳಿಸಿ ಮನೆಯಿಂದ ಹೊರಗೆಡಹಿದ. ಬಳಿಕ ಹರಿಕೇಶ ಕಾಶೀ ಕ್ಷೇತ್ರವನ್ನು ಸೇರಿ, ಉಗ್ರವಾದ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಕಾಶೀ ಕ್ಷೇತ್ರವನ್ನು ಕಾಪಾಡುವ ಅಧಿಕಾರ(ಕ್ಷೇತ್ರಪಾಲತ್ವ)ವನ್ನೂ ಅನ್ನದಾನಮಾಡುವ ಶಕ್ತಿಯನ್ನೂ ಗಣಾಧಿಪತ್ಯವನ್ನೂ ಪಡೆದ [ಮತ್ಸ್ಯ.-೧೮೦].

**ಹರಿಣಿ.**—ಹಿರಣ್ಯಕಶಿಪುವಿನ ಮಗಳು. ಅಗ್ನಿಯನ್ನು ಮದುವೆಯಾಗಿದ್ದಳು [ಭಾರ.-ವನ. ೨೨೩].

**ಹರಿವರ್ಷ.**—ಆಗ್ನೀಧ್ರ ಮಹಾರಾಜನಿಂದ ವಿಪ್ರಚಿತ್ತಿಯೆಂಬ ಅಪ್ಸರಸಿಯಲ್ಲಿ ಜನಿಸಿದ ಒಂಬತ್ತು ಮಂದಿ ಮಕ್ಕಳಲ್ಲಿ ಮೂರನೆಯವ. ಆಗ್ನೀಧ್ರನ ತರುವಾಯ ಜಂಬೂದ್ವೀಪ ಒಂಬತ್ತು ಖಂಡಗಳಾಗಿ ಭಾಗವಾದಾಗ ಹೇಮಕೂಟ ಮತ್ತು ನಿಷಧ ಪರ್ವತಗಳ ನಡುವಣ ಭೂಭಾಗ ಈತನ ಪಾಲಿಗೆ ಬಂತು. ಇವ ಕಾಪಾಡುತ್ತಿದ್ದ ಭೂಭಾಗಕ್ಕೆ ಹರಿವರ್ಷವೆಂಬ ಹೆಸರೂ ರೂಢಿಯಾಯಿತು. ಇವ ಮೇರುಪುತ್ರಿ ಯಾದ ಉಪದಂಷ್ಟ್ರಿಯೆಂಬವಳನ್ನು ಮದುವೆಯಾಗಿದ್ದ [ಭಾರ-ಸ ೨೮. ಭೀ. ೬. ಭಾಗ.-೫, ೨. ವಿಷ್ಣು.-೨-೧].

**ಹರಿಶ್ಚಂದ್ರ.**—ಸೂರ್ಯ ವಂಶದ ಅರಸು. ತ್ರಿಶಂಕು ರಾಜನಿಂದ ಸತ್ಯವ್ರತೆ ಯೆಂಬಾಕೆಯಲ್ಲಿ ಜನಿಸಿದವ ಈತ ಚಂದ್ರವ(ಮ)ತಿಯನ್ನು ಮದುವೆಯಾಗಿ ವರುಣನ ವರದಿಂದ ರೋಹಿತನೆಂಬ ಮಗನನ್ನು ಪಡೆದ. ತ್ರಿಶಂಕು ತನ್ನ ತಂದೆ ಯಿಂದ ಧಿಕ್ಕೃತನಾಗಿ ರಾಜ್ಯಾಧಿಕಾರವನ್ನು ಕಳೆದುಕೊಂಡ ತರುವಾಯ ಹರಿಶ್ಚಂದ್ರ ತ್ರಿಶಂಕುವಿನ ಜೀವಿತಕಾಲದಲ್ಲಿಯೇ ರಾಜ್ಯಾಧಿಕಾರವನ್ನು ಪಡೆದ [ದೇ.ಭಾಗ.-೭, ೧೪]. ಹರಿಶ್ಚಂದ್ರ ನಾರದನ ಉಪದೇಶದಂತೆ ವರುಣನನ್ನು ಮರೆಹೊಕ್ಕು ತನಗೆ ಪುತ್ರ ಹುಟ್ಟಿದರೆ ಅವನನ್ನೇ ಪಶುವಾಗಿ ಏರ್ಪಡಿಸಿ ಯಜ್ಞಮಾಡುವುದಾಗಿ ಬೇಡಿ, ರೋಹಿತನೆಂಬ ಮಗನನ್ನು ಪಡೆದ. ಕೂಡಲೇ ವರುಣ ಅಲ್ಲಿಗೆ ಬಂದು "ನಿನಗೆ ಮಗ ಹುಟ್ಟಿದ್ದಾನೆ. ಇವನಿಂದ ಯಾಗಮಾಡು" ಎನಲು, ಹರಿಶ್ಚಂದ್ರ "ಅವನಿಗೆ ಹಲ್ಲು ಹುಟ್ಟಲಿ, ಹಲ್ಲು ಬೀಳಲಿ, ಇಂದಾಗಲಿ, ನಾಳೆಯಾಗಲಿ" ಎಂದು ಕಾಲಹರಣ

ಮಾಡುತ್ತ ಬಂದ. ಇಷ್ಟರಲ್ಲಿ ರೋಹಿತ ಈ ಸುದ್ದಿಯನ್ನು ಕೇಳಿ ಹೆದರಿ, ಧನುರ್ಧಾರಿಯಾಗಿ ಅರಣ್ಯವನ್ನು ಹೊಕ್ಕು ಇಂದ್ರನ ಸೂಚನೆಯ ಮೇರೆಗೆ ನಾಲ್ಕೈದು ವರ್ಷಗಳವರೆಗೆ ಅಲೆದಾಡಿ, ಕಡೆಗೆ ಋಚೀಕ ಮುನಿಯ ಮಗನಾದ ಶುನಶ್ಶೇಪನೆಂಬ ಕುವರನನ್ನು ಬೆಲೆಗೆ ಕೊಂಡು, ತನಗೆ ಪ್ರತಿಯಾಗಿ ಅವನನ್ನು ಪಶುವಾಗಿ ಏರ್ಪಡಿಸಿ ಕೊಂಡು, ಪಟ್ಟಣಕ್ಕೆ ಕರೆತಂದು ಹರಿಶ್ಚಂದ್ರನಿಗೆ ಒಪ್ಪಿಸಿ ಯಜ್ಞಮಾಡೆಂದು ಹೇಳಿದ. ಇಷ್ಟರಲ್ಲಿ ವರುಣನ ಶಾಪದಿಂದ ಹರಿಶ್ಚಂದ್ರ ಜಲೋದರ ರೋಗದಿಂದ ಪೀಡಿತನಾಗಿ ತುಂಬ ಬಾಧೆಪಡುತ್ತಿದ್ದ ರೋಹಿತ ಕರೆತಂದ ಶುನಶ್ಶೇಪನನ್ನು ಪಶು ವಾಗಿ ಕಲ್ಪಿಸಿ ನರಮೇಧಯಾಗವನ್ನು ಮಾಡಿ ವರುಣನನ್ನು ಸಂತೋಷಪಡಿಸಿ, ಜಲೋದರ ರೋಗದಿಂದ ಮುಕ್ತನಾದ [ಭಾಗ.-೯-೭ ಹರಿ -೧-೧೩]. ಹರಿಶ್ಚಂದ್ರ ವಿಶ್ವಾಮಿತ್ರನ ಮೂಲಕ ರಾಜ್ಯಭ್ರಷ್ಟನಾಗಿ ಪತ್ನೀಪುತ್ರರೊಂದಿಗೆ ಕಾಶೀಪಟ್ಟಣ ವನ್ನು ಸೇರಿ, ಹೆಂಡತಿಯನ್ನು ಕಾಲಕೌಶಿಕನೆಂಬ ಬ್ರಾಹ್ಮಣನಿಗೆ ಮಾರಿ, ತನ್ನನ್ನು ವೀರಬಾಹುವೆಂಬ ಚಂಡಾಲನಿಗೆ ವಿಕ್ರಯಿಸಿ, ಅನೇಕ ಕಷ್ಟಗಳನ್ನು ಅನುಭವಿಸಿ, ಪರಮೇಶ್ವರನ ಅನುಗ್ರಹದಿಂದ ವಿಶ್ವಾಮಿತ್ರನ ಮೂಲಕ ತನ್ನ ರಾಜ್ಯವನ್ನು ಪಡೆದು, ಪತ್ನೀ ಪುತ್ರರೊಂದಿಗೆ ಸುಖದಿಂದಿದ್ದ [ಭಾರ -ಸ ೧೨ ವನ. ೭೭ ಭಾಗ - ೯-೭. ವಾಯು -೮೮. ಬ್ರಹ್ಮ-೧೦೪. ಮಾರ್ಕಂ -೭-೯ ದೇ.ಭಾ -ಸ್ಕಂ. ೭. ಅಧ್ಯಾ. ೧೪-೨೭]. (ದೇವೀಭಾಗವತದಲ್ಲಿ ವರ್ಣಿತನಾಗಿರುವ ಹರಿಶ್ಚಂದ್ರನ ಕಥೆ ಕೆಲವು ವಿಷಯಗಳಲ್ಲಿ ವ್ಯತ್ಯಸ್ತವಾಗಿದೆ )

**ಹರೀ.**—ದಕ್ಷಪುತ್ರಿಯಾದ ಕ್ರೋಧವಶಾ ಎಂಬವಳಲ್ಲಿ ಕಶ್ಯಪ ಮುನಿಯಿಂದ ಜನಿಸಿದವಳು. ವಾನರ, ಗೋಲಾಂಗೂಲ ಎಂಬ ಪ್ರಾಣಿಜಾತಿಯನ್ನು ಸೃಷ್ಟಿಸಿದವಳು [ಭಾರ -ಆದಿ. ೬೭]

**ಹರ್ಯಶ್ವ** —(1) ದಕ್ಷಬ್ರಹ್ಮನಿಂದ ಅಸಿಕ್ನಿಯೆಂಬ ಪತ್ನಿಯಲ್ಲಿ ಜನಿಸಿದ ಪುತ್ರ ರಿಗೆ ಈ ಹೆಸರು ಸಲ್ಲುತ್ತದೆ. ಇವರೆಲ್ಲರೂ ನಾರದನ ಉಪದೇಶಾನುಸಾರ ಲೋಕ ವಿಮುಖರಾಗಿ ವೈರಾಗ್ಯವನ್ನು ತಳೆದು ಮುಕ್ತಿಯನ್ನು ಪಡೆದರು. ನೋಡು— ಶಬಲಾಶ್ವ, ದಕ್ಷ, ನಾರದ [ವಿಷ್ಣು -೧, ೭, ೧೫. ಭಾಗ.-೬-೫ ಹರಿ.-೧-೩. ವಾಯು.-೧೦].

(ii) ಒಬ್ಬ ಅರಸು. ಸೂರ್ಯ ವಂಶದ ಇಕ್ಷ್ವಾಕು ರಾಜನ ಸಂತತಿಯಲ್ಲಿ ಜನಿಸಿದ ಅನರಣ್ಯ ರಾಜನ ಮಗ. ನೋಡು—ಅನರಣ್ಯ. ಅಯೋಧ್ಯೆಗೆ ಅರಸ ನಾಗಿದ್ದ. ಈತ ಯಯಾತಿ ರಾಜನ ಮಗಳಾದ ಮಾಧವಿಯೆಂಬ ತರುಣಿಯಲ್ಲಿ ವಸು ಮನಸನೆಂಬ ತನಯನನ್ನು ಪಡೆದ. ನೋಡು—ಗಾಲವ, ಮಾಧವೀ, ವಿಶ್ವಾಮಿತ್ರ [ಭಾರ.-ಉದ್ಯೋ. ೧೧೫]. ಈತ ಮಧುವೆಂಬ ರಾಕ್ಷಸನ ಮಗಳಾದ ಮಧುಮತಿ

ಯೆಂಬ ತರುಣಿಯನ್ನು ಮದುವೆಯಾಗಿ ಯದುವೆಂಬ ಕುಮಾರನನ್ನು ಪಡೆದ [ಹರಿ.-೨-೩೭].

(iii) ಒಬ್ಬ ಅರಸು. ಕಾಶೀ ದೇಶವನ್ನು ಪಾಲಿಸುತ್ತಿದ್ದ. ಈತನ ಮಗ ಸುದೇವ. ಈ ಸುದೇವ ಸುಪ್ರಸಿದ್ಧನಾದ ದಿವೋದಾಸನೆಂಬ ತನಯನನ್ನು ಪಡೆದ [ಭಾರ.-ಅನು. ೮].

**ಹಲಾಯುಧ.**—ಹಲಾ = ನೇಗಿಲು. ನೇಗಿಲೇ ಆಯುಧವಾಗಿ ಉಳ್ಳವ. ಬಲರಾಮ [ಭಾರ.-ಸಭಾ. ೭೬].

**ಹಸ್ತಾ.**—ಒಂದು ನಕ್ಷತ್ರ. ದಕ್ಷನ ಮಗಳು ಚಂದ್ರನ ಇಪ್ಪತ್ತೇಳು ಮಂದಿ ಪತ್ನಿಯರಲ್ಲಿ ಒಬ್ಬಳು. ನೋಡು—ದಕ್ಷ [ವಿಷ್ಣು.-೧-೧೫. ಭಾಗ.-೬-೫. ಭಾರ - ಆದಿ. ೬೭].

**ಹಸ್ತಿ.**—ಒಬ್ಬ ಅರಸು ಚಂದ್ರ ವಂಶದ ಮನ್ಯುವೆಂಬ ಅರಸನ ಹಿರಿಯ ಮಗನಾದ ಬೃಹತ್‌ಕ್ಷತ್ರನ ಮಗ ಈತ ತನ್ನ ರಾಜ್ಯಭಾರ ಸಮಯದಲ್ಲಿ ಅತ್ಯುತ್ತಮನಾದ ಒಂದು ದೊಡ್ಡ ಪಟ್ಟಣವನ್ನು ನಿರ್ಮಿಸಿದ ಇದೇ ಹಸ್ತಿನಾವತಿ. ಹಸ್ತಿ ರಾಜ ನಿರ್ಮಿಸಿದ ಪಟ್ಟಣವಾದ ಪ್ರಯುಕ್ತ ಆ ಪಟ್ಟಣ ಹಸ್ತಿನಾವತಿಯೆಂಬುದಾಗಿ ಪ್ರಸಿದ್ಧಿಪಡೆದಿದೆ [ಭಾಗ.-೯-೨೧] ಒಬ್ಬ ಅರಸು. ಚಂದ್ರ ವಂಶದ ಸುಹೋತ್ರನೆಂಬ ರಾಜನಿಂದ ಜಯಂತಿಯೆಂಬವಳಲ್ಲಿ ಜನಿಸಿದವ ಈತನ ಮಗನಾದ ವಿಕುಂಜನ ರಾಜ ಯಶೋದೆಯೆಂಬ ತರುಣಿಯನ್ನು ಮದುವೆಯಾಗಿ ವಿಕುಂಜನನೆಂಬ ಮಗನನ್ನು ಪಡೆದ. ಜಯಂತಿಗೆ ಸುವರ್ಣಾ ಎಂತಲೂ, ವಿಕುಂಜನನಿಗೆ ವಿಕುಂಠನನೆಂತಲೂ ಯಶೋದೆಗೆ ಯಶೋಧರೆಯೆಂತಲೂ ನಾಮಾಂತರಗಳಿವೆ. ಈ ಹಸ್ತಿ ರಾಜ ತನ್ನ ರಾಜ್ಯಭಾರ ಸಮಯದಲ್ಲಿ ಒಂದು ದೊಡ್ಡ ಪಟ್ಟಣವನ್ನು ನಿರ್ಮಿಸಲಾಗಿ ಆ ಪಟ್ಟಣ ಹಸ್ತಿನಾವತಿಯೆಂದು ಪ್ರಖ್ಯಾತಿಪಡೆಯಿತು [ಭಾರ -ಆದಿ. ೬೩].

**ಹಸ್ತಿನಾಪುರ(ವತಿ).**—ಮೇಲೆ ಹೇಳಿದ ಹಸ್ತಿಯೆಂಬ ಅರಸ ನಿರ್ಮಿಸಿದ ಪಟ್ಟಣ. ಕುರು ಪಾಂಡವರ ರಾಜಧಾನಿ [ಭಾರ.-ಆದಿ. ೬೩]. ಇದು ಈಗಣ ಡಿಲ್ಲೀ ನಗರಕ್ಕೆ ವಾಯುವ್ಯ ದಿಕ್ಕಿನಲ್ಲಿದ್ದಿತೆಂತಲೂ ಈಗ ಸಂಪೂರ್ಣವಾಗಿ ಗಂಗೆಯ ಮರಳು ದಿಣ್ಣೆಯಲ್ಲಿಯೂ ಮತ್ತು ಪ್ರವಾಹದಲ್ಲಿಯೂ ಹೂತುಹೋಗಿದೆಯೆಂತಲೂ ಹೇಳುತ್ತಾರೆ. ಮೊದಲು ಈ ಪಟ್ಟಣ ಗಂಗೆಯ ದಕ್ಷಿಣ ಪಾರ್ಶ್ವದ ದಡದಲ್ಲಿ ಮೀರಟ್ ನಗರದಿಂದ ಇಪ್ಪತ್ತೆರಡು ಮೈಲುಗಳ ದೂರದಲ್ಲಿ ಮೀರಟ್ಟಿಗೆ ಈಶಾನ್ಯ ದಿಕ್ಕಿನಲ್ಲಿಯೂ ಬಿಜನೂರಿಗೆ ನೈರುತ್ಯ ಭಾಗದಲ್ಲಿಯೂ ಇದ್ದಿತೆಂದು ಊಹಿಸಿರುತ್ತಾರೆ. ಮೊದಲಿನ ಹಸ್ತಿನಾವತಿ ಹಾಳಾದ ಬಳಿಕ ಈಗಣ ಡಿಲ್ಲೀ ನಗರ ಚಂದ್ರ ವಂಶದ ಅರಸರ ರಾಜಧಾನಿಯಾಯಿತು.

**ಹಾಲಾಹಲ.**—(i) ವಿಷ. ದೇವ ದಾನವರು ಪಾಲ್ಗಡಲನ್ನು ಕಡೆದಾಗ ಅಲ್ಲಿಂದ ಹುಟ್ಟಿದ ಹದಿನಾಲ್ಕು ವಸ್ತುಗಳಲ್ಲಿ ಒಂದು. ಇದರ ವೇಗದಿಂದ ಮೂಲೋಕವೂ ತಲ್ಲಣಿಸುತ್ತಿರಲಾಗಿ ಶಿವ ಇದನ್ನು ತನ್ನ ಕೊರಳಿನಲ್ಲಿ ಧರಿಸಿದ [ಲಿಂಗ.-ಉತ್ತ. ೬. ಭಾಗ.-೮-೭].

(ii) ಒಬ್ಬ ರಾಕ್ಷಸ. ಶಿವನೂ ವಿಷ್ಣುವೂ ಇಬ್ಬರೂ ಸೇರಿ ಇವನನ್ನು ಕೊಂದರು [ದೇ. ಭಾಗ.-೭-೨೯-೩೦].

**ಹಿಡಿಂಬ.**—ಒಬ್ಬ ರಾಕ್ಷಸ. ಕಿರ್ಮೀರನ ಒಡಹುಟ್ಟಿದವ [ಭಾರ.-ವನ. ೧೧, ೧೨]. ಪಾಂಡವರು ಅರಗಿನ ಮನೆಯಿಂದ ಹೊರಬಿದ್ದು ಅರಣ್ಯವನ್ನು ಸೇರಿದಾಗ ಭೀಮನನ್ನು ಕೆಣಕಿ ಆತನಿಂದ ಮಡಿದ. ನೋಡು—ಭೀಮ [ಭಾರ.-ಆದಿ. ೬೧, ೬೩, ೧೬೬]. ಇವನ ತಂಗಿಯಾದ ಹಿಡಿಂಬೆ ಅಥವಾ ಕಮಲಪಾಲಿಕೆಯೆಂಬವಳು ಭೀಮನನ್ನು ಮದುವೆಯಾಗಿ ಘಟೋತ್ಕಚನೆಂಬ ಮಗನನ್ನು ಪಡೆದಳು [ಭಾರ.-ಆದಿ. ೧೬೪].

**ಹಿಡಿಂಬಾ(ಬಿ).**—ಹಿಡಿಂಬನ ತಂಗಿ. ನೋಡು—ಘಟೋತ್ಕಚ, ಭೀಮ, ಹಿಡಿಂಬ. ಇವಳಿಗೆ ಕಮಲಪಾಲಿಕೆಯೆಂಬುದು ನಾಮಾಂತರ. ಹಿಡಿಂಬೆ ದಿವ್ಯಜ್ಞಾನ ಯುಕ್ತಳು [ಭಾರ.-ಆ. ೧೬೭].

**ಹಿಮವನ್ತ**—ಒಂದು ಪರ್ವತ ಉತ್ತರ ದಿಕ್ಕಿನಲ್ಲಿದೆ [ಭೀ. ೬]. ಮೇಲೆ ಹೇಳಿದ ಹಿಮವತ್ಪರ್ವತದ ಅಭಿಮಾನದೇವತೆಗೂ ಈ ಹೆಸರು ಸಲ್ಲುತ್ತದೆ. ಈತ ಪಿತೃದೇವತೆಗಳ ಮಾನಸಪುತ್ರಿಯಾದ ಮೇನೆಯೆಂಬವಳನ್ನು ಮದುವೆಯಾಗಿ ಮೈನಾಕನೆಂಬ ಪುತ್ರನನ್ನೂ, ಅಪರ್ಣಾ, ಏಕಪರ್ಣಾ, ಏಕಪಾಟಲಾ ಎಂಬ ಮೂವರು ಪುತ್ರಿಯರನ್ನೂ ಪಡೆದ. ಅಪರ್ಣೆ ಶಿವನನ್ನೂ, ಏಕಪರ್ಣೆ ಅಸಿತ ಮುನಿಯನ್ನೂ, ಏಕಪಾಟಲೆ ಜೈಗೀಷವ್ಯ ಮಹರ್ಷಿಯನ್ನೂ ಮದುವೆಯಾದರು [ಹರಿ.-೧-೧೮. ಮತ್ಸ್ಯ.-೧೩ ಲಿಂಗ.-೧೦೧-೧೦೩]. ಹಿಮಾಲಯವರ್ಣನೆ [ಮತ್ಸ್ಯ.-೧೧೩]. ಹಿಮವತ್ಪರ್ವತದ ಉತ್ತರಭಾಗ ಸ್ವರ್ಗತುಲ್ಯವೆನಿಸಿ ದೇವಭೂಮಿಯೆಂದು ಪ್ರಖ್ಯಾತಿಗೊಂಡಿದೆ [ಭಾರ.-ಶಾಂತಿ. ೧೯೦ ಲಿಂಗ -೨೩೪-೨೩೮] ಈ ಪರ್ವತದಿಂದ ಗಂಗಾ, ಸಿಂಧು, ಸರಯೂ, ಸರಸ್ವತಿ, ಶತದ್ರು, ಚಂದ್ರಭಾಗಾ, ಯಮುನಾ, ಇರಾವತಿ, ವಿತಸ್ತಾ, ವಿಶಾಲಾ, ದೇವಿಕಾ, ಕುಹೂ, ಗೋಮತಿ, ಧೂತಪಾಪಾ, ಬಾಹುದಾ, ದೃಷದ್ವತಿ, ಕೌಶಿಕಿ, ನಿಶ್ಚಲಾ, ಗಂಡಕಿ, ಇಕ್ಷುಮತಿ, ಲೋಹಿತಾ, ಕೃತಮಾಲಾ ಎಂಬ ನದಿಗಳು ಹರಿಯುತ್ತವೆ [ಮತ್ಸ್ಯ.-೧೧೪].

**ಹಿರಣ್ಮಯ(ವರ್ಷ).**—ಪ್ರಿಯವ್ರತ ಪುತ್ರನಾದ ಅಗ್ನೀಧ್ರ ಮಹಾರಾಜನಿಂದ ಪೂರ್ವಚಿತ್ತಿಯೆಂಬ ಅಪ್ಸರಸಿಯಲ್ಲಿ ಜನಿಸಿದ ಒಂಬತ್ತು ಮಂದಿ ಪುತ್ರರಲ್ಲಿ ಆರನೆಯವ. ಅಗ್ನೀಧ್ರ ತನ್ನ ಆಳಿಕೆಗೆ ಒಳಪಟ್ಟಿದ್ದ ಜಂಬೂದ್ವೀಪವನ್ನು ತನ್ನ ಒಂಬತ್ತು

ಮಂದಿ ಮಕ್ಕಳಿಗೂ ಹಂಚಿಕೊಟ್ಟಾಗ ಶ್ವೇತ ಮತ್ತು ಶೃಂಗವಂತವೆಂಬ ಪರ್ವತಗಳ ಮಧ್ಯದಲ್ಲಿರುವ ಭೂಭಾಗ ಹಿರಣ್ಮಯನ ಪಾಲಿಗೆ ಬಂತು ಹೀಗಾಗಿ ಹಿರಣ್ಮಯ ರಾಜ ಕಾಪಾಡಿದ ಭೂಭಾಗ ಹಿರಣ್ಮಯವರ್ಷವೆಂದು ಪ್ರಖ್ಯಾತಿಗೊಂಡಿತು ಇದರ ಪಶ್ಚಿಮ ಭಾಗದಲ್ಲಿ ಲವಣ ಸಮುದ್ರವಿದೆ ನೋಡು:—ಅಗ್ನೀಧ್ರ, ಜಂಬೂದ್ವೀಪ, ನಾಭಿ, ಕಿಂಪುರುಷ, ಹರಿ, ಇಲಾವೃತ, ರಮ್ಯಕ, ಕುರು, ಭದ್ರಾಶ್ವ, ಕೇತುಮಾಲ ಎಂಬವು ಜಂಬೂದ್ವೀಪದ ಇತರ ಖಂಡಗಳು [ಭಾರ.-ಸ ೨೮. ಭೀ. ೬. ಭಾಗ.-೫-೨. ವಿಷ್ಣು.-೨-೧].

**ಹಿರಣ್ಯಕಶಿಪು** —(1) ಒಬ್ಬ ರಾಕ್ಷಸ ಕಶ್ಯಪ ಮುನಿಯಿಂದ ದಿತಿಯೆಂಬ ಪತ್ನಿಯಲ್ಲಿ ಜನಿಸಿದ ಇಬ್ಬರು ಪುತ್ರರಲ್ಲಿ ಹಿರಿಯವ. ಹಿರಣ್ಯಾಕ್ಷ ಇವನ ತಮ್ಮ ಸಿಂಹೆಯೆಂಬವಳು ಇವನ ತಂಗಿ ಸಿಂಹಿಕೆಯನ್ನು ವಿಪ್ರಚಿತ್ತಿಯೆಂಬ ರಾಕ್ಷಸ ಮದುವೆಯಾದ ಹಿರಣ್ಯಕಶಿಪುವಿಗೆ ಅನುಹ್ಲಾದ, ಹ್ಲಾದ, ಪ್ರಹ್ಲಾದ, ಸಂಹ್ಲಾದ ರೆಂಬುದಾಗಿ ನಾಲ್ವರು ಪುತ್ರರು ಇವರೆಲ್ಲರೂ ಪರಾಕ್ರಮಸಂಪನ್ನರೆನಿಸಿ ದೈತ್ಯವಂಶ ವನ್ನು ಅಭಿವೃದ್ಧಿಗೊಳಿಸಿದರು. ಈ ನಾಲ್ವರಲ್ಲಿ ಪ್ರಹ್ಲಾದನೆಂಬ ಮಗ ಸರ್ವತ್ರಸಮ ದರ್ಶಿಯೆನಿಸಿ ಜಿತೇಂದ್ರಿಯನಾಗಿ ಮಹಾಮಹಿಮನೆನಿಸಿದ್ದು ಕೇವಲ ವಿಷ್ಣುಭಕ್ತ ನಾಗಿದ್ದ [ವಿಷ್ಣು.-೧-೧೫]. ದಿತಿಯ ಮಕ್ಕಳಲ್ಲಿ ಹಿರಣ್ಯಾಕ್ಷ ಹಿರಿಯವ. ಹಿರಣ್ಯ ಕಶಿಪು ಕಿರಿಯವ [ಭಾಗ.-೩-೧೫]. ಹಿರಣ್ಯಕಶಿಪು ಜಂಭನೆಂಬ ರಾಕ್ಷಸನ ಮಗಳಾದ ಕಯಾಧುವೆಂಬವಳನ್ನು ಮದುವೆಯಾಗಿ ಪ್ರಹ್ಲಾದ, ಸಂಹ್ಲಾದ, ಅನುಹ್ಲಾದ, ಶಿಬಿ, ಬಾಷ್ಕಲರೆಂಬ ಐವರು ಪುತ್ರರನ್ನು ಪಡೆದ ನೋಡು—ಜಯ, ವಿಜಯ, ಪ್ರಹ್ಲಾದ [ಭಾಗ -೬-೧೮, ೭-೭. ಭಾರ -ಆದಿ. ೬೬]. ಹಿರಣ್ಯಾಕ್ಷನಿಗೆ ಹರಿಣಿಯೆಂಬ ಮಗ ಳಿದ್ದಳು. ಇವಳನ್ನು ಅಗ್ನಿದೇವ ಮದುವೆಯಾಗಿದ್ದ. ಹರಿಣಿಗೆ ರೋಹಿಣಿಯೆಂಬದು ನಾಮಾಂತರ [ಭಾರ.-ವನ ೨೨೩]. ಪ್ರಹ್ಲಾದ ವಿಷ್ಣುಭಕ್ತನಾಗಿದ್ದುದರಿಂದ ಹಿರಣ್ಯ ಕಶಿಪು ತನ್ನ ಮಗನನ್ನು ಕುರಿತು ತನಗೆ ಹಗೆಯಾದ ವಿಷ್ಣುವನ್ನು ಭಜಿಸುವುದು ತನಗೆ ಸಮ್ಮತವಲ್ಲವೆಂಬುದಾಗಿ ನಾನಾ ಪರಿಯಿಂದ ತಿಳಿಯಹೇಳಿದ. ಹಿರಣ್ಯಕಶಿಪು ವಿನ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಕೇವಲ ತಾಮಸಗುಣಪರಿಪೂರಿತ ನಾಗಿದ್ದ ಹಿರಣ್ಯಕಶಿಪು ಹೇಗಾದರೂ ಮಗನನ್ನು ತನ್ನ ದಾರಿಗೆ ತರಲೇಬೇಕೆಂದು ಹರತೊಟ್ಟು ಎಲ್ಲಿಗೂ ಸಾಧ್ಯವಾಗದಿರಲು, ಅವನನ್ನು ಕೊಂದಲ್ಲದೆ ತನಗೆ ಸುಖವಿಲ್ಲ ವೆಂಬ ಭಾವನೆಯಿಂದ, ಅನೇಕ ಮಾಟಗಳಿಂದಲೂ, ಶಂಬರನ ಮಾಯೆಗಳಿಂದಲೂ ಕೊಲ್ಲತೊಡಗಿದ. ಎಲ್ಲವೂ ವಿಫಲವಾಗಲಾಗಿ, ಸಮುದ್ರದಲ್ಲಿ ತಳ್ಳಿಸಿದ. ಪರ್ವತದಿಂದ ಕೆಡಹಿದ ಸರ್ಪಗಳಿಂದ ಕಚ್ಚಿಸಿದ ಆನೆಗಳಿಂದ ತುಳಿಸಿದ. ಬೆಂಕಿಯಲ್ಲಿ ನೂಕಿಸಿದ. ವಿಷಮಿಶ್ರವಾದ ಆಹಾರವನ್ನು ತಿನ್ನಿಸಿದ. ಕಡೆಗೆ ಪ್ರಹ್ಲಾದನನ್ನು ಕೊಲ್ಲುವುದಕ್ಕಾಗಿ

ತಾನೇ ಖಡ್ಗವನ್ನು ಎತ್ತಿದ. ಆಗ ವಿಷ್ಣು ನೃಸಿಂಹರೂಪವನ್ನು ಧರಿಸಿ, ಸಭಾ ಮಂಟಪದ ಸ್ತಂಭದಿಂದ ಹೊರಬಂದು ಸಂಧ್ಯಾಸಮಯದಲ್ಲಿ ಬಾಗಿಲ ಹೊಸ್ತಿಲ ಮೇಲೆ ಕುಳಿತು ಹಿರಣ್ಯಕಶಿಪುವಿನ ದೇಹವನ್ನು ತನ್ನ ತೊಡೆಯಮೇಲಿಟ್ಟುಕೊಂಡು, ಹರಿತವಾದ ಉಗುರುಗಳಿಂದ ಅವನ ಎದೆಯನ್ನು ಸೀಳಿ ಕೊಂದ [ಭಾಗ.-೭, ೩. ಮತ್ಸ್ಯ.-೧೬೧-೧೬೪. ದೇ.ಭಾ.-೪-೧೬. ವಿಷ್ಣು -೧-೧೫-೧೭]. ಹಿರಣ್ಯಕಶಿಪುವಿನ ವಧೆ ಈಗ ನಡೆಯುತ್ತಿರುವ ವೈವಸ್ವತಮನ್ವಂತರದ ನಾಲ್ಕನೆಯ ಪರ್ಯಾಯದ ಕೃತಯುಗದಲ್ಲಿ ನಡೆಯಿತು ನೋಡು—ನೃಸಿಂಹ, ಪ್ರಹ್ಲಾದ. ಹಿರಣ್ಯಕಶಿಪು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ತನಗೆ ಬ್ರಹ್ಮನಿಂದ ಸೃಷ್ಟನಾದ ಯಾವ ಪ್ರಾಣಿಯಿಂದಲೂ, ಒಳಗೂ, ಹೊರಗೂ, ಹಗಲೂ, ರಾತ್ರಿಯೂ, ಯಾವ ಆಯುಧದಿಂದಲೂ ಮರಣವಾಗದಂತೆ ವರವನ್ನು ಪಡೆದು, ಅದರ ಬಲದಿಂದ ಕೊಬ್ಬಿ, ದಿಕ್ಪಾಲಕರನ್ನು ಸದೆಬಡಿದು, ಅವರ ಅಧಿಕಾರಗಳನ್ನೆಲ್ಲ ಆಕ್ರಮಿಸಿ ವಿಷ್ಣು ದ್ವೇಷಿಯಾಗಿದ್ದ [ಭಾಗ.-೭-೩. ಮತ್ಸ್ಯ.-೧೬೧, ೧೬೨].

(11) ಮತ್ತೊಬ್ಬ ರಾಕ್ಷಸ. ಇವ ಕಶ್ಯಪ ಮುನಿಯಿಂದ ದನುವೆಂಬ ಪತ್ನಿಯಲ್ಲಿ ಜನಿಸಿದವ ಇವನೂ ತಪಸ್ಸುಮಾಡಿ ಅನೇಕ ವರಗಳನ್ನು ಪಡೆದು, ಎಲ್ಲ ಲೋಕಗಳನ್ನೂ ಗೆದ್ದು, ಹತ್ತು ಕೋಟಿ ವರ್ಷಗಳವರೆಗೆ ನ್ಯಾಯದಿಂದ ರಾಜ್ಯಪರಿಪಾಲನೆಮಾಡಿದ. ಇವನಿಗೆ ಮಂದಾರನೆಂಬ ಪುತ್ರನಿದ್ದ. ಇವ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ವರಗಳನ್ನು ಪಡೆದು, ಹಲವು ಸಾರಿ ಇಂದ್ರನನ್ನು ಯುದ್ಧದಲ್ಲಿ ಸೋಲಿಸಿದ [ಭಾರ -ಅನು. ೧೪]. (ಮತ್ಸ್ಯಪುರಾಣದಲ್ಲಿ ವರ್ಣಿತವಾಗಿರುವ ಕಥೆಯಲ್ಲಿ ಹಿರಣ್ಯಕಶಿಪು ಪ್ರಹ್ಲಾದನನ್ನು ಹಿಂಸಿಸಿದ ಸುದ್ದಿಯೇ ಇಲ್ಲ. ನೃಸಿಂಹ ಇವನ ದುರುದುಂಬಿತನವನ್ನು ಸಹಿಸಲಾರದೆ ಬಂದು ಕೊಂದಂತೆ ಇದೆ )

**ಹಿರಣ್ಯಧನು(ಧೇನು)** —ಒಬ್ಬ ಬೇಡರ ಪಾಳೆಯಗಾರ ಏಕಲವ್ಯನ ತಂದೆ. ನೋಡು—ಏಕಲವ್ಯ, ದ್ರೋಣ [ಭಾರ -ಆದಿ ೧೪೨].

**ಹಿರಣ್ಯಪುರ.**—ಒಂದು ಪಟ್ಟಣ ಪಾತಾಳಲೋಕದಲ್ಲಿದೆ ಕಾಲಕೇಯ ಮತ್ತು ಪೌಲೋಮರೆಂಬ ರಾಕ್ಷಸರು ಇಲ್ಲಿ ವಾಸಮಾಡಿಕೊಂಡಿದ್ದು ಅನೇಕ ವೇಳೆ ದೇವತೆಗಳಿಗೆ ಅಪಕಾರಮಾಡುತ್ತಿದ್ದರು. ಅವರನ್ನು ಸಂಹರಿಸುವುದು ಇಂದ್ರನಿಗೆ ಸಾಧ್ಯವಾಗಿರಲಿಲ್ಲ. ಅರ್ಜುನ ಇಂದ್ರಕೀಲಪರ್ವತದಲ್ಲಿ ತಪಸ್ಸುಮಾಡಿ, ಅಷ್ಟದಿಕ್ಪಾಲಕರಿಂದ ಅನೇಕ ವರಗಳನ್ನೂ ಶಿವನಿಂದ ಪಾಶುಪತಾಸ್ತ್ರವನ್ನೂ ಸಂಪಾದಿಸಿದ. ಆಗ ಅಲ್ಲಿಗೆ ಬಂದಿದ್ದ ಇಂದ್ರ ತನ್ನ ಮಗನಾದ ಅರ್ಜುನನನ್ನು ಸಂಗಡ ಕರೆದುಕೊಂಡು ಹೋಗಿ, ಸ್ವರ್ಗಲೋಕದಲ್ಲಿಯೇ ಕೆಲವು ಕಾಲ ನಿಲ್ಲಿಸಿಕೊಂಡಿದ್ದ. ಆಗ ಅರ್ಜುನ ಇಂದ್ರನ ಹಗೆಗಳಾಗಿದ್ದ ನಿವಾತಕವಚರೆಂಬ ರಾಕ್ಷಸರನ್ನು ಕೊಂದು, ಆ ಬಳಿಕ

ಹಿರಣ್ಯಪುರವನ್ನು ಹೊಕ್ಕು ಅಲ್ಲಿ ವಾಸಮಾಡುತ್ತಿದ್ದ ಕಾಲಕೇಯರನ್ನೂ ಪೌಲೋಮ ರನ್ನೂ ಕೊಂದು, ಸಂತುಷ್ಟನಾದ ಇಂದ್ರನಿಂದ ವಿಶೇಷವಾಗಿ ಮನ್ನಣೆಯನ್ನು ಪಡೆದ [ಭಾರ.-ವ. ೧೭೫]. ಇಂದ್ರನ ಸಾರಥಿಯಾದ ಮಾತಲಿ ತನ್ನ ಮಗಳಾದ ಗುಣಕೇಶಿಗೆ ವರನನ್ನು ಹುಡುಕುವುದಕ್ಕಾಗಿ ಹೊರಟಾಗ ನಾರದನೊಂದಿಗೆ ಹಿರಣ್ಯಪುರಕ್ಕೆ ಹೋಗಿದ್ದ [ಭಾರ.-ಉದ್ಯೋ ೧೦೦].

**ಹಿರಣ್ಯಬಿನ್ದು.**—ಒಂದು ಪವಿತ್ರವಾದ ತೀರ್ಥ ಹಿಮವತ್ಪರ್ವತದ ಪಕ್ಕ ದಲ್ಲಿದೆ. ಅರ್ಜುನ ತೀರ್ಥಯಾತ್ರೆಗೆ ಹೊರಟಿದ್ದಾಗ ಈ ತೀರ್ಥವನ್ನು ಸಂದರ್ಶಿಸಿದ [ಭಾರ.-ಆದಿ. ೨೩೫].

**ಹಿರಣ್ಯರೇತಸ್.**—ಪ್ರಿಯವ್ರತ ರಾಜನ ಹತ್ತು ಮಂದಿ ಪುತ್ರರಲ್ಲಿ ಐದನೆ ಯವ. ಈತ ಘೃತಸಮುದ್ರದಿಂದ ಪರಿವೃತವಾದ ಕುಶದ್ವೀಪವನ್ನು ಆಳುತ್ತಿದ್ದು, ಕಡೆಗೆ ಆ ದ್ವೀಪವನ್ನು ಏಳು ಭಾಗಮಾಡಿ, ವಸು, ವಸುದಾನ, ದೃಢರುಚಿ, ನಾಭಿ ಗುಪ್ತ, ಸತ್ಯವ್ರತ, ವಿವಿಕ್ತ, ವಾಮದೇವರೆಂಬ ತನ್ನ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟ [ಭಾಗ -೫-೨೦ ದೇ ಭಾಗ -೮-೧೦೨]

**ಹಿರಣ್ಯರೋಮ.**—(1) ಜನಕ ವಂಶದ ಒಬ್ಬ ಅರಸು ನೋಡು—ಜನಕ.

(11) ರುಕ್ಮಿಣಿಯ ತಂದೆಯಾದ ಭೀಷ್ಮಕನ ನಾಮಾಂತರ [ಭಾರ -ಉ ೧೫೮].

**ಹಿರಣ್ಯವರ್ಮ.**—ಒಬ್ಬ ಅರಸು. ದಶಾರ್ಣ ದೇಶವನ್ನು ಪಾಲಿಸುತ್ತಿದ್ದ ದ್ರುಪ ದನ ಹಿರಿಯ ಮಗನಾದ ಶಿಖಂಡಿ ಈತನ ಮಗಳನ್ನು ಮದುವೆಯಾಗಿದ್ದ ನೋಡು —ಶಿಖಂಡಿ [ಭಾರ.-ಉ. ೧೮೯].

**ಹಿರಣ್ಯಹಸ್ತ.**—ಒಬ್ಬ ಮಹರ್ಷಿ. ಕಾಲವೃಕ್ಷನೆಂಬ ಮಹರ್ಷಿಯಿಂದ ಶಕುಂತಿ (ಪಕ್ಷಿ)ಯಲ್ಲಿ ಜನಿಸಿದವ ಈತ ಸೂರ್ಯ ವಂಶದ ಮದಿರಾಶ್ವ ರಾಜನ ಮಗಳಾದ ಸುಮಧ್ಯಮೆಯೆಂಬವಳನ್ನು ಮದುವೆಯಾಗಿದ್ದ [ಭಾರ.-ಶಾಂತಿ. ೨೪೦ ಅನು. ೨೦೦].

**ಹಿರಣ್ಯಾಕ್ಷ.**—ಒಬ್ಬ ರಾಕ್ಷಸ ಕಶ್ಯಪ ಮುನಿಯಿಂದ ದಿತಿಯಲ್ಲಿ ಜನಿಸಿದವ. ಹಿರಣ್ಯಕಶಿಪು ಇವನ ಒಡಹುಟ್ಟಿದವ ನೋಡು—ಹಿರಣ್ಯಕಶಿಪು [ಭಾರ.-ಶಾಂತಿ ೨೦೮]. ಇವ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ವರಗಳನ್ನು ಪಡೆದು ದೇವತೆಗಳನ್ನು ಪೀಡಿಸಿ ಲೋಕಕಂಟಕನಾಗಿರುವಲ್ಲಿ ವಿಷ್ಣು ವರಾಹಾವತಾರವನ್ನು ತಳೆದು ಇವನನ್ನು ಕೊಂದ [ಭಾಗ -೩, ೧೯. ವಾಯು.-೬. ಲಿಂಗ.-೯೪. ಮತ್ಸ್ಯ.-೨೪೭-೨೪೮. ಪದ್ಮ.-೬. ಶಿವ.-ಯುದ್ಧ ಖಂ. ೫೦]. ಹಿರಣ್ಯಾಕ್ಷನ ವಧೆ ಈಗ ನಡೆಯು ತ್ತಿರುವ ವೈವಸ್ವತ ಮನ್ವಂತರದ ಶ್ವೇತವರಾಹಕಲ್ಪದಲ್ಲಿ ನಡೆಯಿತು [ಮತ್ಸ್ಯ.-೪೮]. ನೋಡು—ವರಾಹ, ಜಯ, ವಿಜಯ. ಹಿರಣ್ಯಾಕ್ಷ ರುಷಾಭಾನು ಅಥವಾ ರುಶದ್ಭಾನು ವೆಂಬ ತರುಣಿಯನ್ನು ಮದುವೆಯಾಗಿ ಶಕುನಿ, ಶಂಬರ, ದೃಷ್ಟಿ, ಭೂತಸಂತಾಪನ,

ವೃಕ, ಕಾಲನಾಭ, ಮಹಾನಾಥ, ಹರಿಶ್ಮಶ್ರು, ಉತ್ಕಟ ಮುಂತಾದ ಅನೇಕ ಮಂದಿ ಪುತ್ರರನ್ನು ಪಡೆದ [ಭಾಗ.-೭-೨].

**ಹಿರಣ್ವತಿ.**—ಒಂದು ನದಿ. ಕುರುಕ್ಷೇತ್ರದ ಸಮೀಪದಲ್ಲಿ ಹರಿಯುತ್ತದೆ [ಭಾರ.-ಆದಿ. ೧೦೮. ಉದ್ಯೋ. ೧೬೦. ಭೀ. ೯. ಅನು. ೨೭೧].

**ಹೀನಜಾತಿ**—ಹೀನಯೋನಿಯಲ್ಲಿ ಜನಿಸಿದವರೂ ಕೂಡ ತಪೋಮಹಿಮೆಯಿಂದ ಬ್ರಹ್ಮರ್ಷಿ ಪದವಿಯನ್ನು ಪಡೆದರು. ಅವರ ದೊಡ್ಡಸ್ತಿಕೆಗೆ ಅವರವರ ಕರ್ಮಾನುಷ್ಠಾನವೇ ಕಾರಣವಲ್ಲದೆ ಜನ್ಮವಲ್ಲ [ಭಾರ-ಅನು. ೫೩]. ವಿದ್ಯೆಯನ್ನು ಹೀನಜಾತಿಯವರಿಂದಲೂ ಪರಿಗ್ರಹಮಾಡತಕ್ಕದ್ದು [ಭಾರ.-ಶಾಂತಿ. ೧೬೩].

**ಹೂಣ.**—ಒಂದು ದೇಶವಿಶೇಷ [ಭಾರ-ಭೀ ೯]

**ಹೂಹೂ.**—ಒಬ್ಬ ಗಂಧರ್ವ. ಕಶ್ಯಪ ಮುನಿಯಿಂದ ಅರಿಷ್ಟೆಯೆಂಬವಳಲ್ಲಿ ಜನಿಸಿದವ [ಭಾರ.-ಆದಿ ೬೬]. ಈತ ದೇವಲ ಮುನಿಯ ಶಾಪದಿಂದ ಮೊಸಳೆಯ ಜನ್ಮವನ್ನು ಪಡೆದು, ಇಂದ್ರದ್ಯುಮ್ನಸರೋವರದಲ್ಲಿದ್ದು ಗಜೇಂದ್ರನನ್ನು ಹಿಡಿದು, ವಿಷ್ಣುವಿನ ಚಕ್ರದಿಂದ ಮೊಸಳೆಯ ಜನ್ಮವನ್ನು ನೀಗಿಕೊಂಡು ತನ್ನ ಮೊದಲಿನ ರೂಪವನ್ನು ಪಡೆದ [ಭಾಗ.-೮-೪].

**ಹೃದಿಕ.**—ಒಬ್ಬ ಅರಸು. ಚಂದ್ರ ವಂಶದ ಯದುಕುಲದಲ್ಲಿ ಜನಿಸಿದವ. ಇವನ ಮಗ ಕೃತವರ್ಮ. ನೋಡು—ಕೃತವರ್ಮ [ಭಾರ.-ಆದಿ. ೬೪].

**ಹೃಷೀಕೇಶ.**—ವಿಷ್ಣುವಿನ ನಾಮಾಂತರ ಹೃಷೀಕ (ಇಂದ್ರಿಯಗಳಿಗೆ) ಈಶ = ಅಧಿಪತಿ ಇಂದ್ರಿಯಗಳನ್ನು ತನ್ನ ಇಷ್ಟಾನುಸಾರ ನಡೆಯಿಸತಕ್ಕವ.

ಹೃಷೀಕಾಣೀಂದ್ರಿಯಾಣ್ಯಾಹುಃ ತೇಷಾಮೀಶೋ ಯತೋ ಭವಾನ್ ।
ಹೃಷೀಕೇಶಸ್ತತೋ ವಿಷ್ಣೋ! ಖ್ಯಾತೋ ದೇವೇಷು ಕೇಶವ ॥

[ಭಾರ.-ಶಾಂತಿ. ೩೫೨].

**ಹೇಮಕೂಟ.**—ಸಪ್ತಕುಲಪರ್ವತಗಳಲ್ಲಿ ಒಂದು. ಇದು ಕಿಂಪುರುಷ ವರ್ಷಕ್ಕೆ ಉತ್ತರವಾಗಿ, ಹರಿವರ್ಷಕ್ಕೆ ದಕ್ಷಿಣದಲ್ಲಿ ಈ ಎರಡು ಭೂಖಂಡಗಳಿಗೂ ಮೇರೆಯ ರೂಪದಲ್ಲಿದೆ. ಇದಕ್ಕೆ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಲವಣ ಸಮುದ್ರವಿದೆ. ಇದರ ಶಿಖರಗಳಲ್ಲಿ ಒಂದಾದ ಕೈಲಾಸವೆಂಬ ಶಿಖರದಲ್ಲಿ ಕುಬೇರನ ರಾಜಧಾನಿಯಾದ ಅಲಕಾ ಪಟ್ಟಣವಿದೆ. ಸರಸ್ವತೀ ನದಿ ಇದರ ಒಂದು ಶಿಖರದಿಂದ ಹುಟ್ಟಿ ಹರಿಯುತ್ತದೆ [ಭಾರ.-ಸ. ೨೯. ಭೀ. ೬. ಶಲ್ಯ. ೯].

**ಹೇಮಾ.**—(i) ಭಾರತವರ್ಷದ ಒಂದು ನದಿ [ಭಾರ.-ಭೀ. ೯].

(ii) ಒಬ್ಬ ಅಪ್ಸರಸಿ. ದೇವತೆಗಳು ಈಕೆಯನ್ನು-ಮಯಾಸುರನಿಗೆ ಮದುವೆ ಮಾಡಿಕೊಟ್ಟರು. ಮಯ ತನ್ನ ಮಾಯಾಬಲದಿಂದ ಚಿತ್ರವಿಚಿತ್ರಕರಗಳಾದ

ಅಂಗಣ, ತೋಟ್ಟಿ, ಪಡಸಾಲೆ, ಉಪ್ಪರಿಗೆ, ಬಿಸಿಲುಮಾಳಿಗೆ, ಸೆಜ್ಜೆವನೆ, ಬೊಕ್ಕಸದ ಮನೆ, ನಡುಮನೆ, ಪೌಳಿ ಮುಂತಾದುವುಗಳಿಂದೊಪ್ಪುವ ದಿವ್ಯವಾದ ಒಂದು ಭವಂತಿಯನ್ನೂ ಅದರ ಸುತ್ತಲೂ ಅನೇಕ ಕ್ರೀಡೋದ್ಯಾನಗಳನ್ನೂ ಕೊಳಗಳನ್ನೂ ಕೃತ್ರಿಮಪರ್ವತಗಳನ್ನೂ ನಿರ್ಮಿಸಿ, ಆ ಭವಂತಿಯನ್ನು ನವರತ್ನತೋರಣಗಳಿಂದ ಸಿಂಗರಿಸಿ, ದೇವೇಂದ್ರನಿಗಿಂತಲೂ ಮಿಗಿಲಾದ ಸಂಪತ್ತಿನಿಂದ ಕೂಡಿ ಆ ತರುಣಿಯೊಂದಿಗೆ ಐನೂರು ವರ್ಷಗಳ ಕಾಲ ಸಂಸಾರಮಾಡಿಕೊಂಡಿದ್ದು, ಮಾಯಾವಿ ದುಂದುಭಿಯೆಂಬ ಇಬ್ಬರು ಪುತ್ರರನ್ನೂ ಮಂಡೋದರಿಯೆಂಬ ಮಗಳನ್ನೂ ಪಡೆದ. ಹೇಮೆ ಕೆಲವು ಕಾಲದ ತರುವಾಯ ಮಯನನ್ನು ಬಿಟ್ಟು ದೇವಲೋಕಕ್ಕೆ ಹೋದಳು. ಮಯ ತನ್ನ ಪ್ರೇಯಸಿಯ ಸಂತೋಷಕ್ಕಾಗಿ ನಿರ್ಮಿಸಿದ್ದ ಭವಂತಿಯಲ್ಲಿ ಆಕೆಯನ್ನು ಅಗಲಿ ತಾನೊಬ್ಬನೇ ಇರಲೊಲ್ಲದೆ ಅಲ್ಲಿಂದ ತನ್ನ ಮಗಳನ್ನು ಸಂಗಡ ಕರೆದುಕೊಂಡು ಒಂದು ಅರಣ್ಯದಲ್ಲಿ ಬರುತ್ತಿದ್ದಾಗ ಅಲ್ಲಿಗೆ ಬೇಟೆಗಾಗಿ ಬಂದಿದ್ದ ರಾವಣನನ್ನು ಕಂಡು ಅವನ ವಂಶಾವಳಿಯನ್ನು ವಿಚಾರಿಸಿ, ತನ್ನ ಮಗಳನ್ನು ರಾವಣನಿಗೆ ಕೊಟ್ಟು ಮದುವೆಮಾಡಿದ. ನೋಡು—ಶಾಂಡಿಲಿ, ಸ್ವಯಂಪ್ರಭಾ [ವಾ.ರಾ.-ಉತ್ತ. ೧೨].

**ಹೈಡಿಂಬ.**—ಹಿಡಿಂಬೆಯ (ಕಮಲಪಾಲಿಕೆಯ) ಮಗನಾದ ಘಟೋತ್ಕಚ [ಭಾರ.-ಭೀ. ೮೩].

**ಹೈಮವತಿ.**—(i) ಹಿಮವತ್ಪರ್ವತದಿಂದ ಹುಟ್ಟಿ ಹರಿಯುವ ನದಿ. ಶತದ್ರೂ ನದಿಗೆ ರೂಢವಾಗಿದೆ ನೋಡು—ಶತದ್ರು, ವಸಿಷ್ಠ [ಭಾರ.-ಆ. ೧೯೩. ಸ ೯. ಭೀ. ೯].

(ii) ಹಿಮವತ್ಪುತ್ರಿಯಾದ ಪಾರ್ವತಿ.

(iii) ವಿಶ್ವಾಮಿತ್ರ ಮಹರ್ಷಿಯ ಹೆಂಡತಿ [ಭಾರ.-ಉ. ೧೧೭].

**ಹೈಹಯ.**—ಸೂರ್ಯ ವಂಶದ ಅರಸು. ಶರ್ಯಾತಿ ರಾಜನ ಮಗ. ನೋಡು—ವೀತಹವ್ಯ, ಕಾರ್ತವೀರ್ಯಾರ್ಜುನ [ಭಾರ.-ಅನು. ೮].

**ಹೋತ್ರವಾಹನ.**—ಒಬ್ಬ ಅರಸು. ಕಾಶೀ ರಾಜನ ಮಾವ. ಅಂಬಾ, ಅಂಬಿಕಾ, ಅಂಬಾಲಿಕೆಯರ ಮಾತಾಮಹ [ಭಾರ.-ವನ. ೨೬. ಉದ್ಯೋ. ೧೭೬].

**ಹ್ರದಪ್ರವೇಶಪರ್ವ.**—ಭಾರತ ಯುದ್ಧದ ಹದಿನೆಂಟನೆಯ ದಿನ ಶಲ್ಯನೂ ಮಡಿದ ತರುವಾಯ ದುರ್ಯೋಧನ ಮಡುವನ್ನು ಹೊಕ್ಕು ಅವಿತುಕೊಂಡಿದ್ದದ್ದು ಮುಂತಾಗಿ [ಭಾರ.-ಶಲ್ಯ. ೨೮-೫೫].

**ಹ್ರಸ್ವರೋಮ.**—ಜನಕ ವಂಶದ ಅರಸು. ಸೀರಧ್ವಜ, ಕುಶಧ್ವಜರೆಂಬವರು ಇವನ ಪುತ್ರರು. ಸೀರಧ್ವಜ ಸೀತೆಯ ಸಾಕುತಂದೆ. ನೋಡು—ಜನಕ,

**ಹ್ರಾದಿನೀ.**—ಭಾರತವರ್ಷದ ಒಂದು ನದಿ. ಸುದಾಮವೆಂಬ ಪರ್ವತದಿಂದ ಹುಟ್ಟಿ ಹರಿಯುತ್ತದೆ [ವಾ.ರಾಮಾ.-ಅಯೋ. ೭೧].

**ಹ್ರೀ.**—ದಕ್ಷಬ್ರಹ್ಮನ ಮಗಳು. ಮಹಾಲಕ್ಷ್ಮಿಯ ಅಂಶದಿಂದ ಜನಿಸಿದವಳು. ಈಕೆ ಧರ್ಮಪುರುಷನನ್ನು ಮದುವೆಯಾಗಿದ್ದಳು [ಭಾರ.-ಆದಿ. ೬೮].

---

## PUBLICATIONS OF THE MYSORE UNIVERSITY

### I. ENGLISH

| | PRICE Rs. A. P. |
|---|---|
| 1 **The Mysore Tribes and Castes.** By H. V NANJUNDAYYA, M A., M L, C I.E. and DIWAN BAHADUR L K. ANANTHAKRISHNA IYER, B.A., M.D HON (BRES ) Four Volumes *Volume II*, 1928 ; *Volume III*, 1930 , *Volume IV*, 1931 . *Volume I*, 1935. Each Volume is profusely illustrated Volume I | 15 0 0 |
| Other Volumes each | 12 8 0 |
| APPENDIX to the Four Volumes of the Mysore Tribes and Castes | |
| 2 **Pramana Samuccaya of Acarya Dinnaga** CHAP. I. By H R RANGASWAMI IYENGAR, M.A. | 3 0 0 |
| 3 **Labour and Housing in Bangalore City.** By C. NARASIMHA MOORTY, M.A. and R K SRINIVASAN, M.A. | 0 8 0 |
| 4 **The Munro System of British Statesmanship in India** By K. N. VENKATASUBBA SASTRY, M.A , PH D , F R HIST S | 3 0 0 |
| 5 **Sources of Karnataka History, Vol I.** By S SRIKANTA SASTRY, M.A. Ordinary | 3 0 0 |
| Special | 3 8 0 |

### II. KANNADA

(*a*) *General*

| | |
|---|---|
| 1. **History of Kannada Language** | |
| 2 **History of Kannada Literature** By PRAKTANAVIMARSA VICHAKSHANA MAHAMAHOPADHYAYA RAO BAHADUR R NARASIMHACHAR, M.A., M.R.A S Each | 1 0 0 |
| 3. **Kannada Kaipidi, Vol I** Ordinary | 1 4 0 |
| Special | 1 12 0 |

(*b*) *Mysore University Kannada Publication Series*

| | |
|---|---|
| 1. **Harischandrakavya Sangraha** Abridged and Edited by T. S. VENKANNAIYA, and A. R. KRISHNA SASTRY, M.A. | 0 12 0 |
| 2. **Kadambari Sangraha.** Abridged and Edited by T. S. VENKANNAIYA, M.A. .. ,, | 0 12 0 |

| | | PRICE | RS. | A | P. |
|---|---|---|---|---|---|
| 3. | **Prabhulingaleeleya Sangraha** Abridged and Edited by M S BASAVALINGAIYA, M A, B L., and M. R. SRINIVASA MOORTY, B A. | | 0 | 12 | 0 |
| 4. | **Sakratisana Koneya Dinagalu** Translation of Four Socratic Dialogues with an Introduction. By A N. MURTY RAO, M A | Ordinary | 0 | 12 | 0 |
| | | Calico | 1 | 0 | 0 |
| 5. | **Sri Ramakrishna Paramahamsa** By K V. PUTTAPPA, M.A | Ordinary | 0 | 12 | 0 |
| | | Calico .. | 1 | 4 | 0 |
| 6 | **Rabindranath Tagore.** By M. VENKATESA IYENGAR, M A | . Ordinary | 0 | 12 | 0 |
| | | Calico .. | 1 | 4 | 0 |
| 7. | **Arogya**: Adara Jnana mattu Sadhana. By J A ISWARAMURTY, B A., L.M.S., B.Sc | Ordinary | 0 | 12 | 0 |
| | | Calico | 1 | 4 | 0 |
| 8. | **Pamparamayana Sangraha.** By ASTANA MAHAVIDWAN TIRIVALLUR SRINIVASA-RAGHAVACHAR and D. L NARASIMHACHAR, M.A. .. .. | Ordinary . | 0 | 12 | 0 |
| | | Calico .. | 1 | 0 | 0 |
| 9. | **Hana Prapancha** By V SITHARAMIAH, M.A .. | Ordinary | 0 | 12 | 0 |
| | | Calico | 1 | 4 | 0 |
| 10 | **Sanskrit Drama.** By KRISHNA SASTRY, M A. .. | Ordinary . | 0 | 12 | 0 |
| | | Calico | 1 | 4 | 0 |
| 11. | **Jiva Vignana.** [illegible] ANARANAPPA, M.A. | Ordinary | 0 | 12 | 0 |
| | | Calico . | 1 | 4 | 0 |
| 12. | **Hindu D**[illegible] MAHAMAHOPADHYAYA [illegible]ARATNAM L SRINIVASACHA[illegible] | Ordinary | 0 | 12 | 0 |
| | | Cali[illegible] | 1 | 4 | 0 |
| 13 | **Raja**[illegible] By H. KRISHNA RAO, M | Ordinary | 0 | 12 | 0 |
| | | Calico .. | 1 | 4 | 0 |
| 14. | **Hadibadeyadharma.** By SRI D CHAMPABAI, M.A. | Ordinary .. | 0 | 12 | 0 |
| | | Calico . | 1 | 4 | 0 |

---

NOTE—THE PUBLICATIONS ARE AVAILABLE FOR SALE

AT

THE ORIENTAL LIBRARY, MYSORE

OR AT

MESSRS. KARNATAKA PUBLISHING HOUSE